


# ಚೆನ್ನಬಸವಣ್ಣನವರ ವಚನ ಸಂಪುಟ



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ : ಸಂಪುಟ – ೩

# ಚೆನ್ನಬಸವಣ್ಣನವರ ವಚನಸಂಪುಟ



ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನ ಯೋಜನೆ

## ಸಂಪಾದಕ ಮಂಡಳಿ

# ಚೆನ್ನಬಸವಣ್ಣನವರ ವಚನಸಂಪುಟ

ಸಂಪಾದಕ

ಡಾ ಬಿ ವ್ಹಿ. ಮಲ್ಲಾಪುರ

ಕನ್ನಡ ರೀಡರ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ



ಕರ್ನಾಟಕ ಸರ್ಕಾರ

ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ಬೆಂಗಳೂರು

**CHANNABASAVANNANAVARA VACHANASAMPUTA** : Complete Vachanas of Shree Channabasavanna. Ed. by Dr. B. V. Mallapur, Reader, Institute of Kannada Studies, Karnataka University, Dharwar-580 003 and Published by Sri P.S.V. Rao, Commissioner, Department of Kannada and Culture, No. 14/3A, Nrupatunga Road, Bangalore-560 002.

Pp. 738





ಪ್ರಥಮ ಮುದ್ರಣ : ೧೯೯೩

ಪ್ರತಿ : ಐದು ಸಾವಿರ

ಬೆಲೆ : ರೂ ೪೦೦—೦೦
( ೧೫ ಸಂಪುಟಗಳ ಸೆಟ್)

ಅಕ್ಷರ ಜೋಡಣೆ :
ಫ. ಶಿ. ಭಾಂಡಗೆಯವರ ತ್ವರಿತ ಮುದ್ರಣ
ಕುಂಬಾರ ಗರಡಿಮನೆ ಹತ್ತಿರ ಗಂಗಾಪೂರ ಓಣಿ
ಗದಗ—೫೮೨ ೧೦೧

ಈಸ್ಟರ್ನ್ ಪ್ರೆಸ್ (ಬೆಂಗಳೂರು) ಪ್ರೈ. ಲಿ. ಬೆಂಗಳೂರು 560 029

# ಪರಿವಿಡಿ



# ಮುನ್ನುಡಿ

"ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನ ಯೋಜನೆ"ಯ ಅಂಗವಾಗಿ ಬೆಳಕು ಕಾಣುತ್ತಲಿರುವ ಎಲ್ಲ ಶರಣರ ಎಲ್ಲ ವಚನಗಳ ೧೫ ಸಂಪುಟಗಳನ್ನು ಏಕಕಾಲಕ್ಕೆ ಕರ್ನಾಟಕದ ಜನತೆಯ ಕೈಗೆ ನೀಡಲು ತುಂಬ ಸಂತೋಷವೆನಿಸುತ್ತದೆ.

ಕನ್ನಡ ನಾಡಿನ ಪ್ರಥಮ ಪ್ರಜಾಸಾಹಿತ್ಯವಾದ ವಚನವಾಙ್ಮಯ ನಮ್ಮ ಪರಂಪರೆಯ ಅಪೂರ್ವ ಸಾಂಸ್ಕೃತಿಕ ಆಸ್ತಿಯಾಗಿದೆ. ಅನೇಕ ಜನ ವಿದ್ವಾಂಸರು, ಅನೇಕ ಸಂಸ್ಥೆಗಳು ಈ ಸಾಹಿತ್ಯವನ್ನು ಬೆಳಕಿಗೆ ತರಲು ಕಳೆದ ನೂರು ವರ್ಷಗಳಿಂದ ದುಡಿಯುತ್ತ ಬಂದುದು ಇದರ ವ್ಯಾಪಕತೆಯ ದ್ಯೋತಕವಾಗಿದೆ. ಹೀಗೆ ಪ್ರಕಟವಾಗಿದ್ದ ಮತ್ತು ಅಪ್ರಕಟಿತ ಸ್ಥಿತಿಯಲ್ಲಿದ್ದ ಈ ಸಾಹಿತ್ಯವನ್ನು ಸಮಗ್ರರೂಪದಲ್ಲಿ ವಚನ ಪಾರಿಭಾಷಾಕೋಶವೂ ಒಳಗೊಂಡಂತೆ ೧೫ ಸಂಪುಟಗಳ ಮೂಲಕ ಕರ್ನಾಟಕ ಸರ್ಕಾರ ಹೊರತರುತ್ತಿರುವುದು, ನಮ್ಮ ಸಾಹಿತ್ಯ ಪ್ರಕಟಣೆಯ ಇತಿಹಾಸದಲ್ಲಿ ಒಂದು ಗಣ್ಯ ಸಾಧನೆಯೆಂದೇ ಹೇಳಬೇಕು. ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ತನ್ನ ಕರ್ತವ್ಯವೆಂದು ಭಾವಿಸಿ, ಕರ್ನಾಟಕದ ಪ್ರಜಾಸರ್ಕಾರ ಈ ಕೆಲಸವನ್ನು ಪೂರೈಸಿದೆ.

ವಚನಸಾಹಿತ್ಯಕ್ಕೆ ನಮ್ಮ ನಾಡಿನಲ್ಲಿ ಸುಮಾರು ೮೦೦ ವರ್ಷಗಳ ಇತಿಹಾಸವಿದೆ. ಈವರೆಗೆ ಬಸವಯುಗದ ಬರವಣಿಗೆಯನ್ನು ಹೊರತರಲು ವಿದ್ವಾಂಸರು ಹೆಚ್ಚು ಗಮನ ಕೊಟ್ಟಿದ್ದಾರೆ. ಈ ಯೋಜನೆ ಅದನ್ನೂ ಒಳಗೊಂಡು ಬಸವೋತ್ತರ ಯುಗದ ಮೇಲೆಯೂ ಒತ್ತುಕೊಟ್ಟುದು ವಿಶೇಷವೆನಿಸಿದೆ. ಇದರಿಂದಾಗಿ ಈ ಯೋಜನೆಗೆ ಒಂದು ಸಾಹಿತ್ಯ ಪ್ರಕಾರದ ಪ್ರಕಟಣೆ ಎಂಬ ಕೀರ್ತಿ ಸಲ್ಲುತ್ತದೆ.

ವಚನವೆಂಬುದು ಚಳುವಳಿ ಸಾಹಿತ್ಯಪ್ರಕಾರವಾಗಿದೆ. ಆತ್ಮಕಲ್ಯಾಣದೊಂದಿಗೆ ಸಮಾಜಕಲ್ಯಾಣವನ್ನೂ ಕಾರ್ಯಗತಗೊಳಿಸಲು ಹೋರಾಡಿ ಮಡಿದ ಹುತಾತ್ಮರ ಸಾಹಿತ್ಯವಿದು. ರಾಜಸತ್ತೆ, ಪುರೋಹಿತಸತ್ತೆ, ಪುರುಷಸತ್ತೆಗಳೆಂಬ ಪ್ರತಿಗಾಮಿ ಸತ್ತೆಗಳ ವಿರುದ್ಧ, ಕರ್ನಾಟಕದ ಎಲ್ಲ ಸಮಾಜದ ಜನರೂ ನಡೆಸಿದ ಹೋರಾಟದ ಉಪನಿಷ್ಪತ್ತಿಯಾದ ಈ ಸಾಹಿತ್ಯದಲ್ಲಿ ಜೀವಪರಧ್ವನಿಗಳು ದಟ್ಟವಾಗಿ ಕೇಳಿಸುತ್ತವೆ. ಪ್ರಾಚೀನ ಕರ್ನಾಟಕದ ಬೌದ್ಧಿಕ ಶ್ರಮದ ವಿದ್ವತ್‌ಜನತಾಪ್ರತಿಭೆಯ ಸಾಹಿತ್ಯಕ್ಕಿಂತ ದೈಹಿಕ ಶ್ರಮದ ಜನತಾ ಪ್ರತಿಭೆಯ ಸಾಹಿತ್ಯ ಹೇಗೆ ಭಿನ್ನವಾಗಿದೆಯೆಂಬುದನ್ನು ಕಾಣಬೇಕಾದರೆ ನಾವು ವಚನಸಾಹಿತ್ಯಕ್ಕೇ ಮೊರೆಹೊಗಬೇಕು. "ವಿಪ್ರ ಮೊದಲು ಅಂತ್ಯಜ ಕಡೆಯಾಗಿ"

ಸಮಾಜದ ಎಲ್ಲ ವರ್ಗದ ಪುರುಷ ಮತ್ತು ಮಹಿಳೆಯರ ಸಂಕೀರ್ಣ ಧ್ವನಿಗಳು ಇದರಲ್ಲಿ ತುಂಬ ಕಲಾತ್ಮಕವಾಗಿ ಎರಕಗೊಂಡಿವೆ. ಹೀಗಾಗಿ ಸಮಗ್ರ ಕರ್ನಾಟಕದ ಪ್ರಾತಿನಿಧಿಕ ಧ್ವನಿಯೆನಿಸಿದ ಈ ಸಾಹಿತ್ಯವನ್ನು ತನ್ನ ಕರ್ತವ್ಯದ ಭಾಗವೆಂದು ಕರ್ನಾಟಕ ಸರ್ಕಾರ ಪ್ರಕಟಿಸಿ, ಸುಲಭ ಬೆಲೆಯಲ್ಲಿ ಜನತೆಗೆ ನೀಡುತ್ತಿದೆ.

ಈ ಯೋಜನೆಯ ನೇತೃತ್ವ ವಹಿಸಿ ದುಡಿದ ಡಾ. ಎಂ. ಎಂ. ಕಲಬುರ್ಗಿ ಅವರ ಶ್ರದ್ಧೆಯನ್ನು, ಸಂಪಾದಕ ಮಂಡಳಿಯ ಮಾರ್ಗದರ್ಶನವನ್ನು, ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಐತಿಹಾಸಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

ಜನವರಿ ೩೦, ೧೯೯೩
ಬೆಂಗಳೂರು

ಎಂ. ವೀರಪ್ಪ ಮೊಯಿಲಿ
ಮುಖ್ಯಮಂತ್ರಿಗಳು



# ಪ್ರಕಾಶಕರ ಮಾತು

---

ವಚನಸಾಹಿತ್ಯ, ಕರ್ನಾಟಕದ ಬಹುದೊಡ್ಡ ಸಾಂಸ್ಕೃತಿಕ ಸಂಪತ್ತು. ಪ್ರಾಚೀನ ಕರ್ನಾಟಕದ ಜನಸಾಮಾನ್ಯರ ಧ್ವನಿಯಾಗಿರುವ ಇದನ್ನು ಪ್ರಕಟಿಸುವುದು, ಪ್ರಸಾರ ಮಾಡುವುದು ಜನತಂತ್ರ ಸರಕಾರದ ಮುಖ್ಯಕರ್ತವ್ಯವಾಗಿದೆ.

ಭಾರತದಲ್ಲಿ ಆತ್ಮೋದ್ಧಾರದ ಬಗ್ಗೆ ಉದಾತ್ತ ತತ್ವಗಳನ್ನು ಪ್ರತಿಪಾದಿಸುತ್ತ ಬಂದಿದ್ದರೂ ಸಮಾಜೋದ್ಧಾರದ ಬಗ್ಗೆ ಉಪೇಕ್ಷೆ ಬೆಳೆದು, ಅಲ್ಲಿ ಶೋಷಣೆ ವರ್ಧಿಸುತ್ತ ಬಂದುದು ನಮ್ಮ ಇತಿಹಾಸದ ಒಂದು ವಿಪರ್ಯಾಸವೇ ಸರಿ. ೧೨ನೆಯ ಶತಮಾನದಲ್ಲಿ ಉಲ್ಬಣಗೊಂಡಿದ್ದ ಈ ವಿಷಮ ಪರಿಸ್ಥಿತಿಯನ್ನು ನಾಶಗೊಳಿಸಿ, ಸಮಸ್ಥಿತಿಯನ್ನು ಸಮಾಜದಲ್ಲಿ ತರಲು ಹೋರಾಡಿದವರು, ಕಲ್ಯಾಣದ ಶರಣರು. ಈ ಕಾರ್ಯಕ್ಕಾಗಿ ಅವರು ಕೈಕೊಂಡ ಜನಪರ ಆಂದೋಲನ ನಮ್ಮ ದೇಶದ ಇತಿಹಾಸದಲ್ಲಿಯೇ ಒಂದು ವಿಶಿಷ್ಟ ಘಟನೆಯಾಗಿದೆ.

ಭಾರತದಲ್ಲಿ ರಾಜಸತ್ತೆಯ ಸ್ಥಾಪನೆಗಾಗಿ ರಾಜರು, ಮತಸತ್ತೆಯ ಸ್ಥಾಪನೆಗಾಗಿ ಧರ್ಮಗಳು ಪರಸ್ಪರ ಸಂಘರ್ಷಕ್ಕಿಳಿದುದು ಸರ್ವಶ್ರುತ. ಆದರೆ ಸಾಮಾಜಿಕ ನ್ಯಾಯದ ಸ್ಥಾಪನೆಗಾಗಿ ಈ ರಾಜಸತ್ತೆ, ಮತಸತ್ತೆಗಳ ವಿರುದ್ಧ ಸಮಾಜದ ವಿವಿಧ ಸ್ತರಗಳ ಜನತೆ ಅದರಲ್ಲಿಯೂ ದೀನರು–ದಲಿತರು–ಮಹಿಳೆಯರು ಬೀದಿಗಿಳಿದು ನಡೆಸಿದ ಈ ಆಂದೋಲನ, ಇಪ್ಪತ್ತನೆಯ ಶತಮಾನವೂ ಆಶ್ಚರ್ಯಪಡುವ ಸಂಗತಿಯಾಗಿದೆ.

ಅಂದಿನ ಸನ್ನಿವೇಶಕ್ಕೆ ಅನುಗುಣವಾಗಿ ಧಾರ್ಮಿಕ ಕ್ಷೇತ್ರದಲ್ಲಿ ಅಂಕುರಿಸಿದ ಈ ಆಂದೋಲನ ಸಾಮಾಜಿಕ ಕ್ಷೇತ್ರವನ್ನೂ ಆವರಿಸಿದ ಕಾರಣ, ಇದನ್ನು 'ಸಮಾಜೋಧಾರ್ಮಿಕ' ಆಂದೋಲನವೆಂದು ಗುರುತಿಸಲಾಗುತ್ತದೆ. ಸಮಾಜವೆನ್ನುವುದು ಸಂಕೀರ್ಣ ವ್ಯವಸ್ಥೆ. ಅದರ ಎಲ್ಲ ಸ್ತರಗಳನ್ನೂ ಎಲ್ಲ ಮಗ್ಗಲುಗಳನ್ನೂ ಬದಲಿಸಲು ಮಾಡಿದ ಪ್ರಯತ್ನವಾಗಿರುವುದರಿಂದ ಇದು ಒಂದು "ಸಮಗ್ರ ಆಂದೋಲನ"ವಾಗಿದೆ. ಈ ಆಂದೋಲನದ ನೇರ ಧ್ವನಿ, ವಚನಸಾಹಿತ್ಯ.

ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನಿಂದಾಗಿ ವ್ಯಕ್ತಿಸ್ವಾತಂತ್ರ್ಯ ಪಡೆದ ಜನವರ್ಗವು ವ್ಯಕ್ತಪಡಿಸಿದ ಅಭಿಪ್ರಾಯಸ್ವಾತಂತ್ರ್ಯದ ಫಲ, ಈ ಸಾಹಿತ್ಯ. ಹೀಗಾಗಿ ಇಲ್ಲಿ ಆತ್ಮವಿಮರ್ಶೆಯಷ್ಟೇ ವಿಪುಲವಾಗಿ ಸಮಾಜವಿಮರ್ಶೆಯನ್ನೂ ಕಾಣಬಹುದಾಗಿದೆ.

ಆದರಲ್ಲಿಯೂ ವರ್ಣಭೇದ ನಿರಾಕರಣೆ, ವರ್ಗಭೇದ ನಿರಾಕರಣೆ, ಲಿಂಗಭೇದ ನಿರಾಕರಣೆ ಇಂಥ ವಿಚಾರಗಳು ಸ್ಫೋಟಗೊಂಡುದು ಲಕ್ಷಿಸತಕ್ಕ ಸಂಗತಿಯಾಗಿದೆ. ಇಲ್ಲಿ ಪುರುಷರಷ್ಟೇ ಪ್ರಧಾನವಾಗಿ ಮಹಿಳೆಯರೂ ಕುಲಜರಷ್ಟೇ ಪ್ರಧಾನವಾಗಿ ಅಂತ್ಯಜರೂ ಪ್ರಭುಗಳಷ್ಟೇ ಪ್ರಧಾನವಾಗಿ ಪ್ರಜೆಗಳೂ ಬಾಳಿದುದು, ಬರೆದುದು ಬಹುಶಃ ಜಗತ್ತಿನ ಇತಿಹಾಸದಲ್ಲಿಯೇ ಏಕೈಕ ಉದಾಹರಣೆಯಾಗಿದೆ. ಇಂಥ ವಿಚಾರಶೀಲರ, ಇವರ ತತ್ವ–ಸಾಹಿತ್ಯಗಳ ಉತ್ತರಾಧಿಕಾರಿಗಳಾದುದು ನಮ್ಮ ಭಾಗ್ಯ; ಇವರ ಸಾಹಿತ್ಯಸಂಪತ್ತನ್ನು ರಕ್ಷಿಸುವುದು, ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ಕರ್ತವ್ಯದ ಭಾಗವಾಗಿ "ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನ ಯೋಜನೆ"ಯನ್ನು ಕರ್ನಾಟಕ ಸರಕಾರ ಕೈಗೆತ್ತಿಕೊಂಡಿತು.

ಈ ವರೆಗೆ ವಚನಸಾಹಿತ್ಯ ಬಿಡಿಬಿಡಿಯಾಗಿ ಭಾಗಶಃ ಪ್ರಕಟವಾಗಿದ್ದಿತು, ಕೆಲವು ಭಾಗ ಅಪ್ರಕಟಿತ ಸ್ಥಿತಿಯಲ್ಲಿ ಉಳಿದಿದ್ದಿತು. ಇದೆಲ್ಲವನ್ನು ಕ್ರೋಢೀಕರಿಸಿ, ಪರಿಷ್ಕರಿಸಿ ಪ್ರಕಟಿಸುವುದು ಶ್ರಮದ ಕೆಲಸ. ಡಾ. ಎಂ. ಎಂ. ಕಲಬುರ್ಗಿಯವರ ಸಂಪಾದಕತ್ವದಲ್ಲಿ, ಅನೇಕ ಜನ ವಿದ್ವಾಂಸರ ಮತ್ತು ಸಂಪಾದಕ ಮಂಡಳಿಯ ಸದಸ್ಯರ ಸಂಯುಕ್ತ ಪರಿಶ್ರಮದಿಂದ ಈ ಬೃಹತ್ ಯೋಜನೆ ಪೂರ್ತಿಗೊಂಡುದು ಸಂತೋಷದ ಸಂಗತಿ. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಆಶ್ರಯದಲ್ಲಿ ಅಸ್ತಿತ್ವಕ್ಕೆ ಬಂದು, ನಿರ್ದಿಷ್ಟ ಅವಧಿಯಲ್ಲಿ ಪೂರ್ಣಗೊಂಡ ಈ ಐತಿಹಾಸಿಕ ಯೋಜನೆಗಾಗಿ ಸಂಬಂಧಪಟ್ಟ ಎಲ್ಲ ವಿದ್ವಾಂಸರನ್ನು ಅಭಿನಂದಿಸುತ್ತ, ಕನ್ನಡ ಜನತೆಗೆ ಈ ಸಂಪುಟಗಳನ್ನು ಅರ್ಪಿಸುತ್ತೇವೆ.

ಪಿ. ಎಸ್. ವಿ. ರಾವ್
ಕಮಿಷನರ್

# ಸಂಪಾದಕೀಯ



## ಡಾ. ಎಂ. ಎಂ. ಕಲಬುರ್ಗಿ

ಕರ್ನಾಟಕದ ಇತಿಹಾಸದಲ್ಲಿ ಶಿವಶರಣರ ಚಳುವಳಿ ಒಂದು ಅಪೂರ್ವಘಟನೆ, ವಚನಗಳ ಸೃಷ್ಟಿ ಒಂದು ಅನನ್ಯಪ್ರಯೋಗ. ಸಮಾಜದ ಎಲ್ಲ ವರ್ಗ, ಎಲ್ಲ ವರ್ಣಗಳ ಜನಸಮುದಾಯ ಬಸವಣ್ಣನವರ ನೇತೃತ್ವದಲ್ಲಿ ಕೈಕೊಂಡಿದ್ದ ವ್ಯಕ್ತಿಕಲ್ಯಾಣ ಮತ್ತು ಸಮಾಜಕಲ್ಯಾಣ ಚಳುವಳಿಯ ಸೃಷ್ಟಿಯೆನಿಸಿದ ಈ ವಚನಗಳು, ಜಾಗತಿಕ ಸಾಹಿತ್ಯದ ಮಹತ್ವಪೂರ್ಣ ಭಾಗವೆನಿಸಿವೆ.

'ವಚನ' ಶಬ್ದಕ್ಕೆ ಇಲ್ಲಿ ಗದ್ಯ ಸಾಹಿತ್ಯಪ್ರಕಾರವೆಂದು ಅರ್ಥವಲ್ಲ; ಪ್ರತಿಜ್ಞೆ, ಆತ್ಮಸಾಕ್ಷಿಯ ಮಾತು ಎಂದು ಅರ್ಥ. ನಡೆ ಹೇಗೇ ಇರಲಿ, ನುಡಿ ಮಾತ್ರ ಕಲಾತ್ಮಕವಾಗಿದ್ದುದು 'ರಚನೆ'ಯಾದರೆ, ನಡೆದಂತೆ ನುಡಿದ ಆತ್ಮಸಾಕ್ಷಿಯ ವಾಣಿ 'ವಚನ'ವೆನಿಸುತ್ತದೆ.

ವಚನಗಳು ಆಚಾರ್ಯರ ಸಾಹಿತ್ಯವಲ್ಲ, ಅನುಭಾವಿಗಳ ಸಾಹಿತ್ಯ. ಆಚಾರ್ಯರು ಜೀವಿಸಿರುವಾಗಲೇ ತಮ್ಮ ವಿಚಾರಗಳನ್ನು ಬರೆದು, ಅವುಗಳಿಗೆ ಸಂವಿಧಾನಾತ್ಮಕ ಮುದ್ರೆ ಒತ್ತುತ್ತಾರೆ. ಅನುಭಾವಿಗಳು ಮಾತ್ರ ತಮ್ಮ ಚಿಂತನೆಯನ್ನು ಹೃದಯದಿಂದ ಹೃದಯಕ್ಕೆ ಮುಟ್ಟುವಂತೆ ಬಿಡಿಮಾತುಗಳ ಮೂಲಕ ಹೇಳುತ್ತಾರೆ. ಬಿಡಿಮುತ್ತುಗಳಂತೆ ಸೂರೆಯಾದ ಅವುಗಳನ್ನು ಸಂಗ್ರಹಿಸುವ, ಸಂಕಲಿಸುವ, ಸಂಪಾದಿಸುವ ಕೆಲಸವನ್ನು ಉತ್ತರಕಾಲೀನ ಅನುಯಾಯಿಗಳು ಮಾಡುತ್ತಾರೆ. ಏಸುವಿನ ವಾಣಿಯಾದ ಬೈಬಲ್, ಮಹಮ್ಮದನ ಉಪದೇಶವಾದ ಕುರಾನ್, ಬುದ್ಧನ ಬೋಧೆಯಾದ ತ್ರಿಪಿಟಕ, ಶರಣರ ಸಂದೇಶವಾದ ವಚನಕೃತಿಗಳು ಈ ಬಗೆಯ ಉತ್ತರಕಾಲೀನ ಸಂಕಲನಗಳಾಗಿವೆ.

ಮೂಲತಃ ವಚನನಿಧಿ ಜನರಿಂದ, ಜನರಿಗಾಗಿ ಹುಟ್ಟಿ ಜನರ ಮಧ್ಯದಲ್ಲಿ ಬಾಳಿದ ಸಾಹಿತ್ಯವಾಗಿದೆ. ಹೀಗಾಗಿ ಹನ್ನೆರಡರಿಂದ ಹದಿನೈದನೆಯ ಶತಮಾನಕ್ಕೆ ಬರುವಷ್ಟರಲ್ಲಿ ಅದಕ್ಕೆ ವಿಪುಲ ಭಿನ್ನಪಾಠಗಳು ಹುಟ್ಟಿಕೊಂಡವು. ಆಮೇಲೆ ಸಂಕಲನ–ಸಂಪಾದನ ಕಾರ್ಯದಿಂದಾಗಿ ಕೆಲವೊಮ್ಮೆ ಪ್ರಕ್ಷಿಪ್ತ ವಚನಗಳೂ ತಲೆಯೆತ್ತಿದವು. ಈ ಗೊಂದಲ ಕಾರಣವಾಗಿ ಕವಿಸಾಹಿತ್ಯಕ್ಕಿಂತ ವಚನಸಾಹಿತ್ಯದ ಸಂಪಾದನಕಾರ್ಯ ತುಂಬ ಜಟಿಲಸ್ವರೂಪದ್ದಾಗಿದೆ.

ಪ್ರಾಚೀನ ಕನ್ನಡ ಸಾಹಿತ್ಯದ ಪ್ರಕಟನಕಾರ್ಯವನ್ನು ಮೊದಲು ಕೈಗೆತ್ತಿಕೊಂಡವರು, ಕ್ರೈಸ್ತ ಪಾದ್ರಿಗಳು. ಜೈನ ಪುರಾಣ–ಕಾವ್ಯಗಳನ್ನು, ವೈದಿಕ ಪುರಾಣ–ಕೀರ್ತನೆಗಳನ್ನು, ವೀರಶೈವ ಶಾಸ್ತ್ರ–ಪುರಾಣಗಳನ್ನು ಪ್ರಕಟಿಸಿದ. ಇವರು ವಚನಸಾಹಿತ್ಯವನ್ನು ಮಾತ್ರ ತಪ್ಪಿಯೂ ಪ್ರಕಟಿಸಲಿಲ್ಲ. ದೇಶೀ ವಿದ್ವಾಂಸರೇ ಈ ಕೆಲಸವನ್ನು ಪ್ರಾರಂಭ ಮಾಡಬೇಕಾಯಿತು.

ಈ ದಿಸೆಯಲ್ಲಿ ಮೊದಲು ಪ್ರಕಟವಾದ ಕೃತಿ (೧೮೮೩) 'ಅಪ್ರಮಾಣ ಕೂಡಲ ಸಂಗಮದೇವಾ' ಮುದ್ರಿಕೆಯ ವಚನಗಳನ್ನೊಳಗೊಂಡ "ಶಿಖಾರತ್ನಪ್ರಕಾಶ". ಆಮೇಲೆ ಒಂದು ಮೈಲಿಗಲ್ಲಿನಂತೆ ಪ್ರಕಟವಾದ ವಚನಕೃತಿ, ಬಸವಣ್ಣನವರ ಷಟ್‌ಸ್ಥಲವಚನ ಸಂಪುಟ. ಅದು ಬೆಳಕು ಕಂಡುದು ೧೮೮೯ರಲ್ಲಿ. ಅಲ್ಲಿಂದ ಸರಿಯಾಗಿ ಒಂದು ಶತಮಾನ ಮುಗಿಯುವಷ್ಟರಲ್ಲಿ ಅಂದರೆ ೧೯೮೮ರಲ್ಲಿ ಈ 'ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನ ಯೋಜನೆ' ಅಸ್ತಿತ್ವಕ್ಕೆ ಬಂದುದು ಒಂದು ಯೋಗಾಯೋಗವಾಗಿದೆ; ವಚನಸಾಹಿತ್ಯದ ಪ್ರಕಟನಚರಿತ್ರೆಯ ಶತಮಾನಸ್ಮರಣೆಯಾಗಿದೆ.

ವಚನಸಾಹಿತ್ಯ ಪ್ರಕಟನೆಯ ಪ್ರಥಮ ವ್ಯಾಪಕ ಪ್ರಯತ್ನವೊಂದು ವಿಜಾಪುರದ ಶಿವಾನುಭವ ಗ್ರಂಥಮಾಲೆಯ ಮೂಲಕ ಡಾ. ಫ. ಗು. ಹಳಕಟ್ಟಿ ಅವರಿಂದ ಜರುಗಿತು. ಆಮೇಲೆ ಮತ್ತೊಂದು ಯೋಜನಾಬದ್ಧ ಪ್ರಯತ್ನವು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಆಶ್ರಯದಲ್ಲಿ ಡಾ. ಆರ್. ಸಿ. ಹಿರೇಮಠ ಅವರಿಂದ ನಡೆಯಿತು. ಇತ್ತೀಚೆಗೆ ಗದುಗಿನ ತೋಂಟದಾರ್ಯಮಠದ ವೀರಶೈವ ಅಧ್ಯಯನ ಸಂಸ್ಥೆಯು ಒಂದು ಕ್ರಮಬದ್ಧ ಯೋಜನೆಯ ಮೂಲಕ ಈ ಕೆಲಸವನ್ನು ಮುಂದುವರಿಸಿ, ಮುಗಿಸುವ ಹಂತದಲ್ಲಿದೆ. ವಚನಸಾಹಿತ್ಯದ ಪ್ರಕಟನಕಾರ್ಯ ಹೀಗೆ ವಿಜಾಪುರದಲ್ಲಿ ಪ್ರಾರಂಭವಾಗಿ, ಧಾರವಾಡದಲ್ಲಿ ಬೆಳೆದು, ಗದುಗಿನಲ್ಲಿ ಒಂದು ನಿಲುಗಡೆಗೆ ಬರುತ್ತಿದ್ದಂತೆಯೇ ಈಗ ನಾಲ್ಕನೆಯ ಘಟ್ಟದಲ್ಲಿ 'ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನ ಯೋಜನೆ'ಯ ಹೆಸರಿನಲ್ಲಿ, ಕರ್ನಾಟಕ ಸರಕಾರದ ಮೂಲಕ ಹದಿನೈದು ಸಂಪುಟಗಳು (ವಚನ ಪರಿಭಾಷಾಕೋಶ ಸೇರಿ) ಪ್ರಕಟವಾಗುತ್ತಲಿವೆ. ಸುಮಾರು ೧೧೦ ಜನ ಪ್ರಕ್ಷಿಪ್ತ ವಚನಕಾರರನ್ನೂ ಪ್ರಕ್ಷಿಪ್ತವಾಗಿರಬಹುದಾದ ಅನೇಕ ವಚನಗಳನ್ನೂ ಕೈಬಿಟ್ಟು ಸಂಯೋಜಿಸಲಾದ ಈ ಹದಿನೈದು ಸಂಪುಟಗಳ ಒಟ್ಟು ಪುಟ ಸುಮಾರು ಹತ್ತು ಸಾವಿರ; ಒಟ್ಟು ವಚನ ಸಂಖ್ಯೆ ಸುಮಾರು ಇಪ್ಪತ್ತು ಸಾವಿರ. ವಚನಸಾಹಿತ್ಯವನ್ನು ಒಮ್ಮೆ ಸಮಗ್ರವಾಗಿ ಹೊರತಂದ ಪ್ರಥಮ ಮಹತ್ವಾಕಾಂಕ್ಷೆಯ ಯೋಜನೆಯಿದು. ಈ ಸಾಹಿತ್ಯದ ಗಡಿಗೆರೆಗಳನ್ನು, ಸಂಖ್ಯಾಬಾಹುಳ್ಯವನ್ನು ವ್ಯವಸ್ಥೆಗೊಳಿಸಿಕೊಟ್ಟು, ವಿದ್ವಾಂಸರ ಅಧ್ಯಯನದ ಮುಂದುವರಿಕೆಗೆ ಒಂದು ನಿರ್ದಿಷ್ಟ ಚೌಕಟ್ಟನ್ನು ಒದಗಿಸಿದ ಹಿರಿಮೆ ಈ ಪ್ರಯತ್ನಕ್ಕೆ ಸಲ್ಲುತ್ತದೆ.

ಈ ಯೋಜನೆಯ ಅಂಗವಾಗಿ ಬಸವಣ್ಣನವರ ವಚನ, ಪ್ರಭುದೇವರ ವಚನ, ಚೆನ್ನಬಸವಣ್ಣನವರ ವಚನ, ಸಿದ್ಧರಾಮೇಶ್ವರ ವಚನ, ಶಿವಶರಣೆಯರ ವಚನ–ಹೀಗೆ ಐದು ಸಂಪುಟಗಳು, ಬಸವ ಸಮಕಾಲೀನ ಮಿಕ್ಕ ಶರಣರ ವಚನಗಳ ನಾಲ್ಕು ಸಂಪುಟಗಳು, ಬಸವೋತ್ತರ ಕಾಲೀನ ಶರಣರ ವಚನಗಳ ಐದು ಸಂಪುಟಗಳು ಮತ್ತು ಒಂದು ವಚನ ಪರಿಭಾಷಾಕೋಶ – ಹೀಗೆ ಹದಿನೈದು ಸಂಪುಟಗಳು ಬೆಳಕು ಕಾಣುತ್ತಲಿವೆ. ಇವುಗಳಲ್ಲಿ ಮೊದಲಿನ ಐದು ಸಂಪುಟಗಳು ಈಗಾಗಲೇ ಕರ್ನಾಟಕ ವಿಶ್ವವಿದ್ಯಾಲಯದ ಮೂಲಕ ಪ್ರಕಟವಾಗಿದ್ದು, ಆ ಬಳಿಕ ಲಭ್ಯವಾದ ಹೊಸ

ವಚನಗಳನ್ನು ಸೇರಿಸಿ, ಅವುಗಳಿಗೆ ಸಮಗ್ರರೂಪ ಕೊಟ್ಟಿದ್ದೇವೆ ಮತ್ತು ಪರಿಷ್ಕರಿಸಿದ್ದೇವೆ. ಬಸವ ಸಮಕಾಲೀನ ಮಿಕ್ಕ ಶರಣರ ನಾಲ್ಕು ಸಂಪುಟಗಳ ಕೆಲಸ ಈವರೆಗೆ ಸಮರ್ಪಕವಾಗಿ ನಡೆದಿರಲಿಲ್ಲ. ಬಸವೋತ್ತರ ಕಾಲೀನ ಶರಣರ ಕೊನೆಯ ಐದು ಸಂಪುಟಗಳ ಕೆಲಸವೂ ಅಲಕ್ಷಿಸಲ್ಪಟ್ಟಿದ್ದಿತು. ಈ ಎಲ್ಲ ಕೊರತೆಗಳನ್ನು ತುಂಬಿಕೊಡುವ ಒಂದು ಪರಿಪೂರ್ಣ ಯೋಜನೆ ಇದಾಗಿದೆ. ಮೊದಲಬಾರಿಗೆ ೧೯ನೆಯ ಶತಮಾನದ ವರೆಗಿನ ಎಲ್ಲ ಶರಣರ ಎಲ್ಲ ವಚನಗಳನ್ನು ಒಂದೆಡೆ ಸಂಗ್ರಹಿಸಿ, ಒಂದು ಕ್ರಮಕ್ಕೆ ಅಳವಡಿಸಿ, ಸಂಪುಟ ಶ್ರೇಣಿಯಲ್ಲಿ ಹೊರತಂದ ದೊಡ್ಡ ಪ್ರಯತ್ನ ಇಲ್ಲಿದೆ.

ವಚನಸಾಹಿತ್ಯದ ಪರಿಷ್ಕರಣಕಾರ್ಯ ತುಂಬ ಜಟಿಲವಾದುದು. ೧. ಎಲ್ಲ ಶರಣರ ವಚನಗಳನ್ನು ಎಲ್ಲ ಪ್ರಾಚೀನ ಆಕರಗಳಿಂದ ಸಂಗ್ರಹಿಸುವುದು, ೨. ಪ್ರಕ್ಷಿಪ್ತವಾಗಿರಬಹುದಾದ ವಚನಕಾರರನ್ನು, ವಚನಗಳನ್ನು ಕೈಬಿಡುವುದು, ೩. ನಿಜವಚನಗಳ ಪಾಠವನ್ನು ಪರಿಷ್ಕರಿಸುವುದು—ಇದು ಈ ಯೋಜನೆಯ ಉದ್ದೇಶವಾಗಿದೆ. ಈ ಉದ್ದೇಶ ಸಾಧನೆಗಾಗಿ ಎಲ್ಲ ಪ್ರಾಚೀನ ಆಕರಗಳಿಂದ ಅಂದರೆ ೧೦೮ ಆಕರಗಳಿಂದ ವಚನಗಳನ್ನು ಸಂಗ್ರಹಿಸಿ, ಪ್ರತಿಯೊಂದು ವಚನದ ಕೆಳಗೆ ಅದರ ಎಲ್ಲ ಆಕರಗಳನ್ನು ನಮೂದಿಸಿದ 'ವಚನ ಬ್ಯಾಂಕ'ನ್ನು ಅಸ್ತಿತ್ವಕ್ಕೆ ತರಲಾಯಿತು. ಒಂದು ವಚನಕ್ಕೆ ಇರುವ ವಿವಿಧ ಪಾಠಾಂತರ, ರೂಪಾಂತರಗಳ ಸ್ವರೂಪವನ್ನು ಅರ್ಥಮಾಡಿಕೊಳ್ಳಲು, ಮುದ್ರಿಕೆಯ ವ್ಯತ್ಯಾಸವನ್ನು ಗಮನಿಸಲು, ಒಬ್ಬ ವಚನಕಾರನ ಒಟ್ಟು ವಚನಗಳ ಸಂಖ್ಯೆಯನ್ನು ನಿರ್ಧರಿಸಲು, ಕೊನೆಯದಾಗಿ ವಚನದ ನಿಜಪಾಠವನ್ನು ನಿರ್ಣಯಿಸಲು ಈ ಬ್ಯಾಂಕ್ ತುಂಬ ನೆರವಾಯಿತು.

ಇವು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿ, ಅನ್ಯಪಾಠಗಳನ್ನು ಅಡಿಯಲ್ಲಿ ನಮೂದಿಸದೆ ಕೈಬಿಟ್ಟಿದ್ದೇವೆ. ಜನಸಾಮಾನ್ಯರ ಅನುಕೂಲತೆಗಾಗಿ ಶಕಟರೇಫೆಗೆ ಬದಲು ರೇಫೆ ಇಟ್ಟುಕೊಂಡಿದ್ದೇವೆ. ಅಭ್ಯಾಸಿಗಳ ಉಪಯೋಗ ದೃಷ್ಟಿಯಿಂದ ಕಠಿಣ ಪದಕೋಶ, ಅಕಾರಾದಿ, ಆಕರಸೂಚಿಗಳನ್ನು ಅನುಬಂಧದಲ್ಲಿ ಕೊಡಲಾಗಿದೆ. ಹೆಚ್ಚಿನದಾಗಿ ಪಾರಿಭಾಷಿಕ ಪದಗಳ ಒಂದು ಸ್ವತಂತ್ರ ಕೋಶವನ್ನೇ ಪ್ರಕಟಿಸಿದ್ದೇವೆ. ಒಟ್ಟಿನಲ್ಲಿ ಇವು ಜನಪ್ರಿಯ ಆವೃತ್ತಿಗಳಾದರೂ ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ಆದರ್ಶದಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆ

ವಿಶ್ವವಿದ್ಯಾಲಯದಂಥ ಶಿಕ್ಷಣ ಸಂಸ್ಥೆಗಳು, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯಂಥ ಸಾರ್ವಜನಿಕ ಸಂಸ್ಥೆಗಳು, ವೀರಶೈವ ಮಠಗಳಂಥ ಧಾರ್ಮಿಕ ಸಂಸ್ಥೆಗಳು, ಡಾ. ಫ.ಗು. ಹಳಕಟ್ಟಿಯವರಂಥ ವಿದ್ವಾಂಸ ವ್ಯಕ್ತಿಗಳು ನಿರಂತರ ದುಡಿದರೂ ವಚನಸಾಹಿತ್ಯ ಪೂರ್ಣ ಪ್ರಮಾಣದಲ್ಲಿ ಪ್ರಕಟವಾಗಲು ಒಂದುನೂರು ವರ್ಷ ಹಿಡಿದುದು ಅದರ ಗಾತ್ರಬಾಹುಳ್ಯಕ್ಕೆ ಸಾಕ್ಷಿಯಾಗಿದೆ. ನೂರುವರ್ಷ ದುಡಿದು, ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ ಈ ಎಲ್ಲ ವ್ಯಕ್ತಿ—ಸಂಸ್ಥೆಗಳಿಗೆ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆಯ ಕಾರ್ಯಾಲಯ ಅಸ್ತಿತ್ವಕ್ಕೆ ಬಂದು ಕೆಲಸ ಪ್ರಾರಂಭವಾದದ್ದು ೧೫ ಅಕ್ಟೋಬರ ೧೯೮೮ರಂದು. ಹಸ್ತಪ್ರತಿಗಳು ಅಚ್ಚಿಗೆ ಹೋದದ್ದು ೧೬ ಮಾರ್ಚ ೧೯೯೦ರಂದು. ಹೀಗೆ ಮೊದಲೇ ಯೋಜಿಸಿದಂತೆ ಎರಡು ವರ್ಷಗಳ ನಿರ್ದಿಷ್ಟ ಅವಧಿಯಲ್ಲಿ ಈ ಕೆಲಸವನ್ನು ಪೂರ್ಣಗೊಳಿಸಿದ್ದೇವೆ. ಪ್ರತಿಯೊಂದು ಹಂತದಲ್ಲಿಯೂ ಈ ಯೋಜನೆ ಸಕ್ರಮವಾಗಿ ಮುನ್ನಡೆಯುವುದಕ್ಕಾಗಿ 'ಸಂಪಾದಕ ಮಂಡಳಿ'ಯ ಸದಸ್ಯರಾದ ಡಾ. ಎಂ. ಚಿದಾನಂದಮೂರ್ತಿ, ಡಾ. ಸಿ. ಪಿ. ಕೃಷ್ಣಕುಮಾರ, ಡಾ. ಎಸ್. ವಿದ್ಯಾಶಂಕರ, ಶ್ರೀ ಎಸ್. ಶಿವಣ್ಣ ಅವರು ಉದ್ದಕ್ಕೂ ಬೆಲೆಯುಳ್ಳ ಸಲಹೆ–ಮಾರ್ಗದರ್ಶನ ನೀಡಿದ್ದಾರೆ. ಡಾ. ಎಚ್. ತಿಪ್ಪೇರುದ್ರಸ್ವಾಮಿ ಅವರು ಆರಂಭದ ಕೆಲವು ತಿಂಗಳು ಸಂಪಾದಕ ಮಂಡಳಿಯ ಸದಸ್ಯರಾಗಿ, ವಿಶ್ವಾಸದಿಂದ ನೆರವಾಗಿದ್ದಾರೆ. ಸಂಪಾದಕ ಮಿತ್ರರಾದ ಡಾ. ಬಿ. ವ್ಹಿ. ಮಲ್ಲಾಪುರ, ಡಾ. ಎಸ್. ವಿದ್ಯಾಶಂಕರ, ಡಾ. ವ್ಹಿ. ಬಿ. ರಾಜೂರ, ಡಾ. ಬಿ.ಆರ್. ಹಿರೇಮಠ, ಶ್ರೀ ಎಸ್. ಶಿವಣ್ಣ ತುಂಬ ಶ್ರಮ–ಶ್ರದ್ಧೆಗಳಿಂದ ಸಂಪಾದನ ಕೆಲಸ ಪೂರೈಸಿದ್ದಾರೆ. ಸಹಾಯಕ ಸಂಶೋಧಕರಾದ ಶ್ರೀಮತಿ ವಿಜಯಶ್ರೀ ಹಿರೇಮಠ, ಶ್ರೀ ವಾಯ್. ಎಂ. ಯಾಕೊಳ್ಳಿ, ಶ್ರೀ ಬಿ. ವ್ಹಿ. ಕೋರಿ ಅವರು ದಣಿವನ್ನು ಲೆಕ್ಕಿಸದೆ ದುಡಿದಿದ್ದಾರೆ. ಇವರೆಲ್ಲರಿಗೆ ನಾವು ಕೃತಜ್ಞರಾಗಿದ್ದೇವೆ.

ಈ ಯೋಜನೆಯನ್ನು ಅನುದಾನ ಮಾಡಿದ ಕರ್ನಾಟಕ ಸರಕಾರದ ಔದಾರ್ಯಕ್ಕೆ ನಮ್ಮ ಅಭಿನಂದನೆಗಳು ಸಲ್ಲುತ್ತವೆ. ಈ ಅವಧಿಯಲ್ಲಿ ಮುಖ್ಯಮಂತ್ರಿಗಳಾಗಿದ್ದ ಮಾನ್ಯ ಶ್ರೀ ರಾಮಕೃಷ್ಣ ಹೆಗಡೆ, ಶ್ರೀ ಎಸ್. ಆರ್. ಬೊಮ್ಮಾಯಿ, ಶ್ರೀ ವೀರೇಂದ್ರ ಪಾಟೀಲ, ಶ್ರೀ ಎಸ್. ಬಂಗಾರಪ್ಪ ಅವರಿಗೂ ಸಾಹಿತಿಗಳೂ ಸಾಹಿತ್ಯ–ಸಂಸ್ಕೃತಿಗಳ ಗಾಢ ಆಸಕ್ತರೂ ಆಗಿರುವ ಮುಖ್ಯಮಂತ್ರಿಗಳಾದ ಮಾನ್ಯ ಶ್ರೀ ಎಂ. ವೀರಪ್ಪ ಮೊಯಿಲಿ ಅವರಿಗೂ ಋಣಿಯಾಗಿದ್ದೇವೆ.

ಈ ಯೋಜನೆ ಅಸ್ತಿತ್ವಕ್ಕೆ ಬರುವಲ್ಲಿ ವಿಶೇಷ ಆಸಕ್ತಿ ವಹಿಸಿದವರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅಂದಿನ ಸಚಿವರಾಗಿದ್ದ ಶ್ರೀ ಎಂ. ಪಿ. ಪ್ರಕಾಶ ಅವರು. ಸಾಹಿತ್ಯ–ಸಂಸ್ಕೃತಿಗಳ ಬಗ್ಗೆ ಅನನ್ಯ ಪ್ರೀತಿ–ಗೌರವ ಬೆಳೆಸಿಕೊಂಡಿರುವ ಶ್ರೀಯುತರಿಗೆ ನಾವು ಕೃತಜ್ಞರಾಗಿದ್ದೇವೆ. ಆಮೇಲೆ ಈ ಇಲಾಖೆಗೆ ಸಚಿವರಾಗಿ ಬಂದ ಶ್ರೀ ಎಂ. ವೀರಪ್ಪ ಮೊಯಿಲಿ, ಶ್ರೀ ಕೆ. ಎಚ್. ರಂಗನಾಥ, ಶ್ರೀ ಎಸ್. ರಮೇಶ್, ಇಂದಿನ ಸಚಿವರಾದ ಮಾನ್ಯ ಶ್ರೀ ಎಚ್. ವಿಶ್ವನಾಥ್ ಅವರಿಗೆ ನಮ್ಮ ಗೌರವಗಳು ಸಲ್ಲುತ್ತವೆ.

ಈ ಪ್ರಸಂಗದಲ್ಲಿ ಆತ್ಮೀಯ ಆಡಳಿತ ನಿರ್ದೇಶನ ಮಾಡಿದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಅಂದಿನ ನಿರ್ದೇಶಕರಾಗಿದ್ದ ಶ್ರೀ ಐ. ಎಂ. ವಿಠ್ಠಲಮೂರ್ತಿ, ಶ್ರೀ ಬಿ. ಪಾರ್ಥಸಾರಥಿ, ಕಮಿಷನರ್ ಡಾ. ಪಿ. ಎಸ್. ರಾಮಾನುಜಂ, ಇಂದಿನ ಕಮಿಷನರ್‌ರಾದ ಶ್ರೀ ಪಿ. ಎಸ್. ವಿ. ರಾವ್ ಅವರನ್ನೂ ಅಧಿಕ ನಿರ್ದೇಶಕರಾದ ಶ್ರೀ ಕೆ. ದೇವರಸಯ್ಯ, ಉಪನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ ಅವರನ್ನೂ ನೆನೆಯುವುದು ಪ್ರೀತಿಯ ವಿಷಯವಾಗಿದೆ.

ಇಂಥ ಒಂದು ಬೃಹತ್‌ಯೋಜನೆಗೆ ಕಾರ್ಯಾಲಯವೊಂದು ಅತ್ಯವಶ್ಯ. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಈ ಅವಕಾಶ ಕಲ್ಪಿಸಿಕೊಟ್ಟ ಕರ್ನಾಟಕ ವಿಶ್ವವಿದ್ಯಾಲಯದ ಅಂದಿನ ಕುಲಪತಿ ಡಾ. ಜಿ. ಕೆ. ನಾರಾಯಣರೆಡ್ಡಿ, ಇಂದಿನ ಕುಲಪತಿ ಡಾ. ಎಸ್. ರಾಮೇಗೌಡ ಅವರ ಔದಾರ್ಯವನ್ನು, ಪೀಠದ ಮುಖ್ಯಸ್ಥರ ಸಹಕಾರವನ್ನು ಕೃತಜ್ಞತೆಯಿಂದ ನೆನೆಯುತ್ತೇವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳೂ ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ದಾಳಿಗೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಮುದ್ರಿಕೆ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ವಚನಗಳನ್ನು ಶುದ್ಧೀಕರಿಸುವುದು– ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ವಚನಸಾಹಿತ್ಯದ ಮೇಲಿನ ಗೌರವ, ಕೆಲಸದ ಮೇಲಿನ ಪ್ರೀತಿಗಳು ನಮ್ಮಿಂದ ಈ ಕಾರ್ಯ ಮಾಡಿಸಿವೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತ, ಎರಡು ವರ್ಷ ರಾತ್ರಿಯನ್ನೂ ಹಗಲುಮಾಡಿ ದುಡಿದು ರೂಪಿಸಿದ ಈ ಹದಿನೈದು ಸಂಪುಟಗಳನ್ನು ಸಹೃದಯಲೋಕಕ್ಕೆ ಅರ್ಪಿಸುತ್ತೇವೆ. 'ಶಿವಶರಣರ ಸಮಗ್ರ ವಚನ ಸಾಹಿತ್ಯ' ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳನ್ನು ಬೆಳಗಲೆಂದು ಹಾರೈಸುತ್ತೇವೆ.



★

# ಪ್ರಸ್ತಾವನೆ

ಮಾನವ ಜನಾಂಗದ ಕಲ್ಯಾಣವನ್ನು ಮುಖ್ಯಗುರಿಯಾಗಿಸಿಕೊಂಡು, ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರು ಮುನ್ನಡೆಸಿದ ಸಮಗ್ರಕ್ರಾಂತಿಯಲ್ಲಿ ಸಮರ್ಪಣ ಮನೋಭಾವದಿಂದ ದುಡಿದ ಶರಣರಲ್ಲಿ ವಯಸ್ಸಿನಿಂದ ಚೆನ್ನಬಸವಣ್ಣನವರೇ ಎಲ್ಲರಿಗಿಂತ ಚಿಕ್ಕವರು. ಪ್ರಾಯದಿಂದ ಅವರು ಕೂಸಾಗಿರಬಹುದು. ಅವರ ಅಭಿಪ್ರಾಯ ಮಾತ್ರ ಕೂಸಾಗಿರಲಿಲ್ಲ. ಬಸವಣ್ಣ, ಪ್ರಭುದೇವ, ಸಿದ್ಧರಾಮರಂಥ ಅತಿರಥ-ಮಹಾರಥರ ಜೊತೆ 'ಬೆಳಗು ಬೆಳಗು ಹಳಚಿದಂತೆ' ಚೆನ್ನಬಸವಣ್ಣನವರು ನಡೆಸಿದ ಚರ್ಚೆ, ಆ ಹಿರಿಯರಿಂದ ಸ್ವೀಕೃತವಾದ ಅವರ ಅಭಿಪ್ರಾಯಗಳನ್ನು ನೆನೆದಾಗ, ಚೆನ್ನಬಸವಣ್ಣನವರ ಮೂರ್ತಿಸ್ವರೂಪ ಮನವರಿಕೆಯಾಗುತ್ತದೆ.

ಪ್ರಭುದೇವರ ದೃಷ್ಟಿಯಲ್ಲಿ ಚೆನ್ನಬಸವಣ್ಣ ಅವಿರಳಜ್ಞಾನಿ, ಸ್ವಯಂಭುಜ್ಞಾನಿ. ಬಸವಣ್ಣನವರ ಅಭಿಪ್ರಾಯದ ಪ್ರಕಾರ ಚೆನ್ನಬಸವಣ್ಣ ಜನ್ಮತಃ ಜ್ಞಾನಪರಿಮಳಭರಿತ. ಅಕ್ಕಮಹಾದೇವಿ ಚೆನ್ನಬಸವಣ್ಣನನ್ನು ಸಮ್ಯಗ್‌ಜ್ಞಾನಿಯೆಂದು ಸಂಬೋಧಿಸಿದ್ದಾಳೆ. ಇವೆಲ್ಲವೂ ಚೆನ್ನಬಸವಣ್ಣನವರು ಒಬ್ಬ ಮಹಾಜ್ಞಾನಿಯೆಂಬುದನ್ನು ಸ್ಪಷ್ಟಪಡಿಸುತ್ತವೆ. ಚೆನ್ನಬಸವಣ್ಣನವರ ವ್ಯಕ್ತಿತ್ವದ ಇನ್ನೊಂದು ಪ್ರಮುಖ ಅಂಶವೆಂದರೆ ಅವರು ಮಹಾಜ್ಞಾನಿಗಳಾಗಿದ್ದುದರ ಜೊತೆಗೆ ಷಡುಸ್ಥಲಜ್ಞಾನಿಗಳೂ ಆಗಿದ್ದುದು. "ಷಡುಸ್ಥಲಮೂರ್ತಿಯಾಗಿ ಬಂದೆಯಲ್ಲಾ ಚೆನ್ನಬಸವಣ್ಣ" (ಬಸವಣ್ಣ) "ಷಡುಸ್ಥಲಬ್ರಹ್ಮಿ ಚೆನ್ನಬಸವಣ್ಣ" (ಮರುಳುಶಂಕರದೇವ), "ಷಟ್ಸ್ಥಲಧೀರ" (ಮಗ್ಗೆಯ ಮಾಯಿದೇವ), "ಷಟ್ಸ್ಥಲ ಮಾರ್ಗಮಂ ತಿಳಿಪಿ ಪ್ರಾಣಲಿಂಗದ ನೆಲೆಯನರುಹಿಕೊಟ್ಟ....ಚೆನ್ನಬಸವೇಶಂಗೆ ಶರಣು" (ವಿರೂಪಾಕ್ಷ ಪಂಡಿತ)-ಇತ್ಯಾದಿ ವಿವಿಧ ವಚನಕಾರರ ಹಾಗೂ ಕವಿಗಳ ಹೇಳಿಕೆಗಳಿಂದ ಇದು ಸ್ಪಷ್ಟವಾಗುತ್ತದೆ.

ಇದಕ್ಕಿಂತಲೂ ಮುಖ್ಯವಾದುದು, ಚೆನ್ನಬಸವಣ್ಣನವರನ್ನು ಸಿದ್ಧರಾಮ, ಚಾಮರಸ ಮೊದಲಾದವರು 'ಷಡ್ವಿಧಸ್ಥಾಪನಾಚಾರ್ಯ', 'ಷಡುಸ್ಥಲದ ಉದ್ಧಾರಕ' ಎಂದು ಹೊಗಳಿರುವುದು: ಆಗಮೋಕ್ತಕ್ರಮಾನುಗತ ಷಟ್‌ಸ್ಥಲಸಿದ್ಧಾಂತವನ್ನು ನಿರಾಕರಿಸಿ, ಸಮಸಮನ್ವಯಸ್ಥಲಸಿದ್ಧಾಂತವನ್ನು ಚೆನ್ನಬಸವಣ್ಣನವರು ತಮ್ಮ ಅನುಭಾವದ ಹಿನ್ನಲೆಯಲ್ಲಿ ಪ್ರತಿಪಾದಿಸಿರುವುದನ್ನು ಈ ಮಾತುಗಳು ಸ್ಥಿರೀಕರಿಸುತ್ತವೆ. ತಾವು ಪ್ರತಿಪಾದಿಸಿದ ಸಮಸಮನ್ವಯ ಷಟ್ಸ್ಥಲಸಿದ್ಧಾಂತವನ್ನು ಯಶಸ್ವಿರೀತಿಯಲ್ಲಿ ಸಾಧಿಸಲು, ಅರ್ಪಣ ವಿಧಾನದ ಮೂಲಕ ಪದಾರ್ಥವನ್ನು ಪ್ರಸಾದವಾಗಿಸುವ, ಅಂಗಭೋಗವನ್ನು ಲಿಂಗಭೋಗವಾಗಿಸುವ ವಿನೂತನ ವಿಧಾನವೊಂದನ್ನು ಚೆನ್ನಬಸವಣ್ಣನವರು ತಮ್ಮ ಸಿದ್ಧಾಂತಕ್ಕೆ ಅಳವಡಿಸಿದರು. ಇದರಿಂದಾಗಿ ಸ್ಥಲಸಿದ್ಧಾಂತಕ್ಕೆ ಒಂದು ಹೊಸಆಯಾಮ ಉಂಟಾಯಿತು.

ಹೀಗೆ ಪದಾರ್ಥವನ್ನು ಪ್ರಸಾದವಾಗಿಸುವ ಅರ್ಪಣ ವಿಧಾನವನ್ನು ಷಟ್ಸ್ಥಲಾಚರಣೆಯಲ್ಲಿ ಅಳವಡಿಸಿ, ಇದೇ ಜನ್ಮದಲ್ಲಿ ಲಿಂಗಾಂಗಸಾಮರಸ್ಯರೂಪದ ಮುಕ್ತಿ ಸಾಧ್ಯವಾಗುವಂತೆ ಮಾಡಿದ ಚೆನ್ನಬಸವಣ್ಣನವರ ಕಾರ್ಯ ಉಳಿದೆಲ್ಲ ಸಮಕಾಲೀನ ಶರಣರಿಗಿಂತ ವಿಶಿಷ್ಟವೆಂಬುದರಲ್ಲಿ ಸಂದೇಹವಿಲ್ಲ. ಇದನ್ನು ಸಮಕಾಲೀನ ಶರಣರೂ ಮನಗಂಡಿದ್ದಾರೆ. ಆದುದರಿಂದಲೇ ಪ್ರಭುದೇವ "ಪ್ರಸಾದದ ಹಾದಿಯನೆಲ್ಲರಿಗೆ ತೋರಿ ಮಹಾಪ್ರಸಾದದ ಬೆಳವಿಗೆಯ ಮಾಡಿದನು ಗುಹೇಶ್ವರನ ಶರಣ ಚೆನ್ನಬಸವಣ್ಣ" ಎಂದು ಹೇಳಿದ್ದರೆ, ಸಿದ್ಧರಾಮ "ಅರ್ಪಣದ ಭೇದವ ಕಪಿಲಸಿದ್ಧಮಲ್ಲಿಕಾರ್ಜುನಯ್ಯನಲ್ಲಿ ಚೆನ್ನಬಸವಣ್ಣ ಬಲ್ಲ" ಎಂದು ತಿಳಿಸಿದ್ದಾನೆ. ಉರಿಲಿಂಗಪೆದ್ದಿಯಂತೂ "ಪ್ರಸಾದದ ಸ್ಥಲಕುಲವನು ನಿಮ್ಮ ಪ್ರಸಾದಿ ಚೆನ್ನಬಸವಣ್ಣನೊಬ್ಬಂಗಲ್ಲದೆ ಮತ್ತಾರಿಗೂ ಅರಿಯಬಾರದಯ್ಯಾ" ಎಂದು ಖಚಿತ ವಾಣಿಯಲ್ಲಿ ಸ್ಪಷ್ಟಪಡಿಸಿದ್ದಾನೆ.

ಪ್ರಸಾದದ ಹಾದಿಯನ್ನು ಚೆನ್ನಬಸವಣ್ಣನವರು ತೋರಿಸಿರುವ ಜೊತೆಗೆ ಅವರು ಪ್ರಸಾದಿಸ್ಥಲದಲ್ಲಿಯೇ ನಿಂದು, ಅಲ್ಲಿಯೇ ಉಳಿದೆಲ್ಲ ಸ್ಥಲಗಳ ಕ್ರಿಯೆಯನ್ನು ಸಮನ್ವಯಗೊಳಿಸಿಕೊಂಡಂತೆ ತೋರುತ್ತದೆ. ಆದುದರಿಂದಲೇ ಸಮಕಾಲೀನ ಶರಣರು ಚೆನ್ನಬಸವಣ್ಣನವರನ್ನು "ಪ್ರಸಾದಿಸ್ಥಲವನಿಂಬುಗೊಂಡವನೆಂದು" ವರ್ಣಿಸಿದ್ದಾರೆ. "ಪ್ರಸಾದವೇ ಪ್ರಾಣವಾಗಿ ಪರಿಣಾಮದಲ್ಲಿ ಇಪ್ಪ....ಚೆನ್ನಬಸವಣ್ಣ" (ಬಸವಣ್ಣ), "ಸರ್ವಕ್ಕೆ ಚೈತನ್ಯನಾದ ನಮ್ಮ ಚೆನ್ನಬಸವಣ್ಣನೆಂಬ ಅಚ್ಚಪ್ರಸಾದಿ" (ಸಿದ್ಧರಾಮ), "ಪ್ರಸಾದಿಸ್ಥಲ ಚೆನ್ನಬಸವಣ್ಣಂಗಾಯಿತ್ತು" (ಢಕ್ಕೆಯ ಬೊಮ್ಮಣ್ಣ), "ವಿಮಲಪ್ರಸಾದಾಂಗಿಯಹ ಚೆನ್ನಬಸವೇಶ" (ಗುಬ್ಬಿಯ ಮಲ್ಲಣ್ಣ), ಇತ್ಯಾದಿ ಸಮಕಾಲೀನ ಶರಣರ ಮತ್ತು ತದನಂತರದ ಕವಿಗಳ ಮಾತುಗಳನ್ನು ಇಲ್ಲಿ ಗಮನಿಸಬೇಕು.

ಮಹಾಜ್ಞಾನಿಯಾದ ಚೆನ್ನಬಸವಣ್ಣನವರು ಆಗಮೋಕ್ತ ಷಟ್ಸ್ಥಲವನ್ನುದ್ಧರಿಸಿ, ಅದನ್ನು ಸಮಸಮನ್ವಯ ಷಟ್ಸ್ಥಲವಾಗಿ ಮಾರ್ಪಡಿಸುವ ಜೊತೆಗೆ ವೀರಶೈವದ ಆಚರಣೆಗೆ ಸಂಬಂಧಿಸಿದಂತೆ ಅನೇಕ ಮಹತ್ವಪೂರ್ಣ ಮಾತುಗಳನ್ನು ನಿರ್ಣಾಯಕವೆಂಬಂತೆ ನಿರೂಪಿಸಿದ್ದಾರೆ. ಶಿವಯೋಗದ ಬಗೆಗೂ ಗಮನಾರ್ಹ ವಿವರಣೆ ಅವರ ವಚನಗಳಲ್ಲಿ ಬರುತ್ತದೆ. ಇಷ್ಟಲಿಂಗಾನುಸಂಧಾನದ ಮೂಲಕ ಕಾಯವನ್ನು ಪ್ರಸಾದಕಾಯವಾಗಿಸುವ, ಪ್ರಾಣಲಿಂಗಾನುಸಂಧಾನದ ಮೂಲಕ ಪ್ರಸಾದಕಾಯವನ್ನು ಪ್ರಕಾಶಕಾಯವಾಗಿಸುವ,ಭಾವಲಿಂಗಾನು ಸಂಧಾನದ ಮೂಲಕ ಪ್ರಕಾಶಕಾಯವನ್ನು ಆಕಾಶಕಾಯವಾಗಿಸುವ ವಿವರ ಚೆನ್ನಬಸವಣ್ಣನವರ ವಚನಗಳಲ್ಲಿ ಎಳೆಎಳೆಯಾಗಿ ಬಂದಿರುವುದನ್ನು ಕಾಣುತ್ತೇವೆ. ಷಟ್ಸ್ಥಲಾಚರಣೆಯಲ್ಲಿಯೇ ಪಂಚಾಚಾರ ಹಾಗೂ ಅಷ್ಟಾವರಣಗಳ ಆಚರಣೆಯನ್ನು ಅಳವಡಿಸಿ, ಲಿಂಗಾಂಗಸಾಮರಸ್ಯವನ್ನು ಸಾಧಿಸುವ ವಿವರಗಳನ್ನು ಚೆನ್ನಬಸವಣ್ಣನವರು ತಮ್ಮ ಅನೇಕ ವಚನಗಳಲ್ಲಿ ನೀಡಿದ್ದಾರೆ. ಇದೆಲ್ಲವನ್ನು ಪರಿಭಾವಿಸಿದಾಗ ಷಟ್ಸ್ಥಲಚಕ್ರವರ್ತಿಯಯ್ಯಾ ಚೆನ್ನಬಸವಣ್ಣನು" ಎಂಬ ಮರುಳಶಂಕರದೇವರ ಮಾತು ಸತ್ಯಪೂರ್ಣವೆನಿಸುತ್ತದೆ.

ಚೆನ್ನಬಸವಣ್ಣನವರ ವ್ಯಕ್ತಿತ್ವದ ಬಗೆಗೆ ಷಟ್ಸ್ಥಲಸಿದ್ಧಾಂತ ಮತ್ತು ಅದರ ಆಚರಣೆಯ ನಿರ್ಣಯದಲ್ಲಿ ಚೆನ್ನಬಸವಣ್ಣನವರು ವಹಿಸಿದ ಮಹತ್ವಪೂರ್ಣ ಪಾತ್ರವನ್ನು ತಿಳಿ

ಯಲು ಸಾಕಷ್ಟು ಸಾಮಗ್ರಿ ನಮಗೆ ದೊರೆಯುತ್ತದೆ. ಆದರೆ ಅವರ ಜೀವನಚರಿತ್ರೆಯ ಬಗ್ಗೆ, ಅವರನ್ನೇ ಕುರಿತು ಬರೆದ ವಿರೂಪಾಕ್ಷಪಂಡಿತನ ಚೆನ್ನಬಸವಪುರಾಣ ಮತ್ತು ಬೇರೆ ಕೆಲವು ಕೃತಿಗಳಲ್ಲಿ ಸಾಂದರ್ಭಿಕವಾಗಿ ಕೆಲವು ವಿವರಗಳು ದೊರೆಯುತ್ತಿವೆಯಾದರೂ ಒಂದೆರಡು ವಿಷಯಗಳ ಬಗೆಗೆ ಎಲ್ಲವುಗಳಲ್ಲಿಯೂ ಏಕಾಭಿಪ್ರಾಯವಿಲ್ಲ. ಉಪಲಬ್ಧ ಸಾಮಗ್ರಿಯನ್ನೇ ಆಧರಿಸಿ ಚೆನ್ನಬಸವಣ್ಣನವರ ಜೀವನಚರಿತ್ರೆಯನ್ನು ಈಗ ನಿರೂಪಿಸಬೇಕಾಗಿದೆ. ಬಸವಣ್ಣನವರ ಸೋದರಿ ಅಕ್ಕನಾಗಮ್ಮನ ಮಗ ಚೆನ್ನಬಸವಣ್ಣನೆಂಬುದರಲ್ಲಿ ಯಾರೂ ಸಂದೇಹ ವ್ಯಕ್ತಪಡಿಸಿಲ್ಲ. ಆದುದರಿಂದ ಚೆನ್ನಬಸವಣ್ಣ, ಬಸವಣ್ಣನವರ ಸೋದರಳಿಯನಾಗುತ್ತಾನೆ. ಚೆನ್ನಬಸವಣ್ಣನವರ ಜನ್ಮಸ್ಥಳ ಕಲ್ಯಾಣವೆಂದು ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣ ಮತ್ತು ಸಂದರ್ಭಾನುಸಾರ ಚೆನ್ನಬಸವಣ್ಣನವರನ್ನು ಉಲ್ಲೇಖಿಸುವ ವೀರಶೈವ ಕೃತಿಗಳು ಹೇಳುತ್ತವೆ. ಆದರೆ ಇತ್ತೀಚಿನ ಕೆಲವು ವಿದ್ವಾಂಸರು ಬಸವಣ್ಣನವರು ಕಲ್ಯಾಣಕ್ಕೆ ಬರುವ ಪೂರ್ವದಲ್ಲಿಯೇ ಚೆನ್ನಬಸವಣ್ಣನವರು ಜನಿಸಿರಬೇಕೆಂದು ಹೇಳುತ್ತಾರೆ. ಚೆನ್ನಬಸವಣ್ಣನವರ ತಂದೆಯ ಹೆಸರನ್ನು 'ಅಮಲಬಸವ ಚಾರಿತ್ರ್ಯ' (ಸಿಂಗಿರಾಜಪುರಾಣ)ವೊಂದನ್ನು ಬಿಟ್ಟು ಉಳಿದಾವ ಕೃತಿಗಳೂ ಹೇಳುವುದಿಲ್ಲ. ಸಿಂಗಿರಾಜ ಪುರಾಣದಲ್ಲಿ ಎರಡು ಮೂರುಕಡೆ ಅಕ್ಕನಾಗಮ್ಮನ ಪತಿ ಶಿವಸ್ವಾಮಿ ಅಥವಾ ಶಿವದೇವನೆಂದು ಬರುತ್ತದೆ.

ಹಲ ಕೆಲವು ವೀರಶೈವ ಗ್ರಂಥಗಳಲ್ಲಿ ಚೆನ್ನಬಸವಣ್ಣನವರು ಪ್ರಸಾದದಿಂದ ಜನಿಸಿದರೆಂಬ ಮಾತು ಬರುತ್ತದೆ. ಲಕ್ಕಣ್ಣದಂಡೇಶ (ಕ್ರಿ. ಶ. ಸು. ೧೪೨೮) ತನ್ನ ಶಿವತತ್ವ ಚಿಂತಾಮಣಿಯಲ್ಲಿ ಜಂಗಮದ ತೀರ್ಥ ಪ್ರಸಾದ ಸೇವನೆಯಿಂದ ಅಕ್ಕನಾಗಮ್ಮ ಚೆನ್ನ ಬಸವಣ್ಣನನ್ನು ಪಡೆದಳೆಂಬ ಅರ್ಥಬರುವಂತೆ ಹೇಳಲಾಗಿದೆ. ಲಕ್ಕಣ್ಣದಂಡೇಶನ ಸಮಕಾಲೀನನಾಗಿರಬಹುದಾದ ಚಾಮರಸನು ತನ್ನ ಪ್ರಭುಲಿಂಗಲೀಲೆಯಲ್ಲಿ ಬಸವಣ್ಣನವರ ಒಕ್ಕುಮಿಕ್ಕ ಪ್ರಸಾದವನ್ನು ಅಕ್ಕನಾಗಾಯಿಗಳು ಉಣಲು, ಅದರಿಂದಾಗಿ ಮುಂದೆ ಚೆನ್ನಬಸವಣ್ಣನವರು ಜನಿಸಿದರೆಂದು ಹೇಳಿದೆ. ಪ್ರಾಯಃ ಕ್ರಿ. ಶ. ೧೫೦೩ ರಲ್ಲಿ ಸಂಕಲನ ಗೊಂಡಿರಬಹುದಾದ ಹಲಗೆಯ ದೇವರ ಶೂನ್ಯಸಂಪಾದನೆಯಲ್ಲಿ ಕಕ್ಕಯ್ಯನ ಪ್ರಸಾದದಿಂದ ಚೆನ್ನಬಸವಣ್ಣನವರು ಜನಿಸಿದರೆಂಬ ಮಾತು ಬರುತ್ತದೆ. ವಿರೂಪಾಕ್ಷಪಂಡಿತನ ಚೆನ್ನಬಸವ ಪುರಾಣದಲ್ಲಿ ಶಿವನ ಪ್ರಸಾದದಿಂದ ಅರ್ಥಾತ್ ಶಿವನ ಚಿತ್‌ಕಳೆಯಿಂದ ಚೆನ್ನಬಸವಣ್ಣನವರು ಜನಿಸಿದಂತೆ ಹೇಳಿದೆ. ತದನಂತರ ಬರುವ ಸಿದ್ಧನಂಜೇಶ, ಶಾಂತಲಿಂಗದೇಶಿಕ, ಅದೃಶ್ಯಕವಿ, ಚೆನ್ನಪ್ಪಕವಿ ಮೊದಲಾದವರು ಕಕ್ಕಯ್ಯನ ಪ್ರಸಾದದಿಂದಲೇ ಅಕ್ಕನಾಗಮ್ಮ ಚೆನ್ನಬಸವಣ್ಣನವರನ್ನು ಪಡೆದಳೆಂದು ಹೇಳುತ್ತಾರೆ. ಇದೆಲ್ಲದರ ಒಟ್ಟು ಮತಿತಾರ್ಥವೆಂದರೆ ಎಲ್ಲವೂ ಕವಿಕಲ್ಪನೆಗಳೆಂಬುದು.

ಪ್ರಭುದೇವರ ಅನಂತರ ಚೆನ್ನಬಸವಣ್ಣ ಶೂನ್ಯಸಿಂಹಾಸನವನ್ನೇರಿದನೆಂದು ಹೇಳಲಾಗುತ್ತದೆ. ಕಲ್ಯಾಣದಲ್ಲಿ ನಡೆದ ಕ್ರಾಂತಿಯಿಂದಾಗಿ ಶರಣ ಶರಣೆಯರೆಲ್ಲ ಬೇರೆ ಬೇರೆ ಕಡೆ ಚದುರಿಹೋಗುತ್ತಾರೆ. ಚೆನ್ನಬಸವಣ್ಣನವರು ಕ್ರಾಂತಿಯ ಅನಂತರ ಕೆಲವುದಿನ ಕಲ್ಯಾಣದಲ್ಲಿಯೇ ಉಳಿದು, ಅಲ್ಲಿದ್ದ ಶರಣರ ಯೋಗಕ್ಷೇಮವನ್ನು ನೋಡಿಕೊಂಡಿರುವ

ಸಾಧ್ಯತೆ ಇವೆ. ಆಮೇಲೆ ಪರಿಸ್ಥಿತಿ ಇನ್ನೂ ಉಲ್ಬಣಗೊಂಡಾಗ ಉಳಿದ ಶರಣರ ಜೊತೆ ಅವರು ಉಳವಿಯತ್ತ ಪ್ರಯಾಣ ಬೆಳೆಸಿದಂತೆ ಕಲವು ಕೃತಿಗಳಿಂದ ತಿಳಿದುಬರುತ್ತದೆ. ಚೆನ್ನಬಸವಣ್ಣನವರು ಬಯಲಾದುದು ಉಳವಿಯಲ್ಲಿಯೇ ಎಂಬ ನಂಬಿಕೆ ಈಗಲೂ ಅನೇಕ ಜನರಲ್ಲಿ ಬಲವತ್ತರವಾಗಿದೆ.

ಇನ್ನು ಚೆನ್ನಬಸವಣ್ಣನವರ ವಚನಗಳ ವೈಶಿಷ್ಟ್ಯ ವಿಶೇಷವನ್ನು ಕುರಿತು ಒಂದೆರಡು ಮಾತು ಬಸವಣ್ಣ ಮತ್ತು ಅಕ್ಕಮಹಾದೇವಿಯಂತಹ ಕವಿಹೃದಯದ ವಚನಕಾರರ ವಚನಗಳಲ್ಲಿ ಎದ್ದುಕಾಣುವ ಆತ್ಮ ನಿವೇದನೆ ಹಾಗೂ ಸತಿಪತಿಭಾವವನ್ನೊಳಗೊಂಡ ಭಾವಗೀತಾತ್ಮಕರೂಪದ ವಚನಗಳು ಚೆನ್ನಬಸವಣ್ಣನವರಲ್ಲಿ ಹೆಚ್ಚಾಗಿ ಕಂಡು ಬರುವದಿಲ್ಲ. ಯೌಗಿಕ ಅನುಭಾವವನ್ನು ಬೆಡಗಿನ ಮಾಧ್ಯಮದ ಮೂಲಕ ಅಭಿವ್ಯಕ್ತಪಡಿಸಿದ ಪ್ರಭುದೇವರ ಬೆಡಗಿನ ವಚನಗಳಂತಹ ವಚನಗಳೂ ಚೆನ್ನಬಸವಣ್ಣನವರಲ್ಲಿ ಕಡಿಮೆಯೇ. ಚೆನ್ನಬಸವಣ್ಣನವರ ಮುಖ್ಯ ಉದ್ದೇಶ ವೀರಶೈವ ಸಿದ್ಧಾಂತ, ಆಚಾರ–ವಿಚಾರ ಹಾಗೂ ತತ್ವಗಳನ್ನು ಮರುಹುಟ್ಟು ಪಡೆದಂತೆ, ಸಮಕಾಲೀನ ಯುಗಧರ್ಮಕ್ಕೆ ಹೊಂದಿಕೊಳ್ಳುವಂತೆ ಸಾಮಾನ್ಯಜನತೆಗೆ ವಿವರಿಸುವುದಾಗಿತ್ತು. ಬಸವಣ್ಣನವರ ನೇತೃತ್ವದಲ್ಲಿ ನಡೆದ ಅಭೂತಪೂರ್ವ ಧಾರ್ಮಿಕ ಸಾಮಾಜಿಕ ಹಾಗೂ ಆರ್ಥಿಕ ಕ್ರಾಂತಿಗೆ ಒಂದು ಬಗೆಯ ತಾತ್ವಿಕ ನೆಲಗಟ್ಟನ್ನು ಒದಗಿಸುವ ಪ್ರಯತ್ನ ಚೆನ್ನಬಸವಣ್ಣನವರಿಂದ ನಡೆಯಿತು. ಆದುದರಿಂದ ಚೆನ್ನಬಸವಣ್ಣನವರ ವಚನಗಳಲ್ಲಿ ಕಂಡುಬರುವಷ್ಟು ತಾತ್ವಿಕ ವಿವೇಚನೆ ಸಮಕಾಲೀನ ವಚನಕಾರರಲ್ಲಿ ಕಂಡುಬರುವುದಿಲ್ಲ. ವೀರಶೈವ ಮತತತ್ವ ಹಾಗೂ ಆಚಾರ–ವಿಚಾರಗಳಿಗೆ ಇದಮಿತ್ಥಂ ಎಂದು ತಿಳಿಯಬಯಸುವವರು ಚೆನ್ನಬಸವಣ್ಣನವರ ವಚನಗಳಿಗೆ ಹೋಗಬೇಕು. ಸಮಾಜದ ವಿವಿಧ ಸ್ಥರಗಳಿಂದ ಬಂದ ಹಲವಾರು ಜನ ಶರಣ–ಶರಣೆಯರು ಅನುಭವಮಂಟಪದಂತಹ ಒಂದು ವಿಶಾಲ ವೇದಿಕೆಯ ಮೇಲೆ ಸರಿಸಮಾನರಾಗಿ ಕುಳಿತುಕೊಂಡು ನಡೆಸಿದ ತಾತ್ವಿಕ, ಸಾಮಾಜಿಕ ವಿಚಾರಗಳ ಚರ್ಚೆ ಹಾಗೂ ಗೋಷ್ಠಿಗಳ ಫಲವಾಗಿ ನಿರ್ಣೀತಗೊಂಡ ಅಂಶಗಳಿಗೆ ಒಂದು ಸುವ್ಯವಸ್ಥಿತ ರೂಪವನ್ನು ಕೊಡುವ ಪ್ರಯತ್ನ ಚೆನ್ನಬಸವಣ್ಣನವರಿಂದ ನಡೆಯಿತೆಂಬುದನ್ನು ಅವರ ವಚನಗಳ ಅಧ್ಯಯನದ ಮೂಲಕ ಗುರುತಿಸಬಹುದಾಗಿದೆ. ಇದರಿಂದಾಗಿ ವೀರಶೈವಕ್ಕೆ ಸಂಬಂಧಪಟ್ಟ ತಾತ್ವಿಕ ಅಂಶಗಳೆಲ್ಲವೂ ತುಂಬಾ ವಿವರಪೂರ್ಣವಾಗಿ ಹಾಗೂ ತಲಸ್ಪರ್ಶಿಯಾಗಿ ಚೆನ್ನಬಸವಣ್ಣನವರ ವಚನಗಳಲ್ಲಿ ಬಂದಿರುವುದನ್ನು ಕಾಣುತ್ತೇವೆ. ವೀರಶೈವದ ಅಂಗವಾದ ಅಷ್ಟಾವರಣ, ಪ್ರಾಣವಾದ ಪಂಚಾಚಾರ ಮತ್ತು ಆತ್ಮವೆನಿಸಿದ ಷಟ್ಸ್ಥಲಕ್ಕೆ ಸಂಬಂಧಿಸಿದಂತೆ ಏನೆಲ್ಲ ವಿವರಗಳು ಚೆನ್ನಬಸವಣ್ಣನವರ ವಚನಗಳಲ್ಲಿ ತೂರಿಬಂದಿವೆ.

ಅಂಗಸ್ಥಲಗಳಲ್ಲಿ ಒಂದೊಂದನ್ನೂ ಕುರಿತಂತೆ ಸೂತ್ರಪ್ರಾಯವಾಗಿ ಹರಳುಗಟ್ಟಿದಂತೆ ಹೇಳಿರುವ ಚೆನ್ನಬಸವಣ್ಣನವರ ವಚನಗಳು ವೀರಶೈವದ ಅಧ್ಯಯನ, ಅಧ್ಯಾಪನಗಳಿಗೆ ಹೆಚ್ಚಿನ ನೆರವನ್ನು ನೀಡುತ್ತವೆ.ಅಷ್ಟಾವರಣಗಳಲ್ಲಿ ಉಪಾಸ್ಯಮೂರ್ತಿಗಳಾದ ಗುರು–ಲಿಂಗ–ಜಂಗಮದ ಬಗ್ಗೆ ಒಂದು ಸ್ಪಷ್ಟವಾದ ಮತ್ತು ಖಚಿತವಾದ ಪರಿಕಲ್ಪನೆಯನ್ನು ಚೆನ್ನಬಸವಣ್ಣನವರ ವಚನಗಳಲ್ಲಿ ಕಾಣುತ್ತೇವೆ. ಗುರು–ಲಿಂಗ–ಜಂಗಮದ ಸ್ಥಾನಮಾನಗಳನ್ನು

ನಿರ್ಣಾಯಕ ರೀತಿಯಲ್ಲಿ ಚೆನ್ನಬಸವಣ್ಣನವರು ತಮ್ಮ ವಚನಗಳಲ್ಲಿ ಹೇಳಿರುವುದು ಪರಿಶೀಲನಾರ್ಹವಾಗಿದೆ. ಅಷ್ಟಾವರಣಗಳಲ್ಲಿ ಉಪಾಸನೆಯ ಫಲವೆಂದು ಪರಿಗಣಿತವಾದ ಪಾದೋದಕ, ಪ್ರಸಾದ ಮತ್ತು ಅವುಗಳಲ್ಲಿರುವ ವಿವಿಧ ಪ್ರಕಾರಗಳ ವಿವರ ಚೆನ್ನಬಸವಣ್ಣನವರ ವಚನಗಳಲ್ಲಿ ಸುವಿವರವಾಗಿ ಬರುವಂತೆ, ಸಮಕಾಲೀನ ಶರಣರ ವಚನಗಳಲ್ಲಿ ಕಂಡು ಬರುವದಿಲ್ಲ. ವೀರಶೈವ ಅಷ್ಟಾವರಣಗಳಲ್ಲಿ ಉಪಾಸನೆಯ ಸಾಧನೆಗಳೆಂದು ಹೇಳಲಾಗುವ ವಿಭೂತಿ, ರುದ್ರಾಕ್ಷಿ ಹಾಗೂ ಮಂತ್ರಗಳ ಬಗ್ಗೆ ವೀರಶೈವಕ್ಕೆ ವಿಶಿಷ್ಟವಾಗಿರುವ ಒಂದು ಪರಿಕಲ್ಪನೆಯನ್ನು ಚೆನ್ನಬಸವಣ್ಣನವರ ವಚನಗಳಲ್ಲಿ ಕಾಣುತ್ತೇವೆ. ಪಂಚಾಚಾರಗಳನ್ನು ಕುರಿತಂತೆ ಚೆನ್ನಬಸವಣ್ಣನವರ ವಚನಗಳಲ್ಲಿ ಬರುವ ವಿವರ ಪರಿಭಾವನಾರ್ಹ. ಪಂಚಾಚಾರಗಳು ಚೆನ್ನಬಸವಣ್ಣನವರ ದೃಷ್ಟಿಯಲ್ಲಿ ವೀರಶೈವದ ನೈತಿಕ ವಿಭಾಗಕ್ಕೆ ಸೇರುತ್ತವೆ. ಅವರು ಆಚಾರಗಳನ್ನು ಐದಾಗಿ ವಿಭಜಿಸುವ ಜೊತೆಗೆ ಮೂರಾಗಿ, ಏಳಾಗಿ, ಹನ್ನೆರಡಾಗಿಯೂ ವಿಭಜಿಸಿದ್ದಾರೆ. ಸಿದ್ಧರಾಮನಿಗೆ ಚೆನ್ನಬಸವಣ್ಣನವರು ವಿವರಿಸುವ ಒಟ್ಟು ಆಚಾರಗಳ ಸಂಖ್ಯೆ ಐವತ್ತು. ಇದರಿಂದ ಆಚಾರಕ್ಕೆ ಚೆನ್ನಬಸವಣ್ಣನವರು ಕೊಟ್ಟಿರುವ ಮಹತ್ವ ಸ್ಪಷ್ಟವಾಗುತ್ತದೆ. ಆದರೂ ಚೆನ್ನಬಸವಣ್ಣನವರು ಹೆಚ್ಚು ಒತ್ತುಕೊಟ್ಟಿರುವುದು ಪಂಚಾಚಾರಗಳಿಗೆ.

"ಅರಿವು, ಆಚಾರ, ಅನುಭಾವಗಳಿಂದ ನೀವು ಪ್ರಕಟಗೊಳ್ಳುವಿರಾಗಿ" ಎಂದು ಚೆನ್ನಬಸವಣ್ಣನವರು ಒಂದೆಡೆ ಹೇಳಿದ್ದಾರೆ. ಈ ಮೂರನ್ನು ಕುರಿತಂತೆ ವಿಸ್ತಾರವಾದ ಪ್ರತಿಪಾದನೆ ಇವರ ವಚನಗಳಲ್ಲಿ ಕಾಣದೊರೆಯುತ್ತದೆ. ಶಿವಯೋಗವನ್ನು ಕುರಿತಂತೆ ಚೆನ್ನಬಸವಣ್ಣನವರು ತಮ್ಮ ವಚನಗಳಲ್ಲಿ ಹೇಳಿರುವ ಮಾತುಗಳು ವೀರಶೈವಾಭ್ಯಾಸಿಗಳಿಗೆ ಅತ್ಯಂತ ಮಹತ್ವದವಾಗಿವೆ. ಶಿವಯೋಗದಲ್ಲಿ ಸಾಧಕನು ಪ್ರಸಾದಕಾಯನಾಗುವ, ಪ್ರಕಾಶಕಾಯನಾಗುವ ಹಾಗೂ ಆಕಾಶಕಾಯನಾಗುವ ಮೂರು ಹಂತಗಳನ್ನು ಗುರುತಿಸುವ ಮೂಲಕ ಅವರು ಶಿವಯೋಗದಲ್ಲಿ ಒಂದು ಹೊಸ ಆಯಾಮವನ್ನು ತೆರೆದು ತೋರಿಸಿದ್ದಾರೆ. ಹೀಗೆ ಚೆನ್ನಬಸವಣ್ಣನವರ ವಚನಗಳು ಒಂದು ದೃಷ್ಟಿಯಿಂದ ವೀರಶೈವ ತತ್ವಮಣಿ ದರ್ಪಣಗಳಾಗಿವೆ ಎಂದು ಹೇಳಬಹುದು.

ಚೆನ್ನಬಸವಣ್ಣನವರ ವಚನಗಳ ಇನ್ನೊಂದು ವಿಶೇಷತೆಯೆಂದರೆ ತತ್ವವಿಚಾರದಂತಹ ಗೂಢ ವಿಷಯಗಳನ್ನು ಕೂಡ ಅವು ನೇರ ಮತ್ತು ಸರಳಭಾಷೆಯಲ್ಲಿ ವಿವರಿಸುವುದು. ಅವರ ವಚನಗಳಲ್ಲಿ ಸಂದಿಗ್ಧತೆ, ಕ್ಲಿಷ್ಟತೆಗಳನ್ನು ನಾವು ಕಾಣುವುದಿಲ್ಲ. ಅವರು ತತ್ವಪ್ರತಿಪಾದನೆಗೆ ತೊಡಗಿದುದು ಸಾಮಾನ್ಯಜನತೆಗಾಗಿ. ಅದರಿಂದಾಗಿ ಅವರ ವಚನಗಳ ಭಾಷೆ ಸಹಜವಾಗಿಯೇ ಸರಳ ಮತ್ತು ನೇರವಾಗಿರಬೇಕಾದುದು ಅನಿವಾರ್ಯವಾಗಿತ್ತು. ಆ ಕಾರ್ಯವನ್ನು ಚೆನ್ನಬಸವಣ್ಣನವರು ತುಂಬಾ ಯಶಸ್ವಿ ರೀತಿಯಲ್ಲಿ ಮಾಡಿದ್ದಾರೆನ್ನಬಹುದು. ತತ್ವಪ್ರತಿಪಾದನೆಯನ್ನೊಳಗೊಂಡಿರುವ ಅವರ ಹಲಕೆಲವು ವಚನಗಳು ತುಂಬಾ ದೀರ್ಘವಾಗಿದ್ದರೂ ಅವುಗಳ ಸರಳತೆಗೆ ಬಾಧೆ ಬಂದಿಲ್ಲ; ಕ್ಲಿಷ್ಟತೆ ತಲೆದೋರಿಲ್ಲ. ಕ್ಲಿಷ್ಟವಾದ ತತ್ವಗಳು ಬಹಳ ಸರಳ ರೀತಿಯಲ್ಲಿ ಚೆನ್ನಬಸವಣ್ಣನವರ ವಚನಗಳಲ್ಲಿ ಮೂಡಿಬಂದಿವೆ. ಮೊದಲು ಒಂದು ಅಂಶವನ್ನು ಹೇಳಿ, ತದನಂತರ ಅದರ ವಿವರ ಹಾಗೂ

ಪ್ರಕಾರಗಳನ್ನು ಒಂದಾದ ಮೇಲೊಂದರಂತೆ ಕ್ರಮಬದ್ಧವಾಗಿ ಎಳೆಯೆಳೆಯಾಗಿ ಸರಳ, ಸುಂದರ ಭಾಷೆಯಲ್ಲಿ ಕೊಡುತ್ತ ಹೋಗಿರುವದನ್ನು ಅವರ ವಚನಗಳಲ್ಲಿ ಕಾಣುತ್ತೇವೆ.

ಪ್ರಸ್ತುತ ವಚನಸಂಪುಟದಲ್ಲಿ ಬಂದಿರುವ ವಚನಗಳ ಸಂಗ್ರಹಣ, ಪರಿಷ್ಕರಣ, ಮತ್ತು ಸಂಪಾದನೆಯನ್ನು ಕುರಿತು ಒಂದೆರಡು ಮಾತು: ಇಲ್ಲಿಯುವರೆಗೆ ಪ್ರಕಟವಾಗಿರುವ ಚೆನ್ನಬಸವಣ್ಣನವರ ವಚನಸಂಕಲನಗಳಲ್ಲಿ ಕೆಲವು ಪಂಡಿತಮಾನ್ಯ ಸಂಪಾದನೆಗಳಾಗಿದ್ದರೆ, ಇನ್ನು ಕೆಲವು ಸಾಮಾನ್ಯಸಂಕಲನಗಳಾಗಿವೆ. ಪಂಡಿತಮಾನ್ಯ ಸಂಕಲನಗಳಲ್ಲಿ ಹೆಚ್ಚು ಸಂಖ್ಯೆಯಲ್ಲಿ ಹಸ್ತಪ್ರತಿಗಳನ್ನು ಬಳಸಲಾಗಿದೆ. ಒಂದೊಂದು ವಚನಕ್ಕೆ ಸಂಬಂಧಿಸಿದಂತೆ ಇರುವ ಹಲವಾರು ಪಾಠಾಂತರಗಳನ್ನು ಅಡಿಟಿಪ್ಪಣಿಯಲ್ಲಿ ಕೊಡಲಾಗಿದೆ. ನಮ್ಮ ಮುಖ್ಯ ಉದ್ದೇಶ ಜನಸಾಮಾನ್ಯರಿಗಾಗಿ ಚೆನ್ನಬಸವಣ್ಣನವರ ವಚನಗಳನ್ನು ಆದಷ್ಟು ಶುದ್ಧರೂಪದಲ್ಲಿ ಒದಗಿಸುವುದು. ಅದರಿಂದಾಗಿ ಪಾಠಾಂತರಗಳನ್ನು ಕೊಡುವ ಗೋಜಿಗೆ ಹೋಗಿಲ್ಲ. ಪ್ರಸ್ತುತ ವಚಸಗಳ ಪರಿಷ್ಕರಣಕ್ಕೆ ಹಲವಾರು ಹಸ್ತಪ್ರತಿಗಳಲ್ಲಿ ಉತ್ತಮ ವೆನಿಸಿದ ಒಂದು ಹಸ್ತಪ್ರತಿಯನ್ನು ಆಯ್ದುಕೊಂಡು, ಅಲ್ಲಿಯ ವಚನಗಳ ವಿನ್ಯಾಸಕ್ಕೆ ಭಂಗ ಬರದಂತೆ ಮತ್ತು ಪಾಠಸಂಪ್ರದಾಯಕ್ಕೆ ಅಪಚಾರವಾಗದಂತೆ ಭಾಷಾದೋಷ ಗಳನ್ನು ದೂರಮಾಡಿ, ಪರಿಷ್ಕರಿಸಲು ಪ್ರಯತ್ನಿಸಲಾಗಿದೆ. ವಚನಗಳ ಸಂಪಾದನೆಗೆ ಇದೇ ಬಹುಮಟ್ಟಿಗೆ ಸರಿಯಾದ ವಿಧಾನವೆಂದು ನಮ್ಮ ಅನಿಸಿಕೆ. ಈ ಸಂಪುಟದಲ್ಲಿ ಬರುವ ಚೆನ್ನಬಸವಣ್ಣನವರ ಷಟ್ಸ್ಥಲವಚನಗಳು ಭಾಗದ ಸಂಪಾದನೆಗೆ ಸುಮಾರು ೮೭೧ ವಚನಗಳಿರುವ ಮೈಸೂರು ವಿಶ್ವವಿದ್ಯಾಲಯದ ತಾಳೆಗರಿಪ್ರತಿ (ನಂ. ಕೆ. ೧೨೦೬/೧ ೧೩" × ೨.೨೫")ಯನ್ನು ಆಧಾರಪ್ರತಿ ಎಂದು ಇಟ್ಟುಕೊಳ್ಳಲಾಗಿದೆ. ಈ ಹಸ್ತ ಪ್ರತಿಯನ್ನಾಧರಿಸಿ ಡಾ. ಎಂ. ಎಂ. ಕಲಬುರ್ಗಿ ಅವರು ಸಂಪಾದಿಸಿರುವ 'ಚೆನ್ನಬಸವಣ್ಣ ನವರ ಷಟ್ಸ್ಥಲವಚನ ಮಹಾಸಂಪುಟ'ದ (ಭಾಗ-೧) ಸಹಾಯವನ್ನು ಪಡೆಯಲಾಗಿದ. 'ಚೆನ್ನಬಸವಣ್ಣನವರ ಹೆಚ್ಚಿನ ವಚನಗಳು' ಭಾಗವನ್ನು ಪರಿಷ್ಕರಿಸಲು ಕನ್ನಡ ಅಧ್ಯಯನ ಪೀಠದ ತಾಳೆಗರಿಪ್ರತಿ(ನಂ. ೨೫ ಮತ್ತು ೧೫೩)ಗಳನ್ನು ಆಧಾರಪ್ರತಿಯಾಗಿಟ್ಟುಕೊಂಡು ಡಾ. ಕಲಬುರ್ಗಿ ಅವರಿಂದ ಸಂಪಾದಿತ ಮೇಲಣ ಸಂಪುಟದಲ್ಲಿ ಬರುವ ಭಾಗ ೨ ಮತ್ತು ೩ರ ಸಹಾಯವನ್ನು ಪಡೆದಿರುವ ಜೊತೆಗೆ ಡಾ. ಆರ್. ಸಿ. ಹಿರೇಮಠ ಅವರು ಸಂಪಾದಿಸಿರುವ 'ಚೆನ್ನಬಸವಣ್ಣನವರ ಷಟ್ಸ್ಥಲವಚನಗಳು' ಕೃತಿಯ ಸಹಾಯವನ್ನೂ ಪ್ರಧಾನವಾಗಿ ಪಡೆಯ ಲಾಗಿದೆ. ಇಲ್ಲಿಯವರೆಗೆ ಪ್ರಕಟವಾಗಿರುವ ಚೆನ್ನಬಸವಣ್ಣನವರ ವಚನಸಂಕಲನಗಳನ್ನು ಮತ್ತು ಬೇರೆ ಬೇರೆ ವಚನಕಾರರ ವಚನಗಳನ್ನೊಳಗೊಂಡ ವಚನಸಂಕಲನಗಳನ್ನು, ಅಪ್ರಕಟಿತ ಹಸ್ತಪ್ರತಿಗಳನ್ನು ಅವಲೋಕಿಸಿ, ಅವುಗಳಲ್ಲಿ ಬರುವ ಚೆನ್ನಬಸವಣ್ಣನವರ ವಚನಗಳನ್ನು ಪ್ರಸ್ತುತ ಸಂಪುಟದಲ್ಲಿ ಸಂಗ್ರಹಿಸಿ ಸಂಪಾದಿಸಲಾಗಿದೆ.

ಈ ಸಂಪುಟದಲ್ಲಿ ಬರುವ ವಚನಗಳನ್ನು ಸಂಗ್ರಹಿಸಿ, ಪರಿಷ್ಕರಿಸಿ ಸಂಪಾದಿಸುವಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಯಿತು.

ಕೆಲವು ವಚನಗಳ ಆರಂಭದ ಸಾಲುಗಳು ಒಂದೇ ಬಗೆಯಾಗಿವೆ. ಆದರೆ ಅವು ಗಳನ್ನು ಒಂದೇ ವಚನವೆಂದು ಭಾವಿಸಲು ಬರುವುದಿಲ್ಲ. ಏಕೆಂದರೆ ಅನಂತರದ ಸಾಲು

ಗಳು, ಆ ಆ ವಚನಗಳಲ್ಲಿ ಬೇರೆಯಾಗಿರುತ್ತವೆ. ಆದುದರಿಂದ ಅವುಗಳನ್ನು ಸ್ವತಂತ್ರ ವಚನಗಳೆಂದು ಪರಿಗಣಿಸಲಾಗಿದೆ.

ಕೆಲವು ವಚನಗಳು "ಅಯ್ಯಾ, ಶ್ರೀಗುರುಲಿಂಗವು ಅಂಗದ ಮೇಲೆ ಲಿಂಗಸಾಹಿತ್ಯ ಮಾಡಿದ ಬಳಿಕ...." "ಶ್ರೀಗುರು ಅಂಗದ ಮೇಲೆ ಲಿಂಗಸಾಹಿತ್ಯ ಮಾಡಿದ ಬಳಿಕ" "ಗುರು ಅಂಗದ ಮೇಲೆ" ಮುಂತಾಗಿ ಆರಂಭಗೊಳ್ಳುತ್ತವೆ. ಇದರಿಂದ ಇವು ಪ್ರತ್ಯೇಕ ವಚನಗಳೆಂಬ ಭಾವನೆ ಉಂಟಾಗುತ್ತದೆ. ಆದರೆ ಇವುಗಳನ್ನು ಪೂರ್ಣ ಓದಿ ನೋಡಿದಾಗ, ಇವೆಲ್ಲವೂ ಒಂದೇ ವಚನವೆಂಬುದು ಖಚಿತವಾಗುತ್ತದೆ.

ಪರಿಷ್ಕರಣ ಕಾರ್ಯದಲ್ಲಿ ಎದುರಾಗುವ ಮತ್ತೊಂದು ಜಟಿಲ ಸಮಸ್ಯೆ, ಅಂಕಿತ ಪಲ್ಲಟ. ಕೆಲವು ಆಕರಗಳಲ್ಲಿ ಒಂದು ವಚನ, ಬೇರೆಬೇರೆ ಅಂಕಿತಗಳಲ್ಲಿ ಸಿಗುತ್ತದೆ. ಇಂಥ ಸಂದರ್ಭದಲ್ಲಿ ಆ ವಚನ, ಇಂಥವರದೇ ಎಂದು ಹೇಳುವುದು ಸಾಧ್ಯವಾಗುವುದಿಲ್ಲ. ಇಲ್ಲೆಲ್ಲ ಆಯಾ ವಚನಕಾರರ ವಚನಗಳ ಭಾಷೆ, ರಚನಾವಿನ್ಯಾಸ, ಆಕರಗಳ ಪ್ರಾಚೀನತೆ, ಹೆಚ್ಚು ಆಕರಗಳಲ್ಲಿ ಬಂದಿರುವ ಅಂಕಿತ ಹಾಗೂ ಇತ್ಯಾದಿಗಳನ್ನು ಗಮನಿಸಿ, ಆ ವಚನ ಇಂಥವರದಿರಬೇಕೆಂದು ನಿರ್ಣಯಿಸಲಾಗಿದೆ.

ಹಲವಾರು ಆಕರಗಳಲ್ಲಿ ಬಸವಣ್ಣನವರ ಕೆಲವು ವಚನಗಳು, ಚೆನ್ನಬಸವಣ್ಣನವರ ವಚನಗಳಾಗಿ ಬಂದಿವೆ. ಇಂಥ ವಚನಗಳನ್ನು ಪರಿಷ್ಕರಣ ಸಂದರ್ಭದಲ್ಲಿ ಕೈಬಿಡಲಾಗಿದೆ. ಹೀಗೆ ಎಷ್ಟೇ ಎಚ್ಚರವಹಿಸಿದರೂ ಬಸವಣ್ಣನವರ ಇನ್ನೂ ಕೆಲವು ವಚನಗಳು ಕಣ್ತಪ್ಪಿನಿಂದಾಗಿ ಪ್ರಸ್ತುತ ಸಂಪುಟದಲ್ಲಿ ನುಸುಳಿ ಬಂದಿವೆ (ವ. ಸಂ. ೮೭೨, ೧೦೬೨, ೧೩೬೮, ೧೬೭೨, ೧೭೫೭, ೧೭೭೨, ೧೭೭೬). ಈ ವಚನಗಳು ಬಸವಣ್ಣನವರ ಷಟ್‌ಸ್ಥಲ ವಚನಗಳಾಗಿರುವುದರಿಂದ, ಇವುಗಳನ್ನು ಚೆನ್ನಬಸವಣ್ಣನವರ ವಚನಗಳೆಂದು ಪರಿಗಣಿಸಬಾರದಾಗಿ ಕೋರಿಕೆ. ಇದರಂತೆ ಪ್ರಸ್ತುತಸಂಪುಟದಲ್ಲಿ ಕೆಲವು ವಚನಗಳು ಪುನರಾವರ್ತನೆಗೊಂಡಿವೆ (ವ. ಸಂ. ೨೦=೧೬೭೮, ೪೩೩=೧೨೦೬, ೬೩೦=೧೬೫೪, ೮೭೬=೧೩೯೧, ೮೯೨=೧೪೪೧, ೯೯೮=೧೦೨೯, ೧೦೧೪=೧೩೪೯, ೧೬೦೬=೧೬೧೧). ಇವುಗಳಲ್ಲಿ ಒಂದನ್ನು ಕೈಬಿಡಬೇಕು.

ಈ ಸಂಪುಟದಲ್ಲಿ ಸಮಾವೇಶವಾಗಿರುವ ಕೆಲವು ವಚನಗಳು ಅಲ್ಪಸ್ವಲ್ಪ ವ್ಯತ್ಯಾಸಗಳಿಂದ ಕೂಡಿದ್ದರೂ ಸಾಮ್ಯತೆ ಹೆಚ್ಚಾಗಿದೆ (೧೨೫೯=೧೨೬೧, ೧೧೧೦=೧೩೩೩, ೧೫೭೯=೨೭೩, ೨೫೦=೨೫೫). ವಚನಗಳ ಆರಂಭ ಕೆಲವುಸಲ ಒಂದೇ ಬಗೆಯಾಗಿದ್ದರೂ ತದನಂತರದ ಭಾಗ ಬೇರೆಯಾಗಿರುವುದೂ ಉಂಟು (೨೧೨=೯೫೩, ೪೧೬=೧೭೪೫, ೧೫೨೮=೧೫೨೯). ಇಲ್ಲಿಯ ವಚನಗಳ ಇನ್ನೊಂದು ವಿಶೇಷತೆಯೆಂದರೆ ಸಂಕ್ಷಿಪ್ತವಾಗಿದ್ದ ವಚನವನ್ನು ಹೆಚ್ಚು ವಿವರಗಳೊಂದಿಗೆ ಮತ್ತೊಂದು ವಚನದಲ್ಲಿ ನಿರೂಪಿಸಿರುವುದು (೧೪೧೪ > ೧೪೧೬). ಒಂದು ವಚನ ಇನ್ನೊಂದು ವಚನದ ಭಾಗವಾಗಿ ಬಂದಿರುವ ಉದಾಹರಣೆಗಳೂ ಇರುತ್ತವೆ (ವ. ಸಂ. ೧೪೧೬, ೧೪೧೫; ೧೬೮೮, ೧೬೮೩)

ಇಲ್ಲಿಯ ಕೆಲವು ವಚನಗಳನ್ನು ಅರ್ಥೈಸುವುದು ತುಂಬ ಕಠಿಣ. ಇಂಥವುಗಳನ್ನು ಇದ್ದರೂಪದಲ್ಲಿಯೇ ಕೊಡಲಾಗಿದೆ. ಇಲ್ಲಿಯ ಕೆಲವು ವಚನಗಳಲ್ಲಿ ಸಂಸ್ಕೃತ ಶ್ಲೋಕಗಳು ಬರುತ್ತಿದ್ದು, ಇವುಗಳನ್ನು ಸಾಧ್ಯವಾದ ಮಟ್ಟಿಗೆ ಪರಿಷ್ಕರಿಸಲು ಪ್ರಯತ್ನಿಸಲಾಗಿದೆ. ಆದರೂ ಇವು ಸಂಪೂರ್ಣ ಶುದ್ಧವಾಗಿಲ್ಲವೆಂದು ನನ್ನ ಅನಿಸಿಕೆ. ಇವುಗಳನ್ನು ಸಹೃದಯ ವಿದ್ವಾಂಸರು ತಿದ್ದಿಕೊಳ್ಳುವರೆಂದು ಆಶಿಸಲಾಗಿದೆ.

ಇಲ್ಲಿಯ ಕೆಲವು ವಚನಗಳಲ್ಲಿ ಇದ್ದೂದಾಗಿ (೭೯), ಹಿಂದುಗಳವೃತ್ತ (೧೦೫೪), ಕರುಣಿಸೂದು (೧೦೮೯), ಮಾಡೂದು (೧೩೦೯), ಬಗುಳು (೧೩೧೯)—ಇಂಥ ರೂಪಗಳು ಬರುತ್ತವೆ. ಇವುಗಳನ್ನು ಹಾಗೆಯೇ ಇಟ್ಟುಕೊಳ್ಳಲಾಗಿದೆ.

ಈ ಸಂಪುಟದಲ್ಲಿ ಸಮಾವೇಶಗೊಂಡಿರುವ ಚೆನ್ನಬಸವಣ್ಣನವರ ಒಟ್ಟು ವಚನಗಳ ಸಂಖ್ಯೆ ೧೭೯೨. ಕರ್ನಾಟಕ ವಿಶ್ವವಿದ್ಯಾಲಯದ ಆವೃತ್ತಿಯಲ್ಲಿ ೧೫೦೯ ವಚನಗಳಿರುವುದನ್ನು ಗಮನಿಸಿದರೆ, ಈ ಸಂಪುಟದ ಮೂಲಕ ಸುಮಾರು ೨೮೩ ರಷ್ಟು ವಚನಗಳು ಹೊಸದಾಗಿ ಬೆಳಕು ಕಾಣುತ್ತಿರುವುದು ಸ್ಪಷ್ಟವಾಗುತ್ತದೆ.

ಪ್ರಸ್ತುತ ಸಂಪುಟದಲ್ಲಿ ಸೇರ್ಪಡೆಯಾಗಿರುವ ವಚನಗಳಿಗೆ ಆಕರ ಒದಗಿಸುವಲ್ಲಿ ನೆರವು ನೀಡಿದ ಡಾ. ಎಂ. ಎಂ. ಕಲಬುರ್ಗಿ, ಪ್ರೂಫ್ ತಿದ್ದುವಲ್ಲಿ ಸಹಕರಿಸಿದ ಶ್ರೀ ಬಸವರಾಜ ಹೂಗಾರ, ಕಠಿಣಪದಕೋಶ, ಒಪ್ಪೋಲೆ ಸಿದ್ಧಪಡಿಸುವಲ್ಲಿ ನೆರವಾದ ವಿದ್ಯಾರ್ಥಿಮಿತ್ರ ಚಂದ್ರಶೇಖರ ರೊಟ್ಟಿಗವಾಡ, ವಚನಗಳ ಅಕಾರಾದಿ ಸಿದ್ಧಪಡಿಸಿದ ಪ್ರೊ. ವ್ಹಿ. ಆರ್. ಸಂಗೊಂದಿಮಠ, ಸಂಗ್ರಹಿಸಿದ ವಚನಗಳನ್ನು ಕ್ರಮಗೊಳಿಸುವುದರಿಂದ ಮೊದಲುಗೊಂಡು ಪ್ರಸ್ತಾವನೆ ಹಾಗೂ ಅನುಬಂಧದಲ್ಲಿ ಸಮಾವೇಶವಾಗಿರುವ ಎಲ್ಲವನ್ನೂ ಕಣ್ಮುಟ್ಟಿ ನೋಡಿ, ಕೈಮುಟ್ಟಿ ತಿದ್ದಿ ಉಪಕರಿಸಿದ ಡಾ. ಬಿ. ಆರ್. ಹಿರೇಮಠ–ಇವರೆಲ್ಲರಿಗೂ ನನ್ನ ಹಾರ್ದಿಕ ಕೃತಜ್ಞತೆಗಳು.

ಈ ಸಂಪುಟವನ್ನು ಸಂಪಾದಿಸುವ ಅವಕಾಶ ಒದಗಿಸಿಕೊಟ್ಟ ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಿಗೆ, ಸೂಕ್ತ ಸಲಹೆ ನೀಡಿದ ಸಂಪಾದಕ ಮಂಡಳಿಯ ಸರ್ವಸದಸ್ಯರಿಗೆ ನನ್ನ ವಂದನೆಗಳು. ಸಂಪುಟದ ಅಸಲು ಪ್ರತಿಯನ್ನು ಚೆನ್ನಾಗಿ ಮುದ್ರಿಸಿದ ಗದುಗಿನ ತ್ವರಿತ ಮುದ್ರಣದ ಫ. ಶಿ. ಭಾಂಡಗೆ ಹಾಗೂ ಅವರ ಸಿಬ್ಬಂದಿಯವರಿಗೆ ಕೃತಜ್ಞತೆಗಳು.

—ಬಿ. ವ್ಹಿ. ಮಲ್ಲಾಪುರ



## ಪಿಂಡಸ್ಥಲ

೧

ಫಲದೊಳಗಣ ಮಧುರಗೋಪ್ಯದಂತಿದ್ದಿತ್ತು,
ಚಂದ್ರಕಾಂತದ ಉದಕದ ತೆರನಂತಿದ್ದಿತ್ತು,
ಮಯೂರನ ತತ್ತಿಯ ಚಿತ್ರದಂತಿದ್ದಿತ್ತು,
ಶಿಶುಕಂಡ ಕನಸಿನ ಪರಿಯಂತಿದ್ದಿತ್ತು,
ಕೂಡಲಚೆನ್ನಸಂಗಯ್ಯಾ [ನಿಮ್ಮ ನಿಲವು]
ಸದ್ಗುರುಚಿತ್ತದ ಪದದಂತಿದ್ದಿತ್ತು. ॥ ೧ ॥

## ಪಿಂಡಜ್ಞಾನಸ್ಥಲ

೨

ಒಂದೊಂದೂ ಇಲ್ಲದಂದು, ನಂದಿವಾಹನರಿಲ್ಲದಂದು,
ಹಿಂದೆ ಹದಿನಾಲ್ಕು ಭುವನಂಗಳಿಲ್ಲದಂದು
ಅಂದಾರೂ ಲಿಂಗವ ಕಂಡವರೊಳರೆ?
ಅಂದಾರೂ ಲಿಂಗವ ಕಂಡು ಹೇಳಿದವರೊಳರೆ?
ನಿರಂಧ ತಮಂಧವಿಲ್ಲದಂದು
ಕೂಡಲಚೆನ್ನಸಂಗನಲ್ಲಿ ಬಸವಣ್ಣನೊಬ್ಬನೆ ಉದಯವಾದ! || ೨ ||

೩

ಬಯಲು ಮೂರ್ತಿಯಾಗಿ ನಿಂದನೊಬ್ಬ ಶರಣ.
ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ,
ಆತನ ಶಾಂತಿ–ಸೈರಣೆಯಿಂದ ಹುಟ್ಟಿದಾತ ವಿಷ್ಣು,
ಆತನ ಕೋಪಕ್ರೋಧದಿಂದ ಹುಟ್ಟಿದಾತ ರುದ್ರ,
ಈ ಮೂವರ ಪೀಠವಂತಿರಲಿ,
ಆ ಶರಣನನರಿದು ಶರಣೆನುತ್ತಿದ್ದೆನು, ಕೂಡಲಚೆನ್ನಸಂಗಮದೇವಾ. || ೩ ||

೪

ಕಳಾಧರ ಧರೆ ವಾರಿಧಿಸಹಿತ ಆರೂ ಇಲ್ಲದಂದು,
ಪ್ರಮಥನೊಬ್ಬ ನಿದ್ದನೊಂದನಂತ ಕಾಲ.
ಧರೆ ಅಂಬರ ವಾರಿಧಿಸಹಿತ ಆರೂ ಇಲ್ಲದಂದು
ನಿರವಯ ನಿರ್ಮಾಯನಾಗಿದ್ದನೊಂದು ಕೋಟ್ಯನುಕೋಟಿ ವರುಷ.
ಅಲ್ಲಿ ಅನಾಗತವುಂಟು.
(ಮನವು ಮಹವನಕ್ಕಾಡಿ ತತ್ತಲೆಯಾಗಿ)
ಮತ್ತಂತಲ್ಲಿಯೆ ನಿರಾಳವ ಬೆರಸಿ ಬಯಲು ಬೆಸಲಾಯಿತ್ತು.
ನರರು ಸುರರು ಮೊದಲಾದ ಚೌರಾಸಿಲಕ್ಷ ಜೀವರಾಸಿಗಳುದಯಿಸಿದವಯ್ಯಾ,
ಕೂಡಲಚೆನ್ನಸಂಗಯ್ಯಾ ನಮ್ಮ ಬಸವಣ್ಣ ನೆನೆದಡೆ! || ೪ ||

೫

ಆದಿ ಬಸವಣ್ಣ, ಅನಾದಿಲಿಂಗವೆಂದೆಂಬರು,
ಹುಸಿ ಹುಸಿ ಈ ನುಡಿಯ ಕೇಳಲಾಗದು.
ಆದಿ ಲಿಂಗ, ಅನಾದಿ ಬಸವಣ್ಣನು!
ಲಿಂಗವು ಬಸವಣ್ಣನ ಉದರದಲ್ಲಿ ಹುಟ್ಟಿತ್ತು,
ಜಂಗಮವು ಬಸವಣ್ಣನ ಉದರದಲ್ಲಿ ಹುಟ್ಟಿತ್ತು,
ಪ್ರಸಾದವು ಬಸವಣ್ಣನನುಕರಿಸಲಾಯಿತ್ತು.
ಇಂತೀ ತ್ರಿವಿಧಕ್ಕೆ ಬಸವಣ್ಣನೆ ಕಾರಣನೆಂದರಿದೆನಯ್ಯಾ
ಕೂಡಲಚೆನ್ನಸಂಗಮದೇವಾ. ॥ ೫ ॥

೬

ಅಂಧಕಾಸುರನ ಕೊಲುವಲ್ಲಿ ನೀಲಲೋಹಿತನೆಂಬ ಗಣೇಶ್ವರ,
ತ್ರಿಪುರವ ದಹನವ ಮಾಡುವಲ್ಲಿ ಸ್ಕಂದನೆಂಬ ಗಣೇಶ್ವರ,
ಗಜಾಸುರನ ಕೊಂದು ಚರ್ಮವ ಹೊದೆವಲ್ಲಿ ಉಗ್ರನೆಂಬ ಗಣೇಶ್ವರ,
ಬ್ರಹ್ಮಕಪಾಲವಿಡಿದು ವಿಷ್ಣು ಕಂಕಾಳವನಿಕ್ಕಿದಲ್ಲಿ, ನೀಲಕಂಠನೆಂಬ ಗಣೇಶ್ವರ,
ಪ್ರಾಣಲಿಂಗಸಂಗದಲ್ಲಿ ವೃಷಭನೆಂಬ ಗಣೇಶ್ವರ,
ಜಂಗಮದ ಪೂರ್ವಾಶ್ರಯವ ಕಳೆದು ಪುನರ್ಜಾತನೆನಿಸಿ
ಪ್ರಾಣಲಿಂಗವಾದ ಬಳಿಕ ಕೂಡಲಚೆನ್ನಸಂಗನಲ್ಲಿ
ಬಸವನೆಂಬ ಗಣೇಶ್ವರ. ॥ ೬ ॥

೭

ಪ್ರಾಣಲಿಂಗದ ಪೂರ್ವಾಶ್ರಯವ ಕಳೆಯಲೆಂದು ಲಿಂಗಪ್ರಾಣಿಯಾದ,
ಲಾಂಛನದ ಪೂರ್ವಾಶ್ರಯವ ಕಳೆಯಲೆಂದು ಜಂಗಮಪ್ರೇಮಿಯಾದ,
ಪ್ರಸಾದದ ಪೂರ್ವಾಶ್ರಯವ ಕಳೆಯಲೆಂದು ಪ್ರಸಾದಿಯಾದ,
[ಇಂತೀ] ತ್ರಿವಿಧದ ಪೂರ್ವಾಶ್ರಯವ ಕಳೆಯಲೆಂದು ಮಹಾಗುರುವಾಗಿ
ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣನಾದ. ॥ ೭ ॥

೮

ಲಿಂಗದ ಪೂರ್ವಾಶ್ರಯವ ಕಳೆದು,
ಇದು ಪ್ರಾಣಲಿಂಗವೆಂದು ತೋರಬಂದನಯ್ಯಾ ಬಸವಣ್ಣನು!
ಲಾಂಛನದ ಪೂರ್ವಾಶ್ರಯವ ಕಳೆದು,
ಇದು ಲಿಂಗಜಂಗಮ (ಜಂಗಮಲಿಂಗ?) ವೆಂದು ತೋರಬಂದನಯ್ಯಾ ಬಸವಣ್ಣನು!

ಪ್ರಸಾದದ ಪೂರ್ವಾಶ್ರಯವ ಕಳೆದು,
ಇದು, ಪ್ರಸಾದವೆಂದು ಸಯವ ಮಾಡಿ ತೋರಬಂದನಯ್ಯಾ ಬಸವಣ್ಣನು!
[ಇಂತು] ಲಿಂಗ ಜಂಗಮದ ಪ್ರಸಾದದ ಪೂರ್ವಾಶ್ರಯವ ಕಳೆಯಲೆಂದು
ಮರ್ತ್ಯಕ್ಕೆ ಜನಿಸಿದನಯ್ಯಾ ಕೂಡಲಚೆನ್ನಸಂಗನಲ್ಲಿ ಬಸವಣ್ಣನು. ॥ ೮ ॥

೯

ನಿರಾಲಂಬದಲ್ಲಿ ನಿಜಲಿಂಗ ನಾ(ತಾ?)ನೆಂಬ ಮಹದಹಂಕಾರವೆ
ಸಂಸಾರಿಯಾಗಿ ಬಂದು ಬಳಲುವ ಭ್ರಾಂತು ಇನ್ನಾರಿಗೆಯೂ ತಿಳಿಯದಯ್ಯಾ.
ಇನ್ನಾರು ಪರಿಹರಿಸುವರಯ್ಯಾ ಬಸವಣ್ಣನಲ್ಲದೆ?
ಇದು ಕಾರಣ, ಬಸವಣ್ಣನ ಶ್ರೀಪಾದವ ತೋರಿ ಬದುಕಿಸಾ
ಕೂಡಲಚೆನ್ನಸಂಗಮದೇವಾ. ॥ ೯ ॥

೧೦

ಮೀನಜ ರೋಮಜ ಋಷಿಯರು ಮೊದಲಾದ
ಅನಂತಕೋಟಿ ಬ್ರಹ್ಮರಿಲ್ಲದಂದು,
ಅಲ್ಲಿಂದತ್ತತ್ತ ಏಕೋಲಿಂಗನೊಬ್ಬನೆ ಶರಣ.
ಗುರುವೆ ಪರಮಗುರುವೆ ನೀನೆ ಗತಿಯಯ್ಯಾ.
ಆದಿಕುಳಕ್ಕೆ ಮೂಲಿಗನಾಗಿ ಸುಳುಹ ತೋರಿ ಪಾವನವ ಮಾಡಬಂದೆ
ಬಹುಮುಖ ಜೀವಿಗಳಿಗೆ ಬಹುಮುಖ ಪ್ರಸಾದವ ತೋರಿದೆಯಯ್ಯಾ
ಭುವನವ ಸಲಹಲೆಂದು ಆದಿಯ ಲಿಂಗವ
ಅನಾದಿಯ ಶರಣನ ಕೈಯಲಿ ಕೊಟ್ಟರಿ.
ಆ ಲಿಂಗವನು ನೀ ಪುಟ್ಟಿಸಿದ ಘಟಕ್ಕೆ ಕಾರುಣ್ಯವ ಮಾಡಿ ಸಲಹಯ್ಯಾ
ಕೂಡಲಚೆನ್ನಸಂಗಮದೇವಾ. ॥ ೧೦ ॥

೧೧

ವಾಯುದ ಮಾಯುದಲ್ಲಿ ಹುಟ್ಟಿದ ಕಷ್ಟದೇಹವನೆ ಬಿಟ್ಟು
ನಿಷ್ಠೆಯಿಂದ ನಿಮ್ಮ ಶ್ರೀಚರಣಕ್ಕೆರಗಿದೆನು.
ಪ್ರಸಾದವ ಕಾರುಣ್ಯವ ಮಾಡು ಗುರುವೆ
ಕೂಡಲಚೆನ್ನಸಂಗಮದೇವಾ. ॥ ೧೧ ॥

೧೨

ಅಂಜದಿರಿ ಅಂಜದಿರಿ ಅನಿಮಿಷನಂತೆ ಬೇಡುವವ ನಾನಲ್ಲ.
ನಿಮಗಾದಿಯು ಶಿಶು ನಾನೆ ಅಯ್ಯಾ. ಅದೆಂತೆಂದರೆ:
ಅಂಜನೆಗೆ ಜಲಗರ ಬೆಳೆಯಿತ್ತೆಂದು ಅಂಜಿ ಹೇಮರಸವ ಕೂಡಿದಲ್ಲಿ
ಒಳಗಿದ್ದ ಕಪಿ ಶೃಂಗಾರವಾಗನೆ ?
ಕೆಡುವುದೆ ಶಿವಪಿಂಡವು? ಮರೆವುದೆ ಶಿವಜ್ಞಾನವು?
ಹಿಂದೆ ಏಳುನೂರು ವರುಷ ಮಂಡೋದರಿಯ ಬಸುರಲ್ಲಿದ್ದು
ಉದಯಂಗೆಯ್ಯನೆ ಇಂದ್ರಜಿತು?
ನೀವು ಹೊಟ್ಟೆಗೆ ವಿಭೂತಿಯ ಪಟ್ಟವ ಕಟ್ಟಿದಂದೆ
ಅನುಗ್ರಹವಾಯಿತ್ತು. ಕೂಡಲಚೆನ್ನಸಂಗಮದೇವಾ
ನಿಮ್ಮ ತೊತ್ತಿನ ತೊತ್ತು ನಾನು ಚೆನ್ನಬಸವಣ್ಣನು.

೧೩

ಹಸ್ತಮಸ್ತಕಸಂಯೋಗವಾಗದ ಮುನ್ನ ಯೌವನ ಮಥನವಾಯಿತ್ತು
ಆವುದ ಅಂತರಂಗವೆಂಬೆನು, ಆವುದ ಬಹಿರಂಗವೆಂಬೆನು,
ಆವುದ ಆತ್ಮಸಂಗವೆಂಬೆನು?
ಹಸ್ತಮಸ್ತಕಸಂಯೋಗವೆ ಬಹಿರಂಗ, ಮನಸಂಯೋಗವೆ ಅಂತರಂಗ.
ಕೂಡಲಚೆನ್ನಸಂಗಯ್ಯನಲ್ಲಿ ಆತ್ಮಸಂಗವಾಯಿತ್ತು. ॥ ೧೩

೧೪

ಬಸವಣ್ಣಾ ಓಂಕಾರದಿಂದತ್ತತ್ತ ನೀನೆ:
ಬಸವಣ್ಣಾ ನಾದಬಿಂದುಕಳೆಗಳಿಂದತ್ತತ್ತ ನೀನೆ,
ಬಸವಣ್ಣಾ ಪ್ರಥಮಾಚಾರ್ಯ ನೀನೆ,
ಬಸವಣ್ಣಾ ಲಿಂಗಾಚಾರ್ಯ ನೀನೆ,
ಬಸವಣ್ಣಾ ಜಂಗಮಾಚಾರ್ಯ ನೀನೆ,
ಬಸವಣ್ಣಾ ಪ್ರಸಾದಾಚಾರ್ಯ ನೀನೆ,
ಬಸವಣ್ಣಾ ಎನಗೆ ಸರ್ವಾಚಾರ್ಯ ನೀನೆ,
ನೀನೇ ಗತಿಮತಿಯಾಗಿ ಎನ್ನನುಳುಹಿದ ಕಾರಣ
ಕೂಡಲಚೆನ್ನಸಂಗಮದೇವಾ
ಆವ ವರ್ಣವಿಲ್ಲದಂದು 'ಓಂ ನಮಃ ಶಿವಾಯ' ಎನುತಿರ್ದೆನು. ॥ ೧೪ ॥

೧೫

ನಮಃ ಶಿವಾಯ ಲಿಂಗವು, ಓಂ ನಮಃ ಶಿವಾಯ ಬಸವಣ್ಣನು.
ನೀನೆ ಎನ್ನ ಮನಸ್ಥಳದಲ್ಲಿ ನಿಂದು ಬೆಳಗಿ ತೋರಿದೆಯಾಗಿ
ಇದು ಕಾರಣ, ಕೂಡಲಚೆನ್ನಸಂಗಯ್ಯಾ
ಆದಿಯಾಧಾರವಿಲ್ಲದಂದು
'ಓಂ ನಮಃ ಶಿವಾಯ' ಎನುತಿರ್ದೆನು. ॥ ೧೫ ॥

೧೬

ಬಿತ್ತಿದ ಬೀಜದ ಫಲವು ವಿಪರೀತ ನೋಡಾ!
ತನ್ನಲ್ಲಿ ತಾನೆಯಾಗಿ ಆಗಮವನೇರಿಯದು,
ತಾನೆ ಸ್ವಯಂಕೃತ ಸಹಜ.
ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣನು. ॥ ೧೬ ॥

೧೭

ಆನು ಶುದ್ಧಧವಳಿತನು
ಎನಗೆ ಅನಾದಿ ಬಂದು ಹೊದ್ದಿದ ಕಾರಣವೇನಯ್ಯಾ?
ಜಲವ ಮೊಗೆಯ ಬಂದೆನೇಕಯ್ಯಾ?
ಗಿಡುವ ಹರಿಯ ಬಂದೆನೇಕಯ್ಯಾ?
ಎಲ್ಲರ ನಡುವೆ ಕುಳ್ಳಿರ್ದು ಗೀತವ ಹಾಡಬಂದೆನೇಕಯ್ಯಾ?
ಬಸವಣ್ಣ ಚೆನ್ನಬಸವಣ್ಣಯೆಂಬೆರಡು ಶಬ್ದವೇಕಾದವು ಹೇಳಾ,
ಕೂಡಲಚೆನ್ನಸಂಗಮದೇವಾ? ॥ ೧೭ ॥

## ಸಂಸಾರಹೇಯಸ್ಥಲ

೧೮

ಅಸ್ತಿ ಭಾತಿಯೆಂಬ ಎನ್ನ ಸತ್ಯದಲ್ಲಿ,
ನಾಮ ರೂಪೆಂಬ ಹುಸಿಯೆಂತು ಜನಿಸಿತೆಂದರಿಯೆನಯ್ಯಾ!
ಇಲ್ಲದ ಹೆಸರುಳ್ಳ ಚಿತ್ತಾರದಂತೆ, ದೇಹ ನಾಮವೀತೆರನೆಂದರಿಯದೆ

ತೊಳಲಿ ಬಳಲುತ್ತಿದ್ದೆನಯ್ಯಾ, ಕೂಡಲಚೆನ್ನಸಂಗಯ್ಯಾ,
ಸಂಸಾರಬಂಧನಯೆನಗಿದೇ ಕಂಡಯ್ಯಾ. ॥ ೧೮ ॥

೧೯

ಹೆಗ್ಗಣವನಿಕ್ಕಿ ನೆಲಗಟ್ಟ ಕಟ್ಟಿದಂತೆ,
ಎನ್ನ ಕಾಯಗುಣ ಅಹಂಕಾರ ಪ್ರಬೋಧೆಗಳಯ್ಯಾ.
ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳನಿಕ್ಕಿ
ಎನ್ನ ಮಾಡಿದಿರಿ ಎನ್ನ ಬಾಧಿಸಲೆಂದು.
ಲಿಂಗಯ್ಯ ತಂದೆ ಆದಿವ್ಯಾಧಿಗಳೆಲ್ಲವ ಕಳೆದು
ನಿರ್ವಾಣವಪ್ಪ ಪಥವ ಕರುಣಿಸಯ್ಯಾ,
ಕೂಡಲಚೆನ್ನಸಂಗಮದೇವಾ. ॥ ೧೯ ॥

## ಗುರುಕರುಣ ಸ್ಥಲ

೨೦

ಶ್ರೀಗುರುಲಿಂಗವು ಶಿಷ್ಯನ ಬರವ ಕಂಡು,
ಬಂದು ಪಾದದ ಮೇಲೆ ಬೀಳುವಾತ ಗುರುಲಿಂಗ,
ಮಂಡೆಯ ಹಿಡಿದೆತ್ತುವಾತ ಶಿಷ್ಯ.
ಶ್ರೀಗುರುಲಿಂಗವು ಶಿಷ್ಯನ ಸಿಂಹಾಸನದಲ್ಲಿ ಕುಳ್ಳಿರಿಸಿ
ಪಾದಾರ್ಚನೆಯ ಮಾಡುವಾತ ಗುರುಲಿಂಗ,
ಮೂಡಿಸಿಕೊಂಬಾತ ಶಿಷ್ಯ.
ಶ್ರೀಗುರುಲಿಂಗವು ಶಿಷ್ಯನಾರೋಗಣೆಯ ಮಾಡುತ್ತಿದ್ದಾನೆಂದು ಬಂದು,
ಪ್ರಸಾದವ ಕೊಂಬಾತ ಗುರುಲಿಂಗ, ಇಕ್ಕುವಾತ ಶಿಷ್ಯ.
ಇದುಕಾರಣ ದ್ವಿವಿಧ ಸಂಬಂಧ ಸನುಮತವಾಯಿತ್ತು,
ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ. ॥ ೨೦ ॥

೨೧

ಕೃತಯುಗ ತ್ರೇತಾಯುಗ ದ್ವಾಪರ ಕಲಿಯುಗವಿಲ್ಲದಲ್ಲಿಂದತ್ತ ನೋಡಾ,
ಧರೆಯು ಬ್ರಹ್ಮಾಂಡವು ಮೂರುತಿಗೊಳ್ಳದಲ್ಲಿಂದತ್ತ ನೋಡಾ!

ಘನಪ್ರಸಾದ ಸಾಧಿಸಿ ತಂದು ಎನ್ನ ಕೈಯಲಿ ನಿಕ್ಷೇಪ[ವಾಗಿ] ಕೊಟ್ಟನಯ್ಯಾ
ಕೂಡಲಚೆನ್ನಸಂಗಾ ನಿಮ್ಮ ಶರಣನು. || ೨೧ ||

೨೨

ಪರ ತನ್ನ ರೂಪ ತೋರಬೇಕೆಂದು, ಗುರುರೂಪಾಗಿ ಬಂದು
ಮನಸ್ಥಲಕ್ಕೆ ಮಂತ್ರವಾದ, ತನುಸ್ಥಲಕ್ಕೆ ಪ್ರಸಾದವಾದ, ಕರಸ್ಥಲಕ್ಕೆ ಲಿಂಗವಾದ.
ಇಂತೀ ತ್ರಿವಿಧದಲ್ಲಿ ತ್ರಿವಿಧ ಸಾಹಿತ್ಯವಾದನಯ್ಯಾ
ಕೂಡಲಚೆನ್ನಸಂಗನ[ಲ್ಲಿ] ಬಸವಣ್ಣನು. || ೨೨ ||

೨೩

ಭಾವದಲ್ಲಿ ಗಮನ, ಪ್ರಾಣದಲ್ಲಿ ಲೋಭ,
ಜಿಹ್ವೆಯಲ್ಲಿ ರುಚಿ, ಶ್ರೋತ್ರದಲ್ಲಿ ಕುಶಬ್ದ,
ನಾಸಿಕದಲ್ಲಿ ದುರ್ಗಂಧ, ನೋಟದಲ್ಲಿ ಕಾಮ, ಶಬ್ದದಲ್ಲಿ ವಿರೋಧ-
ಇಂಥ ಭವಿಯ ಕಳೆದು ಭಕ್ತನ ಮಾಡಿದ ಪರಿಯೆಂತೆಂದರೆ:
ಕಾಮನ ಸುಟ್ಟ ವಿಭೂತಿಯೂ ಅಲ್ಲ, ಜವನ ಸುಟ್ಟ ವಿಭೂತಿಯೂ ಅಲ್ಲ,
ತ್ರಿಪುರವ ಸುಟ್ಟ ವಿಭೂತಿಯೂ ಅಲ್ಲ,
ಆ...ಧಾರ ವಿಲ್ಲದಂದಿನ [ಚಿದ್] ವಿಭೂತಿಯ ತಂದು ಪಟ್ಟವ ಕಟ್ಟಿದರೆ,
ಭಾವಕ್ಕೆ ಗುರುವಾಯಿತ್ತು, ಪ್ರಾಣಕ್ಕೆ ಲಿಂಗವಾಯಿತ್ತು
ಜಿಹ್ವೆಗೆ ಪ್ರಸಾದವಾಯಿತ್ತು, ಶ್ರೋತ್ರಕ್ಕೆ ಶಿವಮಂತ್ರವಾಯಿತ್ತು,
ನಾಸಿಕಕ್ಕೆ ಸುಗಂಧವಾಯಿತ್ತು ನೋಟಕ್ಕೆ ಜಂಗಮವಾಯಿತ್ತು,
ಶಬ್ದಕ್ಕೆ ಸಂಭಾಷಣೆಯಾಯಿತ್ತು-
ಇಂತೀ ಪೂರ್ವಗುಣಂಗಳೆಲ್ಲವ ಕಳೆದು ಸ್ವಸ್ಥಾನವಾಯಿತ್ತಾಗಿ
ಕೂಡಲಚೆನ್ನಸಂಗಾ ನಿಮ್ಮ ಶರಣ ಸರ್ವಾಂಗಲಿಂಗಿಯಾದ. || ೨೩ ||

೨೪

ಮಾಂಸಪಿಂಡವೆಂದೆನಿಸವೆ ಮಂತ್ರಪಿಂಡವೆಂದೆನಿಸಿದ ಬಸವಣ್ಣ,
ವಾಯುಪ್ರಾಣಿಯೆಂದೆನಿಸವೆ ಲಿಂಗಪ್ರಾಣಿಯೆಂದೆನಿಸಿದ ಬಸವಣ್ಣ,
ಜಗಭರಿತನೆಂಬ ಶಬ್ದಕ್ಕೆ ಅಂಗವಿಸವೆ, ಶರಣಭರಿತ ಲಿಂಗವೆನಿಸಿದ
ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣನು. || ೨೪ ||

೨೫

ಚರಣವಿಡಿದಂಗೆ ಕರುಣಿ ಕಂದೆರವೆಯು ಮಾಡಬೇಕೆಂದು,
ಮರಹಿಂದ ಬಂದ ಕಾಯದ ಕರ್ಮವ ಕಳೆದು
ಗುರುಲಿಂಗವು ಕರುಣಿಸಿ
ಕಂದೆರವೆಯು ಮಾಡಿದ ಪ್ರಾಣಲಿಂಗ ಸಂಬಂಧವೆಂತಿದ್ದುದೆಂದರೆ:
ಆಲಿ ನುಂಗಿದ ನೋಟದಂತೆ, ಬಯಲು ನುಂಗಿದ ಬ್ರಹ್ಮಾಂಡದಂತೆ,
ಮುತ್ತು ನುಂಗಿದ ಉದಕದಂತೆ ಪುಷ್ಪನುಂಗಿದ ಪರಿಮಳದಂತೆ. ಇಪ್ಪ
ಮಹಾನುಭಾವದ ನುಡಿಗೆ ಗುರಿಯಾದೆನಾಗಿ
ಎನ್ನ ಒಡಲ ಪರ್ಯಾಯ ಕೆಟ್ಟಿತ್ತಯ್ಯಾ, ಕೂಡಲಚೆನ್ನಸಂಗಮದೇವಾ || ೨೫ ||

೨೬

ಪ್ರಥಮ ಗುರು ಕಾಣಲಿಕೆಯಾಗಿ ಕರ್ಮಂಗಳು ಬೆದರಿ ಬೆಚ್ಚಿದವು:
ಹುಸಿಯಾಮಿಷ ತಾಮಸ ಕುಟಿಲಂಗಳು
ತವಗೆ ನಿಂದಿರೆ ಠಾವಿಲ್ಲೆನುತಿದ್ದವು.
ಸದ್ಗುರು ಕಾರುಣ್ಯ ಹಸ್ತಮಸ್ತಕ ಸಂಯೋಗವಲ್ಲಿ
ಪೂರ್ವಗುಣವಳಿದು ಪುನರ್ಜಾತನಾಗಿ,
ಕರಣಾದಿಗಳ ಕಳೆದು ಶಿವಲಿಂಗದಲ್ಲಿ ಉಳಿದು
ಅನುಪಮ ಸುಖಸಾರಾಯ ಶರಣನೆನಿಸಿ[ದ].
ಇದನರಿದು ಲಿಂಗದಲ್ಲಿ ಜಂಗಮದಲ್ಲಿ ಕರುಣವ ಪಡೆದು
ಭವಿಯನೊಲ್ಲೆನೆಂದು ಬೇರೆ ನಿಂದ ಕಾರಣ
ಕೂಡಲಚೆನ್ನಸಂಗಮದೇವಾ ನಿಮ್ಮ ಶರಣ ಭವಕಲ್ಪಿತವ ಕಳೆದ. || ೨೬ ||

೨೭

ಒಮ್ಮೆಯೂ ಶ್ರೀಗುರುವಿನ ಚರಣವ ನೆನೆಯಲೊಡನೆ
ಭವಬಂಧನ ಬಿಡುವುದು.
ಗುರುವೇ ಶರಣು ಗುರುಲಿಂಗವೇ ಶರಣು
ಹರಿಬ್ರಹ್ಮಾದಿಗಳಿಗಗೋಚರ ಕೂಡಲಚೆನ್ನಸಂಗನ
ತೋರಿದ ಗುರುವೇ ಶರಣು. || ೨೭ ||

# ಭಕ್ತನ ಜ್ಞಾನಿಸ್ಥಲ

೨೮

‘ಗುರು ಲಿಂಗ ಒಂದೆ’ ಎಂಬ,
ಸಂತೆಯ ಸುದ್ದಿಯ ಬಾಲಭಾಷೆಯ ಕೇಳಲಾಗದು.
ಲಿಂಗಸಹಿತ ಪ್ರಸಾದ ಭೋಗ, ಲಿಂಗಸಹಿತ ನಿದ್ರೆ.
ಗುರು ಲಿಂಗ ಒಂದೆಯೆಂದು ಕಂಡರೆ
ಅಘೋರನರಕ ಕೂಡಲಚೆನ್ನಸಂಗಮದೇವಾ. || ೨೮ ||

೨೯

ಗುರುಶಿಷ್ಯ ಸಂಬಂಧವನು ಏನೆಂದುಪಮಿಸುವೆನಯ್ಯ!
ಒಂದಾಗಿ ಹೋಗಲುಬಾರದು, ಅವರಿದ್ದೂರಲಿರಲಾಗದು.
ಗಣತಿಂಥಿಣಿಯಲ್ಲಿ ಕುಳ್ಳಿರಲಾಗದು,
ಅವರ ಸಪಜ್ತಿಯಲ್ಲಿ ಲಿಂಗಾರ್ಚನೆಯ ಮಾಡಲಾಗದು,
ಅವರಂಥವರಿಂಥವರೆಂದು ಕನಸಿನಲ್ಲಿ ಮನಸಿನಲ್ಲಿ ನೆನೆವಡೆ
ಅಘೋರನರಕ ಕೂಡಲಚೆನ್ನಸಂಗಯ್ಯಾ. || ೨೯ ||

೩೦

ಗುರುಲಿಂಗದಲ್ಲಿ ಇಲ್ಲದ ಒಲವು ಪರದೈವದಲಾದೂದೆಂಬಿರಿ,
ಶರಣು ಶರಣೆನಲರಿಯದೆ ಬರುದೊರೆವೋದಿರಲ್ಲ.
ಜನನ ಮರಣರಹಿತ ಕೂಡಲಚೆನ್ನಸಂಗನ ಶರಣರಿಗೆ
ಶರಣೆನ್ನದೆ ಬರುದೊರೆವೋದಿರಲ್ಲ. || ೩೦ ||

೩೧

ಆಡಿನ ಕೊರಳಲ್ಲಿ ಮೊಲೆಯಿದ್ದರೇನು ಅಮೃತವುಂಟೆ ?
ಭಕ್ತನಾದಲ್ಲಿ ಫಲವೇನು ಶಿವಪಥವನರಿಯದನ್ನಕ್ಕ ?
ದಕ್ಕಾಲಿ ಬಿದ್ದ ಕಣ್ಣಿನಂತೆ ಜಂಗಮದ ಮೇಲೆ ಹರುಷವಿಲ್ಲದ ನೋಟ.
ಕೂಡಲಚೆನ್ನಸಂಗನ ಶರಣನ ಬೆರಸದ ಹರುಷ
ಅರಸಿಯ ನೋಟದಂತೆ. || ೩೧ ||

೩೨

ಸುರಾಭಾಂಡಕ್ಕೆ ಹೊರಗೆ ವಿಭೂತಿಯ ಪೂಸಿದಡೊಳಗು
ಶುದ್ಧವಾಗಬಲ್ಲುದೆ?
ಗುರು ಕಾರುಣ್ಯ ನೆಲೆಗೊಂಡು, ಗುರುಲಿಂಗಜಂಗಮ
ತ್ರಿವಿಧವೊಂದೆಂದು ಕಾಣದನ್ನಕ್ಕ ಕೂಡಲಚೆನ್ನಸಂಗಮದೇವರಲ್ಲಿ
ಸದಾಚಾರವೆಲ್ಲರಿಗೆ ಸೂರೆಯೆ? ॥ ೩೨ ॥

೩೩

ಪಸಿವಿನ ಹಂಗಿಗೆ ಭವಿಪಾಕಕ್ಕಿಚ್ಛೆಯ ಮಾಡುವರು.
ಮಥನದ ಹಂಗಿಗೆ ಭವಿಯ ಸಂಗಕ್ಕಿಚ್ಛೆಯ ಮಾಡುವರು.
ಶ್ರೋತ್ರ ನೇತ್ರದ ಸುಖವ ಭುಂಜಿಸುವನ್ನಕ್ಕ
ಭಕ್ತನೆಂತೆಂಬೆ? ಲಿಂಗೈಕ್ಯನೆಂತೆಂಬೆ?
ಕೂಡಲಚೆನ್ನಸಂಗಯ್ಯಾ,
ಅವರು ಸಮಯಾಚಾರಕ್ಕೆ ದೂರ ನೋಡಯ್ಯಾ. ॥ ೩೩ ॥

೩೪

ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ
ಭವಿಯೊಡನೆ ಸಂಗವು ಭಂಗವೆಂದರಿಯರು.
ಭವಿಯೊಡನೆ ಸಂಗವ ಮಾಡುವರು
ಕೂಡಲಚೆನ್ನಸಂಗಯ್ಯ ಅವರತ್ತಲೂ ಅಲ್ಲ ಇತ್ತಲೂ ಅಲ್ಲ. ॥ ೩೪ ॥

೩೫

[ಅ]ಂಗ ಭವಿಗೆ ಆಚಾರನಾಸ್ತಿ, ಲಿಂಗ ಭವಿಗೆ ಜಂಗಮನಾಸ್ತಿ,
ಪ್ರಾಣಭವಿಗೆ ಪ್ರಸಾದನಾಸ್ತಿ.
ಈ ತ್ರಿವಿಧ ನಾಸ್ತಿಗೆ ಇಹಪರವಿಲ್ಲಯ್ಯಾ,
ಕೂಡಲಚೆನ್ನಸಂಗಯ್ಯ. ॥ ೩೫ ॥

೩೬

ಭಕ್ತಿವಿಶೇಷವಳವಡದಯ್ಯಾ! ವಿಷದ ಕೊಡನುವ ತುಡುಕಲೇಬಾರದು.
ಅಂಗಕ್ಕೆ ಹಿತವಲ್ಲ, ಸಿಂಗಿ ನೋಡಯ್ಯ ವಿಷ.
ಮಾಯಾವಿಚಿತ್ರ ಕೂಡಲಸಂಗಯ್ಯನಲ್ಲಿ
ಸದಾಚಾರ ಸಂಬಂಧವು. ॥ ೩೬ ॥

೩೭

ಅರಿವರತು ಮರಹು ದಿಟ (ನಷ್ಟ?)ವಾದವರನೇನೆಂಬೆ?
ಅರಿವನರಿಯದೆ ಮರೆವ ನೆರೆ ಸಂಸಾರಿಗಳನೇನೆಂಬೆ?
[ಕ್ರಿಯಾಕರ್ಮ ಸೂತಕರಲ್ಲದೆ ಉಭಯಕರ್ಮರಹಿತರನೇನೆಂಬೆ?]
ಅಂಗವಿಕಾರದ ಪಂಗಿನೊಳಗಿದ್ದು
ಕೂಡಲಚೆನ್ನಸಂಗಾ ಎಂಬವರನೇನೆಂಬೆ? || ೩೭ ||

೩೮

ಮಡಿಲಲ್ಲಿ ಸುತ್ತಿದ ಹಾವಿನಂತೆ ಮಡಿಲಲ್ಲಿ ಕಟ್ಟಿದರೇನು?
ಕೊರಳಲ್ಲಿ ಸುತ್ತಿದ ಹಾವಿನಂತೆ ಕೊರಳಲ್ಲಿ ಕಟ್ಟಿದರೇನು?
ಕಳವು ಹಾದರ ಭವಿಯ ಸಂಗ ಅನ್ಯದೈವವ ಬಿಡದನ್ನಕ್ಕ
ಲಿಂಗಭಕ್ತನೆನಿಸಲು ಬಾರದಯ್ಯ.
ಅನಾಚಾರದಿಂ ನರಕ, ಆಚಾರದಿಂ ಸ್ವರ್ಗ.
ಕೂಡಲಚೆನ್ನಸಂಗಯ್ಯನೊಲ್ಲ ಭೂಮಿಭಾರಕರ. || ೩೮ ||

೩೯

ಕಬ್ಬುನದ ಸೋಣಗನ ತಂದು ಪರುಷವ ಮುಟ್ಟಿಸಲು.
ಸುವರ್ಣದ ಸೋಣಗನಪ್ಪುದು, ಪರುಷವಾಗದು ನೋಡಾ.
ಲೋಕದ ಮಾನವನ ತಂದು ಭಕ್ತನ ಮಾಡಿದರೆ
ವೇಷಲಾಂಛನವಹುದು, ಭಕ್ತನಾಗ ನೋಡಾ.
"ಗುರುಲಿಂಗಂ ಚರಲಿಂಗಂ ಭಾವಲಿಂಗಂ ಪ್ರಸಾದಕಂ|
ಚತುರ್ವಿಧಾತ್ಮಕ ಜ್ಞಾನಂ ಲಿಂಗಭಕ್ತಸ್ಯ ಲಕ್ಷಣಂ"
ಇದು ಕಾರಣ ಕೂಡಲಚೆನ್ನಸಂಗಯ್ಯಾ
ಮಜ್ಜನಕ್ಕೆರೆವ ಭವಿಗಳನೆಂತು ಭಕ್ತರೆಂಬೆ! || ೩೯ ||

೪೦

ಸಂಶಯವುಳ್ಳನ್ನಕ್ಕ ಸಂಸಾರಿಯೇ ಅಯ್ಯಾ.
ಲಿಂಗಭಕ್ತನಲ್ಲ, ಜಂಗಮ ಪ್ರೇಮಿಯಲ್ಲ, ಪ್ರಸಾದಿಯಲ್ಲ.
ಕೂಡಲಚೆನ್ನಸಂಗಯ್ಯನಲ್ಲಿ ಸದ್ಭಕ್ತರೆಂತೆಂಬೆ? || ೪೦ ||

೪೧

ಸಮಯವುಳ್ಳನ್ನಕ್ಕ ಸಂಸಾರಿಯಲ್ಲದೆ
ಲಿಂಗಭಕ್ತನಲ್ಲ, ಜಂಗಮ ಪ್ರೇಮಿಯಲ್ಲ.
ಉಭಯ ಸಂದೇಹವುಳ್ಳನ್ನಕ್ಕ ಕೂಡಲಚೆನ್ನಸಂಗಯ್ಯನಲ್ಲಿ
ಭಕ್ತರೆಂತಪ್ಪರಯ್ಯಾ? ॥ ೪೧ ॥

೪೨

ಹಲವು ಕಾಲ ಹಂಸೆಯ ಸಂಗದಲ್ಲಿದ್ದರೆ ಬಕನು ಶುಚಿಯಾಗಬಲ್ಲುದೆ?
ನಿಧಿನಿಧಾನದೊಳಗಿದ್ದರೇನು ಪಾಷಾಣ ಹೊನ್ನಾಗಬಲ್ಲುದೆ?
ಕಲ್ಪತರುಗಳ ಸಂಗದಲ್ಲಿದ್ದರೇನು ಕೊರಡು ಫಲವಾಗಬಲ್ಲುದೆ?
ಕಾಶೀಕ್ಷೇತ್ರದಲ್ಲಿ ಶುನಕನಿದ್ದರೇನು ಅವರ ಕ್ಷೀರ ಪಂಚಾಮೃತವಾಗಬಲ್ಲುದೆ?
ಖಂಡುಗ ಹಾಲೊಳಗೆ ಇದ್ದಿಲ ಹಾಕಿದರೇನು ಬಿಳಿದಾಗಬಲ್ಲುದೆ?
ಇದು ಕಾರಣ ಕೂಡಲಚೆನ್ನಸಂಗನ ಶರಣರ ಸನ್ನಿಧಿಯಲಿದ್ದರೇನು
ಅಸಜ್ಜನ ಸದ್ಭಕ್ತನಾಗಬಲ್ಲನೆ? ॥ ೪೨ ॥

೪೩

ಭಕ್ತರಾವೆವೆಂದು ಯುಕ್ತಿಗೆಟ್ಟು ನುಡಿವರು; ಭಕ್ತಿಜನ್ಮವೆಲ್ಲರಿಗೆಲ್ಲಿಯದೊ?
ಗುರುವಿನಲ್ಲಿ ತನುವಂಚನೆ, ಲಿಂಗದಲ್ಲಿ ಮನವಂಚನೆ,
ಜಂಗಮದಲ್ಲಿ ಧನವಂಚನೆವುಳ್ಳನ್ನಕ ಭಕ್ತನೆ?
ಗುರುವಿನಲ್ಲಿ ಚಾರಿತ್ರವ ಲಿಂಗದಲ್ಲಿ ಲಕ್ಷಣವ,
ಜಂಗಮದಲ್ಲಿ ಜಾತಿಯನರಸುವನ್ನಕ್ಕ ಭಕ್ತನೆ? ಅಲ್ಲ, ಅವನು ದ್ರೋಹಾರ್ಥಿ.
"ಭಕ್ತಶ್ಚ ಪ್ರತಿಪಕ್ಷಶ್ಚ ಸದಾಚಾರೇಣ ವರ್ಜಿತಃ।
ಗುರುಲಿಂಗಜಂಗಮ ದ್ವೇಷೀ ಯೋ ನರಸ್ಸದುರಾತ್ಮಕಃ"॥
ಇದು ಕಾರಣ ಕೂಡಲಚೆನ್ನಸಂಗಮದೇವಾ
ಭಕ್ತಿಜನ್ಮವೆಲ್ಲರಿಗೆಲ್ಲಿಯದು? ॥ ೪೩ ॥

೪೪

ಪದಿರು ಸೂಳೆಗೆ ಕಟಕಿ ವಿದ್ಯಾಮತಂಗೆ,
ಹಾವು ಹಾದನೆ ಹಾವಾಡಿಗಂಗೆ, ಶಿವಭಕ್ತರಿಗುಂಟೆ ಅಯ್ಯಾ?
ಒಬ್ಬರಿಗೊಬ್ಬರು ಮಚ್ಚರಿಸಬೇಕೆಂದು ಕೊಟ್ಟನೆ ಶ್ರೀಗುರು ಲಿಂಗವನು?
ಶಿವಶಿವಾ ಭಕ್ತರು ಲಿಂಗಜಂಗಮವೊಂದೆಂದು ಕಾಣದಿರ್ದಡೆ
ಅಘೋರ ನರಕ ಕೂಡಲಚೆನ್ನಸಂಗಯ್ಯಾ. ॥ ೪೪ ॥

೪೫

ಅರ್ಥದ ಮದ, ಅಹಂಕಾರದ ಮದ, ಕುಲಮದ ಬಿಡದು,
ಸಮಯಾಚಾರ ಸಮಯಭಕ್ತಿ ಇನ್ನಾರಿಗೆಯೂ ಅಳವಡದು ನೋಡಾ.
ಮಾತಿನ ಮಾತಿನ ಮಿಂಚಿನ ಘಾಳಕರಿಗೆ ಸಮಯಭಕ್ತಿ ಇನ್ನೆಲ್ಲಿಯದೊ
ಕೂಡಲಚೆನ್ನಸಂಗಯ್ಯಾ? || ೪೫ ||

೪೬

ಬ್ರಹ್ಮೋಪದೇಶವಾಯಿತ್ತೆಂದು ಬ್ರಹ್ಮದೊಡನೆ ಧಿಕ್ಕಾರಬೇಡ.
ಶಿವಜ್ಞಾನದೀಪ್ತಿ ತೋರಿತ್ತೆಂದು ಶಿವಶರಣರೊಡನೆ ಧಿಕ್ಕರಿಸಬೇಡ.
ಕಾಲಜ್ಞಾನವಾಯಿತ್ತೆಂದು ಕರ್ಮವ ಹಳಿಯಬೇಡ.
ಈ ತ್ರಿವಿದೋತ್ಪಾತ ಸಲ್ಲದು.
ಕೂಡಲಚೆನ್ನಸಂಗಮದೇವ ಸಾಕ್ಷಿಯಾಗಿ
ಇವರೆಲ್ಲರೂ ಸಜ್ಜನ ಶುದ್ಧ ಶಿವಾಚಾರಕ್ಕೆಸಲ್ಲರು. || ೪೬ ||

೪೭

ಮಜ್ಜನಕ್ಕೆರೆವುದು ಮಾದ ಬಳಿಕ ಮನ ಮತ್ತೊಂದಕ್ಕೆರಗದಿರಬೇಕು.
ಪೂಜೆಯ ಪೂಜಿಸಿ ಮಾದ ಬಳಿಕ ಪರರ ಬೋಧಿಸಲಾಗದು.
ಆರೋಗಣೆ ಅವಸರ ಮಾದ ಬಳಿಕ ಅಂಗಭೋಗಂಗಳ ನೆರೆ ಮಾಣಬೇಕು.
ಆನೀನೆಂಬ ಭ್ರಾಂತುಳ್ಳನ್ನಕರ
ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡಬೇಕು.
ಕೂಡಲಚೆನ್ನಸಂಗಯ್ಯಾ,
ಇವ ಮಾಡದಿದ್ದರೆ ನಾಯಕ ನರಕ. || ೪೭ ||

೪೮

ಪೃಥ್ವಿಯ ಪೂರ್ವಾಶ್ರಯ ರಂಗವಲ್ಲಿಯಲ್ಲಿ ಹೋಹುದು.
ಅಪ್ಪುವಿನ ಪೂರ್ವಾಶ್ರಯ ಶಬ್ದದಿಂದ ಹೋಹುದು.
ಅಗ್ನಿಯ ಪೂರ್ವಾಶ್ರಯ ಧೂಪದಿಂದ ಹೋಹುದು.
ವಾಯುವಿನ ಪೂರ್ವಾಶ್ರಯ ಧ್ಯಾನದಿಂದ ಹೋಹುದು.
ಆಕಾಶದ ಪೂರ್ವಾಶ್ರಯ ಮಂತ್ರದಿಂದ ಹೋಹುದು.
ಚಂದ್ರಸೂರ್ಯ ಆತ್ಮನ ಪೂರ್ವಾಶ್ರಯ
ಮಾಡುವ ಕಿಂಕಿಲದಿಂದ ಹೋಹುದು
ಇದು ಕಾರಣ ಭಕ್ತಕಾಯ ಮಮಕಾಯ
ಕೂಡಲಚೆನ್ನಸಂಗಮದೇವ. || ೪೮ ||

೪೯

ಪರುಷದ ಪರ್ವತದಲ್ಲಿ ಕಬ್ಬುನಂಗಳುಂಟೆ?
ಅಷ್ಟವಿಧಾರ್ಚನೆ ಷೋಡಶೋಪಚಾರ ಸನ್ನಹಿತಂಗೆ
ಅವಗುಣಂಗಳುಂಟೆ?
ಭಕ್ತಕಾಯ ಮಮಕಾಯ
ಕೂಡಲಚೆನ್ನಸಂಗಮದೇವ. ॥ ೪೯ ॥

೫೦

ಪಾತಾಳದಗ್ಘಣಿಯ ನೇಣಿಲ್ಲವೆ ತೆಗೆಯಬಹುದೆ,
ಸೋಪಾನದ ಬಲದಿಂದಲ್ಲದೆ?
ಶಬ್ದ ಸೋಪಾನವ ಕಟ್ಟಿ ನಡಯಿಸಿದರು ಪುರಾತರು,
ದೇವಲೋಕಕ್ಕೆ ಬಟ್ಟೆ ಕಾಣಿರೋ.
ಮರ್ತ್ಯರ ಮನದ ಮೈಲಿಗೆಯ ಕಳೆಯಲೆಂದು
ಗೀತಮಾತೆಂಬ ಜ್ಯೋತಿಯ ಬೆಳಗಿ ಕೊಟ್ಟರು,
ಕೂಡಲಚೆನ್ನಸಂಗನ ಶರಣರು. ॥ ೫೦ ॥

೫೧

ನಾನಾ ಜನ್ಮಾಂತರದಿಂದ ಮಾನವರಾಗಿ ಪುಟ್ಟಿ,
ಜಪದಿಂದ ಧ್ಯಾನದಿಂದ ತಪದಿಂದ ಸಮಾಧಿಯಿಂದ
ದೇವಾ, ನಿಮ್ಮನರಿದೆನೆಂದು ಬಳಲುತ್ತಿದ್ದರು.
"ಜನ್ಮಾಂತರ ಸಹಸ್ರೇಷು ತಪೋಧ್ಯಾನ ಸಮಾಧಿ ಭಿಃ
ನರಾಣಾಂ ಕ್ಷೀಣಪಾಪಾನಾಂ ಶಿವಭಕ್ತಿ ಪ್ರಜಾಯತೇ॥"
ಇಂತೆಂದುದಾಗಿ ಪಾಪಂಗಳು ಕೆಟ್ಟಲ್ಲದೆ,
ನಿಮ್ಮ ಭಕ್ತರಾಗರಯ್ಯಾ
ಕೂಡಲಚೆನ್ನಸಂಗಮದೇವಾ. ॥ ೫೧ ॥

೫೨

ಪಂಚಾಮೃತವನುಂಡಡೇನು? ಮಲಮೂತ್ರ ವಿಷಯ ಘನವಕ್ಕು.
ಭ್ರಾಂತು ಬೇಡ ಮರುಳೆ, ಬಿಡುವುದು ಕಾಯಗುಣವ.
ಆಸೆ ಆಮಿಷ ಅಶನ ವ್ಯಸನದಲ್ಲಿ ಹಿರಿಯರು ಗರುವರುಂಟೆ?
ಭ್ರಾಂತು ಬೇಡ ಮರುಳೆ, ಬಿಡುವುದು ಕಾಯಗುಣವ.

ಈ ಭೇದವ ಭೇದಿಸ ಬಲ್ಲಡೆ ಕೂಡಲಚೆನ್ನಸಂಗನ ಶರಣ
ಸಾಣೆಯಲ್ಲಿ ಸವೆದ ಶ್ರೀ ಗಂಧದಂತಿರಬೇಕು. ॥ ೫೨ ॥

೫೩

ತನುವಿನಲ್ಲಿ ತನು ಸವೆದು, ಮನದಲ್ಲಿ ಮನ ಸವೆದು, ಧನದಲ್ಲಿ ಧನ ಸವೆದು,
ಲಜ್ಜೆಗೆಟ್ಟು ನಾಣುಗೆಟ್ಟು ಕಿಂಕಿಲನಾಗಿರಬೇಕು.
ಲಿಂಗಜಂಗಮವನೊಲಿಸುವಂಗೆ ಇದು ಚಿಹ್ನವಯ್ಯಾ.
ಪ್ರಸಾದ ಸಾಹಿತ್ಯವಾಗಿ ಉಲುಹಡಗಿರಬೇಕು,
ಕೂಡಲಚೆನ್ನಸಂಗಯ್ಯನಲ್ಲಿ ಏಕಾರ್ಥವಾಗಿರಬೇಕು. ॥ ೫೩ ॥

೫೪

ಆಚಾರವು ಅಗೋಚರ ನೋಡಯ್ಯಾ,
ಮಾಡಿದಲ್ಲದೆ ಇಲ್ಲ. ಒಡಲುವಿಡಿದಾಡಿದರೆ ಹಿಡಿಯಲಿಲ್ಲಯ್ಯಾ.
ಇವನೀಸುವ ಕಳೆದು ಕೂಡಲಚೆನ್ನಸಂಗಾ
ಬಸವಣ್ಣ ಬಲ್ಲ, ನೋಡಯ್ಯಾ. ॥ ೫೪ ॥

೫೫

ಮರ್ಮವರಿದು ಮಾಡುವಂಗೆ ಕರ್ಮವಿಲ್ಲ,
ಹೆಮ್ಮೆಯಲ್ಲಿ ಮಾಡಿದವನ ವಿಧಿಯ ನೋಡಾ.
ಸಜ್ಜನ ಸದಾಚಾರವರಿದು ಮಾಡುವನು
ಕೂಡಲಚೆನ್ನಸಂಗಯ್ಯನಲ್ಲಿ ನಮ್ಮ ಬಸವಣ್ಣನು. ೫೫ ॥

೫೬

ಮಾಡುವರಯ್ಯಾ ಮಾಡುವರಯ್ಯಾ ಮರುಳುಗೊಂಡಂತೆ,
ಮರ್ಮವರಿಯದ ಮಾಟ ಸಂಪದಾಸನಕೇಡು, ಕರ್ಮದ ಬೆಳಸು.
ಕೂಡಲ ಚೆನ್ನಸಂಗನ ಶರಣರ ಅನುವರಿಯದೆ
ಮಾಡುವ ಮಾಟ ಭವಮಾಟ. ॥ ೫೬ ॥

೫೭

ಅನ್ನವನಿಕ್ಕಿದರೆ ಪುಣ್ಯವಹುದು, ವಸ್ತ್ರವ ಕೊಟ್ಟರೆ ಧರ್ಮವಹುದು,
ಪಣವ ಕೊಟ್ಟರೆ ಶ್ರೀ ಯಹುದು.
ತ್ರಿಕರಣ ಶುದ್ಧವಾಗಿ ನೆನೆದರೆ ಮುಕ್ತಿಯಹುದು,
ಕೂಡಲಚೆನ್ನಸಂಗಯ್ಯನ[ಲ್ಲಿ] ॥ ೫೭ ॥

೫೮

ಲಿಂಗ ಬಂದು ಮನವನಿಂಬುಗೊಂಬುದು,
ಜಂಗಮ ಬಂದು ಧನವನಿಂಬುಗೊಂಬುದು,
ಪ್ರಸಾದ ಬಂದು ತನುವನಿಂಬುಗೊಂಬುದು,
[ಈ]ತ್ರಿವಿಧವು ತಾನೆ, ಕೂಡಲಚೆನ್ನಸಂಗಾ,
ನೀನೊಲಿದ ಶರಣಂಗೆ ದೃಷ್ಟ. || ೫೮ ||

೫೯

ಉದಯಮುಖದಲ್ಲಿ ಲಿಂಗದರುಶನ,
ಹಗಲಿನ ಮುಖದಲ್ಲಿ ಜಂಗಮ ದರುಶನ,
ಲೇಸು, ಲೇಸು, ಲಿಂಗವಂತಂಗೆ ಇದೇ ಪಥವು, ಸದ್ಭಕ್ತಂಗೆ ಇದೇ ಪಥವು.
ಲೇಸು ಲೇಸು ಕೂಡಲಚೆನ್ನಸಂಗಯ್ಯನಲ್ಲಿ,
ಅಚ್ಚ ಲಿಂಗೈಕ್ಯಂಗೆ! || ೫೯ ||

೬೦

ಲಿಂಗವನರಿವರೆ ಮನ ನಿಚ್ಚಣಿಗೆ,
ಜಂಗಮವನರಿವರೆ ಧನ ನಿಚ್ಚಣಿಗೆ,
ಪ್ರಸಾದವನರಿವರೆ ತನು ನಿಚ್ಚಣಿಗೆ,
ಈ ತ್ರಿವಿಧವನರಿವರೆ ತ್ರಿವಿಧ ನಿಚ್ಚಣಿಗೆ,
ಇದು ಕಾರಣ ಕೂಡಲಚೆನ್ನಸಂಗನ
ಶರಣಂಗಲ್ಲದಿಲ್ಲವೀ ಸಂಪತ್ತು. || ೬೦ ||

೬೧

ಲಿಂಗ ಪ್ರೇಮಿಗಳು ಜಂಗಮದನುವನರಿವರೆ?
ಜಂಗಮ ಪ್ರೇಮಿಗಳು ಲಿಂಗದನುವನರಿವರೆ?
ಪ್ರಸಾದ ಪ್ರೇಮಿಗಳು ಲೋಕದ ಸಂಗವಬಲ್ಲರೆ?
ಲಿಂಗ ಪ್ರೇಮಿಗಳೂ ಅಲ್ಲ ಜಂಗಮ ಪ್ರೇಮಿಗಳೂ ಅಲ್ಲ,
ಪ್ರಸಾದ ಪ್ರೇಮಿಗಳೂ ಅಲ್ಲದ ಜೀವಿಗಳಿಗೆ ಭಕ್ತಿಯೆಲ್ಲಿಯದು?
ಕೂಡಲಚೆನ್ನಸಂಗಮದೇವಾ. || ೬೧ ||

೬೨

ಮಾಡುವರಯ್ಯಾ ಮಾಡುವರಯ್ಯಾ ಉದ್ದೇಶಕ್ಕೆ ಭಕ್ತಿಯ.
ಎಡೆಯಲಿ ಆಯಿತ್ತು, ಎಡೆಯಲಿ ಹೋಯಿತ್ತೆಂಬವಂಗೆ ಬಂದಿತ್ತೆ ಭಕ್ತಿ?
ಕಳಶ ಪೂರಾಯವಹನ್ನಬರ ಮಾಡದಿದ್ದರೆ
ಭಕ್ತಿಗೆ ಭಂಗವಯ್ಯಾ ಕೂಡಲಚೆನ್ನಸಂಗಯ್ಯಾ. || ೬೨ ||

೬೩

ಅವಸರವರಿದು ಸಮಯಾಚಾರವ ಮಾಡಬೇಕಯ್ಯಾ,
ಅವಸರವರಿದು ಸಮಯಭಕ್ತಿ ಸಂಬಂಧವ ಮಾಡಬೇಕಯ್ಯಾ,
ಅವಸರವರಿದು ಮಾಡಬೇಕು, ಬಂದವಸರವ ತಪ್ಪಿಸಬಾರದು.
ಕೂಡಲಚೆನ್ನಸಂಗನ ಸಮಯಾಚಾರಕ್ಕೆ
ಇದೇ ಯುಕ್ತಿ. || ೬೩ ||

## ಭಕ್ತನ ಭಕ್ತಸ್ಥಲ

೬೪

ತನುಗುಣ ಸಂಕರದಿಂದ ಪ್ರಸಾದಸಂಗ ಕೆಟ್ಟಿತ್ತು.
ಮನಗುಣ ಸಂಕರದಿಂದ ಲಿಂಗಸಂಗ ಕೆಟ್ಟಿತ್ತು.
ಲೋಭಗುಣ ಸಂಕರದಿಂದ ಜಂಗಮಸಂಗ ಕೆಟ್ಟಿತ್ತು.
ಈ ತ್ರಿವಿಧದ ಆಗುಚೇಗೆಯನರಿಯದ ಕಾರಣ
ಭವಘೋರ ನರಕಕ್ಕೊಳಗಾದರು,-
ಇದು ಕಾರಣ ಕೂಡಲಚೆನ್ನಸಂಗಯ್ಯಾ, ಈ ತ್ರಿವಿಧದ ಅನುಭವ ಬಲ್ಲ
ಬಸವಣ್ಣಂಗೆ ನಮೋ ನಮೋ [ಎಂಬೆ] || ೬೪ ||

೬೫

ಭಕ್ತ ಶಾಂತನಾಗಿರಬೇಕು,
ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿರಬೇಕು,
ಭೂತಹಿತವಪ್ಪ ವಚನವ ನುಡಿಯಬೇಕು, ಜಂಗಮವಲ್ಲಿ ನಿಂದೆಯಿಲ್ಲದೆ
ಸಕಲ ಪ್ರಾಣಿಗಳ ತನ್ನಂತೆ ಭಾವಿಸೂದು ಮಾಡಬೇಕು,
ತನುಮನಧನವ ಗುರುಲಿಂಗ ಜಂಗಮಕ್ಕೆ ಸವೆಸಲೇಬೇಕು,

ಅಪಾತ್ರದಾನವ ಮಾಡಲಾಗದು,
ಸಕಲೇಂದ್ರಿಯಗಳ ತನ್ನ ವಶವ ಮಾಡಬೇಕು,
ಇದೇ ಮೊದಲಲ್ಲಿ ಬೇಹ ಶೌಚ ನೋಡಾ.
ಲಿಂಗವ ಪೂಜಿಸಿ ಪ್ರಸಾದವ ಪಡೆವರೆ ಎನಗಿದೇಸಾಧನ
ಕೂಡಲಚೆನ್ನ ಸಂಗಮದೇವಾ. ॥ ೬೫ ॥

೬೬

ಭಕ್ತನೆಂತೆಂಬೆನಯ್ಯಾ ಭಕ್ತಿಸ್ಥಲವೆನಗೆ ಮುನ್ನಿಲ್ಲ,
ಯುಕ್ತನೆಂತೆಂಬೆನಯ್ಯಾ ಯುಕ್ತಿಸ್ಥಲವೆನಗೆ ಮುನ್ನಿಲ್ಲ,
ಮುಕ್ತನೆಂತೆಂಬೆನಯ್ಯಾ ಮುಕ್ತಿಸ್ಥಲವೆನಗೆ ಮುನ್ನಿಲ್ಲ,
ಕೂಡಲಚೆನ್ನಸಂಗನ ಶರಣರಿಗೆ
ನಮೋ ನಮೋಯೆಂದು ಬದುಕುವೆ. ॥ ೬೬ ॥

೬೭

ಉಭಯಾರ್ಥದಿಂದ ಲಿಂಗವ ನೋಡುವರೆ
ಗುರುವಿಂದ ಬಿಟ್ಟು ಬೇರೆ ಘನವಿಲ್ಲಯ್ಯ,
ಉಭಯಾರ್ಥದಿಂದ ಲಿಂಗವ ನೋಡುವರೆ
ಜಂಗಮದಿಂದತಿಶಯವೇನೂ ಇಲ್ಲಯ್ಯ.
ಉಭಯಾರ್ಥದಿಂದ ಲಿಂಗವ ನೋಡುವರೆ
ಉಭಯಸ್ಥಳದ ಕುಳವನರಿಯಬೇಕು.
ಉಭಯಾರ್ಥದಿಂದ ಲಿಂಗವ ನೋಡುವರೆ
ಉಭಯ ಸಂಕೀರ್ಣಮನವ ತಾಳಲಾಗದು.
ಉಭಯಾರ್ಥದಿಂದ ಕೂಡಲಚೆನ್ನಸಂಗಾ
ನಿಮ್ಮ ಶರಣರಿಗೆ ಶರಣೆಂಬೆನಯ್ಯಾ. ॥ ೬೭ ॥

೬೮

ಉದರ ನಿಮಿತ್ತವಿಡಿದು ಉದರವ ಹೊರೆವವನಲ್ಲ.
ಚದುರ ಕಾಣೆಭೋ, ಹದಿರಿಸಬಲ್ಲ.
ಲಿಂಗಜಂಗಮವೆಂಬ ಕುಳದಾಗಮಸಾರವಿಡಿದಾಡುವ ಚದುರ ಕಾಣೆಭೋ!
ಚದುರ ಬಿದಿರ ಬಿತ್ತುವ
ಕೂಡಲಚೆನ್ನಸಂಗಯ್ಯಾ ನಿಮ್ಮ ಶರಣನು. ॥ ೬೮ ॥

೭೯

ತನುವಿಲ್ಲದ ಭಕ್ತ, ಮನವಿಲ್ಲದ ಭಕ್ತ, ಧನವಿಲ್ಲದ ಭಕ್ತ,
ಪಂಚೇಂದ್ರಿಯ ಸುಖವಿಲ್ಲದ ಭಕ್ತ, ಕಾಲವಿಲ್ಲದ ಭಕ್ತ,
ಕರ್ಮವಿಲ್ಲದ ಭಕ್ತ, ಕಲ್ಪಿತವೆಂಬುದನರಿಯದ ಭಕ್ತ,
ಅಶನವನರಿಯದ ಭಕ್ತ, ವ್ಯಸನವನರಿಯದ ಭಕ್ತ,
ಹುಸಿ ನುಸುಳು ಅರಿಷಡ್ವರ್ಗಂಗಳನರಿಯದ ಭಕ್ತ,
ಲಿಂಗಕ್ಕೆ ಆಧಾರ ಭಕ್ತ, ಜಂಗಮಕ್ಕೆ ಆಧಾರ ಭಕ್ತ, ಪ್ರಸಾದಕ್ಕೆ ಆಧಾರ ಭಕ್ತ,
ಕೂಡಲಚೆನ್ನಸಂಗಯ್ಯನಲ್ಲಿ
ಎನ್ನ ಮಾತಾಪಿತನೀ ಸದ್ಭಕ್ತ. ॥ ೭೯ ॥

೮೦

ಸೂಸದ ಮಚ್ಚು ಅಚ್ಚೊತ್ತಿದಂತಿದ್ದರೆ
ಲಿಂಗವೆಂಬೆ, ಜಂಗಮವೆಂಬೆ, ಪ್ರಸಾದಿಯೆಂಬೆ,
ಸ್ವಯಂಕೃತ ಸಹಜಭಾವ
ಕೂಡಲಚೆನ್ನಸಂಗಯ್ಯ. ॥ ೮೦ ॥

೮೧

ಲಿಂಗದಲ್ಲಿ ಸಾಹಿತ್ಯನು, ಜಂಗಮದಲ್ಲಿ ಸನುಮತನು,
ಪ್ರಸಾದದಲ್ಲಿ ಸನ್ನಹಿತನು,
ಈ ತ್ರಿವಿಧ ಸಂಬಂಧ,
ಸಾರಾಯವಬಲ್ಲ ಬಸವಣ್ಣಂಗಲ್ಲದೆ ಮತ್ತಾರಿಗೆಯೂ ಆಗದು.
ಕೂಡಲಚೆನ್ನಸಂಗಯ್ಯನ ದಯದಿಂದ
ಆನು ಬದುಕಿದೆನು. ॥ ೮೧ ॥

೮೨

ಭಕ್ತನೆಂಬ ನಾಮಧಾರಕಂಗೆ ಆವುದು ಪಥವೆಂದರೆ:
ಗುರುಭಕ್ತನಾದರೆ ಜಂಗಮವನಾರಾಧಿಸುವುದು,
ಗುರುಶಿಷ್ಯರಿಬ್ಬರ ಗುರುತ್ವವ ಮಾಡಿದನಾಗಿ,
ಆಚಾರಭಕ್ತನಾದರೆ ಜಂಗಮವನಾರಾಧಿಸುವುದು.
ಗುರುಶಿಷ್ಯರಿಬ್ಬರ ಸದಾಚಾರದಲ್ಲಿ ನಿಲಿಸಿದನಾಗಿ,
ಲಿಂಗಭಕ್ತನಾದರೆ ಜಂಗಮವನಾರಾಧಿಸುವುದು.
ಗುರು ತನ್ನ ಲಿಂಗವ ಶಿಷ್ಯಂಗೆ ಕೊಟ್ಟು ವ್ರತಗೇಡಿಯಾಗಿ ಪೋಪಲ್ಲಿ

ಆ ಗುರು ಸಹಿತ ಶಿಷ್ಯಂಗೆ ಸ್ವಾಯತವ ಮಾಡಿದನಾಗಿ.
ಪ್ರಸಾದಭಕ್ತನಾದರೆ ಜಂಗಮನಾರಾಧಿಸುವುದು,
ಗುರುಶಿಷ್ಯ ಸಂಬಂಧದಲ್ಲಿ ಪ್ರಸಾದೋದ್ಭವವ ತೋರಿದನಾಗಿ.
ಇಂತು ಆವ ಪ್ರಕಾರದಲ್ಲಿಯೂ ಜಂಗಮವೆ ಅಧಿಕವೆಂಬ
ಉತ್ತರಕ್ಕೆ ಆವುದು ಸಾಕ್ಷಿಯೆಂದರೆ, ಶಿವವಾಕ್ಯವು ಪ್ರಮಾಣು:
ಲಿಂಗದ್ವಯಂ ಸಮಾಖ್ಯಾತಂ ಚರಂ ಚಾಚರಮೇವ ಚ।
ಅಚರಂ ಮಂತ್ರಸ್ಥಾಪ್ಯಂ ಹಿ ಚರೇ ನಿತ್ಯಂ ಸದಾಶಿವಃ॥
ಲಿಂಗಾರ್ಪಿತಂ ನ ಕರ್ತವ್ಯಂ ಕರ್ತವ್ಯಂ ಜಂಗಮಾರ್ಪಿತಂ।
ಲಿಂಗಾಚಾರಂ ಸಮಾಖ್ಯಾತಂ ಜಂಗಮಸ್ಯ ವಿಶೇಷತಃ॥
ಇಂತು ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣೈಕ್ಯಂಗೆ
ಜಂಗಮಸಹಿತ ಮಾಡುವುದು ಸದಾಚಾರ, ಜಂಗಮ ವಿರಹಿತ ಅನಾಚಾರ.
ಇಂತು ಶಿವನಲ್ಲಿ ಏಕಾರ್ಥವಾದ ಕಾರಣ
ಜಂಗಮ ಪ್ರಾಣಿಯಾದ ಜಂಗಮ ಪ್ರಸಾದಿಯಾದ ಬಸವಣ್ಣ.
ಆ ಬಸವಣ್ಣನ ಪ್ರಸಾದದಿಂದ ಬದುಕಿದೆ ಕಾಣಾ
ಕೂಡಲಚೆನ್ನಸಂಗಯ್ಯಾ. || ೬೨ ||

೬೩

ಜಂಗಮ ಬರಬೇಕೆಂದು ಲಿಂಗಾರ್ಚನೆಯ ಮಾಡೂದು.
ಆ ಜಂಗಮ ಬಂದರೆ ತನ್ನ ಲಿಂಗಾರ್ಚನೆಯ ಮಾಣಬೇಕು,
ಮಾದು ಜಂಗಮಾರ್ಚನೆಯ ಮಾಡಬೇಕು.
ಲಿಂಗದಲೇನುಂಟು, ಜಂಗಮದಲೇನುಂಟೆಂದರೆ:
ಲಿಂಗದಲ್ಲಿ ಫಲವುಂಟು ಪದವುಂಟು ಕುಲವುಂಟು ಛಲವುಂಟು ಭವವುಂಟು.
ಜಂಗಮದಲ್ಲಿ ಫಲವಿಲ್ಲ ಪದವಿಲ್ಲ ಕುಲವಿಲ್ಲ ಛಲವಿಲ್ಲ ಭವವಿಲ್ಲ.
ಇದು ಕಾರಣ ಕೂಡಲಚೆನ್ನಸಂಗಮದೇವಾ
ಜಂಗಮವೇ ಲಿಂಗವೆಂದು ನಂಬಿದನಾಗಿ
ಬಸವಣ್ಣ ಸ್ವಯಲಿಂಗವಾದ. || ೬೩ ||

೬೪

ಶಿವಸಾಧ್ಯವೆಂದು, ಶಿವವೇದ್ಯವೆಂದು, ಶಿವಸತ್ಯವೆಂದು,
ಶಿವಸಹಜವೆಂದು, ಶಿವನಿರುತವೆಂದು,
"ಯದ್ಭಾವಃ ತದ್ಭವತಿ" ಎಂಬ ಭಾವಬಲಿದು,
ಬಂದವರನೆ ಶಿವನೆಂದು ನಂಬೂದು.
ರೂಪವಾನ್ ರೂಪಹೀನೋ ವಾ ಮಲಿನೋ ಮಲಿನಾಂಬರಃ।

ಯೋಗಿಂದ್ರಸ್ಯ ತ್ವಸಂದೇಹಂ ದೇಹಾದೀನ್ನ ವಿಚಾರಯೇತ್||
ಅಭೋಗಿನಂ ಭೋಗಿನಂ ವಾ ಪೂಜಯೇಚ್ಛಿವಯೋಗಿನಂ|
ಪ್ರತ್ಯಹಮನ್ನಪಾನಾದ್ಯೈಃ ಶಯನೇನಾಸನೇನ ವಾ||
ಎಂದುದಾಗಿ, ಇದು ಕಾರಣ ಕೂಡಲಚನ್ನಸಂಗಯ್ಯಾ
ಲಿಂಗಾನುಭಾವಿಗಳ ಬರವಿಂಗೆ ಇಂಬುಗೊಡುವುದಲ್ಲದೆ
"ಯತ್ರ [ಜೀವಃ] ತತ್ರ [ಶಿವಃ]"ನೆಂದು
ನುಡಿವರೆ ಭಕ್ತನಲ್ಲಯ್ಯಾ. || ೭೪ ||

೭೫

ಒಡೆಯರು ಮನೆಗೆ ಬಂದುದ ಕಂಡು
ತೆರಪುವು ಮರಹಾಗಿಪ್ಪನೆ ಭಕ್ತನು? ಭೀಷ್ಮಿಸಿಕೊಂಡಿಹನೆ ಭಕ್ತನು?
ಜಂಗಮ ಪ್ರೀತಂಗೆ ಜಡಮತಿಗಳುಂಟೆ?
ನಿಮ್ಮ ಒಕ್ಕುದ ಕೊಂಡು ಇಹಂಥ ಮಹಾಮಹಿಮರ ತೋರಯ್ಯಾ
ಕೂಡಲಚೆನ್ನಸಂಗಯ್ಯಾ. || ೭೫ ||

೭೬

ಜಂಗಮವ ಕಾಣುತ ಅಹಂಕಾರದೊಳಗಿಪ್ಪ
ಅನಿತ್ಯದೇಹಿಯನೇನೆಂಬೆ ಶಿವನೇ!
ಲಿಂಗಸ್ಥಲಕ್ಕೆ ಸಲ್ಲರು, ಗುರು ಹೇಳಿತ್ತ ಮರೆದರು.
ಭಸ್ಮಾಂಗಮಾಗತಂ ದೃಷ್ಟ್ವಾ ಆಸನಂ ಪರಿತ್ಯಜೇತ್|
ಸ್ವಧರ್ಮಃ ಪಿತೃಧರ್ಮಶ್ಚ ಸರ್ವಧರ್ಮೋ ವಿನಶ್ಯತಿ||
ಕುಲೀನಮಕುಲೀನಂ ವಾ ಭೂತಿರುದ್ರಾಕ್ಷಧಾರಿಣಂ|
ದೃಷ್ಟ್ವೋನ್ನತಾಸನೇ ತಿಷ್ಠನ್ ಶ್ವಾನ ಯೋನಿಷು ಜಾಯತೇ||
ಇದು ಕಾರಣ ಕೂಡಲಚೆನ್ನಸಂಗಾ
ಭಸ್ಮಾಂಗಿಯ ಕಂಡರೆ, ನಮೋ ನಮೋ ಎಂಬೆನು. || ೭೬ ||

## ಭಕ್ತನ ಮಾಹೇಶ್ವರಸ್ಥಲ

೭೭

ಪವನ ಸಾಧಕರೆಲ್ಲ ಕಳವಳಿಸಿ ಹೋದರು.
ತನು ಸಾಧಕರೆಲ್ಲ ಬುದ್ಧಿಗೇಡರಾದರು. ತತ್ವಸಾಧಕರೆಲ್ಲ ಭಕ್ತಹೀನರಾದರು

ಲಿಂಗಸಾಧಕರೆಲ್ಲ ಅಂಗಹೀನರಾದರು ಪ್ರಸಾದಸಾಧಕರೆಲ್ಲ ವ್ರತಗೇಡಿಗಳಾದರು.
ಕೂಡಲಚೆನ್ನಸಂಗಯ್ಯಾ
ನಿಮ್ಮಲ್ಲಿ ಬಸವಣ್ಣ ಜಂಗಮಸಾಧಕನಾಗಿ
ಸ್ವಯಲಿಂಗವಾದ. || ೭೭ ||

೭೮

ಅಂಗದ ಮೇಲೆ ಲಿಂಗಸಾಹಿತ್ಯವಾದ ಬಳಿಕ ಕ್ಷೇತ್ರತೀರ್ಥಕ್ಕೆ ಹೋಗಲೇಕಯ್ಯ!
ಅಂಗದ ಮೇಲಣ ಲಿಂಗ [ರಂಗದ] ಕಲ್ಲ ತಾಗಿದರೆ
ಆವುದ ಘನವೆಂಬೆನಾವುದ ಕಿರಿದೆಂಬೆ!
ತಾಳ ಸಂಪ್ರಟಕ್ಕೆಬಾರದ ಘನವನರಿಯದೆ ಕೆಟ್ಟರು.
ಜಂಗಮದರ್ಶನ ಶಿರಮುಟ್ಟಿ ಪಾವನ, ಲಿಂಗದರ್ಶನ ಕರಮುಟ್ಟಿ ಪಾವನ.
ಹತ್ತಿರಿದ್ದ ಲಿಂಗವ ಹುಸಿಮಾಡಿ, ದೂರಲಿದ್ದ ಲಿಂಗಕ್ಕೆ ನಮಸ್ಕರಿಸುವ
ವ್ರತಗೇಡಿಯ ತೋರದಿರಯ್ಯಾ!
ಕೂಡಲಚೆನ್ನಸಂಗಯ್ಯಾ. || ೭೮ ||

೭೯

ಆಜ್ಯೆಪೂಜೆಯಂತಿದ್ದರೇನು, ಮನದ ಓಜೆ ನೆಲೆಗೊಳ್ಳದನ್ನಕ್ಕ?
ಜಲ ಚಾಂಡಾಲವಾದರೆ ತಾವರೆ ನೆಲೆಗೊಂಬುದೇ?
ಮನ ಚಾಂಡಾಲವಾದರೆ ಲಿಂಗ ನೆಲೆಗೊಂಬುದೇ?
ಭಾವವಿಟ್ಟ ಕರುವಿನಂತೆ, ಅಲ್ಲಿಪ್ಪನೆ ಶಿವನು?
ಥಳಥಳಿಸದು, ಹೊಳೆಹೊಳೆಯದು, ಕೆರಕು ಕಲ್ಲಿನಂತೆ ಇಪ್ಪುದಯ್ಯಾ ಪರುಷವು.
ಆ ಪರುಷದಂತುವನಾರು ಬಲ್ಲರು?
ಹೆಮ್ಮೆಗೆರಗುವರಲ್ಲದೆ ಆ ಘನವನೆತ್ತಬಲ್ಲರು?
ಕೂಡಲಚೆನ್ನಸಂಗನ ಶರಣರ ಅಂತಕ ಬೊಂತಕರೆನಬೇಡ,
ಅವರಂತುವನಾ ಶಿವನೇ ಬಲ್ಲ. || ೭೯ ||

೮೦

ಸಿರಿವಂತ ಶಿಷ್ಯಂಗೆ ಗುರು ದರಿದ್ರನಾದರೆ
ಅಭಿಮಾನದಿಂದ ಅವಿಶ್ವಾಸವ ಮಾಡುವ ನರಕಿಯನೆನ್ನತ್ತ ತೋರದಿರಯ್ಯಾ.
ಜಂಗಮವೆ ಲಿಂಗ, ಲಿಂಗವೆ ಜಂಗಮವೆಂದ ಬಳಿಕ ಅಲ್ಲಿ
ಸು[ಖಿ] ಸಾಮಾನ್ಯವೆಂಬ ಪಾಪಿಯ ಮುಖವನೆನ್ನತ್ತ ತೋರದಿರಯ್ಯಾ.

ರೂಪಾನ್ವಿತಂ ಕೂರೂಪಂ ವಾ ಮಲಿನಂ ಮಲಿನಾಂಬರಂ।
ಯೋಗೀಂದ್ರಮನಿಶಂ ಕಾಯಮಿತ್ಯಾದೀನ್ನ ವಿಚಾರಯೇತ್॥
ಎಂಬ ವಚನವ ನಂಬಿದೆನಯ್ಯಾ, ಕೂಡಲಚೆನ್ನಸಂಗಾ ನಿಮ್ಮಾಣೆ. ॥ ೮೦ ॥

೮೧

ಗುರುವ ನರನೆಂದೆನಾದರೆ ಹಿಂದಣ ಭವಮಾಲೆ ಹಿಂಗದು.
ಗುರುಶಬ್ದಕ್ಕೆ ರೋಷವ ಮಾಡಿದೆನಾದರೆ, ಶ್ವಾನನ ಬಳಗದಂತಪ್ಪೆನು.
ಗುರೂಪದೇಶವ ಮೀರಿದೆನಾದರೆ ಎನಗೆ ಏಳೇಳು ಭವಕರ್ಮ ಹಿಂಗದು.
ಇದು ಕಾರಣ ಗುರುಲಿಂಗವು ಭರ್ಗೋದೇವನೆಂಬೆನು.
ಕೂಡಲಚೆನ್ನಸಂಗಯ್ಯ, ಇವ ನಂಬದಿದ್ದರೆ ಭವ ಹಿಂಗದು. ॥ ೮೧ ॥

೮೨

ಗುರುವಚನವನುದಾಸೀನವ ಮಾಡಿ, ಗುರುಲಿಂಗಕ್ಕೆ ವಂಚಿಸುವವನ
ಮುಖವ ನೋಡೆನೋಡೆನವನ ಕೂಡೆ ಮಾತಾಡೆನಾಡೆನವನಿದಿರಲ್ಲಿ ನಿಂದರೆ,
ಪಾಪಿಯಂತಿರಲಿ.
ಇದು ಕಾರಣ, ಕೂಡಲಚೆನ್ನಸಂಗಯ್ಯನ
ವಚನ 'ನ ವದಂತಿ ನ ಪಶ್ಯಂತಿ' ಎಂದುದಾಗಿ. ॥ ೮೨ ॥

೮೩

ತನುವನೊಪ್ಪಿಸಿದನಯ್ಯಾ ಭಕ್ತನು, ತನ್ನ ಮನವನೊಪ್ಪಿಸಿದನಯ್ಯಾ ಭಕ್ತನು.
ತನ್ನ ಧನವನೊಪ್ಪಿಸಿದನಯ್ಯಾ ಭಕ್ತ [ನು],
ತನ್ನ ಅಂತರಂಗದಾತ್ಮಸುಖಕ್ಕೆ ಈ ತ್ರಿವಿಧವನು
ಶ್ರೀಗುರು ಹೇಳಿದಂತುಟಂ ಬಿಟ್ಟ ವ್ರತಗೇಡಿಯ ತೋರದಿರು
ಕೂಡಲಚೆನ್ನಸಂಗಮದೇವಾ. ॥ ೮೩ ॥

೮೪

ತನು ಮನ ಧನವನಿತ್ತೆಪೆಂಬವರೆಲ್ಲ[ರು].
ತನುಮನಧನವನಿತ್ತೆಂಬವರ ಮಾತ ಕೇಳಬಹುದೆ?
ಅಂಬಲಿಯನೆರೆದವರಲ್ಲ ಭಕ್ತರೆ? ಕಂಬಳಿಯ ಕೊಟ್ಟವರೆಲ್ಲ ಭಕ್ತರೆ?
ಧರ್ಮ ಅರ್ಥ ಕಾಮ ಮೋಕ್ಷ ಚತುರ್ವಿಧಫಲವಲ್ಲದೆ,
ತನುಮನಧನವ ನೆರೆಯಿತ್ತು ತನ್ನ ಪರಿವರಿಯುವನ್ನಕ್ಕ
ಕೂಡಲಚೆನ್ನಸಂಗಯ್ಯನಲ್ಲಿ ಅವೆಂತು ಸದ್ಭಕ್ತರೆಂಬೆ? ॥ ೮೪ ॥

೮೫

ಮಾಡುವ ದಾಸೋಹ ಕಿಂಕುರ್ವಾಣದಿಂದಾದರೆ
ಭಕ್ತನ ಆವ ಅವಗುಣಂಗಳು ಮುಟ್ಟಲಮ್ಮವಯ್ಯಾ.
ಅರ್ಥ ಪ್ರಾಣ ಅಭಿಮಾನ ತ್ರಿಸ್ಥಾನ ಶುದ್ಧವ ಮಾಡುವಲ್ಲಿ
ನಿರಾಭಾರಿ ಮಹೇಶ್ವರನ ಕೂಡಿಕೊಂಡಿಪ್ಪ
ಕೂಡಲಚೆನ್ನಸಂಗಮದೇವ. ॥ ೮೫ ॥

೮೬

ಉದಾಸೀನವಂ ಮಾಡಿದರೆ ಮುಟ್ಟಲಾಗದು, ಅದು ಅನರ್ಪಿತವೆನಿಸೂದು.
ವಿನಯದಿಂದ ನೀಡಿದರೆ ಮುಟ್ಟುವುದು, ಅರ್ಪಿತವ ಮಾಡುವುದು.
ಕೂಡಲಚೆನ್ನಸಂಗಯ್ಯಾ,
ಅಂತಪ್ಪ ಲಿಂಗಾಭಿಮಾನಿಯನೆನಗೆ ತೋರಯ್ಯಾ. ॥ ೮೬ ॥

೮೭

ಸೂತಕವುಳ್ಳನ್ನಕ ಲಿಂಗಾರ್ಚನೆಯಿಲ್ಲ.
ಪಾತಕವುಳ್ಳನ್ನಕ ಜಂಗಮಾರ್ಚನೆಯಿಲ್ಲ.
ಸೂತಕ ವಿರಹಿತ ಲಿಂಗಾರ್ಚನೆ. ಪಾತಕ ವಿರಹಿತ ಜಂಗಮಾರ್ಚನೆ.
ಇಂತು ಸೂತಕ ಪಾತಕ ಎರಡೂ ಇಲ್ಲ.
ಕೂಡಲಚೆನ್ನಸಂಗನ ಶರಣಂಗೆ. ॥ ೮೭ ॥

೮೮

ನಾನು ಮೆಟ್ಟುವ ಭೂಮಿಯ ಭಕ್ತನ ಮಾಡಿದಲ್ಲದೆ ಮೆಟ್ಟೆನಯ್ಯಾ.
ನಾ ನೋಡುತಿಹ ಆಕಾಶದ ಚಂದ್ರಸೂರ್ಯರ
ಭಕ್ತರ ಮಾಡಿದಲ್ಲದೆ ನಾ ನೋಡೆನಯ್ಯಾ.
ಜಲವ ಭಕ್ತರ ಮಾಡಿದಲ್ಲದೆ ನಾನು ಬಳಸೆನಯ್ಯಾ,
ನಾನು ಕೊಂಬ ಹದಿನೆಂಟು ಧಾನ್ಯವ ಭಕ್ತನ ಮಾಡಿದಲ್ಲದೆ
ಕೊಳ್ಳೆನು ಕೂಡಲಚೆನ್ನಸಂಗಾ ನಿಮ್ಮಾಣೆ. ॥ ೮೮ ॥

೮೯

ಲಿಂಗೈಕ್ಯವಿಲ್ಲದವರನೊಲ್ಲ ಲಿಂಗಧಾರಿ.
ಲಿಂಗಾರ್ಚನೆಯ ಕಾಲದಲ್ಲಿ, ಪ್ರಸಾದ ಭೋಗದ ಕಾಲದಲ್ಲಿ,
ಅಂಗದ ಮೇಲೆ ಲಿಂಗವಿಲ್ಲದ ಭವಿಯ ನೇಮಸ್ತನೆಂದುಕೊಂಡರೆ.

ಪಂಚಮಹಾಪಾತಕವೆಂದುದಾಗಿ
ಲಿಂಗೈಕ್ಯಂ ಲಿಂಗಧಾರೀಣಾಂ ಅಂಗಬಾಹ್ಯೇ ವಿಧೀಯತೇ.
ಭವಿನಾಂ ಪಾಪದೃಷ್ಟೀನಾಂ ಪ್ರಚ್ಛನ್ನ ಪಟಮುತ್ತಮಂ॥
ಎಂದುದಾಗಿ –ಭವಿಮಾರ್ಗ ನೇಮಸ್ತಗುಂಟಾಗಿ
ಭವಿಯ ಸಂಗವ ಕಳೆದ ಲಿಂಗೈಕ್ಯರನಲ್ಲದೊಲ್ಲ
ಕೂಡಲಚೆನ್ನಸಂಗಯ್ಯ. ॥ ೮೯ ॥

೯೦

ಜಲ ಗಂಧ ಅಕ್ಷತೆ ಪುಷ್ಪ ಧೂಪ ದೀಪ ನೈವೇದ್ಯ,
ತಾಂಬೂಲ ಪಂಚವರ್ಣದ ಪತ್ರೆ ಪುಷ್ಪದ ಪೂಜೆಯ ರಚನೆಯ ಮಾಡುವೆನಯ್ಯಾ.
ಅಷ್ಟವಿಧಾರ್ಚನೆ ಷೋಡಶೋಪಚಾರ ಮುಖ್ಯವಾಗಿ ಮಾಡುವೆನಯ್ಯಾ.
ಸಕಲಕ್ಷೇಮದಿಂದ ನಡೆದು ನಿಮ್ಮಲ್ಲಿಗೆ ಸಾರುವೆನು
ಕೂಡಲಚೆನ್ನಸಂಗಯ್ಯಾ. ॥ ೯೦ ॥

೯೧

ಹದಿನಾರು ತೆರದಿಂದ ಭಕ್ತಿಯ ಮಾಡುವೆನು,
ಷೋಡಶೋಪಚಾರಂಗಳನೆ ಮಾಡುವೆನು,
ಬಂದುದಕ್ಕೆ ಪರಿಣಾಮವ ಕೊಡುವೆನು, ಇದ್ದುದಕ್ಕೆ ಇಂಬುಗೊಡುವೆನು,
ಆಯತದಿಂದ ಲಿಂಗಾರ್ಚನೆಯ ಮಾಡುವೆನು,
ಸ್ವಾಯತದಿಂದ ಲಿಂಗಭೋಗೋಪಭೋಗವ ಮಾಡುವೆನು.
ಅನರ್ಪಿತಂಗಳ ಮುಟ್ಟಲೀಯದೆ, ಗುರುಪ್ರಸಾದಕ್ಕೆ ತನುವ ಇಂಬುಕೊಟ್ಟು,
ಲಿಂಗ ಪ್ರಸಾದಕ್ಕೆ ಮನವ ಇಂಬುಕೊಟ್ಟು,
ಜಂಗಮ ಪ್ರಸಾದಕ್ಕೆ ಪ್ರಾಣವ ಇಂಬುಕೊಟ್ಟು
ಇಂತೀ ತ್ರಿವಿಧ ನಿರ್ಣಯದಲ್ಲಿ ನೇಮಿಸಿ ನಡೆವ,
ಕೂಡಲಚೆನ್ನಸಂಗಯ್ಯಾ ನೀವು ಮುಂತಾಗಿ. ॥ ೯೧ ॥

೯೨

ಕೆರೆಯಲ್ಲಿ ಕಂಡರೆ ಉದಕವೆಂಬೆ, ಮನೆಗೆ ಬಂದರೆ ಅಗ್ಘವಣಿಯೆಂಬೆ.
ಅಂಗಡಿಯಲ್ಲಿ ಕಂಡರೆ ಭತ್ತವೆಂಬೆ, ಮನೆಗೆ ಬಂದರೆ ಸಮುದಾನವೆಂಬೆ,
ಮಾಡುವೆ ನೀಡುವೆ, ನೀಡುವಲ್ಲಿ ಬೋನವೆಂಬೆ.
ಪ್ರಸಾದವೆಂದು ಅಂಜಿ ಎಂಜಲೆಂದರೆ
ಅಂದೇ ವ್ರತಗೇಡಿ ಕೂಡಲಚೆನ್ನಸಂಗಯ್ಯಾ. ॥ ೯೨ ॥

# ಭಕ್ತನ ಪ್ರಸಾದಿಸ್ಥಲ

೯೩

ಲಿಂಗಸಾಹಿತ್ಯ ಮಡಿವಾಳ, ಜಂಗಮಸಾಹಿತ್ಯ ಬಸವಣ್ಣ,
ಇವರಿಬ್ಬರ ಪ್ರಸಾದಸಾಹಿತ್ಯ ನಾನೇ ಕೂಡಲಚೆನ್ನಸಂಗಯ್ಯಾ. ॥ ೯೩ ॥

೯೪

ಮೊದಲಲ್ಲಿ ಮನದಲಚ್ಚೊತ್ತಿದ ಕಾರಣ ಎಚ್ಚರಿಕೆಯಾಯಿತ್ತು,
ಗುರುಕಾರುಣ್ಯದಿಂದ ಆಚಾರದರಿವಾಯಿತ್ತು,
ಜಂಗಮದಿಂದ ತಿಳಿದ ತಿಳಿವಿನಲ್ಲಿ ಪ್ರಸಾದ ಸಾಧ್ಯವಾಯಿತ್ತು,
ಕೂಡಲಚೆನ್ನಸಂಗನ ಶರಣರಲ್ಲಿ [ಏಕಾರ್ಥ]ವಾಯಿತ್ತು. ॥ ೯೪ ॥

೯೫

ವೇದವಂತಿರಲಿ, ಶಾಸ್ತ್ರಮುನ್ನವೆ ಸಾಕು, ಸಾಧಿಸಿದನು ಸಜ್ಜನ ಸಾರಾಯವನು,
ಲಿಂಗ ಜಂಗಮದ ಪ್ರಸಾದವೆ ಪ್ರಾಣವೆಂದು,
ಇವರಲ್ಲಿ ಸಜ್ಜನ ಸದರ್ಥ ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣನು. ॥ ೯೫ ॥

೯೬

ಮೀರಿದ ಕ್ರೀಯ ಸಂಪಾದಿಸನಾಗಿ, ದ್ವೈತಿಯಲ್ಲ ಅದ್ವೈತಿಯಲ್ಲ.
ಮೀರಿ ಜಾರಿ ಹದುಳಿಗನಾಗಿ, ಸ್ವರ್ಗಿಯಲ್ಲ, ಅಪವರ್ಗಿಯಲ್ಲ.
ಕೂಡಲಚೆನ್ನಸಂಗಯ್ಯನಲ್ಲಿ ಸ್ವಾಯತವಾದ ಪ್ರಸಾದಿ ಬಸವಣ್ಣನು. ॥ ೯೬ ॥

೯೭

ಪ್ರಾತಃಕಾಲದಲಗ್ರೋದಕವನು ತಂದು ಲಿಂಗದ ಅನುವನರಿವನು,
ಪಾದೋದಕವನು ತಟ್ಟದೆ ಮುಟ್ಟದೆ ಕೊಂಬನು.
ತನಗೋಸುಗವೆಂದರಿಯದೆ ಲಿಂಗದವಸರವೆಂದರಿದು,
ಮಹಾಮಜ್ಜನಾದಿಗಳಂ ಮಾಡಿಸಿ,
ಲಿಂಗ ಸನ್ನಿಧಿಯಲು ಲಿಂಗೋದಕವ ಗ್ರಹಿಸುವ ಪ್ರಸಾದಿ,
ಲಿಂಗವಿಚ್ಛೆಯಾರೋಗಣೆಯಂ ಮಾಡಿಸಿ, ಪ್ರಸಾದವರಿವನೊಮ್ಮೆ ಅರಿವನು.

ಇದು ಕಾರಣ ಕೂಡಲಚೆನ್ನಸಂಗಯ್ಯ
ನಿಮ್ಮ ಪ್ರಸಾದಿಗೆ ನಮೋ ನಮೋ. || ೯೭ ||

೯೮

ಗುರುಪ್ರಸಾದ, ಲಿಂಗಪ್ರಸಾದ, ಜಂಗಮಪ್ರಸಾದ,
ಈ ತ್ರಿವಿಧ ನಿಕ್ಷೇಪ. ಇದು ಕಾರಣ ಕೂಡಲಚೆನ್ನಸಂಗಾ,
[ಲಿಂಗ ತ್ರಿವಿಧದಲ್ಲಿ] ಪ್ರಸಾದತ್ರಿವಿಧನೆಂದೆನಿಸುವನು. || ೯೮ ||

೯೯

ತನುವಿನ ಸ್ವಾರ್ಥಕ್ಕೆ ಪದಾರ್ಥದ ಪೂರ್ವಾಶ್ರಯುವ ಕಳೆದು,
ಲಿಂಗಕ್ಕೆ ಕೊಟ್ಟುಕೊಂಬುದು ಶುದ್ಧ.
ಮನದ ಸ್ವಾರ್ಥಕ್ಕೆ ರುಚಿಯು ಪೂರ್ವಾಶ್ರಯುವ ಕಳೆದು,
ಲಿಂಗಕ್ಕೆ ಕೊಟ್ಟುಕೊಂಬುದು ಸಿದ್ದ.
ಈ ಉಭಯು ಕ್ರಿಯಾಭಾವವಳಿದುಳಿದ ಪ್ರಸಿದ್ಧಪ್ರಸಾದವ,
ಕೂಡಲಚೆನ್ನಸಂಗಾ ನಿಮ್ಮ ಶರಣಬಲ್ಲ. || ೯೯ ||

೧೦೦

ಲಿಂಗಪ್ರಸಾದ ಭವಕ್ಕೆ ಬೀಜ, ಜಂಗಮಪ್ರಸಾದ ಭವಂ ನಾಸ್ತಿ.
ವಾಸನೆಯೆ ಲಿಂಗಭಕ್ತಿ, ನಿರ್ವಾಸನೆಯೆ ಜಂಗಮಭಕ್ತಿ.
ಜಂಗಮ ಪ್ರಸಾದವಲ್ಲದೆ ಕೊಂಡೆನಾದಡೆ
ಅಘೋರ ನಾಯಕನರಕ ಕೂಡಲಚೆನ್ನಸಂಗಮದೇವಾ. || ೧೦೦ ||

೧೦೧

ಜಂಗಮವಾರೋಗಿಸಿ ಮಿಕ್ಕುದು ಲಿಂಗಕ್ಕೋಗರ,
ಲಿಂಗವಾರೋಗಿಸಿ ಮಿಕ್ಕುದು ಪ್ರಸಾದ-ನೀಡಬಹುದು.
ಜಂಗಮ ಮುಖದಲ್ಲಿ ಓಗರವಾಯಿತ್ತು.
ಲಿಂಗಮುಖದಲ್ಲಿ ಪ್ರಸಾದವಾಯಿತ್ತು.
ಇದು ಕಾರಣ ಕೂಡಲಚೆನ್ನಸಂಗಯ್ಯಾ
ನಿನಗೆ ಎನಗೆ ಜಂಗಮದ ಪ್ರಸಾದ. || ೧೦೧ ||

೧೦೨

ಉಭಯಲಿಂಗಪ್ರಸಾದದುದಯವ ಲಿಂಗಪ್ರಸಾದಿಗಳೆ ಬಲ್ಲರು,
ನಾನೆತ್ತ ಬಲ್ಲೆನಯ್ಯಾ ದೇವಾ?
ಕ್ರೀಯೆ ಮೀರಿದ ಸಂಬಂಧವನು ವಿಧಿ ನಿಷೇಧ ಕ್ರಿಯೆಗೆ ಹೊರಗಾದುದನು,
[ನಾನೆತ್ತ ಬಲ್ಲೆನಯ್ಯಾ ದೇವಾ]
ಸ್ರುತಿ ಸ್ಮೃತಿ ಪುರಾಣದೊಳಗಲ್ಲ,
ಕೂಡಲಚೆನ್ನಸಂಗನ ಪ್ರಸಾದ. ॥ ೧೦೨ ॥

೧೦೩

ಆದಿಯ ಪ್ರಸಾದವನರಿಯರು, ಅನಾದಿಯ ಪ್ರಸಾದಕ್ಕೆ ಹಸ್ತವನಿಡುವರಯ್ಯಾ,
ಅನಾದಿಪ್ರಸಾದವನರಿಯದೆ ಗಣಪ್ರಸಾದಕ್ಕೆ ಹಸ್ತವನಿಡುವರಯ್ಯಾ,
ಗಣಪ್ರಸಾದವನರಿಯದೆ ಸಮಯಪ್ರಸಾದಕ್ಕೆ ಹಸ್ತವನಿಡುವರಯ್ಯಾ.
ಸಮಯ ಪ್ರಸಾದವನರಿಯದೆ ಜಂಗಮಪ್ರಸಾದಕ್ಕೆ ಹಸ್ತವನಿಡುವರಯ್ಯಾ.
ಜಂಗಮ ಪ್ರಸಾದಿಯಾದಾತನು ಆ ಜಂಗಮದ ಮುಖವ ನೋಡಿ,
ಮನವು ತಲ್ಲೀಯವಾಗಿ ಕರಗದಿದ್ದರೆ ಆತ ಪ್ರಸಾದಿಯೆ?
ಪರುಷವಿರಲು ಕಬ್ಬುನಕ್ಕೆ ಕೈಯ ನೀಡುವರೆ ?
ಇದು ಕಾರಣ ಕೂಡಲಚೆನ್ನಸಂಗಾ
ನಿಮ್ಮ ಪ್ರಸಾದಿಯ ಪ್ರಸಾದವ ವೇಧಿಸುತ್ತಿದ್ದೆನು. ॥ ೧೦೩ ॥

## ಭಕ್ತನ ಪ್ರಾಣಲಿಂಗಿಸ್ಥಲ

೧೦೪

ಗುರುಕೊಟ್ಟ ಲಿಂಗ ತನ್ನ ನಚ್ಚಿ[ನಿಂದ] ಆಯತವಾಯಿತ್ತಯ್ಯಾ,
ಪ್ರಾಣನ ನಚ್ಚಿನಿಂದ ಸ್ವಾಯತವಾಯಿತ್ತಯ್ಯಾ,
ಉಭಯ ನಚ್ಚಿನಿಂದ ಸಂಗವಾಯಿತ್ತು,
ಕೂಡಲಚೆನ್ನಸಂಗಾ ನಿಮ್ಮಲ್ಲಿ. ॥ ೧೦೪ ॥

೧೦೫

ಒಂದಾಗಿ ತೋರಿದರೆ ಮೂರಾಗಿ ವಿವರಿಸುವೆ:
ಲಿಂಗವೆಂಬೆ ಜಂಗಮವೆಂಬೆ ಪ್ರಸಾದವೆಂಬೆ.
ಮನೋಮೂರ್ತಿಯಾಗಿ ತೋರಿದೆ, ಕೂಡಲಚೆನ್ನಸಂಗಯ್ಯಾ. ॥ ೧೦೫ ॥

೧೦೬

ಲಿಂಗ ಪ್ರಣಾಮವ ಮಾಡುವೆ, ಲಿಂಗಾಲೋಕನವ ಮಾಡುವೆ.
ಜಂಗಮ ಪ್ರಣಾಮವ ಮಾಡುವೆ, ಜಂಗಮ ಸಂಭಾಷಣೆಯ ಮಾಡುವೆ,
ಪ್ರಸಾದ ಪ್ರಣಾಮವ ಮಾಡುವೆ, ಪ್ರಸಾದಭೋಗವ ಮಾಡುವೆ.
ಈ ತ್ರಿವಿಧಾಲೋಕನವ ಮಾಡುವೆ,
ಕೂಡಲಚೆನ್ನಸಂಗಾ ನೀ ಮಾಡಿಸಲು. ॥ ೧೦೬ ॥

೧೦೭

ಲಿಂಗದಲುದಯ, ಜಂಗಮದಲನುಭಾವ.
ಮತ್ತೊಂದ ಮತ್ತೊಂದನರಿಯನಯ್ಯಾ, ಶರಣ.
ಕೂಡಲಚೆನ್ನಸಂಗಯ್ಯನಲ್ಲಿ ದ್ವಿವಿಧ ಸಂಪನ್ನನಾಗಿ ಅಯ್ಯಾ. ॥ ೧೦೭ ॥

೧೦೮

ಲಿಂಗಕ್ಕೆಂದು ಮಾಡಿದ ಬೋನವ
ಜಂಗಮಕ್ಕೆ ನೀಡಬಾರದೆಂಬ ಕರ್ಮಿಯ ನೋಡಾ.
ಲಿಂಗಾರ್ಪಿತಂ ನ ಕರ್ತವ್ಯಂ ಕರ್ತವ್ಯಂ ಜಂಗಮಾರ್ಪಿತಂ ।
ಲಿಂಗಜಂಗಮಯೋರ್ಮಧ್ಯೇ ಜಂಗಮಸ್ತು ವಿಶೇಷತಃ ॥
ಇದು ಕಾರಣ ಆ ಜಂಗಮವೇ ಲಿಂಗ
ಕೂಡಲಚೆನ್ನಸಂಗಮದೇವಾ. ॥ ೧೦೮ ॥

೧೦೯

ಆಚಾರವಿಡಿದು ಲಿಂಗ, ಅನುಭಾವವಿಡಿದು ಜಂಗಮ.
ತನುವಿನ ಪ್ರಾಣ ಆಚಾರ, ಮನದ ಪ್ರಾಣ ಅನುಭಾವ.
ಇದು ಕಾರಣ ಕೂಡಲಚೆನ್ನಸಂಗಮದೇವಾ,
ಲಿಂಗವನೂ ಜಂಗಮವನೂ ಬೇರರಸಲಿಲ್ಲ. ॥ ೧೦೯ ॥

೧೧೦

ಜಂಗಮವೇ ಲಿಂಗವೆಂಬರಯ್ಯಾ
ಲಿಂಗಜಂಗಮವೆಂಬ ಸಂದಿಲ್ಲದ ಮುನ್ನ ಎರಡೆಂಬರಯ್ಯಾ.
ಏಕೋಗ್ರಾಹಕನಾಗಿ ಕೂಡಲಚೆನ್ನಸಂಗಯ್ಯ ಬೇರಿಲ್ಲ. ॥ ೧೧೦ ॥

೧೧೧

ತನುಮನಧನವು ತ್ರಿಸ್ಥಾನ ಸಂಗವಾಯಿತ್ತಾಗಿ, ಭಕ್ತಿಮದವೇರಿತ್ತಾಗಿ,
ಸದ್ಭಕ್ತಿ ಸಂಭಾಷಣೆ ಕ್ರೀಯನರಿದು ತೂರ್ಯಾತೂರ್ಯಗೊಂಡಿತ್ತಾಗಿ,
ಲಿಂಗದಲ್ಲಿ ಅರಿವ ಜಂಗಮದಲ್ಲಿ ಮೆರೆವ
ಕೂಡಲಚೆನ್ನಸಂಗ ತಾನಾಗಿ. ॥ ೧೧೧ ॥

೧೧೨

ಜಾಗ್ರಸ್ವಪ್ನದಲ್ಲಿ ಲಿಂಗಜಂಗಮವನಲ್ಲವೆ ಅರಿಯನು,
ಗಣತಿಂಥಿಣಿಯ ಭಕ್ತಿಸಾಗರದೊಳಾಡುವ,
ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣನು. ॥ ೧೧೨ ॥

೧೧೩

ಲಿಂಗದಿಂದೊದವಿದ ಜಂಗಮ, ಜಂಗಮದಿಂದೊದವಿದ ಲಿಂಗವು
ಉಪಮೆಗೆ ತಂದು ಎರಡೆನಬಹುದೆ ಮಹಾಘನವ?
ಜಂಗಮ ಸಜ್ಜನ ಸಹಜ ಶಿವೈಕ್ಯನನೇನೆಂದುಪಮಿಸಬಹುದು ಹೇಳಾ?
ಕೂಡಲಚೆನ್ನಸಂಗಮದೇವಾ ಜಂಗಮಪ್ರಾಣಿ ಬಸವರಾಜನು. ॥ ೧೧೩ ॥

## ಭಕ್ತನ ಶರಣಸ್ಥಲ

೧೧೪

ಪೂರ್ವಿಕ ಪೂಜಕ, ಅಪೂರ್ವಿಕ ಭಕ್ತ;
ಕರ್ಮಿ ಪೂಜಕ, ನಿಷ್ಕರ್ಮಿ ಭಕ್ತ;
ಲಿಂಗ ಪೂಜಕ, ಜಂಗಮ ಭಕ್ತ,

ತನುಗುಣ ಪೂರ್ವಸೂತಕ ವಿರಹಿತ
ಕೂಡಲಚೆನ್ನಸಂಗಯ್ಯನಲ್ಲಿ ಆತನೆ ಅಚ್ಚಶರಣ. ॥ ೧೧೪ ॥

೧೧೫

ಅಂಗದಲ್ಲಿ ಲೀಯವಾದವರು ಅಂಗದ ನುಡಿಗಡಣವೆ ನೋಡಾ,
ಲಿಂಗದಲ್ಲಿ ಲೀಯವಾದವರು ಲಿಂಗದ ನುಡಿಗಡಣವೆ ನೋಡಾ
ಆವ ಸ್ಥಳದಲ್ಲಿ ನಿಂದವರು ಆ ಸ್ಥಳವನೆ ನುಡಿವರು ನೋಡಾ,
ಕೂಡಲಚೆನ್ನಸಂಗನ ಶರಣರು
ಆ ಲಿಂಗದ ನಡೆ, ಆ ಲಿಂಗದ ನುಡಿಗಡಣವೆ ನೋಡಾ. ॥ ೧೧೫ ॥

೧೧೬

ಪೃಥ್ವಿಯಂತಹ ಭಕ್ತ, ಉದಕದಂತಹ ಮಾಹೇಶ್ವರ, ಅಗ್ನಿಯಂತಹ ಪ್ರಸಾದಿ,
ವಾಯುವಿನಂತಹ ಪ್ರಾಣಲಿಂಗಿ, ಆಕಾಶದಂತಹ ಶರಣ, ಚಂದ್ರನಂತಹ ನೇಮಸ್ಥ,
ಸೂರ್ಯನಂತಹ ಅನುಭವಿ, ಆತ್ಮನಂತಹ ಐಕ್ಯ–
ಇಂತೀ ಅಷ್ಟತನು ಗಟ್ಟಿಗೊಂಡು,
ಕೂಡಲಚೆನ್ನಸಂಗನ ಶರಣನು ಅನಂತಕುಳರಹಿತನು. ॥ ೧೧೬ ॥

೧೧೭

ಆಚಾರವಂಗಸಂಬಂಧವಾದಲ್ಲಿ ಶ್ರೀಗುರುಲಿಂಗ ಸನ್ನಹಿತ,
ಅರಿವು ಮನಸಂಬಂಧವಾದಲ್ಲಿ ಶಿವಲಿಂಗ ಸನ್ನಹಿತ,
ಉಭಯ ಲಿಂಗಸಂಬಂಧವಾದಲ್ಲಿ ಜಂಗಮಲಿಂಗ ಸನ್ನಹಿತ.
ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ
ಲಿಂಗತ್ರಿವಿಧಸಂಪನ್ನ ಶರಣ. ॥ ೧೧೭ ॥

೧೧೮

ಗುರುವಿನಲ್ಲಿ ಸದಾಚಾರಿ, ಲಿಂಗದಲ್ಲಿ ಶಿವಾಚಾರಿ,
ಜಂಗಮದಲ್ಲಿ ಸಮಯಾಚಾರಿ, ಪ್ರಸಾದದಲ್ಲಿ ಬ್ರಹ್ಮಚಾರಿ,
ಆಚಾರದಲ್ಲಿ ವಿಚಾರಿ ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೧೧೮ ॥

೧೧೯

ಮರಕ್ಕೆ ಬಿತ್ತು ಹುಟ್ಟಿದರೇನಯ್ಯಾ? ಬಿತ್ತಿಂಗೆ ಮರ ಹುಟ್ಟಿದರೇನಯ್ಯಾ?
ಮರದ ಬೆಳಸಿನ ಫಲದ ಪರಿಯ ಬೆಸಗೊಳ್ಳಲಿಲ್ಲ.

ಸಸಿ ಪಲ್ಲವಿಸಿ ತ್ರಿವಿಧವಾಯಿತ್ತು.
ಕೂಡಲಚೆನ್ನಸಂಗಾ ನಿಮ್ಮ ಶರಣಂಗಯ್ಯಾ. ॥ ೧೧೯ ॥

೧೨೦

ಜಾತಿ ಸೂತಕ ಬಿಡದು, ಜನನ ಸೂತಕ ಬಿಡದು,
ಪ್ರೇತ ಸೂತಕ ಬಿಡದು, ರಜಸ್ಸೂತಕ ಬಿಡದು, ಎಂಜಲು ಸೂತಕ ಬಿಡದು,
ಭ್ರಾಂತು ಸೂತಕ ಬಿಡದು, ವರ್ಣ ಸೂತಕ ಬಿಡದು,
ಇವರೆಂತು ಭಕ್ತರಹರು?
ಹೂಸಿ ಹುಂಡನ ಮಾಡಿದಲ್ಲಿ, ಬಾಯಿಗೆ ಬೆಲ್ಲವ ತೊಡೆದಲ್ಲಿ
ಸದ್ಗುರು ಲಿಂಗವು ಮೂಗ ಕೊಯ್ಯದೆ ಮಾಬನೆ?
ಕಾಡು ಕಿಚ್ಚಿನ ಕೈಯಲ್ಲಿ ಕರಡದ ಹುಲ್ಲ ಕೊಯ್ಸಿದಂತಿರಬೇಕು ಭಕ್ತಿ.
ಹಿಂದೆ ಮೆದೆಯಿಲ್ಲ, ಮುಂದೆ ಹುಲ್ಲಿಲ್ಲ.
ಇದು ಕಾರಣ ಕೂಡಲಚೆನ್ನಸಂಗನ ಭಕ್ತಿಸ್ಥಲ
ನಿಮ್ಮ ಶರಣಂಗಲ್ಲದೆ ಅಳವಡದು. ॥ ೧೨೦ ॥

೧೨೧

ತರುಮರಾದಿಗಳಲ್ಲಿಗೆ ಹೋಗಿ ಅನಂತಕಾಲ ತಪಸ್ಸಿಹುದರಿಂದ
ಒಂದು ದಿನ ಗುರುಚರಣಸೇವೆ ಸಾಲದೆ?
ಅನಂತಕಾಲ ಗುರುಚರಣಸೇವೆಯ ಮಾಡೂದರಿಂದ
ಒಂದು ದಿನ ಲಿಂಗಪೂಜೆ ಸಾಲದೆ?
ಅನಂತಕಾಲ ಲಿಂಗಪೂಜೆಯ ಮಾಡೂದರಿಂದ
ಒಂದು ದಿನ ಜಂಗಮತೃಪ್ತಿ ಸಾಲದೆ?
ಅನಂತಕಾಲ ಜಂಗಮತೃಪ್ತಿಯ ಮಾಡೂದರಿಂದ
ಒಂದು ನಿಮಿಷ ನಿಮ್ಮ ಶರಣರ ಅನುಭಾವ ಸಾಲದೆ
ಕೂಡಲಚೆನ್ನಸಂಗಮದೇವಾ? ॥ ೧೨೧ ॥

೧೨೨

ಕಾಮಿಸಿದಲ್ಲದೆ ಕೊಡದು ಕಾಮಧೇನು, ಕಲ್ಪಿಸಿದಲ್ಲದೆ ಕೊಡದು ಕಲ್ಪವೃಕ್ಷ,
ಚಿಂತಿಸಿದಲ್ಲದೆ ಕೊಡದು ಚಿಂತಾಮಣಿ, ಭಾವಿಸಿದಲ್ಲದೆ ಕೊಡನು ಶಿವನು.
ಕಾಮಿಸದೆ ಕಲ್ಪಿಸದೆ ಚಿಂತಿಸದೆ ಭಾವಿಸದೆ ಕೊಡಬಲ್ಲರು,
ಕೂಡಲಚೆನ್ನಸಂಗಾ ನಿಮ್ಮ ಶರಣರು. ॥ ೧೨೨ ॥

೧೨೩

ಶ್ರೀಗುರು ಲಿಂಗ ಜಂಗಮಕ್ಕೆ ಅರ್ಚನೆ ಪೂಜನೆ ದಾಸೋಹವನು
ಧರ್ಮವ ಕಾಮಿಸಿ ಮಾಡಿದರೆ ಧರ್ಮವಪ್ಪುದು,
ಅರ್ಥವ ಕಾಮಿಸಿ ಮಾಡಿದರೆ ಅರ್ಥವಪ್ಪುದು,
ಕಾಮವ ಕಾಮಿಸಿ ಮಾಡಿದರೆ ಕಾಮವಪ್ಪುದು,
ಮೋಕ್ಷವ ಕಾಮಿಸಿ ಮಾಡಿದರೆ ಮೋಕ್ಷವಪ್ಪುದು,
ಸಾಲೋಕ್ಯವ ಕಾಮಿಸಿ ಮಾಡಿದರೆ ಸಾಲೋಕ್ಯವಪ್ಪುದು,
ಸಾಮಿಪ್ಯವ ಕಾಮಿಸಿ ಮಾಡಿದರೆ ಸಾಮಿಪ್ಯವಪ್ಪುದು,
ಸಾರೂಪ್ಯವ ಕಾಮಿಸಿ ಮಾಡಿದರೆ ಸಾರೂಪ್ಯವಪ್ಪುದು,
ಸಾಯುಜ್ಯವ ಕಾಮಿಸಿ ಮಾಡಿದರೆ ಸಾಯುಜ್ಯವಪ್ಪುದು,
ಕಾಮಧೇನುವ ಕಾಮಿಸಿ ಮಾಡಿದರೆ ಕಾಮಧೇನುವಪ್ಪುದು,
ಕಲ್ಪತರುವ ಕಾಮಿಸಿ ಮಾಡಿದರೆ ಕಲ್ಪತರುವಪ್ಪುದು,
ಪರುಷವ ಕಾಮಿಸಿ ಮಾಡಿದರೆ ಪರುಷವಪ್ಪುದು,
ಆವುದನಾವುದ ಕಾಮಿಸಿದರೆ ಕಾಮಿಸಿದ ಫಲ ತಪ್ಪದು.
ಕಾಮಿಸದ ನಿಷ್ಕಾಮದಾಸೋಹ
ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ. ॥ ೧೨೩ ॥

೧೨೪

ಸುಖಶೀಲ ಲಿಂಗಧ್ಯಾನ, ಸಮಶೀಲ ಜಂಗಮಪ್ರೇಮ,
ಮಹಾಶೀಲವವರೆಂದಂತೆಯೆಂಬುದು.
ಈ ತ್ರಿವಿಧವನರಿವಡೆ ಕೂಡಲಚೆನ್ನಸಂಗನೆಂಬೆನು. ॥ ೧೨೪ ॥

೧೨೫

ಮನ ವಚನ ಕಾಯದಲ್ಲಿ ಆಸೆಯಿಲ್ಲದ ಶರಣ,
ಅರ್ಥ ಪ್ರಾಣ ಅಭಿಮಾನದಲ್ಲಿ ಲೋಭವಿಲ್ಲದ ಶರಣ,
ವಾಕ್ಕು ಪಾಣಿ ಪಾಯು ಪಾದ ಗುಹ್ಯವೆಂಬ ಕರ್ಮೇಂದ್ರಿಯಂಗಳನು
ಹೊದ್ದಲೀಯದ ಶರಣ,
ಲಿಂಗಜಂಗಮದ ಪ್ರಸಾದಸಾರಾಯ ಶರಣ,
ಕೂಡಲಚೆನ್ನಸಂಗ [ನ] ಅನುಭಾವಸಾರಾಯ ಶರಣ. ॥ ೧೨೫ ॥

೧೨೬

ಕಾಯದಿಂದ ಲಿಂಗದರುಶನ, ಕಾಯದಿಂದ ಜಂಗಮ ದರುಶನ,
ಕಾಯದಿಂದ ಪ್ರಸಾದಸಂಪತ್ತು.
ಕೂಡಲಚೆನ್ನಸಂಗಯ್ಯಾ
ಆ ಕಾಯದಲ್ಲಿ ನಿಮ್ಮುವ ಕಂಡೆನಯ್ಯಾ. ॥ ೧೨೬ ॥

೧೨೭

ಭೂಮಿ ನಷ್ಟವಾದರೆ ಜಲಕ್ಕಿಂಬಿಲ್ಲ, ಜಲ ನಷ್ಟವಾದರೆ ಇಂದ್ರಿಯಕ್ಕಿಂಬಿಲ್ಲ,
ಇಂದ್ರಿಯ ನಷ್ಟವಾದರೆ ಜಂಗಮಕ್ಕಿಂಬಿಲ್ಲ, ಜಂಗಮ ನಷ್ಟವಾದರೆ ಲಿಂಗಕ್ಕಿಂಬಿಲ್ಲ.
ಇದು ಕಾರಣ ಕರಣಾದಿಗಳಂ ಬಿಡದೆ ಆನು ವ್ರತಿಯೆಂಬವರ ತೋರಯ್ಯಾ
ಕೂಡಲಚೆನ್ನಸಂಗಮದೇವಾ. ॥ ೧೨೭ ॥

೧೨೮

ಮುಖಲಿಂಗದರುಶನ ಜಂಗಮದಲ್ಲಿ, ಭಾವಲಿಂಗದರುಶನ ಮನದಲ್ಲಿ,
ಸ್ವಯಲಿಂಗದರುಶನ ಕಾಯದಲ್ಲಿ,
ಈ ತ್ರಿವಿಧಲಿಂಗದರುಶನ ಜ್ಞಾನದಲ್ಲಿ.
ಇದು ಕಾರಣ–ಕೂಡಲಚೆನ್ನಸಂಗನಲ್ಲಿ, ಜಂಗಮಲಿಂಗದರುಶನ
ಬಸವಣ್ಣಂಗಲ್ಲದೆ ಉಳಿದವರಾರಿಗೆಯೂ ಅಳವಡದು. ॥ ೧೨೮ ॥

೧೨೯

ಬಸವ ಪೈದೊಡಿಗೆ, ಸಂಗಯ್ಯ ಮದುವಣಿಗ
ವಸುಧೆಯ ಭಕ್ತರೆಲ್ಲರು ಮದವಳಿಗೆಯರಾಗಿ
ಅಂಗವಿಸಿಂಭೋ! ಶುದ್ಧಶಿವಾಚಾರಿಗಳೆಲ್ಲ.
ಕೂಡಲಚೆನ್ನಸಂಗಯ್ಯನು ಒಬ್ಬನೆ ಅಚಳ,
ನಾವೆಲ್ಲರೂ ನಿತ್ಯಮುತ್ತೈದೆಯರಾಗಿ. ॥ ೧೨೯ ॥

೧೩೦

ಶಿಲೆಯೆಂಬ ಪೂರ್ವಾಶ್ರಯವ ಕಳೆದು ಲಿಂಗವೆಂದ,
ನರನೆಂಬ ಪೂರ್ವಾಶ್ರಯವ ಕಳೆದು ಗುರುವೆಂದ,
ಜಾತಿಸೂತಕದ ಪೂರ್ವಾಶ್ರಯವ ಕಳೆದು ಜಂಗಮವೆಂದ,

ಎಂಜಲೆಂಬ ಪೂರ್ವಾಶ್ರಯವ ಕಳೆದು ಪ್ರಸಾದವೆಂದ.
ಇಂತೀ ಚತುರ್ವಿಧ ಪೂರ್ವಾಶ್ರಯವ ಕಳೆಯಬಲ್ಲನಾಗಿ
ಕೂಡಲಚೆನ್ನಸಂಗಯ್ಯನಲ್ಲಿ ಶರಣ ಸ್ವತಂತ್ರ, || ೧೩೦ ||

೧೩೧

ಅರ್ಥಪ್ರಾಣ ಅಭಿಮಾನದಲ್ಲಿ ಆನು ಶರಣನೆಂಬನ್ನಕ್ಕ ಅಭೇದ್ಯವಯ್ಯಾ.
ಲಿಂಗ ಜಂಗಮು ಶರಣು, ಶಿವಸಂಗನಬಸವ ಶರಣಯ್ಯಾ.
ಕೂಡಲಚೆನ್ನಸಂಗನು ಶರಣಸತಿ ಲಿಂಗಪತಿಪೂರ್ಣನಾಗಿ. || ೧೩೧ ||

೧೩೨

ಧರೆಯಗಲದ ಜಲಕೆ ಕರಿಯ ನೂಲಿನ ಜಾಲ,
ಕರಿಯ ಕಬ್ಬಿಲ ಹೊಕ್ಕು ಸೇದುತಿರಲು, ಕರದ ಕೈಯಲಿ ಗಾಣ.
ಸೂಕ್ಷ್ಮ ವಿಚಾರದಲ್ಲಿ,
ಅರಿದುಕೊಂಬಡೆ ಗಾಣ ಹೊರಗಾಯಿತ್ತು.
ಹರಿವ ಜಲಗಳು ಬತ್ತಿ ಕೆಲಕೆ ಉಷ್ಣವು ತೋರಿ
ಬಿಳಿಯ ಮಳಲಲ್ಲಿಗಲ್ಲಿಗೆ ಕಾಣಬರಲು,
ಕರಿಯ ಕಬ್ಬಿಲ ಬಂದು, ಉರಿಯ ಮೆಟ್ಟಿ ನೋಡಿ ಕಾಣದೆ,
ಜಾಲವ ಹೊತ್ತುಕೊಂಡು ಹೋಹಾಗ,
ಹೊಂಗರಿಯ ಬಿಲ್ಲಕೋಲನೊಂದು ಕೈಯಲಿ ಹಿಡಿದು,
ಒಂದು ಕೈಯಲಿ ಬಿದಿರಕ್ಕಿವಿಡಿದು,
ದಂಗಟನ ಪುಣುಜೆಯರು ಮುಂದೆ ಬಂದಾಡಲು,
ಕಂಗಳ ಮುತ್ತು ಸಡಿಲಿ ಪಾದದ ಮೇಲೆ ಬೀಳಲು,
ಅಂಗಯ್ಯವೊಳಗೊಂದು ಅರಿದಲೆ ಮೂಡಿರಲು
ದಂಗಟನ ಹೊತ್ತುಕೊಂಡಾಡುವಾಗಲ್ಲಿ
ಶೃಂಗಾರ ಸಯವಾಯಿತ್ತು, ಕೂಡಲಚೆನ್ನಸಂಗಯ್ಯನಲ್ಲಿ
ಭಕ್ತ್ಯಂಗನೆಯ ನಾವು ಕಂಡೆವಯ್ಯಾ. || ೧೩೨ ||

## ಭಕ್ತನ ಐಕ್ಯಸ್ಥಲ

೧೩೩

ಒಡಲಿಲ್ಲದ ಗುರುವಿಂಗೆ, ಒಡಲಿಲ್ಲದ ಭಕ್ತಂಗೆ,
ಒಡಲಿಲ್ಲದ ಪ್ರಸಾದಸಂಬಂಧಿಗೆ,
ಕೂಡಲಚೆನ್ನಸಂಗಯ್ಯ ನಿಂದ ನಿಲುವಿಂಗೆ,
ಹಿಂದಿಲ್ಲ ಮುಂದಿಲ್ಲ ಒಂದೂ ಇಲ್ಲ ಶರಣಂಗೆ. || ೧೩೩ ||

೧೩೪

ಗುರುಲಿಂಗಜಂಗಮು ಸನುಮತವಾದ ಕ್ರೀಯನು ಅಹುದಾಗದೆಂಬ ಸಂದೇಹಬೇಡ.
ಕ್ರೀವಿಡಿದು ತನುವ ಗಮಿಸೂದು, ಅರಿವುವಿಡಿದು ಮನವಗಮಿಸೂದು.
ಕ್ರಿಯಾದ್ವೈತಂ ನ ಕರ್ತವ್ಯಂ ಭಾವಾದ್ವೈತಂ ಸಮಾಚರೇತ್|
ಕ್ರಿಯಾಂ ನಿರ್ವಹತೇ ಯಸ್ತು ಭಾವಶುದ್ಧಂ ತು ಶಾಂಕರಿ||
ಎಂದುದಾಗಿ ಅನುಭಾವದಿಂದ ಸಕಳೇಂದ್ರಿಯಂಗಳು
ಕೂಡಲಚೆನ್ನಸಂಗಯ್ಯನಲ್ಲಿಯೆ ತದ್ರೂಪು. || ೧೩೪ ||

೧೩೫

ಮಾಟವಿಲ್ಲದ ಕೂಟವವೇಕೋ? ಕೂಟವಿಲ್ಲದ ಮಾಟವದೇಕೋ?
ಮಾಟಕೂಟವೆರಡರನುವರಿಯಬೇಕು.
ಸಟೆಯಿಲ್ಲದೆ ದಿಟಘಟಿಸಿ ಸಯವಾಗಬೇಕು.
ಕೂಟಮಾಟವೆರಡರ ಅನುಮತದಿಂದವೆ ಭಕ್ತಿ.
ಇವೇ [ಕೂಟ] ಕೂಡಲಚೆನ್ನಸಂಗಯ್ಯಾ ನಿಮ್ಮಲ್ಲಿ. || ೧೩೫ ||

೧೩೬

ಸೂತಕವಿರಹಿತ ಲಿಂಗಾರಾಧನೆ ತನುಮೂರ್ತಿಯಾದಲ್ಲಿ ಲಿಂಗೈಕ್ಯ.
ಪಾತಕವಿರಹಿತ ಜಂಗಮಾರಾಧನೆ ಮನಮೂರ್ತಿಯಾದಲ್ಲಿ ಲಿಂಗೈಕ್ಯ.
ಸೂತಕ ಪಾತಕವೆಂಬ ಉಭಯ ಸಂಗ ಹಿಂಗಿತ್ತು,
ಕೂಡಲಚೆನ್ನಸಂಗಾ ನಿಮ್ಮ ಲಿಂಗೈಕ್ಯಂಗೆ. || ೧೩೬ ||

೧೩೭

ಅತಿಬಳ ಪ್ರಬಳಿತ ಜಂಗಮ ಸಂಸಾರಿಯಾದ ಕಾರಣ,
ಭಕ್ತ ನಿಸ್ಸಂಸಾರಿಯಾದ ಕಾರಣ,
ಈ ಸಂಸಾರಿಯ ವೈರಾಗ್ಯವೂ ಆ ಸಂಸಾರಿಯ ನಿಷ್ಠೆಯೂ
ಒಂದಾದರೆ ತೆರಹಿಲ್ಲ ಕೂಡಲಚೆನ್ನಸಂಗಾ ನಿಮ್ಮಲ್ಲಿ. ॥ ೧೩೭ ॥

೧೩೮

"ಅಕಾಯೋ ಭಕ್ತಕಾಯಶ್ಚ ಮಮಕಾಯಸ್ತು ಭಕ್ತಿಮಾನ್"
ಎಂಬ ಶ್ರುತಿಯನೋದುವರೆ ಎಂತು ಭಕ್ತಂಗೆ?
"ಮಹಂತೋ ಲಿಂಗರೂಪೇಣ ಮಹಂತೋ ಜಂಗಮಸ್ತಥಾ"
ಎಂಬ ಶ್ರುತಿಯನೋದುವರೆ ಎಂತು ಜಂಗಮಕ್ಕೆ?
ಇಂತೆರಡೊಂದಾದರೆ ತೆರಹಿಲ್ಲ
ಕೂಡಲಚೆನ್ನಸಂಗಾ ನಿಮ್ಮಲ್ಲಿ. ॥ ೧೩೮ ॥

೧೩೯

ವ್ಯವಹಾರವ ಮುಂದುಗೊಂಡಿದ್ದೆನಯ್ಯಾ,
ಆನು ವ್ಯವಹಾರವ ಮುಂದುಗೊಂಡಿದ್ದೆನಯ್ಯಾ,
ಮೊದಲುಗೆಡದೆ ಹರದೆನಗಾಯಿತಯ್ಯಾ.
ಭವಗೇಡಿ ಲಿಂಗೈಕ್ಯರ ಒಡನಾಡಿ ಅವರ ಪರಿ ಎನ್ನ ಹತ್ತಿತಯ್ಯಾ.
ಕೂಡಲಚೆನ್ನಸಂಗಯ್ಯಾ
ಭಕ್ತರೆನ್ನ ಮರುಳು ಮಾಡಿತ್ತನೇನೆಂಬೆ! ॥ ೧೩೯ ॥



## ಮಾಹೇಶ್ವರನ ಜ್ಞಾನಿಸ್ಥಲ

೧೪೦

ಜಗದ ಕರ್ತ ಜಗದ ಸ್ಥಿತಿ–ಗತಿಯ ನಡೆಸುವ ಪರಿಯನು
ಆವಂಗೆ ಆವಂಗೆಯೂ ಅರಿಯಬಾರದು.
ಅಕಟಕಟಾ ದೇವದಾನವ ಮಾನವರೆಲ್ಲ ಅಹಂ ಎಂದು ಅಹಂಕಾರದಿ ಕೆಟ್ಟರಲ್ಲ.
ಆ ಮಹಾಕರ್ತನು ತನ್ನ ಶಕ್ತಿಯ ವಿನೋದಕ್ಕೆ ರಚಿಸಿದ ರಚನೆ:
ಮೂವರು ಪ್ರಧಾನರು, ಒಂಬತ್ತು ಪ್ರಜೆ ಪಸಾಯಿತರು,
ಪದಿನಾಲ್ಕು ನಿಯೋಗಿಗಳು, ಇಪ್ಪತ್ತೇಳು ಅನುಚರರು,
ಅಷ್ಟತನುಗಳಿಂದಾದ ಜಗಸ್ಥಿತಿಯ ನಡೆಸುವರು.
ಆ ಮಹಾಕರ್ತನು ಕಟ್ಟಿದ ಕಟ್ಟಳೆಯಲು, ಆಯುಷ್ಯ
ನಿಮಿಷ ಮಾತ್ರ ಹೆಚ್ಚಿಸಬಾರದು, ಕುಂದಿಸಬಾರದು ನೋಡಾ.
ಭಾಷೆಯಲಿ ಅಣುಮಾತ್ರವ ಹೆಚ್ಚಿಸಬಾರದು, ಕುಂದಿಸಬಾರದು ನೋಡಾ.
ಇದನಾವಂಗೆಯೂ ಅರಿಯಬಾರದು.
ಇದ ಬಲ್ಲರೆ ಎಮ್ಮ ಶರಣರೆ ಬಲ್ಲರು.
ಕೂಡಲಚೆನ್ನಸಂಗಮದೇವಾ. ॥ ೧ ॥

೧೪೧

ಭವಿ ಮಾಡಲಿಕೆ ಪೃಥ್ವಿಯಾಯಿತ್ತು, [ಭವಿ ಮಾಡಲಿಕೆ ಅಪ್ಪುವಾಯಿತ್ತು
ಭವಿ ಮಾಡಲಿಕೆ ತೇಜವಾಯಿತ್ತು, ಭವಿ ಮಾಡಲಿಕೆ ವಾಯುವಾಯಿತ್ತು.]
ಭವಿ ಮಾಡಲಿಕೆ ಆಕಾಶವಾಯಿತ್ತು, ಭವಿ ಮಾಡಲಿಕೆ ಸೂರ್ಯಚಂದ್ರರಾದರು.
[ಭವಿ ಮಾಡಲಿಕೆ] ವಿಷ್ಣುವಾದ ರುದ್ರನಾದ ದೇವರ್ಕಳಾದರು.
ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ
ಭವಿಯಿಂದಾಯಿತ್ತು ಸಕಲ ಜಗವೆಲ್ಲ. ॥ ೨ ॥

೧೪೨

ಶಿವನಲ್ಲದೆ ಮತ್ತೆ ದೈವವಿಲ್ಲೆಂಬುದಕ್ಕೆ ಶ್ರುತಿ:
"ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ", ಎನುತ
ಕೂಡಲಚೆನ್ನಸಂಗಯ್ಯನ ವೇದಿಸಿಹೆವೆನುತ ವೇದಂಗಳಾದವು. ॥ ೩ ॥

೧೪೩

"ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ"
ಎಂಬ ಶ್ರುತಿಯನರಿದು ಮತ್ತೆ ದೈವವುಂಟೆಂಬ ವಿಪ್ರರು ನೀವು ಕೇಳಿ[ರೊ]
"ಓಂ ನಿಧನಪತಯೇ ನಮಃ ಓಂ ನಿಧನಪತಾಂತಿಕಾಯ ನಮಃ,
ಓಂ ಊರ್ಧ್ವಾಯ ನಮಃ ಓಂ ಊರ್ಧ್ವ ಲಿಂಗಾಯ ನಮಃ
ಓಂ ಹಿರಣ್ಯಾಯ ನಮಃ ಓಂ ಹಿರಣ್ಯಲಿಂಗಾಯ ನಮಃ
ಓಂ ಸುವರ್ಣಾಯ ನಮಃ ಓಂ ಸುವರ್ಣಲಿಂಗಾಯ ನಮಃ
ಓಂ ದಿವ್ಯಾಯ ನಮಃ ಓಂ ದಿವ್ಯಲಿಂಗಾಯ ನಮಃ
ಎಂದುದಾಗಿ
ಏತತ್ ಸೋಮಸ್ಯ ಸೂರ್ಯಸ್ಯ ಸರ್ವಲಿಂಗಂ ಸ್ಥಾಪಯೇತ್।
ಇತಿ ಓಂ ಪಾಣಿಮಂತ್ರ ಪವಿತ್ರಂ" ಎಂದುದಾಗಿ—
ಇದನರಿದು ಮತ್ತೆ ದೈವವುಂಟೆಂಬ ದ್ವಿಜರೆಲ್ಲರೂ
ಭ್ರಮಿತರು ಕೂಡಲಚೆನ್ನಸಂಗಮದೇವಾ. ॥ ೪ ॥

೧೪೪

ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ।
ಶಿವಸ್ಯ ಹೃದಯಂ ವಿಷ್ಣುರ್ವಿಷ್ಣೋಶ್ಚ ಹೃದಯಂ ಶಿವಃ॥
ಯಥಾ ಶಿವಮಯೋ ವಿಷ್ಣುರೇವಂ ವಿಷ್ಣುಮಯಃ ಶಿವಃ।
ಇಂತೆಂಬ ಪಾತಕರು ನೀವು ಕೇಳಿಭೋ
ಓಂ ಭೂಃ ಓಂ ಭುವಃ ಓಂ ಸ್ವಃ ಓಂ ಮಹಃ।
ಓಂ ಜನಃ ಓಂ ತಪಃ ಓಂ ಸತ್ಯಂ ಓಂ ತತ್ಸವಿತುರ್ವರೇಣ್ಯಂ॥
ಭರ್ಗೋದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್।
ಇಂತೆಂಬ ಶ್ರುತಿಯೊಳಗೆ ಆ ಶಬ್ದವುಳ್ಳರೆ ತೋರಿರೇ.
ಹಿಂದನರಿಯರು, ಮುಂದ ವಿಚಾರಿಸರು.
ಇಂತಪ್ಪ ಅಂತ್ಯಜರನೇನೆಂಬೆ ಕೂಡಲಚೆನ್ನಸಂಗಮದೇವಾ. ॥ ೫ ॥

೧೪೫

ಅನಲನೇ ಗುರುವೆಂದು ಇದಿರಾಸನವೇರಿ
ಭಾಷೆಗೆ ತಪ್ಪುವ ಪಾತಕರ ವಿಧಿಯೆಂತೊ?
"ವರ್ಣಾನಾಂ ಬ್ರಾಹ್ಮಣೋ ಗುರುಃ"
ಎಂದು ವರ್ಣವನರಸುವ ಕುನ್ನಿಗಳ ವಿಧಿಯೆಂತೊ?
"ಓಂ ಭೂಃ ಓಂ ಭುವಃ ಓಂ ಸ್ವಃ ಓಂ ಮಹಃ।

ಓಂ ಜನಃ ಓಂ ತಪಃ ಓಂ ಸತ್ಯಂ ಓಂ ತತ್ಸವಿತುರ್ವರೇಣ್ಯಂ॥
ಭರ್ಗೋದೇವಾ" ಎಂದು [ಆದಿಯ] ಮರೆದವರ ಕೂಡಲಚೆನ್ನಸಂಗಯ್ಯನು
ಇರಿದಿರಿದು ಸುಟ್ಟು ಮರೆವನಲ್ಲದೆ ಮೆರೆವನೆ? ॥ ೬ ॥

೧೪೬

ಭೈರವನನಾರಾಧಿಸಿ ಬಾಹಿರವೋದರಯ್ಯಾ,
ಮೈಲಾರನನಾರಾಧಿಸಿ ಕುರುಳು ಬೆರಳ ಕಡಿಸಿಕೊಂಡು ನಾಯಾಗಿ ಬಗಳುತಿಪ್ಪರು,
ಜಿನನನಾರಾಧಿಸಿ ಲಜ್ಜೆದೊರೆದರು ನೋಡಾ,
ನಮ್ಮ ಕೂಡಲಚೆನ್ನಸಂಗಯ್ಯನನಾರಾಧಿಸಿ ದೇವಾ,
ಭಕ್ತಯೆಂದೆನಿಸಿಕೊಂಬರು ನೋಡಯ್ಯಾ. ॥ ೭ ॥

೧೪೭

ಉಣ್ಣೆ ಕೆಚ್ಚಲ ಹತ್ತಿದ್ದರೇನು ಕ್ಷೀರವದಕುಂಟೆ?
ತಗಣೆ ತನುವ ಹತ್ತಿದ್ದರೇನು ಅಂಗನೆಯರ ಸುರತದ ಸುಖವ ಬಲ್ಲುವೆ?
ಗಿಳಿ ಓದಿದರೇನು ಲಿಂಗವೇದಿಯಪ್ಪುದ?
ಹೇಸರ ಏಸು ದೊಡ್ಡದಾದರೇನು ತೇಜಿಯಾಗಬಲ್ಲುವೆ?
ತತ್ವದ ಮಾತು ಅಂಗಸಂಗಿಗಳಿಗೇಕೆ? ಭರ್ಗನ ಸಂಗ ಭವಿಗೇಕೆ?
ಪಚ್ಚೆಯ ಪವಳದ ಗುಡಿಗೂಡಾರವೇಕೆ ಗೂಗೆಗೆ?
ಗವುಡರ ಮನೆಯ ತೊತ್ತಿಂಗೆ ಬಲ್ಲಹನಾಣೆಯೇಕೆ?
ಕೀಳು ಕುಲದೈವಕ್ಕೆರಗಿ ನರಕಕ್ಕಿಳಿವ ದುರಾಚಾರಿಗಳಿಗೆ
ಶಿವಾಚಾರವಳವಡುವುದೆ, ಕೂಡಲಚೆನ್ನಸಂಗಮದೇವಾ? ॥ ೮ ॥

೧೪೮

ಇತಿಹಾಸೇಷು ವೇದೇಷು ಪುರಾಣೇಷು ಪುರಾತನೈಃ।
ಮಹರ್ಷಿಭಿರ್ಮಹಾದೇವೋ ಮಹನೀಯಃ ಪ್ರತಿಷ್ಠಿತಃ॥
ಇಂತೆಂದುದಾಗಿ ಪುರಾತನರಲ್ಲಿ ಆದ್ಯಂತರಾಗಿದ್ದ ಮಹಾಋಷಿಗಳೆಲ್ಲರೂ
ರತ್ನ ಸುವರ್ಣ ರಜತ ತಾಮ್ರ ಚಂದ್ರಕಾಂತ ಸ್ಫಟಿಕ ಪವಳ ಲಿಂಗಂಗಳನಾರಾಧಿಸಿದರು.
ಅಗಸ್ತ್ಯ ದಧೀಚಿ ಕಂಕದ ಬಾಣಾಸುರ ಪುರಂದರ ಬ್ರಹ್ಮ ವಿಷ್ಣು ದೂರ್ವಾಸ
ನಂದಿಕೇಶ್ವರ ಸ್ಕಂದ ಭೃಂಗಿರಿಟಿ ವೀರಭದ್ರಾದಿಗಣಂಗಳೆಲ್ಲರೂ
ರುದ್ರೇಣ ದೀಕ್ಷಿತೋ ಭೂತ್ವಾ ಸ್ಕಂದಃ ಶಿವಸಮುದ್ಭವಃ।
ಶಿವಾಚಾರ ರಹಸ್ಯಸ್ಯ ಪಾತ್ರತಾಂ ಪರಮಾಂ ಗತಃ॥ [ಇಂತೆಂದುದಾಗಿ]–

ಇದನರಿದು ಪರಶುರಾಮ ಪರಾಶರ ವಶಿಷ್ಠ ವಾಲ್ಮೀಕಿ
ಕಮಲಾಕರ ವಿಶ್ವಾಮಿತ್ರ ಮಹಾಮುನಿಗಳೆಲ್ಲರೂ
ಪಾಣಿನಿಶ್ಚ ಕಣಾದಶ್ಚ ಕಪಿಲೋ ಗೌತಮಾದಯಃ।
ಪ್ರಸಾದಸೇವನಾದ್ಧ್ಯಾನಾದರ್ಚನಾದ್ಧಾರಣಾದಪಿ॥ ಇಂತೆಂದುದಾಗಿ
ಇದು ಕಾರಣ ಕೂಡಲಚೆನ್ನಸಂಗಮದೇವರನಾರಾಧಿಸಿ,
ಪ್ರಸಾದ ಪಾದೋದಕವ ಕೊಂಡು ಅತಿಶುದ್ಧರಾದರು
ಎಲ್ಲಾ ದೇವರುಗಳು, ಎಲ್ಲಾ ಋಷಿಜನಂಗಳು. ॥ ೯ ॥

೧೪೯

'ಬ್ರಹ್ಮಣೇಚರ ಬ್ರಹ್ಮಣಾ' ಎಂದೆಂಬಲ್ಲಿ ಬ್ರಹ್ಮವೆಂದೆಂಬುದು
ಎಮ್ಮ ಶಿವಲಿಂಗ ಕಾಣಿರೋ.
'ಓಂ ತಸ್ಯ ತೃತೀಯಂ ಜನ್ಮೇತಿ' ಎಂಬುದಾಗಿ ವಿಪ್ರ ದ್ವಿಜನಲ್ಲ.
'ದ್ವಿಜಸ್ತಸ್ಮೈ ಸಮರ್ಪ್ಯತೇ ಶೈವಮಂತ್ರಂ ಪ್ರಶಸ್ತಂ' ಎಂಬುದಾಗಿ ವಿಪ್ರ ದ್ವಿಜನಲ್ಲ.
ತತ್ಸರ್ವೇ ಯೇ ನಿಜಾಃ ಪ್ರಾಣಾ ಜಂತೂನಾಂ ಸಮಜಂತುಷು।
ದ್ವಿತೀಯೇ ಮಂತ್ರತಾ ಶೈವೇऽದ್ವಿತೀಯ ಇತ್ಯುಚ್ಯತೇ ಬುಧೈಃ॥
ಎಂದುದಾಗಿ ವಿಪ್ರ ದ್ವಿಜನಲ್ಲ.
ಇದು ಕಾರಣ ಕೂಡಲಚೆನ್ನಸಂಗನ ಶರಣರೇ ವಿಪ್ರೋತ್ತಮರು. ॥ ೧೦ ॥

೧೫೦

ಹಾರುವನ ಭಕ್ತಿ ಪ್ರಾಣ ಹಾರುವನ್ನಕ್ಕ, ಪ್ರಾಣ ಹಾರಿದಡೆ ಭಕ್ತಿ ಹುರುಳಿಲ್ಲ.
ನೋಡಲಿಲ್ಲ ನುಡಿಸಲಿಲ್ಲ ಬಿಚ್ಚಿದಡತ್ತಿಯ ಹಣ್ಣು.
ಸಂಪಾದಿಸಲಿಲ್ಲ ಪ್ರಾಣಲಿಂಗ ಪ್ರಸಾದವ ಮುಂದಿಟ್ಟುಕೊಂಡು.
"ಪ್ರಾಣಾಯ ಸ್ವಾಹಾ ವ್ಯಾನಾಯ ಸ್ವಾಹಾ
ಅಪಾನಾಯ ಸ್ವಾಹಾ ಉದಾನಾಯ ಸ್ವಾಹಾ ಸಮಾನಾಯ ಸ್ವಾಹಾ"
ಎಂಬ ನರಕಿಗಳ ಮೆಚ್ಚ ಕೂಡಲಚೆನ್ನಸಂಗಮದೇವ. ॥ ೧೧ ॥

೧೫೧

ದ್ವಿಜರು ಪ್ರತಿಸಾಂವತ್ಸರಿಕ ಶ್ರಾದ್ಧವ ಮಾಡುವಲ್ಲಿ,
"ವಿಶ್ವೇದೇವಾನುಜ್ಞಯಾ ಪಿತೃಕಾರ್ಯೇ ಪ್ರವರ್ತಯೇತ್"
ಎಂಬ ವಚನವಿಡಿದು
"ಗಯಾಯಾಂ ಶ್ರೀರುದ್ರಪಾದೇ ದತ್ತಮಸ್ತು"
ಎಂದು ಪಿಂಡವನಿಟ್ಟು,

ವಸುರುದ್ರಾರ್ಕರೂಪೇಣ ಮಧ್ಯ ಪಿಂಡಸ್ತು ಪುತ್ರತಃ।
ವೇದೋಕ್ತರುದ್ರನಿರ್ಮಾಲ್ಯಂ ಕಿಂ ಪುನರ್ಬಹುಭಾಷಣೇ॥
ಎಂದು ರುದ್ರಪಿಂಡದಿಂ ಜನಿಸಿ
"ಜನ್ಮನಾ ಜಾಯತೇ ಶೂದ್ರಃ" ಎನಿಸಿಹನೆಂಬ ಶ್ರುತಿಯ ತೊಡೆದು,
ಸಾವಿತ್ರ ಪ್ರದಾನ ಗಾಯತ್ರೀ ಉಪದೇಶವಂ ಮಾಡಿ,
"ಮಾನಸ್ತೋಕೇ ತನಯೇ" ಎಂಬ ಮಂತ್ರದಿಂ
"ತ್ರಿಯಾಯುಷಂ ಜಮದಗ್ನಿಃ" ಎಂದು ವಿಭೂತಿಯನಿಟ್ಟು,
ರುದ್ರಮುಖದಿಂದ ಬ್ರಹ್ಮರಾಗಿ ಶಿವನಿರ್ಮಾಲ್ಯ ಪಾದೋದಕ ಪ್ರಸಾದಮಂ
ಧರಿಸಲಾಗದೆಂಬ ಶ್ರುತಿಬಾಹ್ಯ ಶಾಪಹತರನೇನೆಂಬೆನಯ್ಯಾ
ಕೂಡಲಚೆನ್ನಸಂಗಮದೇವಾ. ॥ ೧೨ ॥

೧೫೨

ಆದಿ ಸಂಬಂಧವಂ ಬಿಟ್ಟು ಅಪರ ಸಂಬಂಧವಂ ಹಿಡಿದು
ಅಕ್ಕಟಾ ಕೆಟ್ಟರಲ್ಲಾ ದ್ವಿಜರೆಲ್ಲರು.
ಸಪ್ತವ್ಯಾಧರುಗಳು ದಶಾರಣ್ಯದಲಿ ಪಿತೃಸಂಕಲ್ಪವ ಮಾಡಿದರೆಂಬುದ ಕೇಳಿ
ಅಕ್ಕಟಾ ಕೆಟ್ಟರಲ್ಲಾ ದ್ವಿಜರೆಲ್ಲರು.
ಸಪ್ತವ್ಯಾಧಾ ದಶಾರ್ಣೇಷು ಮೃಗಾಃ ಕಾಲಂಜರೇ ಗಿರೌ।
ಚಕ್ರವಾಕಾಸ್ಸರದ್ವೀಪೇ ಹಂಸಾಃ ಸರಸಿ ಮಾನಸೇ॥
ಯೇ ಸ್ಮ ಜಾತಾಃ ಕುರುಕ್ಷೇತ್ರೇ ಬ್ರಾಹ್ಮಣಾ ವೇದಪಾರಗಾಃ।
ಪ್ರಸ್ಥಿತಾ ದೀರ್ಘಮಧ್ವಾನಂ ಯೂಯಂ ತೇ ಭ್ಯೋಽವಸೀದಥ॥
ಅಮೂರ್ತಾನಾಂ ಚ ಮೂರ್ತಾನಾಂ ಪಿತೃಣಾಂ ದೀಪ್ತತೇಜಸಾಂ।
ನಮಸ್ಯಾಮಿ ಸದಾ ತೇಷಾಂ ಧ್ಯಾಯಿನಾಂ ಯೋಗಚಕ್ಷುಷಾಂ॥
ಚತುರ್ಭಿಶ್ಚ ಚತುರ್ಭಿಶ್ಚ ದ್ವಾಭ್ಯಾಂ ಪಂಚಭಿರೇವ ಚ।
ಹೂಯತೇ ಚ ಪುನರ್ದ್ವಾಭ್ಯಾಂ ಸಮೇ ವಿಷ್ಣುಃ ಪ್ರಸೀದತು॥
ಇದು ಕಾರಣ ಆದಿ ಸಂಬಂಧವಂ ಬಿಟ್ಟು
ಅಪರ ಸಂಬಂಧವಂ ಹೊದ್ದಿದ ದ್ವಿಜರೆಲ್ಲರೂ
ಬೂದಿಯೊಳಗೆ ಹೋಮವ ಬೇಳಿದಂತಾದರಯ್ಯಾ
ಕೂಡಲಚೆನ್ನಸಂಗಮದೇವಾ. ॥ ೧೩ ॥

೧೫೩

ಶ್ರುತಿಸಾಕ್ಷಿಯಾದ ಸಮ್ಯಕ್‌ಗುಣಂಗಳಂ ಬೊಮ್ಮವೆಂಬ,
[ಸಂಪತ್ತೆಂಬ] ಬ್ರಹ್ಮವಿತ್ತುಗಳು ನೀವು ಕೇಳಿ ಭೋ!
ಓಂ ಪೃಥ್ವೀತೇ ಪಾತ್ರಂ ದ್ಯೌರಪಿಧಾನಂ

ಬ್ರಾಹ್ಮಣಸ್ತ್ವಾಂ ಮುಖೇ ಅಮೃತಂ ಜುಹೋಮಿ,
ಬ್ರಾಹ್ಮಣಂ ತ್ವಾ ವಿದ್ಯಾವತಾಂ ಪ್ರಾಣಾಪಾನಯೋರ್ಜುಹೋಮಿ,
ಅಕ್ಷತಮಸಿ ಮಾಮಕ್ಷೇಷ್ಠಾಃ ಅಹಂ ಅಸ್ಮಿನ್ ಲೋಕೇ||
ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ|
ಸಮೂಳ್ಹಮಸ್ಯ ಪಾಂಸುರೇ ಶ್ರೀ ವಿಷ್ಣೋ ಕವ್ಯಂ ರಕ್ಷಸ್ವ||
ಎಂದುದು ವೇದ.
ಆ ವೇದವನೋದಿ ಅರ್ತಿಯಲ್ಲಿ ಸುರೆಮಾಂಸವ [ಹೊಲಸ] ತಿಂಬ
ದ್ವಿಜರ ಮೆಚ್ಚುವರೆ ಕೂಡಲಚೆನ್ನಸಂಗನ ಶರಣರು? || ೧೪ ||

೧೫೪

ಹಣವಕೊಟ್ಟು ಹಾದರವನಾಡುವವದರಿಂದ
ತಾರವ ಕೊಟ್ಟು ಸೂಳೆಗೆಯ್ಯಬಾರದೆ?
ಧರ್ಮವ ಮಾಡುವಲ್ಲಿ ಕರ್ಮವುಂಟೆ?
ಧರ್ಮ ಕರ್ಮದ ಭೇದವನರಿದು ಮಾಡಲರಿಯರು.
ಅಡಗುಗಡಿವಂಗೆ, ಸುರೆಯ ಕುಡಿವಂಗೆ ಕೊಟ್ಟರೆ ಅಫಲ ತಪ್ಪದು
ಕೂಡಲಚೆನ್ನಸಂಗಯ್ಯಾ. || ೧೫ ||

೧೫೫

ಅನ್ನಪಾನ ಐಶ್ವರ್ಯಪಾನ ವೇಶ್ಯಾಪಾನ, ಅಂಗಭಂಗಿ ಮನಭಂಗಿ ಕಾಮಭಂಗಿ.
ತ್ರಿಭಂಗಿ, ತ್ರಿಸುರೆಯ ಕುಡಿದವರು
ನಿಮ್ಮ ನಿಜವನೆತ್ತಬಲ್ಲರು? ಕೂಡಲಚೆನ್ನಸಂಗಮದೇವಾ. || ೧೬ ||

೧೫೬

ಮದ್ಯಪಾನಿಗೆ ಲಿಂಗಸಾಹಿತ್ಯವ ಮಾಡಿದಾತ
ಹಿಂಗದೆ ನರಕದಲಾಳುತ್ತಿಪ್ಪನು.
ಮಾಂಸಾಹಾರಿಗೆ ಲಿಂಗಸಾಹಿತ್ಯವ ಮಾಡಿದಾತನ
ವಂಶಕ್ಷಯವೆಂದುದು.
ಜೂಜುಗಾರಂಗೆ ಲಿಂಗಸಾಹಿತ್ಯವ ಮಾಡಿದಾತ
ರೌರವನರಕಕ್ಕೆ ಹೋಹನು.
ಸೂಳೆಗೆ ಲಿಂಗಸಾಹಿತ್ಯವ ಮಾಡಿದಾತ
ಏಳೇಳು ಜನ್ಮದಲ್ಲೂ ಶ್ವಾನನ ಗರ್ಭದಲ್ಲಿ ಬರುತಿಪ್ಪನು.
ಅಂಗಹೀನಂಗೆ ಲಿಂಗಸಾಹಿತ್ಯವ ಮಾಡಿದಾತ ಲಿಂಗದ್ರೋಹಿ,

ಆತನ ಮುಖವ ನೋಡಲಾಗದು.
ಮದ್ಯಪಾನೀ ಮಾಂಸಭಕ್ಷೀ ಶಿವದೀಕ್ಷಾವಿವರ್ಜಿತಃ|
ದ್ಯೂತೀ ವೇಶ್ಯಾಂಗಹೀನಶ್ಚ ತದ್ಗುರೋರ್ದರ್ಶನಂ ತ್ಯಜೇತ್||
ಇದು ಕಾರಣ ಕೂಡಲಚೆನ್ನಸಂಗನಲ್ಲಿ
ವಿಚಾರಿಸವೆ ಲಿಂಗವ ಕೊಟ್ಟ ಗುರುವಿಂಗೆ ನರಕ ತಪ್ಪದು. || ೧೭ ||

೧೫೭

ತನ್ನ ಮನೆಯು ಹೊಗದ ಗುರುವಿನ ಕೈಯಲಿ ಕಾರುಣ್ಯವ ಪಡೆವ ಶಿಷ್ಯ,
ತಾ ಹೊಗದ ಮನೆಯಲುಪದೇಶವ ಮಾಡುವ ಗುರು–
ನಾಮಧಾರಕ ಶಿಷ್ಯಾಣಾಂ ನಾಮಧಾರೀ ಗುರುಸ್ತಥಾ|
ಅಂಧಕೋಽಂಧಕರಾಸಕ್ತೋ ಭವೇತಾಂ ಪತಿತಾವುಭೌ||
ಇವರಿಬ್ಬರ ಭಕ್ತರೆಂದವರ ಕೂಡಲಚೆನ್ನಸಂಗಯ್ಯ
ನಾಯಕನರಕದೊಳಗಿಕ್ಕುವ. || ೧೮ ||

೧೫೮

ಪಿತನಾಚಾರವನುದ್ಧರಿಸುವಾತ ಪುತ್ರನಲ್ಲದೆ
ಗತಿಗೆಡಿಸುವಾತ ಪುತ್ರನಲ್ಲ.
ತಂದೆಯ ಅಂಗದ ಮೇಲಣ ಲಿಂಗವ ಹಿಂಗಿಸಿ
ಅವರ ಭೂತಪ್ರಾಣಿಯ ಮಾಡಿ ಕಳುಹಿದಾತ ಪುತ್ರನೆ? ಅಲ್ಲ,
ಅವ ದುರಾತ್ಮನು.
ತಂದೆಯ ಬರುಕಾಯವ ಮಾಡಿ ಭಕ್ತನಾದಾತ ಪುತ್ರನೇ? ಅಲ್ಲ,
ಅವ ಜ್ಞಾನಶೂನ್ಯನು.
ಇಲ್ಲಿ 'ಭೂನರಕಂ ವ್ರಜೇತ್' ಎಂಬ ಶ್ರುತಿಯ ಕೇಳಿ, ವಿಸ್ತರಿಸಿ ನೋಡಿ ನೋಡಿ,
ಕುಳ್ಳಿರಿಸಿ, ಅವನ ಭಕ್ತನ ಮಾಡಿದಾತನು ಪಂಚಮಹಾಪಾತಕ.
ಅಲ್ಲಿಗೆ ಹೋದಾತ ಭೂತಪ್ರಾಣಿ, ಭಕ್ತನಾದಾತ ಪ್ರೇತಲಿಂಗ ಸಂಸ್ಕಾರಿ,
ಭಕ್ತನ ಮಾಡಿದವರಿಗೆ ರೌರವನರಕ,
ಭೂತಲಿಂಗೇನ ಸಂಸ್ಕಾರೀ ಭೂತಪ್ರಾಣಿಷು ಜಾಯತೇ|
ಪ್ರಭಾತೇ ತನ್ಮುಖಂ ದೃಷ್ಟ್ವಾ ಕೋಟಿ ಜನ್ಮನಿ ಶೂಕರಃ||
ಎಂದುದಾಗಿ,– ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ
ತ್ರಿಜನಕೆ ತಪ್ಪದು ಅಘೋರನರಕ. || ೧೯ ||

೧೪೯

ತದ್ದಿನವ ಮಾಡುವ ಕ್ರೂರಕರ್ಮಿಯ ಮನೆಯಲ್ಲಿ
ಮದ್ಯ ಮಾಂಸವಲ್ಲದೆ ಲಿಂಗಕ್ಕೋಗರವಿಲ್ಲ.
ಹರಸಿಕೊಂಡು ಮಾಡುವ ಭಕ್ತನ ಮನೆಯಲು
ದಂಡಕ್ಕಿಕ್ಕುವುದಲ್ಲದೆ ಲಿಂಗಕ್ಕೋಗರವಿಲ್ಲ.
ವರುಷಕ್ಕೊಂದು ತಿಥಿಯೆಂದು ಕೂಟಕ್ಕಿಕ್ಕಲು
ಕೀರ್ತಿವಾರ್ತೆಗೆ ಸಲುವುದಲ್ಲದೆ ಲಿಂಗಕ್ಕೋಗರವಿಲ್ಲ.
ತದ್ದಿನಂ ದಿನದೋಷಂ ಸ್ಯಾತ್ ರಕ್ತಮಾಂಸ ಸುರಾನ್ವಿತಂ।
ಸ ಸಂಕಲ್ಪಂ ವಿಕಲ್ಪಂ ಚ ನರಕೇ ಕಾಲಮಕ್ಷಯಂ॥
ಈ ತ್ರಿವಿಧವಿಡಿದು ಮಾಡುವಾತ ಭಕ್ತನಲ್ಲ,
ಅಲ್ಲಿ ಹೊಕ್ಕು ಮಾಡಿಸಿಕೊಂಬವರು ಜಂಗಮವಲ್ಲ.
ಕೂಡಲಚೆನ್ನಸಂಗಯ್ಯಾ ಈ ತ್ರಿವಿಧವು ನರಕ್ಕೆ ಭಾಜನ. || ೨೦ ||

೧೫೦

ಓಲೆಯಕಾರ ಭಕ್ತನಾದರೆ ಮನದ ಕ್ರೋಧ ಬಿಡದು.
ಒಕ್ಕಲಿಗ ಭಕ್ತನಾದರೆ ಅವನ ಪೂರ್ವಾಶ್ರಯ ಬಿಡದು.
ಹಾರುವ ಭಕ್ತನಾದರೆ ಜಾತಿ ಸೂತಕ ಬಿಡದು.
ಬೆವಹಾರಿಯ ಭಕ್ತಿಯೊಂದು ಶಬ್ದದಲ್ಲಿ ಹೋಯಿತ್ತು.
ಅರಿಸಿನ ಭಕ್ತಿ ಅರಸಿ ನೋಡಲಿಲ್ಲ.
ಸೂಳೆಯ ಭಕ್ತಿ ಹದಿನೆಂಟು ಜಾತಿಯ ಎಂಜಲ ತಿಂದಿತ್ತು.
ಕೂಡಲಚೆನ್ನಸಂಗಯ್ಯ ಮಜ್ಜನಕ್ಕೆರೆವ ಭವಿಗಳನೇನೆಂಬೆ? || ೨೧ ||

೧೫೧

ದಾಸಿಯ ಸಂಗದಿಂದ ಮಜ್ಜನವಂತರಿಸಿತ್ತು.
ವೇಶಿಯ ಸಂಗದಿಂದ ಪ್ರಸಾದವಂತರಿಸಿತ್ತು.
ಪರಸ್ತ್ರೀಯ ಸಂಗದಿಂದ ದೇವರ ಕಾರುಣ್ಯವಂತರಿಸಿತ್ತು.
ಈ ತ್ರಿವಿಧ ನಾಸ್ತಿಯಾದಂಗಲ್ಲದೆ ಭಕ್ತಿಯಿಲ್ಲ
ಕೂಡಲಚೆನ್ನಸಂಗಮದೇವಾ. || ೨೨ ||

೧೫೨

ಭವಿವಿರಹಿತ ಮಜ್ಜನಕ್ಕೆರೆದವೆಂಬರು,
ಶ್ವಾನ ಮುಟ್ಟಿದ ಎಂಜಲ ಮನಮುಟ್ಟಿ ಉಣ್ಣೆವೆಂಬರು,

4333



ಭವಿಯಿಂದ ಕಷ್ಟವಲ್ಲಾ.
ಅನ್ಯದೈವವ ಪೂಜಿಸುವ ಸತಿ ಮನೆಯೊಳಗಿದ್ದರೆ ಶ್ವಾನನಿಂದ ಕಷ್ಟವಲ್ಲಾ.
ಭವಿಮಿಶ್ರವಾದ ಮನುಷ್ಯರು ಮನೆಯೊಳಗಿದ್ದರೆ ಶ್ವಾನನಿಂದ ಕಷ್ಟವಲ್ಲಾ.
ಶ್ವಾನ ಭವಿಗಳಿವೆಂಬರು, ಅವೆಲ್ಲಿಗೆಯೂ ಹೋಗವು.
ಶ್ವಾನ ಭವಿಗಳೆಂಬುಭಯವರ್ಗ ಕಳೆದಲ್ಲದೆ
ಕೂಡಲಚೆನ್ನಸಂಗನ ಹೊಂದಬಾರದು. || ೨೩ ||

೧೬೩

ಭವಿವಿರಹಿತ ಭಕ್ತನೆಂದೆಂಬರು, ಭವಿವಿರಹಿತ ಭಕ್ತನಾದ ಪರಿಯೆಂತೋ?
ಭವಿಪಾಕಂ ನಿವೇದ್ಯಂ ಸ್ಯಾತ್ ಬಂಧನಂ ಭವಿಸಂಗಿನಾಂ|
ಸರ್ವಲೋಕಸ್ತು ಉಚ್ಛಿಷ್ಟಂ ಸಂಸಾರೋ ಹಿ ತಟಾಕವತ್||
ಇದನರಿದು ಊರೆಲ್ಲಾ ಒಂದೇ ತಳಿಗೆಯಲುಂಡು
ಬೇರೆ ಬೇರೆ ಕೈತೊಳೆದಂತೆ ಕೂಡಲಚೆನ್ನಸಂಗಮದೇವಾ. || ೨೪ ||

೧೬೪

ಶಿವಮಂತ್ರ ಸಂಸ್ಕಾರವಿಲ್ಲದ ತನುಭವಿಗಳು ತನ್ನಲಿಂಗಕ್ಕೆ ಮಾಡುವನ್ನಕ್ಕ
ಭವಿಮಿಶ್ರವ ಕಳೆದೆವೆಂದೆಂತೆನಬಹುದು?
ಶಿವಸಂಸ್ಕಾರವಾಗಿ ಜಾತಿಸೂತಕ [ಜನನಸೂತಕ] ಪ್ರೇತಸೂತಕ ರಜಸ್ಸೂತಕ
ಎಂಜಲುಸೂತಕವೆಂಬ ಪಂಚಸೂತಕವುಳ್ಳ ಭವಿಗಳು
ತನ್ನ ಲಿಂಗಕ್ಕೆ ಮಾಡುವನ್ನಕ್ಕ ಭವಿಮಿಶ್ರವ ಕಳೆದೆವೆಂದೆಂತೆನಬಹುದು?
ತನುಭವಿಯ ಹಸ್ತವೆ ಪಂಚಮಹಾಪಾತಕ.
ಮನಭವಿಯ ಹಸ್ತವೆ ಅಘೋರನರಕ.
ಭವೀನಾಂ ಪಾಪದೃಷ್ಟೀನಾಂ ನ ಕಿಂಚಿತ್ಪರಮಂ ಪದಂ|
ಎಂಬುದನರಿದು ಇಂತಪ್ಪ ಭವಿಗಳನೊಳಗಿಟ್ಟುಕೊಂಡು
ಎನಗೆ ಭವಿಮಿಶ್ರವಿಲ್ಲೆಂಬ ಲಜ್ಜೆಗೆಟ್ಟ ದುರಾಚಾರಿಗಳ
ಸಜ್ಜನಸದ್ಭಕ್ತರು ಮೆಚ್ಚರು ಕೂಡಲಚೆನ್ನಸಂಗಮದೇವಾ. || ೨೫ ||

೧೬೫

ಸದ್ಭಕ್ತರ ಬಸುರಲ್ಲಿ ಹುಟ್ಟಿದ ಮಕ್ಕಳು ಭವಿಯನಾಚರಿಸಿದಡೆ
ಪಂಚಮಹಾಪಾತಕವೆಂದುದು ವಚನ.
ತಿಲಷೋಡಶ ಭಾಗಂ ಚ ತೃಣಾಗ್ರಾಂಬುಕಣೋಪಮಂ|
ಪಾದೋದಕಂ ಪ್ರಸಾದಾನ್ನಂ ನಾಶನಾನ್ನರಕಂ ವ್ರಜೇತ್|| ಎಂದುದಾಗಿ,

ಇದುಕಾರಣ ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣರಿಗೆ ಸಂತಾನ ಅಭಿವೃದ್ಧಿಯಾಗದಿರಲಿ. || ೨೬ ||

೧೬೭

ಭವಿಪಾಕವನುಂಡರೆ ಪ್ರಥಮ ಪಾತಕ,
ಪರಧನ ಪರಸತಿಗಳುಪಿದರೆರಡನೆಯ ಪಾತಕ,
ಜಂಗಮನಿಂದೆಯ ಮಾಡಿದರೆ ಮೂರನೆಯ ಪಾತಕ,
ಗುರುವಾಜ್ಞೆಯ ಮೀರಿದರೆ ನಾಲ್ಕನೆಯ ಪಾತಕ,
ಶಿವನಿಂದೆಯ ಮಾಡಿದಡೈದನೆಯ ಪಾತಕ,
ಪಂಚಮಹಾಪಾತಕ ಭಕ್ತಂಗಲ್ಲದೆ ಭವಿಗೆಲ್ಲಿಯದು
ಕೂಡಲಚೆನ್ನಸಂಗಮದೇವಾ? || ೨೭ ||

೧೬೭

ಉಂಬಲ್ಲಿ ಉಡುವಲ್ಲಿ ಕ್ರೀಯಳಿಯಿತ್ತೆಂಬರು,
ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು.
ಏನೆಂಬೆನಯ್ಯ ಒಚ್ಚೊಚ್ಚಿ ಭಕ್ತರ? ಏನೆಂಬೆನಯ್ಯ ಒಚ್ಚೊಚ್ಚಿ ಭವಿಗಳ?
ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ
ಭಕ್ತಕಾಯ ಮಮಕಾಯವೆಂತೆಂಬರು? || ೨೮ ||

೧೬೮

ಲಿಂಗದಲ್ಲಿ ಕಠಿಣವಾರ್ತೆ, ಜಂಗಮದಲ್ಲಿ ಜಾತಿವಾರ್ತೆ,
ಪ್ರಸಾದದಲ್ಲಿ ಅಪವಿತ್ರವಾರ್ತೆಯ ಕೇಳಲಾಗದು ಶಿವ, ಶಿವ!
ಕೂಡಲಚೆನ್ನಸಂಗಮದೇವನು ಅಘೋರನರಕದಲಿಕ್ಕುವ. || ೨೯ ||

೧೬೯

ಶ್ರೀಗುರುಕರುಣಕಟಾಕ್ಷದಲ್ಲಿ ಉತ್ಪತ್ಯವಾದ ಅಜಾತಂಗೆ
ಜಾತಿಸೂತಕ, ಜನನಸೂತಕ, ಪ್ರೇತಸೂತಕ, ರಜಸ್ಸೂತಕವುಂಟೆಂಬವಂಗೆ
ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪ್ರಸಾದವಿಲ್ಲವಯ್ಯಾ
ಕೂಡಲಚೆನ್ನಸಂಗಯ್ಯ. || ೩೦ ||

೧೭೦

ಅಂಗದ ಮೇಲೆ ಲಿಂಗಧಾರಣವಾದ ಬಳಿಕ ಮರಳಿ ಭವಿ ಸಂಟನೆಂದು ಬೆರಸಿದರೆ
ಕೊಂಡ ಮಾರಿಂಗೆ ಹೋಹದು ತಪ್ಪದು.

ಹಸಿಯ ಮಣ್ಣನಲ್ಲಿ ಮಾಡಿದ ಮಡಕೆ ಅಗ್ನಿಮುಖದಿಂದಾದ ಬಳಿಕ
ಅದು ತನ್ನ ಪೂರ್ವಕುಲವ ಬೆರಸೂದೆ ?
ಅಗ್ನಿದಗ್ಧಘಟಃ ಪ್ರಾಹುರ್ನ ಭೂಯೋ ಮೃತ್ತಿಕಾಯತೇ ।
ತಚ್ಛಿವಾಚಾರಸಂಗೇನ ನ ಪುನರ್ಮಾನುಷೋ ಭವೇತ್ ॥
ಇದು ಕಾರಣ ಪೂರ್ವ ನಾಸ್ತಿಯಾದ ಭಕ್ತನಪೂರ್ವ,
ಕೂಡಲಚೆನ್ನಸಂಗಮದೇವಾ. ॥ ೩೧ ॥

೧೭೧

ಅಟ್ಟುದನಡುವರೆ ? ಸುಟ್ಟುದ ಸುಡುವರೆ ?
ಬೆಂದ ನುಲಿಯ ಸಂಧಿಸಬಹುದೆ ?
ಪಂಚಾಕ್ಷರಿಯಲ್ಲಿ ದಗ್ಧವಾದ ನಿರ್ದೇಹಿಗೆ ಸಂದೇಹವುಂಟೆ ?
ದಗ್ಧಸ್ಯ ದಹನಂ ನಾಸ್ತಿ ಪಕ್ವಸ್ಯ ಪಚನಂ ಯಥಾ ।
ಜ್ಞಾನಾಗ್ನಿದಗ್ಧದೇಹಸ್ಯ ನ ಪುನರ್ದಹನಕ್ರಿಯಾ ॥
ಇದು ಕಾರಣ ಕೂಡಲಚೆನ್ನಸಂಗನ ಶರಣರು
ಭ್ರಾಂತುಸೂತಕ ಕ್ರಿಯಾವಿರಹಿತರು. ॥ ೩೨ ॥

೧೭೨

ಅಂಗಾಶ್ರಯವಳಿದು ಲಿಂಗಾಶ್ರಯವಾದ ಬಳಿಕ
ಅಂಗಕ್ಕೆ ಲಿಂಗಾಚಾರವಲ್ಲದೆ ಅಂಗ ಕ್ರೀಯೆಂಬುದನರಿದಂಗವಿಸರು ನೋಡಾ!
ಅಂಗದಲ್ಲಿ ನಿಷ್ಠೆವಂತರಾದ ಬಳಿಕ
ಅನ್ಯನಾಮವಿಡಿದು ಬಳಲುವ ಬಳಲಿಕೆ ಇನ್ನೆಲ್ಲಿಯದೋ, ಇದು ಕಾರಣ
ಕೂಡಲಚೆನ್ನಸಂಗನ ಶರಣರು ಅನ್ಯವನಾಚರಿಸುವರಲ್ಲ. ॥ ೩೩ ॥

೧೭೩

ಉಪದೇಶವ ಮಾಡಿದ ಗುರುವೊಂದೆ, ಲಿಂಗವೊಂದೆಯಲ್ಲವೆ,
ಸತಿಗೊಂದು ಲಿಂಗ, ಸುತಗೊಂದು ಲಿಂಗ,
ಸೋದರಗೊಂದು ಲಿಂಗ, ದಾಸಿಗೊಂದುಲಿಂಗ,
ಇಂತು ಒಂದು ಮನೆಗೆ ಗುರುಲಿಂಗವನೆರಡು ಮಾಡಿದರೆ
ಮೆಚ್ಚರು, ನಮ್ಮ ಕೂಡಲಚೆನ್ನಸಂಗನ ಶರಣರು. ॥ ೩೪ ॥

೧೭೪

ಉದಯಕಾಲ, ವಿಚಿತ್ರಕಾಲ, ಅಸ್ತಮಾನ ಕಾಲದಲ್ಲಿ
ತನ್ನ ಇಷ್ಟಲಿಂಗಕ್ಕೆ ಪೋಡಶೋಪಚಾರವ ಮಾ[ಡದ]ವನು
ಭಕ್ತನಲ್ಲ, ಶರಣನಲ್ಲ, ಲಿಂಗೈಕ್ಯನಲ್ಲ.
ಅವನು ಕೇಳಾ! ಪಂಚಮಹಾಪಾತಕ, ವಿಘಾತಕ ಲಿಂಗ ಚೋರಕ,-
ಇಂತೆಂದುದು ಕೂಡಲಚೆನ್ನಸಂಗನ ವಚನ. || ೩೫ ||

೧೭೫

ತಮ್ಮಾಚಾರಕ್ಕೆ, ಅನ್ಯರ ಭಕ್ತಿಗೆ, ಪ್ರಾಣಲಿಂಗ ಸಂಬಂಧವ ಮಾಡುವರಯ್ಯಾ.
ಹೊದ್ದಿತ್ತಲ್ಲಾ ಗುರುವಚನಕ್ಕೆ ಭಂಗ, ಅದೇಕೆಂದರೆ:
ಏಕಕಾಲ ಲಿಂಗಾರ್ಚನೆ ತಡೆದರೆ ರೌರವನರಕವೆಂದುದಾಗಿ.
ಇದು ಕಾರಣ ಕೂಡಲಚೆನ್ನಸಂಗಯ್ಯಾ
ಉಪದೇಶವ ಮಾಡುವುದು ರೌರವನರಕವೆಂದುದಾಗಿ. || ೩೬ ||

೧೭೬

ಸೋಮವಾರ ಮಂಗಳವಾರ ಶಿವರಾತ್ರಿಯೆಂದು ಮಾಡುವ ಭಕ್ತರ
ಲಿಂಗಭಕ್ತಂಗೆ ನಾನೆಂತು ಸರಿಯೆಂಬೆನಯ್ಯಾ ?
ದಿನ ಶ್ರೇಷ್ಠವೋ ? ಲಿಂಗ ಶ್ರೇಷ್ಠವೊ ?
ದಿನ ಶ್ರೇಷ್ಠವೆಂದು ಮಾಡುವ
ಪಂಚಮಹಾಪಾತಕರ ಮುಖವ ನೋಡಲಾಗದು.
ಸೋಮೇ ಭೌಮೇ ವ್ಯತೀ ಪಾತೇ ಸಂಕ್ರಾಂತಿ ಶಿವರಾತ್ರಯೋಃ ।
ಏಕಭುಕ್ತೋಪವಾಸೇನ ನರಕೇ ಕಾಲಮಕ್ಷಯಂ ॥
ಇದು ಕಾರಣ ಕೂಡಲಚೆನ್ನಸಂಗಯ್ಯಾ
ಇಂಥವರ ಮುಖವ ನೋಡಲಾಗದು. || ೩೭ ||

೧೭೭

ಶೀಲ ಶೀಲವೆಂದು ಗರ್ವಿಸಿ ನುಡಿವುತಿಪ್ಪರು, ಶೀಲವಾವುದೆಂದರಿಯರು.
ಇದ್ದುದ ವಂಚನೆಯ ಮಾಡದಿಪ್ಪುದೆ ಶೀಲ,
ಇಲ್ಲದಿದ್ದುದಕ್ಕೆ ಕಡನ ಬೇಡದಿಪ್ಪುದೆ ಶೀಲ,
ಪರಧನ ಪರಸತಿಗೆಳಸದಿಪ್ಪುದೆ ಶೀಲ,
ಪರದೈವ ಪರಸಮಯಕ್ಕೆಳಸದಿಪ್ಪುದೆ ಶೀಲ,
ಗುರುನಿಂದೆ ಶಿವನಿಂದೆ ಜಂಗಮನಿಂದೆಯ ಕೇಳದಿಪ್ಪುದೆ ಶೀಲ,

ಕೂಡಲಚೆನ್ನಸಂಗನ ಶರಣರ ಬರವಿಂಗೆ
ಮುಯ್ಯಾಂತು ಪರಿಣಾಮಿಸ ಬಲ್ಲರೆ ಅಚ್ಚಶೀಲ. ‖ ೩೮ ‖

೧೭೮

ತನು,ಮನ, ಧನಕ್ಕೆ ಆಸೆಮಾಡುವಾತನ ಬಸವಣ್ಣನ ಸಂತತಿಯೆಂತೆನಬಹುದು ?
ವಧುವಿಂಗೆ ಆಸೆ ಮಾಡುವವರನು ಬಲ್ಲಾಳನ ಸಂತತಿಯೆಂತೆನಬಹುದು ?
ಮಕ್ಕಳಿಗೆ ಆಸೆ ಮಾಡುವವರ ಸಿರಿಯಾಳನ ಸಂತತಿಯೆಂತೆನಬಹುದು ?
ಎನಲಾಗದು, ಎನಿಸಿಕೊಳಲಾಗದು.
ಎಂದಾತಂಗೆಯೂ ಎನಿಸಿಕೊಂಡಾತಂಗೆಯೂ
ನರಕ ತಪ್ಪದು, ಕೂಡಲಚೆನ್ನಸಂಗಮದೇವಾ. ‖ ೩೯ ‖

೧೭೯

ವೀರನಾದರೆ ಅಲಗಿನ ಮೊನೆಯಲ್ಲಿ ಕಾಣಬಹುದು,
ಧೀರನಾದರೆ ತನ್ನ ಸೋಂಕಿದಲ್ಲಿ ಅರಿಯಬಹುದು,
ಭಕ್ತನಾದರೆ ತಾಗು ನಿರೋಧದಲ್ಲಿ ಅರಿಯಬಹುದು,
ಕೂಡಲಚೆನ್ನಸಂಗಯ್ಯಾ
ಸುಜ್ಞಾನಿಯಾದರೆ ಸುಳುಹಿನಲ್ಲಿ ಅರಿಯಬಹುದು. ‖ ೪೦ ‖

೧೮೦

ರಣವನರ್ಚಿಸಿ, ಭೂತಕ್ಕೆ ಬಲಿಯ ಕೊಡುವ
ಕಲಿಯ ಮನ ಮೊನೆಯ ಮೇಲೆ ಇಪ್ಪಂತೆ
ಸಮಯಾಚಾರವ ಮಾಡಬೇಕು.
ಮಾಡಿಹೆನೆಂಬುದು ಸಾಮಾನ್ಯವೆ ?
ಇದು ಕಾರಣ ಕೂಡಲಚೆನ್ನಸಂಗಯ್ಯಾ,
ಸಮಯಭಕ್ತಿ ಸಂದಿತ್ತು ಸಂಗನ ಬಸವಣ್ಣಂಗೆ. ‖ ೪೧ ‖

೧೮೧

ಗುರುವಿನಲ್ಲಿ ಸದಾಚಾರಿ, ಲಿಂಗದಲ್ಲಿ ಶಿವಾಚಾರಿ, ಜಂಗಮದಲ್ಲಿ ಸಮಯಾಚಾರಿ.
ಇಂತೀ ತ್ರಿವಿಧಾಚಾರ ಸಂಬಂಧವಾದ ಬಳಿಕ
ತನ್ನ ಶೀಲಕ್ಕೆ ಸಮಶೀಲವಾಗದವರ
ಮನೆಯಲನುಸರಿಸಿ ನಡೆದಡೆ ಕೂಡಲಚೆನ್ನಸಂಗನ ಶರಣ,
ಪೂರ್ವಾಚಾರ್ಯ ಸಂಗನ ಬಸವಣ್ಣ ಮೆಚ್ಚ ಕಾಣಿರಣ್ಣಾ. ‖ ೪೨ ‖

೧೮೨

ಅಂಗದ ಮೇಲೆ ಲಿಂಗ ಪ್ರತಿಷ್ಠೆಯನೆ ಮಾಡಿ
ಹಿಂಗಿದಡೆ ಪ್ರಥಮಪಾತಕ,
ಭವಿ ಪಾಕಕ್ಕೆಳಸಿದಡೆರಡನೆಯ ಪಾತಕ,
ಪ್ರತುಮಾದಿಗಳಿಗೆರಗಿದಡೆ ಮೂರನೆಯ ಪಾತಕ
ಪ್ರಸಾದಸ್ಥಲವನರಿಯದಿದ್ದಡೆ ನಾಲ್ಕನೆಯ ಪಾತಕ,
ಸುಳುಹಡಗಿ ಲಿಂಗಲೀಯವ ಮಾಡದಿದ್ದಡೆ ಐದನೆಯ ಪಾತಕ.
ಇಂತೀ ಪಂಚಮಹಾಪಾತಕವ ಕಳೆಯಬಲ್ಲಡೆ ತಿಳಿಯಬೇಕು,
ಕೂಡಲಚೆನ್ನಸಂಗಯ್ಯಾ ನಿಮ್ಮ ಶರಣನಾಗಬಲ್ಲಡೆ. || ೪೩ ||

## ಮಾಹೇಶ್ವರನ ಮಾಹೇಶ್ವರ ಸ್ಥಲ

೧೮೩

ಶ್ರೀ ಗುರುಸ್ವಾಮಿ ಶಿಷ್ಯನನನುಗ್ರಹಿಸುವ ಪರಿಯೆಂತೆಂದರೆ:
ಆಚಾರಸ್ಥಲ ಗುರುಸ್ಥಲ ಲಿಂಗಸ್ಥಲ ಜಂಗಮಸ್ಥಲ
ಅರ್ಪಿತಸ್ಥಲ ಪ್ರಸಾದಸ್ಥಲವೆಂದು ಕರುಣಿಸುವುದು ದೀಕ್ಷೆ.
ಈ ಕ್ರಮವರಿದು ಮಹಾಪ್ರಸಾದವೆಂದು ಕೈಕೊಂಡ ಬಳಿಕ
ಪರಪಾಕಂ ನ ಕರ್ತವ್ಯಂ ಲಿಂಗನೈವೇದ್ಯ ಕಿಲ್ಬಿಷಂ।
ಸ್ವಯಂಪಾಕಂ ಪವಿತ್ರಾಣಾಂ ಲಿಂಗನೈವೇದ್ಯಮುತ್ತಮಂ। ಎಂದುದಾಗಿ,
ಒಡಲ ಕಕ್ಕುಲತೆಗೆ, ಭಕ್ತನ ದಾಕ್ಷಿಣ್ಯಕ್ಕೆ
ಅನ್ಯದೈವ ಭವಿ-ನೇಮಸ್ತರುಳ್ಳಲ್ಲಿ ಹೊಕ್ಕರೆ,
ಕೂಡಲಚೆನ್ನಸಂಗಾ ಅವರಂದ ದೂರ. || ೪೪ ||

೧೮೪

ಭಕ್ತಂಗಾಗಲಿ, ಜಂಗಮಕ್ಕಾಗಲಿ,
ಸದಾಚಾರವುಳ್ಳವರಿಗೆ ಅನಾಯತ ಪೊದ್ದಬಾರದು.
ಅನಾಯತವೆಂಬುದೆ ಅನುಸರಣೆ, ಅನುಸರಣೆಯೆಂಬುದೆ ಅಂಗದಿಚ್ಛೆ,
ಅಂಗದಿಚ್ಛೆಯೆಂಬುದೆ ಅನಾಚಾರ, ಅನಾಚಾರವೆಂಬುದೆ ಪಾತಕ,

ಆ ಪಾತಕವೆ ನರಕ.
ಇದು ಕಾರಣ ಕೂಡಲಚೆನ್ನ ಸಂಗಯ್ಯನಲ್ಲಿ
ಸದಾಚಾರವುಳ್ಳವರು ಅನುಸರಿಸಿ ನಡೆದರೆ ನಾಯಕನರಕ. || ೪೫ ||

೧೮೫

ಭವಿಯ ಕಳೆದು, ಭವಿಯ ಬೋಧಿಸಿ ಬೇಡುವರು ಸಂಬಂಧಿಗಳಲ್ಲ.
ರವಿಯು ಕಪ್ಪ ಕಳೆಯಲರಿಯದವರು ಸಂಬಂಧಿಗಳಲ್ಲ.
ಭವಿಯ ಕಳೆದು ಭಕ್ತನ ಮಾಡುವವರು ಭಕ್ತರಲ್ಲ, ಸಂಬಂಧಿಗಳಲ್ಲ.
ಇಂತೀ ಸಾರಾಯವಾರಿಗೂ ಅಳವಡದಾಗಿ ಕೊಂಡ ವ್ರತವನನುಸರಿಸಿ ನಡೆದು,
ನಿಂದೆಗೆ ಬಂದ ಸಂದೇಹಿಯನೆಂತು ಸಂಬಂಧಿಯೆಂಬೆ
ಕೂಡಲಚೆನ್ನ ಸಂಗಯ್ಯಾ? || ೪೬ ||

೧೮೬

ನೊಸಲಲೊಂದು ಕಣ್ಣು, ಮಕುಟವರ್ಧನರಾದರೇನವರು?
[ಅಂಗದ ಮೇಲೆ] ಲಿಂಗ ಸಂಬಂಧವಿಲ್ಲದವರ
ಮನೆಯಲು ಮಾಡಿದ ಪಾಕವ ಕೊಂಡರೆ
ಶ್ವಾನಜನ್ಮ ನರಕ ತಪ್ಪದಾಗಿ ಬಲ್ಲವರೊಲ್ಲರು.
ಶಿವಭಕ್ತರಲ್ಲದವರ ಮನೆಯಲುಂಡರೆ
ಜನ್ಮ ಜನ್ಮಾಂತರ ಶ್ವಾನಯೋನಿಯಲ್ಲಿ ಬಪ್ಪುದು ತಪ್ಪದು.
ಎಲೆ ಶಿವನೆ ನೀನಿಲ್ಲದವರ ಮನೆಯಲು [ತಿನಿಸಿಂಗೆ]
ಎನ್ನ ಮನವು ಸೊಗಸದಯ್ಯಾ ಕೂಡಲಚೆನ್ನಸಂಗಮದೇವಾ. || ೪೭ ||

೧೮೭

ಬೀದಿಯ ಬಸವಂಗೆ ದೇವಾಲಯದ ಪಶುವಿಂಗೆ ಹುಟ್ಟಿದ ಕರು,
ಬಸವಗಳಪ್ಪುವೆ, ಲಿಂಗಮುದ್ರೆಯನೊತ್ತದನ್ನಕ್ಕ?
ಭಕ್ತಂಗೆ ಭಕ್ತೆಗೆ ಹುಟ್ಟಿದರೆಂದರೆ
ಏರಿಯ ಗುರುಕಾರುಣ್ಯದಲ್ಲಿ ಭಕ್ತರಪ್ಪರೆ, ಅಂಗದ ಮೇಲೆ ಲಿಂಗವಿಲ್ಲದನ್ನಕ್ಕ?
ಅವರನೊಳಗಿಟ್ಟುಕೊಂಡು ನಡೆದರೆ
ಭಕ್ತಿಹೀನರೆನಿಸಿತ್ತು, ಕೂಡಲಚೆನ್ನ ಸಂಗನ ವಚನ. || ೪೮ ||

೧೮೮

ಹುಟ್ಟಿದ ಮಕ್ಕಳು ಪ್ರಬುದ್ಧರಾದಲ್ಲದೆ ಲಿಂಗಸ್ವಾಯತವ
ಮಾಡಬಾರದೆಂಬ ಯುಕ್ತಿಶೂನ್ಯರ ನೋಡಿರೇ.
ಅಳುಪಿ ತಾಯಿ ತಂದೆ ಅವರೊಡನುಂಡರೆ
ಅವರನಚ್ಚ ವ್ರತಗೇಡಿಗಳೆಂಬೆ ಕೂಡಲಚೆನ್ನಸಂಗಯ್ಯಾ. || ೪೯ ||

೧೮೯

ಹುಟ್ಟಿದ ಶಿಶು ಧರಣಿಯ ಮೇಲೆ ಬಿದ್ದಂತೆ
ವಿಭೂತಿಯ ಪಟ್ಟವಂ ಕಟ್ಟಿ, ಲಿಂಗಸ್ವಾಯತವ ಮಾಡಿ
ಪ್ರಸಾದದೆಣ್ಣೆ ಬೆಣ್ಣೆ ಹಾಲನೆರೆದು ಸಲಹೂದೆ ಅದು ಸದಾಚಾರ.
ಆ ಮಗುವಿಂಗೆ ಈರಿಲು [ಗಾಳಿ] ಭೂತ ಸೋಂಕಿತ್ತೆಂದು ಮಾಡುವ ಭಕ್ತಂಗೆ
ಗುರುವಿಲ್ಲ, ಲಿಂಗವಿಲ್ಲ, ಅವ ಪಂಚಮಹಾಪಾತಕ ನೋಡಾ.
ಇದನರಿದಾತ ಎನ್ನ ಮಾತಾಪಿತನು.
ನಿಮ್ಮ ನಚ್ಚಿದ ಮಚ್ಚು ಅಚ್ಚೊತ್ತಿದಂತಿರಬೇಕು
ಕೂಡಲಚೆನ್ನಸಂಗಯ್ಯಾ. || ೫೦ ||

೧೯೦

ಗುರುವೆಂಬ ತಂದೆಗೆ ಶಿಷ್ಯನೆಂಬ ಮಗಳು ಹುಟ್ಟಿ,
ಲಿಂಗವೆಂಬ ಗಂಡನ ತಂದು, ಮದುವೆಯ ಮಾಡಿದ ಬಳಿಕ
ಇನ್ನಾರೊಡನೆ ಸರಸವನಾಡಲೇಕಯ್ಯಾ?
ನಾಚಬೇಕು ಲಿಂಗದೆಡೆಯಲ್ಲಿ ನಾಚಬೇಕು ಜಂಗಮದೆಡೆಯಲ್ಲಿ,
ನಾಚಬೇಕು ಪ್ರಸಾದದೆಡೆಯಲ್ಲಿ,
ನಾಚಿದಡೆ ಭಕ್ತನೆಂಬೆನು, ಯುಕ್ತನೆಂಬೆನು, ಶರಣನೆಂಬೆನು,
ನಾಚದಿದ್ದರೆ ಮಿಟ್ಟೆಯ ಭಂಡರೆಂಬೆನು
ಕೂಡಲಚೆನ್ನಸಂಗಮದೇವಾ. || ೫೧ ||

೧೯೧

ಪತಿವ್ರತೆಯಾದಡೆ ಪರಪುರುಷರ ಸಂಗವೇತಕೆ?
ಲಿಂಗಸಂಗಿಯಾದಡೆ ಅನಂಗಸಂಗವೇತಕೆ? (ಸ್ಥಾವರಲಿಂಗಸಂಗವೇತಕೆ)
ಕಂಡ ಕಂಡವರ ಹಿಂದೆ ಹರಿವ ಚಾಂಡಾಳಗಿತ್ತಿಯಂತೆ:
ಒಬ್ಬರ ಕೈವಿಡಿದು, ಒಬ್ಬರಿಗೆ ಮಾತಕೊಟ್ಟು,
ಒಬ್ಬರಿಗೆ ಸನ್ನೆಗೆಯ್ವ ಬೋಸರಿಗಿತ್ತಿಯಂತೆ

ಪ್ರಾಣಲಿಂಗವಿದ್ದಂತೆ ಸ್ಥಾವರಲಿಂಗಕ್ಕೆ ಹರಸಿ ಹೊಡವಂಟುಕೊಳಲೇಕೆ?
ಪಾದೋದಕ ಪ್ರಸಾದ ಜೀವಿಯಾದ ಬಳಿಕ ಅನ್ಯರಿಗೆ ಕೈಯಾನಲೇಕೆ?
ಇದು ಕಾರಣ ಕೂಡಲಚೆನ್ನಸಂಗಯ್ಯಾ
ಇಂತಪ್ಪ ಪಾಪಿಗಳನೆನಗೆ ತೋರದಿರಯ್ಯಾ. || ೫೨ ||

೧೯೨

ಅಷ್ಟತನುಮೂರ್ತಿಯೆಂಬ ಮಾತಿನ ಪಾತಕವ ಕೇಳಲಾಗದು.
ಪೃಥ್ವಿಯಂತೆ ಕಠಿಣವುಳ್ಳಾತನೆ? ಅಪ್ಪುವಿನಂತೆ ಓಟ ಭರತವುಳ್ಳಾತನೆ?
ತೇಜದಂತೆ ತೃಣಕಾಷ್ಠವಿಲ್ಲದಿರೆ ನಂದುವಾತನೆ?
ವಾಯುವಿನಂತೆ ಚಲನೆವುಳ್ಳಾತನೆ? ಆಕಾಶದಂತೆ ಬಯಲಾದಾತನೆ?
ಸೋಮಸೂರ್ಯರಂತೆ ದಿವಾರಾತ್ರಿಯ ನಡೆಸುವಾತನೆ?
ಜೀವಾತ್ಮನಂತೆ ಜನನ ಮರಣವುಳ್ಳಾತನೆ?
ಇದುಕಾರಣ ಕೂಡಲಚೆನ್ನಸಂಗಯ್ಯಾ ನೀ ನಿನ್ನಂತೆ
ಇವರೆಲ್ಲರೂ (ಇವೆಲ್ಲವೂ?) ನೀನಿರಿಸಿದಂತೆ. || ೫೩ ||

೧೯೩

ಸರ್ವವೂ ಶಿವನಿಂದ ಉದ್ಭವಿಸುವವೆಂದರೆ, ಉದ್ಭವಿಸುವವೆಲ್ಲವೂ ಶಿವನೆ?
ಸಕಲ ಬೀಜವ ಬಿತ್ತುವನೊಕ್ಕಲಿಗನೆಂದರೆ ಆ ಬೆಳೆ ತಾನೊಕ್ಕಲಿಗನೆ?
ಮಡಕೆಯ ಕುಂಬಾರ ಮಾಡುವನೆಂದರೆ, ಆ ಮಡಕೆ ತಾ ಕುಂಬಾರನೆ?
ಕಬ್ಬುನವ ಕಮ್ಮಾರ ಮಾಡುವನೆಂದರೆ, ಆ ಕಬ್ಬುನ ತಾ ಕಮ್ಮಾರನೆ?
ಈ ಪರಿಯಲಿ ಸಕಲ ಜಗತ್ತಿನ ಸಚರಾಚರವನು ಮಾಡುವನೆಂದರೆ,
ಆ ಸಚರಾಚರವು ಶಿವನೆ?
ಅಹಂಗಾದರೆ ಅಷ್ಟಾದಶವರ್ಣವೇಕಾದವು?
ಚೌರಾಸಿಲಕ್ಷ ಜೀವರಾಶಿಗಳೇಕಾದವು?
ಸುಖ–ದುಃಖ ಸ್ವರ್ಗ–ನರಕಂಗಳೇಕಾದವು?
ಉತ್ತಮ–ಮಧ್ಯಮ–ಕನಿಷ್ಠಂಗಳೇಕಾದವು?
ಪುಣ್ಯ–ಪಾಪ, ಭವಿ–ಭಕ್ತರೆಂದೇಕಾದವು?
ಇದು ಕಾರಣ ಸದಾಚಾರ ಸದ್ಭಕ್ತಿಯಲ್ಲಿಪ್ಪಾತನೆ ಶಿವ.
ಅಂತಲ್ಲದೆ ಸರ್ವವೂ ಶಿವನೆಂದರೆ
ಅಘೋರ ನರಕ ಕೂಡಲಚೆನ್ನಸಂಗಯ್ಯಾ. || ೫೪ ||

೧೯೪

ಯತ್ರ ಜೀವಸ್ತತ್ರ ಶಿವನೆಂಬ ಬಾಲಭಾಷೆಯ ಕೇಳಲಾಗದು.
ಶಿವಶಿವಾ ಯತ್ರಜೀವಸ್ತತ್ರ ಶಿವನಾದರೆ ಜೀವಂಗೆ ಮರಣವೇಕೋ?
ಯತ್ರ ಜೀವಸ್ತತ್ರ ಶಿವನಾದರೆ ಜನನ ಸ್ಥಿತಿ
ಮರಣ ರುಜೆ ಸಂಸಾರ ಬಂಧನವೇಕೋ?
ಯತ್ರ ಜೀವಸ್ತತ್ರ ಶಿವನಾದರೆ ಪುಣ್ಯಪಾಪ ಪ್ರಳಯಕಾಲ ಕಲ್ಪಿತವೇಕೊ?
ಇದು ಕಾರಣ ಯತ್ರ ಜೀವಸ್ತತ್ರ ಶಿವನಲ್ಲ,
ಉತ್ಪತ್ತಿ ಸ್ಥಿತಿ ಪ್ರಳಯರಹಿತನು ಸದ್ಭಕ್ತರಲ್ಲಿಪ್ಪನಲ್ಲದೆ ಮತ್ತೆಲ್ಲಿಯೂ ಇಲ್ಲ,
ಕೂಡಲಚೆನ್ನಸಂಗಮದೇವ. || ೫೫ ||

೧೯೫

ಸರ್ವಗತಶಿವನೆಂಬುದೀ ಲೋಕವೆಲ್ಲಾ.
ಶಿವಶಿವಾ ನಿರ್ಬುದ್ಧಿ ಜನಂಗಳನೇನೆಂಬೆ!
ಸರ್ವವೆಲ್ಲವೂ ಶಿವನಾದರೆ ಹಿಂದಣ ಯುಗ ಪ್ರಳಯಂಗಳೇಕಾದವು?
ಸರ್ವವೆಲ್ಲವೂ ಶಿವನಾದರೆ ಚೌರಾಸಿಲಕ್ಷ ಜೀವರಾಶಿಗಳೇಕಾದವು?
ಸೂತ್ರಧಾರಿ, ನರರಿಗಾಗಿ ಯಂತ್ರವನಾಡಿಸುವಲ್ಲಿ
ಹೊರಗಿದ್ದಾಡಿಸುವನಲ್ಲದೆ ತಾನೊಳಗಿದ್ದಾಡಿಸುವನೆ?
ಅಹಂಗೆ ಶಿವನು ತನ್ನಾಧೀನವಾಗಿಪ್ಪ ತ್ರಿಜಗದ ಸಚರಾಚರಂಗಳ
ತಾನು ಯಂತ್ರವಾಹಕನಾಗಿ ಆಡಿಸುವನಲ್ಲದೆ, ತಾನಾಡುವನೆ?
ಸರ್ವಯಂತ್ರವೂ ತಾನಾದರೆ ಸಕಲತೀರ್ಥಕ್ಷೇತ್ರಯಾತ್ರೆಗೆ ಹೋಗಲೇಕೊ?
ಇದು ಕಾರಣ ಸರ್ವವೂ ಶಿವನೆನಲಾಗದು.
ಸದಾಚಾರ ಸನ್ನಹಿತ ಸದ್ಭಕ್ತಿ ಲಿಂಗಜಂಗಮದೊಳಗಿಪ್ಪ,
ಮತ್ತೆಲ್ಲಿಯೂ ಇಲ್ಲ, ಕೂಡಲಚೆನ್ನಸಂಗಯ್ಯಾ. || ೫೬ ||

೧೯೬

ಭಕ್ತರೆಲ್ಲರೂ ಕೂಡಿ ಗುರೂಪದೇಶ ಸಹಿತವಾಗಿ
ಪ್ರಾಣಲಿಂಗವೆಂದು ಅಪ್ಪವಿಸಿದ ಮಾತ ಮರೆವರಲ್ಲಾ.
ಸ್ಥಾವರಕ್ಕೆ ಹೋಗಿ ದಂಡಪ್ರಣಾಮವ ಮಾಡುವರು, ಆವುದಾಚಾರವಯ್ಯಾ?
ತನ್ನ ಲಿಂಗವಿದ್ದಂತೆ ಅನ್ಯಲಿಂಗವ ಮುಟ್ಟಿ ದರುಶನ ಮಾಡುವ
ಪಾತಕರನಚ್ಚಶರಣರೆಂತೆಂಬೆನಯ್ಯಾ,
ಕೂಡಲಚೆನ್ನಸಂಗಮದೇವಾ? || ೫೭ ||

೧೯೭

ಗುರುಭಕ್ತಿ ಗುರುಭಜನೆಯಿಲ್ಲದವನ ಕೈಯಲು
ಕರುಣವ ಪಡೆವ ನರಕಿಯು ನೆರೆಯಲ್ಲಿರಲಾಗದಯ್ಯಾ.
ಶಿವಭಕ್ತಿ ಶಿವಭಜನೆಯಿಲ್ಲದವನ ಕೈಯಲಿ ಕರುಣವ ಪಡೆದ
ಪಾಪಿಯು ಸಂಗವ ಮಾಡಲಾಗದು.
ಶೈವಸನ್ಯಾಸಿ ಕಾಳಾಮುಖಿಯ ಗುರುವೆಂಬ
ಅನಾಮಿಕನ ನೋಡಲಾಗದು, ಮಾತಾಡಿಸಲಾಗದು.
ತಟ್ಟು ಮಟ್ಟಿಯನಿಟ್ಟ ಭ್ರಷ್ಟಂಗೆ ಶಿಶುವಾದ
ಕಷ್ಟಭ್ರಷ್ಟನವನ ಮುಟ್ಟಲಾಗದು.
ವಿಭೂತಿ ರುದ್ರಾಕ್ಷಿಗಳಲ್ಲಿ ಪ್ರೀತಿಯಿಲ್ಲದ ನರನ
ಗುರುವೆಂಬ ಪಾತಕನ ಮಾತುಬೇಡ.
ಭಕ್ತರಲ್ಲದರಲ್ಲಿ ಭಕ್ತಿಯಿಲ್ಲದರಲ್ಲಿ ಭಕ್ತನಾದರೆ ಅವನ ಯುಕ್ತಿ ಬೇಡ.
ಇವೆಲ್ಲವೂ ಇಲ್ಲದವರಲ್ಲಿ ಕರುಣವ ಹಡೆದು
ಬಲುಹಿಂದ ನಡೆವವನ ಸೊಲ್ಲುಬೇಡ.
ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ
ಸಮಯಕ್ಕೆ ಸಮನಿಸದವನು ನಮಗೆ ಬೇಡಯ್ಯಾ. ॥ ೫೮ ॥

## ಮಾಹೇಶ್ವರನ ಭಕ್ತಸ್ಥಲ

೧೯೮

ನಿಮ್ಮ ಭಕ್ತರ ಕಂಡು ಉದಾಸೀನವ ಮಾಡಿದರೆ ಒಂದನೆಯ ಪಾತಕ.
ನಿಮ್ಮ ಭಕ್ತರ ಸಮಯೋಚಿತವ ನಡೆಸದಿದ್ದರೆ ಎರಡನೆಯ ಪಾತಕ.
ನಿಮ್ಮ ಭಕ್ತರೊಡನೆ ಮಾರುತ್ತರವ ಕೊಟ್ಟರೆ ಮೂರನೆಯ ಪಾತಕ.
ನಿಮ್ಮ ಭಕ್ತರ ಸಕಳಾರ್ಥಕ್ಕೆ ಸಲ್ಲದಿದ್ದರೆ ನಾಲ್ಕನೆಯ ಪಾತಕ.
ನಿಮ್ಮ ಭಕ್ತರಿಗೆ ಮಾಡಿದೆನೆಂದು ಮನದಲ್ಲಿ ಹೊಳೆದರೆ ಐದನೆಯ ಪಾತಕ.
ಇಂತೀ ಪಂಚಪಾತಕವ ಕಳೆದುಳಿದ
ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೫೯ ॥

೧೯೯

ಸಂಗಾ, ನೀನಿಲ್ಲದವರಂಗಣ ಪಂಚ ಮಹಾಪಾತಕ, ಏಳನೆಯ ನರಕ.
ಸಂಗಾ, ನೀನಿಲ್ಲದವರಂಗಣ ಬ್ರಹ್ಮೇತಿಗೆ ಅದು ಮೊದಲು.
ಸಂಗಾ, ನೀನಿದ್ದವರಂಗಣ ಲಿಂಗಾಂಗಣ, ಅವರಂಗವು ಲಿಂಗ.
ಸಂಗಾ, ನೀನಿದ್ದವರಂಗಣ ವಾರಣಾಸಿಯಿಂದಧಿಕ.
ಸಂಗಾ, ನೀನಿದ್ದವರಂಗಣ ಅಮೃತ ದಿವ್ಯಕ್ಷೇತ್ರದಿಂದಧಿಕ.
ಸಂಗಾ, ಕೂಡಲಚೆನ್ನಸಂಗಾ,
ನಿಮ್ಮ ಶರಣರ ಸಂಗ ಸುಸಂಗವೆನಗೆ. || ೬೦ ||

೨೦೦

ನೀವಲ್ಲದೆ ಬೇರೆ ಮತ್ತನ್ಯವ ತೋರದಿರು ಕಂಡಾ, ಲಿಂಗವೆ.
ಬೇರೆ ಮತ್ತೊಂದುವನೆನಗೆ ತೋರದಿರು ಕಂಡಾ, ಲಿಂಗವೆ.
ಎನ್ನ ಮನಕ್ಕೆ ಮನವೆ ಸಾಕ್ಷಿ
ಕೂಡಲಚೆನ್ನಸಂಗಯ್ಯಾ ನೀನೆ ಬಲ್ಲೆ. || ೬೧ ||

೨೦೧

ಕರ್ಮಜಾತನ ಕಳೆದು ಗುರುಲಿಂಗ ಪುಣ್ಯಜಾತನ ಮಾಡಿದ ಬಳಿಕ,
ಶಿವನ ಕುಲವಲ್ಲದೆ ಅನ್ಯಥಾ ಕುಲ ಶರಣಂಗುಂಟೆ?
ಶಿವಧರ್ಮಕುಲೇ ಜಾತಃ ಪೂರ್ವಜನ್ಮವಿವರ್ಜಿತಃ।
ಉಮಾ ಮಾತಾ ಪಿತಾ ರುದ್ರಾ ಈಶ್ವರಂ ಕುಲಮೇವ ಚ ||
ಕೂಡಲಚೆನ್ನಸಂಗಯ್ಯಾ,
ನಿಮ್ಮ ಶರಣರಿಗೆ ಪ್ರತಿಯ ಕಾಣೆ ಶಿವನ ಕುಲವಲ್ಲವೆ. || ೬೨ ||

## ಮಾಹೇಶ್ವರನ ಪ್ರಸಾದಿಸ್ಥಲ

೨೦೨

ಲಿಂಗವಲ್ಲದೆ ಎನ್ನ ಮನಕ್ಕೆ ಸಮನಿಸದು, ಸಮನಿಸದು.
ಜಂಗಮವಲ್ಲದೆ ಎನ್ನ ಧನಕ್ಕೆ ಸಮನಿಸದು, ಸಮನಿಸದು.
ಪ್ರಸಾದವಲ್ಲದೆ ಎನ್ನ ತನುವಿಗೆ ಸಮನಿಸದು, ಸಮನಿಸದು.

ಕೂಡಲಚೆನ್ನಸಂಗಯ್ಯಾ, ಇದು ಸತ್ಯ ನೋಡಯ್ಯಾ,
ಸಕಳೇಂದ್ರಿಯಂಗಳು ಅನ್ಯಸಂಗಕ್ಕೆ
ಸಮನಿಸವು, ಸಮನಿಸವು. || ೬೩ ||

೨೦೩

ಅರವತ್ತುನಾಲ್ಕು ಶೀಲದಲ್ಲಿ ನಡೆದು ತೋರಿದನೆನಗೆ ಬಸವಣ್ಣ ನೋಡಯ್ಯಾ.
ಆ ನಡೆಯನು ಹಿಡಿದು ಬಿಡದೆ ನಡೆವೆನು, ಲಿಂಗ ಜಂಗಮ ಸಾಕ್ಷಿಯಾಗಿ.
ಈ ನಡೆಯನು ಹಿಡಿದು ನಡೆವೆನು, ಪ್ರಸಾದ ಸಾಕ್ಷಿಯಾಗಿ.
ದೃಢದಿಂದ ಹಿಡಿದು ಬಿಡದೆ ಕಡೆಮುಟ್ಟಿ ಸಲಿಸುವೆ,
ಕೂಡಲಚೆನ್ನಸಂಗಮದೇವಾ. || ೬೪ ||

೨೦೪

ಶಿವಜನ್ಮ ಶಿವಕುಲಜನಾಗಿ ಶಿವಶರಣರ ಮನೆಯ ಒಕ್ಕುದ ಕೊಂಬುದು.
ಭವಭಾರಿಯ ಮನೆಯಲು ಲಿಂಗಾರ್ಚನೆಯ ಮಾಡಲಾಗದು.
ಭವಿ ವಿರಹಿತಂ, ಭವಿಪಾಕವ ತನ್ನ ಲಿಂಗಕ್ಕೆ ಕೊಟ್ಟಡೆ
ರೌರವಂ ನರಕ ನೋಡಾ.
ಅಸಂಸ್ಕಾರೀ ಕೃತಂ ಪಾಕಂ ಶಂಭೋರ್ನೈವೇದ್ಯಮೇವ ನ।
ಅನಿವೇದ್ಯಂ ತು ಭುಂಜೀಯಾನ್ನರಕೇ ಕಾಲಮಕ್ಷಯಂ॥
ಇದು ಕಾರಣ ಕೂಡಲಚೆನ್ನಸಂಗಯ್ಯ,
ಭವಿಯ ಸಂಗ ಪುನರಪಿ ಜನ್ಮ. || ೬೫ ||

೨೦೫

ಲಿಂಗವಿಲ್ಲದೆ ನಡೆವನ, ಲಿಂಗವಿಲ್ಲದೆ ನುಡಿವನ, ಲಿಂಗವಿಲ್ಲದವನಂಗ ಸೂತಕ.
ಲಿಂಗಾಂಗಿ, ಲೌಕಿಕವ ಮುಟ್ಟಲಾಗದು.
ಲಿಂಗವಿಲ್ಲದೆ ಗಮಿಸಿದಡೆ ಆ ನಡೆನುಡಿ ಗೊಂಪೆ ಪಾತಕ.
ಲಿಂಗವಿಲ್ಲದೆ ನುಡಿವ ಶಬ್ದವ ಕೇಳಲಾಗದು, ಶಿವಶಿವಾ!
ಲಿಂಗವಿಲ್ಲದೆ ಉಗುಳು ನುಂಗಿದರೆ ಕಿಲ್ಬಿಷ,
ಕೂಡಲಚೆನ್ನಸಂಗಮದೇವಾ. || ೬೬ ||

೨೦೬

ಅಂಗಲಿಂಗಸಂಗ ಹಿಂಗಿ ಬಂದ ಸುಖವನಾರಿಗರ್ಪಿಸುವೆ?
ಹಿಂಗಲಾಗದು, ಶರಣಪಥಕ್ಕೆ ಸಲ್ಲದಾಗಿ,

ಹಿಂಗಲಾಗದು, ಭಕ್ತಿಪಥಕ್ಕೆ ಸಲ್ಲದಾಗಿ.
ಕೂಡಲಚೆನ್ನಸಂಗಮದೇವನ ಹಿಂಗಿ ನುಂಗಿದುಗು[ಳು] ಕಿಲ್ಬಿಷ. ॥ ೬೭ ॥

೨೦೭

ಗುರುವಾದಡೂ ಆಗಲಿ, ಲಿಂಗವಾದಡೆಯೂ ಆಗಲಿ,
ಜಂಗಮವಾದಡೆಯೂ ಆಗಲಿ
ಪಾದೋದಕ ಪ್ರಸಾದವಿಲ್ಲದ ಪಾಪಿಯ ಮುಖವ ತೋರಿಸದಿರಯ್ಯಾ.
ಭವಭಾರಿ ಜೀವಿಯ ಮುಖವ ತೋರಿಸದಿರಯ್ಯಾ.
ಅವರ ನಡೆವೊಂದು ನುಡಿವೊಂದು.
ಹಿರಿಯತನಕ್ಕೆ ಬೆಬ್ಬ ಬೆರತು ಉದರವ ಹೊರೆದುಕೊಂಡಿಹ
ಕ್ರೂರಕರ್ಮಿಯ ಮುಖವ ತೋರಿಸದಿರಯ್ಯಾ,
ಕೂಡಲಚೆನ್ನಸಂಗಯ್ಯಾ. ॥ ೬೮ ॥

೨೦೮

ಲಿಂಗಕ್ಕೆ ಗಿಣ್ಣಲ ಓಗರ, ಭಕ್ತಂಗೆ ತಳಿಗೆ ತುಂಬಿದ ಓಗರ, ಆನಿನ್ನೇವೆನಯ್ಯಾ!
ಲಿಂಗವ ಕಿರಿದು ಮಾಡಿ, ಅಂಗವ ಹಿರಿದು ಮಾಡಿ, ನಾನಿನ್ನೇವೆನಯ್ಯಾ!
ಲಿಂಗಕ್ಕೆ ಬಾರದ ರುಚಿ ಕೃತಕಿಲ್ಬಿಷ, ಆನಿನ್ನೇವೆನಯ್ಯಾ!
ಲಿಂಗಕ್ಕೆ ಬಾರದ ಭೋಗವ ಭೋಗಿಪರ ತೋರದಿರಯ್ಯಾ,
ಕೂಡಲಚೆನ್ನಸಂಗಮದೇವಾ. ॥ ೬೯ ॥

೨೦೯

ಅರ್ಪಿತವಲ್ಲದೊಲ್ಲೆನೆಂದು ಭಕ್ತನಟ್ಟ ಮಡಕೆವೆರಸಿಕೊಟ್ಟ ವಿಧಿಯ ನೋಡಾ.
ಅನ್ಯರಿಗಿಕ್ಕುವರೆ ಕೂಳಹುದೆ? ಬಂದ ಜಂಗಮಕ್ಕೆ ಓಗರವಹುದೆ?
ಇಂತು ಪ್ರಸಾದ ಬೀಸರವೋದ ವ್ರತಗೇಡಿಯ ತೋರದಿರು,
ಕೂಡಲಚೆನ್ನಸಂಗಮದೇವಾ. ॥ ೭೦ ॥

೨೧೦

ಆರೂ ಹಿರಿಯರಲ್ಲ, ಭಕ್ತಿಯ ಸಾಧಿಸುವರಲ್ಲ,
ಲಿಂಗಜಂಗಮಪ್ರಸಾದ ಆರಿಗೆಯೂ ಸಾರದೆ ಹೋಯಿತ್ತಯ್ಯಾ.
ಘನವ ವೇದಿಸಲರಿಯದೆ ಘನಮಹಿಮರು ಕಾಲನ ಬಾಯಿಗೆ ಗುರಿಯಾದರಯ್ಯಾ,
ಕೂಡಲಚೆನ್ನಸಂಗಮದೇವಾ. ॥ ೭೦ ॥

೨೧೧

ಪ್ರಕೃತಿವಿಡಿದಿಹುದು (ದೆ?) ಪ್ರಾಣ, ಪ್ರಾಣವಿಡಿಹುದು (ದೆ?) ಜ್ಞಾನ,
ಜ್ಞಾನವಿಡಿದಿಹುದು(ದೆ?) ಗುರು.
ಸಗುಣವೆಂದು ಹಿಡಿದು ಗುರುಲಿಂಗ ಜಂಗಮ ಪ್ರಸಾದವನು
ನಿರ್ಗುಣವೆಂದು ಬಿಡುವ ಸಂದೇಹಿ ವ್ರತಗೇಡಿಗಳ ತೋರಿಸದಿರಾ,
ಕೂಡಲಚೆನ್ನಸಂಗಮದೇವಾ. || ೬೨ ||

೨೧೨

ಅರಮನೆಯ ಕೂಳನಾದರೆಯೂ ತಂದು,
ಒಡಲ ಕುದಿಹಕ್ಕೆ ಲಿಂಗಾರ್ಪಿತವ ಮಾಡಿದರೆ
ಅದು ಲಿಂಗಾರ್ಪಿತವಹುದೆ? ಅಲ್ಲ, ಅದು ಅನರ್ಪಿತ.
ಅರ್ಪಿತಂ ಚ ಗುರೋರ್ವಾಕ್ಯಾತ್ಕಿಲ್ಬಿಷಂ ಸ್ಯಾದನರ್ಪಿತಂ|
ಯದ್ಯನರ್ಪಿತಂ ಭುಂಜೀಯಾನ್ ರೌರವಂ ನರಕಂ ವ್ರಜೇತ್||
ತನುಸಾಹಿತ್ಯ ಮನಸಾಹಿತ್ಯ ಧನಸಾಹಿತ್ಯ
ಲಿಂಗಸಾಹಿತ್ಯ ಪ್ರಸಾದಸಾಹಿತ್ಯವಾದ ಕಾರಣ,
ಕೂಡಲಚೆನ್ನಸಂಗಮದೇವರಲ್ಲಿ ಈ ಅನುವ ಬಸವಣ್ಣ ತೋರಿದನಾಗಿ,
ಆನು ಬದುಕಿದೆನು. || ೬೩ ||

೨೧೩

ಲಿಂಗಗ್ರಾಹಕ ಶರಣ ಅಂಗಭೋಗಕ್ಕೆ ವಿರೋಧಿಯಯ್ಯಾ.
ಜಂಗಮಗ್ರಾಹಕ ಶರಣ ಅರ್ಥಪ್ರಾಣಾಭಿಮಾನಕ್ಕೆ ವಿರೋಧಿಯಯ್ಯಾ,
ಪ್ರಸಾದಗ್ರಾಹಕ ಶರಣ ಜಿಹ್ವೆ[ಯ] ರುಚಿ[ಗೆ] ವಿರೋಧಿಯಯ್ಯಾ.
ಈ ತ್ರಿವಿಧಸಾಹಿತ್ಯ ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ. || ೬೪

೨೧೪

ಇಷ್ಟಲಿಂಗದಲ್ಲಿ ಸರ್ವಾಚಾರಸಹಿತ ಮನಸೋಂಕಿ ಆಚರಿಸುವಲ್ಲಿ
ಅಭ್ಯಾಸಿಯ ಅಭ್ಯಾಸಕ್ರೀಯೆ ಬಲಿದು,
ಇಷ್ಟಲಿಂಗದಲ್ಲಿ ಸರ್ವಾಚಾರಸಹಿತ ಮನ ನೆಮ್ಮಿ ಆಚರಿಸುವಲ್ಲಿ
ಮಾರ್ಗಕ್ರೀಯೆ ಬಲಿದು,
ಇಷ್ಟಲಿಂಗದಲ್ಲಿ ಸರ್ವಾಚಾರಸಹಿತ ಮನವರಿದು ಆಚರಿಸುವಲ್ಲಿ

ಮೀರಿದ ಕ್ರೀಯೆ ಬಲಿದು,
ಆ ಇಷ್ಟಲಿಂಗದಲ್ಲಿ ಸರ್ವಾಚಾರ ಸಹಿತ ಮನವಾಚರಿಸುವಲ್ಲಿ
ಮೀರಿದ ಕ್ರಿಯಾನಿಷ್ಪತ್ತಿ.
ಇಂತೀ ತ್ರಿವಿಧಸ್ಥಲವನೊಳಕೊಂಡ ಮಾರ್ಗಕ್ರೀ ಲಿಂಗದಲ್ಲಿ,
ಕೂಡಲಚೆನ್ನಸಂಗನಲ್ಲಿ ಈ ಕಾರ್ಯಕ್ಕೆ ಪ್ರಸಾದವಾಯಿತ್ತು. || ೭೫ ||

## ಮಾಹೇಶ್ವರನ ಪ್ರಾಣಲಿಂಗಿಸ್ಥಲ

೨೧೫

ಅಂಗವಿರೋಧಿ ಶರಣ, ಲಿಂಗಪ್ರಾಣಪ್ರತಿಗ್ರಾಹಕ.
ಅರ್ಥ ಪ್ರಾಣ ಅಭಿಮಾನ ವಿರೋಧಿಶರಣ, ಜಂಗಮಪ್ರಾಣಪ್ರತಿಗ್ರಾಹಕ.
ರುಚಿ ವಿರೋಧಿ ಶರಣ, ಪ್ರಸಾದಪ್ರಾಣಪ್ರತಿಗ್ರಾಹಕ.
ಈ ತ್ರಿವಿಧವ ಮೀರಿ ನಿಮ್ಮಲ್ಲಿ ನಿಂದ,
ಕೂಡಲಚೆನ್ನಸಂಗಾ ನಿಮ್ಮ ಶರಣ. || ೭೬ ||

೨೧೬

ಅಂಗದ ಮೇಲೆ ಲಿಂಗಸನ್ನಿಹಿತವಾದ ಬಳಿಕ
ಶ್ರೋತ್ರದಲ್ಲಿ ಅನ್ಯಶಬ್ದವ ಕೇಳನಾ ಶರಣನು.
ಅಂಗದ ಮೇಲೆ ಲಿಂಗಸನ್ನಿಹಿತವಾದ ಬಳಿಕ
ಅನ್ಯವ ಮುಟ್ಟನಾ ಶರಣನು.
ಅಂಗದ ಮೇಲೆ ಲಿಂಗಸನ್ನಿಹಿತದಾದ ಬಳಿಕ
ಅನ್ಯವ ನೋಡನಾ ಶರಣನು.
ಅಂಗದ ಮೇಲೆ ಲಿಂಗಸನ್ನಿಹಿತವಾದ ಬಳಿಕ
ಆಹಾರ ವ್ಯವಹಾರವನರಿಯನಾ ಶರಣನು.
ಅಂಗದ ಮೇಲೆ ಲಿಂಗಸನ್ನಿಹಿತವಾದ ಬಳಿಕ
ಅನ್ಯವ ಘ್ರಾಣಿಸನಾ ಶರಣನು.
ಅಂಗದ ಮೇಲೆ ಲಿಂಗಸನ್ನಿಹಿತವಾದ ಬಳಿಕ
ಬರಿ ಶಬ್ದವ ನುಡಿಯನಾ ಶರಣನು.
ಅಂಗದ ಮೇಲೆ ಲಿಂಗಸನ್ನಿಹಿತನಾಗಿ
ಕೂಡಲಚೆನ್ನಸಂಗಯ್ಯನಲ್ಲದನ್ಯವನರಿಯನಾ ಶರಣನು. || ೭೭ ||

೨೧೭

ಸದಾಚಾರಿಯಾದಡೆ: ಉಪ್ಪರಗುಡಿ ಸಿಂಧು ಪತಾಕೆ,
ಒಬ್ಬರಿಗೊಬ್ಬರು ಶರಣೆಂಬುವೆ ಸರ್ವತೀರ್ಥ.
ಭಕ್ತನ ದೇಹವೆ ತ್ರಿಕೂಟಿಕಾವರ್ಣ ಶಿವಾಲಯ,
ಕಾಲೇ ಕಡೆದ ಕಂಬ, ಶಿರವೆ ಸುವರ್ಣದ ಕಳಶ,
ಶಿವಾಚಾರ ಪೌಳಿ, ವಿಭೂತಿಯಲ್ಲಿ ಧವಳಿಸಿ,
ಪರದೈವಕ್ಕಂಜೆವೆಂಬ ಅಗುಳಿ ದಾರವಟ್ಟ ಬಿಯುಗವೊಪ್ಪುತ್ತಿರೆ,
ಹಸ್ತಾಗ್ರಪೂಜೆ, ಶಾಂತವೆ ಅಗ್ಘಣಿ, ಸಜ್ಜನವೆ ಮಜ್ಜನ,
ಸದಾ ಸನ್ನಿಹಿತವೆ ಲಿಂಗಪೂಜೆ, ಸತ್ಯವೆ ಅಡ್ಡಣಿಗೆ,
ಸಮತೆ ಪರಿಯಾಣ, ಮನ ಮೀಸಲೋಗರ.
ಲಿಂಗಬಣ್ಣಿಗೆಯ ಮೇಲೋಗರದಲ್ಲಿ
ದೇವರೊಲಿದಾರೋಗಣೆಯ ಮಾಡುತ್ತಿರಲು
ಹರುಷವೆ ಹಸ್ತಮಜ್ಜನ, ಪ್ರೀತಿಪ್ರೇಮವೆ ಕರ್ಪುರದ ವೀಳೆಯ,
ಕಲಿತನದ ಝೇಘಂಟೆ, ಛಲಪದದ ಕಹಳೆ ಭೇರಿ,
ವೀರವಂದನೆ ಮದ್ದಳೆ, ಕೇಳಿಕೆ ಸಂಪ್ರದಾಯವು.
ಇದುಕಾರಣ, ಕೂಡಲಚೆನ್ನಸಂಗಾ
ನಿಮ್ಮ ಶರಣ ಸರ್ವಾಂಗಲಿಂಗಿ. ॥ ೭೮ ॥

## ಮಾಹೇಶ್ವರನ ಶರಣಸ್ಥಲ

೨೧೮

ಸ್ನಾನ ಸಂಧ್ಯಾ [ವಂದನ] ಜಪ ಹೋಮಾದಿ ಕ್ರೀಗಳು ನಿಮ್ಮ ಶರಣಂಗೆ
ನೀವಲ್ಲದಿಲ್ಲಾಗಿ, ಇಲ್ಲಯ್ಯಾ.
ಅನ್ಯಕಾರ್ಯ ಅನರ್ಪಿತ ನಿಮ್ಮ ಶರಣಂಗೆ
ಲಿಂಗವನಗಲಿ ಇರನಾಗಿ, ಇಲ್ಲಯ್ಯಾ.
ಆಗಮೋಕ್ತವಹ ಅರ್ಚನೆ ಆಹ್ವಾನ ವಿಸರ್ಜನೆ ನಿಮ್ಮ ಶರಣಂಗೆ
ಅವಸಾನವಿಲ್ಲಾಗಿ, ಇಲ್ಲಯ್ಯಾ.
ಇಂತಪ್ಪ ಭಕ್ತಿಯ ಪದವನರಿಯದೆ

ಹರಿಬ್ರಹ್ಮಾದಿಗಳು ಬಂಧನಕ್ಕೊಳಗಾದರು.
ಈ ಪದವನರಿದ ಕಾರಣ ನಿಮ್ಮ ಶರಣಂಗೆ ಭವವಿಲ್ಲ ಬಂಧನವಿಲ್ಲ,
ಕೂಡಲಚೆನ್ನಸಂಗಯ್ಯನಲ್ಲಿ ದಾಸೋಹಿಯಾಗಿ. || ೭೯ ||

೨೧೯

ಉದಯ ಕಾಲ ಮಜ್ಜನಕ್ಕೆರೆಯಲಿಕ್ಕಾಗಿ,
ಉದಯ (ಉತ್ಪತ್ತಿ?) ಕಾಲಕರ್ಮ ಕೆಡಲಿಕ್ಕಾಗಿ (ಕೆಡುವುದಾಗಿ?)
ಮಧ್ಯಾಹ್ನಕಾಲ ಮಜ್ಜನಕ್ಕೆರೆಯಲಿಕ್ಕಾಗಿ,
ವರ್ತಮಾನ (ಸ್ಥಿತಿ?) ಕಾಲಕರ್ಮ ಕೆಡಲಿಕ್ಕಾಗಿ (ಕೆಡುವುದಾಗಿ?)
ಅಸ್ತಮಾನಕಾಲ ಮಜ್ಜನಕ್ಕೆರೆಯಲಿಕ್ಕಾಗಿ,
ಲಯಕಾಲ ಕರ್ಮವು ಕೆಡಲಿಕ್ಕಾಗಿ (ಕೆಡುವುದಾಗಿ?)
ಹೊತ್ತಾರಿನ ಪೂಜೆ ಬ್ರಹ್ಮಂಗೆ,
ಮಧ್ಯಾಹ್ನದ ಪೂಜೆ ವಿಷ್ಣುವಿಂಗೆ,
ಅಸ್ತಮಾನದ ಪೂಜೆ ರುದ್ರಂಗೆ.
ಇಂತೀ ತ್ರಿವಿಧಕಾಲ ಮಜ್ಜನಕ್ಕೆರೆದವ ಭವಭಾರಿ
ಇಂತು ತ್ರಿವಿಧಕಾಲ ನಾಸ್ತಿಯಾಗಿ ಮಜ್ಜನಕ್ಕೆರೆಯಬಲ್ಲನಾಗಿ
ಕೂಡಲಚೆನ್ನಸಂಗಯ್ಯಾ, ನಿಮ್ಮ ಶರಣ ಭವಕ್ಕೆ ಬಾರ. || ೮೦ ||

೨೨೦

ಸಜ್ಜನ ಸದ್ಭಾವಿ ಅನ್ಯರಲ್ಲಿ ಕೈಯ್ಯಾಂತು ಬೇಡ,
ಲಿಂಗವ ಮುಟ್ಟಿದ ಕೈಮೀಸಲು.
ಕಂಗಳಲ್ಲಿ ಒಸೆದು ನೋಡ ಪರವಧುವ.
ಮನದಲ್ಲಿ ನೆನೆಯನನ್ಯವ, ಮಾನವ ಸೇವೆಯ ಮಾಡ, ಲಿಂಗವ ಬೇಡ,
ಲಿಂಗದ ಹಂಗನೊಲ್ಲ, ಕೂಡಲಚೆನ್ನಸಂಗಾ ನಿಮ್ಮ ಶರಣ. || ೮೧ ||

೨೨೧

ಆಳ್ದರ (ಆದ್ಯರ?) ಅರವತ್ತು ವಚನಕ್ಕೆ ದಣ್ಣಾಯಕರಿಪ್ಪತ್ತು ವಚನ,
ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ,
ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನವು ಅಯ್ದು ವಚನ,
ಅಜಗಣ್ಣನ ಅಯ್ದು ವಚನಕ್ಕೆ ಕೂಡಲಚೆನ್ನಸಂಗಮದೇವಾ,
ಮಹಾದೇವಿಯಕ್ಕಗಳದೊಂದ ವಚನ. || ೮೨ ||

೨೨೨

ಭೂಮಿಗೆ ಕೆಸರುಗಲ್ಲನಿಕ್ಕಿ, ಪೋರುವ ಸ್ಥಳಗೊಳಿಸಿ,
ಅಂಡಜ ಉತ್ಪತ್ಯವಾದ ಬಳಿಕ ಹಿರಿಯರನಾರುವ ಕಾಣೆ.
ನರೆತೆರೆಗಳು ತೋರಿದವರು ಹಿರಿಯರೆಂಬೆನೆ? ಎನ್ನೆನು.
ಮತಿಗೆಟ್ಟು ಒಂದನಾಡಹೋಗಿ ಒಂಬತ್ತನಾಡುತ್ತಿದ್ದರೆ
ಹಿರಿಯರೆಂಬೆನೆ? ಎನ್ನೆನು.
ಕೂಡಲಚೆನ್ನಸಂಗಮದೇವರಲ್ಲಿ
ಹಿರಿಯತನದ ತೆರನ ಚೀಲಾಳ ಬಲ್ಲ. || ೮೩ ||

೨೨೩

ಹೊರಗಣ ಭವಿಯ ಕಳೆದೆವೆಂಬರು, ಒಳಗಣ ಭವಿಯ ಕಳೆಯಲರಿಯರು.
ಕಾಮವೆಂಬುದೊಂದು ಭವಿ, ಕ್ರೋಧವೆಂಬುದೊಂದು ಭವಿ,
ಲೋಭವೆಂಬುದೊಂದು ಭವಿ, ಮೋಹವೆಂಬುದೊಂದು ಭವಿ,
ಮದವೆಂಬುದೊಂದು ಭವಿ, ಮಚ್ಚರವೆಂಬುದೊಂದು ಭವಿ,
ಆಸೆಯೆಂಬುದೊಂದು ಭವಿ, ಆಮಿಷವೆಂಬುದೊಂದು ಭವಿ,
ಹೊನ್ನೆಂಬುದೊಂದು ಭವಿ, ಹೆಣ್ಣೆಂಬುದೊಂದು ಭವಿ,
ಮಣ್ಣೆಂಬುದೊಂದು ಭವಿ.
ಇಂತೀ ಭವಿಯ ಕಳೆದುಳಿದ ಕೂಡಲಚೆನ್ನಸಂಗಾ ನಿಮ್ಮ ಶರಣ. || ೮೪ ||

## ಮಾಹೇಶ್ವರನ ಐಕ್ಯಸ್ಥಲ

೨೨೪

ಕುಲವನರಿದೆವೆಂಬರು, ಆದಿಯ ಕುಲವನರಿಯದ ಕಾರಣ
ವ್ಯಾಕುಲಗೊಂಡಿತ್ತು ತ್ರೈಜಗ ನೋಡಾ.
ಕುಲವಲ್ಲಾ ಹೊನ್ನು? ಕುಲವಲ್ಲಾ ಹೆಣ್ಣು? ಕುಲವಲ್ಲಾ ಮಣ್ಣು?
ಆದಿಬಿಂದುರ್ಭವೇದ್ಬೀಜಂ ಬೀಜ ಮಧ್ಯಸ್ಥಿತಂ ಕುಲಂ।
ಬೀಜಂ ನಾಸ್ತಿಕುಲಂ ನಾಸ್ತಿ ತಸ್ಮೈಶಿವಕುಲಂ ಭವೇತ್॥
ಎಂದುದಾಗಿ, ಹೊನ್ನು ಹೆಣ್ಣು ಮಣ್ಣು ತ್ರಿವಿಧವನತಿಗಳೆದು
ನಿರಾಕುಲನಾದ ಬಳಿಕ ಕುಲಂ ನಾಸ್ತಿ, ಕೂಡಲಚೆನ್ನಸಂಗಮದೇವಾ. || ೮೫ ||

೨೨೫

ಲೋಕವನು ಹೊದ್ದ, ಲೌಕಿಕವ ಬೆರಸ, ಏಕಗ್ರಾಹಿ ಶರಣ,
ಲಿಂಗವ ಪೂಜಿಸಿ ಅನ್ಯವನರಿಯದ ಅಚ್ಚಲಿಂಗೈಕ್ಯ,
ಕೂಡಲಚೆನ್ನಸಂಗಾ ನಿಮ್ಮ ಶರಣ || ೮೬ ||

೨೨೬

ಗುರುವೆನ್ನ ತನುವ ಬೆರಸಿದ ಕಾರಣ,
ಗುರುವಿನ ತನುವ ನಾ ಬೆರಸಿದ ಕಾರಣ, ಗುರು ಶುದ್ಧನಾದನಯ್ಯಾ.
ಲಿಂಗವೆನ್ನ ಮನವ ಬೆರಸಿದ ಕಾರಣ,
ಲಿಂಗದ ಮನವ ನಾ ಬೆರಸಿದ ಕಾರಣ, ಲಿಂಗ ಶುದ್ಧವಾದನಯ್ಯಾ.
ಜಂಗಮವೆನ್ನ ಜಿಹ್ವೆಯ ಬೆರಸಿದ ಕಾರಣ,
ಜಂಗಮದ ಜಿಹ್ವೆಯ ನಾ ಬೆರಸಿದ ಕಾರಣ, ಜಂಗಮ ಶುದ್ಧನಾದನಯ್ಯಾ.
ಈ ಮೂವರು ತಮ್ಮಿಂದ ತಾವಾಗಲರಿಯದೆ
ಎನ್ನ ಮುಟ್ಟಿ ಶುದ್ಧವಾದರು ಕಾಣಾ,
ಕೂಡಲಚೆನ್ನಸಂಗಮದೇವಾ. || ೮೭ ||

೨೨೭

ಅಂಗದಿಂದ ಲಿಂಗಸುಖ, ಲಿಂಗದಿಂದ ಅಂಗಸುಖ,
ಅಂಗಲಿಂಗಸಂಗದಿಂದ ಪರಮಸುಖ ನೋಡಯ್ಯಾ.
ಅಂಗಲಿಂಗಸಂಗದ ಸುಖವನು
ಕೂಡಲಚೆನ್ನಸಂಗನಲ್ಲಿ ಲಿಂಗೈಕ್ಯ ಬಲ್ಲ. || ೮೮ ||



# ಪ್ರಸಾದಿಯ ಜ್ಞಾನಿಸ್ಥಲ

೨೨೮

ಸದ್ಗುರು ಕಾರುಣ್ಯವ ಪಡೆದು, ಪೂರ್ವಗುಣವಳಿದು,
ಪುನರ್ಜಾತನಾದ ಬಳಿಕ ಭಕ್ತನಾಗಿ,
ಆ ಸದ್ಗುರು, ಪರಶಿವ, ಪ್ರಾಣಾತ್ಮ
–ಈ ತ್ರಿವಿಧವು ಏಕಾರ್ಥವಾಗಿ ಲಿಂಗ ಪ್ರವೇಶವಂ ಮಾಡಿ,
ಆ ಮಹಾಲಿಂಗವನು ಸದ್ಭಕ್ತಂಗೆ ಕರುಣಿಸಿ
ಪ್ರಾಣಲಿಂಗವಾಗಿ ಬಿಜಯಂಗೆಯಿಸಿ ಕೊಟ್ಟು,
ಲಿಂಗಪ್ರಾಣ ಪ್ರಾಣಲಿಂಗ ಲಿಂಗವಂಗ ಅಂಗಲಿಂಗವೆನಿಸಿ
ಭಕ್ತಕಾಯ ಮಮಕಾಯವಾಗಿ
ಅಂಗದ ಮೇಲೆ ಲಿಂಗಸ್ಥಾಪ್ಯವಂ ಮಾಡಿ,
"ಆ ಮಹಾಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರವನು ಮಾಡು"
ಎಂದು ಶ್ರೀ ಗುರುವಾಜ್ಞೆಯಂ ಮಾಡಲು,
"ಮಹಾಪ್ರಸಾದ"ವೆಂದು ಆಜ್ಞೆಯಂ ಕೈಕೊಂಡು
ಕ್ರಿಯಾಮಾರ್ಗದಿಂ ಮಾಡುವಲ್ಲಿ,
ದೀಪಾರಾಧನೆ ಪರಿಯಂತರ ಆಗಮಮಾರ್ಗದಲೂ ಮಾಡಿ
ನೈವೇದ್ಯ ಕ್ರಿಯುಮಾಡುವಲ್ಲಿ, ಆಗಮಮಾರ್ಗದಲೂ,
ಸರ್ವ ರಸ ಫಲ–ಪುಷ್ಪ ಪಾಕಾದಿ ಮಹಾದ್ರವ್ಯಂಗಳನು
ಪಂಚೇಂದ್ರಿಯಂಗಳ ಪಂಚಸ್ಥಾನ ಪ್ರವೇಶವಾದ ಮಹಾಲಿಂಗಕ್ಕೆ ಅರ್ಪಿಸುವಲ್ಲಿ
ದ್ರವ್ಯಂಗಳ ಸುರೂಪವನು ಶ್ವೇತ ಹರಿತ ಕೃಷ್ಣ ಕಪೋತಾದಿ
ಷಡುವರ್ಣ ಮಿಶ್ರವಾದ ಮೂವತ್ತಾರು ಬಹುವಿಧ ವರ್ಣಂಗಳನು,
ಕಂಗಳಲ್ಲಿ ನೋಡಿ, ಕಂಡು, ಅರಿದು, ಕುರೂಪ ಕಳೆದು,
ಸುರೂಪವನು ಕಂಗಳು ಲಿಂಗಕ್ಕರ್ಪಿಸುವಲ್ಲಿ
ಸ್ವಯಭಾಜನವೋ ? ಲಿಂಗಭಾಜನವೋ ?
ಆ ಕಾಲದಲು ಸೂತಕವಿಲ್ಲ, ದೋಷವಿಲ್ಲ;
ರೂಪು ಲಿಂಗಕ್ಕರ್ಪಿತವಾಯಿತ್ತು.
ದ್ರವ್ಯಂಗಳ ಪವಿತ್ರ ಅಪವಿತ್ರಂಗಳನು, ವೇದನಾದ ಮಂತ್ರಂಗಳಾದಿಯಾದವನು
ಸುಶಬ್ದ ಕುಶಬ್ದಂಗಳನು ಶ್ರೋತ್ರವರಿದು, ಶ್ರೋತ್ರ ಕೇಳಿ, ಕುಶಬ್ದವ ಕಳೆದು,
ಸುಶಬ್ದವನು ಶ್ರೋತ್ರದಿಂ ಲಿಂಗಕ್ಕರ್ಪಿಸುವಲ್ಲಿ

ಸ್ವಯಭಾಜನವೋ ? ಲಿಂಗಭಾಜನವೋ ?
ಆ ಕಾಲದಲು ಸೂತಕವಿಲ್ಲ, ದೋಷವಿಲ್ಲ,
ಶಬ್ದದ್ರವ್ಯಂಗಳು ಶ್ರೋತ್ರದಿಂ ಲಿಂಗಕ್ಕರ್ಪಿತವಾಯಿತ್ತು.
ದ್ರವ್ಯಂಗಳ ಸುಗಂಧ ದುರ್ಗಂಧಗಳನು ಘ್ರಾಣವರಿದು, ಘ್ರಾಣವಾಸಿಸಿ,
ದುರ್ಗಂಧವ ಕಳೆದು ಸುಗಂಧವನು ಘ್ರಾಣದಿಂ ಲಿಂಗಕ್ಕರ್ಪಿಸುವಲ್ಲಿ
ಸ್ವಯಭಾಜನವೋ ? ಲಿಂಗ ಭಾಜನವೋ ?
ಆ ಕಾಲದಲು ಸೂತಕವಿಲ್ಲ ದೋಷವಿಲ್ಲ;
ಘ್ರಾಣದಿಂ ಸುಗಂಧ ಲಿಂಗಾರ್ಪಿತವಾಯಿತ್ತು.
ದ್ರವ್ಯಂಗಳ ಮೃದುಕಠಿಣ ಶೀತೋಷ್ಣಂಗಳನು ಪರುಶನದಿಂ ಪರುಶಿಸಿ
ಪರುಶನವರಿದು ತತ್ಕಾಲೋಚಿತ ದ್ರವ್ಯಂಗಳನು
ಅನುವರಿದು ಪರುಶನದಿಂ ಪರುಶಿಸಿ ಲಿಂಗಕ್ಕರ್ಪಿಸುವಲ್ಲಿ
ಸ್ವಯಭಾಜನವೋ ? ಲಿಂಗಭಾಜನವೋ ?
ಆ ಕಾಲದಲು ಸೂತಕವಿಲ್ಲ, ದೋಷವಿಲ್ಲ,
ದ್ರವ್ಯಂಗಳ ಮೃದುಕಠಿಣ ಶೀತೋಷ್ಣಂಗಳು
ಪರುಶನದಿಂ ಲಿಂಗಾರ್ಪಿತವಾಯಿತ್ತು.
ಮಹಾದ್ರವ್ಯಂಗಳ ರೂಪು ಶಬ್ದ ಗಂಧ ಮೃದುಕಠಿಣ ಶೀತೋಷ್ಣ ವೊದಲಾದುವು
ನಾಲ್ಕು ತೆರ, ನಾಲ್ಕು ಇಂದ್ರಿಯದಿಂ ಲಿಂಗಾರ್ಪಿತವಾಯಿತ್ತು.
ದ್ರವ್ಯಂಗಳ ಸುರೂಪವನು ಕಂಗಳಿಂದರ್ಪಿಸುವಂತೆ
ಶ್ರೋತ್ರಘ್ರಾಣ ಸ್ಪರ್ಶ ಜಿಹ್ವೆ ವೊದಲಾದ
ನಾಲ್ಕು ಇಂದ್ರಿಯಂಗಳಲ್ಲಿ ಅರ್ಪಿಸಬಾರದು,
ಕಂಗಳಲ್ಲಿ ರೂಪ ನರ್ಪಿಸಬೇಕು.
ಸುಶಬ್ದವನು ಶ್ರೋತ್ರದಿಂದರ್ಪಿಸುವಂತೆ,
ಚಕ್ಷು ಘ್ರಾಣ ಜಿಹ್ವೆ ಸ್ಪರುಶ ವೊದಲಾದ
ನಾಲ್ಕೂ ಇಂದ್ರಿಂಗಳಿಂದರ್ಪಿಸಬಾರದು,
ಸುಶಬ್ದವನು ಶ್ರೋತ್ರದಿಂದಿವೆ ಅರ್ಪಿಸಬೇಕು.
ಸುಗಂಧವನು ಘ್ರಾಣದಿಂದರ್ಪಿಸುವಂತೆ
ನೇತ್ರ ಶ್ರೋತ್ರ ಸ್ಪರ್ಶಜಿಹ್ವೆ ವೊದಲಾದ
ನಾಲ್ಕು ಇಂದ್ರಿಯಂಗಳಲ್ಲಿ ಅರ್ಪಿಸಬಾರದು,
ಸುಗಂಧವನು ಘ್ರಾಣದಿಂದವೆ ಅರ್ಪಿಸಬೇಕು.
ಮೃದು ಕಠಿಣ ಶೀತೋಷ್ಣಂಗಳನು ಸ್ಪರುಶನದಿಂದರ್ಪಿಸುವಂತೆ
ನೇತ್ರ ಶ್ರೋತ್ರ ಘ್ರಾಣಜಿಹ್ವೆ ವೊದಲಾದ
ನಾಲ್ಕೂ ಇಂದ್ರಿಯಂಗಳಿಂದ ಅರ್ಪಿಸಬಾರದು,
ಮೃದು ಕಠಿಣ ಶೀತೋಷ್ಣ ದ್ರವ್ಯಂಗಳನು ಸ್ಪರುಶನದಿಂದರ್ಪಿಸಬೇಕು.

ನಾಲ್ಕು ಇಂದ್ರಿಯದಿಂ ರೂಪು ಶಬ್ದಗಂಧ ಮೃದುಕಠಿಣ ಶೀತೋಷ್ಣ
[ದ್ರವ್ಯಂಗಳ ಲಿಂಗಾರ್ಪಿತವಾಯಿತ್ತು]
ಮಹಾದ್ರವ್ಯಂಗಳ ಸುರಸವನು ಮಹಾರುಚಿಯನು
ಜಿಹ್ವೆಯಿಂದರ್ಪಿಸುವಂತೆ ನೇತ್ರ ಶ್ರೋತ್ರ ಘ್ರಾಣ ಸ್ಪರುಶನ ಮೊದಲಾದ
ಈ ನಾಲ್ಕು ಇಂದ್ರಿಯಂಗಳಿಂದರ್ಪಿಸಬಹುವೆ ? ಹೇಳಿರಣ್ಣಾ.
ಮಹಾರಸವನು ಮಹಾರುಚಿಯನು ಜಿಹ್ವೆಯಿಂದವೆ ಅರ್ಪಿಸಬೇಕು.
ಅಹಂಗಲ್ಲದೆ ಲಿಂಗಾರ್ಪಿತವಾಗದು, ಆ ಲಿಂಗದ ಆರೋಗಣೆಯಾಗದು.
ಮಹಾರಸವನು ರುಚಿಯನು ಜಿಹ್ವೆಯಿಂದರ್ಪಿಸುವಲ್ಲಿ
ಸೂತಕವೆಂದು ದೋಷವೆಂದು ಸ್ವಯಭಾಜನವಾಗದೆಂದು
ಭಿನ್ನಭಾಜನವಾಗಬೇಕೆಂದು ದೇವರ ಆರೋಗಣೆಗೆ ಮುನ್ನವೇ ಇದ್ದ
ಪರಿಯಾಣವ ತೆಗೆದ ಕಷ್ಟವ ನೋಡಾ! ಅಗಲನಾರಡಿಗೊಂಬ ಪಾಪವ ನೋಡಾ
ಅಕಟಕಟಾ ! ಈ ಪರಿಯೆ ಲಿಂಗಾರ್ಚನೆ ?
ಈ ಪರಿಯೆ ಲಿಂಗಾರ್ಪಿತವ ಮಾಡಿ ಪ್ರಸಾದವ ಪಡೆವ ಪರಿ ?
ಈ ಪರಿಯೆ ಭಕ್ತಿ ? ಈ ಪರಿಯೆ ಜ್ಞಾನ ?
ಇಂತಲ್ಲ ಕೇಳಿರಣ್ಣಾ, ಕರ್ತೃ ಭೃತ್ಯ ಸಂಬಂಧದ ಪರಿ.
ದೇವರ ಪರಿಯಾಣದಲು ದೇವರಿಗೆ ಬಂದ ಸರ್ವದ್ರವ್ಯಮಹಾರಸಂಗಳನು,
ಮಹಾರುಚಿಯನು ಭಕ್ತದೇಹಿಕ ದೇವನಾಗಿ
ದೇವರ ಜಿಹ್ವೆಯಲ್ಲಿ ದೇವಾದಿದೇವ ಮಹಾದೇವಂಗರ್ಪಿಸಬೇಕು. ಸ್ಮೃತಿ:
ರೂಪಂ ಸಮರ್ಪಿತಂ ಶುದ್ಧಂ ರುಚಿಃ ಸಿದ್ಧಂತು ವಿಶ್ರುತಂ
ಏತತ್ಸಮಾಗತಾ ತೃಪ್ತಿಃ ಪ್ರಸಿದ್ಧಂ ತು ಪ್ರಸಾದಕಂ||
ದರ್ಪಣಂ ಧೂಪದೀಪೌ ಚ ನಾನಾರುಚಿಸುಖಂ ಬಹು|
ಪ್ರಸಾದ ಏವ ಭೋಕ್ತವ್ಯೋ ಅನ್ಯದ್ಗೋಮಾಂಸಸನ್ನಿಭಂ ||
ರೂಪಂ ಸಮರ್ಪಯೇದ್ದ್ರವ್ಯಂ ರುಚಿಮಪ್ಯರ್ಪಯೇತ್ತತಃ|
ಉಭಯಾರ್ಪಣವಿಹೀನಶ್ಚೇತ್ ಪ್ರಸಾದೋ ನಿಷ್ಫಲೋ ಭವೇತ್||
ನೈವೇದ್ಯಂ ಪುರತೋ ನ್ಯಸ್ತಂ ದರ್ಶನಾತ್ ಸ್ವೀಕೃತಂ ಮಯಾ|
ರಸಾನ್ ಭಕ್ತಸ್ಯ ಜಿಹ್ವಾಗ್ರಾದಶ್ನಾಮಿ ಕಮಲೋದ್ಭವ||
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧೋ ಮಹಾರುಚಿಃ|
ತತ್ತಲ್ಲಿಂಗಮುಖೇನೈವ ಅರ್ಪಿತಂ ಸ್ಯಾತ್ಸಮರ್ಪಣಂ||
ಅರ್ಪಿತಾನರ್ಪಿತಂ ಸ್ಥಾನಂ ಇಂದ್ರಿಯಾದಿಂದ್ರಿಯಂ ಯಥಾ|
ಇಂದ್ರಿಯಸ್ಥಾನ ತತ್ಕರ್ಮ ಸಮಾರ್ಪಿತ ಕ್ರಿಯಾರ್ಪಿತಂ||
....................ಜ್ಞಾನಾರ್ಪಣ ಕ್ರಿಯಾರ್ಪಣೇ|
ಉಭಯಾರ್ಪಣ ಹೀನಸ್ಯ ಪ್ರಸಾದೋ ನಿಷ್ಫಲೋ ಭವೇತ್||
ಗರ್ಭಿಣ್ಯಾ ಗರ್ಭದೇಹಸ್ಯ ಸರ್ವಭೋಗಸ್ಸಮೋ ಭವೇತ್|
ಲಿಂಗಿನಾಂ ಲಿಂಗಭೋಗೇನ ಪ್ರಸಾದಃ ಸಹ ಸಂಭವೇತ್||

ಗರ್ಭಿಣೀ ಸರ್ವ ಭೋಗೇಷು ಶಿಶೂನಾಂ ತೃಪ್ತಿ ಸಂಭವಃ।
ಲಿಂಗಿನಾಂ ಲಿಂಗ ಭೋಗೇಷು ಪ್ರಸಾದಸ್ಸಂಭವೇತ್ತಥಾ॥
ಯಥಾ ಚ ಗರ್ಭಿಣೀ ಭೋಗೇ ಶಿಶೂನಾಂ ತೃಪ್ತಿಸಂಭವಃ।
ತಥಾ ಲಿಂಗಸ್ಯ ಭೋಗೇಷು ಅಂಗಸ್ತೃಪ್ತಿಮವಾಪ್ನುಯಾತ್॥
ಗರ್ಭೀಕೃತಸ್ಯ ಪ್ರಾಣಸ್ತು ಗರ್ಭಿಣೀಭೋಗ ಮಾಶ್ರಿತಃ।
ಲಿಂಗ ಗರ್ಭೀಕೃತೋ ಲಿಂಗೀ ಲಿಂಗಭೋಗು ಸಮಾಶ್ರಿತಃ॥
ಮತ್ತೊಂದಾಗಮದಲ್ಲಿ:
ಭಕ್ತಕಾಯೋ ಮಹಾದೇವೋ ಭಕ್ತಾತ್ಮಾ ಚ ಸದಾಶಿವಃ।
ಭಕ್ತ ಭೋಗೋಪಭೋಗಶ್ಚ ಭೋಗಸ್ತಸ್ಯ ವಿಧೀಯತೇ॥
ಲಿಂಗದೇಹೀ ಶಿವಾತ್ಮಾಯಂ ಲಿಂಗಾಚಾರೋನ ಲೌಕಿಕಃ।
ಸರ್ವಲಿಂಗಮಯಂ ರೂಪಂ ಲಿಂಗೇನ ಸಮಮಶ್ನುತೇ॥
ಘ್ರಾಣಸ್ತಸ್ಯೈವ ಘ್ರಾಣಶ್ಚ ದೃಷ್ಟಿರ್ದೃಷ್ಟಿಃ ಶ್ರುತಿಃ ಶ್ರುತಿಃ।
ಸ್ಪರ್ಶನಂ ಸ್ಪರ್ಶನಂ ವಿದ್ಯಾದ್ ಗ್ರಾಹ್ಯಂ ತದ್ಗ್ರಾಹ್ಯಮೇವ ಚ॥
ಭುಕ್ತಂ ತದ್ಭುಕ್ತಮಾಖ್ಯಾತಂ ತೃಪ್ತಿ ಸ್ತತ್ತೃಪ್ತಿರೇವ ಚ।
ತಸ್ಯೈಕಃ ಪ್ರಾಣ ಆಖ್ಯಾತ ಇತ್ಯೇತತ್ಸಪವರ್ಶಿ ನಾಂ॥
ಲಿಂಗದೃಷ್ಟಿ ನಿರೀಕ್ಷಾ ಸ್ಯಾಲ್ಲಿಂಗಹಸ್ತೋಪಸ್ಪರ್ಶನಂ।
ಲಿಂಗ ಶ್ರೋತ್ರೇಣ ಶ್ರವಣಂ ಲಿಂಗ ಜಿಹ್ವಾರಸಾನ್ನವಾನ್॥
ಲಿಂಗ ಘ್ರಾಣಸ್ತು ಘ್ರಾಣಶ್ಚ ಲಿಂಗೇನ ಸಹ ವರ್ತತೇ।
ಲಿಂಗಂ ಮನೋಗತಂ ವಾಪಿ ಇತ್ಯೇತ್ಯೈಃ ಸಹ ಭೋಜನಂ॥
ಲೋಕಾಚಾರನಿಬದ್ಧಸ್ತು ಲೋಕಾಲೋಕ ವಿವರ್ಜಿತಃ।
ಲೋಕಾಚಾರ ಪರಿತ್ಯಾಗೀ ಪ್ರಾಣಲಿಂಗೀತಿ ಸಂಸ್ಮೃತಃ॥
ನ ಪ್ರಾಣಲಿಂಗಿನಃ ಕಾಲೋ ನ ಲಿಂಗಪ್ರಾಣಿನಃ ಕ್ರಿಯಾ।
ಕಾಲಕರ್ಮ ದ್ವಯಂ ನಾಸ್ತಿ ಶರಣಸ್ಯ ಪ್ರಸಾದತಃ॥
ಇಂತೆಂದುದಾಗಿ ಇದು ಲಿಂಗಾರ್ಚನೆಯ ಪರಿ,
ಇಂತಲ್ಲದೆ ರುಚಿಯಾರ್ಪಿತಕ್ಕೆ ಮುನ್ನವೆ
ಪರಿಯಾಣವ ತೆಗೆಯಲು ಲಿಂಗಾರ್ಚನೆಯ ಕ್ರೀ ತಪ್ಪಿತ್ತು.
ಶ್ರೀ ಗುರುವಾಜ್ಞೆಯ ಮೀರಿದವನು ಜ್ಞಾನಿಯುಲ್ಲ, ಭಕ್ತನಲ್ಲ ಕೇಳಿರೇ.
ಆವನಾನು ಮಹಾರಾಜಂಗೆ ಆರೋಗಣೆಗೆ ಮುನ್ನವೆ ಪರಿಯಾಣವ ತೆಗೆಯಲು
ದ್ರೋಹ, ಶಾಸ್ತಿಗೊಳಗಾದರು, ಇದು ದೃಷ್ಟ ನೋಡಿರೆ.
ರಾಜಾಧಿರಾಜ ಮಹಾರಾಜ ದೇವಾಧಿದೇವ ಮಹಾದೇವಂಗೆ ಆರೋಗಣೆಗೆ ಮುನ್ನ
ಪರಿಯಾಣವ ತೆಗೆಯಲು ಮಹಾದ್ರೋಹ.
ಇದನರಿದು ಶ್ರೀ ಗುರುವಾಜ್ಞೆಯ ತಪ್ಪದೆ, ಲಿಂಗಾರ್ಚನೆಯ ಕ್ರೀ ತಪ್ಪದೆ
ದೇವರ ಪರಿಯಾಣದಲು ಮಹಾರಸ ದ್ರವ್ಯ ಪದಾರ್ಥಂಗಳನಿಟ್ಟು

ಶ್ರೀಗುರು ಸಹಿತ ಜಂಗಮಸಹಿತ ಲಿಂಗಾರ್ಪಿತ ಮಾಡುವುದು.
ಪಂಚೇಂದ್ರಿಯಗಳ ಪಂಚಸ್ಥಾನ ಪ್ರವೇಶವಾದ ಮಹಾಲಿಂಗಕ್ಕೆ,
ಶಬ್ದ ಸ್ಪರ್ಶ ರೂಪ ರಸ [ಗಂಧಂಗಳನು] ಮನೋವಾಕ್ಕಾಯದಲ್ಲಿ ಭೋಗಿಸುವ
ಭೋಗವೆಲ್ಲವನು ಅರ್ಪಿಸೂದು.
ಮೇಲೆ ತಾಂಬೂಲದಿಂ ಅಷ್ಟವಿಧಾರ್ಚನೆ ಷೋಡಶೋಪಚಾರವನು ಮಾಡಿ,
ಲಿಂಗಾರ್ಚನೆಯಂ ಮಾಡಿ, ಪ್ರಸಾದವ ಪಡದು, ಆ ಮಹಾಪ್ರಸಾದದಿಂ
ಪ್ರಸಾದಿಯಪ್ಪುದು ಕೂಡಲಚೆನ್ನಸಂಗಮದೇವಾ. ॥ ೧ ॥

೨೨೯

ಗುರುಕಾರುಣ್ಯವ ಪಡೆದ ಬಳಿಕ ಕೂಡೆ ಭವಿಗಳ ಬಿಡಲೇಬೇಕು.
ಲಿಂಗಸಂಗಿಯಾದ ಬಳಿಕ ದುಸ್ಸಂಗ ಹಿಂಗಲೇಬೇಕು.
ಅರ್ಪಿತವಲ್ಲದೆ ಮುಟ್ಟೆವೆಂದರೆ, ತಟ್ಟುವ ಮುಟ್ಟುವ ವರ್ಮಸರಿಯಬೇಕು.
ಪ್ರಸಾದಕಲ್ಲದೆ ಬಾಯಿದೆರೆಯೆನೆಂದರೆ ಸರ್ವಭವಿಪಾಕವ ಬಿಡಬೇಕು.
ಇದು ಕಾರಣ, ಕೂಡಲಚೆನ್ನಸಂಗನಲ್ಲಿ
ಶಿವಾಚಾರಸಂಪತ್ತಿಲ್ಲದವರ ಮನೆಯ ಹುಗಲಾದು. ॥ ೨ ॥

೨೩೦

ಹೊನ್ನು ಭಕ್ತನೆಂಬೆನೆ? ಹೊನ್ನಿನೊಳಗಣ ಮುದ್ರೆ ಭವಿ.
ಹೆಣ್ಣು ಭಕ್ತನೆಂಬೆನೆ? ಹೆಣ್ಣಿನೊಳಗಣ ವಿರಹ ಭವಿ.
ಮಣ್ಣು ಭಕ್ತನೆಂಬೆನೆ? ಮಣ್ಣಿನೊಳಗಣ ಬೆಳೆಸು ಭವಿ.
ಈ ತ್ರಿವಿಧ ಭವಿಯ ಕಳೆದು ಪ್ರಸಾದವ ಮಾಡಿಕೊಳಬಲ್ಲರೆ
ಕೂಡಲಚೆನ್ನಸಂಗನಲ್ಲಿ ಅಚ್ಚಶೀಲವಂತನೆಂಬೆ. ॥ ೩ ॥

೨೩೧

ಭಕ್ತಿ ಪದಾರ್ಥವನರಿದ ಮಹೇಶ್ವರನು
ತನ್ನಲ್ಲಿ ತಾನು ಸುಯಿಧಾನಿಯಾಗಿರಬೇಕು.
ಎಲ್ಲಿ? ಲಿಂಗದಲ್ಲಿ; ಎಲ್ಲಿ? ಜಂಗಮದಲ್ಲಿ; ಎಲ್ಲಿ? ಪ್ರಸಾದದಲ್ಲಿ.
ಸುಯಿಧಾನಿಯಾಗದಿದ್ದರೆ "ಶ್ವಗರ್ಭೇಷು ಜಾಯತೇ"
ಎಂದುದು ಕೂಡಲಚೆನ್ನಸಂಗನ ವಚನ. ॥ ೪ ॥

೨೩೨

ಹುಟ್ಟದ ಯೋನಿಯಿಲ್ಲ, ಮೆಟ್ಟದ ನೆಲನಿಲ್ಲ, ಉಣ್ಣದಾಹಾರವಿಲ್ಲ
ಆವರ್ತನ, ಪರಿವರ್ತನ!
ಕಾಲಚಕ್ರ ಕರ್ಮಚಕ್ರ ಬಿಂದುಚಕ್ರ ನಾದಚಕ್ರದ ದಾರಿಯಲ್ಲಿ
ನುಗ್ಗು ನುಸಿಯಾದ ಜೀವಂಗಳು ಮುಟ್ಟಬಹುದೆ ಗುರುವ?
ಅರ್ಚಿಸಬಹುದೆ ಲಿಂಗವ? ಕೊಳಬಹುದೆ ಪ್ರಸಾದವ? ಭವಂ ನಾಸ್ತಿಯಾದಂಗಲ್ಲದೆ.
ನಾನಾಯೋನಿ ಸಹಸ್ರಾಣಿ ಕೃತ್ವಾ ಚೈವಂತು ಮಾಯಯಾ।
ಆಹಾರಂ ವಿವಿಧಾಹಾರಂ ಪೀತ್ವಾ ತು ವಿವಿಧಾಃ ಸ್ತನಾ। —ಎಂದುದಾಗಿ,
ಇದು ಕಾರಣ ಕೂಡಲಚೆನ್ನಸಂಗಯ್ಯಾ
ತ್ರಿಸ್ಥಾನ ಶುದ್ಧವಾದಂಗಲ್ಲದೆ ನಾನಾ ಆಹಾರ ಕೊಟ್ಟು ಪ್ರಸಾದಿಯಾಗ. ॥ ೫ ॥

೨೩೩

ಅಂಗದ ಮೇಲೆ ಲಿಂಗವುಳ್ಳವರು ಲಿಂಗಕ್ಕೆ ಬೋನವ ಮಾಡಲಾಗದು.
ಮಾಡಿದರೆ [ಮಾಡಲಿ]
ಅವರು ಮಾಡಿದ ಬೋನವ ಲಿಂಗಕ್ಕೆ ಕೊಟ್ಟು ಪ್ರಸಾದವೆಂದು ಕೊಂಡರೆ,
ಕುಂಭೀಪಾಕ ನಾಯಕ ನರಕ ಕೂಡಲಚೆನ್ನಸಂಗಮದೇವಾ. ॥ ೬ ॥

೨೩೪

ಗುರುಕಾರುಣ್ಯವುಂಟು, ಭಕ್ತರೆಂದೆಂಬರು.
[ಶೈವ] ಗುರುಕಾರುಣ್ಯವುಳ್ಳರೆ ಭಕ್ತರೆಂತಪ್ಪರಯ್ಯಾ,
ಅಂಗದ ಮೇಲೆ ಲಿಂಗವಿಲ್ಲದನ್ನಕ್ಕ?
ಪ್ರಸಾದಕಾಯವಾಗದನ್ನಕ್ಕ?
ಈ ಪಂಚಭೂತ ಕಾಯವ ಪ್ರಸಾದಕಾಯವೆಂದು ಹೆಸರಿಟ್ಟುಕೊಂಡು ನುಡಿವ
ಪಾತಕರ ನುಡಿಯ ಕೇಳಲಾಗದು.
ಪಂಚೇಂದ್ರಿಯಂಗಳ ಗುಣದಲ್ಲಿ ನಡೆವರನೊಳಗಿಟ್ಟುಕೊಂಡು ನಡೆದರೆ
ಭಕ್ತಿಹೀನರೆನಿಸಿತ್ತು ಕೂಡಲಚೆನ್ನಸಂಗನ ವಚನ. ॥ ೭ ॥

೨೩೫

ಅಷ್ಟವಿಧಾರ್ಚನೆಯ ಮಾಡಬಲ್ಲರೆ ಅಂಗಸುಖಂಗಳನರಿಯದಿರಬೇಕು.
ಲಿಂಗಾರ್ಚನೆಯ ಮಾಡಬಲ್ಲರೆ ಕಾಮ ಕ್ರೋಧ ಲೋಭ
ಮೋಹ ಮದ ಮತ್ಸರಂಗಳಿಲ್ಲದಿರಬೇಕು.

ಪ್ರಸಾದ ಭೋಗವ ಮಾಡಬಲ್ಲರೆ ಹಸಿವು ತೃಷೆ ಆಪ್ಯಾಯನಂಗಳಡಗಿರಬೇಕು.
ಇಂತಲ್ಲದಡೆ ಕೂಡಲಚೆನ್ನಸಂಗನಲ್ಲಿ ಬರಿ ಉಪಾಧಿಕರೆಂಬೆ. ॥ ೮ ॥

೨೩೬

ಕಾಯ ಜೀವವಾಗಿ, ಜೀವ ಕಾಯವಾಗಿ,
ಕಾಯ ಜೀವವ ಮುಟ್ಟದು, ಜೀವ ಕಾಯವ ಮುಟ್ಟದು,
ಸಂಬಂಧಸಂಭ್ರಮವಡಗದು,
ಲಿಂಗವಮುಟ್ಟದು, ಪ್ರಾಣವಗಲದು,
ಪ್ರಾಣಲಿಂಗವ ತೊರೆದು ಪ್ರಸಾದವಿನ್ನೆಲ್ಲಿಯದೋ,
ವಾಯಕ್ಕೆ ವಾಯ! ಕೂಡಲಚೆನ್ನಸಂಗನೆಂಬುದು ವಾಯ. ॥ ೯ ॥

೨೩೭

ಅಧರ ತಾಗುವ ರುಚಿಯನು, ಉದರ ತಾಗುವ ಸುಖವನು,
ಲಿಂಗಾರ್ಪಿತವ ಮಾಡದಿದ್ದರೆ ಕೃತಕಿಲ್ಬಿಷ ನೋಡಾ.
ಶ್ರೋತ್ರ ನೇತ್ರ ಭುಂಜನೆಯ ಮಾಡಲಾಗದು.
ತಟ್ಟಿತ್ತು ಮುಟ್ಟಿತ್ತು ಲಿಂಗಾರ್ಪಿತವೆಂದರೆ,
ಅವಸಂದೇ ವ್ರತಗೇಡಿ ಕೂಡಲಚೆನ್ನಸಂಗಮದೇವಾ. ॥ ೧೦ ॥

೨೩೮

ಶಿವಸಂಸ್ಕಾರಿಯಾಗಿ ಲಿಂಗವೆ ಪ್ರಾಣವಾಗಿದ್ದ ಬಳಿಕ
ಅಲ್ಲಲ್ಲಿಗೆ ಹರಿಯಲಾಗದು.
ಪ್ರಾಣಲಿಂಗಸಂಬಂಧಿಗೆ ಅದು ಪಥವಲ್ಲ.
ಅಸಂಸ್ಕಾರಿಕೃತಂ ಪಾಪಂ ಶಂಭೋರ್ನೈವೇದ್ಯಮೇವ ನ।
ಅನರ್ಪಿತಂ ತು ಭುಂಜೀಯಾತ್ ಪ್ರಸಾದೋ ನಿಷ್ಫಲೋ ಭವೇತ್॥
ಎಂದುದಾಗಿ, ಇದು ಕಾರಣ ಕೂಡಲಚೆನ್ನಸಂಗಯ್ಯ
ನಾಯಕನರಕದಲಿಕ್ಕುವನಾಗಿ. ॥ ೧೧ ॥

೨೩೯

ಭೃತ್ಯಾಚಾರಿಗಲ್ಲದೆ ಭಕ್ತ್ಯಾಚಾರವಳವಡದು.
ವೇದಶಾಸ್ತ್ರ ಪುರಾಣಾಗಮಂಗಳನರಿದ ಸಂಬಂಧಿಗಲ್ಲದೆ
ವೀರಶೈವ ಅಳವಡದು, ಅದೇನು ಕಾರಣ?
ಅರಿದು ಭವಿಪಾಕವೆಂದು ಕಳೆದ ಬಳಿಕ

ಜಂಗಮಕ್ಕೆ ನೀಡಿದರೆ ಅಧಿಕ ಪಾತಕ.
ಅದೆಂತೆಂದರೆ: ತನ್ನ ಲಿಂಗಕ್ಕೆ ಸಲ್ಲದಾಗಿ, ಆ ಜಂಗಮಕ್ಕೆ ಸಲ್ಲದು.
ಆ ಜಂಗಮಕ್ಕೆ ಸಲ್ಲದಾಗಿ, ತನ್ನ ಲಿಂಗಕ್ಕೆ ಸಲ್ಲದು.
ಲಿಂಗಭೋಗೋಪಭೋಗೀಯೋ ಭೋಗೇ ಜಂಗಮವರ್ಜಿತಃ।
ಲಿಂಗಹೀನಸ್ಸ ಭೋಕ್ತಾ ತು ಶ್ವಾನಗರ್ಭೇಷು ಜಾಯತೇ॥
ಇದು ಕಾರಣ ಕೂಡಲಚೆನ್ನಸಂಗಮದೇವಾ
ಇಂತಪ್ಪ ದುರಾಚಾರಿಗಳ ಮುಖವ ನೋಡಲಾಗದು. ॥ ೧೨ ॥

೨೪೦

ಲಿಂಗದ್ರೋಹದವನ ಮುಖವ ನೋಡಲಾಗದು,
ಮತ್ತೆ ನೋಡಬಹುದು, ಏಕೆ? ಮುಂದೆ ಗುರುವಿಪ್ಪ ಕಾರಣ.
ಗುರುವಿನಲ್ಲಿ ದ್ರೋಹದವನ ಮುಖವ ನೋಡಲಾಗದು
[ಮತ್ತೆ] ನೋಡಬಹುದು, ಏಕೆ? ಮುಂದೆ ಜಂಗಮವಿಪ್ಪ ಕಾರಣ.
ಜಂಗಮದಲ್ಲಿ ದ್ರೋಹದವನ ಮುಖವ ನೋಡಲಾಗದು,
[ಮತ್ತೆ] ನೋಡಬಹುದು, ಏಕೆ? ಮುಂದೆ ಪ್ರಸಾದವಿಪ್ಪ ಕಾರಣ.
ಪ್ರಸಾದದಲ್ಲಿ ದ್ರೋಹದವನ ಮುಖವ ನೋಡಲಾಗದು,
ಮತ್ತೆ ನೋಡಬಹುದು [ಏಕೆ?] ಪ್ರಸಾದದಿಂದ ಪರವಿಲ್ಲವಾಗಿ
ಕೂಡಲಚೆನ್ನಸಂಗಮದೇವಾ. ॥ ೧೩ ॥

೨೪೧

ಸಿರಿವಂತನೆಂದು ಅಡಿಗಡಿಗೆ ಕೊಂಬುದು ಉಪಜೀವಿತ ಪ್ರಸಾದ,
ಬಡವನೆಂದು ಮರೆಮುಗ್ಗುಲಲ್ಲಿ ಕೊಂಬುದು ತುಡುಗುಣಿ ಪ್ರಸಾದ,
ಭೀತಿಯಿಲ್ಲದೆ ಸೆಳೆದುಕೊಂಬುದು ದಳದುಳಿ ಪ್ರಸಾದ,
ಇಕ್ಕುವಾತನ ಮನದಲ್ಲಿ ಅಳುಕು ಬಳುಕಿಲ್ಲದೆ,
ಕೊಂಬಾತ ಮನದಲ್ಲಿ ಗುಡಿಗಟ್ಟಿ ಕೊಂಬುದು ಸ್ವಯಪ್ರಸಾದ,
ಇದು ಕಾರಣ ಕೂಡಲಚೆನ್ನಸಂಗಮದೇವಾ
ನಿಮ್ಮ ಪ್ರಸಾದಿಗಳಪೂರ್ವ. ॥ ೧೪ ॥

೨೪೨

ಪ್ರಸಾದ ಪ್ರಸಾದವೆಂದು ಹೆಸರಿಟ್ಟು ನುಡಿವವರಿಗೆ ಪ್ರಸಾದವೆಲ್ಲಿಯದೋ?
ಮನಮುಟ್ಟಿ ಕೊಂಡುದು ಪ್ರಸಾದವಲ್ಲ, ತನುಮುಟ್ಟಿ ಕೊಂಡುದು ಪ್ರಸಾದವಲ್ಲ,
ಧನಮುಟ್ಟಿ ಕೊಂಡುದು ಪ್ರಸಾದವಲ್ಲ.

ಅವು ಏಕಾಗಿ ತ್ರಿವಿಧಸಾಹಿತ್ಯದಲ್ಲಿ ಮುಟ್ಟಿ ಕೊಂಡುದು ಪ್ರಸಾದವಲ್ಲ.
ಇಕ್ಕುವವ ಶಿವದ್ರೋಹಿ, ಕೊಂಬವ ಗುರುದ್ರೋಹಿ.
ಇದು ಕಾರಣ ಕೂಡಲಚೆನ್ನಸಂಗಯ್ಯನ ಪ್ರಸಾದ
ಘನಕ್ಕೆ ಮಹಾಘನ ನಾನೇನೆಂದು ಬಣ್ಣಿಸುವೆ. ॥ ೧೫ ॥

೨೪೩

ಪ್ರಸಾದ ಪ್ರಸಾದವೆಂದು ಹೆಸರಿಟ್ಟುಕೊಂಡುಂಬಿರಿ,
ಪ್ರಸಾದವಾವುದು? ಓಗರವಾವುದು? ಬಲ್ಲವರು ನೀವು ಹೇಳಿರೇ.
ಕೈಯಲಿಕ್ಕಿದವ ಶಿವದ್ರೋಹಿ, ಕೈಯಾಂತು ಕೊಂಡವ ಗುರುದ್ರೋಹಿ,
ಕಾಯುವ ಕಳೆದು ಕಾಯಪ್ರಸಾದಿ, ಜೀವವ ಕಳೆದು ಜೀವಪ್ರಸಾದಿ,
ಪ್ರಾಣವ ಕಳೆದು ಪ್ರಾಣಪ್ರಸಾದಿ.
ಕಾಯ ಜೀವ ಇಂದ್ರಿಯ ವಿರೋಧಿಗಲ್ಲದೆ ಮತ್ತಾರಿಗೂ ಆಗದು.
ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣಂಗಲ್ಲವೆ
ಮತ್ತಾರಿಗೂ ಆಗದು. ॥ ೧೬ ॥

೨೪೪

ಲಿಂಗಸ್ಥಲ ಜಂಗಮಸ್ಥಲ ಪ್ರಸಾದಸ್ಥಲವನರಿದೆವೆಂದರೆ ಮತ್ತಾರಿಗೂ ಆಗದು.
ಸಾಧಿಸುವ ಸಾಧಕಂಗಲ್ಲದೆ ಮತ್ತಾರಿಗೂ ಆಗದು.
ಭೇದಿಸುವ ಭೇದಕಂಗಲ್ಲವೆ ಮತ್ತಾರಿಗೂ ಆಗದು.
ಪ್ರಸಾದಿಯು ಪ್ರಸಾದ ಕೂಡಲಚೆನ್ನಸಂಗಯ್ಯನಲ್ಲಿ
ಬಸವಣ್ಣಂಗಲ್ಲದೆ ಮತ್ತಾರಿಗೂ ಆಗದು. ॥ ೧೭ ॥

೨೪೫

ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವೆಂತುಟೆಂದು ಹೇಳಿಹೆ ಕೇಳಿರೇ:
ಶುದ್ಧಪ್ರಸಾದವು ಗುರುವಿನಲ್ಲಿ, ಸಿದ್ಧಪ್ರಸಾದವು ಲಿಂಗದಲ್ಲಿ,
ಪ್ರಸಿದ್ಧಪ್ರಸಾದವು ಜಂಗಮದಲ್ಲಿ.
ಇದರೊಳಗಾವುದು ಘನವೆಂಬೆನಾವುದು ಕಿರಿದೆಂಬೆ?
ಘನಕ್ಕೆ ಘನ ಮಹಾಘನ ಪ್ರಸಾದವು.
ಕೂಡಲಚೆನ್ನಸಂಗನಲ್ಲಿ ತ್ರಿವಿಧಪ್ರಸಾದವನು
ಸುವಿಧಾನದಲ್ಲಿ ಕೊಳಬಲ್ಲನಯ್ಯಾ ಬಸವಣ್ಣನು. ॥ ೧೮ ॥

೪೨೬

ಧನವ ಮರೆದು ಮಾಡಿದರೆ ಜಂಗಮರೂಪವಾಗಲೇಬೇಕು,
ಮನವ ಮರೆದು ಮಾಡಿದರೆ ಲಿಂಗರೂಪವಾಗಲೇಬೇಕು,
ತನುವ ಮರೆದು ಮಾಡಿದರೆ ಪ್ರಸಾದರೂಪವಾಗಲೇಬೇಕು.
ಇಂತಿವ ಮರೆದು ಮಾಡಿದರೆ ಬಯಲಲೊದಗಿದ ಘಟ್ಟಿಯಂತಿರಬೇಕು.
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ
ಬಸವಣ್ಣಂಗಲ್ಲದೆ ಇಲ್ಲ ನೋಡಯ್ಯಾ. || ೧೯ ||

೨೪೭

ಗುರುಸಾಧಕರ ಕಾಣೆನಯ್ಯ, ಬಲ್ಲೆನೆಂಬರು ಹೊಲಬುಗೆಟ್ಟರು.
ಲಿಂಗಸಾಧಕರ ಕಾಣೆನಯ್ಯ, ಬಲ್ಲೆನೆಂಬರು ಹೊಲಬುಗೆಟ್ಟರು.
ಜಂಗಮಸಾಧಕರ ಕಾಣೆನಯ್ಯ, ಬಲ್ಲೆನೆಂಬರು ಹೊಲಬುಗೆಟ್ಟರು.
ಪಾದೋದಕ ಪ್ರಸಾದ ಉಭಯದಲ್ಲಿ ನಿಂದ ಕಾರಣ
ಕೂಡಲಚೆನ್ನಸಂಗಯ್ಯಾ,
ಈ ವಚನಸಾಧಕರ ಕಂಡು ಮನ ನಾಚಿತ್ತು. || ೨೦ ||

೨೪೮

ಲಿಂಗಕ್ಕೆ ಕೊಟ್ಟು ಕೊಂಡರೆ ಪ್ರಸಾದ.
ಜಂಗಮವಾರೋಗಣೆಯ ಮಾಡಿ ಮಿಕ್ಕುದು ಪ್ರಸಾದ,
ಇದೇ ಪ್ರಸಾದದಾದಿ ಕಂಡಯ್ಯಾ.
ಮುನ್ನಾದಿಯ ಪ್ರಸಾದವ ವೇದಿಸಬಲ್ಲರೆ ಇದೆ ಕಂಡಯ್ಯಾ.
ಲಿಂಗಕ್ಕೆಕೊಡದೆ, ಜಂಗಮಕ್ಕೆ ನೀಡದೆ ಕೊಂಡರೆ ಹುಳುಕುಂಡುದಲಿಕ್ಕುವ
ನಮ್ಮ ಕೂಡಲಚೆನ್ನಸಂಗಮದೇವ. || ೨೧ ||

೨೪೯

ಆಯತ ಸ್ವಾಯತ ಲಿಂಗಾನುಗ್ರಹ ಕಾರಣವಿಂತೆಂದುದು:
ಶಿವಧ್ಯಾನ, ಲಿಂಗ ಜಂಗಮ ಪ್ರಸಾದ ತೃಪ್ತಿ.
ಬಹುಲಿಂಗ ಪ್ರಸಾದವೆ ಕಿಲ್ಬಿಷ,
ಇಂತೆಂದುದು ಕೂಡಲಚೆನ್ನಸಂಗನ ವಚನ. || ೨೨ ||

೨೫೦

ಲಿಂಗಸಾರಾಯಸುಖಸಂಗಿಗಳನುಭಾವ
ಲಿಂಗವಂತರುಗಲ್ಲದೆ ಕಾಣಬಾರದು.
ಏಕೋ ಲಿಂಗ ಪ್ರತಿಗ್ರಾಹಕನಾದರೆ
ಅನ್ಯಲಿಂಗವ ಮುಟ್ಟಲಾಗದು.
ದೃಷ್ಟಲಿಂಗವಲ್ಲದೆ ಬಹುಲಿಂಗದ ಅರ್ಪಿತ ಕಿಲ್ಬಿಷವೆಂದುದು.
ಅನರ್ಪಿತವ ಮುಟ್ಟಲಾಗದೆಂಬೆನು, ಲಿಂಗಸಜ್ಜನಿಕರಿಗೆ.
ಅನುಭಾವದಿಂದಲ್ಲದೆ ಲಿಂಗಜಂಗಮ ಪ್ರಸಾದವರಿಯಬಾರದು.
ಇದು ಕಾರಣ ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣಸಂಬಂಧವಪೂರ್ವ. || ೨೩ ||

೨೫೧

ಲಿಂಗವನರಿದೆನೆಂದರೆ ಮನವಿಲ್ಲದಿರಬೇಕು.
ಜಂಗಮವನರಿದೆನೆಂದರೆ ಧನವಿಲ್ಲದಿರಬೇಕು.
ಪ್ರಸಾದವನರಿದೆನೆಂದರೆ ರುಚಿಯಿಲ್ಲದಿರಬೇಕು.
ತ್ರಿವಿಧವನರಿದೆನೆಂದರೆ ತಾನಿಲ್ಲದಿರಬೇಕು.
ಕೂಡಲಚೆನ್ನಸಂಗಮದೇವಾ. || ೨೪ ||

೨೫೨

ಪುಷ್ಪ ಅಗ್ನವಣಿ ಓಗರ ಅಡಿಗಡಿಗೆ ಮೀಸಲಾಗಿರಬೇಕೆಂಬುದು ಶೀಲವೆ,
ಪಂಚೇಂದ್ರಿಯ ಸಪ್ತಧಾತು ಅರಿಷಡ್ವರ್ಗವನತಿಗಳೆಯದನ್ನಕ್ಕ?
ಲಿಂಗ ಜಂಗಮ ಪ್ರಸಾದದಲ್ಲಿ ನಿಸ್ಸೂತಕವಾದಡೆ
ಆತನೇ ಪ್ರಸಾದಿ, ಕೂಡಲಚೆನ್ನಸಂಗಮದೇವಾ. || ೨೫ ||

೨೫೩

ರೂಹಿಲ್ಲದ ನೆಳಲಿಂಗೆ ಮಳಲ ಬೊಂಬೆಯ ಮಾಡಿ,
ನಾದ ಬಿಂದುವಿನಲ್ಲಿ ಪ್ರದಿಸಿ, ಆರಿಗೂ ಮೈದೋರದೆ
ಏಡಿಸಿ ಕಾಡಿತ್ತು ಶಿವನ ಮಾಯೆ.
ಕಾಯದ ಕಳವಳಕ್ಕೆ ಮುಂದೆ ರೂಪಾಗಿ ತೋರಿತ್ತಲ್ಲದೆ,
ಅದು ತನ್ನ ಗುಣವಲ್ಲದೆ [ಬೇರೆ] ತೋರುತ್ತಿಲ್ಲ.
ಅಂಗಭೋಗವನೆ ಕುಂದಿಸಿ ಪ್ರಸಾದವನೆ ರುಚಿಸಿಹೆನೆಂಬ
ಲಿಂಗವಂತರೆಲ್ಲರೂ ಅರಪೆಗೊಳಗಾಗಿ ಹೋದರು.

ಅಂಗಭೋಗವೆ ಲಿಂಗಭೋಗ, ಲಿಂಗಭೋಗವೆ ಅರ್ಪಿತ.
ಸ್ವಕೀಯಃ ಪಾಕ ಸಂಬಂಧೀ ಭೋಗೋ ಜಂಗಮವರ್ಜಿತಃ।
ನಾಸ್ತಿಲಿಂಗಾರ್ಚನಂ ಚೈವ ಪ್ರಸಾದೋ ನಿಷ್ಫಲೋ ಭವೇತ್॥
ಲಿಂಗಕ್ಕೆಂದು ಬಂದ ರುಚಿ ಜಂಗಮಕ್ಕೆ ಬಾರದಿದ್ದಡೆ,
ಜಂಗಮಕ್ಕೆಂದು ಬಂದ ರುಚಿ ಲಿಂಗಕ್ಕೆ ಬಾರದಿದ್ದಡೆ,
[ಲಿಂಗಜಂಗಮಭರಿತವಲ್ಲ.]
ಇದು ಕಾರಣ, ಕೂಡಲಚೆನ್ನಸಂಗಯ್ಯಾ
ಪಾಕಸಂಬಂಧಿಗೆ ಪ್ರಸಾದ ದೂರ. ॥ ೨೬ ॥

೨೫೪

ಮುಂದುಗಾಣದ ಮಾನವರು ಮತ್ತೊಂದನರಿಯದೆ ಕೆಟ್ಟರು,
ಲಿಂಗವ ಪೂಜಿಸಿ, ಜಂಗಮವ ವೇದಿಸಿ
ಪ್ರಸಾದದ ಪರಿಣಾಮುವನರಿಯದೆ ಕೆಟ್ಟು ಹೋದರಯ್ಯಾ,
ಕೂಡಲಚೆನ್ನಸಂಗಮದೇವಾ. ॥ ೨೭ ॥

೨೫೫

ಪಾದೋದಕ ಪ್ರಸಾದನಿರ್ಣಯ ಅನುಭವಿಗಲ್ಲದೆ ಕಾಣಬಾರದು.
ಏಕೋಲಿಂಗ ಪ್ರತಿಗ್ರಾಹಕನಾಗಿ ಅನ್ಯಲಿಂಗವ ಮುಟ್ಟಲಾಗದು.
ಪ್ರಾಣಲಿಂಗಪ್ರಸಾದವಲ್ಲದೆ ಬಹುಲಿಂಗಪ್ರಸಾದ ಕಿಲ್ಬಿಷವೆಂದುದು ಗುರುವಚನ.
ಅನರ್ಪಿತವ ಮುಟ್ಟಲಾಗದಿದೆಂತೋ ಶರಣ ಸಜ್ಜನಿಕಂಗೆ.
ಲಿಂಗ ಜಂಗಮ ಪ್ರಸಾದನಿರ್ಣಯವ ಲಿಂಗಸಜ್ಜನಿಕನೆ ಬಲ್ಲನು.
ಕೂಡಲಚೆನ್ನಸಂಗಯ್ಯಾ, ನಿಮ್ಮ ಶರಣಸಂಬಂಧವಪೂರ್ವ. ॥ ೨೮ ॥

೨೫೬

ಶ್ರೋತ್ರೋತ್ಪಾತವ ಕಾಯಬೇಕು ಶರಣಂಗೆ,
ನೇತ್ರೋತ್ಪಾತವ ಕಾಯಬೇಕು ಶರಣಂಗೆ,
ಘ್ರಾಣೋತ್ಪಾತವ ಕಾಯಬೇಕು ಶರಣಂಗೆ,
ಜಿಹ್ವೋತ್ಪಾತವ ಕಾಯಬೇಕು ಶರಣಂಗೆ,
ಸ್ಪರ್ಶೋತ್ಪಾತವ ಕಾಯಬೇಕು ಶರಣಂಗೆ.
ಎಲ್ಲ ಉತ್ಪಾತವ ಕಾದಲ್ಲದೆ
ಕೂಡಲಚೆನ್ನಸಂಗಯ್ಯನಲ್ಲಿ ಪ್ರಸಾದ ನಿಷ್ಠೆ ಸೂರೆಯೆ? ॥ ೨೯ ॥

೨೫೭

ತನುಮುಟ್ಟದ ಮುನ್ನ ಲಿಂಗಾರ್ಪಿತವ ಮಾಡಬೇಕು,
ಮನಮುಟ್ಟದ ಮುನ್ನ ಲಿಂಗಾರ್ಪಿತವ ಮಾಡಬೇಕು,
ಶ್ರೋತ್ರ ನೇತ್ರ ಘ್ರಾಣ ಜಿಹ್ವೆ ಪರುಶನ ಮುಟ್ಟದ ಮುನ್ನ
ಲಿಂಗಾರ್ಪಿತವ ಮಾಡಬೇಕು,
ಕೂಡಲಚೆನ್ನಸಂಗನಲ್ಲಿ ಪ್ರಸಾದಿಯಾದಡೆ. || ೩೦ ||

೨೫೮

ಕಂಗಳ ನೋಟ ಲಿಂಗಕ್ಕೆ [ಪೂಜೆ], ಮನಮುಟ್ಟಿದಾರೋಗಣೆಯೆಂಬುದೇನೊ?
ಸಂಕಲ್ಪ ವಿಕಲ್ಪವಿರಹಿತ ನಿಮ್ಮ ಶರಣಂಗೆ ಸೀಮೆಯೆಂಬುದೇನೊ?
ಕಾಯದ ಕೈಯಲು ಲಿಂಗಾರ್ಪಿತವದು ಕಿಲ್ಬಿಷ
ಕೂಡಲಚೆನ್ನಸಂಗಮದೇವಾ. || ೩೧ ||

೨೫೯

ಅರಸು ಮನೆಯೊಳಗಿದ್ದಲ್ಲಿ ಬಾಗಿಲಿಗೆ ಪದಾರ್ಥವ ತಂದು
ಅರ್ಪಿತವೆಂದರೆ ಅರ್ಪಿತವಹುದೆ?
ಅವಸರಕ್ಕೆ ಬಂದ ಪದಾರ್ಥವ ಅರ್ಪಿತವ ಮಾಡಿ,
ಅನವಸರಕ್ಕೆ ಬಂದ ಪದಾರ್ಥವನೋಸರಿಸಿದರೆ ಆತ ಲಿಂಗಪ್ರಸಾದಿಯಲ್ಲ.
ತನ್ನ ಲಿಂಗಕ್ಕೆ ಬಾರದ ರುಚಿ ಕೃತಕಿಲ್ಬಿಷವೆಂದುದು
ಕೂಡಲಚೆನ್ನಸಂಗನ ವಚನ. || ೩೨ ||

೨೬೦

ಪದವು ಪದಾರ್ಥವು ಎಂಬರು,
ಪದವಾವುದೆಂದರಿಯರು, ಪದಾರ್ಥವಾವುದೆಂದರಿಯರು.
ಪದವೇ ಲಿಂಗ, ಪದಾರ್ಥವೇ ಭಕ್ತ.
ಇದನರಿದು ಪದಾರ್ಥವ ತಂದು ಲಿಂಗಾರ್ಪಿತವ ಮಾಡಬಲ್ಲರೆ
ಕೂಡಿಕೊಂಡಿಪ್ಪ ನಮ್ಮ ಕೂಡಲಚೆನ್ನಸಂಗಮದೇವ. || ೩೩ ||

೨೬೧

ಲೋಕದ ಹೊಲೆ ಉದಕದಿಂದ ಹೋಹುದೆಂಬಿರಿ,
ಉದಕದ ಹೊಲೆ ಏತರಿಂದ ಹೋಹುದು?
ವಾಕು ಪ್ರಮಾಣನಿಂದ ಅಗ್ಘಣಿಯೆನಿಸಿತ್ತು.

ಸಾಹಿತ್ಯವರಿದು ಕೊ(ಡ?)ಳಬಲ್ಲ ಚೆನ್ನನ ಪ್ರಸಾದ
ಲಿಂಗಕ್ಕೆ ಓಗರವಾಯಿತ್ತು
ಕೂಡಲಚೆನ್ನಸಂಗಮದೇವಾ. || ೩೪ ||

೨೬೨

ಲಿಂಗಪ್ರಸಾದವನುಂಬರೆ ಎಂಜಲೆಂಬರು, ಲಿಂಗವನೆಂತೊಲಿಸುವರು?
ತನುಭಾವವೆಂಜಲಾದರೇನು, ಪ್ರಸಾದವನೆಂಜಲೆಂತೆನಬಹುದು?
ಜನ್ಮವುಂಟೆಂಬರು ಪಾವನವಿಡಿದು, ಮುನ್ನೊಂದು ಮೃಗದ ಮುಖದಲ್ಲಿ!
ಅನ್ಯರಿಗುಂಟೆ ಶಿವಪಥವು? ಮನ್ನಿಸಲೇಕೆ ಒಲ್ಲೆನಯ್ಯಾ.
ಶ್ವಪಚೋಽಪಿ ಶಿವಭಕ್ತಾನಾಂ ಲಿಂಗಾರ್ಚನಪರಂ ಪದಂ|
ಅನ್ಯದೇವಂ ತು ಜಿಹ್ವಾಗ್ರೇ ಪರಜನ್ಮವಿಮೋಕ್ಷಣಂ||
ಪರಬ್ರಹ್ಮ ವೇದಶಾಸ್ತ್ರೇ ಭ್ಯೋ ಶಿವಶಾಸ್ತ್ರೇಣ ಶಾಂಕರಿ|
ಎಂದುದಾಗಿ, ಕರ್ಮಾದಿಗುಣಂಗಳಂ
ಕಳೆವ ಸಾಮರ್ಥ್ಯವೆನ್ನ ಲಿಂಗಕ್ಕಲ್ಲದೆ ಬೇರುಂಟೆ?
ಇಂತೆಂದುದು ದೃಷ್ಟ. ಕೂಡಲಚೆನ್ನಸಂಗನ ಶರಣರಿಗಲ್ಲದಿಲ್ಲ. || ೩೫ ||

೨೬೩

ಲಿಂಗದ ಪೂರ್ವಾಶ್ರಯುವ ಕಳೆಯ ಬಲ್ಲಾತನೆ ಭಕ್ತ.
ಗುರುವಿನ ಪೂರ್ವಾಶ್ರಯುವ ಕಳೆಯುಬಲ್ಲಾತನೆ ಶಿಷ್ಯ.
ಪ್ರಸಾದದ ಪೂರ್ವಾಶ್ರಯುವ ಕಳೆಯುಬಲ್ಲಾತನೆ ಪ್ರಸಾದಿ.
ಇಂತೀ ತ್ರಿವಿಧದ ಪೂರ್ವಾಶ್ರಯುವ ಕಳೆಯುಬಲ್ಲರೆ.
ಕೂಡಲಚೆನ್ನಸಂಗನಲ್ಲಿ ಲಿಂಗೈಕ್ಯವು. || ೩೬ ||

೨೬೪

ನಡೆವ ನುಡಿವ ಚೈತನ್ಯವುಳ್ಳನಕ್ಕ
ಒಡಲ ಗುಣಂಗಳಾರಿಗೂ ಮಾಣವು.
ನೋಡುವ ನಯನ, ಕೇಳುವ ಶ್ರೋತ್ರ, ವಾಸಿಸುವ ಘ್ರಾಣ,
[ಮುಟ್ಟುವ ತ್ವಕ್ಕು, ರುಚಿಸುವ ಜಿಹ್ವೆ] ತಾಗಿತ್ತೆನಬೇಡ.
ನೋಡುತ್ತ [ಕೇಳುತ್ತ ವಾಸಿಸುತ್ತ ಮುಟ್ಟುತ್ತ, ರುಚಿಸುತ್ತ] ಲಿಂಗಾರ್ಪಿತವಮಾಡಿ
ಲಿಂಗಭೋಗೋಪಭೋಗಿಯಾದ ಪ್ರಸಾದಿಗಳಿಗೆ
ಸರ್ವಾಂಗಶುದ್ಧವೆಂಬುದಿದೆಯಯ್ಯಾ.

ಕಾಯತ್ರಯಂಗಳ ಜೀವತ್ರಯಂಗಳ ಭಾವತ್ರಯಂಗಳನೊಂದು ಮಾಡಿ;
ಸುಖ–ದುಃಖ, ಗುಣ–ನಿರ್ಗುಣಂಗಳೆಂಬ ಉಭಯವ, ಲಿಂಗದಲ್ಲಿ ಏಕವ ಮಾಡಿ;
ಅಹುದಲ್ಲ, ಬೇಕುಬೇಡೆಂಬ ಸಂಶಯವ ಕಳೆದು;
ಕೂಡಲಚೆನ್ನಸಂಗನ ಆದಿಯ ಪುರಾತನರು
ಮಾಡಿದ ಪಥವಿದು. || ೩೭ ||

## ಪ್ರಸಾದಿಯ ಪ್ರಸಾದಿಸ್ಥಲ

೨೬೫

ಕಾಮಿಸಿ ಬಂದ ಪದಾರ್ಥದ ಪೂರ್ವಾಶ್ರಯವ ಕಳೆದು,
ತನ್ನ ಕಾಯವ ಮುಟ್ಟಲೀಯದೆ ಲಿಂಗಾರ್ಪಿತವ ಮಾಡುವಲ್ಲಿ ಪ್ರಸಾದಿ.
ಕಲ್ಪಿಸಿ ಬಂದ ಪದಾರ್ಥದ ಪೂರ್ವಾಶ್ರಯವ ಕಳೆದು,
ತನ್ನ ಮುಟ್ಟಲೀಯದೆ ಲಿಂಗಾರ್ಪಿತವ ಮಾಡುವಲ್ಲಿ ಪ್ರಸಾದಿ.
ಅಪ್ಪಿನ ಸೋಂಕಿನ ಸುಖದ ಸಂಯೋಗದ ಪೂರ್ವಾಶ್ರಯವ ಕಳೆದು,
ತನ್ನ ತಟ್ಟದೆ ಮುಟ್ಟದೆ ಕೊಟ್ಟು ಕೊಳಬಲ್ಲನಾಗಿ ಪ್ರಸಾದಿ,
ಕೂಡಲಚೆನ್ನಸಂಗಾ ನಿಮ್ಮ ಪ್ರಸಾದಿ. || ೩೮ ||

೨೬೬

ಅಚ್ಚಪ್ರಸಾದವೆಂದು ಹುಸಿದು, ತನುಮನದ ಹವಣಿಗೆ ಗಡಣಿಸಿಕೊಂಬರು,
ತನುಮನ ಮುಟ್ಟಿದ ಓಗರ ಲಿಂಗಾರ್ಪಿತಕ್ಕೆ ಸಲ್ಲದು.
ಅರ್ಪಿತವನುಂಡು ಅಚ್ಚಪ್ರಸಾದಿಗಳೆಂಬವರನು
ಲಿಂಗವಲ್ಲಿ ಸಮ್ಯಕ್‌ಶರಣರು ಮೆಚ್ಚರು.
ಬಂದುದ ಕೂಡಲಚೆನ್ನಸಂಗಂಗರ್ಪಿಸಿ
ಕೊಳಬಲ್ಲಡಾತನೆ ಅಚ್ಚಪ್ರಸಾದಿ. || ೩೯ ||

೨೬೭

ಗುಪ್ತದಲ್ಲಿ ಕೊಂಬುದು ಗೋಮಾಂಸವಯ್ಯಾ,
ಪ್ರಕಟದಲ್ಲಿ ಕೊಂಬುದು ಅಪ್ರಸಾದವಯ್ಯಾ,
ಗುಪ್ತವನೂ ಪ್ರಕಟವನೂ ಕಳೆದು
ಕೊಟ್ಟುಕೊಳಬಲ್ಲರೆ ನೆಟ್ಟನೆ ಪ್ರಸಾದಿ ಕೂಡಲಚೆನ್ನಸಂಗಮದೇವಾ. || ೪೦ ||

೨೬೮

ಪ್ರಕಟದಿಂದ ಕೊಂಬುದು ಪ್ರಸಾದವಲ್ಲ,
ಗುಪ್ತದಿಂದ ಕೊಂಬುದು ಪ್ರಸಾದವಲ್ಲ,
ಪ್ರಕಟದಂತುಟೆ ಪ್ರಸಾದ? ಗುಪ್ತದಂತುಟೆ ಪ್ರಸಾದ?
ಪ್ರಸಾದದಂತುವನೇನೆಂದು ಹೇಳುವೆನಯ್ಯಾ?
ಭವಭಾರಿ ಜೀವಿಗಳೊಡನೆ ಪ್ರಸಾದದಂತುವನೇನೆಂದುಪಮಿಸುವೆನು?
ನಾರೂಢಸ್ಯ ಪ್ರಸಾದೋಹಿ ನ ಗುಪ್ತಸ್ಯ ಪ್ರಸಾದಕಂ।
ಗೋಪ್ಯಾರೂಢೋಭಯಂ ನಾಸ್ತಿ ಮಹಾಪ್ರಸಾದ ಸಂಗಿನಃ॥
ಎಂದುದಾಗಿ, ಪ್ರಕಟ ಗುಪ್ತವ ಕಳೆದು ನೆಟ್ಟನೆ ಪ್ರಸಾದವ ಕೊಳಬಲ್ಲ
ಕೂಡಲಚೆನ್ನಸಂಗಾ ನಿಮ್ಮ ಪ್ರಸಾದಿ. ॥ ೪೧ ॥

೨೬೯

ಅರ್ಪಿತ ಅನರ್ಪಿತವೆಂಬರು, ಅರ್ಪಿತವ ಮಾಡುವ ಪರಿಯೆಂತಯ್ಯಾ?
ತನು ಮುಟ್ಟಿ ಕೊಟ್ಟುದು ಲಿಂಗಾರ್ಪಿತವಲ್ಲ,
ಮನಮುಟ್ಟಿ ಕೊಟ್ಟುದು ಲಿಂಗಾರ್ಪಿತವಲ್ಲ,
ಅರ್ಪಿತದ ಕ್ರಮವ ಕೂಡಲಚೆನ್ನಸಂಗಾ ನಿಮ್ಮ ಶರಣಬಲ್ಲ. ॥ ೪೨ ॥

೨೭೦

ಸಾರಾಯ ಪದಾರ್ಥವನಾರಯ್ಯಬೇಕೆಂದು ಶರಣ ಮರ್ತ್ಯಕ್ಕೆ ಬಂದು,
ತನ್ನ ಇಪ್ಪತ್ತೈದಿಂದ್ರಿಯಂಗಳ ಭಕ್ತರ ಮಾಡಿ,
ಮೆಲ್ಲಮೆಲ್ಲನೆ ಅವರ ಪೂರ್ವಾಶ್ರಯವ ಕಳೆದು
ಕಲ್ಪಿತವಿಲ್ಲದೆ ಅರ್ಪಿತವ ಮಾಡಲು,
ಇಂದ್ರಿಯಂಗಳು ತಮ್ಮ ತಮ್ಮ ಮುಖದಲ್ಲಿ ಗ್ರಹಿಸಲಮ್ಮದೆ
ಕೂಡಲಚೆನ್ನಸಂಗಂಗೆ ಬೇಕೆಂದು ಹಿಡಿದು ಕೊಂಡೈದವ! ॥ ೪೩ ॥

೨೭೧

ಭಾವದ ಕೊನೆಯ ಮೊನೆಯಲ್ಲಿ ದೃಷ್ಟಿಯ ಸಂಧಿಸಿ,
ಪದಾರ್ಥದ ಪೂರ್ವಾಶ್ರಯವ ಕಳೆದನು ಶರಣನು, ಮನಮುಟ್ಟಲೀಯದೆ.
ಸ್ವಾಮಿ ಭೃತ್ಯಸಂಬಂಧಕ್ಕೆ ಗುಣವಲ್ಲೆಂದ ಶರಣನು, ಮನಮುಟ್ಟಲೀಯದೆ,
ಭಕ್ತನ ಕೈಮುಟ್ಟಿ ಪಾವನವೆಂಬ ಸಂದಣೆಯಲ್ಲಿ ಹುಗದು, ಮನಮುಟ್ಟಲೀಯದೆ.
ಇದು ಕಾರಣ ಕೂಡಲಚೆನ್ನಸಂಗನ ಬಸವಣ್ಣನ
ಪ್ರಸಾದದಲ್ಲಿ ಸುಖಿಯಾದೆ. ॥ ೪೪ ॥

೨೭೨

ರೂಪು–ಕುರೂಪು, ಗಂಧ–ದುರ್ಗಂಧ,
ರಸ–ನಿರಸ, ಪರುಶ–ಅಪರುಶ, ಶಬ್ದ–ನಿಃಶಬ್ದ,–
ಲಿಂಗಮುಖಕ್ಕೆ ಬಾರದುದು ಕಿಲ್ಬಿಷವಯ್ಯಾ.
ಕೂಡಲಚೆನ್ನಸಂಗಾ ನಿಮ್ಮತ್ತ ಮುಂತಾದಲ್ಲದೆ ಎನ್ನತ್ತ ಮುಂತಾಗದು. ॥ ೪೫ ॥

೨೭೩

ಲಿಂಗಕ್ಕೆಂದು ಮಾಡುವೆನು, ಲಿಂಗಕ್ಕೆಂದು ನೀಡುವೆನು ನೋಡಯ್ಯಾ.
ಲಿಂಗಕ್ಕೆಂದು ಭಾವಿಸುವೆನು, ಅಂಗಗುಣಂಗಳನರಿಯೆನಾಗಿ.
ಲಿಂಗಕ್ಕೆಂದು ಕಾಮಿಸುವೆನು ನಿಃಕಾಮಿಯಾಗಿ.
ಲಿಂಗಕ್ಕೆಂದು ತಹೆನಲ್ಲದೆ,
ಅಂಗಕ್ಕೆಂದು ಬಯಸಿದರೆ ಲಿಂಗಾರ್ಪಿತಕ್ಕೆ ಸಲ್ಲದಾಗಿ.
ಲಿಂಗಕ್ಕೆ ಕೊಟ್ಟು ಕೊಂಬೆನಲ್ಲದೆ,
ಅನರ್ಪಿತವನರಿಯೆ ಕೂಡಲಚೆನ್ನಸಂಗಮದೇವಾ. ॥ ೪೬ ॥

೨೭೪

ಲಿಂಗಾರೋಪಿತ ಮುಖದಿಂದ ಬಂದುದು ಪಾದೋದಕ,
ಲಿಂಗಾವಧಾರಿತ ಮುಖದಿಂದ ಬಂದುದು ಲಿಂಗೋದಕ,
ಲಿಂಗಾರ್ಪಿತ ಮುಖದಿಂದ ಬಂದುದು ಪ್ರಸಾದೋದಕ,
ಪಾದೋದಕಂ ಚ ತ್ರಿವಿಧಂ ಆರೋಪ್ಯಂ ಚಾವಧಾರಿತಂ।
ಲಿಂಗಾರ್ಪಿತಂ ಪ್ರಸಾದಂ ಚ ತಥಾ ಲಿಂಗೋದಕಂ ಭವೇತ್॥
ಇಂತು ಮಜ್ಜನ ಭೋಜನ ಅಭಿಮುಖದಿಂದ ತ್ರಿವಿಧೋದಕವನು
ಕೂಡಲಚೆನ್ನಸಂಗಾ ನಿಮ್ಮ ಶರಣನೇ ಬಲ್ಲ. ॥ ೪೭ ॥

೨೭೫

ಪಾದೋದಕವಿಡಿದು ಪಾದೋದಕವನುದ್ಧರಿಸುವ ಕ್ರಮಭೇದವೇನಯ್ಯಾ?
ಲಿಂಗೋದಕವಿಡಿದು ಲಿಂಗೋದಕವನುದ್ಧರಿಸುವ ಕ್ರಮಭೇದವೇನಯ್ಯಾ?
ಪ್ರಸಾದೋದಕವಿಡಿದು ಪ್ರಸಾದೋದಕವನುದ್ಧರಿಸುವ ಕ್ರಮಭೇದವ ಭೇದಿಸಿ
ಗ್ರಹಿಸುವ ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೪೮ ॥

## ಪ್ರಸಾದಿಯ ಭಕ್ತಸ್ಥಲ

೨೭೬

ರೂಪಿನ ಪೂರ್ವಾಶ್ರಯವ ಕಳೆದು
ಆಯುತಕ್ಕೆ ಕೊಟ್ಟುಕೊಳಬಲ್ಲನಾಗಿ ಶುದ್ಧಪ್ರಸಾದಿ.
ರುಚಿಯ ಪೂರ್ವಾಶ್ರಯವ ಕಳೆದು
ಸ್ವಾಯತಕ್ಕೆ ಕೊಟ್ಟುಕೊಳಬಲ್ಲನಾಗಿ ಸಿದ್ಧಪ್ರಸಾದಿ.
ಈ ಉಭಯ ಕ್ರೀಯನುಭಾವವಳಿದು
ಕೂಡಲಚೆನ್ನಸಂಗನಲ್ಲಿ ಪ್ರಸಿದ್ಧಪ್ರಸಾದಿ. || ೪೯ ||

೨೭೭

ಶಿವಕ್ಷೇತ್ರದಲಾದ ಪದಾರ್ಥವ, ಕಿಂಕಲದಿಂದತಿ ಪ್ರೇಮದಿಂದ
ತನು [ವಾಂಶಿಕ] ಮುಟ್ಟಲೀಯದೆ ಲಿಂಗಾರ್ಪಿತವ ಮಾಡೂದು,
ಆ ಪ್ರಸಾದವ ಸತಿಸುತರಿಗೆನ್ನದೆ ಭೃತ್ಯಾಚಾರದಲ್ಲಿ ಗ್ರಹಿಸೂದು.
ಪ್ರಸಾದ ಬೀಸರವಾದರೆ ಭಕ್ತಿ ಸಹಜವಾಗದು,
ನಿಮಗೆಂದೆಂದೂ ದೂರ ಕೂಡಲಚೆನ್ನಸಂಗಮದೇವಾ. || ೫೦ ||

೨೭೮

ಸವಿಕರದಿಂದ ಪರಿಕರದಿಂದ ರುಚಿಕರದಿಂದ ಪದಾರ್ಥಕರದಿಂದ,
ತನು ಮನ ಧನ ವಂಚನೆಯಿಲ್ಲದೆ
ಶರಣ ಮಾಡುವಲ್ಲಿ, ನೀಡುವಲ್ಲಿ
ಕೂಡಲಚೆನ್ನಸಂಗಯ್ಯಾ ನಿಮಗೆ!
ಎಂದೂ ತನಗೆನ್ನದ ಕಾರಣ. || ೫೧ ||

೨೭೯

ಗುರುವಿನಲ್ಲಿ ಭಕ್ತಿ, ಲಿಂಗದಲ್ಲಿ ನಿಷ್ಠೆ,
ಜಂಗಮದಲ್ಲಿ ಸುಯಿಧಾನ, ಅರ್ಪಿತದಲ್ಲಿ ಅವಧಾನ,
ಪ್ರಸಾದದಲ್ಲಿ ಪರಿಣಾಮ–
ಇಂತೆಂದುದು ಕೂಡಲಚೆನ್ನಸಂಗನ ವಚನ. || ೫೨ ||

೨೮೦

ಲಿಂಗಪ್ರಸಾದಿಗಳೆಂಬರು ಬಲ್ಲರೆ ನೀವು ಹೇಳಿರೋ!
ಸಜ್ಜನ ಶುದ್ಧಶಿವಾಚಾರ ಸಂಪನ್ನರಪ್ಪ ಸದ್ಭಕ್ತರು
ತಮ್ಮ ಲಿಂಗಕ್ಕೆ ಗುರುಮಂತ್ರೋಪದೇಶದಿಂದ
ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡಿ,
ಸಕಲ ಪದಾರ್ಥವೆಲ್ಲವ ಪ್ರಮಾಣನಲ್ಲಿ ಭರಿತವಾಗಿ ಗಡಣಿಸಿ,
ತನು ಕರಗಿ ಮನ ಕರಗಿ ನಿರ್ವಾಹ ನಿಷ್ಪತ್ತಿಯಲಿ ಗಟ್ಟಿಗೊಂಡು
ತಟ್ಟುವ ಮುಟ್ಟುವ ಭೇದದಲ್ಲಿಯೇ ಚಿತ್ತವಾಗಿ ಲಿಂಗಾರ್ಪಿತವ ಮಾಡೂದು
ಆ ಪ್ರಸಾದವ ತನ್ನ ಪಂಚೇಂದ್ರಿಯ ಸಪ್ತಧಾತು ತೃಪ್ತವಾಗಿ ಭೋಗಿಸೂದು.
ಲಿಂಗಪ್ರಸಾದ ಗ್ರಾಹಕನ ಪರಿಯಿದು,
ಕೂಡಲಚೆನ್ನಸಂಗಮದೇವಾ. ॥ ೫೩ ॥

೨೮೧

ಲಿಂಗಪ್ರಸಾದ ಸೋಂಕಿನಿಂದ ಇರುಹೆಗೆ ರುದ್ರತ್ವವಾಯಿತ್ತು.
ಲಿಂಗಪ್ರಸಾದ ಸೋಂಕಿನಿಂದ ಬಿಬ್ಬಬಾಚಯ್ಯ ಸ್ವಯಲಿಂಗವಾದ.
ಲಿಂಗಪ್ರಸಾದ ಸೋಂಕಿನಿಂದ ವಿಷವಮೃತವ ಮಾಡಿ ಬಸವಣ್ಣ ಮೆರೆದ.
ಲಿಂಗಪ್ರಸಾದಃ ಸಂಗ್ರಾಹ್ಯಸ್ಸರ್ವದೇವಾನುಚೇಷ್ಟಿತಃ।
ತೇನ ಪ್ರಸಾದಮಪ್ರಾಪ್ಯಭವಾನ್ಮುಕ್ತಿಃ ಕಥಂ ಭವೇತ್॥
ಇದು ಕಾರಣ ಕೂಡಲಚೆನ್ನಸಂಗಯ್ಯಾ, ನಿಮ್ಮ ಪ್ರಸಾದದ ಮಹಿಮೆ
ದೇವಕ್ರಿಯೆಯ ಮೀರಿದುದನೇನೆಂಬೆ. ॥ ೫೪ ॥

೨೮೨

ಗುರುಪ್ರಸಾದಿಗಳಪೂರ್ವವಪೂರ್ವ, ಲಿಂಗಪ್ರಸಾದಿಗಳಪೂರ್ವವಪೂರ್ವ.
ಜಂಗಮ ಪ್ರಸಾದಿಗಳಪೂರ್ವವಪೂರ್ವ, ಪ್ರಸಾದಪ್ರಸಾದಿಗಳಪೂರ್ವವಪೂರ್ವ
ಗುರುಪ್ರಸಾದಿ ಗುರುಭಕ್ತಯ್ಯ, ಲಿಂಗಪ್ರಸಾದಿ ಪ್ರಭುದೇವರು,
ಜಂಗಮಪ್ರಸಾದಿ ಬಸವಣ್ಣನು, ಪ್ರಸಾದಪ್ರಸಾದಿ ಬಿಬ್ಬಬಾಚಯ್ಯನು.
ಇಂತೀ ಪ್ರಸಾದಿಗಳ ಪ್ರಸಾದದಿಂದ ಬದುಕಿದೆನಯ್ಯಾ
ಕೂಡಲಚೆನ್ನಸಂಗಮದೇವಾ. ॥ ೫೫ ॥

೨೮೩

ಶಿಷ್ಯನ ಪೂರ್ವಾಶ್ರಯವ ಗುರು ಕಳೆದನೆಂಬರು,
ಆ ನುಡಿಯ ಕೇಳಲಾಗದು.

ಗುರುವಿನ ಪೂರ್ವಾಶ್ರಯವ ಶಿಷ್ಯ ಕಳೆವನಲ್ಲದೆ,
ಶಿಷ್ಯನ ಪೂರ್ವಾಶ್ರಯವ ಗುರು ಕಳೆಯಲರಿಯ.
ಶರಣನ ಪೂರ್ವಾಶ್ರಯವ ಲಿಂಗ ಕಳೆಯಿತ್ತೆಂಬರು
ಆ ನುಡಿಯ ಕೇಳಲಾಗದು,
ಲಿಂಗದ ಪೂರ್ವಾಶ್ರಯವ ಶರಣ ಕಳೆವನಲ್ಲದೆ,
ಆ ಶರಣನ ಪೂರ್ವಾಶ್ರಯವ ಲಿಂಗವು ಕಳೆಯಲರಿಯದು.
ಭಕ್ತನ ಪೂರ್ವಾಶ್ರಯವ ಜಂಗಮ ಕಳೆಯಿತ್ತೆಂಬರು
ಆ ನುಡಿಯ ಕೇಳಲಾಗದು,
ಜಂಗಮದ ಪೂರ್ವಾಶ್ರಯವ ಭಕ್ತ ಕಳೆವನಲ್ಲದೆ,
ಆ ಭಕ್ತನ ಪೂರ್ವಾಶ್ರಯವ ಜಂಗಮ ಕಳೆಯಲರಿಯ.
ಪ್ರಸಾದಿಯ ಪೂರ್ವಾಶ್ರಯವ ಪ್ರಸಾದ ಕಳೆಯಿತ್ತೆಂಬರು
ಆ ನುಡಿಯ ಕೇಳಲಾಗದು,
ಪ್ರಸಾದದ ಪೂರ್ವಾಶ್ರಯವ ಪ್ರಸಾದಿ ಕಳೆವನಲ್ಲದೆ
ಆ ಪ್ರಸಾದಿಯ ಪೂರ್ವಾಶ್ರಯವ ಪ್ರಸಾದ ಕಳೆಯಲರಿಯದು.
ಆ ಪ್ರಸಾದದ ಪೂರ್ವಾಶ್ರಯವ ಕಳೆಯಲಿಕಾಗಿ
ಮಹಾಪ್ರಸಾದಿಯಾದ ಕೂಡಲಚೆನ್ನಸಂಗಾ ನಿಮ್ಮ ಶರಣ. || ೫೬ ||

## ಪ್ರಸಾದಿಯ ಮಾಹೇಶ್ವರಸ್ಥಲ

೨೮೪

ಲಿಂಗದಲ್ಲಿ ಸೂತಕವ ಹಿಡಿವನ್ನಕ್ಕ
ಪ್ರಾಣಲಿಂಗ ಸಂಬಂಧಿಯೆಂತೆಂಬೆ?
ಜಂಗಮದಲ್ಲಿ ಸೂತಕವ ಹಿಡಿವನ್ನಕ್ಕ
ಅನುಭಾವಿಯೆಂತೆಂಬೆ?
ಪ್ರಸಾದದಲ್ಲಿ ಸೂತಕವ ಹಿಡಿವನ್ನಕ್ಕ
ಸ್ವಾಮಿಭೃತ್ಯಸಂಬಂಧಿಯೆಂತೆಂಬೆ?
ಭಕ್ತನೆಂತೆಂಬೆ, ಪ್ರಸಾದಿಯೆಂತೆಂಬೆ,
ಕೂಡಲಚೆನ್ನಸಂಗನಲ್ಲಿ ಶರಣನೆಂತೆಂಬೆ? || ೫೭ ||

೨೮೫

ಸತ್ಯವಿಲ್ಲದ ಭಕ್ತಿಯ ಸಾವಿರ ವರುಷ ಮಾಡಿದರೇನು?
ನಿಷ್ಠೆಯಿಲ್ಲದ ಪೂಜೆಯನೇಸುಕಾಲ ಮಾಡಿದರೇನು?

ಭಾವ ನೆಲೆಗೊಳ್ಳದ ಪ್ರಸಾದವನೇಸುಕಾಲ ಕೊಂಡಲ್ಲಿ ಫಲವೇನು?
ಅಭ್ಯಾಸವಾಯಿತ್ತಲ್ಲದೆ,
ಒಬ್ಬರೊಬ್ಬರ ಕಂಡು ಮಾಡುವರಲ್ಲದೆ, ಸಹಜವಿಲ್ಲ, ಸಮ್ಯಕ್ಕಿಲ್ಲ, ನಿಜವಿಲ್ಲ.
ಇದು ಕಾರಣ, ಇಂತಪ್ಪವರ ಭಕ್ತರೆಂದೆನಲಾಗದು,
ಕೂಡಲಚೆನ್ನಸಂಗಯ್ಯಾ ನೀ ಸಾಕ್ಷಿಯಾಗಿ ಛೀಯೆಂಬೆನು. || ೫೮ ||

೨೮೬

ಸಂಕರ ಸಂಕರವೆಂದು ಸಹಜವರಿಯದೆ
ನುಡಿವ ಶ್ವಾನನ ಮಾತ ಕೇಳಲಾಗದು,
ಸಂಕರವಾವುದೆಂದರಿಯರಾಗಿ.
ಲಿಂಗ ಸಂಕರವೊ? ಜಂಗಮ ಸಂಕರವೊ? ಪ್ರಸಾದ ಸಂಕರವೊ?
ತ್ರಿವಿಧದಲ್ಲಿ ಹೊರಗಿಲ್ಲ.
ಆವ ಸಂಕರದಲ್ಲಿ ಆವುದಿಚ್ಛೆ? ಬಲ್ಲರೆ ನೀವು ಹೇಳಿರೇ.
ಬರುಮಾತಿನ ಬಳಕೆಯ ಬಳಸಿ ಹಿರಿಯರಾದೆವೆಂಬ
ಮೂಗುಚ್ಚಿಗಳನೇನೆಂಬೆ, ಕೂಡಲಚೆನ್ನಸಂಗಮದೇವಾ. || ೫೯ ||

೨೮೭

ಲೋಕದೊಳಗಿಪ್ಪವರು, ಲೋಕದೊಳು ಸುಳಿವವರು, ಲೋಕದ ಹಂಗಿಗರು,
ಲಿಂಗದ ಶುದ್ಧಿಯ ತಾವೆತ್ತಬಲ್ಲರು? ಬರಿದೆ ಹೋರುವ ಭ್ರಮಿತರು.
ಇವರ, ತ್ರಿವಿಧಕ್ಕೆ ವಿರಹಿತರೆಂಬೆ ಕೂಡಲಚೆನ್ನಸಂಗಮದೇವಾ. || ೬೦ ||

೨೮೮

ಭಕ್ತರಾದೆವೆಂದು ಭವಿಪಾಕವನೊಲ್ಲೆವೆಂದೆಂಬರು.
ಭವಿಪಾಕವೆಂಬುದದೆಂತುಟಯ್ಯಾ ?
ಅಂಗತ್ರಯಕ್ಕೆ ನೋಡಿದರೆ ಭವಿಪಾಕ,
ಲಿಂಗತ್ರಯ ನೋಟಕ್ಕೆ ಅದು ಸಲ್ಲದಾಗಿ.
ಗುರು ಕಾರುಣ್ಯವುಂಟು ಭಕ್ತರೆಂದೆಂಬರು,
ಅವರಿಗಂಗತ್ರಯದ ನೋಟವಲ್ಲದೆ
ಲಿಂಗತ್ರಯದ ನೋಟವೆಲ್ಲಿಯದೊ?
ಪಂಚಭೂತಕಾಯವ ತಂದು ಭಕ್ತರೆಂದರೆ
ಪ್ರಸಾದನಾಸ್ತಿಯೆಂಬುದು ಕೂಡಲಚೆನ್ನ ಸಂಗನ ವಚನ. || ೬೧ ||

೨೮೯

ಬಯಸಿ ಬಂದುದಂಗ ಭೋಗ, ಬಯಸದೆ ಬಂದುದು ಲಿಂಗಭೋಗ.
ಅಂಗಭೋಗ ಅನರ್ಪಿತ, ಲಿಂಗಭೋಗ ಪ್ರಸಾದ,
ಕೂಡಲಚೆನ್ನಸಂಗಮದೇವಾ. ॥ ೬೨ ॥

೨೯೦

ಕ್ರೀಯಿಲ್ಲದೆ ನಿಃ ಕ್ರೀಯಲ್ಲಿ ನಡೆಯಲೆಂತುಬಹುದು?
ಸೀಮೆಯಿಲ್ಲದೆ ನಿಸ್ಸೀಮೆಯಲ್ಲಿ ನಡೆಯಲೆಂತುಬಹುದು?
ಮೊದಲಿಲ್ಲದೆ ಲಾಭವನರಸಬಹುದೆ?
ಹರಿವ ಮನವ ನಿಲ್ಲೆಂದು ನಿಲಿಸಿ ಜಿಹ್ವೆಯ ಭುಂಜಕತನವ ಕಳೆದು
ಲಿಂಗಭೋಗೋಪಭೋಗಿಯಾದಲ್ಲದೆ ನೆಚ್ಚುವನೆ
ಕೂಡಲಚೆನ್ನಸಂಗಾ ನಿಮ್ಮ ಶರಣ? ॥ ೬೩ ॥

೨೯೧

ಉದಯಮುಖದಲ್ಲಿ ಹುಟ್ಟಿದ ಬಿಸಿಲ ಲಿಂಗಾರ್ಪಿತವ ಮಾಡಬೇಕು.
ಅಸ್ತಮಾನ ಮುಖದಲ್ಲಿ ಹುಟ್ಟಿದ ನೆಳಲ ಲಿಂಗಾರ್ಪಿತವ ಮಾಡಬೇಕು.
ಅಧ ಊರ್ಧ್ವಮಧ್ಯವನು ಲಿಂಗಾರ್ಪಿತವ ಮಾಡಬೇಕು.
ಅಂಬರಮುಖದಲ್ಲಿ ಹುಟ್ಟಿದ ನಿರ್ಮಳೋದಕವನು ಲಿಂಗಾರ್ಪಿತವ ಮಾಡಬೇಕು.
ಬಯಲಮುಖದಲ್ಲಿ ಹುಟ್ಟಿದ ವಾಯುವನು ಲಿಂಗಾರ್ಪಿತವ ಮಾಡಬೇಕು.
ಆವ ಪದಾರ್ಥವಾದರೇನು ಲಿಂಗಾರ್ಪಿತವ ಮಾಡಬೇಕು.
ಕೂಡಲಚೆನ್ನಸಂಗಯ್ಯಾ
ಲಿಂಗಾರ್ಪಿತವಲ್ಲದೆ ಕೊಂಡರೆ ಕಿಲ್ಬಿಷವೆಂಬುದು. ॥ ೬೪ ॥

೨೯೨

ಎಂತೆನಗೆ ತೃಷ್ಣೆ ಅಂತೆ ಲಿಂಗಪರುಶನ ಮಾಡುವೆ ನಾನಯ್ಯಾ,
ಎಂತೆನಗೆ ತೃಷ್ಣೆ ಅಂತೆ ಜಂಗಮದರುಶನ ಮಾಡುವೆ ನಾನಯ್ಯಾ,
ಎಂತೆನಗೆ ತೃಷ್ಣೆ ಅಂತೆ ಪ್ರಸಾದಸವಿಯ ಸವಿವೆ ನಾನಯ್ಯಾ.
ತ್ರಿವಿಧದಲ್ಲಿ ಸಂಗವಾಗಿ, ಅಂಗಭೋಗವ ಭಂಗಿಸಿ ಕಳೆದು
ಲೋಕ ಲೌಕಿಕವ ವಿವರಿಸಿ ಕಳೆದು
ಬಸವನ ಅಂಗ ತಾವಾದೆವೆಂಬ [ತೃಪ್ತಿ] ಪಿರಿದು,
ಕೂಡಲಚೆನ್ನಸಂಗಯ್ಯಾ, ಕ್ರಮವರಿದು. ॥ ೬೫ ॥

೨೯೩

ಎಡೆಗೊಡುವನಲ್ಲ, ಎಡೆಗೊಂಬವನಲ್ಲ,
ನುಡಿ ಎಡೆಯೊಳಗೆ ಮರುಳುವನಲ್ಲ, ತನ್ನ ತಾನು ಮಹಾಪ್ರಸಾದಿ.
ಎಡೆಯಲ್ಲಿ ಅಂಧಃಕಾರ ರೂಪನಲ್ಲ.
ಇದು ಕಾರಣ, ಕೂಡಲಚೆನ್ನಸಂಗಯ್ಯಾ
ಇದ್ದುದನರ್ಪಿಸಬಲ್ಲನಾಗಿ ಮಹಾಪ್ರಸಾದಿ. || ೬೬ ||

## ಪ್ರಸಾದಿಯ ಪ್ರಾಣಲಿಂಗಿಸ್ಥಲ

೨೯೪

ದ್ರವ್ಯರೂಪ ರೂಪಿಸುವೆ ಅರ್ಪಿತಕ್ಕೆಂದು
ಅರ್ಪಿತರೂಪ ರೂಪಿಸುವೆ ಪ್ರಸಾದಕ್ಕೆಂದು,
ಪ್ರಸಾದರೂಪ ರೂಪಿಸುವೆ ಕಾಯಕ್ಕೆಂದು,
ಪ್ರಥಮೇ ಯೋಜಯೇ ದ್ರವ್ಯಂ ದ್ವಿತೀಯಂ ಅರ್ಪಿತಂ ತಥಾ।
ತದರ್ಥಂತು ಶರೀರಾರ್ಥಂ ಶರೀರಂ ಪ್ರಾಣಕಾರಣಂ॥
ಎಂದುದಾಗಿ ಕಾಯರೂಪ ರೂಪಿಸುವೆ ಪ್ರಾಣಕ್ಕೆಂದು
ಪ್ರಾಣರೂಪ ರೂಪಿಸುವೆ ಕೂಡಲಚೆನ್ನಸಂಗಯ್ಯಗೆಂದು. || ೬೭ ||

೨೯೫

ಕಾಲಚಕ್ರ ಕರ್ಮಚಕ್ರ ಬಿಂದುಚಕ್ರ ನಾದಚಕ್ರ– ಈ ನಾಲ್ಕು ಚಕ್ರವ
ಸಾಧಿಸಿಹೆವೆಂಬ ಹಿರಿಯರೆಲ್ಲಾ ಕೆಟ್ಟು ಹೋದರು ನೋಡಾ.
ಕಾಲಚಕ್ರವು ಘ್ರಾಣದಿಂದ ನಡೆವುದು,
ಕರ್ಮಚಕ್ರವು ನಯನದಿಂದ ನಡೆವುದು,
ನಾದಚಕ್ರವು ಶ್ರೋತ್ರದಿಂದ ನಡೆವುದು
ಬಿಂದುಚಕ್ರವು ಜಿಹ್ವೆಯಿಂದ ನಡೆವುದು.
ಕಾಲಚಕ್ರ ಗುರುಕ್ಷೇತ್ರ, ಕರ್ಮಚಕ್ರ ಲಿಂಗಕ್ಷೇತ್ರ,
ನಾದಚಕ್ರ ಜಂಗಮಕ್ಷೇತ್ರ, ಬಿಂದುಚಕ್ರ ಪ್ರಸಾದಕ್ಷೇತ್ರ,

ಈ ನಾಲ್ಕರ ಮನದ ಕೊನೆಯ ಮೊನೆಯ ಮೇಲೆ
ಸಿಂಹಾಸನನಾಗಿಪ್ಪ ನಮ್ಮ ಕೂಡಲಚೆನ್ನಸಂಗಮದೇವ. ॥ ೬೮ ॥

೨೯೬

ನಿಮ್ಮಲ್ಲಿ ಸನ್ನಹಿತವಲ್ಲದ ತನುವಿನ ಭಿನ್ನ ಭಾವವನೇನ ಹೇಳುವೆನಯ್ಯಾ?
ಲಿಂಗ ಭಿನ್ನಭಾವದ ಮನಸಿನ, ಲಿಂಗ ಭಿನ್ನಭಾವದ ತನುವಿನ
ಅನ್ಯಾಯದಲ್ಲಿ ಅನರ್ಪಿತವಾಯಿತ್ತು.
ಎನ್ನಲ್ಲಿ ಅನುದಿನ ಅಗಲದಿಪ್ಪ
ಕೂಡಲಚೆನ್ನಸಂಗಯ್ಯನೆನ್ನ ಪ್ರಾಣನಾಥನಾಗಿ. ॥ ೬೯ ॥

೨೯೭

ಸತ್ವದ ಉದಯುವ ಗುರುವಿಂಗಿತ್ತು,
ರಜದ ಉದಯುವ ಲಿಂಗಕ್ಕಿತ್ತು,
ತಮದ ಉದಯುವ [ಜಂಗಮಕ್ಕಿತ್ತು]
ಈ ತ್ರಿವಿಧದುದಯುವ ಪ್ರಸಾದಕ್ಕಿತ್ತು,
ಇಂತಪ್ಪ ಲಿಂಗಸಂಗಿಗಳಲ್ಲಿ ಸೇರಿಸಯ್ಯಾ.
ಪಂಚೀಕೃತ ಪಂಚ ಪಂಚಕವ ಕಳೆದು
ಕೂಡಲಚೆನ್ನಸಂಗಯ್ಯ ಎನ್ನ ಪ್ರಾಣಲಿಂಗವಾಗಿ,
ಉಳಿದ ಸುಖಂಗಳು ಕಾಡಲಮ್ಮವು ಬಳಿಕ. ॥ ೭೦ ॥

೨೯೮

ಅವಸರ, ಆರೋಗಣೆ, ಆಪ್ಯಾಯನ–ತ್ರಿವಿಧವೂ,
ಲಿಂಗ ಮುಖದಲ್ಲಿ ಅರ್ಪಿತವಾಗೆ, ಆತನ ಪ್ರಸಾದಿಯೆಂಬೆನು.
ಅವಸರ ಅನವಸರ ಆತ್ಮ(ಅಂಗ?)ದಿಚ್ಛೆ ಲಿಂಗಮುಖದಲ್ಲಿ ಅರ್ಪಿತವಿಲ್ಲಾಗಿ
ಆತನನೆಂತು ಪ್ರಸಾದಿಯೆಂಬೆನು?
ಅವಸರ ಅನವಸರವರಿದು ವೇಧಿಸಬಲ್ಲರೆ
ಆತನ ಪ್ರಸಾದಿಯೆಂಬೆನು–
"ಲಿಂಗಸ್ಯಾವಸರೇ ಯಸ್ತು ಅರ್ಚ್ಯಂ ದದ್ಯಾತ್ ಸುಖಂ ಭವೇತ್"
ಎಂದುದಾಗಿ, ಇದು ಕಾರಣ ಕೂಡಲಚೆನ್ನಸಂಗಯ್ಯಾ
ನಿಮ್ಮ ಅವಸರವರಿದು
ಅರ್ಪಿಸುವ ಅರ್ಪಣೆ ಸದ್ಭಾವಿಗಲ್ಲದಿಲ್ಲ. ॥ ೭೧ ॥

೨೯೯

ಕಾಯವೆ ಲಿಂಗಕ್ಕರ್ಪಿತ, ಅರ್ಪಿತವೆ ಪ್ರಸಾದ.
ಅದೆ ಮತ್ತೆ ಮತ್ತೆ ಅರ್ಪಿತ.
ದರುಶನದಿಂದಲಾಯಿತ್ತು. ಪರುಶನದಿಂದಲಾಯಿತ್ತು.
ಅಪ್ಪಿನ ಸೋಂಕಿನ ಸುಖವನರ್ಪಿಸಲರಿಯದಿದ್ದರೆ ಭ್ರಾಂತಿ.
ಕೂಡಲಚೆನ್ನಸಂಗಯ್ಯನ
ಪ್ರಸಾದಿಯ ಪ್ರಸಾದವನತಿಗಳದಡೆ ಮುಂದೆ ಅದಕೆಂತೋ. || ೭೨ ||

೩೦೦

ಕ್ಷೀರವ ಸೋಂಕಿದ ಜಲವ ಬೇರೆ ಮಾಡಬಹುದೇ?
ಪರಿಮಳವ ಸೋಂಕಿದ ವಾಯುವ ವಿವರಿಸಲುಂಟೆ?
ಉತ್ತಮಂ ಏಕಭುಕ್ತಂ ಚ ಮಧ್ಯಮಂ ದ್ವಯಸ್ವೀಕೃತಂ।
ಕನಿಷ್ಠೋಽನರ್ಪಿಶ್ಚೈವ ಪ್ರಸಾದೋ ನಿಷ್ಫಲೋ ಭವೇತ್॥
ಎಂದುದಾಗಿ ನಿರೂಪಿಂಗೆ ರೂಪನರ್ಪಣೆಯ ಮಾಡಿ,
ರುಚಿ ಪರಿಮಳ ಭಾವದತ್ತಲಿ ಅವಧಾನಿಯಾಗಿಪ್ಪ ನಿಮ್ಮ ಶರಣ.
ಬೇರೆ ಮತ್ತೆ ವ್ಯವಧಾನವಿಲ್ಲದಂತಿಪ್ಪ ಕಾಣಾ,
ಕೂಡಲಚೆನ್ನಸಂಗಾ ನಿಮ್ಮ ಪ್ರಸಾದಿ. || ೭೩ ||

೩೦೧

ಕಂಗಳು ನೋಡಿದ ಪದಾರ್ಥ ಲಿಂಗಕ್ಕರ್ಪಿತವಲ್ಲ,
ಕಿವಿಗಳು ಕೇಳಿದ ಪದಾರ್ಥ ಲಿಂಗಕ್ಕರ್ಪಿತವಲ್ಲ,
ನಾಸಿಕ ಮುಟ್ಟಿದ ಪದಾರ್ಥ ಲಿಂಗಕ್ಕರ್ಪಿತವಲ್ಲ,
ಜಿಹ್ವೆ ಸೋಂಕಿದ ಪದಾರ್ಥ ಲಿಂಗಕ್ಕರ್ಪಿತವಲ್ಲ,
ಕೈಗಳು ಮುಟ್ಟಿದ ಪದಾರ್ಥ ಲಿಂಗಕ್ಕರ್ಪಿತವಲ್ಲ,
ರೂಪು ರಸ ಗಂಧ ರುಚಿ ಸ್ಪರ್ಶವನು
ಕೂಡಲಚೆನ್ನಸಂಗಯ್ಯಾ ನೀನರಿಯಲು ಪ್ರಸಾದವೆಸಗೆ. || ೭೪ ||

೩೦೨

ಲಿಂಗಾರ್ಚನೆಯ ಮಾಡಿ ಲಿಂಗಕ್ಕರ್ಪಿಸಿದ ಪ್ರಸಾದವನಲ್ಲವೆ
ಭೋಗಿಸೆನೆಂಬ ಪ್ರಸಾದಿಭಕ್ತನು,

ಅನರ್ಪಿತವ ನೆನೆವ ಪರಿಯೆಂತೊ?
ಅನರ್ಪಿತವ ನೋಡುವ ಪರಿಯೆಂತೊ?
ಅನರ್ಪಿತವ ಕೇಳುವ ಪರಿಯೆಂತೊ?
ಅನರ್ಪಿತವ ವಾಸಿಸುವ ಪರಿಯೆಂತೊ?
ಅನರ್ಪಿತವ ಮುಟ್ಟುವ ಪರಿಯೆಂತೊ?
ಅನರ್ಪಿತವ ರುಚಿಸುವ ಪರಿಯೆಂತೊ?
ಅನರ್ಪಿತ ಸುಖ–ದುಃಖಂಗಳನನುಭವಿಸುವ ಪರಿಯೆಂತೊ?
ಈ ವರ್ಮಕುಳವಾರಿಗೆಯೂ ಅರಿಯಬಾರದು,
ಕೂಡಲಚೆನ್ನಸಂಗಮದೇವರರಿದಡರಿವುದು,
ಮರೆದಡೆ ಮರೆವುದು. || ೭೫ ||

೩೦೩

ಸರ್ವಾರ್ಪಿತವ ಮಾಡಬೇಕೆಂಬರು,
ಸರ್ವೇಂದ್ರಿಯ ಸನುಮತವಾದುದನರಿಯರು.
ಶ್ರೋತ್ರ ನೇತ್ರ ಘ್ರಾಣ ಜಿಹ್ವೆ [ತ್ವಕ್ಕು] ಸಹಿತ ಅರ್ಪಿತವ ಮಾಡಬೇಕು.
ಪ್ರಾಣ ಪ್ರಯಾಣ ಕಾಲೇsಪಿ ಸರ್ವಭೋಗೇಷು ಯಸ್ಸದಾ।
ಅರ್ಪಣೇ ಚಾವಧಾನೀ ಚ ಸ ಲಿಂಗೀ ಪ್ರಾಣನಾಯಕಃ॥ [ಎಂದುದಾಗಿ]
ಕೂಡಲಚೆನ್ನಸಂಗಯ್ಯಾ
ನಿಮ್ಮ ಪ್ರಸಾದಿಗೆ ನಮೋ ನಮೋ. || ೭೬ ||

೩೦೪

ಸೋಂಕಿನ ಸುಖವನರ್ಪಿತವ ಮಾಡಿ,
ಅಸೋಂಕಿನ ಸುಖವನರ್ಪಿತವ ಮಾಡದಿದ್ದಡೆ
ಪ್ರಸಾದಿಯಲ್ಲ, ಶರಣನಲ್ಲ, ಲಿಂಗೈಕ್ಯನಲ್ಲ.
ಸಂಯೋಗೇ ಚ ವಿಯೋಗೇ ಚ ಅಣುಮಾತ್ರಂ ಸುಖಾರ್ಪಣಂ।
ಯಃ ಕುರ್ಯ್ಯಾದಿಷ್ಟಲಿಂಗೇ ತು ಸೋsವಧಾನೀ ನಿರಂತರಂ॥
ಇದು ಕಾರಣ ಕೂಡಲಚೆನ್ನಸಂಗಯ್ಯಾ,
ಭೇದವನರಿದು ಅರ್ಪಿತವ ಮಾಡುವ
ನಿಮ್ಮ ಪ್ರಸಾದಿಗೆ ನಮೋ ನಮೋಯೆಂಬೆನು. || ೭೭ ||

೩೦೫

ಕಣ್ಣ ಕಪ್ಪುರದ ಕಾಳಿಕೆಯ ಕಳೆದು,
ತನ್ನ ಲಿಂಗಕ್ಕೆ ಕೊಡಬಲ್ಲನಾಗಿ ಲಿಂಗಪ್ರಸಾದಿ.

ನಾಸಿಕ ಕಪ್ಪರದ ಅವಗಂಧವ ಕಳೆದು,
ಲಿಂಗಕ್ಕೆ ಕೊಡಬಲ್ಲನಾಗಿ ಲಿಂಗಪ್ರಸಾದಿ.
ಜಿಹ್ವೆ ಕಪ್ಪರದ ಅವರುಚಿಯು ಕಳೆದು,
ಲಿಂಗಕ್ಕೆ ಕೊಡಬಲ್ಲನಾಗಿ ಲಿಂಗ ಪ್ರಸಾದಿ.
ಸ್ಪರ್ಶ ಕಪ್ಪರದಲ್ಲಿ ಸೊಪ್ಪಡಗಿದಂತೆ
ಯೋಗದ ಪೂರ್ವಾಶ್ರಯವ ಕಳೆದು,
ತನ್ನ ಲಿಂಗಕ್ಕೆ ಕೊಡಬಲ್ಲನಾಗಿ ಲಿಂಗಪ್ರಸಾದಿ.
ಶ್ರೋತ್ರ ಕಪ್ಪರದ ಸದೆಸೊಪ್ಪ ಕಳೆದು,
ತನ್ನ ಲಿಂಗಕ್ಕೆ ಕೊಡಬಲ್ಲನಾಗಿ ಲಿಂಗಪ್ರಸಾದಿ.
ಜಿಹ್ವಾಗ್ರೇ ಲಿಂಗಂ ಭಕ್ತಸ್ಯ ಲಿಂಗಸ್ಯಾಗ್ರೇ ತಥಾ ರುಚಿಃ।
ರುಚ್ಯಗ್ರೇ ತು ಪ್ರಸಾದೋಽಸ್ತಿ ಪ್ರಸಾದೋ ಮೋಕ್ಷಸಾಧನಂ॥
ಇದು ಕಾರಣ ಕೂಡಲಚೆನ್ನಸಂಗಯ್ಯಾ,
ನಿಮ್ಮ ಪ್ರಸಾದಿಗೆ ನಮೋಯೆಂಬೆನು. ॥ ೭೮ ॥

೩೦೬

ಮೈ ಶೀತೋಷ್ಣವ ಮರೆದು, ಘ್ರಾಣ ಗಂಧವ ಮರೆದು,
ನಯನ ನೋಟವ ಮರೆದು, ಕಿವಿ ಶಬ್ದವ ಮರೆದು,
ನಾಲಗೆ ರುಚಿಯ ಮರೆದು,
ಅಂಡಜ ಜರಾಯುಜನೆನಿಸದೆ–
ಕೂಡಲಚೆನ್ನಸಂಗಯ್ಯನ ಉಪನಯನವಾದ ಶರಣನು. ॥ ೭೯ ॥

೩೦೭

ಅಂಗದ ಕೊನೆಯಲ್ಲಿ ಲಿಂಗ ಮುಂತಲ್ಲದೆ ಸಂಗವ ಮಾಡನಾ ಶರಣನು,
ನಯನದ ಕೊನೆಯಲ್ಲಿ ಲಿಂಗ ಮುಂತಲ್ಲದೆ ಅನ್ಯವ ನೋಡನಾ ಶರಣನು,
ಶ್ರೋತ್ರದ ಕೊನೆಯಲ್ಲಿ ಲಿಂಗ ಮುಂತಲ್ಲದೆ ಅನ್ಯವ ಕೇಳನಾ ಶರಣನು,
ನಾಸಿಕದ ಕೊನೆಯಲ್ಲಿ ಲಿಂಗ ಮುಂತಲ್ಲದೆ ಪರಿಮಳವ ವೇಧಿಸ ಶರಣನು,
ಜಿಹ್ವೆಯ ಕೊನೆಯಲ್ಲಿ ಲಿಂಗ ಮುಂತಲ್ಲದೆ ರುಚಿಯ ನಿಶ್ಚಯಿಸ ಶರಣನು,
ಕೂಡಲಚೆನ್ನಸಂಗಾ ನಿಮ್ಮ ಶರಣ ಸರ್ವಾಂಗಲಿಂಗಿಯಾದ. ॥ ೮೦ ॥

೩೦೮

ಆಯತ ಸ್ವಾಯತ ಸನ್ನಿಹಿತವ
ಅನಾಯತಗಳು ಮುಟ್ಟಲಮ್ಮವು ನೋಡಾ.

ಕಂಗಳ ಕೈಗಳಲರ್ಪಿಸುವ, ಶ್ರೋತ್ರದ ಕೈಗಳಲರ್ಪಿಸುವ
ನಾಸಿಕದ ಕೈಗಳಲರ್ಪಿಸುವ ಜಿಹ್ವೆಯ ಕೈಗಳಲರ್ಪಿಸುವ,
ತನುವಿನ ಕೈಗಳಲರ್ಪಿಸುವ, ಮನದ ಕೈಗಳಲರ್ಪಿಸುವ,
ಕೈಗಳ ಕೈಯಲರ್ಪಿಸುವ.
ಅಲ್ಲಲ್ಲಿ ತಾಗಿದ ಸುಖವನಲ್ಲಲ್ಲಿ ಲಿಂಗಾರ್ಪಿತವ ಮಾಡುವನಾಗಿ
ಕೂಡಲಚೆನ್ನಸಂಗಯ್ಯನಲ್ಲಿ ಆತ ಮಹಾಪ್ರಸಾದಿ. || ೮೧ ||

೩೦೯

ಕಂಗಳಾಶ್ರಯದ ಸೋಂಕಿನ ಸುಖಸಂಬಂಧವನು
ಮಹದಾಶ್ರಯಕ್ಕೆ ತಂದು ಸೂಸಲೀಯದೆ ನಿಮಗರ್ಪಿಸುವೆ.
ನಾಶಿಕಾಶ್ರಯದ ಸೋಂಕಿನ ಸುಖಸಂಬಂಧವನು
ಮಹದಾಶ್ರಯಕ್ಕೆ ತಂದು ಸೂಸಲೀಯದೆ ನಿಮಗರ್ಪಿಸುವೆ.
ಈ ಎರಡುಸ್ಥಾನ ಮೊದಲಾದ ಷಡುಸ್ಥಾನಾಶ್ರಯದ
ಸೋಂಕಿನ ಸುಖಸಂಬಂಧವನು ಮಹದಾಶ್ರಯಕ್ಕೆ ತಂದು
ಸೂಸಲೀಯದೆ ಷಡುವಿಧ ಲಿಂಗಂಗಳಿಗರ್ಪಿಸುವ.
ಆಪ್ಯಾಯನದಲ್ಲಿ [ಅಂಗವಿಸುವ] ಸಚರಾಚರವ
ಚೈತನ್ಯದ ಮಧ್ಯಕ್ಕೆ ತಂದು ನಾನರ್ಪಿಸುವೆ.
ಇದು ಕಾರಣ ಕೂಡಲಚೆನ್ನಸಂಗನ ಬಸವಣ್ಣನ
ಪ್ರಸಾದದಿಂದ ಪ್ರಸಾದಿಯಾದೆನಯ್ಯಾ. || ೮೨ ||

## ಪ್ರಸಾದಿಯ ಶರಣಸ್ಥಲ

೩೧೦

ಗುರುಶಿಷ್ಯ ಸಂಬಂಧವನರಸುವ ಮಹಂತರ ನಾನೇನೆಂಬೆನಯ್ಯಾ:
ಶಿಷ್ಯಂಗೆ ಗುರು ಶಿವಸೋದರ, ಗುರುವಿಂಗೆ ಲಿಂಗ ಶಿವಸೋದರ,
ಲಿಂಗಕ್ಕೆ ಜಂಗಮ ಶಿವಸೋದರ, [ಜಂಗಮಕ್ಕೆ ಪ್ರಸಾದ ಶಿವಸೋದರ]
ಪ್ರಸಾದಕ್ಕೆ ಪರಿಣಾಮವೆ ಶಿವಸೋದರ,
ಇದು ಕಾರಣ, ಗುರುವಿನಲ್ಲಿ ಗುಣವ, ಲಿಂಗದಲ್ಲಿ ಸ್ಥಲವ (ತಿಳಿಯ?)

ಜಂಗಮದಲ್ಲಿ ಕುಲವ, ಪ್ರಸಾದದಲ್ಲಿ ರುಚಿಯ,
ಪರಿಣಾಮದಲ್ಲಿ ಕುರುಹನರಸುವ ಪಾತಕರ ತೋರದಿರು
ಕೂಡಲಚೆನ್ನಸಂಗಮದೇವಾ. || ೮೩ ||

೩೧೧

ಅಜಾತಲಿಂಗ ಸುಕ್ಷೇತ್ರದಲ್ಲಿ ಪವಿತ್ರಶರಣ,
ಪದಾರ್ಥವ ಬಿತ್ತಿ ಪ್ರಸಾದವ ಬೆಳೆವ,
ಅಂದಂದಿಗೆ ಹೊಸಫಲವನುಂಬ, ಅನ್ಯವ ಮುಟ್ಟನಾ ಶರಣ.
ಕೂಡಲಚೆನ್ನಸಂಗನ ಶರಣ ಮರ್ತ್ಯನೆಂದರೆ ನರಕ ತಪ್ಪದು. || ೮೪ ||

೩೧೨

ಗುರುಸಾಹಿತ್ಯವಾದವರಂತಿರಲಿ,
ಲಿಂಗಸಾಹಿತ್ಯವಾದವರಂತಿರಲಿ,
ಜಂಗಮಸಾಹಿತ್ಯವಾದವರಂತಿರಲಿ,
ಪ್ರಸಾದಸಾಹಿತ್ಯವಾದವರಂತಿರಲಿ,
ಕೂಡಲಚೆನ್ನಸಂಗಯ್ಯಾ
ಇಂದ್ರಿಯ ಸಾಹಿತ್ಯ ಬಸವಣ್ಣಂಗಲ್ಲದಿಲ್ಲ. || ೮೫ ||

೩೧೩

ಲಿಂಗವಿದ್ದ ಕಾಯದಲ್ಲಿ ಕಾಮವಿಲ್ಲ, ಕ್ರೋಧವಿಲ್ಲ, ಲೋಭವಿಲ್ಲ,
ಮೋಹವಿಲ್ಲ, ಮದವಿಲ್ಲ, ಮತ್ಸರವಿಲ್ಲ, ಆಸೆ ರೋಷ ಪರುಷವಿಲ್ಲ,
ಮನಬುದ್ಧಿ ಚಿತ್ತಹಂಕಾರ ಮಾಯಾಪಾಶಬದ್ಧನಲ್ಲ, ಮಾಯಾ ಶರೀರಿಯಲ್ಲ.
ಕಾಮನೆಸಲಮ್ಮ , ಮಾಯೆ ಕೈಗೆಯ್ಯಲಮ್ಮದು.
ಲಿಂಗಾನುಶರೀರಿಯಾಗಿದ್ದ ಕಾಯದ ಚರಿತ್ರವಹೇಂದರೆ:
ಲಿಂಗದಂತೆ ನಡೆವುದು, ಲಿಂಗದಂತೆ ನುಡಿವುದು,
ಲಿಂಗಜಂಗಮದೊಳಗೆ ಬೆಳೆದನುಭಾವವ ಮಾಡೂದು.
ಶ್ರೋತ್ರ ನೇತ್ರ ಘ್ರಾಣ ಜಿಹ್ವೆ ಸ್ಪರುಶನದಲ್ಲಿ
ಲಿಂಗ ಸಮುಚ್ಚಯವಾಗಿ ಸನ್ನಹಿತ ಪ್ರಸಾದಿ.
ಇದು ಕಾರಣ, ಹೊನ್ನಿನಲ್ಲಿ ಹೆಣ್ಣಿನಲ್ಲಿ ಆಶ್ರಿತನಲ್ಲ.
ಭಕ್ತಿಸಾರಾಯವಾಗಿ ಬಂದುದನೆ ಕೊಂಬನು
ಅನ್ಯಸಾರಾಯ ಲಿಂಗಾರ್ಪಿತಕ್ಕೆಸಲ್ಲದಾಗಿ.

ಕೂಡಲಚೆನ್ನಸಂಗಮದೇವಾ
ನಿಮ್ಮ ಶರಣ ಭಕ್ತಿಸಾರಾಯನಿವಾಸಿಯಾಗಿರ್ಪನು. || ೮೬ ||

೩೧೪

ಪ್ರಾಣಲಿಂಗದಲ್ಲಿ ಪ್ರಸಾದಕಾಯುವಂತನೆಂತೆಂಬೆ?
ಆರಾಧ್ಯಲಿಂಗದಲ್ಲಿ ಸಮಯಾಚಾರವಂತನೆಂತೆಂಬೆ?
ಆಚಾರವಿಲ್ಲದ ಕಾಯ ಪ್ರಯೋಜನಕ್ಕೆ ಸಲ್ಲದು,
ಸಮಯವಿಲ್ಲದಾಚಾರಕ್ಕೆ ಆಶ್ರಯವಿಲ್ಲ.
ಆಚಾರಸ್ಥಳ ಆರಾಧ್ಯಸ್ಥಳ ಪ್ರಸಾದಸ್ಥಳ ಪ್ರತಿಗ್ರಾಹಕನಾಗಿ,
"ಸ್ಥಾವರಂ ಜಂಗಮಶ್ಚೈವ ದ್ವಿವಿಧಂ ಲಿಂಗಮುಚ್ಯತೇ"
ಇದು ಕಾರಣ ಕೂಡಲಚೆನ್ನಸಂಗಾ
ನಿಮ್ಮ ಶರಣನ ಲಿಂಗದೇವನೆಂಬೆನು. || ೮೭ ||

೩೧೫

ಜಿಹ್ವೆ ಗುರು, ಕಂಗಳು ಲಿಂಗ,
ನಾಸಿಕ ಆಚಾರ, ಶ್ರೋತ್ರ ಪ್ರಸಾದ,
ಹಸ್ತ ಜಂಗಮ, ಭಾವದಲ್ಲಿ ಮಹಾಲಿಂಗ,
ಆಚಾರಸ್ಯ ಮುಖಂ ಘ್ರಾಣಃ ಮುಖಂ ಜಿಹ್ವಾಗುರೋಸ್ತಥಾ|
ಶಿವಲಿಂಗಮುಖಂ ನೇತ್ರಂ ಮಹಾಲಿಂಗಂ ಚ ಭಾವನೇ||
ಇತಿ ಭೇದ ಮುಖಂ ಜ್ಞಾತಾ ಅರ್ಪಿತಂ ಚ ವಿಶೇಷತಃ||
ಎಂದುದಾಗಿ ಕೂಡಲಚೆನ್ನಸಂಗಾ
ನಿಮ್ಮ ಶರಣ ಸರ್ವಾಂಗಪ್ರಸಾದಿ. || ೮೮ ||

೩೧೬

ಓಗರ ಪ್ರಸಾದವ ಮಾಡಿ, ಪ್ರಸಾದವ ಓಗರವ ಮಾಡಿ,
ಕೊಟ್ಟುಕೊಂಬನಾಗಿ ಆತ ಲಿಂಗಪ್ರಸಾದಿ
ರೂಪು ರಸ ಗಂಧ ಪರುಶ ಸಹಿತ
ಜಂಗಮಕ್ಕೆ ಅರ್ಪಿತವ ಮಾಡಿಕೊಂಬನಾಗಿ ಆತ ಜಂಗಮಪ್ರಸಾದಿ.
ಸಪ್ತಧಾತು ಅಷ್ಟಮದವಿಲ್ಲಾಗಿ ಆತ ಲಿಂಗಪ್ರಸಾದಿ.
ಕಾಮಕ್ರೋಧ ಲೋಭ ಮೋಹ ಮದ ಮತ್ಸರವಿಲ್ಲಾಗಿ
ಆತ ಜಂಗಮಪ್ರಸಾದಿ.
ಇದು ಕಾರಣ, ಕೂಡಲಚೆನ್ನಸಂಗಾ
ನಿಮ್ಮ ಪ್ರಸಾದಿಗೆ ನಮೋ ನಮೋ ಎಂಬೆ. || ೮೯ ||

೩೧೭

ಲಿಂಗ ಮುಖದಲ್ಲಿ ಬಂದ ಪ್ರಸಾದವ ಪ್ರಸಾದವೆಂಬೆ,
ಜಂಗಮ ಮುಖದಲ್ಲಿ ಬಂದ ಪ್ರಸಾದವ ಪ್ರಸಾದವೆಂಬೆ,
ಪ್ರಸಾದ ಮುಖದಲ್ಲಿ ಬಂದ ಪ್ರಸಾದವ ಪ್ರಸಾದವೆಂಬೆ,
ಅರ್ಪಿತ ಸಂಕಲ್ಪಿತ ಭಾವಾರ್ಪಿತವ ಮಾಡಬಲ್ಲ,
ಕೂಡಲಚೆನ್ನಸಂಗಾ ನಿಮ್ಮ ಶರಣ. || ೯೦ ||

೩೧೮

ದೇವನಾಮ ಸೊಗಸದು ಲಿಂಗಾಯತಂಗೆ,
ಮಾನವನಾಮ ಸೊಗಸದು ಜಂಗಮ ಭಕ್ತಂಗೆ,
ಅನ್ಯನಾಮವರಿಯ ಪ್ರಸಾದಸಮ್ಯಕನಾಗಿ,
ಈ ತ್ರಿವಿಧ ಮಾಟದರ್ಥ
ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ. || ೯೧ ||

೩೧೯

ಗುರುಕಾರುಣ್ಯ, ಲಿಂಗನಿಷ್ಠೆ, ಪ್ರಸಾದವಿಶ್ವಾಸ,
ಭಾವದ ನಿಜವನಾರು ಬಲ್ಲರಯ್ಯಾ?
ಗುರುವಿನಲ್ಲಿ ಲಿಂಗಪ್ರವೇಶ, ಲಿಂಗದಲ್ಲಿ ಜಂಗಮಪ್ರವೇಶ,
ಜಂಗಮದಲ್ಲಿ ಪ್ರಸಾದ ಪ್ರವೇಶ, ಪ್ರಸಾದದಲ್ಲಿ ಪರಿಣಾಮಪ್ರವೇಶ,
ಪರಿಣಾಮದಲ್ಲಿ ಭಾವಪ್ರವೇಶ.
ಇಂತು ಗುರುವಿಂಗೆ ಲಿಂಗವಿಲ್ಲ, ಲಿಂಗಕ್ಕೆ ಜಂಗಮವಿಲ್ಲ,
ಜಂಗಮಕ್ಕೆ ಪ್ರಸಾದವಿಲ್ಲ, ಪ್ರಸಾದಕ್ಕೆ ಪರಿಣಾಮವಿಲ್ಲ,
ಪರಿಣಾಮಕ್ಕೆ ಭಾವವಿಲ್ಲ.
ಇದರಾಗು ಹೋಗಿನ ಸಕೀಲಸಂಬಂಧವ
ಕೂಡಲಚೆನ್ನಸಂಗಾ ನಿಮ್ಮ ಶರಣನೆ ಬಲ್ಲ. || ೯೨ ||

೩೨೦

ಚತುರ್ಗ್ರಾಮ ಪಂಚೈದು ಭೂತದೊಳಗೆ ಸ್ಥೂಲವಾವುದು? ಸೂಕ್ಷ್ಮವಾವುದು?
ಎಮಗೆ ಬಲ್ಲವರು ನೀವು ಹೇಳಿರೇ.
ಕಾಲಚಕ್ರ ಕರ್ಮಚಕ್ರ ನಾದಚಕ್ರ ಬಿಂದು ಚಕ್ರ,
ಆವುದು ಘನ, ಆವುದು ಕಿರಿದು? ಎಮಗೆ ಬಲ್ಲವರು ನೀವು ಹೇಳಿರೇ,

ಶುದ್ಧ ಸಿದ್ಧ ಪ್ರಸಿದ್ಧವೆಂದು ಹೆಸರಿಟ್ಟುಕೊಂಡು ನುಡಿವಿರಿ,
ಓಗರವಾವ ಕಡೆ? ಪ್ರಸಾದವಾವ ಕಡೆ? ಎಮಗೆ ಬಲ್ಲವರು ನೀವು ಹೇಳಿರೇ,
ಇಕ್ಕಿದ ರಾಟಳ ತುಂಬುತ್ತ ಕೆಡುಹುತ್ತಲಿದೆ.
ಇಕ್ಕಿದ ರಾಟಳ ಮುರಿದು ಸೂತ್ರ ಹರಿದು ನಿಶ್ಶೂನ್ಯವಾದಡೆ
ಕೂಡಲಚೆನ್ನಸಂಗನಲ್ಲಿ ಮಹಾಪ್ರಸಾದಿಯೆಂಬೆನು. || ೯೩ ||

೩೨೧

ಕಾಲಚಕ್ರ ಕರ್ಮಚಕ್ರ ನಾದಚಕ್ರ ಬಿಂದುಚಕ್ರ:
ಕಾಲಚಕ್ರ ಘ್ರಾಣದಿಂದ ನಡೆವುದು,
ಕರ್ಮಚಕ್ರ ನಯನದಿಂದ ನಡೆವುದು,
ನಾದಚಕ್ರ ಶ್ರೋತ್ರದಿಂದ ನಡೆವುದು,
ಬಿಂದುಚಕ್ರ ಜಿಹ್ವೆಯಿಂದೆ ನಡೆವುದು,
ಇಂತು ನಾಲ್ಕರಲ್ಲಿ ನಾಲ್ಕು ನಡೆವುವು.
ಇಂತು ಲೋಕಾದಿಲೋಕಂಗಳೆಲ್ಲವು ಹೀಗೆ ಕೆಟ್ಟು ಹೋದವು.
ಈ ನಾಲ್ಕರ ಕುಳಸ್ಥಳವನರಸಿ ಹರಿಬ್ರಹ್ಮಾದಿಗಳೆಲ್ಲ ಕೆಟ್ಟು ಪೋದರು.
ಈ ನಾಲ್ಕಕ್ಕೆ ನಾಲ್ಕನು ಕೊಟ್ಟು
ಶುದ್ಧನಾದ ಕೂಡಲಚೆನ್ನಸಂಗಾ ನಿಮ್ಮ ಶರಣ. || ೯೪ ||

೩೨೨

ಕಾಲಚಕ್ರವ ಗುರುವಿಂಗಿತ್ತು, ಕರ್ಮಚಕ್ರವ ಲಿಂಗಕ್ಕಿತ್ತು,
ನಾದ ಚಕ್ರವ ಜಂಗಮಕ್ಕಿತ್ತು, ಬಿಂದುಚಕ್ರವ ಪ್ರಸಾದಕ್ಕಿತ್ತು,
ಇಂತೀ ನಾಲ್ಕಕ್ಕೆ ನಾಲ್ಕನು ಕೊಟ್ಟು ಕೊಟ್ಟೆನೆಂಬುದಿಲ್ಲ, ಕೊಂಡೆನೆಂಬುದಿಲ್ಲ.
ಬಯಲಲೊದಗಿದ ಘಟವು,
ಕೂಡಲಚೆನ್ನಸಂಗಾ ನಿಮ್ಮ ಶರಣ. || ೯೫ ||

೩೨೩

ಅನಾಹತಸ್ಥಳದಲ್ಲಿ ಶಿವ ತನ್ನ ಲೀಲಾವಿನೋದದಿಂದ
ನೀವು ಸಹಿತ ಮೂರ್ತಿಯಾದನು,
ಹೊರಗೆ ಆಕಾರವ ಧರಿಸಿ, ಒಳಗೆ ನಿರವಯಕ್ಕೆ ಆರೋಗಣೆಯ ಮಾಡಿಸ[ಲು].
ಇದು ಕಾರಣ ಕೂಡಲಚೆನ್ನಸಂಗಯ್ಯಾ
ಬಸವಣ್ಣ ಮಡಿವಾಳಯೆಂಬೆರಡು ತೋಳ ಧರಿಸಿದೆ. || ೯೬ ||

೩೨೪

ನಿರವಯವಾದಡೆಯೂ
ಭಕ್ತಿಯು ತೋರಿದ ತನುವಿನ ಮೇಲೆ ಮೂರ್ತಿಯಾಯಿತ್ತು.
ಪ್ರಸಾದವಾದಡೆಯೂ ಬಸವಣ್ಣನ ಕರಸ್ಥಳದಲ್ಲಿ ಮೂರ್ತಿಯಾಯಿತ್ತು,
ಪ್ರಸಾದವ ನಾನೆತ್ತ ಬಲ್ಲೆನಯ್ಯಾ ಮಡಿವಾಳ ತೋರಲಿಕೆ ಕಂಡೆನು:
ಭಕ್ತಿಯ ಕಂದೆರೆದು ತೋರಿದ, ಜ್ಞಾನದ ನಿಲುಕಡೆಯ ತೋರಿದ.
ಇದು ಕಾರಣ ಕೂಡಲಚೆನ್ನಸಂಗಯ್ಯಾ
ಮಡಿವಾಳನೂ ಬಸವಣ್ಣನೂ ಪದಾರ್ಥವನಾರೋಗಿಸಿ ಕೊಡುತ
ಕರುಣಿಸಿದ ಪ್ರಸಾದಿಯಾನು. ॥ ೯೭ ॥

## ಪ್ರಸಾದಿಯ ಐಕ್ಯಸ್ಥಲ

೩೨೫

ಗುರುಲಿಂಗ ಜಂಗಮವೆಂಬ ಭೇದವನೆ ಕಳೆದು,
ಗುರು ಲಿಂಗವ ಏಕವ ಮಾಡಿ ತೋರಿದನಾಗಿ,
ತನು, ಮನ, ಘ್ರಾಣ ಮೊದಲಾಗಿಪ್ಪ ಕರಣೇಂದ್ರಿಯಂಗಳನು,
ತನು ಮುಟ್ಟಿದ ಸುಖಂಗಳನು ಲಿಂಗಕ್ಕೆ ಕೊಟ್ಟು,
ಅದ ಬಗೆಗೆತ್ತಿ ಬಿಚ್ಚಿ ಬೇರೆ ಮಾಡ,
ಕೂಡಲಚೆನ್ನಸಂಗಾ ಲಿಂಗೈಕ್ಯನು. ॥ ೯೮ ॥

೩೨೬

ರೂಪವನರ್ಪಿಸಿದ ಬಳಿಕ ಅಂಗವೆಂಬುದಿಲ್ಲ.
ರುಚಿಯನರ್ಪಿಸಿದ ಬಳಿಕ ಪ್ರಾಣವೆಂಬುದಿಲ್ಲ.
ಭಾವ ನಿರ್ಭಾವವ ನಿಜ ನುಂಗಿತ್ತು, ಅರ್ಪಿಸುವ ಪರಿಯೆಂತೋ?
ರೂಪು ಲಿಂಗ, ರುಚಿ ಜಂಗಮ,
ಅರ್ಪಿಸುವ ಅರ್ಪಣ ಮುನ್ನಿಲ್ಲ ಕೂಡಲಚೆನ್ನಸಂಗಮದೇವಾ. ॥ ೯೯ ॥

೩೨೭

ಆಚಾರವಂಗವಾದವರಿಗೆ ಅಂಗಾಶ್ರಯ ಹೊದ್ದುವುದೆ ಅಯ್ಯಾ?
ತನು-ಭಕ್ತ, ಮನ-ಲಿಂಗ ಸಂಗವಾದವರಿಗೆ ಅನರ್ಪಿತ ಹೊದ್ದೂದೆ ಅಯ್ಯಾ?
ಈ ಉಭಯಸಂಗನಿರ್ಣಯ ಲಿಂಗೈಕ್ಯವು
ಕೂಡಲಚೆನ್ನಸಂಗಮದೇವ. ॥ ೧೦೦ ॥

೩೨೮

ಅನಾದಿಕುಳ ಗುರುಸನುಮತವಾದ ಪ್ರಸಾದಿ,
ಲಿಂಗ ಜಂಗಮಸನುಮತವಾದ ಪ್ರಸಾದಿ,
ಆಪ್ಯಾಯನ ಅವಧಾನ ಅಂಗವಿಸದೆ ನಿಂದು ಸನುಮತವಾದ ಪ್ರಸಾದಿ,
ನೇತ್ರ ಶ್ರೋತ್ರ ಘ್ರಾಣ ಮನ ಬುದ್ಧಿ ಚಿತ್ತಹಂಕಾರ ಸನುಮತವಾದ ಪ್ರಸಾದಿ,
ರೂಪು ರಸ ಗಂಧ ಸ್ಪರ್ಶ ಪಂಚೇಂದ್ರಿಯ ಸನುಮತವಾದ ಪ್ರಸಾದಿ,
ದೇಹಾದಿಗುಣವನತಿಗಳೆದು ಉದರಾಗ್ನಿ ತಲೆದೋರದೆ
ಸಕಲಸನುಮತವಾದ ಪ್ರಸಾದಿ.
ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ,
ಸಮಾಪ್ತವಾಗಿ ಲಿಂಗಲೀಯವಾದ ಪ್ರಸಾದಿ. ॥ ೧೦೧ ॥

■ ■

## ಪ್ರಾಣಲಿಂಗಿಯ ಜ್ಞಾನಿಸ್ಥಲ

೩೨೯

ಶ್ರೋತ್ರ ನೇತ್ರ ತ್ವಕ್ಕು ಜಿಹ್ವೆ ಘ್ರಾಣೇಂದ್ರಿಯಂಗಳ ಕೂಡಿಕೊಂಡು
ಚೇಷ್ಟಿಸುವ ದಶವಾಯುಗಳಾವುವೆಂದರೆ:
ರೇಚಕ ಪೂರಕ ಕುಂಭಕ ರೂಪಿಂದ ಚೇಷ್ಟಿಸುವುದೊಂದು ಪ್ರಾಣವಾಯು,
ರಸಂಗಳ ನೀರಸಂಗಳ ಮಾಡಿ ಮಲಮೂತ್ರಂಗಳ ನಡಸೂದೊಂದಪಾನವಾಯು,
ಅನ್ನರಸವಂ ಪಿಡಿದು ತನುವಂ ವ್ಯಾಪಿಸಿ ಪಸರಿಸೂದೊಂದು ವ್ಯಾನವಾಯು,
ಪಾದವ ನೆಲಕ್ಕಿಕ್ಕಿಸೂಢ್ದೊಂದು ಉದಾನವಾಯು.
ಸಮಧಾತುಗಳನರಿದು ಅನ್ನಪಾನಂಗಳ ಪಸರಿಸೂದೊಂದು ಸಮಾನವಾಯು.
ರಸವ್ಯಾಪ್ತಿಯ ಮಾಡೂದೊಂದು ನಾಗವಾಯು,
ಘುರವಟ್ಟಿಯ ತೊಳಲೂದೊಂದು ಕೂರ್ಮವಾಯು,
ಆಗುಳಿಕೆ ಸೀನು ಮೈಮುರಿವುದೊಂದು ಕೃಕರವಾಯು,
ಓಕರಿಕೆಯ ಮಾಡೂದೊಂದು ದೇವದತ್ತವಾಯು,
ನುಡಿಯ ಬುದ್ಧಿಯ ಮಾಡಿ ನಡಸೂದೊಂದು ಧನಂಜಯವಾಯು,
ಇಂತು ದಶವಾಯುಗಳು ಇಹ ಸ್ಥಾನವಾವುದೆಂದರೆ:
ಗುಹ್ಯದಲ್ಲಿ ಅಪಾನವಾಯು, ನಾಭಿಯಲ್ಲಿ ಸಮಾನವಾಯು,
ಹೃದಯದಲ್ಲಿ ಪ್ರಾಣವಾಯು, ಕಂಠದಲ್ಲಿ ಉದಾನವಾಯು,
ಸಮಸ್ತ ಸಂದುಗಳಲ್ಲಿ ವ್ಯಾನವಾಯು, ಈಡಾನಾಳದಲ್ಲಿ ನಾಗವಾಯು,
ಪಿಂಗಳನಾಳದಲ್ಲಿ ಕೂರ್ಮವಾಯು, ಸುಷುಮ್ನಾನಾಳದಲ್ಲಿ ಕೃಕರವಾಯು,
ಪಸ್ತದಲ್ಲಿ ದೇವದತ್ತವಾಯು, ಜಿಹ್ವೆಯಲ್ಲಿ ಧನಂಜಯವಾಯು.
ಈ ವಾಯುಪ್ರಾಣಿಯ ಕಳೆದು, ಲಿಂಗಪ್ರಾಣಿಯ ಮಾಡಬಲ್ಲರೆ
ಕೂಡಲಚೆನ್ನಸಂಗಯ್ಯನಲ್ಲಿ ಅದೇ ಯೋಗ. ॥ ೧ ॥

೩೩೦

ಪ್ರಾಣವಾಯು ನೇತ್ರನಾಳ, ಅಪಾನವಾಯು ಜಿಹ್ವಾನಾಳ,
ವ್ಯಾನವಾಯು ಅಧಮನಾಳ, ಉದಾನವಾಯು ಕಮಳನಾಳ,
ಸಮಾನವಾಯು ಮುಖನಾಳ, ನಾಗವಾಯು ಶ್ರೋತ್ರನಾಳ,
ಕೂರ್ಮವಾಯು ಕಂಠನಾಳ, ಕೃಕರವಾಯು ಚಂದ್ರನಾಳ,
ದೇವದತ್ತವಾಯು ಸೂರ್ಯನಾಳ, ಧನಂಜಯವಾಯು ಬ್ರಹ್ಮನಾಳ,
ಇಂತು ದಶವಾಯುಗಳ ಸ್ಥಾನ.
ಪ್ರಾಣವಾಯು ಹರಿದಲ್ಲಿ ಲಿಂಗಪ್ರಾಣವಂ ಮರೆದು

ತನುಮನಧನವೆ ಪ್ರಾಣವಾಗಿಹ.
ಅಪಾನವಾಯು ಹರಿದಲ್ಲಿ ಲಿಂಗಬಯಕೆಯು ಮರೆದು
ಷಡುರಸಾನ್ನದ ಬಯಕೆಯಾಗಿಹ.
ವ್ಯಾನವಾಯು ಹರಿದಲ್ಲಿ [ಲಿಂಗ] ಧ್ಯಾನವಂ ಮರೆದು
ಚತುರ್ವಿಧಪದವೇದ್ಯವಾಗಿಹ.
ಉದಾನವಾಯು ಹರಿದಲ್ಲಿ ಲಿಂಗಗಮನವ ಬಿಟ್ಟು
ಉದ್ದೇಶ ಗಮನಿಯಾಗಿಹ.
ಸಮಾನವಾಯು ಹರಿದಲ್ಲಿ ಚತುರ್ವಿಧಸಾರವಂ ಮರೆದು
ಕಲ್ಲು ಮರನಾಗಿಹ.
ನಾಗವಾಯು ಹರಿದಲ್ಲಿ ಸುಭಾಷಿತ ಗೋಷ್ಠಿಯಂ ಕೇಳಲೊಲ್ಲದೆ
ಕುಭಾಷಿತ ಕುಚಿತ್ತರ ಶಬ್ದವ ಕೇಳಿಹೆನೆಂಬ.
ಕೂರ್ಮವಾಯು ಹರಿದಲ್ಲಿ ಸುಜ್ಞಾನವಂ ಬಿಟ್ಟು
ಅಜ್ಞಾನ ಸಂಭಾಷಣೆಯಂ ಮಾಡುವ.
ಕೃಕರವಾಯು ಹರಿದಲ್ಲಿ ಸುಗುಣವಂ ಬಿಟ್ಟು
ದುರ್ಗುಣಕ್ಕೆ ಬೀರಿ ಬಡವಾಗುತ್ತಿಹ.
ದೇವದತ್ತವಾಯು ಹರಿದಲ್ಲಿ ಆವ ವಿಚಾರವಂ ಮರೆದು
ಕೋಪದಲುರಿದೇಳುತ್ತಿಹ.
ಧನಂಜಯವಾಯು ಹರಿದಲ್ಲಿ ಅನೇಕಾಯಸದಿಂ
ಗಳಿಸಿದಂಥ ಧನವನು ಲಿಂಗಜಂಗಮಕ್ಕೆ ವೆಚ್ಚಿಸಲೊಲ್ಲದೆ,
ಅನರ್ಥವ ಮಾಡಿ ಕೆಡಿಸಿ ಕಳೆದು ಹೋಯಿತ್ತೆಂದು ಮರುಗುತ್ತಿಹ.
ಇಂತೀ ದಶವಾಯುಗಳ ಭೇದವನರಿದು
ಕೂಡಲಚೆನ್ನಸಂಗಯ್ಯನಲ್ಲಿ ನಿಲಿಸೂದೆ ಯೋಗ. ॥ ೨ ॥

೩೩೧

ಪೃಥ್ವಿಮದ ಸಲಿಲಮದ ಪಾವಕಮದ (ಪವನಮದ)
ಅಂಬರಮದ ರವಿಮದ ಶಶಿಮದ ಆತ್ಮಮದ–
ಇಂತೀ ಅಷ್ಟಮದಂಗಳ ವಿವರ:
ಪೃಥ್ವಿಮದವೆತ್ತಿದಲ್ಲಿ ತನುಗುಣಭರಿತನಾಗಿಹ,
ಸಲಿಲಮದವೆತ್ತಿದಲ್ಲಿ ಸಂಸಾರಭರಿತನಾಗಿಹ,
ಪಾವಕಮದವೆತ್ತಿದಲ್ಲಿ ಕಾಮ್ಯರಸಭರಿತನಾಗಿಹ,
ಪವನಮದವೆತ್ತಿದಲ್ಲಿ ಇರ್ದ ಠಾವಿನಲ್ಲಿರ್ದು
ಜಂಬೂದ್ವೀಪಭರಿತನಾಗಿಹ
ಅಂಬರಮದವೆತ್ತಿದಲ್ಲಿ ವಾಹನಭರಿತನಾಗಿಹ,

ರವಿ ಮದವೆತ್ತಿದಲ್ಲಿ ಕೋಪಾಗ್ನಿ ಭರಿತನಾಗಿಹ,
ಶಶಿಮದವೆತ್ತಿದಲ್ಲಿ ಚಿಂತಾಭರಿತನಾಗಿಹ,
ಆತ್ಮಮದವೆತ್ತಿದಲ್ಲಿ ಅಹಂಕಾರಭರಿತನಾಗಿಹ.
ಇಂತೀ ಅಷ್ಟಮದವಳಿದು ನಿಜವನರಿಯ ಬಲ್ಲರೆ,
ಕೂಡಲಚೆನ್ನಸಂಗಯ್ಯನಲ್ಲಿ ಶಿವಯೋಗಿಗಳೆಂಬೆನು. || ೩ ||

೩೩೨

ತನುವ್ಯಸನ ಮನವ್ಯಸನ ಧನವ್ಯಸನ ವಾಹನವ್ಯಸನ
ಉತ್ಸಾಹವ್ಯಸನ ವಿಶ್ವವ್ಯಸನ ಸೇವಕ ವ್ಯಸನ
ಇಂತೀ ಸಪ್ತವ್ಯಸನಂಗಳು:
ತನುವ್ಯಸನ ವಸ್ತು ಆಭರಣ ವೀಳೆಯ ಬಯಸೂದು,
ಮನವ್ಯಸನ ಕಳವು ಹುಸಿ ಪಾರದ್ವಾರವ ಬಯಸೂದು,
ಧನವ್ಯಸನ ರಾಜ್ಯವ ಬಯಸೂದು.
ವಾಹನವ್ಯಸನ ಆನೆ ಕುದುರೆ ಸೇನೆ ಬಯಸೂದು,
ವಿಶ್ವವ್ಯಸನ ಚತುರ್ವಿಧಕರ್ತವ್ಯ ಬಯಸೂದು,
ಉತ್ಸಾಹ ವ್ಯಸನ ಪುತ್ರ ಮಿತ್ರ ಕಳತ್ರವ ಬಯಸೂದು,
ಸೇವಕವ್ಯಸನ ಉಣಲಾರೆ, ಉಡಲಾರೆ ತೊಡಲಾರೆನೆಂದೆನುತ್ತಿಹುದು.
ಈ ಸಪ್ತ ವ್ಯಸನಂಗಳಂ ಬಿಟ್ಟು ಲಿಂಗವ್ಯಸನಿಯಾಗಬಲ್ಲರೆ
ಕೂಡಲಚೆನ್ನಸಂಗಯ್ಯನಲ್ಲಿ ಪ್ರಾಣಲಿಂಗಿಗಳೆಂಬನು. || ೪ ||

೩೩೩

ಕಾಯದ ಪೂರ್ವಾಶ್ರಯ ಶ್ರೀಗುರುವಿನಿಂದ ಹೋಯಿತ್ತು;
ಲಿಂಗದಿಂದ ಹೋ[ಗ]ದು.
ಇಂದ್ರಿಯದ ಪೂರ್ವಾಶ್ರಯ ಶ್ರೀಗುರುವಿನಿಂದ ಹೋಯಿತ್ತು;
ಲಿಂಗದಿಂದ ಹೋಗದು.
ತನ್ನಿಂದಲೇ (ಅಹುದು), ತನ್ನಿಂದಲೇ ಹೋಹುದು.
ಕಾಲಚಕ್ರ ಕರ್ಮಚಕ್ರ ನಾದಚಕ್ರ ಬಿಂದುಚಕ್ರವುಳ್ಳನ್ನಕ್ಕರ,
ಕೂಡಲಚೆನ್ನಸಂಗನಲ್ಲಿ ಶರಣನೆನಿಸಲು ಬಾರದು. || ೫ ||

೩೩೪

ತನುಗುಣಗ್ರಾಹಕನಾಗದಿರಬೇಕು,
ಮನಗುಣಗ್ರಾಹಕನಾಗದಿರಬೇಕು,

ಪ್ರಾಣಗುಣಗ್ರಾಹಕನಾಗದಿರಬೇಕು.
ಈ ತ್ರಿವಿಧಗ್ರಾಹಕನಾಗದೆ ಲಿಂಗಗ್ರಾಹಕನಾಗಬೇಕು.
ಕೂಡಲಚೆನ್ನಸಂಗಮದೇವಾ. ॥ ೬ ॥

೩೩೫

ಅಂಗದಿಂದ ಲಿಂಗ ಹಿಂಗಬಾರದೆಂಬರು:
ಅಂಗ, ಲಿಂಗಸಂಬಂಧವಾದಲ್ಲಿ ಫಲವೇನು,
ಮನ ಲಿಂಗಸಂಬಂಧವಾಗದನ್ನಕ್ಕ?
ಕೂಡಲಚೆನ್ನಸಂಗಯ್ಯಾ ಮನದಿಂದಲೇನೂ ಘನವಿಲ್ಲಯ್ಯಾ. ॥ ೭ ॥

೩೩೬

ಅಂಗಸಂಗಿಯಾದವಂಗೆ ಲಿಂಗಸಂಗವಿಲ್ಲ,
ಲಿಂಗಸಂಗಿಯಾದವಂಗೆ ಅಂಗಸಂಗವಿಲ್ಲ.
ಅಂಗಸಂಗವೆಂಬುದು ಅನಾಚಾರ,
ಲಿಂಗಸಂಗವೆಂಬುದು ಸದಾಚಾರ.
ಇದು ಕಾರಣ, ಅಂಗಸಂಗವ ಬಿಟ್ಟು
ಲಿಂಗಸಂಗಿಯಾಗಿರಬೇಕು, ಕೂಡಲಚೆನ್ನಸಂಗಮದೇವಾ. ॥ ೮ ॥

೩೩೭

ಮನಶುದ್ಧವಾಗಿ ಮಜ್ಜನಕ್ಕೆರೆದರೆ ಭಾವ ಮತ್ತೇಕಯ್ಯಾ?
ಪತ್ರ ಪುಷ್ಪ ರಂಗವಲ್ಲಿಯನಿಕ್ಕಲೇನು, ಭಿತ್ತಿಯ ಚಿತ್ತಾರವೆ?
ಅವರು ಕಾಣಬೇಕು, ಇವರು ಕಾಣಬೇಕೆಂಬ
ಭ್ರಮೆಯ ಭ್ರಮಿತರು ಅಂಗಹೀನರು.
ಮನದಂಗವನಗಲರು, ಲಿಂಗ ಮತ್ತೆಲ್ಲಿಯದೋ?
ಸದಮದವಳಿದು ನಿಜವನರಿದಡೆ ಲಿಂಗಕ್ಕೆ ಪೂಜೆ ಕಂಡಾ,
ಕೂಡಲಚೆನ್ನಸಂಗಯ್ಯ ಸಾಹಿತ್ಯನಾಗಿಹನು. ॥ ೯ ॥

೩೩೮

ಭಾವದಿಂದಲಿ ಲಿಂಗೈಕ್ಯವಾದೆವೆಂಬರು,
ಜೀವದಿಂದ ಲಿಂಗೈಕ್ಯವಾದವೆಂಬರು,
ಸುಷುಮ್ನಾನಾಳದ ಭೇದವನರಿಯರು,
ವಿಷಯುವಲ್ಲಿ ಗಸಣೆಗೊಂಬರು,

ಅಂತರಂಗ ಶುದ್ಧಿಯನವರೆತ್ತ ಬಲ್ಲರು
ಕೂಡಲಚೆನ್ನಸಂಗಮದೇವಾ? || ೧೦ ||

೩೩೯

ಭವಿಗೆ ಇಕ್ಕಲಾಗದೆಂಬ ಸಂಬಂಧಿಗಳು ಮರಳಿ ಭವಿಗಿಕ್ಕಿದರೆ,
ಭಾಷೆಗೆ ವ್ರತಗೇಡಿ.
ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಭವಿ
ನಿಮ್ಮನಾವ[ರಿಸಿ]ಕೊಂಡಿರಲು ಮತ್ತೆ ಭವಿಗಿಕ್ಕನೆಂಬ ಪರಿಯೆಂತೋ?
ಬಹಿರಂಗದ ಭವಿಯ ಕಳೆವುದು (ಅಭ್ಯಾಸವಲ್ಲದೆ ನಿಜವಲ್ಲ),
ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ
ಅಂತರಂಗದ ಭವಿಯ ಕಳೆವ ಶರಣನಪೂರ್ವ. || ೧೧ ||

೩೪೦

ಘಟಸಂಸ್ಕಾರದಲ್ಲಿ ಪಟಲ ಹರಿವುದೆ, ಜೀವಸಂಸ್ಕಾರವಿಲ್ಲದನ್ನಕ್ಕ?
ವೇಷಧಾರಿತನದಲ್ಲಿ ಗ್ರಾಸವಹುದಲ್ಲದೆ,
ಜ್ಞಾನಸಂಸ್ಕಾರವಿಲ್ಲದನ್ನಕ್ಕ ಭವವೆಂತು ಹರಿವುದು?
ಅಂಗಭವಿಯನು ಲಿಂಗಭವಿಯನು ಕಳೆದುಳಿದಲ್ಲದೆ,
ಕೂಡಲಚೆನ್ನಸಂಗಯ್ಯನ ಹೊದ್ದಬಾರದು. || ೧೨ ||

೩೪೧

ತನುಮುಟ್ಟಿ ಮನ ಮುಟ್ಟದೆ ದೂರವಾದರಯ್ಯಾ ಬೆಲೆವೆಣ್ಣಿನಂತೆ,
ಸೂಳೆ ತನುಮುಟ್ಟಿ ಅಪ್ಪುವಳಲ್ಲವೆ ಮನಮುಟ್ಟಿ ಅಪ್ಪಳಾಗಿ.
ಆಚಾರವರಿಯದ ಅರೆಮರುಳುಗಳು ಶಿವಸುಖವನೆತ್ತ ಬಲ್ಲರು
ಕೂಡಲಚೆನ್ನಸಂಗಮದೇವಾ? || ೧೩ ||

೩೪೨

ಉಲಿಗರ ಮಾತು, ಊರುಗರ ತೋಟಿಯೊಳಗುಂಟೆ ಲಿಂಗಾನುಭಾವ?
ರಚ್ಚೆಯ ಕಟ್ಟ, ಬೀದಿಯ ಮಾತಿನೊಳಗುಂಟೆ ಲಿಂಗಾನುಭಾವ?
ಸಂತೆಯೊಳಗೆ ಸಮಾಧಿಯುಂಟೆ?
ಇದು ಕಾರಣ ಕೂಡಲಚೆನ್ನಸಂಗಯ್ಯನ ಅನುಭಾವ
ಹೊರವೇಷದ ವಾಚಾಳರಿಗೆಲ್ಲಿಯದು? || ೧೪ ||

೩೪೩

ಅನುಭಾವ ಅನುಭಾವವೆಂದೆಂಬರು
ಅನುಭಾವವೆಂಬುದು ನೆಲದ ಮರೆಯ ನಿಧಾನ ಕಾಣಿರೋ
ಅನುಭಾವವೆಂಬುದು ಅಂತರಂಗದ ಶುದ್ಧಿ ಕಾಣಿರೋ.
ಅನುಭಾವವೆಂಬುದು ರಚ್ಚೆಯ ಮಾತೆ?
ಅನುಭಾವವೆಂಬುದು ಸಂತೆಯ ಸುದ್ದಿಯೆ?
ಅನುಭಾವವೆಂಬುದೇನು ಬೀದಿಯ ಪಸರವೆ?
ಏನೆಂಬೆ ಹೇಳಾ ಮಹಾಘನವ!
ಆನೆಯ ಮಾನವೊಳಗಿಕ್ಕಿದರಡಗೂವೆ ದರ್ಪಣವೊಳಗಡಗೂವಲ್ಲವೆ?
ಕಂಡ ಕಂಡಲ್ಲಿ ಗೋಷ್ಠಿ, ನಿಂದ ನಿಂದಲ್ಲಿ ಅನುಭಾವ,
ಬಂದ ಬಂದಲ್ಲಿ ಪ್ರಸಂಗವ ಮಾಡುವ ನಿರ್ಬುದ್ಧಿ ನೀಚರ ಮೆಚ್ಚ
ಕೂಡಲಚೆನ್ನಸಂಗಮದೇವ. ॥ ೧೫ ॥

೩೪೪

ಮುನ್ನಿನ ಆದ್ಯರ ವಚನ, ಆ ಲಿಂಗದ ನಡೆ,
ಆ ಲಿಂಗದ ನುಡಿ, ಆ ಲಿಂಗದಂತೆ.
ಮುನ್ನಿನ ಜಂಗಮದ ನಡೆ, ಜಂಗಮದ ನುಡಿ, ಆ ಜಂಗಮದಂತೆ.
ಮುನ್ನಿನ ಪ್ರಸಾದದ ನಡೆ, ಪ್ರಸಾದದ ನುಡಿ ಆ ಪ್ರಸಾದದಂತೆ.
ಇಂತಿವಕ್ಕನುಸಾರಿ ಮಾಡಿಹೆನೆಂಬ ಕರ್ಮಿಯ ಮಾತ ಹೇಳಲಾಗದು
ಹೊಂಬಿತ್ತಾಳೆಯ ಕೆಲಸದಂತೆ.
ಲಿಂಗಾನುಭಾವಿಗಳು ಕೇಳಿದರೆ ಛೀ ಇವನ ಮುಟ್ಟಲಾಗದೆಂಬರು,
ಓಡ ಹಿಡಿದಡೆ ಕೈ ಮಸಿಯಾದೂದೆಂದು.
ಸಿಂಹದ ನಡುವಿಂಗೆ ನಾಯ ನಡು ಸರಿಯೆಂಬ ಪಂಚಮಹಾಪಾತಕರ ನುಡಿಯ
ಕೇಳಲಾಗದು, ಕೂಡಲಚೆನ್ನಸಂಗಮದೇವಾ. ॥ ೧೬ ॥

೩೪೫

ವೃಕ್ಷಾಶ್ರಮ(ಯ?)ದಲ್ಲಿದ್ದು ಭಿಕ್ಷಾಪರಿಣಾಮಿಯಾಗಿದ್ದರೇನು?
ಸುತ್ತಳಿದು ಬತ್ತಲೆಯಿದ್ದರೇನು?
ಕಾಲರಹಿತನಾದಡೇನು? ಕರ್ಮರಹಿತನಾದಡೇನು?
ಕೂಡಲಚೆನ್ನಸಂಗನ ಅನುಭಾವವನರಿಯದವರು
ಪಸು ಕಾಲವಿದ್ದರೇನು? ವ್ಯರ್ಥಕಾಣಿರೋ! ॥ ೧೭ ॥

೩೪೭

ಕಾಯದ ಕಳವಳದಲ್ಲಿ ಹುಟ್ಟಿ, ಸಂಸಾರವನೆ ವೇಧಿಸಿ,
ವಿಷಯಂಗಳ ಕೊಂಡಾಡುವರಂತಿರಲಿ.
ಬ್ರಹ್ಮಜ್ಞಾನವನೆ ಪೂರಯಿಸಿ ಭಾವವಂತರೆನಿಸಿ,
ಲಿಂಗ ಮುಖವರಿಯದವರಂತಿರಲಿ.
ತನುವ ತೊರೆದು [ಮನೋಮಧ್ಯದೊಳಗೆ]
ಕಾಲವಂಚಕರಾದವರಂತಿರಲಿ,
ಕೂಡಲಚೆನ್ನಸಂಗಯ್ಯನ ನಿಲವನರಿಯದ
ಅಂಗರುಚಿಗಳವರಂತಿರಲಿ. ॥ ೧೮ ॥

೩೪೭

ಒಡಲಗುಣಧರ್ಮವನು ಬಿಡದೆ ನಡೆವನ್ನಕ್ಕ
ಎಡೆವರಿಯದ ಪೂಜೆಯನೆವರೆತ್ತ ಬಲ್ಲರು?
ಉದಯದಲಾದ ಪೂಜೆ, ಅಸ್ತಮಾನದಲೆಂಜಲೆಂಬರು,
ಇಂತೆಂಬ ಭಂಗಿಗಳ ಮುಖವ ನೋಡಲಾಗದು.
ಅಗ್ನಿಯೆಂಜಲನುಂಡು ಲಿಂಗದಲ್ಲಿ ಸಯವನರಸುವ
ಭಂಗಿತರನೇನೆಂಬೆ ಕೂಡಲಚೆನ್ನಸಂಗಮದೇವಾ. ॥ ೧೯ ॥

೩೪೮

ಶೀಲ ಶೀಲವೆಂದು ನುಡಿವ ಉದ್ದೇಶಪ್ರಾಣಿಗಳು ಎಲ್ಲರೂ ಅನಂತಶೀಲರು,
ಅರಿವಿನ ನಿರ್ಣಯವನರಿಯರು.
ಹೊರಗೆ ಬಳಸುವರು, ಒಳಗಣ ಶುದ್ಧಿಯನರಿಯರು.
ನೇಮಶೀಲವೆಂದು ಹಿಡಿವರು, ನಿರ್ಣಯವನರಿಯರಾಗಿ,
ಕೂಡಲಚೆನ್ನಸಂಗಯ್ಯನಲ್ಲಿ ಉದ್ದೇಶ ಪ್ರಾಣಿಗಳು. ॥ ೨೦ ॥

೩೪೯

ಜೈನನ ಮನದ ಕೊನೆಯ [ಮೊನೆಯ] ಮೇಲೆ
ಹೊಲೆಯಿಪ್ಪುದಲ್ಲದೆ ವ್ರತವಿಲ್ಲ.
ಸನ್ಯಾಸಿಯ ಮನದ ಕೊನೆಯ ಮೊನೆಯ ಮೇಲೆ
ಹೆಣ್ಣಿಪ್ಪುದಲ್ಲದೆ ಸನ್ಯಾಸವಿಲ್ಲ.
ತಪ್ಪಸ್ವಿಯ ಮನದ ಕೊನೆಯ ಮೊನೆಯ ಮೇಲೆ

ಸಂಸಾರವಿಪ್ಪುದಲ್ಲದೆ ತಪಸ್ಸಿಲ್ಲ.
ಶ್ರಾವಕನ ಮನದ ಕೊನೆಯ ಮೊನೆಯ ಮೇಲೆ
ಕೊಲೆಯಿಪ್ಪುದಲ್ಲದೆ ಜಿನನಿಲ್ಲ.
ಶೀಲವಂತನ ಮನದ ಕೊನೆಯ ಮೊನೆಯ ಮೇಲೆ
ಭವವಿಪ್ಪುದಲ್ಲದೆ ಲಿಂಗವಿಲ್ಲ.
ಇದು ಕಾರಣ, ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣರ ಮನದ ಕೊನೆಯ ಮೊನೆಯ ಮೇಲೆ
ಲಿಂಗವಿಪ್ಪುದು. ॥ ೨೧ ॥

೩೫೦

ಮಾತಿನ ಮಾತಿನ ಗೀತಾಂಗದಲ್ಲಿ ಸುಜಾಣನಾಗಲಹುದು.
ಶ್ರೋತ್ರಶೋಭೆ ಪ್ರಜ್ಞಾಪ್ರವೀಣತೆಯಲ್ಲಿ ಶಾಸ್ತ್ರಿಕನಾಗಲಹುದು.
ಅಂತರಂಗ ಬಹಿರಂಗವನಂತವ ಕಾಣಬಹುದು
ಅಂತರಾಗಮ, ಗಣಿತಗುಣಿತ ಶ್ರುತಿ ಸ್ಮೃತಿಗತರ್ಕ್ಯನಾಗಿರಬಹುದು.
ಭೂತ ವಿಕಾರದ ಪ್ರಕೃತಿಸ್ವಭಾವ ಭ್ರಾಂತಳಿದಿರಬಹುದು.
ಕಾಂತಾರತಿಗುಣವರ್ಜಿತ ಸನ್ಯಾಸಿ, ಕ್ಷೇತ್ರವಾಸಿಗಳಾಗಿರಬಹುದು.
ಎನ್ನೊಡೆಯ ಕೂಡಲಚೆನ್ನಸಂಗಮದೇವನ
ನಚ್ಚಿನ ಮಚ್ಚಿನ ಇಚ್ಛಾವಶ[ವರ್ತಿ]ಯಾಗಿರಬಾರದು
ಲಿಂಗಾನುಭಾವಿಗಲ್ಲದೆ. ॥ ೨೨ ॥

೩೫೧

ವಾಯುವಶದಿಂದ ತರುಗಳಲ್ಲಾಡುವವು,
ಭರತವಶದಿಂದ ಮೃದಂಗಾದಿಯಾದ ಪಟಹ ನುಡಿವವು,
ಕೂಡಲಚೆನ್ನಸಂಗಯ್ಯಾ, ಲಿಂಗವಶದಿಂದ ಶರಣ ಮಾತಾಡುವ. ॥ ೨೩ ॥

೩೫೨

ತನುವಿರಹಿತ ಪ್ರಾಣವಿಲ್ಲ, ಗುರುವಿರಹಿತ ಲಿಂಗವಿಲ್ಲ,
ಕಂಗಳಸಂಗ ವಿರಹಿತವಾಗಿ ನೋಡಲಿಲ್ಲ.
ಈ ಭೇದಸ್ಥಾನವನರಿಯಬೇಕು,
ಕೂಡಲಚೆನ್ನಸಂಗಯ್ಯನನರಿವಡೆ. ॥ ೨೪ ॥

೩೫೩

ಹದಿನಾಲ್ಕು ಭುವನದಲ್ಲಿ ಮನವೇದ್ಯವನಾರು ಬಲ್ಲರಯ್ಯಾ?
ದೂರದೂರವಾಗಿ ಮನ್ನಿಸುವರು,
ದೂರದೂರವಾಗಿ ಸಂಭಾಷಣೆಯ ಮಾಡುವರು.
ದೂರ ದೂರವೆನಲಿಲ್ಲ, ಕೂಡಲಚೆನ್ನಸಂಗಯ್ಯನ. ॥ ೨೫ ॥

೩೫೪

ಪರಿಯಾಣವೆ ಭಾಜನವೆಂಬರು, ಪರಿಯಾಣ ಭಾಜನವಲ್ಲ.
ಲಿಂಗಕ್ಕೆ ತನ್ನ ಮನವೆ ಭಾಜನ.
ಬೀಸರವೋಗದೆ ಮೀಸಲಾಗಿ ಅರ್ಪಿಸಬಲ್ಲರೆ ಕೂಡಿಕೊಂಡಿಪ್ಪ
ನಮ್ಮ ಕೂಡಲಚೆನ್ನಸಂಗಮದೇವ. ॥ ೨೬ ॥

೩೫೫

ಕಾಯ ಲಿಂಗವ ಮುಟ್ಟಿದರೆ, ಕಾಯ ಲಿಂಗಭಕ್ತನಾಗಿರಬೇಕು.
ನಯನ ಲಿಂಗವ ಮುಟ್ಟಿದರೆ, ನಯನ ಲಿಂಗಭಕ್ತನಾಗಿರಬೇಕು.
ಶ್ರೋತ್ರ ಲಿಂಗವ ಮುಟ್ಟಿದರೆ, ಶ್ರೋತ್ರ ಲಿಂಗಭಕ್ತನಾಗಿರಬೇಕು.
ಭಾವ ಲಿಂಗವ ಮುಟ್ಟಿದರೆ, ಭಾವ ಲಿಂಗಭಕ್ತನಾಗಿರಬೇಕು.
ಇದು ಕಾರಣ ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣ ಸರ್ವಜೀವದಯಾಪಾರಿಯಾಗಿರಬೇಕು. ॥ ೨೭ ॥

೩೫೬

ಮನದ ಮತ್ಸರವ ಕಳೆದು, ಮನದ ಮೇಲೆ ಲಿಂಗವ ಕುಳ್ಳಿರಿಸಬೇಕಯ್ಯಾ.
ಧನದ ಲೋಭವ ಕಳೆದು, ಧನದ ಮೇಲೆ ಜಂಗಮವ ಕುಳ್ಳಿರಿಸಬೇಕಯ್ಯಾ.
ಕಾಯಗುಣಂಗಳ ಕಳೆದು ಕಾಯ ಪ್ರಸಾದವ ಮಾಡಬೇಕಯ್ಯಾ.
ಈ ಎಲ್ಲಾ ಗುಣಂಗಳನತಿಗಳೆದು ತ್ರಿವಿಧದಲ್ಲಿ ದಾಸೋಹಿಯಾಗಿರಬೇಕು,
ಕೂಡಲಚೆನ್ನಸಂಗಯ್ಯಾ. ॥ ೨೮ ॥

೩೫೭

ಪ್ರಾಣದಿಂದ ಲಿಂಗ ಹಿಂಗಲಾಗದಯ್ಯಾ,
ಧನದಿಂದ ಜಂಗಮ ಹಿಂಗಲಾಗದಯ್ಯಾ,
ಕಾಯದಿಂದ ಪ್ರಸಾದ ಹಿಂಗಲಾಗದಯ್ಯಾ.

ಈ ತ್ರಿವಿಧವ ತ್ರಿವಿಧದಲ್ಲಿ ನೆಲೆಗೊಳಿಸದಿದ್ದರೆ ಭಕ್ತನಲ್ಲ, ಭವಿ-
ಕೂಡಲಚೆನ್ನಸಂಗಯ್ಯಾ. ॥ ೨೯ ॥

೩೫೮

ಭಕ್ತನ ಹಸ್ತಮುಟ್ಟಿ ಪಾವನವೆಂಬನ್ನಕ್ಕ ತಾನು ಭವಿಯೇ?
ಆತ[ನ] ಲಿಂಗದೇಹಿಯೆಂತೆಬೆ? ಲಿಂಗಾಚಾರಿಯೆಂತೆಂಬೆ?
ಪವಿತ್ರಕಾಯನೆಂತೆಂಬೆ?
ಇದು ಕಾರಣ ಕೂಡಲಚೆನ್ನಸಂಗಯ್ಯಾ
ಲಿಂಗಕ್ಷೇತ್ರ, ಜಂಗಮ ಬೀಜವೆಂಬುದನರಿಯರಾಗಿ. ॥ ೩೦ ॥

೩೫೯

ದೇಹದ ಬೆಂಬಳಿಯ ದೇಹಿಕನಾದಡೆ
ಸದಾಚಾರವಳವಡುವುದೆ?
ಜೀವದ ಬೆಂಬಳಿಯ ಜೀವಿತನಾದಡೆ
ಪ್ರಸಾದ ಸ್ಥಳವಳವಡುವುದೆ?
ಬೆಸನದ ಬೆಂಬಳಿಯ ವ್ಯಾಪಕನಾದಡೆ
ಜಂಗಮ ಪ್ರೇಮವಳವಡುವುದೆ?
ಕಾಲಕರ್ಮ ಪ್ರಳಯಜೀವಿಗಳು ತ್ರಿವಿಧ ಸಂಪನ್ನರಾಗಲರಿವರೆ?
ಅರಿವು ಮರಹು ಕುರುಹುಳ್ಳನ್ನಕ್ಕ
ಪ್ರಾಣಲಿಂಗ ಸಂಬಂಧಿಗಳಾಗಲರಿವರೆ?
ಇದು ಕಾರಣ, ಕೂಡಲಚೆನ್ನಸಂಗನಲ್ಲಿ
ಸರ್ವಾಚಾರಿಗಳಾಗಲರಿವರೆ? ॥ ೩೧ ॥

೩೬೦

ಮುಂದುಗಾಣದ ಮಾನವರು ಮತ್ತೊಂದನರಿಯದೆ ಕೆಟ್ಟರು.
ಲಿಂಗವ ಪೂಜಿಸಿ, ಪ್ರಸಾದವ ವೇಧಿಸಿ,
ಪ್ರಾಣಲಿಂಗ ಜಂಗಮವೆಂದರಿಯದೆ
ಕೆಟ್ಟು ಹೋದರಯ್ಯಾ, ಕೂಡಲಚೆನ್ನಸಂಗಮದೇವಾ. ॥ ೩೨ ॥

೩೬೧

ಭಕ್ತನೆನಿಸಿಕೊಂಡು ಜಂಗಮದೊಡನೆ ದುರುಳತನವ ನುಡಿದರೆ
ಅವ ಭಕ್ತನಲ್ಲ, ಲಿಂಗವಿರಳ ನೋಡಾ.

ಕಾಯದಲ್ಲಿ ವಿಶ್ವಾಸ, ಪ್ರಾಣದಲ್ಲಿ ಅವಿಶ್ವಾಸ
ಕಾಯಪ್ರಾಣದಂತೆ ಇದ್ದಿತ್ತು, ಜಂಗಮಲಿಂಗದ ನಿಲವು.
ಆತ್ಮಸ್ತುತಿ ಪರನಿಂದೆವುಳ್ಳನ್ನಕ್ಕ ಕೂಡಲಚೆನ್ನಸಂಗಮದೇವ
ಕುರುಡನ ಕೈಯ ದರ್ಪಣದಂತೆ. ॥ ೩೩ ॥

೩೬೨

ಗುರುಲಿಂಗ ಶಿವಲಿಂಗ ಜಂಗಮಲಿಂಗ–
ಈ ತ್ರಿವಿಧ ಒಂದೇ ಎಂದುದಾಗಿ ಒಂದರ ಕಡನವೊಂದು ತಿದ್ದುವವು.
ಗುರು ನಷ್ಟವಾದರೆ ಜಂಗಮ ಗುರುವಲ್ಲದೆ ಭಕ್ತ ಗುರುವಾಗಲಾಗದು.
ಪಶು ಪಶುವಿಂಗೆ ಗರ್ಭವಹುದೆ ಬಸವಂಗಲ್ಲದೆ?
ಭಕ್ತ ಗುರುವಾದರೆ ಅವನನಾಚಾರಿ, ವ್ರತಗೇಡಿ, ಅವನುನ್ಮತ್ತನು.
ಗುರುಶಿಷ್ಯರಿಬ್ಬರು ಕೆಟ್ಟಕೇಡಿಂಗೆ ಕಡೆಯಿಲ್ಲ
ಕೂಡಲಚೆನ್ನಸಂಗಮದೇವಾ. ॥ ೩೪ ॥

೩೬೩

ಕಾಯವೂ ಜೀವವೂ, ಜೀವವೂ ಕಾಯವೂ ಎಂತು ಬೆರಸಿಪ್ಪುದಂತೆ
ಲಿಂಗದೊಳಗೆ ಜಂಗಮ, ಜಂಗಮದೊಳಗೆ ಲಿಂಗ ಬೆರಸಿಪ್ಪುದು, ಭಿನ್ನಭಾವವಿಲ್ಲದೆ,
ನ ಶಿವೇನ ವಿನಾ ಶಕ್ತಿರ್ನ ಶಕ್ತಿರಹಿತಃ ಶಿವಃ।
ಪುಷ್ಪಗಂಧಾವಿವಾನ್ಯೋನ್ಯಂ ಮಾರುತಾಂಬರಯೋರಿವ॥
ಎಂದುದಾಗಿ–ಭಾವ ಭೇದವಿಲ್ಲ,
ಜಂಗಮವೆ ಲಿಂಗ ಕೂಡಲಚೆನ್ನಸಂಗ. ॥ ೩೫ ॥

೩೬೪

ಗುರುಪ್ರಾಣ ಗುರುಪ್ರಾಣವೆಂಬರು,
ಗುರು[ವ] ತನ್ನಲ್ಲಿ ಸಯವ ಮಾಡಲರಿಯದ ಗುರುಭ್ರಷ್ಟರ ನೋಡಾ.
ಲಿಂಗಪ್ರಾಣ ಲಿಂಗಪ್ರಾಣವೆಂಬರು
ಲಿಂಗವ ತನ್ನಲ್ಲಿ ಸಯವ ಮಾಡಲರಿಯದ ಲಿಂಗಭ್ರಷ್ಟರ ನೋಡಾ,
ಮಂತ್ರಪ್ರಾಣ ಮಂತ್ರಪ್ರಾಣವೆಂಬರು,
ಮಂತ್ರವ ತನ್ನಲ್ಲಿ ಸಯವ ಮಾಡಲರಿಯದ ಮಂತ್ರಭ್ರಷ್ಟರ ನೋಡಾ.
ಈ ತ್ರಿವಿಧ ಸಂಬಂಧವನೊಂದೆಂದರಿಯದೆ
ಪ್ರಾಣಲಿಂಗಸಂಬಂಧಿಗಳೆಂಬವರನೇನೆಂಬೆ
ಕೂಡಲಚೆನ್ನಸಂಗಮದೇವಾ? ॥ ೩೬ ॥

೩೬೫

ವೇದಶಾಸ್ತ್ರ ಪುರಾಣಾಗಮಾದಿಯಾದ ಲಿಂಗವಲ್ಲದಿಲ್ಲೆಂದು
ಲಿಂಗಾರ್ಚನೆಯ ಮಾಡುವ ಮಹಾಮಹಿಮರು ನೀವು ಕೇಳಿರೇ.
ಅಂಗ ಲಿಂಗವೊ, ಆಚಾರ ಲಿಂಗವೊ, ಅನುಭಾವ ಲಿಂಗವೊ?
ಗುರು ಲಿಂಗವೊ, ಜಂಗಮ ಲಿಂಗವೊ?
ಪ್ರಸಾದ ಲಿಂಗವೊ, ಪ್ರಾಣ ಲಿಂಗವೊ, ಭಾವಲಿಂಗವೊ?
ಪ್ರಾಣಲಿಂಗಸ್ಯ ಸಂಬಂಧೀ ಪ್ರಾಣಲಿಂಗೀ ಪ್ರಕೀರ್ತಿತಃ।
ಪ್ರಸನ್ನಲಿಂಗಯುಕ್ತಾತ್ಮಾ ಮಮರೂಪೋ ಮಹೇಶ್ವರೀ॥
ಇದು ಕಾರಣ, ಕೂಡಲಚೆನ್ನಸಂಗಮದೇವಾ
ಲಿಂಗನಾಮನಿರ್ಣಯವಪೂರ್ವ. ॥ ೩೭ ॥

೩೬೬

ಸತಿಯ ಕೈಯಲ್ಲಿ ಕೊಟ್ಟುದು ಪ್ರಾಣಲಿಂಗವಲ್ಲ,
ಸುತನ ಕೈಯಲ್ಲಿ ಕೊಟ್ಟುದು ಪ್ರಾಣಲಿಂಗವಲ್ಲ,
ಅಲಸಿ ನಾಗವತ್ತಿಗೆಯಲಿರಿಸಿದುದು ಪ್ರಾಣಲಿಂಗವಲ್ಲ,
ತನುವ ಸೋಂಕಿ ವಜ್ರಲೇಪದಂತಿರಬೇಕು.
ಮನ ಕರದಲ್ಲಿ ಕೊಟ್ಟ ಪ್ರಾಣಲಿಂಗ ಹಿಂಗಿದರೆ
ಅವನಂದೇ ವ್ರತಗೇಡಿ, ಕೂಡಲಚೆನ್ನಸಂಗಮದೇವಾ. ॥ ೩೮ ॥

೩೬೭

ಉರಸ್ಥಲದಲ್ಲಿ ಲಿಂಗವ ಧರಿಸಿದ ಬಳಿಕ
ಮನದ ಕೊನೆಯಿಂದ ಲಿಂಗವನಗಲದಿರಬೇಕು.
ಉರ ಗುರುಸ್ಥಲ, ಉರ ಲಿಂಗಸ್ಥಲ, ಉರ ಜಂಗಮಸ್ಥಲ, ಉರ ಪ್ರಸಾದಸ್ಥಲ,
ಉರ ಮಹಾಸ್ಥಲ, ಉರ ಮಹಾಮಹಿಮರಿಪ್ಪ ಅನುಭಾವಸ್ಥಲವೆಂದರಿದು
ಅನ್ಯಮಿಶ್ರಂಗಳ ಪೊದ್ದಲಾಗದು.
ತಟ್ಟು ಮುಟ್ಟು ತಾಗು ನಿರೋಧಗಳಿಗೆ ಗುರಿಯಾಗಲಾಗದು.
ಇಂದ್ರಿಯಂಗಳ ಕೂಡ ಮನಸ್ಥಾಪ್ಯಗೊಳದಿದ್ದರೆ,
ಇದು ಉರಲಿಂಗ ಸ್ವಾಯತ.
ಪ್ರಾಣಲಿಂಗಪ್ರಾಣಿಗಿದು ಚಿಹ್ನೆ, ಕೂಡಲಚೆನ್ನಸಂಗಮದೇವಾ. ॥ ೩೯ ॥

೩೬೮

ಕರಸ್ಥಲದಲ್ಲಿ ಲಿಂಗಸ್ಥಾಪನವಾದ ಬಳಿಕ,
ಲಿಂಗದಲ್ಲಿ ಅನಿಮಿಷ ದೃಷ್ಟಿಯಾಗಬೇಕು.
ತನ್ನ ತಾನೆ ಅನಿಮಿಷವಾಗಬೇಕು.
ಲಿಂಗದಲ್ಲಿ ಅನಿಮಿಷವಾಗಬೇಕು.
ಜಂಗಮದ ನಿಲುಕಡೆಯನರಿಯಬೇಕು.
ಪ್ರಸಾದದಲ್ಲಿ ಪರಿಪೂರ್ಣನಾಗಬೇಕು.
ಹಿರಣ್ಯಕ್ಕೆ ಕೈಯಾನದಿರಬೇಕು
ತನ್ನ ನಿಲುಕಡೆಯ ತಾನರಿಯಬೇಕು.
ಇದು ಕಾರಣ, ಕೂಡಲಚನ್ನಸಂಗನಲ್ಲಿ
ಕರಸ್ಥಲದ ನಿಜವನರಿವರೆ ಇದು ಕ್ರಮ. || ೪೦ ||

೩೬೯

ಅಂಗಸೋಂಕಿನಲ್ಲಿ ಲಿಂಗಸಂಗವಾದ ಬಳಿಕ
ಸರ್ವಾಂಗ ವಿಕಾರವಳಿಯಬೇಕು.
ಅಂಗಸೋಂಕಿನ ಲಿಂಗಕ್ಕೆ ಸೆಜ್ಜೆ ಶಿವಧಾರವಾ[ವುದೆಂದರೆ]:
ಜಂಗಮವೆ ಲಿಂಗದ ಸೆಜ್ಜೆ, ಆಚಾರವೆ ಶಿವದಾರ.
ತ್ರಿಕರಣ ಶುದ್ಧವಾಗಬೇಕು, ತ್ರಿವಿಧಗುಣಂಗಳಳಿಯಬೇಕು,
ತ್ರಿವಿಧ ಸಂಪನ್ನನಾಗಬೇಕು, ತ್ರಿಕಾಲ ಶಿವಲಿಂಗಾರ್ಚನೆಯ ಮಾಡಬೇಕು,
ಅಂಗಲಿಂಗ ಸಂಬಂಧಕ್ಕೆ ಇದು ಕ್ರಮ.
ಕೂಡಲಚೆನ್ನಸಂಗಮದೇವಾ. || ೪೧ ||

೩೭೦

ಕಕ್ಷೆಯಲ್ಲಿ ಲಿಂಗವ ಧರಿಸಿಕೊಂಡ ಬಳಿಕ
ಅನ್ಯಕಾಂಕ್ಷೆಯಿಲ್ಲದಿರಬೇಕು.
ಮಾಯದ ಉಸಿರು ಎಡೆಯಾಡದಿರಬೇಕು,
ಸಂಸಾರ ಸಂಗವ ಹೊದ್ದದೆ
ಮನವು ಮಹಾಸ್ಥಲವನಿಂಬುಗೊಂಡಿರಬೇಕು,
ಕೂಡಲಚೆನ್ನಸಂಗನಲ್ಲಿ ಏಕಾರ್ಥವಾಗಿರಬೇಕು. || ೪೨ ||

೩೭೧

ಗುರುಕಾರುಣ್ಯದ ಮಹಾಸಂಪಾದನೆಯಲ್ಲಿ
ಅತ್ಯಂತ ವಿಶೇಷ ಸ್ಥಳವೆ ಗಳವು.
ಮಹಾಲಿಂಗ ಸಂಪಾದನೆಯಲ್ಲಿ, ತ್ರಿವಿಧ ಸಂಪಾದನೆಯಲ್ಲಿ,
ಶರೀರಾರ್ಥ ಮಹಾರ್ಥದಲ್ಲಿ, ನಾದಬಿಂದು ಸಂಪಾದನೆಯಲ್ಲಿ,
ಮಾರ್ಗಕ್ರಿಯಾ ಸಂಪಾದನೆಯಲ್ಲಿ, ಭಕ್ತಿ ಸಂಪಾದನೆಯಲ್ಲಿ,
ಭಾವ ನಿಷ್ಠೆಯಲ್ಲಿ, ಅರ್ಪಿತ ನಿಷ್ಠೆಯಲ್ಲಿ ಆ ಗಳವೆ ಘನಸ್ಥಳ.
ಅತ್ಯಂತ ವಿಶೇಷಸ್ಥಳವಾಗಿ
ಗಳದಲ್ಲಿ ಧರಿಸಿರೆ ಕೂಡಲಚೆನ್ನಸಂಗಯ್ಯನ. || ೪೩ ||

೩೭೨

ಅಮಳೋಕ್ಯದಲ್ಲಿ ಲಿಂಗವ ಧರಿಸುವರೆ
ಅನ್ನ ಪಾನಾದಿಗಳ ಹಂಗಳಿಯಬೇಕು,
ಅಹಂಕಾರ ಮದಂಗಳಳಿಯಬೇಕು, ಜ್ಞಾನ ವಿಸ್ತಾರ ಪರಿಪೂರ್ಣನಾಗಿರಬೇಕು,
ಅನುಭಾವ ಘನಮನವೇದ್ಯನಾಗಬೇಕು, ಕಾಮದ ಕಣ್ಣರಿಯದಿರಬೇಕು,
ಶಬ್ದ ನಿಶ್ಯಬ್ದವಾಗಬೇಕು, ಮಹದಾಶ್ರಯದಲ್ಲಿ ಮನವು ಲೀಯವಾಗಬೇಕು.
ಕೂಡಲಚೆನ್ನಸಂಗನಲ್ಲಿ ಏಕಾರ್ಥವಾಗಿರಬೇಕು. || ೪೪ ||

೩೭೩

ಉತ್ತಮಾಂಗದಲ್ಲಿ ಲಿಂಗವ ಧರಿಸಿದ ಬಳಿಕ
ಧರೆಗೊರಗಲಾಗದು, ಮಾನವರ ಬೇಡಲಾಗದು,
ಹಸಿವು ತೃಷೆ ವ್ಯಸನಂಗಳು ಲಿಂಗದಲ್ಲಿ ನಿಕ್ಷೇಪವಾಗಬೇಕು.
ಜಾಗ್ರ ಸ್ವಪ್ನ ಸುಷುಪ್ತಿಯಲ್ಲಿ ಲಿಂಗದ ನಿಲುಕಡೆಯನರಿದು
ತೆರಹಿಲ್ಲದಿರಬೇಕು, ಕೂಡಲಚೆನ್ನಸಂಗಮದೇವಾ. || ೪೫ ||

## ಪ್ರಾಣಲಿಂಗಿಯ ಪ್ರಾಣಲಿಂಗಿಸ್ಥಲ

೩೭೪

ಪ್ರಾಣಲಿಂಗಸಂಬಂಧಿಯಾದ ಬಳಿಕ ತನುಗುಣವಿರಲಾಗದಯ್ಯಾ.
ಕೈ ಸಿಂಹಾಸನವಾದ ಬಳಿಕ ಸಂದಾಗಿರಲಾಗದಯ್ಯಾ.
ಕೂಡಲಚೆನ್ನಸಂಗಯ್ಯಾ, ಈಉಸುವಸಲ್ಲಿಮ ತೋರಿದ. || ೪೬ ||

೩೭೫

ಪೂರ್ವಬೀಜನಲ್ಲ, ಪೂರ್ವಪ್ರಾಣಿಯಲ್ಲ, ಪೂರ್ವಾಹಾರಿಯಲ್ಲ.
ಪೂರ್ವಾದಿಗಳೆಲ್ಲವನುತ್ತರಿಸಿ ಕಳೆದು ಲಿಂಗಗರ್ಭಿತನಾದ,
ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೪೭ ॥

೩೭೬

ಅಂಗವಾಚಾರದಲ್ಲಿ ಸಂಗವಾಯಿತ್ತು, (ಆಚಾರ ಪ್ರಾಣದಲ್ಲಿ ಸಂಗವಾಯಿತ್ತು)
ಪ್ರಾಣ ಲಿಂಗದಲ್ಲಿ ಸಂಗವಾಯಿತ್ತು, ಪ್ರಾಣಕ್ಕೆ ಪ್ರಾಣವಾಗಿ ಉಭಯ ಪ್ರಾಣ
ಕೂಡಲಚೆನ್ನಸಂಗಮದೇವ. ॥ ೪೮ ॥

೩೭೭

(ಧ)ರ್ಮವೆ ಸಯವಾಗಿ, ಆಚಾರದ ನಿಲವನರಿದು,
ಹೃದಯದ ಕತ್ತಲೆಯ ಉದಯದಲೆ ಕಳೆದು,
ಮುಟ್ಟುವುದ ಮುಟ್ಟದೆ ಕಳೆದು, ಮುಟ್ಟದುದ ಮುನ್ನವೆ ಕಳೆದು,
ಅಯ್ಯಾ ಆಯ್ಯಾಯೆಂಬಲ್ಲಿಯೆ ಕಲಿಯಾದ.
ಕೇಸರಿಸಮ ಜೋಗಯ್ಯದ್ದರ ಮದಸೇನೆದವಳ ಮುರಿಯಿತ್ತು,
ಎನ್ನೊಡೆಯ ಕೂಡಲಚೆನ್ನಸಂಗಯ್ಯ ಹಿಡಿವಡೆದ. ॥ ೪೯ ॥

೩೭೮

ಕಾಯಾನುಭಾವಿಗಳು ಕಾಯದಲೆ ಮುಕ್ತರು.
ಜೀವಾನುಭಾವಿಗಳು ಜೀವದಲೆ ಮುಕ್ತರು.
ಪ್ರಾಣಾನುಭಾವಿಗಳು ಪ್ರಾಣದಲೆ ಮುಕ್ತರು.
ಪವನಾನುಭಾವಿಗಳು ಪವನದಲೆ ಮುಕ್ತರು.
ಇವರನೆಂತು ಸರಿಯೆಂಬೆ, ಲಿಂಗಾನುಭಾವಿಗಳಿಗೆ?
ಸ್ವಯಂಪ್ರಕಾಶಲಿಂಗದಲ್ಲಿ ಸದಾಸನ್ನಿಹಿತ.
ಕೂಡಲಚೆನ್ನಸಂಗಯ್ಯಾ, ನಿಮ್ಮ ಶರಣ. ॥ ೫೦ ॥

೩೭೯

ಸ್ತ್ರೀಲಿಂಗ ಪುಲ್ಲಿಂಗ ನಪುಂಸಕಲಿಂಗವೆಂದೆಂಬರು,
ಆದಿ ಅನಾದಿ ಸಂದಣಿ ಸಯವಾಯಿತ್ತು.

ಪ್ರಣಮಪ್ರಜ್ವಲಿತ ಕುಳವಳಿಯದ ಪ್ರಣಮಲಿಂಗ
ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ. || ೫೧ ||

೩೮೦

[ಉರುಗಿಪೋದ] ಕೊಡನನುಳುಕದೆ [ಮರುಗದೆ ಹಿಡಿವ]ನೇಹವ ನೋಡಿರೆ!
ಹರಿವ ಕರಿಗಳ ಅರಿವಿ [ನೆಡೆಗೆ] ನೋಡಿರೆ!
ಸರ ಹರಿದ ಮಣಿಗಳೊಂದೇ ಹರಳಾದುದ ನೋಡಿರೆ!
ಬೆರಸಿ ಬೇರಿಹ ಕೂಡಲಚೆನ್ನಸಂಗ[ನ]ನೆರಡಿಲ್ಲದೆ ನೋಡಿರೆ. || ೫೨ ||

೩೮೧

ಕಳೆಯೇರಿದ ಲಿಂಗದ ತೆರನನರಿದ,
[ಕಳೆ]ಕಳೆಯದ ವಳಯದ ಸೀಮೆಯಿಂದತ್ತತ್ತಲು ವೇಧಿಸಿದ ಮುಗ್ಧೆಯ ನೋಡಾ.
ಪಂಚಭೂತದ ಗಡಣೆಯ ಭಾವವ ನೇಮದಲ್ಲಿ ಭಾವಿಸಿದ ಮುಗ್ಧೆಯ ನೋಡಾ.
ಇರುಳು ಹಗಲೆಂಬ ಬೆಳಗು ಕತ್ತಲೆಯನರಿಯದ ಮುಗ್ಧೆಯ ನೋಡಾ.
ಆಕಾರ ನಿರಾಕಾರ ಸಿಂಗಾರದ ಪುಣ್ಯ ಪಾಪದ, ಅರಿವಿನ ಮರಹಿನ,
ಅಷ್ಟದಳಕಮಲದ ಮಧುಪಾನವಾಗದೆ,
ಕೂಡಲಚೆನ್ನಸಂಗಯ್ಯನೆಂಬ ಮಹಾಲಿಂಗವನು
ಮನದಲ್ಲಿ ಅಳವಡಿಸಿದ ಮುಗ್ಧೆಯ ನೋಡಾ. || ೫೩ ||

೩೮೨

ಉತ್ತರ ದಕ್ಷಿಣ ಪೂರ್ವ ಪಶ್ಚಿಮದ ಬಂದ ಬಟ್ಟೆಯನಾಲಿಸದೆ
ವಾಯು ಬಂಧನಮಂ ಕಟ್ಟಿ(ಮಾಡಿ?)
ಪಶ್ಚಿಮದ್ವಾರದಲ್ಲಿ ಪ್ರಾಣನಿವಾಸಿಯಾಗಿದ್ದನಾ ಶರಣ.
ಅಧೋನಾಳದಲ್ಲಿ ನಿರುತ, ಮಧ್ಯನಾಳದಲ್ಲಿ ನಿರಾಳ,
ಊರ್ಧ್ವನಾಳದಲ್ಲಿ ಸುರಾಳ.
ವ್ಯೋಮಕುಸುಮದ ಕೊನೆಯ ಶೈತ್ಯೋದಕವ ಧರಿಸಿದ ಘಟಕ್ಕೆ ಕೇಡಿಲ್ಲಾಗಿ,
ಲಿಂಗಕ್ಕೆ ಪ್ರಾಣಕ್ಕೆ ಒಂದೆಂಬ ಕಾರಣ ಅಚಳವೆನಿಸಿತ್ತು.
ಇದು ಕಾರಣ ಕೂಡಲಚೆನ್ನಸಂಗಮದೇವಾ
ಎನ್ನ ಪ್ರಾಣಕ್ಕೆ ಭವವಿಲ್ಲ, ಬಂಧನವಿಲ್ಲ. || ೫೪ ||

೩೮೩

ಉತ್ತಮಾಂಗ, ಗಳ, ಕಕ್ಷೆ, ಕರಸ್ಥಳ, ಮುಖಸಜ್ಜೆ, ಅಮಳೋಕ್ಯ,
ಅಕಟಕಟಾ! ಭಿನ್ನವಾರ್ತೆಯ ಕೇಳಲಾಗದು.
ಕೂಡಲಚೆನ್ನಸಂಗಯ್ಯಾ, ಸರ್ವಾಂಗ ಲಿಂಗವಲ್ಲದೆ ಕೇಳಲಾಗದು. || ೫೫ ||

೩೮೪

ಶಬ್ದವೂ ಅ(ಪ)ಶಬ್ದವೂ ಶಬ್ದದಲ್ಲಿಯೆ ಕಾಣಬಹುದು, ಕಾಣಿರೋ!
ಇದ್ದವರು ಇದ್ದ ಸ್ಥಳವನೆ ನುಡಿವರು, ಅದಕದು ಸಹಜ.
ಲಿಂಗದ ನಡೆ, ಲಿಂಗದ ನುಡಿ, ಲಿಂಗದ ನೋಟ,
ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ. || ೫೬ ||

## ಪ್ರಾಣಲಿಂಗಿಯ ಭಕ್ತಸ್ಥಲ

೩೮೫

[ಪೃಥ್ವಿ ಸಲಿಲ ಪಾವಕ ಪವನ ಅಂಬರ] ರವಿ ಶಶಿ ಆತ್ಮವೆಂಬ
ಅಷ್ಟತನುವಿನ ಭೇದವ ಭೇದಿಸಿ
ಶ್ರೋತ್ರ ನೇತ್ರ ತ್ವಕ್ಕು ಘ್ರಾಣ ಜಿಹ್ವೆ [ಎಂಬೀ] ಪಂಚೇಂದ್ರಿಯವನರಿದು,
ವಾಕು ಪಾಣಿ ಪಾದ ಪಾಯು ಗುಹ್ಯವೆಂಬ ಕರ್ಮೇಂದ್ರಿಯಂ[ಗಳ] ತೊರೆದು,
ಪ್ರಾಣಾಪಾನ ವ್ಯಾನೋದಾನ ಸಮಾನ ನಾಗ ಕೂರ್ಮ ಕೃಕರ ದೇವದತ್ತ
ಧನಂಜಯವೆಂಬ ದಶವಾಯುಗಳ ಸಂಚವನರಿದು,
ಮನಬುದ್ಧಿ ಚಿತ್ತಹಂಕಾರವೆಂಬ ಚತುರ್ವಿಧ ಕರಣಂಗಳನೊಂದು ಮಾಡಿ,
ಉತ್ಪತ್ತಿ ಸ್ಥಿತಿ ಲಯವೆಂಬ ಕಾಲಮೂಲಾದಿಗಳಂ ಸುಟ್ಟು,
ಜ್ಞಾನವನೆ ಬೆಳಗಿ, ಧ್ಯಾನವನೆ ನಿಲಿಸಿ,
ಸುಚಿತ್ತದಲ್ಲಿ ಲಿಂಗಾರ್ಚನೆಯ ಮಾಡುವ ಶರಣ.
ವ್ಯಾಪಾರಂ ಸಕಲಂ ತ್ಯಕ್ತ್ವಾ ರುದ್ರೋರುದ್ರಂ ಸಮರ್ಚಯೇತ್।
ಎಂಬ ಶ್ರುತಿಯು ನಿಮ್ಮ ಶರಣರಲ್ಲಿ ಕಾಣಬಹುದು
ಕೂಡಲಚೆನ್ನಸಂಗಮದೇವಾ. || ೫೭ ||

೩೮೬

ಎನ್ನ ತನುವೆ ಅಗ್ಘವಣಿಯ ಬಿಂದಿಗೆ, ಮನವು ಸಿಂಹಾಸನ,
ಹೃದಯಕಮಲ ಪುಷ್ಪ, ಎನ್ನ ಕಿವಿಗಳೇ ಕೀರ್ತಿಮುಖ,
ನೆನೆವ ನಾಲಗೆ ಘಂಟೆ, ಶಿರವೆ ಸುವರ್ಣದ ಕಳಸ,
ಎನ್ನ ನಯನ ಸ್ವಯಂಜ್ಯೋತಿ ಆರತಿಯನೆತ್ತುವೆ.
ಎನ್ನ ಚಂದ್ರಶೇಖರಲಿಂಗಕ್ಕೆ ಮಾಡಿದೆನೆನ್ನ ಪ್ರಾಣಪೂಜೆಯ.
ಎನ್ನ ಕಾಯಭಾಜನವನೀಪರಿಯ ಮಾಡಿದೆನಾಗಿ
ಕೂಡಲಚೆನ್ನಸಂಗನ ಪೂಜಿಸಿದಲ್ಲದೆ ನಿಲಲಾರೆ. || ೫೮ ||

೩೮೭

ನೂರನಾಲ್ವತ್ತೆಂಟು ದೇಹ ವಿಕಾರಕ್ಕೆ ಮನವೆ ತೇಜಿ,
ಕರಣಂಗಳೇಳು ಮಾನಿಸ ಸೇನಬೋವರು, ಅಷ್ಟಮದವೆಂಟಾನೆ,
ಮೊದ[ಲ] ನಾಯಕರಿಪ್ಪತ್ತೈವರು.
ಕಾಯಪುರವೆಂಬ ಪಟ್ಟಣದೊಳಗೆ ಅನಾಮಿಕನೆಂಬ ಹೆಸರಿನ
ಲಿಂಗವ ಪೂಜಿಸುವಾತ ಅಜಾತನೆಂಬ ಶರಣ.
ಆ ಶರಣನ ಮರ್ತ್ಯನೆಂದರೆ ನಾಯಕನರಕ ತಪ್ಪದು
ಕೂಡಲಚೆನ್ನಸಂಗಮದೇವಾ. || ೫೯ ||

೩೮೮

ಗುರುದ್ರವ್ಯವ ಗುರುವಿಂಗೊಪ್ಪಿಸಿಹೆವೆಂದೆಂಬರು.
ಗುರುದ್ರವ್ಯವಾವುದೆಂದರಿಯರು.
ದೇಹಿಕದ್ರವ್ಯ, ಮನದ್ರವ್ಯ, ಭೌತಿಕದ್ರವ್ಯ, ಆತ್ಮದ್ರವ್ಯ
ಜ್ಞಾನದ್ರವ್ಯವೆಂಬ ಪಂಚದ್ರವ್ಯವನು
ಉಭಯವಳಿದು ಷೋಡಶೋಪಚರ್ಯದಲ್ಲಿ ಉಪಚರಿಸಬಲ್ಲರೆ
ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣ ಪೂಜಕನಾದ. || ೬೦ ||

೩೮೯

ತನು ಭಕ್ತ, ಮನ ದಾಸೋಹಿ, ಇಂದ್ರಿಯಂಗಳು ಪ್ರಸಾದಿಗಳು,
ಸಜ್ಜನ ಶರಣರ ಪ್ರಾಣವೆ ಲಿಂಗ, ಇದು ಕಾರಣ,
ಕೂಡಲಚೆನ್ನಸಂಗಮದೇವಾ ಹೊರಗೇನೂ ಅರಸಲಿಲ್ಲ. || ೬೧ ||

೬೯೦

ಪಾತಕೇ ಸಮನು ಪ್ರಾಪ್ತೇ ಶಿವಲಿಂಗಂ ಪ್ರಪೂಜಯೇತ್।
ಅಥವಾ ಪೂರ್ವಕರ್ಮಾಣಾಂ ತತ್ಪೂಜಾ ನಿಷ್ಫಲಂ ಭವೇತ್॥
ಎಂಬುದನರಿದು, ಸ್ನಾನ ಧ್ಯಾನ ಜಪ ಹೋಮಾದಿ
ಕ್ರೀಗಳು ನಿಮ್ಮ ಶರಣಂಗಿಲ್ಲ, ಅನ್ಯವನರಿಯನಾಗಿ.
ಅನ್ನಕಾರ್ಯ ಅನರ್ಪಿತ ನಿಮ್ಮ ಶರಣಂಗಿಲ್ಲ, ಲಿಂಗವನಗಲಿ ಇರನಾಗಿ.
ಆಗಮೋಕ್ತವಹ ಅರ್ಚನೆ ಪೂಜನೆ ಆಹ್ವಾನ ವಿಸರ್ಜನೆ ಷೋಡಶೋಪಚಾರ
ನ್ಯಾಸಮುದ್ರೆಗಳು ಇವು ನಿಮ್ಮ ಶರಣಂಗಿಲ್ಲ, ಪೂಜೆಗವಸಾನವಿಲ್ಲಾಗಿ.
ಇಂತಪ್ಪ ಭಕ್ತಿಯ ಪಥದ [ನಿ]ಲವನರಿದ ಕಾರಣ
ಭವವಿಲ್ಲ ಬಂಧನವಿಲ್ಲ ಮೋಕ್ಷವಿಲ್ಲ,
ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣನು ದಾಸೋಹಿಯಾದ ಕಾರಣ ಸರ್ವಾಂಗಲಿಂಗಿ. ॥ ೬೨ ॥

೬೯೧

ಅಂಗದ ಮೇಲೆ ಲಿಂಗಸಾಹಿತ್ಯವಾಗದಿದ್ದರೇನು,
ಕಾಯುವೇನು ಬರಿ ಕಾಯುವೆ?
ಪ್ರಾಣದ ಮೇಲೆ ಲಿಂಗಸಾಹಿತ್ಯವಾಗದಿದ್ದರೇನು?
ಪ್ರಾಣವೇನು ವಾಯುಪ್ರಾಣವೆ? ಅಹಂಗಲ್ಲ, ನಿಲ್ಲು.
ಗೌರವಂ ಕಾಯಸಂಬಂಧಂ ಪ್ರಾಣಸ್ತು ಪ್ರಾಣಸಂಯುತಃ।
ಕಾರಣಂ ಭಾವಸಂಬಂಧಂ ಗುರೋಃ ಶಿಷ್ಯಮನುಗ್ರಹಂ॥
ಎಂದುದಾಗಿ ಹರರೂಪವಾಗಿದ್ದುದೆ ಪ್ರಾಣಲಿಂಗ,
ಗುರುರೂಪಾಗಿದ್ದುದೆ ಜಂಗಮಲಿಂಗ.
ಹರರೂಪಾಗಿರ್ದ ಪ್ರಾಣಲಿಂಗವಾವ ಕೈಯಲುಂಬುದೆಂದರೆ,
ಭಕ್ತನ ಜಿಹ್ವಾಗ್ರದಲುಂಬುದು.
ಗುರುರೂಪಾಗಿರ್ದ ಜಂಗಮಲಿಂಗವಾವ ಕೈಯಲುಂಬುದೆಂದರೆ
ಜಂಗಮ ಜಿಹ್ವಾಗ್ರದಲುಂಬುದು.
ಇದು ಕಾರಣ ಹರರೂಪಾಗಿದ್ದುದೆ ಪ್ರಾಣಲಿಂಗ
ಗುರುರೂಪಾಗಿದ್ದುದೆ ಜಂಗಮಲಿಂಗ.
ಸ್ಥಾವರು ಜಂಗಮಶ್ಚೈವ ದ್ವಿವಿಧಂ ಲಿಂಗಮುಚ್ಯತೇ।
ಜಂಗಮ ಸ್ಯಾವಮಾನೇನ ಸ್ಥಾವರು ನಿಷ್ಫಲಂ ಭವೇತ್।
ಎಂಬ ವಚನವನರಿದು ಸ್ಥಾವರವನು ಜಂಗಮವನು ಒಂದೆಂದರಿದೆನಯ್ಯಾ.
ಕೂಡಲಚೆನ್ನಸಂಗಮದೇವಾ. ॥ ೬೩ ॥

೩೯೨

ಹರಿವ ಹಾವಿಂಗೆ ಹಾಲನೆರೆವ ಪ್ರಾಣಿಗಳು
ಹಾವಿನ ಅಂತರಂಗವನೆತ್ತ ಬಲ್ಲರು ಹೇಳಾ?
ಕೈಲೆಡೆಗೊಟ್ಟ ಲಿಂಗಕ್ಕೆ ಮಜ್ಜನಕ್ಕೆರೆವ ಪ್ರಾಣಿಗಳು
ಪ್ರಾಣಲಿಂಗಸಂಬಂಧದ ಸಕೀಲವನೆತ್ತ ಬಲ್ಲರು ಹೇಳಾ?
ಪಾಣಿನಾ ಧೃತಲಿಂಗಂ ತತ್ ಪ್ರಾಣಸ್ಥಾನೇ ವಿನಿಕ್ಷಿಪೇತ್।
ಯಸ್ತು ಭೇದೇ ನ ಜಾನಾತಿ ನ ಲಿಂಗಂ ತಸ್ಯ ನಾರ್ಚನಂ॥
ಲಿಂಗ ಜಂಗಮ ಒಂದೆಂದರಿಯದವರ ಮಾಟ
[ಅವರ] ವಿಧಿಯಂತೆ ಕೂಡಲಚೆನ್ನಸಂಗಮದೇವಾ. ॥ ೬೪ ॥

೩೯೩

ಕ್ರೀಯಿಂದಾದುದು ಲಿಂಗವೆಂದೆಂಬರು,
ಕ್ರೀಯಿಂದಾದುದು ಜಂಗಮವೆಂದೆಂಬರು.
ಕ್ರೀಯಿಂದಾದು ಲಿಂಗವಲ್ಲ, ಜಂಗಮವಲ್ಲ,
ಜಂಗಮವುಂಟು ಜಂಗಮವಲ್ಲ.
ಜಂಗಮ ಸುನಾದರೂಪು, ಕೂಡಲಚೆನ್ನಸಂಗಮದೇವಾ. ॥ ೬೫ ॥

೩೯೪

ಸ್ಥಾವರ ಜಂಗಮ ಒಂದೆಂಬರು ನೀವು ಕೇಳಿರೆ:
ಸ್ಥಾವರವೆ ಲಿಂಗ, ಜಂಗಮವೆ ಭಕ್ತ.
ಪೂಜಿಸುವುದು ಲಿಂಗ, ಪೂಜೆಗೊಂ[ಬುದು] ಜಂಗಮ.
ಸ್ಥಾವರ-ಜಂಗಮ ಒಂದಾದ ಕಾರಣ ಜಂಗಮವೆನಿಸಿತ್ತು.
ದೇವ-ಭಕ್ತನೊಂದಾದ ಕಾರಣ ಸ್ಥಾವರವೆನಿಸಿತ್ತು.
ಸ್ಥಾವರವೇ ಘಟವು, ಜಂಗಮವೆ ಪ್ರಾಣವು.
ಇದು ಕಾರಣ ಕೂಡಲಚೆನ್ನಸಂಗಾ ನಿಮ್ಮ ಶರಣ ಸ್ವತಂತ್ರ. ॥ ೬೬ ॥

೩೯೫

ನೇಮವೆಂವೇನು? ನಿತ್ಯವೆಂವೇನು? ಆಗಮವೆಂದೇನು? ಆಚಾರವೆಂವೇನು?
ಲಿಂಗಜಂಗಮುವ ಕುಳವೊಂದೇ ಎಂದು ಸಂಪಾದಿಸಲ[ರಿಯ]ವೆ
ನಾಲ್ಕು ಯುಗಂಗಳು ಇಂತೆ ಹೋದವು.
ಕಂಡು ಹೇಳರು, ತಂದು ತೋರರು, ಅವರು ಮಹಂತರೆ?

ಕೂಡಲಚೆನ್ನಸಂಗಮದೇವ
ಸುಲಭವಾಗಿ ಶರಣಸನ್ನಿಹಿತ ಲಿಂಗವು. || ೬೭ ||

೩೯೬

ಲಿಂಗದೊಳಗಣ ಬೀಜ ಜಂಗಮದಲುತ್ಪತ್ತ್ಯ.
ಕಾಯಗುಣವಿಲ್ಲಾಗಿ ಸಂಸಾರ ಭಯವಿಲ್ಲ.
ಅಂತರಂಗ ಶುದ್ಧಾತ್ಮ, ನಿಸ್ಸಂಗಿ ಜಂಗಮ,
ಕೂಡಲಚೆನ್ನಸಂಗಮದೇವಾ. || ೬೮ ||

೩೯೭

ಅಂಗ, ಮನ, ಪ್ರಾಣ ತ್ರಿಸ್ಥಾನ ಸಂಗವಾಗಿ.
ಮನಕ್ರೀಯಳಿದು, ಸಾರವುಳಿದು ನಿಂದು,
ಅತಿರಥರ ಸಮರಥರ ನುಡಿಗಡಣ ಸಂಭಾಷಣೆಯಿಂದ
ಹೃದಯ ಕಂದೆರೆದು,
ಜಂಗಮದಲ್ಲಿ ಅರಿವ, ಲಿಂಗದಲ್ಲಿ ಮರೆವ
ಕೂಡಲಚೆನ್ನಸಂಗ ತಾನಾಗಿ. || ೬೯ ||

೩೯೮

ಅಕಾಯಮುಖದಲ್ಲಿ ಸಕಾಯ ಪ್ರತಿಬಿಂಬಿಸೂದು.
ಸಕಾಯಮುಖದಲ್ಲಿ ಅಕಾಯ ಪ್ರತಿಬಿಂಬಿಸೂದು.
ಸೋಂಕಿಲ್ಲದೆ ಸೊಗಸಿಲ್ಲದೆ ಹೂಣಿ ಹೋಗುವನು, ಅನುಭಾವ ಸಕಾಯವಾಗಿ,
ಸ್ಥಾವರಂ ಜಂಗಮಶ್ಚೈವ ದ್ವಿವಿಧಂ ಲಿಂಗಮುಚ್ಯತೇ!
ಎಂದುದಾಗಿ ಕೂಡಲಚೆನ್ನಸಂಗಾ.
ನಿಮ್ಮ ಘನತೆಯ ಶರಣನೆ ಬಲ್ಲ. || ೭೦ ||

೩೯೯

ಅಂಗದಲಾಯತಲಿಂಗ ಸಾಹಿತ್ಯನಾಗಿದ್ದೆ ನಾನು.
ಪರಮಸುಖಪರಿಣಾಮದೊಳಿದ್ದೆ ನಾನು.
ತಸ್ಮೈ ಸರ್ವಾನುಭಾವೇನ ಶಿವಲಿಂಗಾಂತರೇ ದ್ವಯಂ।
ಸ್ವಾನುಭೂತೌ ನಿವಿಷ್ಟಾಯ ಪ್ರಸನ್ನಃ ಸ್ಯಾತ್ ಸದಾಶಿವಃ॥
ಸ್ಥಾವರ ಜಂಗಮ ಉಭಯವೊಂದಾಗಿ

ಬೇರೆ ಭಿನ್ನಭಾವವ ವಿಚಾರಿಸಲಿಲ್ಲ.
ಕೂಡಲಚೆನ್ನಸಂಗನಲ್ಲಿ ಸ್ವಾಯತವಾಗಿದ್ದೆ ಸಹಜ. || ೭೧ ||

೪೦೨

ಲಿಂಗವೆ ಪ್ರಾಣವಾಯಿತ್ತಾಗಿ ಆಚಾರವಿಲ್ಲಯ್ಯಾ,
ಪ್ರಸಾದವೆ ಕಾಯವಾಯಿತ್ತಾಗಿ ರಜ ತಮ ಸತ್ವ ಕ್ರೋಧವಿಲ್ಲಯ್ಯಾ.
ಜಂಗಮಮುಖದಲ್ಲಿ ಲಿಂಗವಾದ ಕಾರಣ
ಲಿಂಗದಲನುಭಾವಿಸಿ ನೋಡುತ್ತಿದ್ದೆನಯ್ಯಾ.
ಭಕ್ತಕಾಯ ಮಮಕಾಯವಾಗಿ ಕೂಡಲಚೆನ್ನಸಂಗನಲ್ಲಿ
ಸುಖಿಯಾಗಿದ್ದೆ ನಾನಯ್ಯಾ.. || ೭೨ ||

೪೦೧

ಸುಜ್ಞಾನವೆಂಬ ಭಾವವು ಗುರುವಿನಲ್ಲಿ ಸಾಹಿತ್ಯವು.
ಜ್ಞಾನವೆಂಬ ಭಾವವು ಶಿಷ್ಯನಲ್ಲಿ ಸಾಹಿತ್ಯವು.
ಗಮನವೆಂಬ ಭಾವವು ಲಿಂಗದಲ್ಲಿ ಸಾಹಿತ್ಯವು.
ಲಿಂಗಕ್ಕೆ ಮಜ್ಜನ ಮಾಡಲಾಗದು, ಅದೇನು ಕಾರಣ?
ಮನವೆಂಬ ಲಿಂಗವು ಭಾವದಲ್ಲಿ ಸಾಹಿತ್ಯವಾದ ಕಾರಣ.
ಲಿಂಗಕ್ಕೆ ಗಂಧ ಧೂಪ ನಿವಾಳಿಯ ಕುಡಲಾಗದು, ಅದೇನು ಕಾರಣ?
ನಿರ್ಗಮನವೆಂಬ ಲಿಂಗವು ನಾಸಿಕದಲ್ಲಿ ಸಾಹಿತ್ಯವಾದ ಕಾರಣ.
ಲಿಂಗಕ್ಕೆ ಪೂಜೆಯ ಮಾಡಲಾಗದು ಅದೇನು ಕಾರಣ?
ಪರಿಮಳವೆಂಬ ಲಿಂಗವು ಮನಸ್ಥಳದಲ್ಲಿ ಸಾಹಿತ್ಯವಾದ ಕಾರಣ.
ಲಿಂಗಕ್ಕರ್ಪಿತವ ಮಾಡಲಾಗದು ಅದೇನು ಕಾರಣ?
ರುಚಿತತ್ವವೆಂಬ ಲಿಂಗವು ಜಿಹ್ವೆಯ ಕೊನೆಯ ಮೊನೆಯ ಮೇಲೆ
ಸಾಹಿತ್ಯವಾದ ಕಾರಣ.
ಲಿಂಗಕ್ಕೆ ರೂಪನರ್ಪಿಸಲಾಗದು, ಅದೇನು ಕಾರಣ?
ರೂಪಾತೀತವಾದ ಲಿಂಗವು ನೇತ್ರದಲ್ಲಿ ಸಾಹಿತ್ಯವಾದ ಕಾರಣ.
ಇಂತು ಷಡುಸ್ಥಲವನರಿದು ಷಡುವರ್ಣವ ಮೀರಿ,
ಚರವೆಂಬ ಜಂಗಮಸಾಹಿತ್ಯವಾದ ಕಾರಣ,
ಭಕ್ತಗೆ ಮತ್ತೆ ಪ್ರಾಣಲಿಂಗವಿಲ್ಲಯ್ಯ.
ಇದು ಕಾರಣ ಕೂಡಲಚೆನ್ನಸಂಗಮದೇವಯ್ಯಾ,
(ಲಿಂ)ಗ ಸಾಹಿತ್ಯವಾದವರಂತಿರಲಿ
ಕಂಗಳ ನೋಟವಲ್ಲಿ ಜಂಗಮಸಾಹಿತ್ಯವಾದವರಪೂರ್ವ. || ೭೩ ||

# ಪ್ರಾಣಲಿಂಗಿಯ ಮಾಹೇಶ್ವರಸ್ಥಲ

೪೦೨

ಸೀಮರ ಕಂಡೆ, ನಿಸ್ಸೀಮರ ಕಂಡೆ
ಭಾವರ ಕಂಡೆ, ಅಭಾವರ ಕಂಡೆ.
ಕೂಡಲಚೆನ್ನಸಂಗಯ್ಯಾ ಮನಸಾಹಿತ್ಯರನಾರುವ ಕಾಣೆ. || ೭೪ ||

೪೦೩

ಷೋಡಶೋಪಚಾರವಿಲ್ಲದೆ ಮುಟ್ಟಲರಿಯದವರ ಕಂಡರೆ
ಅವರನೇನೆಂಬೆನಯ್ಯಾ?
ಆವ ಭಾವದಲ್ಲಿ ಆವ ಮುಖದಲ್ಲಿ ಆವ ಜ್ಞಾನದಲ್ಲಿ
ಅವರನಯ್ಯಯೆಂಬೆನು?
ನಿಮ್ಮಲ್ಲಿ ಸಮ್ಯಕ್ಕಾದ ಸತ್ಯಶರಣರ ಅವರನಯ್ಯಯೆಂಬೆನು
ಕೂಡಲಚೆನ್ನಸಂಗಮದೇವಾ. || ೭೫ ||

೪೦೪

ಶೀಲವಂತರು ಲಕ್ಕ ಲಕ್ಕ, ನೇಮಸ್ಥರು ಲಕ್ಕ ಲಕ್ಕ,
ವ್ರತಸ್ಥರು ಲಕ್ಕ ಲಕ್ಕ,
ಅರ್ಥ ಪ್ರಾಣ ಅಭಿಮಾನವನೊಪ್ಪಿಸಿದ ವೈರಾಗಿಗಳು ಲಕ್ಕ ಲಕ್ಕ.
ಕೂಡಲಚೆನ್ನಸಂಗಯ್ಯನಲ್ಲಿ ಇವರೆಲ್ಲಾ ಫಲಸದರ್ಥರಲ್ಲದೆ
ಲಿಂಗಸದರ್ಥರಾರೂ ಇಲ್ಲ. || ೭೬ ||

೪೦೫

ಅರಸನ ಹೆಸರಿಟ್ಟ ಅನಾಮಿಕನಂತೆ
ನಾಮಕ್ಕರುಹರಲ್ಲದೆ ಪಟ್ಟಕ್ಕರುಹರಪ್ಪರೆ?
ಲಿಂಗ ಜಂಗಮ ಪ್ರಸಾದದ ಅನುಭಾವದ
ಹೆಸರ ಹೇಳಿಕೊಂಡು ಬದುಕುವರಲ್ಲದೆ,
ವೇಷವ ಧರಿಸಿಪ್ಪ ಅಪ್ರಿತರೆಲ್ಲರೂ, ಸಜ್ಜನ ಸಂಬಂಧ
ಗುಣಾದಿಗುಣಂಗಳಿಗೆ ಯೋಗ್ಯರೆ?
ಕೂಡಲಚೆನ್ನಸಂಗಯ್ಯಾ ಸಹಜ ಸಮ್ಯಕ್ಕರಲ್ಲದವರಂತರಲಿ. || ೭೭ ||

೪೦೬

(ಲಿಂಗಾಂಗಿಗಳೆಂಬರು) ತ್ರಿಪುರಮರ್ದನವರಿಯರು.
ಲಿಂಗವಂತರೆಂಬರು ಕಾಮದಹನವ ಮಾಡಲರಿಯರು.
ಪ್ರಾಣಲಿಂಗಿಗಳೆಂಬರು ಹರಿಯ ನಷ್ಟವನರಿಯರು.
ಲಿಂಗಪ್ರಾಣಿಗಳೆಂಬರು ಬ್ರಹ್ಮನ ಕೊಲಲರಿಯರು.
ಇಂತಪ್ಪ ಶಬ್ದಸೂತಕಿಗಳ ಕಂಡು ಕೂಡಲಚೆನ್ನಸಂಗನಲ್ಲಿ
ನಾಚಿತ್ತೆನ್ನ ಮನವು. || ೭೮ ||

೪೦೭

ಎಲ್ಲಿಕ್ಕೆಯ ಎಣ್ಣೆ, ಎಲ್ಲಿಕ್ಕೆಯ ಬತ್ತಿ,
ಎಲ್ಲಿಕ್ಕೆಯ ಲಿಂಗವ ಪೂಜಿಸುವರು ನೀವು ಕೇಳಿರೆ:
ಅಂಗ ಲಿಂಗವೆಂಬೆನೆ? ಹಿಂಗದು ಮನದ ಭವಿತನ.
ಪ್ರಾಣ ಲಿಂಗವೆಂಬೆನೆ? ಭಾವದಲ್ಲಿ ಜಂಗಮವನರಿಯರು.
ಗುರುವಚನ ಸಾರಾಯಸಂಪನ್ನರೆಂಬೆನೆ?
ಷಟ್ಕರ್ಮ (ಷಡಕ್ಷರ?) ಮಂತ್ರ ವಿರೋಧಿಗಳು.
ಇದು ಕಾರಣ ಕೂಡಲಚೆನ್ನಸಂಗಯ್ಯಾ
ತಾಯ ಮಾರಿ ತೊತ್ತ ಕೊಂಬರನೇನೆಂಬೆ. || ೭೯ ||

೪೦೮

ಶೀಲ ಶೀಲವೆಂದೇನೋ?
ಮಾಡಿದ ಮನೆ, ಹೂಡಿದ ಒಲೆ, ಅಟ್ಟುಂಬ ಮಡಕೆ, ಕಟ್ಟಿದ ಕೆರೆ,
ಬಿತ್ತಿದ ಕೆಯಿ ಶೀಲವಲ್ಲದೆ, ತನ್ನ ಮನಕ್ಕೆ ಶೀಲವಿಲ್ಲ.
ಶೀಲವೆಂತೆಂದರೆ:
ಲಿಂಗವು ಬಂದು ಮನವನಿಂಬುಗೊಂಬುದೇ ಶೀಲ.
ಜಂಗಮ ಬಂದು ಧನವನಿಂಬುಗೊಂಬುದೆ ಶೀಲ.
ಪ್ರಸಾದ ಬಂದು ತನುವನಿಂಬುಗೊಂಬುದೆ ಶೀಲ.
ಇಂತಪ್ಪ ಶೀಲಕ್ಕೆ ನಮೋ ನಮೋ.
ಉಳಿದ ದುಃಶೀಲರ ಕಂಡರೆ ಮೆಚ್ಚುವನೆ ನಮ್ಮ
ಕೂಡಲಚೆನ್ನಸಂಗಯ್ಯ? || ೮೦ ||

೪೦೯

ಹೃದಯ ಕಮಲ ಮಧ್ಯದಲ್ಲಿಪ್ಪ ದೇವರ ದೇವನ ದೇಹಾರವ ಮಾಡಲರಿದು.
ದೇಹಿ ನಿರ್ದೇಹಿಯಾಗದನ್ನಕ್ಕ ದೇಹಾರವೆಲ್ಲಿಯದೊ ?
ಅನಂತಮುಖದಲ್ಲಿ ದೇಹಾರವ ಮಾಡಲು ದೇವನಲ್ಲಿಲ್ಲ ನೋಡಯ್ಯಾ.
ಅಸಾಹಿತ್ಯ ವಿಡಿದು ಹುಸಿಯನೆ ಪೂಜಿಸಿ ಗಸಣಿಗೊಳಗಾದಿರಲ್ಲಾ.
ಅನಂತವಳಿದು ನಿಜವನರಿದು ಏಕೋಗ್ರಾಹಿ
ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೮೧ ॥

೪೧೦

ನಿಷ್ಠೆಯುಳ್ಳಾತಂಗೆ ನಿತ್ಯನೇಮದ ಹಂಗೇಕೆ?
ಸತ್ಯವುಳ್ಳಾತಂಗೆ ತತ್ವವಿಚಾರದ ಹಂಗೇಕೆ?
ಅರಿವುಳ್ಳಾತಂಗೆ ಅಗ್ಘವಣಿಯ ಹಂಗೇಕೆ?
ಮನಶುದ್ಧವುಳ್ಳವಂಗೆ ಮಂತ್ರದ ಹಂಗೇಕೆ?
ಭಾವ ಶುದ್ಧವುಳ್ಳವಂಗೆ ಹೂವಿನ ಹಂಗೇಕೆ?
ಕೂಡಲಚೆನ್ನಸಂಗಯ್ಯಾ,
ನಿಮ್ಮನರಿದಾತಂಗೆ ನಿಮ್ಮ ಹಂಗೇಕೆ? ॥ ೮೨ ॥

೪೧೧

ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡಲಾಗದು.
ಉದಯಾಸ್ತಮಾನವ ನೋಡಿ ಮಾಡುವ
ತುಡುಗುಣಿ ನಾಯಿಗಳು ನೀವು ಕೇಳಿ ಭೋ.
ಉದಯವೆಂದೇನೊ ಶರಣಂಗೆ? ಅಸ್ತಮಾನವೆಂದೇನೊ ಶರಣಂಗೆ?
ಮಹಾಮೇರುವಿನ ಮರೆಯಲ್ಲಿದ್ದು ತನ್ನ ನೆಳಲನರಸುವ
ಭಾವಭ್ರಮಿತರ ಮೆಚ್ಚ ಕೂಡಲಚೆನ್ನಸಂಗಮದೇವ. ॥ ೮೩ ॥

೪೧೨

ಪ್ರಾಣಲಿಂಗವ ಸುವಿಧಾನವ ಮಾಡು ಮಗನೇ, ಎಂದು
ಶ್ರೀ ಗುರು ಲಿಂಗವ ಕೊಟ್ಟನೇಕಾಂತದಲ್ಲಿ.
ಕೊಟ್ಟ ಲಿಂಗದ ನೇಮವ ಮರೆಯದೆ,
ಪ್ರಾಣಲಿಂಗದ ಪರಿಚಾರವ ಮಾಡುವರಾರೂ ಇಲ್ಲ.
ಅಂಗದಿಂದ ಆ ಪ್ರಾಣಲಿಂಗ ಹಿಂಗಿದರೆ
ಈ ಲಿಂಗವ ಮುಟ್ಟಿ ಪೂಜಿಸುವರೆಲ್ಲ ಭಂಗಿತರಾದರು.

ಅರುಹಿರಿಯರೆಲ್ಲರಿಗೆ ಶರಣಸಂಬಂಧ ಸಾಲದ ಕಾರಣ,
ಎಲೆಯ ಮರೆಯ ಕಾಯಂತೆ
ಮರೆಯ ಮಾಡಿ, ಕುರುಹ ತೋರಿ
ನೆರೆ ಜಗವನಾಳಿಗೊಂಡ ಕೂಡಲಚೆನ್ನಸಂಗಯ್ಯ. ॥ ೮೪ ॥

೪೧೩

ಶ್ರೀಗುರು ಕರಸ್ಥಲಕ್ಕೆ ಇಷ್ಟಲಿಂಗವ ಬಿಜಯಂಗೈಸಿ ಕೊಟ್ಟ ಬಳಿಕ,
ಮತ್ತೊಂದು ಸೆಜ್ಜೆ ಶಿವದಾರಬೇಕೆಂಬ ದ್ರೋಹ ಸಾಲದೆ?
ಅಂಗದ–ಲಿಂಗವ ಹಿಂಗಿ, ಮಜ್ಜನಕ್ಕೆರೆವ ಭಂಗಿತರ ತೋರದಿರಯ್ಯಾ
ಕೂಡಲಚೆನ್ನಸಂಗಯ್ಯಾ. ॥ ೮೫ ॥

೪೧೪

ಮನೆಯೊಳಗಣ ಜ್ಯೋತಿ ಮನೆಯ ಮುಟ್ಟದಂತೆ,
ಬಸುರೊಳಗಣ ಶಿಶು ಬಸುರ ಮುಟ್ಟದಂತೆ,
ಕಕ್ಷೆ, ಕರಸ್ಥಳ, ಅಂಗಸೋಂಕು ಮುಖಸೆಜ್ಜೆ ಕಂಠ ಉತ್ತಮಾಂಗ,
ಇವೆಲ್ಲ ಆಯತಂಗಳಲ್ಲವೆ ಪ್ರಾಣಲಿಂಗಸ್ಥಳ ಬೇರೆ.
ಇದು ಕಾರಣ ಕೂಡಲಚೆನ್ನಸಂಗಾ ನಿಮ್ಮ ಶರಣನ ಪರಿ ಬೇರೆ. ॥ ೮೬ ॥

೪೧೫

ಪರುಷವಿದ್ದುದ ಕಂಡು ಪರಿಣಾಮಬಡುವರು,
ಇಷ್ಟಲಿಂಗ ಬಿದ್ದಿತ್ತೆಂದು ಕುತ್ತಿಕೊಂಡು ಸಾವರು.
ಅರಿದರಿದು ಗುರುಶಿಷ್ಯಸಂಬಂಧವು,
ಅರಿವುಳ್ಳವರಿಗಲ್ಲದೆ ಮತ್ತಾರಿಗೆಯೂ ಆಗದು.
ಕುರುಹು ಘನವೋ? ಲಿಂಗ ಘನವೋ? ಅರಿವುಳ್ಳವರು ಹೇಳಿರೆ.
ಮರಹು ಕವಿದಹುದೆಂದು ಕುರುಹ ತೋರಿದನಲ್ಲದೆ
ಅರಿವರಿವ ಮರೆದರೆ ಕೂಡಲಚೆನ್ನಸಂಗಯ್ಯಂಗೆ
ಅವನಂದೇ ದೂರ. ೮೭

೪೧೬

ಸೃಷ್ಟಿಯ ಮೇಲಣ ಕಣೆಯ ತಂದು, ಇಷ್ಟಲಿಂಗವೆಂದು ಮಾಡಿ,
ಅಷ್ಟತನುವಿನ ಕೈಯಲ್ಲಿ ಕೊಟ್ಟು,
ಅಷ್ಟತನುವಿನ ಕೈತಪ್ಪಿ ಸೃಷ್ಟಿಯ ಮೇಲೆ ಬಿದ್ದರೆ

ಕೆಟ್ಟನವನನಾಚಾರಿಯೆಂದು ಮುಟ್ಟರು ನೋಡಾ.
ಮುಟ್ಟಿದ ಪ್ರಾಣವ, ಬಿಚ್ಚದ ಭೇದವ ಕಷ್ಟ ಜೀವಿಗಳೆತ್ತ ಬಲ್ಲರು
ಕೂಡಲಚೆನ್ನಸಂಗಮದೇವಾ? || ೮೮ ||

೪೧೭

ಪ್ರತಿಯಿಲ್ಲದ ಲಿಂಗ ಭಿನ್ನವಾಯಿತ್ತೆಂದು
ತನ್ನ ತನುವಿನ ಮೇಲೆ ಶಸ್ತ್ರವನಿಕ್ಕಿಕೊಂಬ,
ಆತ್ಮ ದ್ರೋಹಿಯ ಮುಖವ ನೋಡಲಾಗದು.
ಶಬ್ದ ಭಿನ್ನವಿಲ್ಲಾಗಿ ಪೂಜೆ ಭಿನ್ನವಿಲ್ಲ.
ಮಹಾಬಯಲೊಳಗಣ ಪ್ರಾಣದ ಸಂಚವನರಿಯರಾಗಿ
ಕೂಡಲಚೆನ್ನಸಂಗಯ್ಯಾ ಅವರು ರೌರವನರಕಿಗಳು. || ೮೯ ||

೪೧೮

ಸದ್ಗುರು ಕಾರುಣ್ಯವುಳ್ಳ ಭಕ್ತನ ಲಿಂಗ ಓಸರಿಸಿದರೆ
ವ್ರತಗೇಡಿಯೆಂದು ಕಳೆಯಬಾರದು, ಕೊಳಬಾರದು, ಕಾರಣವುಂಟಾಗಿ:
'ಸುವ್ರತಂ ಸುಲಭಂ ಸಿದ್ಧಂ ಶತ್ರುಜಿತ್ ಶತ್ರುಪಾವನ'ಯೆಂದುದಾಗಿ
ಅಲಿಂಗೀ ಲಿಂಗರೂಪೇಣ ಯೋ ಲಿಂಗಮುಪಜೀವತಿ।
ಸಪತೇತ್ ಮಹಾಘೋರೆ ನರಕೇ ಕಾಲಮಕ್ಷಯಂ–ಎಂದುದಾಗಿ
ಶಸ್ತ್ರ, ಸಮಾಧಿ, ಜಲಾಂತ, ವನಾಂತ, ದಿಗ್ಬಲಿ, ದಹನ ಈ ಆರರಲ್ಲಿ ಸತ್ತಡೆ
ಕೂಡಲಚೆನ್ನಸಂಗಯ್ಯನಲ್ಲಿ ಆತ ವ್ರತಗೇಡಿ. || ೯೦ ||

೪೧೯

ಭಾಷೆಗೇರಿಸಿ ತನುವಿಂಗೆ ಅಲಗ ಕೊಂಡರೆ ಲಿಂಗ ಓಸರಿಸಿತ್ತಯ್ಯಾ.
ಆತ ವೀರನೆನಿಸುವ.
ಲಿಂಗಕ್ಕೆ ದೂರ, ಜಂಗಮಕ್ಕೆ ದೂರ,
ಪ್ರಸಾದಕ್ಕೆ ದೂರ, ವ್ರತಗೇಡಿಯಾಗಿ.
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ ಬ್ರಹ್ಮೇತಿಕಾರನೆನಿಸುವ. || ೯೧ ||

೪೨೦

ಕರಟಿಲ್ಲದ ಲಿಂಗಭರಿತನೆಂದು ನಾಮವಿಡಿದು ಪೂಜಿಸಿ,
ಮರಳಿ ಬದ್ದಿತ್ತೆಂಬ ನಾಚಿಕೆಯ ನೋಡಾ.
ಅರಿಯರರಿಯರು ಪ್ರಾಣಲಿಂಗದ ನೆಲೆಯನು,

ಅರಿದರಿದು ಕುರುಹಿಂಗೆ ವೇಳೆಯ ಮಾಡುವ ಮತಿಭ್ರಷ್ಟರು.
ಅರಿದರಿದು ಸಯವಾದ ಲಿಂಗ ಓಸರಿಸಿತ್ತೆಂದು
ಸಾವ ವ್ರತಗೇಡಿಗಳನೊಲ್ಲ ಕೂಡಲಚೆನ್ನಸಂಗಮದೇವ. ॥ ೯೨ ॥

೪೨೧

ಭಾಷೆ ತಪ್ಪಿದ ತನುವಿಂಗಲಗ ಕಿತ್ತರೆ ಲಿಂಗ ಓಸರಿಸುವ,
ಮುಂದೆ ವೀರನಪ್ಪ. ಇಂಥ ಭಾಷೆವಂತನೆ ಶರಣ?
ಕಲ್ಪಿತಾಕಾರನಲ್ಲ, ಪೂರ್ವಾಶ್ರಯವಿಲ್ಲ,
ಉಭಯಕುಳರಹಿತ ಕೂಡಲಚೆನ್ನಸಂಗಾ ನಿಮ್ಮ ಶರಣ ॥ ೯೩ ॥

೪೨೨

ಅಂಗದ ಮೇಲಣ ಲಿಂಗ ಹಿಂಗಿತ್ತೆಂದು
ಆತ್ಮಘಾತವ ಮಾಡಬೇಕೆಂಬ ಅಜ್ಞಾನಿಗಳು
ಅಂಗವಾವುದು ಲಿಂಗವಾವುದೆಂದವರೆತ್ತ ಬಲ್ಲರು ?
ಅಂಗವೆ ಆತ್ಮ, ಲಿಂಗವೆ ಸಂವಿತ್ತು.
ಎರಡರ ಸಂಬಂಧ ಸಂಚ ತಿಳಿಯದೆ ಲಿಂಗ ಹಿಂಗಿತ್ತೆಂಬವರಿಗೆ
ಪ್ರಾಣಲಿಂಗನಾಸ್ತಿ, ಪ್ರಸಾದವೆಲ್ಲಿಯದೋ
ಕೂಡಲಚೆನ್ನಸಂಗಮದೇವಾ. ॥ ೯೪ ॥

## ಪ್ರಾಣಲಿಂಗಿಯ ಪ್ರಸಾದಿಸ್ಥಲ

೪೨೩

ಭಕ್ತಿಯುಂತುಟಲ್ಲ, ಮುಕ್ತಿಯುಂತುಟಲ್ಲ, ಯುಕ್ತಿಯ ಪರಿ ಬೇರೆ.
ವೀರವೈರಾಗ್ಯಭಾಷೆಯುಂತುಟಲ್ಲ, ಸಹಜದ ಪರಿ ಬೇರೆ.
ಅಂಗಲಿಂಗದ ಸಂಬಂಧವು ಸಾರಾಯಂಗಲ್ಲದೆ,
ಸುಪ್ರಸಾದ ಗ್ರಾಹಕತ್ವ ಪ್ರಾಣಲಿಂಗಿಗಲ್ಲದೆ.
ಪರಿತಃ ಪ್ರಾಣಲಿಂಗೀ ನಾಂ ಲಿಂಗಪ್ರಾಣಂ ತದುತ್ತಮಂ।
ಸ್ವಯಮಾತ್ಮವಧಂ ಕುರ್ವನ್ ನರಕೇ ಕಾಲಮಕ್ಷಯಂ॥
ಇದು ಕಾರಣ ಕೂಡಲಚೆನ್ನಸಂಗಯ್ಯಾ

ನಿಮ್ಮ ಸಂಬಂಧಸಾರಾಯಸುಪ್ರಸಾದ,
ಪ್ರಾಣನಿಯುತ ಲಿಂಗಪ್ರಾಣಿಗಲ್ಲದೆಲ್ಲಿಯದೋ. ॥ ೯೫ ॥

೪೨೪

ಅರ್ಪಿತ ಸಯಿದಾನಪ್ರಸಾದ ಕಾಯಕ್ಕೆ,
ಅನರ್ಪಿತ ಸಯಿದಾನಪ್ರಸಾದ ಪ್ರಾಣಕ್ಕೆಂಬ
ಬೇಧವನಾರೂ [ಅರಿವವರಿಲ್ಲ.]
ತನುವ ಭೋಗಿಸುವ ಉಪಜೀವಿ ಪ್ರಸಾದಿಗಳಲ್ಲದೆ,
ಪ್ರಾಣವ ಭೋಗಿಸುವ ಪರಿಣಾಮಪ್ರಸಾದಿಗಳನೊಬ್ಬರನೂ ಕಾಣೆ.
ಇದು ಕಾರಣ ಕೂಡಲಚೆನ್ನಸಂಗಾ
ನಿಮ್ಮ ಪ್ರಾಣಲಿಂಗಪ್ರಸಾದ ಹುಸಿಮಾಡಿ ಕಾಡಿತ್ತು. ॥ ೯೬ ॥

೪೨೫

ವಾಯುಪ್ರಾಣಿಯ ಕಳೆದು, ಗುರುಸ್ವಾಮಿ
ಲಿಂಗಪ್ರಾಣಿಯ ಮಾಡಿದ ಠಾವನುದಾಸೀನವ ಮಾಡಿ ನಡೆವರು.
ಇದನಾನೇನೆಂದರಿಯೆವಯ್ಯಾ.
ಪಂಚಭೂತಕಾಯವ ಕಳೆದು ಪ್ರಸಾದ ಕಾಯವ ಮಾಡಿದನಾಗಿ
ಮುಂದೆ ಅರ್ಪಿತವೆಂಬುದನಾವರಿಯೆವಯ್ಯಾ.
ಶಿವಾತ್ಮಕಂ ಸುಖಂ ಜೀವಃ ಜೀವಾತ್ಮಕಂ ಸುಖಂ ಶಿವಃ।
ಶಿವನಾತ್ಮನಾಪಿ ಸಂತುಷ್ಟಂ ಪ್ರಾಣಲಿಂಗಪ್ರಸಾದಿನಾಂ॥
ಇಂತೆಂಬ ವಚನವ ಕೇಳಿ ನಂಬೂದು.
ನಂಬದಿದ್ದರೆ ಪ್ರಾಣಲಿಂಗವೆಂಬ ಶಬ್ದಕ್ಕೆ ಭಂಗ ಹೊದ್ದಿತ್ತು.
ಕೂಡಲಚೆನ್ನಸಂಗಮದೇವಾ. ॥ ೯೭ ॥

೪೨೬

ಪ್ರಾಣಲಿಂಗ ಪ್ರಸಾದ ಎಲ್ಲಾ ಎಡೆಯುಲೂ ಉಂಟು.
ಲಿಂಗಪ್ರಾಣಪ್ರಸಾದವಪೂರ್ವ ನೋಡಯ್ಯಾ.
ಪ್ರಾಣಲಿಂಗಪ್ರಸಾದಿ ದೇಹಧರ್ಮಿ.
ಲಿಂಗಪ್ರಾಣಪ್ರಸಾದಿ ಲಿಂಗಭೋಗೋಪಭೋಗಿ
ಕೂಡಲಚೆನ್ನಸಂಗನಲ್ಲಿ. ॥ ೯೮ ॥

೪೨೭

ಕಾಲು ಮುಟ್ಟಿದ ಪದಾರ್ಥ ಕಾಲಿಂಗರ್ಪಿತ (ಕಾಲುಲಿಂಗಾರ್ಪಿತ?)
ಕೈಮುಟ್ಟಿದ ಪದಾರ್ಥ ಕೈಗರ್ಪಿತ (ಕೈಲಿಂಗಾರ್ಪಿತ?)
ತನು ಮುಟ್ಟಿದ ಪದಾರ್ಥ ತನುವಿಂಗರ್ಪಿತ (ತನುಲಿಂಗಾರ್ಪಿತ?)
ಮನ ಮುಟ್ಟಿದ ಪದಾರ್ಥ ಮನಕರ್ಪಿತ (ಮನಲಿಂಗಾರ್ಪಿತ)
[ಕಾಲುಕೈ] ತನುಮನ ಮುಟ್ಟದ ಪದಾರ್ಥ ಭೂಮಿಯ ಮೇಲಿಲ್ಲ.
ಕೊಟ್ಟುದ ಕೊಳಬಾರದು, ಕೊಡದೆ ಕೊಳಬಾರದು.
ಇದು ಕಾರಣ ಕೂಡಲಚೆನ್ನಸಂಗಯ್ಯಾ
ಗುರು ಕೊಟ್ಟ ಲಿಂಗವು ಕುರುಹಿನ ಲಿಂಗವು. || ೯೯ ||

೪೨೮

[ಶ್ರೋತ್ರೇಂ] ದ್ರಿಯದ ಶ್ರುತದ ಅನುಭಾವವುಳ್ಳನಕ
ಗುರುವಚನ ಕೇಳಿದೆನೆಂದು ಎಂತೆನಬಹುದು?
ನೇತ್ರೇಂದ್ರಿಯದ ನೋಟದ ಅನುಭಾವವುಳ್ಳನಕ
ಲಿಂಗವ ಭಾವಿಸಿದೆನೆಂದು ಎಂತೆನಬಹುದು?
ನಾಸಿಕೇಂದ್ರಿಯದ ಪರಿಮಳ ವಾಸನೆಯನುಭಾವವುಳ್ಳನಕ
ಲಿಂಗದಲ್ಲಿ ಪರಿಮಳವ ವೇಧಿಸಿದೆನೆಂದು ಎಂತೆನಬಹುದು?
ಜಿಹ್ವೇಂದ್ರಿಯದ ರುಚಿಯ ರುಚಿಸುವನುಭಾವವುಳ್ಳನಕ
ಪ್ರಸಾದವ ಸೇವಿಸಿದೆನೆಂದು ಎಂತೆನಬಹುದಯ್ಯ?
ಸ್ಪರ್ಶೇಂದ್ರಿಯದ ಸೋಂಕಿನ ಸುಖದ ಅನುಭಾವವುಳ್ಳನಕ
ಲಿಂಗೈಕ್ಯನಾದೆನೆಂದು ಎಂತೆನಬಹುದು?
ಇವೆಲ್ಲವನು ಪರಿಚ್ಛೇದಿಸಿ ಭಾವನಿರ್ಭಾವವಾಗದನಕ
ಕೂಡಲಚೆನ್ನಸಂಗಯ್ಯನಳಿಶರಣರ ಮನದಲ್ಲಿ ನೆಲೆಗೊಳ್ಳನಾಗಿ
ಅವರೆಂತು ಪ್ರಾಣಲಿಂಗಿಗಳೆಂಬೆನು? || ೧೦೦ ||

೪೨೯

ರೂಪನರ್ಪಿಸಬಹುದಲ್ಲದೆ ರುಚಿಯನರ್ಪಿಸುವ ಪರಿಯಿನ್ನೆಂತೊ?
ಉರವಣಿಸಿ ಬಂದ ತನುಗುಣಾದಿಗಳ
ಲಿಂಗದೊಳಗೆ ನಿಕ್ಷೇಪವ ಮಾಡದಿದ್ದರೆ ಪ್ರಾಣಲಿಂಗನಾಸ್ತಿ,
ಪ್ರಸಾದವೆಲ್ಲಿಯದು ಕೂಡಲಚೆನ್ನಸಂಗಯ್ಯಾ? || ೧೦೧ ||

೪೩೦

ಅಂಗದ ಕೈಯಲು ಲಿಂಗವಿಪ್ಪುದು, ಲಿಂಗದ ಕೈಯಲು ಅರ್ಪಿತವೆಂಬರು.
ಲಿಂಗಾರ್ಪಿತವಲ್ಲದೆ ಕೊಳ್ಳೆವೆಂಬರು, ಪ್ರಾಣಲಿಂಗಿಗಳಲ್ಲದವರು.
ಪದಾರ್ಥ ಲಿಂಗಕ್ಕೆ ಬಂದುದು ಬಾರದೆಂಬ ಸಂದೇಹವುಳ್ಳನಕ
ಕೊಂಡುದು ಕಿಲ್ಬಿಷ ಕೂಡಲಚೆನ್ನಸಂಗಮದೇವಾ. || ೧೦೨ ||

೪೩೧

ಕೂಡಿ ಮಾಡಿದ ಸಯಿದಾನವ ತಂದು ಪದಾರ್ಥವೆಂದು,
ಇಷ್ಟಲಿಂಗದಲ್ಲಿ ಪೂರ್ವಾಶ್ರಯ ಹೋಯಿತ್ತೆಂದು,
ಪ್ರಾಣಲಿಂಗಕ್ಕೆ ಓಗರವೆಂದು ನೀಡುತ್ತಿದ್ದರಯ್ಯಾ.
ಅಂಗದ ಕೈಯಲು ಅರ್ಪಿತವದೆ, ಲಿಂಗದ ಕೈಯಲು ರುಚಿಯುಪೆ.
ಅಂಗದ ಕೈಯಾವುದು ಲಿಂಗದ ಕೈಯಾವುದೆಂದರಿಯರು.
ಬೇರೆ ಮತ್ತೊಂದೆಂಬಂರು.
ಒಂದೆಂದರ್ಪಿಸಿ ಮತ್ತೊಂದೆಂದು ಭಾವಿಸಿಧರೆ
ಹೊಂದಿದ ನೋಣವಿನಂತಾದರು,
ಕೂಡಲಚೆನ್ನಸಂಗನಲ್ಲಿ ಅವರ ಸಹಜರೆಂತೆಂಬೆ? || ೧೦೩ ||

೪೩೨

ಕಾಯದ ಕೈಯಲು ಲಿಂಗಾರ್ಪಿತ ಖಂಡಿತ ಭಾಷೆ.
ಭಾವದ ಕೈಯಲು ಲಿಂಗಾರ್ಪಿತ ಖಂಡಿತ ಭಾಷೆ.
ಶ್ರೋತ್ರದ ಕೈಯಲು ಲಿಂಗಾರ್ಪಿತ ಖಂಡಿತ ಭಾಷೆ.
ಘ್ರಾಣದ ಕೈಯಲು ಲಿಂಗಾರ್ಪಿತ ಖಂಡಿತ ಭಾಷೆ.
ಜಿಹ್ವೆಯ ಕೈಯಲು ಲಿಂಗಾರ್ಪಿತ ಖಂಡಿತ ಭಾಷೆ.
ಸ್ಪರ್ಶನದ ಕೈಯಲು ಲಿಂಗಾರ್ಪಿತ ಖಂಡಿತ ಭಾಷೆ,
ಲಿಂಗಮಧ್ಯೇ ಶರಣ, ಶರಣಮಧ್ಯೇ ಲಿಂಗ.
ಅಲ್ಲಲ್ಲಿ ತಾಗಿದ ಸುಖವೆಲ್ಲ ಲಿಂಗಾರ್ಪಿತವಾಗದಿದ್ದಡೆ
ಕೂಡಲಚೆನ್ನಸಂಗಯ್ಯನಲ್ಲಿ ಅವರ ಸಹಜರೆಂತೆಂಬೆ? || ೧೦೪ ||

೪೩೩

ಗುರುಲಿಂಗಜಂಗಮಪ್ರಸಾದ ಪ್ರಾಣಪ್ರವೇಶವಾದುದಾಗಿ
ಲಿಂಗಪ್ರಾಣದೊಳಗೆ ಪ್ರಾಣಲಿಂಗ ನೋಡಾ.
ಭಕ್ತಕಾಯದೊಳಗೆ ಪ್ರಸಾದಕಾಯನೋಡಾ.

ವಿಶ್ವತೋ ಚಕ್ಷುವಿನೊಳಗೆ ಜ್ಞಾನಚಕ್ಷು ನೋಡಾ
ವಿಶ್ವತೋ ಮುಖದೊಳಗೆ ಸುಮುಖ ನೋಡಾ.
ವಿಶ್ವತೋ ಬಾಹುವಿನೊಳಗೆ ನಮಸ್ಕಾರ ಬಾಹುನೋಡಾ.
ವಿಶ್ವತೋ ಪಾದದಲ್ಲಿ ನಿಂದ ಮಹತ್ಪಾದ ನೋಡಾ.–
ಇಂತಾದುದಾಗಿ,
ಲಿಂಗವ ಮನದಲ್ಲಿ ನೆನೆದು ಲಿಂಗಕ್ಕೆ ನೆನೆಯಲಿತ್ತು,
ಪ್ರಸಾದವ ಮನದಲ್ಲಿ ನೆನೆದು ಪ್ರಸಾದಿ ಪರಿಣಾಮಿಸುವ,
ಲಿಂಗವ ದೃಷ್ಟಿಯಲ್ಲಿ ನೋಡಿ ಲಿಂಗಕ್ಕೆ ನೋಡಲಿತ್ತು,
ಪ್ರಸಾದನಯನದಿಂದ ನೋಡಿ ನಯನಪ್ರಸಾದವ
ನಯನದಿಂದ ನೋಡಿಸಿ ಪರಿಣಾಮಿಸುವ.
ಲಿಂಗವಶ್ರೋತ್ರದಿ ಕೇಳಿ ಲಿಂಗಕ್ಕೆ ಕೇಳಲಿತ್ತು,
ಪ್ರಸಾದ ಶ್ರೋತ್ರದಿಂ ಶಬ್ದಪ್ರಸಾದಿ ಕೇಳಿ ಪರಿಣಾಮಿಸುವ,
ಲಿಂಗ[ವ] ಪರುಶನದಿಂ ಪರುಶಿಸಿ ಲಿಂಗಕ್ಕೆ ಪರುಶಿಸಲಿತ್ತು,
ಪ್ರಸಾದ ಪರುಶನದಿಂ ಪರುಶಿಸಿ ಪರುಶನಪ್ರಸಾದವ
ಪ್ರಸಾದಿ ಭೋಗಿಸಿ ಪರಿಣಾಮಿಸುವ.
ಲಿಂಗ ಜಿಹ್ವೆಯಿಂದ ಮಹಾರುಚಿಯ ರುಚಿಸಿ ಲಿಂಗಕ್ಕೆ ರುಚಿಸಲಿತ್ತು
ಪ್ರಸಾದಜಿಹ್ವೆಯಿಂ ಮಹಾರುಚಿಯ ರುಚಿಸಿ ರುಚಿಪ್ರಸಾದವ
ಪ್ರಸಾದಿ ಭೋಗಿಸಿ ಪರಿಣಾಮಿಸುವ.
ಇಂತು ಸರ್ವಭೋಗದ್ರವ್ಯವ ಲಿಂಗಕಾಯದಿಂ ಭೋಗಿಸಿ ಲಿಂಗಕ್ಕೆ ಭೋಗಿಸಲಿತ್ತು,
ಪ್ರಸಾದಕಾಯದಿಂ ಸರ್ವಭೋಗವನೂ ಭೋಗಿಸುವ ಪ್ರಸಾದಿ.
ಇದು ಕಾರಣ ಭಕ್ತದೇಹಿಕದೇವ ಕೂಡಲಚೆನ್ನಸಂಗಮದೇವನೆಂದರಿದು
ಪ್ರಸಾದಿಯ ಪ್ರಸಾದಿಯಾದೆನಯ್ಯಾ. ॥ ೧೦೫ ॥

೪೩೪

ರುಚ್ಯೈರ್ಪಿತ ಪ್ರಸಾದಸ್ತು ಸ್ಪರ್ಶನಂ ಸುಖಮರ್ಪಿತಂ।
ಉಭಯಾರ್ಪಿತ ವಿಹೀನಂ ಚ ಪೂಜನಂ ನಿಷ್ಫಲಂ ಭವೇತ್॥
ಇಂತೆಂಬ ಶ್ರುತಿಯನೊಲ್ಲೆ.
ರುಚಿಯುಬಲ್ಲನೆ ಪ್ರಸಾದಿ ತಾ ಲಿಂಗಭೋಗೋಪಭೋಗಿಯಾಗಿ?
ಸುಖವ ಬಲ್ಲನೆ ಭಕ್ತ ತಾ ಜಂಗಮಭೋಗೋಪಭೋಗಿಯಾಗಿ?
ರುಚಿಯನರ್ಪಿಸುವಾತ ಪ್ರಸಾದಿಯಲ್ಲ, [ಸುಖವ]ನರ್ಪಿಸುವಾತ ಭಕ್ತನಲ್ಲ,
ಇದನರಿವ ಶರಣಂಗೆ ನಮೋ ನಮೋ ಎಂಬೆ
ಕೂಡಲಚೆನ್ನಸಂಗಮದೇವಾ. ॥ ೧೦೬ ॥

೪೩೫

ಆಹ್ವಾನಿಸುವಲ್ಲಿ ಪ್ರಾಣಲಿಂಗವಿಲ್ಲ, ವಿಸರ್ಜಿಸುವಲ್ಲಿ ಲಿಂಗವಂತರಿಸಿತ್ತು.
ಆಹ್ವಾನಿಸುವನಲ್ಲ, ವಿಸರ್ಜಿಸುವನಲ್ಲ, ಶರಣನ ಪರಿ ಬೇರೆ.
ಲಿಂಗಭೋಗೋಪಭೋಗವಲ್ಲದೆ, [ಅನರ್ಪಿತವ] ಭೋಗಿಸುವನಲ್ಲ.
ಆಗಲೂ ಪ್ರಾಣಲಿಂಗಸಂಗದಲ್ಲಿಯೆ ಇಪ್ಪನು.
ಇದು ಕಾರಣ ಕೂಡಲಚೆನ್ನಸಂಗಯ್ಯಾ ನಿಮ್ಮ ಶರಣಂಗೆ
ನಮೋ ನಮೋ ಎಂಬೆ. ॥ ೧೦೭ ॥

೪೩೬

ಮುಟ್ಟದೆ ಮುಟ್ಟೆನಯ್ಯಾ
ಅನರ್ಪಿತವೆಂದು ಮುಟ್ಟಿ ಲಿಂಗಕ್ಕೆ ಮಾಡಲಿಲ್ಲ.
ತಟ್ಟದೆ ಮುಟ್ಟದೆ ಮನಸೋಂಕದ ಅನುದಿನ ಲಿಂಗಕ್ಕೆ ಮಾಡಬೇಕು.
[ಕೊಟ್ಟು] ಕೊಂಬ ಭೇದವನು ಕೂಡಲಚೆನ್ನಸಂಗನಲ್ಲಿ ಬಸವಣ್ಣ ಬಲ್ಲ. ॥ ೧೦೮ ॥

೪೩೭

ಲಿಂಗಸ್ಥಲವೆಂಬೆನೆ? ಲಿಂಗಕ್ಕೆ ನೆಲೆಯಿಲ್ಲ.
ಜಂಗಮಸ್ಥಲವೆಂಬೆನೆ? ಜಂಗಮಕ್ಕೆ ಜನನವಿಲ್ಲ.
ಪ್ರಸಾದಸ್ಥಲವೆಂಬೆನೆ? ಪ್ರಸಾದಕ್ಕೆ ಪರಿಣಾಮವಿಲ್ಲ.
ಈ ತ್ರಿವಿಧವೂ ಇಲ್ಲ ಎಂಬೆನೆ?
ಕೂಡಲಚೆನ್ನಸಂಗನಲ್ಲಿ ಬಸವಣ್ಣ ಬಲ್ಲ. ॥ ೧೦೯ ॥

೪೩೮

ತ್ರಿವಿಧೋದಕ ತ್ರಿವಿಧೋದಕವೆಂದು ತಿರುಗಿ ತಿರುಗಿ
ಕುಂಡಲಿಗನ ಹುಳುವಿನಂತೆ ಭ್ರಮೆಗೊಂಡು ಹೋದರಲ್ಲಾ
ನಿಮ್ಮ ಭಕ್ತರೆಂಬವರು, ನಿಮ್ಮ ಹಿರಿಯರೆಂಬವರು.
ತ್ರಿವಿಧೋದಕ ಒಬ್ಬರಿಗೆಯೂ ಆಗದು.
ತ್ರಿವಿಧೋದಕ ಅಳವಟ್ಟ ದೇಹ ಕರುವಿಟ್ಟ ರೂಹಿನಂತೆ
ಕಣ್ಣೆವೆ ಹಳಚದೆ ನಿಬ್ಬೆರಗಾಗಿರಬೇಕು,
ಸಿಡಿಲು ಹೊಡೆದ ಹೆಣನಂತಿರಬೇಕು.
ಅಂತಲ್ಲದೆ ಬಯಲಿಗೆ ತ್ರಿವಿಧೋದಕ ತ್ರಿವಿಧೋದಕವೆಂಬ
ಹೇಸಿಕೆಯ ಮಾತ ಕೇಳಲಾಗದು.

ಇದು ಕಾರಣ, ಕೂಡಲಚೆನ್ನಸಂಗಮದೇವಾ.
ನಿಮ್ಮ ತ್ರಿವಿಧೋದಕವ ಬಲ್ಲ ಬಸವಣ್ಣಂಗೆ ನಮೋ ನಮೋ. ॥ ೧೧೦ ॥

೪೩೯

ಹೃದಯಕಮಲ ಮಧ್ಯದ ಶುದ್ಧಾತ್ಮನನು
ಸಿದ್ಧ ವಿದ್ಯಾಧರ ನಿರ್ದೇಹಿಗಳು ಬಲ್ಲರೆ?
ಕಾಯದ ಕೈಯಲಿ ಕೊಟ್ಟುದು ಮಾಯಾಮುಖದರ್ಪಿತ.
ಇದಾವ ಮುಖವೆಂದರಿಯದೆ ಭ್ರಮೆ [ಗೊಂಡು] ಹೋದರು.
ಕೊಂಬ ಕೊಡುವ ಎಡೆಯನಿಂಬಿನ ಗ್ರಾಹಕ ಬಲ್ಲ.
ಕೂಢಲಚೆನ್ನಸಂಗನಲ್ಲಿ ಬಸವಣ್ಣಪ್ರಭು ಬಲ್ಲ. ॥ ೧೧೧ ॥

೪೪೦

ಲಿಂಗದ ಘನವನರಿದೆನೆಂದರೆ ಅದೆ ಕುಚಿತ್ತ.
ಜಂಗಮದ ಘನವನರಿದೆನೆಂದರೆ ಅದೆ ಕುಚಿತ್ತ.
ಆಶ್ರಯ ಪ್ರಸಾದದ ಘನವನರಿದೆನೆಂದರೆ ಅದೆ ಕುಚಿತ್ತ.
ಗುರುಲಿಂಗಜಂಗಮದಲೊದಗಿದ ಪ್ರಸಾದ ಘನಕ್ಕೆ ಘನ ಮನವೇದ್ಯವೆಂದು
ತೋರಿದನೆನ್ನ ಗುರುಲಿಂಗ,
ಕೂಡಲಚೆನ್ನಸಂಗಯ್ಯನ ಶರಣ ಬಸವಣ್ಣ. ॥ ೧೧೨ ॥

೪೪೧

ಕಾಯವಿಡಿದು ಭಕ್ತಿಯ ಮಾಡುವರಲ್ಲದೆ,
ಭಕ್ತಿವಿಡಿದು ಭಕ್ತಿಯ ಮಾಡುವರಾರೂ ಇಲ್ಲ.
ಅರ್ಪಿತವಂತಿರಲಿ ಅನರ್ಪಿತವೆ ಲೇಸು.
ಕೂಡಲಚೆನ್ನಸಂಗಯ್ಯನಲ್ಲಿ
ಬಸವಣ್ಣ ಮಾಡುವುದು ಅನರ್ಪಿತ. ॥ ೧೧೩ ॥

೪೪೨

ಲಿಂಗಪೂಜೆಯ, ಸ್ವಯಪೂಜೆಯ ನಾ ಮಾಡಿದೆನೆಂದೆನ್ನದ ಪ್ರಸಾದಿ.
ಜಂಗಮಮಾಟದಲ್ಲಿ ನಾ ಮಾಡಿದೆನೆಂದು ಮನದಲ್ಲಿ ನೆನೆಯದ ಪ್ರಸಾದಿ.
ದೂರದೂರದಲ್ಲಿ ಪರಾನುಸಂಗವಾದ ಪ್ರಸಾದಿ.
ವಿಕಸಿತವಾದ ಒಂದೊಂದು ಭಾವದ ತನುವಿರಹಿತವಾದ ಪ್ರಸಾದ ಪ್ರಸಾದಿ.

ಇದು ಕಾರಣ ಕೂಡಲಚೆನ್ನಸಂಗಯ್ಯಾ,
ಲಿಂಗ ಜಂಗಮ ಸನುಮತವಾದ ಪ್ರಸಾದಿ. || ೧೧೪ ||

೪೪೩

[ಅನರ್ಪಿತ] ಭುಂಜಕಂಗೆ ಎಂಜಲುಂಟಲ್ಲದೆ
[ಅರ್ಪಿತ] ಭುಂಜಕಂಗೆ ಎಂಜಲೆಲ್ಲಿಯದು?
ಶಿವ ಭೋಜನವ ಮಾಡಲು ಭಾಜನವಾದಾತಂಗೆ,
ಪ್ರಸಾದಭೋಗಿಗೆ ಎಂಜಲೆಲ್ಲಿಯದು?
ಕರ್ಮಭೋಗೇ ಶಿವಸ್ಯೈವ ಉಪಭೋಗವಿಶೇಷತಃ।
ಅಶರೀರಮಿದಂ ಗ್ರಾಹ್ಯಂ ಲಿಂಗಸಾರಾಯ ಸಂಯುತಂ॥
ಇದು ಕಾರಣ ಕೂಡಲಚೆನ್ನಸಂಗಾ
ನಿಮ್ಮ ಶರಣಂಗೆಂಜಲು ಸೂತಕ ಹೊದ್ದಲೀಯದು. || ೧೧೫ ||

೪೪೪

ಸ್ಥಲಗೆಟ್ಟ ನಿಭ್ರಾಂತಂಗೆ, ಸಾಕಾರಗುಣವಡಗಿದ ಸನ್ಮಾರ್ಗಂಗೆ,
ನಯನ [ತಾ]ಗಿದ ಸುಖದ ಮನಮುಟ್ಟಲೀಯದ ಪ್ರಸಾದಿ [ಗೆ],
ಕರಣೇಂದ್ರಿಯಂಗಳಳಿದವು,
ಕೂಡಲಚೆನ್ನಸಂಗಾ ನಿಮ್ಮ ಪ್ರಸಾದಿಗೆ. || ೧೧೬ ||

೪೪೫

ದೇಹ ಪ್ರಸಾದವೆಂದೆನ್ನೆ, ಅಂತರ್ದೇಹ ಪ್ರಸಾದವೆಂದೆಂಬೆ.
ಜಾಗ್ರ ಪ್ರಸಾದವೆಂದೆನ್ನೆ, ಸ್ವಪ್ನ ಪ್ರಸಾದವೆಂದೆಂಬೆ,
ಅಂತರ್ದೇಹಕ್ಕೆ ಆಕಾರವಿಲ್ಲ, ಸ್ವಪ್ನಕ್ಕೆ ಬೀಜವಿಲ್ಲ.
ಇದು ಕಾರಣ, ಕೂಡಲಚೆನ್ನಸಂಗ ತೋರಿದನಾಗಿ
ಆಕಾಯದಲ್ಲಿ ಮಹಾಘನಪ್ರಸಾದಿ. || ೧೧೭ ||

೪೪೬

ಘನವೆಂಬ ಮನದ ತಲೆವಾಗಿಲಲ್ಲಿ ಸದಾ ಸನ್ನಿಹಿತನಾಗಿಪ್ಪೆಯಯ್ಯಾ.
ಸಕಲಪದಾರ್ಥದ ಪೂರ್ವಾಶ್ರಯವ ಕಳೆದುಬಹ
ಸುಖಂಗಳನವಧರಿಸುತಿಪ್ಪೆಯಯ್ಯಾ,
ನಿನ್ನ ಮುಟ್ಟಿ ಬಂದುದಲ್ಲದೆ ಎನ್ನ ಮುಟ್ಟದೆಂಬ

ಎನ್ನ ಮನದ ನಿಷ್ಠೆಗೆ ನೀನೆ ಒಡೆಯ,
ಕೂಡಲಚೆನ್ನಸಂಗಮದೇವಾ. ॥ ೧೧೮ ॥

೪೪೭

ಮನದ ಮನೋಹರ, ರಮಣೀಯ (ರಮಣ)
ಸುಖದ ಮನದ, ದುಃಖದ ಮನದ,
ಸುಚಿತ್ತ ದುಶ್ಚಿತ್ತದ ಒಡೆಯ. ನೀ ಸಹಿತವಲ್ಲದೇನುವನನುಭವಿಸೆ.
ಕೂಡಲಚೆನ್ನಸಂಗಯ್ಯಾ
ಎನಗೆ ಬೇರೆ ಅನುಭವಿಸಲುಂಟೆ? ॥ ೧೧೯ ॥

೪೪೮

ಅಂಗದಾಪ್ಯಾಯನಕ್ಕೆ ಅರ್ಪಿತವ ಮಾಡುವನಲ್ಲ,
ಆತ ಲಿಂಗದಾಪ್ಯಾಯನಿಯಾದ ಕಾರಣ.
ಅಂಗಗುಣಂಗಳಳಿದು ಲಿಂಗದಲ್ಲಿ ನಿರ್ಲೇಪವಾದ ಶರಣ.
ಅರ್ಪಿತವನರಿಯ, ಅನರ್ಪಿತವನರಿಯ,
ಓಗರವನರಿಯ, ಪ್ರಸಾದವನರಿಯ.
ಇದು ಕಾರಣ ಕೂಡಲಚೆನ್ನಸಂಗಯ್ಯ,
ತಾನರುಹಿಸಿ ಕೊಟ್ಟು, ತನ್ನ ಕಾರುಣ್ಯ ಪ್ರಸಾದವನಿಕ್ಕಿ ಸಲಹಿದನಾಗಿ,
ಆನೇನೆಂದರಿಯೆನಯ್ಯಾ. ॥ ೧೨೦ ॥

೪೪೯

ಇದೇನಯ್ಯಾ ಪ್ರಸಾದ ಒಡನೆ ನ [ಡೆ]ವುತ್ತಿದೆ,
ಇದೇನಯ್ಯಾ ಪ್ರಸಾದ ಒಡನೆ ನುಡಿವುತ್ತಿದೆ,
ಪ್ರಾಣದ ಮೇಲೆ ಲಿಂಗ ಪ್ರತಿಷ್ಠೆಯಾಗಲೊಡನೆ
ಅದು ತಾನೆ ನಡೆವುದು, ಅದು ತಾನೆ ನುಡಿವುದು, ಕಂಡಯ್ಯಾ.
ಎರಡೆಂಬುದಿಲ್ಲಾಗಿ ಮುಂದೆ ನಾನೊಂದೆ
ಕೂಡಲಚೆನ್ನಸಂಗಮದೇವಾ. ॥ ೧೨೧ ॥

೪೫೦

ಶಬ್ದ ಸ್ಪರ್ಶ ರೂಪು ರಸ ಗಂಧ ಪಂಚೇಂದ್ರಿಯ ಮೊದಲಾಗಿ
ನಡೆವವು ಲಿಂಗದತ್ತತ್ತಲೆ.

ಬಂದ ಸುಖ ಲಿಂಗಾರ್ಪಿತವೆಂದು ನಡೆದವು ಲಿಂಗದತ್ತ್ತಲೆ.
ಕೂಡಲಚೆನ್ನಸಂಗಾ ಲಿಂಗ ನೀವಾಗಿ ಶರಣಂಗೆ. || ೧೨೨ ||

೪೫೧

ಅರ್ಪಿತ ವಿಡಿದು ಸಯಿದಾನವಾಯಿತ್ತೊಡಲಿಂಗೆ,
ಅನರ್ಪಿತವಿಡಿದು ಪ್ರಸಾದವಾಯಿತ್ತೀ ಪ್ರಾಣಕ್ಕೆ.
ತನು ಭೋಗಿಸುವುದು ಉಪಾಧಿ [ಕ] ಪ್ರಸಾದ,
ಪ್ರಾಣ ಭೋಗಿಸುವುದು ಪರಿಣಾಮಪ್ರಸಾದ.
ಈ ಭೇದವ ಭೇದಿಸಿ ಪ್ರಾಣಚೈತನ್ಯ ಲಿಂಗವೆಂದರಿದೆನಾಗಿ
ಕೂಡಲಚೆನ್ನಸಂಗನೆಂಬ ಲಿಂಗ ಸ್ವಯವಾಯಿತ್ತು. || ೧೨೩ ||

೪೫೨

ಪ್ರಾಣ ಲಿಂಗಕ್ಕೆ ಆಗಿ, ಲಿಂಗ ಪ್ರಾಣಕ್ಕೆ ಆಗಿ,
ಆಚಾರ ಅನುಭಾವ ದ್ವಿವಿಧ ಸನುಮತವಾಗಿ,
ತನು ಪ್ರಸಾದಕ್ಕೆಯಱಗಿ ಪ್ರಸಾದ ತನುವಿಂಗಾಗಿ,
ಶರೀರಪ್ರೇಮದಿಂ ಸರ್ವಾಂಗ (ಲಿಂಗ) ನೋಡಾ.
ಬಂದುದೆ ಓಗರ ನಿಂದುದೆ ಪ್ರಸಾದ.
ಅಲ್ಲಿ ನಿತ್ಯನಿರಂತರ ಸಾವಧಾನಿ
ಕೂಡಲಚೆನ್ನಸಂಗಾ ನಿಮ್ಮ ಶರಣ. || ೧೨೪ ||

೪೫೩

ಆಲಸ್ಯವಿಲ್ಲವೆ ಲಿಂಗಲೀಯ ಮಾಡುತ್ತಿದ್ದವು ತವತವಗೆ ಪ್ರಾಣಾದಿಗಳು.
ತಾಗಿದ ಸುಖ ಲೇಸು ಲಿಂಗಕ್ಕೆಂಬವಯ್ಯಾ,
ಲಿಂಗಭೋಗೋಪಭೋಗದಲ್ಲಿ ತವತವಗೆ ಪ್ರಾಣಾದಿಗಳು.
ಕಲಸದೆ ಬೆರಸದೆ ವಿವರಿಸಿ ಕಳೆದು, ಸವಿಯ ಸಂಪುಟದ ಸುಖವ
ಕೂಡಲಚೆನ್ನಸಂಗಾ ನಿಮ್ಮ ಶರಣ ಬಲ್ಲ. || ೧೨೫ ||

೪೫೪

ನಿಃಶಬ್ದ ಲಿಂಗಾನುಭಾವಿ, ಶರಣ ಮುಗ್ಧಾನುಭಾವಿ,
ಪ್ರಸಾದಿ ಪರಿಣಾಮಾನುಭಾವಿ.

ಇಂತೀ ತ್ರಿವಿಧಾನುಭಾವಿ
ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೧೨೬ ॥

೪೫೫

ಲಿಂಗಸಂಗಸಾರಾಯ ಸುಸಂಗಿಗಲ್ಲದೆ ವೇದಿಸದಯ್ಯಾ.
ಲಿಂಗಾನುಭಾವಿ ಶರಣನು
ಲಿಂಗದಲ್ಲಿ ನಿರುತನಾಗಿದ್ದ ನೋಡಾ.
ಜಂಗಮಸಾಹಿತ್ಯ ಪ್ರಸಾದದಲ್ಲಿ ಭರಿತನೋಡಾ,
ಕೂಡೆ ಪ್ರಸಾದಿ, ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೧೨೭ ॥

೪೫೬

ಪಾದ ಬಾಹು ಮೊದಲಾಗಿ ಎಲ್ಲ ಪ್ರಸಾದಿಯಾಗಿರಬೇಕು.
ಖೇಚರಭೇದದಿಂ ಗೂಢ ಪ್ರಸಾದಿಯಾಗಿರಬೇಕು.
'ಶಯನಾನ್ಯಂ ನ ಚರೇತ್' ಪ್ರಸಾದಿಯಾಗಿರಬೇಕು.
'ನಾಸಿಕಾನ್ಯಂ ನ ಚರೇತ್' ಪ್ರಸಾದಿಯಾಗಿರಬೇಕು.
'ಕರ್ಣಾನ್ಯಂ ನ ಚರೇತ್' ಪ್ರಸಾದಿಯಾಗಿರಬೇಕು.
'ನೇತ್ರಾನ್ಯಂ ನ ಚರೇತ್' ಪ್ರಸಾದಿಯಾಗಿರಬೇಕು.
'ಜಿಹ್ವಾನ್ಯಂ ನ ಚರೇತ್' ಪ್ರಸಾದಿಯಾಗಿರಬೇಕು.
'ಆರೋಹಿತಾವರೋಹಿತಾನ್ಯಂ ನ ಚರೇತ್' ಪ್ರಸಾದಿಯಾಗಿರಬೇಕು.
ಇದು ಕಾರಣ ಕೂಡಲಚೆನ್ನಸಂಗಯ್ಯನ ಪ್ರಸಾದಿಯು
ಪ್ರಸಾದದಿಂದ ಬದುಕಿದೆನು. ॥ ೧೨೮ ॥

೪೫೭

ತನುವೇ ಭಾಂಡವಾಗಿ, ಮನವೇ ಸಯಿದಾನವಾಗಿ
ಜ್ಞಾನಾಗ್ನಿಯಲೇ ಪದಾರ್ಥವ ಮಾಡೆ,
ಶ್ರೋತ್ರ ನೇತ್ರ ಘ್ರಾಣ ಜಿಹ್ವೆ ಸ್ಪರ್ಶಮೂರ್ತಿಯು ನೀನೆ.
ನಿನ್ನ ಪ್ರಸಾದಕ್ಕೆ ನಮೋ ನಮೋಯೆಂಜೆ
ಕೂಡಲಚೆನ್ನಸಂಗಮದೇವಾ. ॥ ೧೨೯ ॥

೪೫೮

ಕಾಯವೆಂಬ ಘಟಕ್ಕೆ ಕರಣಾದಿಗಳೆ ಸಯಿದಾನ.
ಅದಕ್ಕೆ ಚೈತನ್ಯವೇ ಜಲವಾಗಿ,

ಸಮತೆಯೇ ಮುಚ್ಚಳಿಕೆ, ಧೃತಿಯೆಂಬ ಸಮಿದೆ,
ಮತಿಯೆಂಬ ಅಗ್ನಿಯಲುರುಹಿ,
ಜ್ಞಾನವೆಂಬ ದರ್ವಿಯಲ್ಲಿ ಘಟ್ಟಿಸಿ ಪಕ್ವಕ್ಕೆ ತಂದು,
ಭಾವದಲ್ಲಿ ಕುಳ್ಳಿರಿಸಿ, ಪರಿಣಾಮ [ದೋ]ಗರವ ನೀಡುವೆ
ಕಾಣಾ ಕೂಡಲಚೆನ್ನಸಂಗಮದೇವಾ. || ೧೩೦ ||

೪೫೯

ಜಲನಿಧಿಶಿಖರದ ನಡುವೊಂದು ದ್ರವ್ಯದ ತಳದಲ್ಲಿ
ಶಿವಲೋಕ ಕೇಳಿರಣ್ಣಾ !
ದ್ರವ್ಯಪಾಕದಲ್ಲಿ ತಮ್ಮ ಸುಖವನರಿಯದೆ
ಶಿವಲೋಕದೊಳಗೆ ಬಳಲುತ್ತಿರ್ದರೆಲ್ಲಾ.
ದ್ರವ್ಯಶುದ್ಧ, ಪಾಕಶುದ್ಧ
ಕೂಡಲಚೆನ್ನಸಂಗನ ಪ್ರಸಾದಿಗೆ. || ೧೩೧ ||

೪೬೦

ಪ್ರಸಾದ ಪ್ರಸಾದವೆಂಬರು ಪ್ರಸಾದದ ಕುಳವೆಂತಿಪ್ಪುದೆಂದರೆ:
ಕೊಟ್ಟವ ಗುರುವಲ್ಲ, ಕೊಂಡವ ಶಿಷ್ಯನಲ್ಲ,
ಅಂಜಿಕೆಯಿಂದ ಕೊಂಡುದು ಎಂಜಲ ಪ್ರಸಾದ,
ಅದೆಂತೆಂದರೆ:
ಈಡಾಪಿಂಗಳನಾಳವಮು ಕಟ್ಟಿ, ಸುಷುಮ್ನಾನಾಳದಲ್ಲಿ ಇಪ್ಪ ಪರಿಚಾರಕನು
ಅಗ್ನಿಯೆಂಬ ಸುವ್ವಾರಸನೆಬ್ಬಿಸಲು,
ಮಸ್ತಕವಲ್ಲಿ ಇದ್ದ ಉತ್ತಮ ಪ್ರಸಾದ ದಾಳಾದೂಳಿಯೆನುತ್ತ (ದಳದಳನಿಳಿಯುತ್ತ?)
ಮಹಾಘನವೆಂಬ ಪ್ರಸಾದಿಯೆದ್ದು,
ಮುಬ್ಯಾಂತು ಉಂಡು ಭೋಗಿಸ ಬಲ್ಲರೆ ನಿತ್ಯಪ್ರಸಾದಿ.
ಅದಲ್ಲದೆ, ಧನವುಳ್ಳವರ ಕಂಡು ಬೋಧಿಸಿ ಬೋಧಿಸಿಕೊಂಬ
ಪ್ರಸಾದಿಗಳ ಮೆಚ್ಚುವನೆ ಕೂಡಲಚೆನ್ನಸಂಗಮದೇವ? || ೧೩೨ ||

## ಪ್ರಾಣಲಿಂಗಿಯ ಶರಣಸ್ಥಲ

೪೬೧

ನಾಲ್ಕು ಗ್ರಾಮದ ಪಟ್ಟಣಕ್ಕೆ ಪಂಚೈವರ ಕಾಹು.
ಅವರ ಸಂಚವಿಡಿದು ಲಿಂಗಾರ್ಚನೆಯ ಮಾಡಿದರೆ
ಲೋಕದ ಬಳಕೆ ಕಂಡಯ್ಯಾ.
ಪಂಚೈವರ ಪಂಚಸ್ಥಳವಳಿದು ಏಕಸ್ಥಳವಾಗಿ
ನವನಾಳದ ಭೇದದ ಪರಿಯರಿದಡೆ ಲಿಂಗೈಕ್ಯ ನೋಡಾ.
ನಾಳ ಮಧ್ಯದಲ್ಲಿಪ್ಪ ಜೀವಪ್ರಾಣನ ನೆಲೆಯನರಿದಡೆ
ಕೂಡಲಚೆನ್ನಸಂಗನೊಬ್ಬ ಸಾಹಿತ್ಯವಾಗಿಹನು. ॥ ೧೩೩ ॥

೪೬೨

ಗ್ರಾಮಮಧ್ಯದ ಧವಳಾರದೊಳಗೆ ಎಂಟು ಕಂಬ,
ಒಂಬತ್ತು ಬಾಗಿಲ ಶಿವಾಲ್ಯವಿರುತಿರಲು,
ಮಧ್ಯಸ್ಥಾನದಲ್ಲಿದ್ದ ಸ್ವಯಂಭುನಾಥನನೇನೆಂದರಿಯರಲ್ಲಾ.
ಕಲ್ಲಿನಾಥನ ಪೂಜಿಸಿ ಸ್ವಯಂಭುನಾಥನನೊಲ್ಲವೆ
ಎಲ್ಲರೂ ಮರುಳಾದರು ನೋಡಾ.
ಮೆಲ್ಲ ಮೆಲ್ಲನೆ ಸ್ವಯಂಭುನಾಥನು ತನ್ನ ತಪ್ಪಿಸಿಕೊಂಡು,
ಕಲ್ಲಿನಾಥನ ತೋರಿದ.
ಶಿವಾಲ್ಯದೊಳಗಣ ಮಧ್ಯಸ್ಥಾನವನರಿದು
ಗರ್ಭಗೃಹವ ಹೊಕ್ಕಡೆ ಕಲ್ಲಿನಾಥ ನಾಸ್ತಿ.
ಕೂಡಲಚೆನ್ನಸಂಗನೆಂಬ ಸ್ವಯಂಭು ಇರುತ್ತಿರಲು
ಎತ್ತಲೆಂದರಿಯರಲ್ಲಾ. ॥ ೧೩೪ ॥

೪೬೩

ಆಧಾರವುಳ್ಳನ್ನಕ್ಕ ಪ್ರಾಣಲಿಂಗಿಯಲ್ಲ,
ಆಧೇಯವುಳ್ಳನ್ನಕ್ಕ ಲಿಂಗಪ್ರಾಣಿಯಲ್ಲ.
ಇಷ್ಟಲಿಂಗದ ಕಷ್ಟಪೂಜಕರೆಲ್ಲರೂ
ಆ ದೃಷ್ಟಲಿಂಗದ ಘನವ ತಾವೆತ್ತಬಲ್ಲರು?
ಇಷ್ಟವು ಕಷ್ಟವು ನಷ್ಟವಾದರೆ
ಕೂಡಲಚೆನ್ನಸಂಗನೆಂಬುದೇ ದೃಷ್ಟ. ॥ ೧೩೫ ॥

೪೬೪

ಅರುಹಿನ ಮರಹಿನ ಆಪ್ಯಾಯನವ ಲಿಂಗಕ್ಕೆ ಕೊಡುವ
ಗುರುದ್ರೋಹಿಯನೇನೆಂಬೆ? ಲಿಂಗದ್ರೋಹಿಯನೇನೆಂಬೆ?
ಇಷ್ಟಲಿಂಗಮವಗ್ರಾಹೀ ಪ್ರಾಣಲಿಂಗೇನ ಸಂಯುತಃ|
ನಿಮಿಷಾರ್ಧವಿಯೋಗೇನ ಮಹಾಪಾಪಂ ತು ಸಂಭವೇತ್||
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ ಅರಿವಿನ ಮರಹಿನ ಭಕ್ತಿ,
ಬಾಯಲ್ಲಿ ಹುಡಿಯ ಹೊಯ್ದು ಹೋಯಿತ್ತು. || ೧೩೬ ||

೪೬೫

ಅರ್ಪಿತ ರೌರವ ನರಕವೆಂದುದು ಗುರುವಚನ
ಅನರ್ಪಿತ ರೌರವನರಕವೆಂದುದು ಗುರುವಚನ.
ಭುಂಜನೆ ಮಾಡಿದ ರುಚಿಯು ಲಿಂಗಕ್ಕೆಂಬ ಕರ್ಮಿಯ,
ತಾಗಿದ ಸುಖವು ಲಿಂಗಕ್ಕೆಂಬ ಗುರುದ್ರೋಹಿಯ ಮಾತ, ಕೇಳಲಾಗದು.
ಸರ್ವಾವಸ್ಥಾಗತಾಃ ಪ್ರಾಣಾಃ ಭಾಜನಂ ಭೋಜನಂ ತಥಾ|
ಹಸ್ತಲಿಂಗೇಽಪ್ರತಿಗ್ರಾಹ್ಯ ನರಕೇ ಕಾಲಮಕ್ಷಯಂ||
ಸಂಕಲ್ಪಂ ಚ ವಿಕಲ್ಪಂ ಚ ಭಾವಾಭಾವ ವಿವರ್ಜಿತಃ|
ನಾಸ್ತ್ಯೇಂದ್ರಿಯಾಂತಃಕರಣಂ ತೇನೈವ ಸಹಭೋಜನಂ|| ಎಂದುದಾಗಿ
ಲಿಂಗಭಾಜನದಲ್ಲಿ ಸಹಭೋಜನವ ಮಾಡಿದರೆ
ಇಹಪರವಿಲ್ಲೆಂದ ಕೂಡಲಚೆನ್ನಸಂಗಮದೇವ. || ೧೩೭ ||

೪೬೬

ಶರಣಭರಿತ ಲಿಂಗ ಎಲ್ಲಾ ಎಡೆಯಲ್ಲಿ ಉಂಟು.
ಲಿಂಗಭರಿತ ಶರಣನಪೂರ್ವ ನೋಡಾ.
ಗಮನವುಳ್ಳುದೇ ಜಂಗಮಲಿಂಗ, ನಿರ್ಗಮನಿಯಾದುವೆ ಲಿಂಗಜಂಗಮ.
ಅದರ ಸಂಯೋಗ ಸಂಬಂಧವ ವೇದಿಸಿ ನಡೆಯಬಲ್ಲರೆ,
ಕೂಡಲಚೆನ್ನಸಂಗಮದೇವನೆಂಬೆನು. || ೧೩೮ ||

೪೬೭

ಕಾಮವ ತೊರೆದೆವೆಂಬ ಗಾವಿಲ ಮನುಜರು ನೀವು ಕೇಳಿ:
ಕಾಮವಳವಟ್ಟಿತ್ತಯ್ಯಾ ಬಸವಣ್ಣಂಗೆ,
ಕಂಗಳ ಕಾಮಿಯಯ್ಯಾ ಪ್ರಭುದೇವರು,

ಸರ್ವಾಂಗ ಕಾಮಿಯಯ್ಯಾ ಮಡಿವಾಳನು,
ಈ ಮೂವರು ಕಾಮಸನ್ನಿಹಿತರು ಕಾಣಾ.
ಕೂಡಲಚೆನ್ನಸಂಗಮದೇವಾ. ॥ ೧೩೯ ॥

೪೬೮

ಆಯತಲಿಂಗದಲ್ಲಿ ಆಗಾಗಿ ಭಕ್ತನೆನಿಸೂದಯ್ಯಾ.
ಸ್ವಾಯತಲಿಂಗದಲ್ಲಿ ಆಗಾಗಿ (ಯುಕ್ತ)ನೆನಿಸೂದಯ್ಯಾ.
ಸಂಯೋಗದಲ್ಲಿ ಆಗಾಗಿ ಶರಣನೆನಿಸೂದಯ್ಯಾ.
ಪ್ರಾಣಕ್ಕೆ ಪ್ರಾಣವಾಗಿ ಉಭಯಪ್ರಾಣವೆಂದೆನಿಸೂದಯ್ಯಾ.
ಘನಕ್ಕೆ ಘನ ಮನವಾದಲ್ಲಿ ಮನವೇದ್ಯನೆಂದೆನಿಸೂದಯ್ಯಾ,
ಕೂಡಲಚೆನ್ನಸಂಗಯ್ಯಾ, ಲಿಂಗ ಸರ್ವಾಂಗದಲ್ಲಿ ಅನುಭಾವದಿಂದ
ಅಧಿಕನೆಂದೆನಿಸೂದಯ್ಯಾ. ॥ ೧೪೦ ॥

೪೬೯

ಗುರುಲಿಂಗ ಉದಯವಾದ ಉದಯವ ನೋಡಿರಯ್ಯಾ.
ಹಿಂದೆ ಕತ್ತಲೆ ಮುಂದೆ ಬೆಳಗಾಯಿತ್ತು!
ಬೆಳಗು ಬೆಳದಿಂಗಳಾಯಿತ್ತು.
ಕೂಡಲಚೆನ್ನಸಂಗಯ್ಯನಲ್ಲಿ
ಒಲವಿನ ಉದಯದ ದರ್ಪಣದಿಂದ. ॥ ೧೪೧ ॥

೪೭೦

ಒಂದೆಂಬೆನೆ? ಆಕಾರವಿಲ್ಲ ಎರಡೆಂಬೆನೆ? ದರ್ಶನ ನಿರ್ಣಯವಾಗದು..
ಮೂರೆಂಬೆನೆ? ಮೂರ್ತಿಯಾಗಿ ತೋರದು.
ಸಗುಣ ನಿರ್ಗುಣ, ಸ್ಥೂಲ ಸೂಕ್ಷ್ಮವಾದುದು, ಅಲ್ಲದುವೇನಯ್ಯಾ?
ಕೂಡಲಚೆನ್ನಸಂಗಯ್ಯಾ, ದರ್ಪಣದೊಳಗಣ ಪ್ರತಿಬಿಂಬವಂತೆ
ಭಿನ್ನದಲರಸೂದೇನಯ್ಯಾ? ॥ ೧೪೨ ॥

೪೭೧

ನೋಡುವ ನೋಟ ನೀವೆಂದರಿವೆ,
ಕೇಳುವ ಶ್ರೋತ್ರ ನೀವೆಂದರಿವೆ,
ವಾಸಿಸುವ ಘ್ರಾಣ ನೀವೆಂದರಿವೆ,

ಮುಟ್ಟುವ ಸ್ಪರ್ಶನ ನೀವೆಂದರಿದೆ,
ರುಚಿಸುವ ಜಿಹ್ವೆ ನೀವೆಂದರಿದೆ,
ಎನ್ನ ಕರಣಂಗಳು ನಿಮ್ಮ ಕಿರಣಂಗಳಾಗಿ.
ಕೂಡಲಚೆನ್ನಸಂಗಯ್ಯಾ ನಾ ನಿಮ್ಮ ಬೇಡಲಿಲ್ಲ,
ನೀ ಕೊರ್ತು ಕೊಡಲಿಲ್ಲಾಗಿ. || ೧೪೩ ||

೪೭೨

ಲಿಂಗ ಮುಂತಾಗಿಯೇ ನಡೆವನು ಶರಣನು,
ಲಿಂಗ ಮುಂತಾಗಿಯೇ ನುಡಿವನು ಶರಣನು,
ಲಿಂಗ ಮುಂತಾಗಿಯೇ ತೃಪ್ತನು ಶರಣನು,
ಲಿಂಗಕಾಯ ಶರಣ, ಶರಣಕಾಯಲಿಂಗ.
ಇದು ಕಾರಣ ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣ ಸರ್ವಾಂಗ ಲಿಂಗಿ. || ೧೪೪ ||

೪೭೩

ಪರುಷ ಮುಟ್ಟಲು ಕಬ್ಬುನ ಹೊನ್ನಾದಂತೆ
ಪುಣ್ಯ ಪಾಪಗಳಿಲ್ಲ, ಸ್ವರ್ಗನರಕಗಳಿಲ್ಲಯ್ಯಾ ನಿಮ್ಮವರಿಗೆ.
ಕೂಡಲಚೆನ್ನಸಂಗಾ ನಿಮ್ಮ ಶರಣ[ರು] ಭವರಹಿತರು. || ೧೪೫ ||

೪೭೪

ದೀವಿಗೆಯೊಳಗಣ ಜ್ಯೋತಿಯ ದಿವಿಜರೆತ್ತಬಲ್ಲರು?
ಮನೋಜಲ ಹರಿವ ಠಾವನು ಮನೋಹರನೆ ಬಲ್ಲ.
ತನುವಿನ ಸ್ನೇಹಗುಣವ ದೇಹಿಕನೆ ಬಲ್ಲ.
ಅಷ್ಟತನು ಅಣುವಿನ ಭೇದವನು
ಕೂಡಲಚೆನ್ನಸಂಗನಲ್ಲಿ ಆ ಲಿಂಗಿಯೇ ಬಲ್ಲನು. || ೧೪೬ ||

೪೭೫

ಎಲ್ಲಾ ಗುಣಂಗಳನೊಲ್ಲೆನೆಂದು ಕಳೆದು, ಪ್ರಾಣಲಿಂಗದಲ್ಲಿ
ಪ್ರವೇಶವ ಮಾಡಿದನಯ್ಯಾ.
ಅಯುತ ಸ್ವಾಯುತದಿಂದ ನೋಡಿ ಲಿಂಗಗಂಭೀರ ನಿಸ್ಸಂಗಿ ನೋಡಾ.
ಮಾಟ ಕೂಟವೆಂಬ ಭ್ರಾಂತಳಿದಾ ಮನದಲ್ಲಿ ತ್ರಿವಿಧವ ನೆಮ್ಮಿಸಿ.
ಸಾಹಿತ್ಯವಾದ ಕೂಡಲಚೆನ್ನಸಂಗಾ ನಿಮ್ಮ ಶರಣ. || ೧೪೭ ||

೪೭೬

ಕಂಗಳ ಅಂಗದಲ್ಲಿ ಲಿಂಗ ಅನಿಮಿಷವಾಗಿಹುದೆ [ನೇತ್ರ]ಕಾಯವು.
ಶ್ರೋತ್ರ ಸೊಗಸಿನ ಘನಾನುಭಾವದಲ್ಲಿಹುದೆ ಶ್ರೋತ್ರಕಾಯವು,
ಮನ ಪ್ರಾಣ ಸಂಯೋಗದಲ್ಲಿ,
ಕೂಡಲಚೆನ್ನಸಂಗನಲ್ಲಿ ನಿಜವಾಗಿಹುದೆ ಶರಣಕಾಯವು. || ೧೪೮ ||

೪೭೭

ಪಿಂಡದ ಮೇಲೊಂದು ಪಿಂಡವನಿರಿಸಿ,
ಆ ಪಿಂಡದ ಮೇಲೊಂದು ಲಿಂಗವ ನಿಕ್ಷೇಪಿಸಿ,
ಮತ್ತೊಂದು ಪಿಂಡವ ನಿಕ್ಷೇಪಿಸಿ, ಆ ಮತ್ತೊಂದು
ಪಿಂಡದ ಮೇಲೆ ಲಿಂಗವನಿರಿಸೆ
ಪಿಂಡ ಪಿಂಡವನರಿಯದು, ಲಿಂಗ ಲಿಂಗವನರಿಯದು.
ಒಳಗಿದ್ದ ಲಿಂಗಕ್ಕೆ ಅದ್ಭುತ ಸಂಕಟವಾಯಿತ್ತು.
ಪಿಂಡಸ್ಥಂ ಪಿಂಡಮಧ್ಯಸ್ಥಂ, ಪಿಂಡೇನ ತು ಘಟೀಕೃತಂ|
ಪಿಂಡೇನ ಪಿಂಡಿತಂ ಪಿಂಡಂ ಪಿಂಡರೂಪಮುದಾಹೃತಂ||
ಯತಃ ಶಿವಮಯಂ ಪಿಂಡಂ ಸರ್ವತತ್ವಾಲಯಂ ವಿದುಃ|
ಇದು ಕಾರಣ ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣನು ಅಕಾಯಚರಿತ್ರನು. || ೧೪೯ ||

೪೭೮

ಪದ್ಮ ಪತ್ರದಲ್ಲಿ ಪದಸ್ಥರಿಬ್ಬರು ಕಾದುಕೊಂಡು ಇದ್ದಾರು.
ಪದ್ಮ ಬೆಂದು ಪತ್ರ ಉಳಿಯಿತ್ತಯ್ಯಾ.
ಆ ಪತ್ರದ ಭೇದವ ಕೂಡಲಚೆನ್ನಸಂಗಾ.
ನಿಮ್ಮ ಶರಣಬಲ್ಲ. || ೧೫೦ ||

೪೭೯

ಆಹ್ವಾನಿಸುವಲ್ಲಿ ಪ್ರಸೂತಿಕಾಯ, ಸ್ವತಂತ್ರನೆಂತೆಂಬೆ?
ವಿಸರ್ಜಿಸುವಲ್ಲಿ ಲಿಂಗಸಂತುಷ್ಟನೆಂತೆಂಬೆ?
ಆಧಾರಾಧೇಯದ ಸುಳುಹಲ್ಲ, ಆಧಾರಾಧೇಯ[ದ] ಭಾವವಲ್ಲ.
ಬಿಂದು ಕ್ರೀಯನುಂಡು ಬಿಂದು ತಾನಾದುದು
ಪ್ರಾಣಾಪಾನದ ಅನುವಿನ ಅನುಸಂಧಾನ[ದ] ಮನವು

ಅಸಮಾನ ತಾಳೋಷ್ಠ ಶಬ್ದಸಂಚಿತನಲ್ಲ,
ಉಭಯಪ್ರಸೂತಿ ಕಾಲರಹಿತ
ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೧೫೧ ॥

೪೮೦

ಅಮಳಸಿಂಹಾಸನವನಿಕ್ಕಿ ಪದುಮದೋವರಿಯಲ್ಲಿ
ಹದುಳ ಕುಳ್ಳಿರಿಸುವೆನಯ್ಯಾ.
ಜ್ಞಾನಜ್ಯೋತಿಯ ಬೆಳಗಿನಲ್ಲಿ ಎಡೆಯಾಡು ಶಿವನೆ!
ರುದ್ರಭೂಮಿಗೆ ಎಡೆಯಾಡದಿರು ಹರನೆ!
ಹಡೆದ ತಾಯಿ ತಂದೆ ಮುನ್ನಿಲ್ಲ,
ಹುಟ್ಟಿದ ಶಿಶು, ಮೂಲ ಕಡುದೇಶಿಗನಯ್ಯಾ,
ನಮ್ಮ ಕೂಡಲಚೆನ್ನಸಂಗಮದೇವ. ॥ ೧೫೨ ॥

೪೮೧

ಎನ್ನ ಮನವು ನಿಮ್ಮಲ್ಲಿ ನಟ್ಟು ತೆಗೆಯಲಿಬಾರದ ಬೆರಗು ನೋಡಯ್ಯಾ.
ಇಹವೆಂಬುದನರಿಯೆ, ಪರವೆಂಬುದನರಿಯೆ,
ಪರಮಾನಂದದಲ್ಲಿದ್ದೆ ನೋಡಯ್ಯಾ.
ಪರಮನ ನೆನಹೆ ನೆನಹಾಗಿ ಪರಮಸುಖದಲ್ಲಿ ಸುಖಿಸುತ್ತಿದ್ದೆನಯ್ಯಾ.
ಅಪ್ರತಿಮ ಕೂಡಲಚೆನ್ನಸಂಗಯ್ಯಾ ಎನ್ನ ಬೆರಗಿನ ಭೇದವ
ನೀನೆ ಬಲ್ಲೆಯಯ್ಯಾ. ॥ ೧೫೩ ॥

೪೮೨

ಅರಿವಿನ ತೃಪ್ತಿಗೆ ಅನುಭಾವವಾಶ್ರಯ.
ಲಿಂಗದ ಅನುಭಾವದಿಂದ ನಿಮ್ಮ ಕಂಡೆ.
ನಿಮ್ಮ ಕಂಡೆನ್ನ ಮರೆದೆ, ಕೂಡಲಚೆನ್ನಸಂಗಮದೇವಾ. ॥ ೧೫೪ ॥

೪೮೩

ಕಾಯ ದೇಗುಲವಾಗಿ, ಪ್ರಾಣ ಲಿಂಗವಾಗಿ,
ಭಾವ ಭಾವಿಸುತ್ತಿದ್ದಿತ್ತು ನೋಡಾ!
ದೇಹೋ ದೇವಾಲಯಃ ಪ್ರೋಕ್ತೋ ಜೀವೋ ದೇವಃ ಸದಾಶಿವಃ।
ತ್ಯಜೇದಜ್ಞಾನ ನಿರ್ಮಾಲ್ಯಂ ಸೋಽಹಂ ಭಾವೇನ ಪೂಜಯೇತ್॥

ಎಂದುದಾಗಿ–ಇದು ಕಾರಣ ಕೂಡಲಚೆನ್ನಸಂಗಯ್ಯ.
ಮಹವ ನುಂಗಿದ ಮಹಂತನ ಬೆರಗು. ॥ ೧೫೫ ॥

## ಪ್ರಾಣಲಿಂಗಿಯ ಐಕ್ಯಸ್ಥಲ

೪೮೪

ಅಂಗ ಲಿಂಗ, ಲಿಂಗ ಅಂಗವೆಂದರಿದ ಬಳಿಕ, ಅಲ್ಲಿಯೇ ಕಾಣಿರೊ!
ಬೇರೆ ತೋರಲಿಲ್ಲ, ಉಂಟೆಂದರಸಲಿಲ್ಲ, ಅಲ್ಲಿಯೇ ಕಾಣಿರೊ!
ಕೂಡಲಚೆನ್ನಸಂಗಯ್ಯಲಿಂಗ ನಿರುತರ ಅಲ್ಲಿಯೇ ಕಾಣಿರೊ. ॥ ೧೫೬ ॥

೪೮೫

ಅಂಗಸಂಬಂಧ ಲಿಂಗವಾದ ಲಿಂಗೋಪಜೀವಿಯಾಗಿರಬೇಕು.
ಲಿಂಗಸಂಬಂಧ ಅಂಗವಾದ ಬಳಿಕ ಲಿಂಗೋಪಜೀವಿಯಾಗಿರಬೇಕು,
ಇದಾವ ಸಂಬಂಧವಿಲ್ಲದೆ ಆಶ್ರಯ ಗುಣದಿಂದ ಲಾಂಛನವಾದುದೇನಯ್ಯಾ?
ಲಾಂಛನಂ ದುರ್ಲಭಂ ಚೈವ ಸ್ವಾನುಭಾವೋ ಹ್ಯತಃ ಪರಂ।
ದುರ್ಲಭಂ ಶಿವತತ್ವಂ ಚ ಪ್ರಾಣಲಿಂಗಮತಃ ಪರಂ॥
ಎಂದುದಾಗಿ, ಆಶ್ರಯುದ ಪರಿಯಲ್ಲ; ನಿರಾಶ್ರಯದ ಪರಿಯಲ್ಲ,
ಲಿಂಗಸಾರಾಯ ಶರಣ.
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ
ಮಹದ ಅನುಭಾವ, ನಿರ್ಗಮನವಾದ ಬಳಿಕ. ॥ ೧೫೭ ॥

೪೮೬

ನಚ್ಚು ಬಿಚ್ಚದೆ ಮನದಲಚ್ಚೊತ್ತಿದಂತಿದ್ದಿತ್ತು,
ಲಿಂಗವೆನ್ನದು, ಜಂಗಮವೆನ್ನದು, ಪ್ರಸಾದವೆನ್ನದು.
ಅದು ತಾನಾಗಿ ತಾನೆ ಭರಿತ
ಕೂಡಲಚೆನ್ನಸಂಗಾ ಲಿಂಗೈಕ್ಯವು. ॥ ೧೫೮ ॥

೪೮೭

ಅಲ್ಲಿಂದತ್ತ ಲಿಂಗಪೂಜಕನೆನಿಸುವೆ, ಅಭ್ಯಾಸವಿಡಿದಲ್ಲಿಂದತ್ತ ಲಿಂಗಭಕ್ತನೆನಿಸುವೆ.
ಸದಾಚಾರವಿಡಿದಲ್ಲಿಂದತ್ತ ಲಿಂಗಪ್ರಸಾದಿಯೆಂದೆನಿಸುವೆ.
ಅರ್ಪಿತವಿಡಿದಲ್ಲಿಂದತ್ತ ಪ್ರಾಣಲಿಂಗಿಯೆಂದೆನಿಸುವೆ.
ಪ್ರಾಣಲಿಂಗವಿಡಿದಲ್ಲಿಂದತ್ತ ಲಿಂಗೈಕ್ಯನೆಂದೆನಿಸುವೆ.
ಉಭಯಜ್ಯೋತಿವಿಡಿದಲ್ಲಿಂದತ್ತ
"ಸರ್ವಾಂಗಲಿಂಗೇನ ಸಹ ಮೋದತೇ" (ಎಂದೆನಿಸುವೆ.)
ಇದು ಕಾರಣ, ಕೂಡಲಚೆನ್ನಸಂಗ
ಲಿಂಗವಿಡಿದಲ್ಲಿಂದತ್ತತ್ತ. || ೧೫೯ ||

೪೮೮

ಕಕ್ಷೆ ಕರಸ್ಥಳ ಕಂಠ ಉತ್ತಮಾಂಗ ಮುಖಸೆಜ್ಜೆ ಅಂಗಸೋಂಕೆಂಬವು
ಬಹಿರಂಗದ ಶೃಂಗಾರ.
ಬ್ರಹ್ಮರಂಧ್ರ ಭ್ರೂಮಧ್ಯ ನಾಸಿಕಾಗ್ರ ಚೌಕಮಧ್ಯವೆಂಬವು
ಅಂತರಂಗದ ಶೃಂಗಾರ.
ಬ್ರಹ್ಮರಂಧ್ರದಲ್ಲಿ ಲಿಂಗಸ್ವಾಯತ,
ಭ್ರೂಮಧ್ಯದಲ್ಲಿ ಜಂಗಮಸ್ವಾಯತ,
ನಾಸಿಕಾಗ್ರದಲ್ಲಿ ಪ್ರಸಾದಸ್ವಾಯತ,
ಚೌಕಮಧ್ಯದಲ್ಲಿ ಅನುಭಾವಸ್ವಾಯತ.
ಇಂತೀ ಚತುರ್ವಿಧ ಸಾಹಿತ್ಯವಾಗಿ
ನೋಡಿತ್ತೇ ಪಾವನ, ಮುಟ್ಟಿತ್ತೇ ಅರ್ಪಿತ
ಕೂಡಲಚೆನ್ನಸಂಗಮದೇವಾ. || ೧೬೦ ||

೪೮೯

ಸ್ಥೂಲ ಪಂಚಭೂತಂಗಳಲ್ಲಿ ಇಷ್ಟಲಿಂಗಪ್ರತಿಷ್ಠೆ,
ಸೂಕ್ಷ್ಮ ಪಂಚಭೂತಂಗಳಲ್ಲಿ ಪ್ರಾಣಲಿಂಗ ಪ್ರತಿಷ್ಠೆ,
ಕಾರಣ ಪಂಚಭೂತಂಗಳಲ್ಲಿ ತೃಪ್ತಿಲಿಂಗ ಪ್ರತಿಷ್ಠೆ.
ಇಂತೀ ಸ್ಥೂಲ ಸೂಕ್ಷ್ಮ ಕಾರಣ ಮಹವು.
ಮಹದ ಹೃದಯದಲ್ಲಿ ಕೋನೆದೋರದಿಪ್ಪ ಜ್ಯೋತಿಯ
ನಿಮ್ಮ ಶರಣನ ಸರ್ವಾಂಗದಲ್ಲಿ ಕಂಡೆನು
ಕೂಡಲಚೆನ್ನಸಂಗಮದೇವಾ. || ೧೬೧ ||

೪೯೦

ಇಷ್ಟಲಿಂಗಕ್ಕೆ ಮಜ್ಜನ, ಪ್ರಾಣಲಿಂಗಕ್ಕೆ ಭೋಜನ,
ತೃಪ್ತಿಲಿಂಗದ ಮುಖದಲೆ ಪರಿಣಾಮ ನೋಡಯ್ಯಾ.
ಕಾಮಿತ ಕಲ್ಪಿತ ಭಾವಿತ ಅರ್ಪಿತ ತಾನಲ್ಲ.
ಅಲ್ಲಲ್ಲಿಗೆ ಅವಧಾನದಾಯತವ ನೋಡಯ್ಯಾ.
ಅವಧಾನದ ಕೊನೆಯಲಿಹ ಸುಯಿಧಾನದ ಲಿಂಗವನು
ನಿಮ್ಮ ಶರಣನ ಸರ್ವಾಂಗದಲ್ಲಿ ಕಾಣಬಹುದು
ಕೂಡಲಚೆನ್ನಸಂಗಮದೇವಾ. || ೧೬೨ ||

೪೯೧

ಆಯತಲಿಂಗದಲ್ಲಿ ಆಚಾರವರತು,
ಸ್ವಾಯತಲಿಂಗದಲ್ಲಿ ವಿಚಾರವರತು,
ಸನ್ನಹಿತಲಿಂಗದಲ್ಲಿ ಅನುಭಾವವರತು,
ಈ ತ್ರಿವಿಧದಲ್ಲಿ ತ್ರಿವಿಧವರತಡೆ
ಒಂದಲ್ಲದೆರಡುಂಟೆ ಕೂಡಲಚೆನ್ನಸಂಗಾ ನಿಮ್ಮಲ್ಲಿ? || ೧೬೩ ||

೪೯೨

ಬಹಿರಂಗದ ಆರೋಗಣೆಯ ರುಚಿ ಅರಿಯಬಾರದು,
ಏನು ಕಾರಣವೋ ಲಿಂಗಯ್ಯ?
ಅಂತರಂಗದ ಆರೋಗಣೆಯ ಮಹಂತನೇ ಬಲ್ಲನೊ ಲಿಂಗಯ್ಯ.
ಅರಿದು ಮರದಂಗೆ ವಿರೋಧವೆ?
ಸಜ್ಜಕ್ಕೆ (ಸಜ್ಜನಕ್ಕೆ?) ಉಪಚಾರವುಂಟೆ ಲಿಂಗಯ್ಯ?
ಅಲ್ಲಿ ಸೋಂಕಿದ ಬಳಿಕ ನೋಡಲಿಲ್ಲ, ಕೂಡಲಚೆನ್ನಸಂಗಯ್ಯನ. || ೧೬೪ ||

೪೯೩

ಲೋಕದ ನುಡಿ ತನಗೆ ಡೊಂಕು, ತನ್ನ ನುಡಿ ಲೋಕಕ್ಕೆ ಡೊಂಕು.
ಊರ ಹೊದ್ದ, ಕಾಡ ಹೊದ್ದ, ಆಪ್ಯಾಯನ ಮುಕ್ತ ವಿರಹಿತ ಶರಣ.
ಕಪಾಲದೊಳಗೆ ಉಲುಹಡಗಿದ,
ಕೂಡಲಚೆನ್ನ[ಸಂಗ]ಯ್ಯನಲ್ಲಿ ಒಂದಾದ, ಲಿಂಗೈಕ್ಯವು. || ೧೬೫ ||

೪೯೪

ಇನಿಗಡಲ ಅಣುಗನ ಕೂಡಿದ ಪತಂಗನು
ತಾಮಸದಿವಸವ ಮರೆದಂತೆ.
ಸತ್ವಗುಣ ರಜದಲಡಗಿ, ರಜದ ಗುಣ ತಮದಲಡಗಿ,
ತಮದ ಗುಣ ರುದ್ರನೊಳಡಗಿ.
ರುದ್ರನ ಗುಣ ಅಕ್ಷರಾಕ್ಷರ ಪರಶಿವನೊಳಡಗಿ,
ಅಕ್ಷರಾಣಿ ಚ ಮಾತ್ರಾಣಿ ಸರ್ವೇ ಬಿಂದು ಸಮಾಶ್ರಿತಾಃ।
ಬಿಂದುರ್ಭಿದ್ಯತೇ ನಾದೇನ ಸುನಾದಸ್ತೇನಭಿದ್ಯತೇ॥
ಎಂದುದಾಗಿ, ಇದು ಕಾರಣ ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣ ಬಲ್ಲನಲ್ಲದೆ, ಅಜ್ಞಾನಿಗಳೆತ್ತ ಬಲ್ಲರು? ॥ ೧೬೬ ॥

೪೯೫

ರೇಚಕ ಪೂರಕ ಕುಂಭಕವೆಂಬ ಗರುಡವಾಯುವ ಸೋಂಕ ತೆಗೆದು,
ಬ್ರಹ್ಮಾಂಡದಲ್ಲಿ ಕೀಲಿಟ್ಟು, ದ್ವಾರಕವಾಟವನೆ ತೆರೆದು ಅಂದೋಳಿಸುತ್ತಿದ್ದಿತ್ತು,
ಪರಶಿವಯೋಗ.
ಬಾಲ ಕುಮಾರ ಪ್ರೌಢ ಭಾಗದಲ್ಲಿ ಕಾಳಂ ಪೊಕ್ಕಿತ್ತು.
ಕಾಳಾಂದರದಿಂದತ್ತತ್ತಲಾರು ಬಲ್ಲರೊ?
ಅಪ್ಪಿನ ಘಟ ಸೋಂಕಿ ಹೊತ್ತುಕೊಂಡು ಸುಳಿದ ಜಗದೊಳಗೆ,
ಅದು ಬಿರಿಬಿರಿದು ನಿರಾಳದಲ್ಲಿ ನೆರೆವ ಭೇದವ,
ಕೂಡಲಚೆನ್ನಸಂಗನಲ್ಲಿ ಲಿಂಗೈಕ್ಯರನುವ ಆ ಲಿಂಗೈಕ್ಯರೆ ಬಲ್ಲರು. ॥ ೧೬೭ ॥

೪೯೬

ಮಂದಾರಸ್ಥಾನ ಮೊದಲಾದ ಆರರ ಕಡೆಯ
ಸ್ವಾದೋದಕಸಮುದ್ರದಲ್ಲಿ ವಿಶ್ರಮಿಸಿದ,
ಇಕ್ಷುಸಮುದ್ರದಲ್ಲಿ ತೃಪ್ತನಾಗಿ ಮೇರುಮಂದಿರದಲಿ ಮುಗ್ಧನಾದ ಕಾಣಾ
ಕೂಡಲಚೆನ್ನಸಂಗಾ, ನಿಮ್ಮ ಶರಣ. ॥ ೧೬೮ ॥

೪೯೭

ಕಾಯವೆ ಶಿವಾಲ್ಯ, ಕಮಳಮಧ್ಯಮಂಟಪವು ಶುಕನಾಸಿ ನೋಡಾ ಅಯ್ಯಾ.
ಜ್ಞಾನಾರೂಢ ಪ್ರಾಣೇಶ್ವರನೆಂಬಾತನಲ್ಲಿಯ ದೇವನು.
ಒಂಬತ್ತು ಮಾನಿಸರು ತಂಬಾಳೆಯರು; ಇಂಬಿನ ಮಠಪತಿ ಹಂಸಜೀಯ,

ತನ್ನ ದಳವಳಯುವನೊಲ್ಲದೆ ಲಿಂಗವೆ ಗೂಡಾದನು,
ಕೂಡಲಚೆನ್ನಸಂಗಯ್ಯನೆಂಬ ನಿಶ್ಚಿಂತ ನಿಜೈಕ್ಯನು. ॥ ೧೬೯ ॥

೪೯೮

ದೃಷ್ಟಿ ನಟ್ಟಿತ್ತು ನೋಡಾ, ನಟ್ಟು ಮತ್ತೆ ತೆಗೆಯಲಾರದು ನೋಡಾ.
ಅಲ್ಲಿಯೇ ಅಚ್ಯೋತ್ತಿದಂತಿದ್ದಿತ್ತು ನೋಡಾ.
ಆಶ್ರಯವ ಗೆಲಿದು ನಿರಾಶ್ರಯವ ನಿಃಪತಿಯಲ್ಲಿ ನಿಂದನು
ಕೂಡಲಚೆನ್ನಸಂಗಾ, ನಿಮ್ಮ ಶರಣ. ॥ ೧೭೦ ॥

೪೯೯

ಲಿಂಗಗಂಭೀರವಾದ ಶರಣ ಅಂಗವಿಕಾರವನರಿಯ,
ಲಿಂಗಸನುಮತವಾದ ಶರಣ ಇಂದ್ರಿಯವಿಕಾರವನರಿಯ.
ಲಿಂಗಗಂಭೀರವಾಗಿ, ಮನವಲ್ಲಿಯೆ ಲೀಯವಾಗಿ, ಅವಧಾನವನರಿಯ
ಕೂಡಲಚೆನ್ನಸಂಗಾ ಲಿಂಗೈಕ್ಯನು. ॥ ೧೭೧ ॥

೫೦೦

ಸಾವಯವೆಂದರೆ ನಿರವಯವಾಯಿತ್ತು.
ನಿರವಯವೆಂದರೆ ಸಾವಯವಾಯಿತ್ತು.
ಸಾವಯ ನಿರವಯ ತನ್ನೊಳಗಡಗಿತ್ತು.
ಸ್ಫಟಿಕದ ಘಟದೊಳಗಣ ಜ್ಯೋತಿಯಂತೆ
ಕೂಡಲಚೆನ್ನಸಂಗನ ಶರಣರ ನಿಲವು. ॥ ೧೭೨ ॥

■ ■

## ಶರಣನ ಜ್ಞಾನಿಸ್ಥಲ

೫೦೧

ಪೂಜಿಸುವನ್ನಕ್ಕ ಫಲದಾಯಕ ಕಂಡಾ,
ಸಹಜಸಂಬಂಧದನುವು ಹುಟ್ಟದನ್ನಕ್ಕ ಎರವೆಂದೆನಿಸೂದು.
ಗಮನ ನಿರ್ಗಮನವಾಗದನ್ನಕ್ಕ,
ಆಶೆಯಾಮಿಷವಳಿಯದನ್ನಕ್ಕ ಭಕ್ತಿ ಮತ್ತೆಲ್ಲಿಯದೊ?
ಘಟದೊಳಗೆ ದಿಟವಾಗಿದ್ದ ಪಂಚೈದುಭೂತವಳಿಯದೆ
ಕೂಡಲಚೆನ್ನಸಂಗನಲ್ಲಿ ಶರಣರೆನಿಸಿಕೊಳಲೆಂತುಬಹುದು? ॥ ೧ ॥

೫೦೨

ಭಕ್ತನಾದರೆ ಭವಿ ನಾಸ್ತಿಯಾಗಿರಬೇಕು,
ಶರಣನಾದರೆ ಭವಂ ನಾಸ್ತಿಯಾಗಿರಬೇಕು,
ಲಿಂಗೈಕ್ಯನಾದರೆ ಲಯುವನರಿಯದಿರಬೇಕು,
ಪ್ರಸಾದಿಯಾದರೆ ತ್ರಿವಿಧನಾಸ್ತಿಯಾಗಿರಬೇಕು,
ಕೂಡಲಚೆನ್ನಸಂಗಮದೇವಾ. ॥ ೨ ॥

೫೦೩

ಮಾಯಾಂಗನೆಯ ಸೋಂಕಳಿದಲ್ಲದೆ ಅಂಗಸೋಂಕಲ್ಲ,
ಘಟವು ಸಯವಾದಲ್ಲದೆ ಕಕ್ಷೆಯಲ್ಲ,
ಅನ್ಯದೈವಕ್ಕೆ ತಲೆವಾಗೂದುತ್ತಮಾಂಗವಲ್ಲ,
ಷಡುರುಚಿಯ ಬೇಡೂದಮಳೋಕ್ಯವಲ್ಲ,
ನಿಂದೆ ಸ್ತುತಿಯ ನುಡಿವುದು [ಕಂಠ]ವಲ್ಲ,
ಅನ್ಯರಿಗೆ ಕೈಯಾನೂದು ಕರಸ್ಥಳವಲ್ಲ.
ಇಂತೀ ಆರರ ಕುಳವನರಿಯದಿದ್ದಡೆ
ಮುಂದಣ ನರಕ ಇಂದೇ ಬಂದಿತ್ತು
ಕೂಡಲಚೆನ್ನಸಂಗಮದೇವಾ ॥ ೩ ॥

೫೦೪

ಕರಸ್ಥಲ ಸೆಜ್ಜೆಯಾದ ಶರಣನು ಹೊನ್ನಿಗೆ ಕೈಯಾಂತಡದು
ಕರಸ್ಥಳವಲ್ಲ, ಅದು ಕರ್ಮಸ್ಥಳ.
ಅಂಗಸೋಂಕು ಸೆಜ್ಜೆಯಾದ ಶರಣನು
ಅಪ್ಪಿನ ಸೋಂಕಿನ ಸುಖಕ್ಕೆ ಅಂಗೈಸಿದನಾದರೆ
ಅದು ಅಂಗಸೋಂಕಲ್ಲ, ಅದು ಕರ್ಮಸೋಂಕು.
ಮುಖಸೆಜ್ಜೆಯಾದ ಶರಣನು ಹುಸಿ ನುಸುಳು ಬಂದಡದು
ಮುಖಸೆಜ್ಜೆಯಲ್ಲ, ಕರ್ಮಸೆಜ್ಜೆ.
ಉತ್ತಮಾಂಗ ಸೆಜ್ಜೆಯಾದ ಶರಣನು ಪೂರ್ವಲಿಖಿತವನುಂಬಡದು
ಉತ್ತಮಾಂಗವಲ್ಲ, ಅದು ಕರ್ಮಾಂಗ.
ಅಮಳೋಕ್ಯ ಸೆಜ್ಜೆಯಾದ ಶರಣನು
ಅನ್ನಪಾನಕ್ಕೆ ಬಾಯಿದೆರೆದಂದಂದಿಂಗೆ ವ್ರತಗೇಡಿ
ಕೂಡಲಚೆನ್ನಸಂಗಮದೇವಾ. ॥ ೪ ॥

೫೦೫

ವಸ್ತ್ರ ಬಲುಹಿನಲ್ಲಿ ಕಟ್ಟು, ಸೆಜ್ಜೆಯ ಬಲುಹಿನಲ್ಲಿ ಕಟ್ಟು.
ಶಿವದಾರವ ಬಲುಹಿನಲ್ಲಿ ಕಟ್ಟೆಂದು ಹೇಳೂದು ಉಪದೇಶವೆ?
ಮತ್ತೆ ಕಟ್ಟುವ ಠಾವುಂಟಾಗಿ,
ಅಷ್ಟವಿಧಾರ್ಚನೆ, ಷೋಡಶೋಪಚಾರ,
ಕಾಲನೇಮವೆಂದು ಹೇಳೂದು ದೀಕ್ಷೆಯೆ? ಮತ್ತೆ ಕಾಲನೇಮವುಂಟಾಗಿ,
ಇದನರಿಯದೆ ಹೇಳಿದಾತ ಶಿವದ್ರೋಹಿ.
ಕೇಳಿದಾತ ಗುರುದ್ರೋಹಿ.
ಐಕ್ಯವಿಲ್ಲದ ಮಾಟ, ಸಯಿದಾನದ ಕೇಡು.
ಕೂಡಲಚೆನ್ನಸಂಗಯ್ಯಾ ಆ ಗುರುಶಿಷ್ಯರಿಬ್ಬರೂ
ಉಭಯಭ್ರಷ್ಟರು. ॥ ೫ ॥

೫೦೬

ಪಸರದ ಪಸರದ ಭಕ್ತಿಯ ಪಸರಿಸಿ
ಬೆಸಗೊಂಬರೆ, ನಾವು ಗುರುವೆಂಬಿರಿವಕಿನ್ನೆಂತಯ್ಯ?
ದಶದಳ ಸೂತಕವರ್ಣವಳಿಯದನ್ನಕ್ಕ ನಾವು ಗುರುವೆಂಬವೆಂತಯ್ಯ?
ತನ್ನ ಶಿಷ್ಯರ ಕೈಯ ನಿಷ್ಕವ ಕೊಂಬ ಪಾತಕರ ನುಡಿಯ ಕೇಳಲಾಗದು,
ಕೂಡಲಚೆನ್ನಸಂಗಮದೇವಾ. ॥ ೬ ॥

೫೦೭

ಮಾತ ಕಲಿತು, ಮಂಡೆಯ ಬೋಳಿಸಿಕೊಂಡಡೇನು?
ವೇಷಲಾಂಛನಧಾರಿ, ಉದರಪೋಷಕರಪ್ಪರಲ್ಲದೆ
ಆಗಮಾಚಾರಿಯರಾಗಲರಿಯರು ಕಾಣಿರೇ.
ಅಷ್ಟವಿಧಾರ್ಚನೆ ಷೋಡಶೋಪಚಾರಕ್ಕೆ ಸಲ್ಲದು ಸೀಮೆಯ ಕಲ್ಲು.
ಅನ್ಯರ ಬೋಸರಿಸಿ ತನ್ನ ಉದರವ ಹೊರೆವ ವೇಷಡಂಭಕರ ಮೆಚ್ಚ
ನಮ್ಮ ಕೂಡಲಚೆನ್ನಸಂಗಮದೇವ. ॥ ೭ ॥

೫೦೮

ಅರ್ಥ ಪ್ರಾಣ ಅಭಿಮಾನ ಭಕ್ತಂಗೆ ಹೊಲ್ಲದೆಂಬರು,
ತಮ್ಮ ಹೊದ್ದಿದ ಮಲಿನವನರಿಯರು.
ಕರುಳು ಕೊಳ್ಳದ ಉದಾನವ ಮರಳಿ ಅರ್ಪಿತವೆಂದು ಕೊಳಬಹುದೆ?
ಬೇಡುವಾತ ಜಂಗಮವಲ್ಲ, ಮಾಡುವಾತ ಭಕ್ತನಲ್ಲ.
ಬೇಡದ ಮುನ್ನವೆ ಮಾಡಬಲ್ಲರೆ ಭಕ್ತಿ.
ಬೇಡಿ ಮಾಡಿಸಿಕೊಂಬನ್ನಬರ ಜಂಗಮವಲ್ಲ.
ಓಡಲಾರದ ಮೃಗವು ಸೋಣಗಂಗೆ ಮಾಂಸವನೀವಂತೆ.
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ
ಮಾಡುವ ಭಕ್ತ, ಬೇಡದ ಜಂಗಮವಪೂರ್ವ. ॥ ೮ ॥

೫೦೯

ಬೇಡುವನೆ ಲಿಂಗಜಂಗಮ? ಬೇಡಿಸಿಕೊಂಡು ಮಾಡುವಾತನೆ ಭಕ್ತ?
ಬೇಡಲಾಗದು ಲಿಂಗಜಂಗಮಕ್ಕೆ,
ಬೇಡಿಸಿಕೊಂಡು ಮಾಡಲಾಗದು ಭಕ್ತಂಗೆ,
ಒಲಿಯರು ನರಮಾಂಸವ ಭುಂಜಿಸುವರೆ
ಕೂಡಲಚೆನ್ನಸಂಗಮದೇವಾ? ॥ ೯ ॥

೫೧೦

ಕಲ್ಪಿತದಿಂದ ಮಾಡುವ ಭಕ್ತ ನಿರ್ಧನಿಕನಾದರೆ
ತನ್ನ ಕೈಯ ಧನವ ವೆಚ್ಚಿಸಿ,
ಆ ಭಕ್ತನ ಕೂಡಿಕೊಂಡು ಲಿಂಗಾರ್ಚನೆಯ ಮಾಡಿ,
ಅವರ ಮತ್ತೆ ದಾಸೋಹಕ್ಕೆ ನಿಲಿಸಿ,
ತಾ ಕರ್ತನಾಗಿ ಪರಿಣಾಮಿಸಬಲ್ಲರೆ ಜಂಗಮ.

ಅವರಿಗೆ ನಮೋ ನಮೋ [ಎಂಬೆ].
ಅಂತಲ್ಲದೆ ಮುನ್ನ ಮಾಡಿದಿರಿ, ಈಗ ಮಾಡಿರೇನಿ ಭೋ ಎಂದು
ಜರಿದು ಝಂಕಿಸಿ ಹೋಪರ ಜಂಗಮವೆಂಬೆನೆ? ಎನ್ನೆನು.
ಏನು ಕಾರಣವೆಂದರೆ–
ಆತ ಸೂನೆಗಾರ, ಆತ ದೋಷಾರ್ಥಿ, ಆತ ಭವಭಾರಿ
ಕೂಡಲಚೆನ್ನಸಂಗಮದೇವಾ. ॥ ೧೦ ॥

೫೧೧

ಬೇಡಿ ಮಾಡೂದಂಗಭೋಗ, ಬೇಡದೆ ಮಾಡೂದು ಲಿಂಗಭೋಗ.
ಬೇಡುವನೆ ಜಂಗಮ? ಬೇಡಿಸಿಕೊಂಬನೆ ಭಕ್ತ?
ಕೂಡಲಚೆನ್ನಸಂಗಯ್ಯಾ ಮಾಟದಿಂದ ಕೂಟಕ್ಕಿಂಬಾಯಿತ್ತು. ॥ ೧೧ ॥

೫೧೨

ಗತಿಪದಮುಕ್ತಿಯ ಬಯಸಿ ಮಾಡುವಾತ ಭಕ್ತನಲ್ಲ,
ಜೀವನೋಪಾಯಕ್ಕೆ ಬೇಡುವಾತ ಜಂಗಮವಲ್ಲ.
ಗತಿಪದ ಮುಕ್ತಿಸೂತಕವಿರಹಿತ ಭಕ್ತ,
ಹಮ್ಮು ಬಿಮ್ಮು ಗಮನನಾಸ್ತಿ ಜಂಗಮ.
ಮಾಡುವಡೆ ಭಕ್ತ ಮಾಟದೊಳಗಿಲ್ಲದಿರಬೇಕು,
ಬೇಡುವಡೆ ಜಂಗಮ ಕೊಂಬುದರೊಳಗಿಲ್ಲದಿರಬೇಕು.
ಪ್ರಾಣವಿಲ್ಲದ ಭಕ್ತ ರೂಹಿಲ್ಲದ ಜಂಗಮ,
ಉಭಯಕುಳ ಸಂದಳಿದಂದು
ಕೂಡಲಚೆನ್ನಸಂಗನಲ್ಲಿ ಭಕ್ತಜಂಗಮವೆಂಬೆ. ॥ ೧೨ ॥

೫೧೩

ಭಕ್ತ ಜಂಗಮದ ನುಡಿಗಡಣದ ಮೇಳಾಪವೆಂತಿರಬೇಕೆಂದವರೆ:
ಪ್ರಚ್ಛನ್ನವಾಗಿ ಲೋಕಕ್ಕೆ ಅದೃಶ್ಯವಾಗಿರಬೇಕು,
ಜಲಚರನ ಪಾದಪಥದಂತಿರಬೇಕು,
ಶಿಶುಕಂಡ ಕನಸಿನಂತಿರಬೇಕು,
ಮೌನಿಯುಂಡ ರುಚಿಯಂತಿರಬೇಕು, ಶಿವಾಚಾರಕ್ಕೆ ಇದು ಚಿಹ್ನ.
ಅಂತಲ್ಲದೆ ಪಗರಣದ ವಾದ್ಯದಂತೆ ನಗೆಗೆಡೆಯಾಗಿರುತಿಪ್ಪರು.
ಹೇಮವೊರೆಯ ವೃತ್ತಿಕೆಯಲೆತ್ತಿದಂತೆ,

ಭೇರುಂಡ ಬಾಯಿವಡೆದಿಪ್ಪವರ ಭಕ್ತರೆಂತೆಂಬೆ? ಜಂಗಮವೆಂತೆಂಬೆ?
ಕೂಡಲಚೆನ್ನಸಂಗಮದೇವಾ. ॥ ೧೩ ॥

೫೧೪

ಸುಳಿವ ಜಂಗಮ ಕಾಲಿಲ್ಲದೆ ಸುಳಿಯಬೇಕು,
ಮಾಡುವ ಭಕ್ತ ಕೈಯಿಲ್ಲದೆ ಮಾಡಬೇಕು.
ಸುಳಿವ ಜಂಗಮಕ್ಕೆ ಕಾಲಿದ್ದರೇನು? ಅನ್ಯರ ಮನೆಯ ಹೊಗದಿದ್ದರೆ ಸಾಕು.
ಮಾಡುವ ಭಕ್ತಂಗೆ ಕೈಯಿದ್ದರೇನು? ಲಿಂಗಜಂಗಮಕ್ಕಲ್ಲದೆ ಮಾಡದಿದ್ದರೆ ಸಾಕು.
ಜಂಗಮಸ್ಯಾಗಮೋ ನಾಸ್ತಿ ಭಕ್ತಸ್ಯ ಗೃಹಮಾಚರೇತ್।
ಅನ್ಯಸ್ಯ ಚೇದ್ಗೃಹಂ ಯಾತಿ ಸದ್ಯೋ ಗೋಮಾಂಸಭಕ್ಷಣಂ॥
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ
ಶರಣ ಸಂಬಂಧವಪೂರ್ವ. ॥ ೧೪ ॥

೫೧೫

ಸಚರಾಚರ ಚತುರ್ವಲಯದೊಳಗೆ ತಿರುಗುವ
ವೇಷಧಾರಿಯನೆನಗೆ ತೋರದಿರಾ.
ಆಶಯಾ ಭದ್ಯತೇ ಲೋಕಃ ಕರ್ಮಣಾ ಬಹುಚಿಂತಯಾ।
ಆಯುಃಕ್ಷೀಣಂ ನ ಜಾನಾತಿ ವೇಣುಸೂತ್ರಂ ವಿಧೀಯತೇ॥
ಎಂದುದಾಗಿ–ಆಶೆಯ ಧಿಕ್ಕರಿಸಿ ನಿರಾಶೆಯ ಪತಿಕರಿಸಿದವರ ಕಂಡರೆ
ನೀ ಸರಿಯೆಂಬೆ ಕೂಡಲಚೆನ್ನಸಂಗಮದೇವಾ. ॥ ೧೫ ॥

೫೧೬

ಲಿಂಗವ ಕಟ್ಟಿ ಸುಳಿವಾತ ಜಂಗಮವಲ್ಲ,
ಆ ಜಂಗಮಕ್ಕೆ ಮಾಡುವಾತ ಭಕ್ತನಲ್ಲ.
ಉಭಯ ಕುಳವಳಿದಾತ ಜಂಗಮ.
ಆ ಜಂಗಮಕ್ಕೆ ಮಾಡುವರೆ ಭಕ್ತ.
ಇದು ಕಾರಣ, ಕೂಡಲಚೆನ್ನಸಂಗನಲ್ಲಿ
ಉಭಯಕುಳವಳಿದ ಭಕ್ತಜಂಗಮವಪೂರ್ವ. ॥ ೧೬ ॥

೫೧೭

ಅನ್ಯರ ವಚನವೇನು ಬಟ್ಟೆಯ ಸಂಬಳವೆ?
ಮನೆ ಮನೆಯ ಹೊಕ್ಕು ಬೋಧಿಸುವಂತಾಗಿ,

ಮನೆ ಮನೆಯ ಹೊಕ್ಕು ಮೆಚ್ಚಿಸುವಂತಾಗಿ,
ಇದು ಭಕ್ತಿಸ್ಥಲವೆ? ಇದು ಜಂಗಮಸ್ಥಲವೆ?
ಭಕ್ತನಾದರೆ ಭೃತ್ಯನಾಗಿರಬೇಕು.
ಈ ಎರಡೂ ಇಲ್ಲದ ಎಡೆಹಂಚರ ತೋರಿಸದಿರು
ಕೂಡಲಚೆನ್ನಸಂಗಮದೇವಾ. ॥ ೧೭ ॥

೫೧೮

ವಚನರಚನೆಯ ಅನುಭಾವವ ಬಲ್ಲೆವೆಂದೆಂಬರು
ವಚನವಾವುದು ರಚನೆಯಾವುದು ಅನುಭಾವವಾವುದು ಹೇಳಿರಣ್ಣಾ?
ವಚನ: ಆತ್ಮತುಷ್ಟಿಯನರಿವುದು.
ರಚನೆ; ಸ್ಥಾವರ ಲಿಂಗ ಜಂಗಮ ತ್ರಿವಿಧದಲ್ಲಿ ಕಾಣಬಲ್ಲರೆ.
ಅನುಭಾವ: ಕಾಮದಿಚ್ಛೆಗೆ ಹರಿದು ಕಾಮಿಯಾಗದಿರಬೇಕು,
ಕ್ರೋಧದಿಚ್ಛೆಗೆ ಹರಿದು ಕ್ರೋಧಿಯಾಗದಿರಬೇಕು,
ಮದ ಮಚ್ಚರದಿಚ್ಛೆಗೆ ಹರಿದು ಮದಮಚ್ಚರವಿಲ್ಲದಿರಬೇಕು,
ಆಶೆಯಾಮಿಷ ಹರುಷದಿಚ್ಛೆಗೆ ಹರಿದು [ಯಾ]ಚಕನಾಗದಿರಬೇಕು.
ಕಾಮ ಕ್ರೋಧ ಲೋಭ ಮೋಹ ಮದ ಮಚ್ಚರ ಆಶೆಯಾಮಿಷ
ರೋಷಾದಿಗಳಂ ಹರಿವೊದೆದು,
ಏಕೋಗ್ರಾಹಿಯಾಗಿ ನಿಂದಲ್ಲೇ ಅನುಭಾವಿ.
ನಾಲ್ಕು ವೇದಶಾಸ್ತ್ರಂಗಳ ಬಲ್ಲೆವೆಂದು ನುಡಿವಾತನನುಭಾವಿಯೆ? ಅಲ್ಲ,
ಅವು ಬ್ರಹ್ಮನೆಂಜಲು, ಇವ ಬಲ್ಲೆನೆಂದು ನುಡಿವಾತನನುಭಾವಿಯೆ? ಅಲ್ಲ,
ಆತನು ಇದಿರ ನಂಬಿಸಿ ಉಂಬ ಭುಂಜಕನಯ್ಯಾ
ಕೂಡಲಚೆನ್ನಸಂಗಮದೇವಾ. ॥ ೧೮ ॥

೫೧೯

ಹುಟ್ಟಿದ ಕುಳಸ್ಥಳವನರಿದು, ಕಾಮಕ್ರೋಧವನಳಿದು,
ಸತ್ವರಜತಮವನೊತ್ತಿ–ನಿಂದಲ್ಲಿ, ಸಹಜ ನೆಲೆಗೊಂಬುದು.
ಮನದಂತುವನರಿದು, ಜೀವದ ಮೋಹ ನೆಲೆಯ ಬಲ್ಲರೆ
ಕೂಡಲಚೆನ್ನಸಂಗನಲ್ಲಿ ಮಹಂತರೆನಿಸುವರು. ॥ ೧೯ ॥

೫೨೦

ತಾಳು ಬೋಳು ಕಪ್ಪರಾದಿಗಳೆಂಮೆಂಬರು,
ತಾಳಾವುದು, ಬೋಳಾವುದು, ಕಪ್ಪರವಾವುದೆಂದರಿಯರು.

ಕಾಯದಕಳವಳದ ಗುಣವ ತಾಳಬಲ್ಲರೆ ತಾಳು,
ಸಂಸಾರವಿಷಯವ ಬೋಳಿಸಬಲ್ಲರೆ ಬೋಳು,
ಪರದಲ್ಲಿ ಪರಿಣಾಮಿಸಬಲ್ಲರೆ ಕಪ್ಪರ.
ಅಂತಲ್ಲದಿದ್ದರೆ ಕೂಡಲಚೆನ್ನಸಂಗಮದೇವರಲ್ಲಿ
ಡೊಂಬರ ಬೋಳು. || ೨೦ ||

೫೨೧

ಆಚಾರ ಕಪ್ಪರವೊಂದು, ವಿಚಾರ ಕಪ್ಪರವೊಂದು, ಅವಿಚಾರ ಕಪ್ಪರವೊಂದು.
ಇಂತು ಮೂರು ಕಪ್ಪರವೊಳವು.
ಆಚಾರ ಕಪ್ಪರವ ಜಾಡ್ಯವೆಂಬೆ, ವಿಚಾರ ಕಪ್ಪರವ ಹೆಳವನೆಂಬೆ,
ಅವಿಚಾರ ಕಪ್ಪರ ಸೊಮ್ಮುಸಂಬಂಧವ ತೋರಿ ಬೇಡದಾಗಿ
ನಿರುಪಾಧಿಕವಯ್ಯಾ ಕೂಡಲಚೆನ್ನಸಂಗಮದೇವಾ. || ೨೧ ||

೫೨೨

ಆಚಾರ ಕಪ್ಪರ ಸೊಮ್ಮುಸಂಬಂಧವ ತೋರಿ ಬೇಡುವುದು.
ವಿಚಾರ ಕಪ್ಪರ ಲಾಂಛನವ ತೋರಿ ಬೇಡುವುದು.
ಅವಿಚಾರ ಕಪ್ಪರ ಸೊಮ್ಮುಸಂಬಂಧವ, ನೇಮಶೀಲವ ಮೀರಿ ಬೇಡುವುದಾಗಿ
ನಿರುಪಾಧಿಕವಯ್ಯಾ ಕೂಡಲಚೆನ್ನಸಂಗಮದೇವಾ. || ೨೨ ||

೫೨೩

ಅಕ್ಷರಪಂಚಕದ ನಿಕ್ಷೇಪವನರಿಯಬಲ್ಲರೆ ಬೋಳು,
ಕುಕ್ಷಿಯೊಳಗೈವತ್ತೆರಡಕ್ಷರದ ಲಕ್ಷಣವನರಿಯಬಲ್ಲರೆ ಬೋಳು,
ಅಕ್ಷಯನಿಧಿ ಕೂಡಲಚೆನ್ನಸಂಗಯ್ಯ ಭವಕ್ಕೆ ಬೋಳು. || ೨೩ ||

೫೨೪

ಪೂರ್ವಾಶ್ರಯವಳಿಯದೆ ಪುನರ್ಜಾತರೆನಿಸಿಕೊಂಬರಿನ್ನೆಂತೋ?
ಪುನರ್ಜಾತನಾದಾತ ಸತಿ–ಸುತ ಮಾತಾ–ಪಿತರ್ಕಳ ಬೆರಸುವ[ಡೆ],
ಕೂಡಲಚೆನ್ನಸಂಗಯ್ಯನಲ್ಲಿ ಶರಣರೆಂತೆಂಬೆ? || ೨೪ ||

೫೨೫

ಭವಿತಸಕ್ಕೆ ಹೇಸಿ ಭಕ್ತನಾದ ಬಳಿಕ ಭವಿಯ ಸಂಗ ಮತ್ತೇಕಯ್ಯಾ?
ಕಾಮನು ಬಾಣವಕೊಂಡು, ತನು ತನುಮುಖಕ್ಕೆ ಎಚ್ಚರೆ

ಭವಿ ಬಳಿಕವುಂಟು ನೋಡಾ!
ಕಾಮನ ಬಾಣನ ಮುರಿದು ಮಾಯದ ಸಂಚವ ಕೆಡಿಸಿ
ಎನಗೆ ತನಗೆಂಬುದಳಿದ ಬಳಿಕ ಲಿಂಗಸಂಗಿ ಶರಣನಾಗಿಪ್ಪನು,
ಭವಿ ಬಳಿಕೆಲ್ಲಿಯದೊ?
ಅಂತರಂಗದ ಅನುಭವವರಿದು ಮನದ ಆಗು ಹೋಗ ಬಲ್ಲರೆ,
ಕೂಡಲಚೆನ್ನಸಂಗನಲ್ಲಿ ಲಿಂಗಸಂಗಿ ಶರಣನಾಗಿಪ್ಪನು. || ೨೫ ||

೫೨೬

ಹರಂಗೆಯೂ ತನಗೆಯೂ ಏಕೋಭಾಜನವೆಂಬರು,
ಗುರುಲಿಂಗ ಬಂದರೆ ಮತ್ತೊಂದು ಭಾಜನವ ತನ್ನಿ ಯೆಂಬ[ರಿಗೆ] ಲಿಂಗವುಂಟೆ?
ಲಿಂಗವ ಮುಟ್ಟಿ ಹಿಂಗುವ ಭವಿಗಳಿಗೆ ಲಿಂಗವುಂಟೆ?
ಲಿಂಗ ಜಂಗಮವನು ಮಹಾಪ್ರಸಾದವನು ಏಕವ ಮಾಡಿದವಂಗಲ್ಲದೆ.
ಏಕೋಭಾಜನವಿಲ್ಲ ಕೂಡಲಚೆನ್ನಸಂಗಮದೇವಾ. || ೨೬ ||

೫೨೭

ಜ್ಞಾನದೀಪ್ತಿಯ ಬೆಳಗುವ ತೈಲವಾವುದೆಂದರೆ:
ಸದುಮಾನ್ಯರ ನುಡಿಗಡಣದಿಂದೊ[ಸರುವ ಒಸರು]–
ಅದು ತಾನೆಂಬ ಅರಿವಿನ ನಿಶ್ಚಯವ ತೋರುವುದು,
ಹೀನ ಜಡತೆಯ ಮುಸುಕಿದ ಗಂದಿಕೆ ತಿಳಿದು
ಭಾನು ಬಂದರೆ ಜಗದ ಭ್ರಮೆ ಹರಿವಂತೆ ಹರಿವುದು.
ಬುಧರೊಳು ನೀನಿರಲು ಕರ್ಮಹರಿವುದು,
ಕೂಡಲಚೆನ್ನಸಂಗಮದೇವಾ. || ೨೭ ||

೫೨೮

ಜಲದಲ್ಲಿ ಹುಟ್ಟಿದ ಕೆಸರು ಕ್ಷೀರದಲ್ಲಿ ತೊಳೆದರೆ ಹೋಹುದೆ?
ಜಲದಲ್ಲಿ ತೊಳೆದಡಲ್ಲದೆ.
ಜೀವನಲ್ಲಿ ಹುಟ್ಟಿದ ಪ್ರಪಂಚು ಪಾಪಂಗಳು
ಬ್ರಹ್ಮದಂಡ ಪ್ರಾಯಶ್ಚಿತ್ತದಲ್ಲಿ ಹೋಹವೆ?
ಶಿವಸಂಸ್ಕಾರಿಯಾಗಿ 'ಅಕ್ಷರೋऽಸಿ' ಎಂಬ ಮಂತ್ರದಿಂದ
ಜೀವನ ಪಾಪವು ಜೀವನಲ್ಲಿಯೇ ಕಳೆವುದು
ಜೀವಾತ್ಮಾ ಪರಮಾತ್ಮಾ ಚೇನ್ಮುಕ್ತಾನಾಂ ಪರಮಾಗತಿ।
ಅವ್ಯಯಃ ಪುರುಷಃ ಸರ್ವಕ್ಷೇತ್ರಜ್ಞೋऽಕ್ಷಯ ಏವ ಚ॥

ಎಂದುದಾಗಿ,–ಇದು ಕಾರಣ ಕೂಡಲಚೆನ್ನಸಂಗಯ್ಯಾ.
ನಿಮ್ಮ ಶರಣನ ಕಾಯವು ಸುಕ್ಷೇತ್ರವೆಂದೆನಿಸೂದು. ॥ ೨೮ ॥

೫೨೯

ಬೇಕೆನಲಾಗದು ಶರಣಂಗೆ, ಬೇಡೆನಲಾಗದು ಶರಣಂಗೆ,
ಬಂದ ಸುಖವನತಿಗಳೆಯಲಾಗದು ಶರಣಂಗೆ,
ಇದು ಕಾರಣ, ಕೂಡಲಚೆನ್ನಸಂಗಯ್ಯಾ ನಿಮ್ಮ ಶರಣರು
ಉಂಡು ಉಪವಾಸಿಗಳು, ಬಳಸಿ ಬ್ರಹ್ಮಚಾರಿಗಳು. ॥ ೨೯ ॥

## ಶರಣನ ಶರಣಸ್ಥಲ:

೫೩೦

ಶಿವಯೋಗಿಯೇ, ನಿಭ್ರಾಂತನೇ, ಶರಣ.
ಕರ್ಮಕಾಯನು ಅಲ್ಲ, ಕಾಯಕಲ್ಪಿತನಲ್ಲ ಶರಣನು.
ಸಂಕಲ್ಪ ವಿಕಲ್ಪ ವಿರಹಿತನಾಗಿ
ಅವರವರ ಬೆರಸಿಪ್ಪ, ತನ್ನ ಪರಿಬೇರೆ,
ನಿರಂತರಸುಖಿ, ಕೂಡಲಚೆನ್ನಸಂಗಾ
ಪ್ರಪಂಚಿನೊಳಗಿಪ್ಪ, ತನ್ನ ಪರಿಬೇರೆ. ॥ ೩೦ ॥

೫೩೧

ಸಂಗವಿಡಿದಂತೆ ಸಂಗವಿಡಿದು ನೋಡದಿರಾ.
ಶರಣ ಸಂಗಸೂತಕಿಯಲ್ಲ, ಲಿಂಗಪರಿಚಿತ.
ಸಂಗವಂತನೆಂದೆನ್ನದಿರು, ಶರಣ ಮನಬಂದಂತೆ ಮಾಡುವ.
ಅರಸಿ ಸಕಳಾಗಮನಪ್ಪ, ಅಪುದಾಗದೆಂಬುದಿಲ್ಲ ನೋಡಾ.
ಕೂಡಲಚೆನ್ನಸಂಗನ ಶರಣ ಸಂಗಿಯಲ್ಲ. ॥ ೩೧ ॥

೫೩೨

ಆನೆಂಬುದಿಲ್ಲಯ್ಯ, ಲಿಂಗವೆಂಬ ಮಹಂತಂಗೆ,
ಅಳಿಯಿನು ಉಳಿಯಿನು,

ಮಿಂಚಿನ ಗೊಂಚಲಂತೆ ಮುಂದೆ ರೂಪಾಗಿ ತೋರುತಿಪ್ಪನು.
ಶರಣನೊಡಲುಗೊಂಡಡೆ ಸಾಮಾನ್ಯನೆ? ಪ್ರಕೃತಿ ಗುಣಭಿನ್ನಭಾವವಿಲ್ಲ.
ಕೂಡಲಚೆನ್ನಸಂಗನ ಶರಣರ ಪರಿ ಬೇರೆ. || ೩೨ ||

೫೩೩

ಲಿಂಗೋದಯದ ಅಂಗಸುಖವು, ಅಂಗೋದಯದ ಲಿಂಗಸುಖವು,
ಎರಡಿಲ್ಲದ ಘನವನೇನೆಂಬೆನಯ್ಯಾ, ಮಿಕ್ಕುಮೀರಿನಿಂದ ನಿಲವನೇನೆಂಬೆನಯ್ಯಾ.
ಕೂಡಲಚೆನ್ನಸಂಗನ ಶರಣನನೇನೆಂಬೆನಯ್ಯಾ. || ೩೩ ||

೫೩೪

ಪ್ರಾಣಲಿಂಗವೆಂದೆಂಬರು, ಪ್ರಾಣದಲ್ಲಿ ಹರಿವ ಪ್ರಕೃತ್ಯಾದಿಗಳಿಗಿನ್ನೆಂತೋ,
ಪ್ರಾಣನ, ಪರಮವಾರೂಢನ ನಿರ್ವಾಣದಲ್ಲಿದ್ದಾತನೆ ಬಲ್ಲ,
ಪ್ರಾಣಲಿಂಗವಾದಾತನ ನಿಲವುಯೆಂತಿದ್ದಿಹುದೆಂದರೆ:
ನೆಯಿ ಹತ್ತದ ನಾಲಗೆಯಂತೆ, ಕಾಡಿಗೆ ಹತ್ತದಾಲಿಯಂತೆ,
ದೂಳು ತಾಗದ ಗಾಳಿಯಂತೆ, ಜಲ ಹತ್ತದ ಜಲಜದಂತೆ,
ಉಷ್ಣ ತಾಗದಗ್ನಿಯಂತಿಪ್ಪ, ಕೂಡಲಚೆನ್ನಸಂಗಾ ನಿಮ್ಮ ಶರಣ. || ೩೪ ||

೫೩೫

ಅಂಡಜ ಸ್ವೇದಜ ಉದ್ಭಿಜ ಜರಾಯುಜ ಈ ನಾಲ್ಕು ಯೋನಿಗಳಲ್ಲಿ ಬರುತ್ತಿಪ
ಅನಂತಕೋಟಿ ಜೀವ ಸತ್ತ ಪಾಪವು [ವಿಧಿಯ] ತಾಗೂದೆ ಅಯ್ಯಾ?
(ಕಾರ್ಮೇಘ ಗಗನದಿಂದ ಸುರಿಯಲು ಭೂಮಿ ಜರ್ಜರಿತವಾಗಿ
ಹಳ್ಳ ಕೊಳ್ಳ ಕೆರೆ ತುಂಬಿ ದಶದಿಕ್ಕುಗಳೆಲ್ಲ ಭರಿತಂಗಳಾಗಿ ಪುರಂಗಳ ಪೊಗಲು
ಅನಂತಕೋಟಿ ಜೀವಿ ಸತ್ತ ಪಾಪವು ಮೇಘಂಗಳಿಗೆ ತಾಗೂದೆ ಅಯ್ಯಾ?)
ಕಾನನದಡವಿಯೊಳಗೆ ಒಂದೊಂದು ಕಾಡುಗಿಚ್ಚು ಹುಟ್ಟಿ
ಧಗಿಲು ಭುಗಿಲೆಂದು ಉರಿ ಸುಳಿಗೊಂಡಟ್ಟಿ ಸುಡುವಲ್ಲಿ
ಅನಂತಕೋಟಿ ಜೀವ ಸತ್ತ ಪಾಪವು ಹುತವಹನ ತಾಗೂದೆ ಅಯ್ಯಾ?
ದೆಸೆದಿಕ್ಕುಗಳು ಭರಿತವಾಗಿ ಪವನನಲ್ಲಿಯೆ ಒಲಿದು
ಬ್ರಹ್ಮಾಂಡವ ಮುಟ್ಟಿ ಮಲಿತು ಬೀಸುವಲ್ಲಿ
ಅನಂತಕೋಟಿ ಜೀವಗಳು ಸತ್ತ ಪಾಪವು ಪವನನ ತಾಗೂದೆ ಅಯ್ಯಾ?
ಧರೆಹತ್ತಿ ಉರಿಯೆ ಬ್ರಹ್ಮಾಂಡವ ತಾಗಲು ಕೆಂಡದ ಮಳೆ ಸುರಿಯಲು
ಸುರರ ಅಸುರರ ಎಲ್ಲಾ ಭುಗಿಲು ಭುಗಿಲುಯೆಂದು ಉರಿಯುಯ್ದು ತಾಗಲ್ಕೆ
ವಿಶೇಷ ಪಾಪವು ಗಗನವ ತಾಗೂದೆ ಅಯ್ಯಾ?
ಪೃಥ್ವಿ ಅಪ್ಪು, ತೇಜ, ವಾಯು, ಆಕಾಶ, ಚಂದ್ರ ಸೂರ್ಯ

ಈ ಅಷ್ಟತನುಮೂರ್ತಿಗಳು ನಷ್ಟವಾದ ಪಾಪ ಸದಾಶಿವನ ತಾಗೂದೆ ಅಯ್ಯಾ?
ಉತ್ಪತ್ತಿ, ಸ್ಥಿತಿ, ಲಯ ಕಾಲಕಲ್ಪಿತನಲ್ಲ
ಪ್ರಳಯರಹಿತ ಕೂಡಲಚೆನ್ನಸಂಗಾ ನಿಮ್ಮ ಶರಣ. || ೩೫ ||

೫೩೬

ಲಿಂಗಮಧ್ಯದೊಳಗೆ ಜಗವಿದ್ದಡೇನು?
ಜಗವ ಹೊರಗಿಕ್ಕಿ ಲಿಂಗವನೊಳಗಿಟ್ಟುಕೊಂಬ ಆ ಘನಕ್ಕೆ ಶರಣೆಂಬೆನು.
ಆ ಮಹಾಘನದಾಯತಕ್ಕೊಳಗು, ಪ್ರಳಯಕ್ಕೆ ಹೊರಗು
ಕೂಡಲಚೆನ್ನಸಂಗಾ ನಿಮ್ಮ ಶರಣರು. || ೩೬ ||

೫೩೭

ಲಿಂಗಸಂಬಂಧ ಸೀಮೆ ನೋಡಾ, ಶರಣಸಂಬಂಧ ನಿಸ್ಸೀಮೆ ನೋಡಾ.
ಲಿಂಗವು ಗಮ್ಯ, ಅಗಮ್ಯ ಶರಣ ನೋಡಾ.
'ಯದ್ಭಾವಂ ತದ್ಭವತಿ'ಯೆಂಬುದಿಲ್ಲಾಗಿ.
ಆದಿಲಿಂಗ, ಅನಾದಿಶರಣ ಕೂಡಲಚೆನ್ನಸಂಗಾ. || ೩೭ ||

೫೩೮

ಲಿಂಗಾಭಿಮಾನಿಗೆ ಅಂಗಾಶ್ರಯವಿಲ್ಲ ನೋಡಯ್ಯಾ,
ಬಂದುದೆ ಪರಿಣಾಮ, ನಿಂದುದೆ ನಿವಾಸ,
ಅದು ಇದು ಎಂಬುದಿಲ್ಲ ಕೂಡಲಚೆನ್ನಸಂಗನ ಶರಣಂಗೆ. || ೩೮ ||

೫೩೯

ಶರಣರೆಂಬವರು ಜನಕ್ಕೆ ತವಕಿಗಳಲ್ಲ, ವಿಷಯಾನುಭಾವಿಗಳಲ್ಲ,
ನಿಂದ ನಿಲವು ತಾನೆ ಪರಿಣಾಮ.
ಲಿಂಗದ ಸಂಗವ ಸವಿವ ಶರಣರು ಅನುಮಾನಕವಧಾನಿಗಳಲ್ಲ,
ಕೂಡಲಚೆನ್ನಸಂಗಾ ನಿಮ್ಮ ಶರಣರು. || ೩೯ ||

೫೪೦

ಅನಾಯಾಸದಿಂದ ಮನೆಯ ಮಾಡಿ, ನಿರಾಯಾಸದಿಂದ ಪರಮಸುಖಿ.
ರೂಪಿಸುವಲ್ಲಿ ರೂಪಾಧಿಕ, ನೋಡುವಲ್ಲಿ ನೋಟ ಘನ.
(ಇಂತು) ಸಹಜ ಸಂಗಿಯ ನಿಲವಿನ ಪರಿ.

ಉದಕದೊಳಗಣ ಬಿಂದು ಉದಯರತ್ನದಂತೆ,
ಕೂಡಲಚೆನ್ನಸಂಗಾ ನಿಮ್ಮ ಶರಣರ ನಿಲವು. ॥ ೪೦ ॥

೫೪೧

ಶರಣನು ಅದೃಷ್ಟ ದೃಷ್ಟ ಎರಡುವನೂ ತೋರುವನು.
ಸಾವಯ ನಿರವಯ ಏನೆಂದು ವಿವರಿಸೆ ಶರಣನು.
ತಾನು ಸ್ವತಂತ್ರನಾಗಿ ಭಾವರಹಿತನು.
ವಿಕೃತವೇಷದಿಂದ ಸುಕೃತವ ಜೋಡಿಪನಲ್ಲ.
ಪ್ರಕೃತಿ ಗುಣವಿಡಿದು ಮೂರ್ತಿಯಾದ ಉಪಜೀವಿ ತಾನಲ್ಲ,
ಕೂಡಲಚೆನ್ನಸಂಗಾ
ನಿಮ್ಮ ಶರಣನು ಸಾರಾಯ ಸನುಮತನು. ॥ ೪೧ ॥

೫೪೨

ಅರಸನಾ(ಳುವ)ಗ್ರಾಮ ಪುರ ಪಟ್ಟಣದೊಳಗೆ ತಾನಿದ್ದು
ಸೀಮೆ ನಿಸ್ಸೀಮೆ ಇದೇನಯ್ಯಾ?
ಬಂಧ ನಿರ್ಬಂಧವಿಲ್ಲಾಗಿ ಶರಣಂಗೆ ಸಂದು ಸಾಧನ (ಸಂಶಯ?)ವುಂಟೆ?
ಎಡೆಗೆ ಕಡೆಯುಂಟೆ?
ಅಗುಸೆಯಲ್ಲಿ ಹೋಗುವನೆ? ಚೋರಖಂಡಿಯಲ್ಲಿ ನುಸುಳುವನೆ?
ಇದು ಕಾರಣ ಕೂಡಲಚೆನ್ನಸಂಗಾ.
ಅನಿತ್ಯ ಮಿಥ್ಯವ ಕಳೆದು ನಿತ್ಯನಾದ ಶರಣ. ॥ ೪೨ ॥

೫೪೩

ಲಿಂಗವೆಂದರಿದಡೆ ಅಂಗವೆಂಬುದಿಲ್ಲ,
ಜಂಗಮವೆಂದರಿದಡೆ ಸಂಸಾರವೆಂಬುದಿಲ್ಲ,
ಪ್ರಸಾದವೆಂದರಿದಡೆ ತನುವೆಂಬುದಿಲ್ಲ.
ಈ ತ್ರಿವಿಧವನರಿದಡೆ ಮುಂದೆ ಏನೂ ಇಲ್ಲವೆಂಬುದನು
ಶ್ರುತಿ ಸ್ಮೃತಿಗಳರಿಯವು,
ಕೂಡಲಚೆನ್ನಸಂಗಾ ನಿಮ್ಮ ಶರಣ ಬಲ್ಲ. ॥ ೪೩ ॥

೫೪೪

ದೇಹಿಯಲ್ಲ ನಿರ್ದೇಹಿಯಲ್ಲ, ಬೋಧಕನಲ್ಲ ನಿರ್ಬೋಧಕನಲ್ಲ,
ಕಾಮಿಯಲ್ಲ ನಿಃಕಾಮಿಯಲ್ಲ, ಆಸೆವಿಡಿದು ಬಂದ ಆಮಿಷನಲ್ಲ.

ಅವಗುಣವಿಲ್ಲದ ನಿರ್ಗುಣಿ ನಿರಂತರ,
ಕೂಡಲಚೆನ್ನಸಂಗನ ಶರಣ ನೋಡಯ್ಯಾ. || ೪೪ ||

೫೪೫

ಹುಸಿಯ ಹಸರವನಿಕ್ಕಿ ವಚನವನರ್ಪಿಸುವನಲ್ಲ.
ಆನು ಬಲ್ಲೆನೆಂಬ ಅರಿವಿನ ಕೊರವಂಜಿಯಂತೆ ಜಗಕ್ಕೆ ಹೇಳುವನಲ್ಲ.
ಘನಕ್ಕೆ ಮಹಾಘನ ತಾನಾದ ಕಾರಣ ಕೂಡಲಚೆನ್ನಸಂಗನ ಶರಣರು
ಕುಟಿಲ ಕುಹಕದೊಳಗೆ ವರ್ತಿಸುವರಲ್ಲ. || ೪೫ ||

೫೪೬

ವಚನ ಸನ್ನಿಹಿತ ತರ್ಕಕ್ಕೊಡಲು,
ಅನುಭಾವ ಸನ್ನಿಹಿತ ಬಹುಮಾ[ತಿ]ಗೊಡಲು,
ಇಂದ್ರಿಯ ಸನ್ನಿಹಿತ ನಷ್ಟಕ್ಕೊಡಲು,
ತನು ಸನ್ನಿಹಿತ ವ್ಯಾಪ್ತಿಗೊಡಲು.
ಸರ್ವಾಂಗದೊಳಗಾವಂಗವಿಲ್ಲ,
ಕೂಡಲಚೆನ್ನಸಂಗಮದೇವಾ ನಿಮ್ಮ ಶರಣನ ಪರಿಬೇರೆ. || ೪೬ ||

೫೪೭

ತನು ನಾಗವತ್ತಿಗೆಯಾದಡೆ ಆರ್ಪಿತವ ಮಾಡಬೇಕು,
ತನು ಸೆಜ್ಜೆಯಾದಡೆ ಅರ್ಪಿಸಲಿಲ್ಲ ಕಂಡಯ್ಯಾ.
ತನು ಸಿಂಹಾಸನವಾದಡೆ ಸುಳಿವುದೆ ಭಂಗ.
ಪ್ರಾಣಲಿಂಗ ಸಂಬಂಧಿಯಾದರೆ,
ಅದನು ಎರಡು ಮಾಡಿಕೊಂಡು ನುಡಿಯಲೇಕಯ್ಯಾ?
ಒಂದೆಯೆಂದು ನುಡಿವ ಸೋಹದವನಲ್ಲ,
ಬಹ ಪದಾರ್ಥದ ಲಾಭದವನಲ್ಲ,
ಹೋಹ ಪದಾರ್ಥದ ಚೇಗೆಯುವನಲ್ಲ,
ಪ್ರಪಂಚವ ಹೊತ್ತುಕೊಂಬ ಭಾರದವ ತಾನಲ್ಲ.
ಕೂಡಲಚೆನ್ನಸಂಗನ ಶರಣನುಪಮಾತೀತನು. || ೪೭ ||

೫೪೮

ಮೂರ್ತನಲ್ಲ ಅಮೂರ್ತನಲ್ಲ,
ಲಿಂಗದಲ್ಲಿ ಪ್ರಾಣಸಂಚಿತ, ಪ್ರಾಣದಲ್ಲಿ ಪ್ರಸಾದ ಸಂವರಣೆ,

ಪ್ರಸಾದದಲ್ಲಿ ಕಾಯಾಶ್ರಿತ ಜನ್ಯ.
ಲೋಕಲೌಕಿಕಪ್ರಸಾದದುದಯನಲ್ಲ ಕೂಡಲಚೆನ್ನ ಸಂಗನ ಶರಣನು. || ೪೮ ||

೫೪೯

ಆದಿಸ್ಥಲವೆಂದು ನುಡಿವರು, ಅನಾದಿಸ್ಥಲವೆಂದು ನುಡಿವರು,
ಆದಿಗೆ ಒಡಲುಂಟು, ಅನಾದಿಗೆ ಒಡಲಿಲ್ಲ.
ನ ಚ ಭೂಮಿರ್ನ ಚ ಜಲಂ ನ ಚ ತೇಜೋರ್ನ ಚ ವಾಯುಃ ನ ಚಾಕಾಶಃ|
ಇವೆಲ್ಲವೂ ಘಟಕ್ಕೆ ಸಂಬಂಧವಾಗಿ ಘಟ ಕೆಡುವುದು.
ಇಂಥ ನಿರ್ದೇಹಿ ಶರಣಂಗಲ್ಲದೆ ಅರಿಯಬಾರದು,
ಕೂಡಲಚೆನ್ನಸಂಗಯಾ || ೪೯ ||

೫೫೦

ಸ್ಥಲವನರಿದೆನೆಂದರೆ ಕುಳವನರಿಯಬೇಕು.
ಕುಳವನರಿದಡೆ ಭ್ರಾಂತು ಸೂತಕವಿಲ್ಲಯ್ಯಾ.
ತನುಮನ ಲಯವಾದ ನಿಜೈಕ್ಯನು,
'ಲಿಂಗದೇವಾ' ಎಂದು ಉಪಚರಿಸಲುಂಟೆ?
ಆಗಮ ಮುನ್ನವೇ ಹಿಂಗಿತ್ತು, ಆಚಾರ ಮೀರಿತ್ತು.
ಕೂಡಲಚೆನ್ನಸಂಗನ ಶರಣ ಸುಚರಂ ಭೋ. || ೫೦ ||

೫೫೧

ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ,
ತೆರಹಿಲ್ಲದ ವಿಶ್ರಾಮಸ್ಥಾನ ಸುಖದ ಸುಖ,
ತೆರಹಿಲ್ಲದ ಗಂಭೀರ ತೆರಹಿಲ್ಲದ ಮಹಾಮಹಿಮೆ
ತೆರಹಿಲ್ಲ ಕೂಡಲಚೆನ್ನಸಂಗಾ, ನಿಮ್ಮ ಶರಣಂಗೆ. || ೫೧ ||

೫೫೨

ದೃಷ್ಟದ ದೃಷ್ಟ ಕಾಣರೆ, ಮುಟ್ಟದ ಮುಟ್ಟು ಕಾಣರೆ,
ಆಗಿನ ಆಗು ಕಾಣರೆ, ಭೇದದ ಭೇದ ಕಾಣರೆ,
ಅರಿವಿನ ಅರಿವು ಕಾಣರೆ.
ಲಿಂಗದಲ್ಲಿ ಹಿಂಗದ ಸಂಪು
ಕೂಡಲಚೆನ್ನಸಂಗನಲ್ಲಿ ಬಸವಣ್ಣ ಕಾಣರೆ. || ೫೨ ||

೫೫೩

ಪ್ರಸಾದ ಕಾಯವಾದ ಬಳಿಕ ಸರ್ವಾಂಗ ಉತ್ತಮಾಂಗ.
ಪ್ರಾಣ ಲಿಂಗವಾದ ಬಳಿಕ ಸದಾ ಸನ್ನಿಹಿತ ಲಿಂಗ.
ಶರಣನಲ್ಲಿ ಭಾವ ಭೇದವಿಲ್ಲ ನಿರಂತರ ಲಿಂಗಸಂಗಿ.
"ಅಕಾಯೋ ಭಕ್ತಕಾಯಸ್ತು" ಎಂದುದು
ಕೂಡಲಚೆನ್ನಸಂಗನ ವಚನ. || ೫೩ ||

೫೫೪

ಅಂಗದ ಮೇಲಣ ಲಿಂಗ ಅಂಗಲಿಂಗವಯ್ಯಾ,
ಪ್ರಾಣದ ಮೇಲಣ ಲಿಂಗ ಪ್ರಾಣಲಿಂಗವಯ್ಯಾ,
ಭಾವದ ಮೇಲಣ ಲಿಂಗ ಭಾವಲಿಂಗವಯ್ಯಾ.
ಕೂಡಲಚೆನ್ನಸಂಗಾ ಲಿಂಗತ್ರಿವಿಧನಿರ್ಣಯ, ನಿಮ್ಮಲ್ಲಿ. || ೫೪ ||

೫೫೫

ಆಯತ-ಸ್ವಾಯತ-ಸಂಯೋಗಸಂಬಂಧಿಯ ಆಚಾರವಡಗಿತ್ತು,
ಅನುಭಾವ ತೊಡರಿತ್ತು, ಕ್ರಿಯಾತೀತ ನಿಃಪತಿಯಾಯಿತ್ತು,
ಕೂಡಲಚೆನ್ನಸಂಗಾ ತ್ರಿವಿಧಸಂಬಂಧಿಗೆ. || ೫೫ ||

೫೫೬

ಎನ್ನ ಕಣ್ಣು ಕಾಬಳತೆ, ಮನ ಸುತ್ತುವಳತೆ
ಸರ್ವಲೋಕ ನಿಮ್ಮದೆಂದು ಶುದ್ಧ ನಾನು ಲಿಂಗಯ್ಯಾ.
ನಾಮ ಸೀಮೆಯೆಂಬುದು ಮನದಳತೆಯಲ್ಲ[ದೆ]
ನಿಸ್ಸೀಮ, ಕೂಡಲಚೆನ್ನಸಂಗಾ ನಿಮ್ಮ ಶರಣ. || ೫೬ ||

## ಶರಣನ ಭಕ್ತಸ್ಥಲ

೫೫೭

ಧನವ ಕೊಟ್ಟರೆ ದಾನಿಯಾದ, ತನುವ ಕೊಟ್ಟರೆ ವೀರನಾದ,
ಮನವ ಕೊಟ್ಟರೆ ವಶಿಯಾದ.

ಈ ತ್ರಿವಿಧದಿಂದ ಹೊರಗೆ ಕೊಡಬಲ್ಲರೆ
ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು. || ೫೭ ||

೫೫೮

ಭಕ್ತನಾದೆನೆಂದು ನಚ್ಚದಿರೊ ಅಣ್ಣಾ,
ನಿನ್ನ ಕರಣಾದಿಗಳ ಭಕ್ತರ ಮಾಡಯ್ಯಾ.
ಹಸಿವು ತೃಷೆ ವಿಷಯ ಘನ ನೋಡಯ್ಯಾ.
ಇವು, ಮನಸಹಿತ ಮಜ್ಜನಕ್ಕೆರೆದರೆ
ಹಿಂದಣ ಭವಿಸಂಗ ಹಿಂಗದು ನೋಡಾ.
ಮೃತಕರೋಟಿ ವರ್ತಮಾನರಿಬ್ಬರು ಅವರ ತಮ್ಮನೊಬ್ಬ–
ಇಂತೀ ಮೂವರ ಹಿಂಗಿಸಿ ಮಜ್ಜನಕ್ಕೆರೆದು
ಲಿಂಗಸಂಗಿಯಾಗಿಪ್ಪ ಕೂಡಲಚೆನ್ನಸಂಗಾ, ನಿಮ್ಮ ಶರಣ. || ೫೮ ||

೫೫೯

ಆಸೆಯಾಮಿಷ ತಾಮಸ ಹುಸಿ ವಿಷಯುವೆಲ್ಲವನೂ ಸಟೆಯುಂ ಮಾಡಿ,
ಸದ್ಗುಣವೆಂಬ ಗೋಮಯವನು
ವಿನಯಾರ್ಥವೆಂಬ ಉದಕದಲ್ಲಿ ಸಮ್ಮಾರ್ಜನೆಯಂ ಮಾಡಿ,
ಕುಟಿಲ ಕುಹಕ ಕ್ರೋಧ ಕ್ಷುದ್ರ ಮಿಥ್ಯಮಿವೆಲ್ಲವ
ಪುಡಿಗುಟ್ಟಿ ರಂಗವಾಲಿಯನಿಕ್ಕಿ,
ಸುಮತಿಯೆಂಬ ಹತ್ತಿಯುಂ ಕೊಂಡು,
ಪುಣ್ಯ ಪಾಪಗಳೆಂಬ ಕಸಗೋಷ್ಠಿಯುಂ ಕಳೆದು, ದೃಢವೆಂಬ ಬತ್ತಿಯುಂ ತೀವಿ,
ತನುವೆಂಬ ಪ್ರಣತೆಯಲ್ಲಿ ಕಿಂಕಿಲವೆಂಬ ತೈಲವನ್ನೆರೆದು,
ಜ್ಞಾನವೆಂಬ ಜ್ಯೋತಿಯುಂ ಪೊತ್ತಿಸಿ,
ಸಮತೆಸಲಿಲವೆಂಬ ಅಗ್ಗಣಿಯ ಮಜ್ಜನಕ್ಕೆರೆದು,
ನಿರ್ಹೃದಯ ನಿಃಕಾಮ್ಯವೆಂಬ ಗಂಧಾಕ್ಷತೆಯುಂ ಕೊಟ್ಟು,
ಅಷ್ಟದಳಕಮಳವ ಕೊಯ್ದು, ಪೂಜೆಯುಂ ಮಾಡಿ,
ಪಂಚೇಂದ್ರಿಯ ವಿನಾಶವೆಂಬ ಪಂಚಾರತಿ, ನಿರಂತರ ಅವಧಾನವೆ ನಿರಂಜನ,
ತನು ಮುಖಾದಿಗಳನೇಕಾರ್ಥ ಮಾಡಿ, ಹಿಡಿವುದೇಕಾರತಿ.
ಸರ್ವಜೀವದಯಾಪರವೆಂಬ ಧೂಪವಂ ಬೀಸಿ,
ನಿರ್ಧಾರವೆಂಬ ನಿತ್ಯನೇಮವ ಸಲ್ಲಿಸಿ,
ಪರಮಾರ್ಥವೆಂಬ ನೈವೇದ್ಯವನಿಟ್ಟು,
ಶಿವಸುಖಸುಕಥಾ ವಿನೋದದಿಂದರ್ಪಿತವ ಮಾಡಿ,

ಪರಿಣಾಮವೆಂಬ ಪ್ರಸಾದವ ಸ್ವೀಕರಿಸಿ,
ಸುಜ್ಞಾನಭರಿತನಾಗಿಹ.
ಇಂತಪ್ಪ ಲಿಂಗಾರ್ಚಕರ ಶ್ರೀಪಾದವ ತೋರಿ ಬದುಕಿಸಾ
ಕೂಡಲಚೆನ್ನಸಂಗಮದೇವಾ. || ೫೯ ||

೫೬೦

ಕಾಯದ ಸಡಗರ ಸಂಭ್ರಮ[ದ] ಬಲೆಯಲ್ಲಿ ಸಿಲುಕಿಸಿದಿರೆನ್ನುವನು.
ಆನೆಂತು ಬಲ್ಲೆನೆಂದರೆ, ಪ್ರಾಣದ ಮೇಲೆ ಲಿಂಗಪ್ರತಿಷ್ಠೆಯ ಮಾಡಿ
ಬಲೆಯಲ್ಲಿ ಸಿಲುಕಿಸಿದಿರಿ.
ಇದು ಕಾರಣ ಸ್ವಾನುಭಾವರನರಸಲೇ ಬೇಕು,
ಕೂಡಲಚೆನ್ನಸಂಗಾ ನಿಮ್ಮ ಶರಣನು. || ೬೦ ||

೫೬೧

ಮುನ್ನರಿಯದೆ ಹಿಡಿದುದಕ್ಕೆಂತು? ಇನ್ನರಿದು ಬಿಟ್ಟಡದಕ್ಕೆಂತು?
ಹಿಡಿದಡೆ ಜ್ಞಾನವಿರೋಧ, ಬಿಟ್ಟಡೆ ಲೋಕವಿರೋಧ.
ಈ ಉಭಯಸ್ಥಳವನರಿದು ಬಿಡಬಲ್ಲ
ಕೂಡಲಚೆನ್ನಸಂಗಾ ನಿಮ್ಮ ಶರಣ. || ೬೧ ||

೫೬೨

ದೇಹ ನಿರ್ದೇಹವೆಂದೆನುತ್ತಿಪ್ಪರಯ್ಯಾ.
ದೇಹ ನಿರ್ದೇಹ[ದ] ಮರ್ಮವನರಿಯರು.
ಅಹಮ್ಮೆಂಬುದೆ ದೇಹ ನೋಡಾ, ದಾಸೋಹವೆಂಬುದೆ ನಿರ್ದೇಹ ನೋಡಾ.
ಅಹಂಭಾವವಳಿದುಳಿದು ದಾಸೋಹಿಯಾದ
ಕೂಡಲಚೆನ್ನಸಂಗಾ ನಿಮ್ಮ ಶರಣ. || ೬೨ ||

೫೬೩

ಶರಣಸತಿ ಲಿಂಗಪತಿಯೆಂಬ ಉಭಯ ಸಂದು ಬಿಡದು,
ಮಜ್ಜನವ ಮಾಡುವರಯ್ಯಾ.
ಪ್ರಾಣಲಿಂಗಕ್ಕೆಂದರ್ಪಿಸುವರು, ಮತ್ತೆ ಲಿಂಗಜಂಗಮಪ್ರಸಾದಪೆಂದೆಂಬರು
ಇಂತಪ್ಪ ಸಂದೇಹವುಳ್ಳನ್ನಕ್ಕ ಐಕ್ಯರೆಂತಪ್ಪರಯ್ಯಾ?
ಈ ಸಂಕಲ್ಪ ವಿಕಲ್ಪವೆಂಬ ಸಂದೇಹವ ಕಳೆದುಳಿದ
ಕೂಡಲಚೆನ್ನಸಂಗಾ ನಿಮ್ಮ ಶರಣ, || ೬೩ ||

# ಶರಣನ ಮಾಹೇಶ್ವರಸ್ಥಲ

೫೬೪

ಭಕ್ತಿ ಭಕ್ತಿಯೆಂದೇನು ತುತ್ತಿಡುವನ್ನಕ್ಕವೆ?
ಗುರು ಗುರುವೆಂದೇನು ಪರಕೆ ಹೆಸರ ಹೇಳುವನ್ನಕ್ಕವೆ?
ಲಿಂಗ ಲಿಂಗವೆಂದೇನು ಅಂಗ ಬೀಳುವನ್ನಕ್ಕವೆ?
ಜಂಗಮ ಜಂಗಮವೆಂದೇನು ಮುಂದಿದ್ದ ಧನವೆಲ್ಲಾ ಸವೆವನ್ನಕ್ಕವೆ?
ಪಾದೋದಕ ಪಾದೋದಕವೆಂದೇನು ಇವೆಲ್ಲಾ ಜಲವ ಕೂಡಿ ಹೋಹನ್ನಕ್ಕವೆ?
ಪ್ರಸಾದ ಪ್ರಸಾದವೆಂದೇನು ಉಂಡುಂಡು
ತನು ಕಳಚಿ ಪ್ರಳಯಕ್ಕೊಳಗಹನ್ನಕ್ಕವೆ?
ಅಲ್ಲಿ ನಿಂದಿರದಿರಾ ಮನವೆ,
ನಿಂದಿದ್ದರೆ ನೀ ಕೆಡುವೆ, ಬಂದರೆ ನಾ ಕೆಡುವೆ,
ಎನ್ನ ತಂದೆ ಕೂಡಲಚೆನ್ನಸಂಗಯ್ಯಾ,
ಈ ಅನುವ ಬಸವಣ್ಣ ತೋರಿದನಾಗಿ, ಆನು ಬದುಕಿದೆನು. || ೬೪ ||

೫೬೫

ವ್ರತಸ್ಥನರಿವು ಪ್ರಪಂಚಿನಲೆ ಹೋಯಿತ್ತು,
ಭಾಷೆವಂತನರಿವು ವಂಚನೆಯಲೆ ಹೋಯಿತ್ತು,
ನೇಮಸ್ಥನರಿವು ಸಂಕಲ್ಪದಲೆ ಹೋಯಿತ್ತು,
ಶೀಲವಂತನರಿವು ಸೂತಕದಲೆ ಹೋಯಿತ್ತು,
ಜಂಗಮದರಿವು ಬೇ[ಡಿದಾಗ]ಲೆ ಹೋಯಿತ್ತು,
ಪ್ರಸಾದದರಿವು ಬೆರಕೆಯಲ್ಲಿ ಹೋಯಿತ್ತು.
ಇಂತೀ ಷಡುಸ್ಥಲದ ನಿರ್ಣಯ [ಇ]ಲ್ಲದೆ
ಹೋಯಿತ್ತು ಕೂಡಲಚೆನ್ನಸಂಗನಲ್ಲಿ. || ೬೫ ||

೫೬೬

ಕಾಣಬಹ ಲಿಂಗವೆಂದು ಅಗ್ಘಣಿಯನೆ ಕೊಟ್ಟು ಕೆಳೆಯಾದಿರಲ್ಲಾ, ಲೋಕಕ್ಕೆ!
ನಿರಾಳಲಿಂಗಕ್ಕೆ ಕೊಡಲರಿಯರು,
ಕಂಡವರ ಕಂಡು ಕಂಡಂತೆ, ಉಂಡವರ ಕಂಡು ಉಂಡಂತೆ.
ಇದು ಕಾರಣ ಕೂಡಲಚೆನ್ನಸಂಗನಲ್ಲಿ
ಇಂಥವರ ಕಂಡು ನಾಚಿತ್ತೆನ್ನ ಮನವು. || ೬೬ ||

೫೬೭

ಅಷ್ಟವಿಧಾರ್ಚನೆ ಷೋಡಶೋಪಚಾರವ ಲಿಂಗಕ್ಕೆ ಮಾಡಿ,
ಜಂಗಮಕ್ಕೆ ಮಾಡದವರ ಕಂಡರೆ ಭಕ್ತರೆಂತೆಂಬೆ?
ಇಂದ್ರಿಯಂಗಳ ಬೆಂಬಳಿಯಲ್ಲಿ ಹೋಗಿ,
ನಿಮ್ಮ ಚರಿತ್ರವ ನೆನೆಯದವರ ಕಂಡರೆ ಶರಣರೆಂತೆಂಬೆ?
ಅನಿಮಿಷದೃಷ್ಟಿಯಲ್ಲಿ ನೋಡುವರ ಅನಿಮಿಷರೆಂದೆಂಬೆನೆ?
ನೀವೆ ತಾನಾಗಿ ವೈದೋರದವರ ಕಂಡರೆ, ಎನ್ನ ವಿಸ್ತಾರವೆಂಬೆ,
ಕೂಡಲಚೆನ್ನಸಂಗಮದೇವಾ. || ೬೭ ||

೫೬೮

ಅಂತರಂಗದ ಭಕ್ತಿ ಹಾದರಿಗನ ತೆರನಂತೆ,
ಬಹಿರಂಗದ ಭಕ್ತಿ ವೇಶಿಯ ತೆರನಂತೆ,
ಅಂತರಂಗವೂ ಅಲ್ಲ, ಬಹಿರಂಗವೂ ಅಲ್ಲ,
ಶರಣನ ನಿಲವು ಬೇರೆ, ಕೂಡಲಚೆನ್ನಸಂಗನೆಂಬ ಮಾತಂತಿರಲಿ. || ೬೮ ||

೫೬೯

ಮಾಡುವಲ್ಲಿ ಭಕ್ತನೆ? ಮಾಟದ ಕ್ರಮವರಿಯದನ್ನಕ್ಕ.
ನೀಡುವಲ್ಲಿ ಭಕ್ತನೆ?
ಸಯದಾನದ ಸನ್ನಹಿತದ ಮರ್ಮವ ತಿಳಿಯದನ್ನಕ್ಕ.
ಸುಳಿವಲ್ಲಿ ಜಂಗಮವೆ? ಸುಳಿವಲ್ಲಿ ಸೋಂಕು ತಿಳಿಯದನ್ನಕ್ಕ.
ಈ ಉಭಯಕುಳವಳಿಯದನ್ನಕ್ಕ
ಭವ ಹಿಂಗದು ಕೂಡಲಚೆನ್ನಸಂಗಮದೇವಾ. || ೬೯ ||

೫೭೦

ಪಥವನರಿಯದೆ ಮಂಡೆಯ ಬೋಳಿಸಿಕೊಂಡರೆ ಜಂಗಮವೆ? ಅಲ್ಲ,
ಹಮ್ಮು ಬಿಮ್ಮು ಗಮನನಾಸ್ತಿಯಾದರೆ ಜಂಗಮ.
ಸತ್ತರೆ ತೆಗೆವರಿಲ್ಲೆಂದು ಕಟ್ಟಿಕೊಂಡರೆ ಭಕ್ತನೆ? ಅಲ್ಲ,
ಅರ್ಥ ಪ್ರಾಣ ಅಭಿಮಾನಕ್ಕೆ ವಿರೋಧಿಯಾದರೆ ಭಕ್ತ.
ತನುಗುಣ ನಾಸ್ತಿಯಾಗಿ ಮನ ಲಿಂಗದಲ್ಲಿ ಸಿಲುಕಿತ್ತು,
ಇದು ಕಾರಣ ಕೂಡಲಚೆನ್ನಸಂಗಯ್ಯಾ
ಪ್ರಭು ಜಂಗಮ, ಬಸವ ಭಕ್ತ. || ೭೦ ||

೫೭೧

ಕಾಸೆ ಕಮಂಡಲ ಉತ್ತಮಾಂಗ ವಿಭೂತಿ ರುದ್ರಾಕ್ಷಿ ಸಹಿತಿದ್ದವರ
ಜಂಗಮವೆಂದು ನಂಬುವನೆ? ನಂಬೆ ಕಾಣಾ!
ಅದೇನು ಕಾರಣ:
ಸಾಕಾರದಲ್ಲಿ ಸನುಮತರಲ್ಲ, ಪರಿಣಾಮದಲ್ಲಿ ಪರಿಚಿತರಲ್ಲಾಗಿ.
ಇದು ಕಾರಣ ಕೂಡಲಚೆನ್ನಸಂಗನಲ್ಲಿ
ಲಕ್ಷಕೊಬ್ಬ ಭಕ್ತ, ಕೋಟಿಗೊಬ್ಬ ಶರಣ. ॥ ೭೧ ॥

೫೭೨

ಗುರುವಿನ ಗುರು ಪರಮಗುರು ಜಂಗಮವೆಂದೆನಿಸಿಕೊಂಬರು.
ದೀಕ್ಷೆ ಶಿಕ್ಷೆ ಮಾಡಿದಲ್ಲಿ ದಾಸೋಹವ ಮಾಡಿಸಿಕೊಳ ಕರ್ತರಲ್ಲದೆ
ತನ್ನ ಪ್ರಾಣಲಿಂಗವ ಕೊಡ ಕರ್ತರಲ್ಲ.
ಪ್ರಾಣಲಿಂಗವ ಕೊಟ್ಟು ಗುರುವಾದ ಬಳಿಕ, ಜಂಗಮಸ್ಥಲಕ್ಕೆ ಭಂಗಹೊದ್ದಿತ್ತು,
ಕೂಡಲಚೆನ್ನಸಂಗಮದೇವಾ. ॥ ೭೨ ॥

೫೭೩

ಕಿಸು ಕಾಷಾಂಬರವನಿಕ್ಕಿದರೇನು? ರುದ್ರಾಕ್ಷೆಯ ಮುಕುಟವ ಧರಿಸಿದರೇನು?
ಸಾಕಾರದಲ್ಲಿ ಸನುಮತರಲ್ಲ, ನಿರಾಕಾರದಲ್ಲಿ ನಿರುತರಲ್ಲ,
ಪರಮಾರ್ಥದಲ್ಲಿ ಪರಿಣಾಮಿಗಳಲ್ಲ.
ಇದುಕಾರಣ ಕೂಡಲಚೆನ್ನಸಂಗಯ್ಯಾ
ತುರುಬಾಗಲಿ, ಬೋಳಾಗಲಿ, ಅರಿವುಳ್ಳುದೆ ಜಂಗಮ. ॥ ೭೩ ॥

೫೭೪

ಧರೆಯ ಮೇಲೆ ಸುಳಿವ ವೇಷಲಾಂಛನಧಾರಿಗಳೆಯ್ದೆ,
ಹದಿನೆಂಟು ಜಾತಿಯ ಮನೆಯ ಭಿಕ್ಷವನುಂಡು ಕೆಟ್ಟರು.
ಅರೆಯ ಮೇಲಿಪ್ಪ ಆರುಹಿರಿಯರೆಯ್ದೆ ವಾಯುಭಿಕ್ಷವನುಂಡು ಕೆಟ್ಟರು.
ಗಿರಿಯ ಮೇಲಿಪ್ಪ ತಪಸ್ವಿಗಳೆಯ್ದೆ ವನಭಿಕ್ಷವನುಂಡು ಕೆಟ್ಟರು.
ಅರಿಯದೆ ಇಂದ್ರಿಯಂಗಳ ಕಟ್ಟಿ ಕುರುಹಿನ ನರಕಕ್ಕೆ ಹೋಹವರ
ಹಿರಿಯರೆಂದು ಎನಗೆ ತೋರದಿರಾ.
ಸರ್ವ ಭ್ರಾಂತಳಿದ ಮಹಂತರನೆನಗೆ ತೋರಾ,
ಕೂಡಲಚೆನ್ನಸಂಗಮದೇವಾ. ॥ ೭೪ ॥

೫೭೫

ಭೂಮಿಯ ಮೇಲೆ ಇದ್ದ ಅಚಲಪೀಠವೆಲ್ಲಾ ಲಿಂಗವೆ?
ಅಲ್ಲ, ಲಿಂಗಮೂರ್ತಿ ಇಲ್ಲಾಗಿ.
ಜಾಯತೇ ಚರಾದಿಗಳೆಲ್ಲಾ ಜಂಗಮವೆ?
ಅಲ್ಲ, ಆಚಾರ ಸಮತೆ ಸಂಬಂಧವಿಲ್ಲಾಗಿ, ಇವರೆಲ್ಲರೂ ಉಪಜೀವಿಗಳು.
ಕೂಡಲಚೆನ್ನಸಂಗಮದೇವ ಸಹವಾಗಿ
ಉಭಯಲಿಂಗ ಜಂಗಮವಾದವರಿಗೆ ನಮೋ ನಮೋಯೆಂಬೆ. || ೭೫ ||

೫೭೬

ಪೂರ್ವಾಶ್ರಯ ಪೂರ್ವಾಶ್ರಯವೆಂದೆಂಬರು,
ಪೂರ್ವಾಶ್ರಯವಾವುದೆಂದರಿಯರು.
ಪೂರ್ವವೆಂಬುದೆ ಬಂದ ಬಟ್ಟೆ, ಆಶ್ರಯವೆಂಬುದೆ ಕರಣಾದಿ ಗುಣಂಗಳು.
ಈ ಉಭಯವಳಿದು ಕೂಡಲಚೆನ್ನಸಂಗನಲ್ಲಿಪ್ಪ
ಶರಣಂಗೆ ಶರಣೆಂಬೆ. || ೭೬ ||

೫೭೭

ಮನದದ್ಭುತವಹಂಕಾರವಳಿಯದನ್ನಕ್ಕ ಸದ್ಭಕ್ತಿ ಸದರವೆಂತೆಂಬೆನು?
ಕಾಯ ಸವ್ಯಾಮೋಹಿಯನು ಲಾಂಛನಧಾರಿಯೆಂಬೆನು,
ಜೀವ ಸವ್ಯಾಮೋಹಿಯನು ಸಂಸಾರಿಯೆಂಬೆನು.
ಇದು ಕಾರಣ ಮಿಗೆ ಮಿಗೆ ಮೀಸಲು
ಸಲೆ ಸಹಜ ಕೂಡಲಚೆನ್ನಸಂಗನೆಂಬೆನು. || ೭೭ ||

೫೭೮

ಖಾಂಡಾವಿಯ ಕೀಲ ಬಲ್ಲರೆ, ಮುಂದ ಏವಿಯ ಅನುಭವ ಬಲ್ಲರೆ,
ಪಣ್ಣಾವಿಯ ಭಾವವ ಬಲ್ಲರೆ, ಕಾಳಾಮುಖದ ನಿಲವ ಬಲ್ಲರೆ,
ಕೂಡಲಚೆನ್ನಸಂಗನೆಂಬೆನು. || ೭೮ ||

೫೭೯

ಅಂಬುಧಿಯ ಸಂಚದ ಕುಳವನರಿಯರು,
ಪ್ರಾಣನಾಥನ ಬಿಂದುವಿನ ಅನುವನರಿಯರು.
ಖಾಂಡಾವಿಯ ಬಿಂದುವಿನ ಠಾವನರಿಯರು.
ಈ ತ್ರಿವಿಧದ ಮುಖವನರಿದಡೆ ಕೂಡಲಚೆನ್ನಸಂಗನೆಂಬೆನು. || ೭೯ ||

೫೮೦

ಲಿಂಗಭಾಜನದಲ್ಲಿ ಸಹಭೋಜನವ ಮಾಡಿಹೆವೆಂದೆಂಬರು,
ಲಿಂಗಭಾಜನದಲ್ಲಿ ಸಹಭೋಜನವ ಮಾಡುವವರ ನೋಡಿರೇ.
ಲಿಂಗವಂತರೆಲ್ಲಾ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ಆಸೆವುಳ್ಳನ್ನಕ್ಕ
ಲಿಂಗಭಾಜನದಲ್ಲಿ ಸಹಭೋಜನವ ಮಾಡುವ ಪರಿಯೆಂತೊ?
ಹಸಿವು ತೃಷೆ ನಿದ್ರೆ ಆಲಸ್ಯ ವ್ಯಸನವುಳ್ಳನ್ನಕ್ಕ,
(ಲಿಂಗಭಾಜನದಲ್ಲಿ ಸಹಭೋಜನವ ಮಾಡುವ ಪರಿಯೆಂತೊ?)
ಗುರುಲಿಂಗಜಂಗಮ ತ್ರಿವಿಧಸಂಪನ್ನತೆವುಳ್ಳನ್ನಕ್ಕ,
ಲಿಂಗಭಾಜನದಲ್ಲಿ ಸಹಭೋಜನವ ಮಾಡುವಜ್ಞಾನಿಗಳು
ತಾವೇ ಲಿಂಗವೆಂಬರು, ಲಿಂಗವೇ ತಾವೆಂಬರು.
ತಾವೆ ಲಿಂಗವಾದರೆ ಜನನ ಮರಣ ರುಜೆ ತಾಗು ನಿರೋಧವಿಲ್ಲದಿರಬೇಡಾ?
ಮಹಾಜ್ಞಾನವ ಬಲ್ಲೆವೆಂದು ತಮ್ಮ ಭಾಜನದಲ್ಲಿ ಲಿಂಗಕ್ಕೆ ನೀಡುವ
ಪಾತಕರ ತೋರದಿರು ಕೂಡಲಚೆನ್ನಸಂಗಮದೇವಾ. || ೮೦ ||

೫೮೧

ಪರುಷದ ಪುತ್ಥಳಿಯ ಬಸುರಲ್ಲಿ ಅವಲೋಹ ಹುಟ್ಟುವುದೆ ಅಯ್ಯಾ?
ಮರಳಿ ಮರಳಿ ಪರುಷ ಮುಟ್ಟಿ ಸುವರ್ಣವಹರೆ,
ಮುನ್ನ ಮುಟ್ಟಿತ್ತೆಲ್ಲಾ ಹುಸಿಯೇ?
ಇದು ಕಾರಣ ಕೂಡಲಚೆನ್ನಸಂಗಯ್ಯ ಮೆಚ್ಚ,
ಭವಿಯ ಕಳೆದು ಸಂಬಂಧಿಗೆ ಸಂಗವಾದರೆ. || ೮೧ ||

೫೮೨

ಸಾಲೋಕ್ಯ ಬೇಕೆಂದು ಪೂಜಿಸಿ ಸಾಲೋಕ್ಯವ ಪಡೆವರು,
ಸಾಮಿಪ್ಯ ಬೇಕೆಂದು ಪೂಜಿಸಿ ಸಾಮಿಪ್ಯವ ಹಡೆವರು,
ಸಾರೂಪ್ಯ ಬೇಕೆಂದು ಪೂಜಿಸಿ ಸಾರೂಪ್ಯವ ಪಡೆವರು,
ಸಾಯುಜ್ಯ ಬೇಕೆಂದು ಪೂಜಿಸಿ ಸಾಯುಜ್ಯವ ಪಡೆವರು.
ಇಂತೀ ನಾಲ್ಕು ಪದವಿಗಳು ಬೇಕೆಂದು ಪೂಜಿಸಿ
ನಾಲ್ಕು ಪದವಿಗಳ ಬೇಡಿ ಇತ್ತಿತ್ತಲಾದರಲ್ಲದೆ,
ಅವರು ನಿಮ್ಮ ವೇದಿಸಲರಿಯರು.
ಅಂಥವರು ಎಲ್ಲಾ ಕೊಟ್ಟು ಕೊಂಡಾಡುವ ಕೂಲಿಕಾರರೆಲ್ಲಾ ನಿಮ್ಮ ಬಲ್ಲರೆ?
ಕೂಡಲಚೆನ್ನಸಂಗಯ್ಯಾ ನಿಮ್ಮ ಶರಣನಲ್ಲದೆ. || ೮೨ ||

೫೮೩

ಎರಡೂರ ಮಧ್ಯದಲ್ಲಿ ನೆಟ್ಟ ಸೀಮೆಯ ಕಲ್ಲು-
ಲಿಂಗವೆಂದು ಕೊಟ್ಟಾತ ಗುರುವಲ್ಲ, ಕೊಂಡಾತ ಶಿಷ್ಯನಲ್ಲ.
ಆದಿಯನರಿಯದ ಗುರು, ವೇಧಿಸಲರಿಯದ ಶಿಷ್ಯ,
ಇವರಿಬ್ಬರೂ ಶಿವಾಚಾರಕ್ಕೆ ಹೊರಗು,
ಕೂಡಲಚೆನ್ನಸಂಗಯ್ಯಾ. || ೮೩ ||

೫೮೪

ಹಿಂದ ಮರಹಿಸದೆ, ಮುಂದನರುಹಿಸದೆ
ಹರಿಹರಿದು ಉಪದೇಶವ ಮಾಡುವ ಹೀಹಂದಿಗಳನೇನೆಂಬೆನಯ್ಯಾ?
ಗಂಡನ ಗುರು ಹೆಂಡತಿಯ ಮಾವನೆ?
ಹೆಂಡತಿಯ ಗುರು ಗಂಡನ ಮಾವನೆ?
ಉಪಮೆಗೆ ಬಾರದ ವಸ್ತುವ ಭಾವಕ್ಕೆ ತಂದು ನುಡಿವ ನರಕಿಗಳ
ಕೂಗಿಡೆ ಕೂಗಿಡೆ ನರಕದಲದ್ದೂದ ಮಾಬನೆ
ಕೂಡಲಚೆನ್ನಸಂಗಯ್ಯ? || ೮೪ ||

೫೮೫

ಭವಿಯ ತಂದು ಪೂರ್ವಾಶ್ರಯವ ಕಳೆದು ಭಕ್ತನ ಮಾಡಿದ ಬಳಿಕ,
ಪೂರ್ವವನ್ನೆತ್ತಿ ನುಡಿವ ಶಿವದ್ರೋಹಿಯ ಮಾತ ಕೇಳಲಾಗದು.
ಲಿಂಗವೆ ಗುರು, ಗುರುವೇ ಲಿಂಗವೆಂದು, ಪೆಸರಿಟ್ಟು ಕರೆವ
ಗುರುದ್ರೋಹಿಯ ಮಾತ ಕೇಳಲಾಗದು.
ಪೆಸರಿಲ್ಲದ ಅಪ್ರಮಾಣ ಮಹಿಮನನು ಹೆಸರಿಟ್ಟು ಕರೆವ
ಲಿಂಗದ್ರೋಹಿಯ ಮಾತ ಕೇಳಲಾಗದು.
ಪೂರ್ವವಿಲ್ಲದ ಶಿಷ್ಯ, ನೇಮವಿಲ್ಲದ ಗುರು, ಪೆಸರಿಲ್ಲದ ಲಿಂಗ
ಈ ತ್ರಿವಿಧವನರಿಯದೆ ಕೆಟ್ಟು ಹೋದರು,
ಕೂಡಲಚೆನ್ನಸಂಗಯ್ಯಾ. || ೮೫ ||

೫೮೬

ಗುರುವಾಗಬಹುದು, ಶಿಷ್ಯನಾಗಬಾರದು.
ದೇವನಾಗಬಹುದು, ಭಕ್ತನಾಗಬಾರದು.
ಶಿಷ್ಯನ ಪೂರ್ವಾಶ್ರಯವ ಗುರುವರಿಯ
(ಗುರುವಿನ ಪೂರ್ವಾಶ್ರಯವ ಶಿಷ್ಯನರಿಯ?)

ಆಶೆ ನಿಮಿತ್ತವಾದ ಭಕ್ತಿ ಮುಕ್ತಿಗೆ ಸಾಧನವಲ್ಲ,
ಕೂಡಲಚೆನ್ನಸಂಗನಲ್ಲಿ ನೇಮದ ಲೆಂಕರು. || ೮೬ ||

೫೮೭

ತಪವೆಂಬುದು ಬಂಧನ, ನೇಮವೆಂಬುದು ತಗಹು,
ಶೀಲವೆಂಬುದು ಸೂತಕ, ಭಾಷೆಯೆಂಬುದು ಪ್ರಾಣಘಾತಕ.
ಈ ಚತುರ್ವಿಧದೊಳಗೆ ಇಲ್ಲ,
ಕೂಡಲಚೆನ್ನಸಂಗಯ್ಯ ಏಕೋಗ್ರಾಹಿ. || ೮೭ ||

೫೮೮

ಭವಿ ಮಣ್ಣಲಿ ಮಾಡಿದ ಮಡಕೆಯ ಕಳೆವುದು ಶೀಲವೆ?
ಅಲ್ಲಲ್ಲಿ ಮೆಟ್ಟಿದ ಭೂಮಿಯ ಕಳೆವುದು ಶೀಲವೆ?
ಕೆರೆ ಬಾವಿ ತೊರೆಯ ತೊರೆವುದು ಶೀಲವೆ?
ಅಲ್ಲಲ್ಲಿಗೆ ಒಸರುವ ಉದಕವ ತೊರೆವುದು ಶೀಲವೆ?
ಲಿಂಗಾರ್ಪಿತ ಮಾಡಿದ ಪ್ರಸಾದವ ಭವಿ ನೋಡಲಿಕ್ಕೆ ಕೊಂಡರೆ ಭಾಷೆಗೆ ವ್ರತಗೇಡಿ,
ಕೊಳ್ಳದಿದ್ದರೆ ಪ್ರಸಾದದ್ರೋಹಿ.
ಇದು ಕಾರಣ, ಕೂಡಲಚೆನ್ನಸಂಗನಲ್ಲಿ
ಸಂಕಲ್ಪ ವಿಕಲ್ಪದಿಂದ ಕೆಟ್ಟಿತ್ತು ಶೀಲ. || ೮೮ ||

೫೮೯

ಭಕ್ತರ ಮಠಕ್ಕೆ ಬಂದು ಒಳಹೊರಗೆಂಬುದು ಶೀಲವೆ?
ಎನ್ನ ಲಿಂಗಕ್ಕೆ ಒಳ್ಳಿಹ ಅಗ್ಘಣಿಯ ತನ್ನಿ ಎಂಬುದು ಶೀಲವೆ?
ಎನ್ನ ಲಿಂಗಕ್ಕೆ ಒಳ್ಳಿಹ ಪುಷ್ಪವ ತನ್ನಿ ಎಂಬುದು ಶೀಲವೆ?
ಎನ್ನ ಲಿಂಗಕ್ಕೆ ಓಗರ ಮಾಡಿ ಎಂಬುದು ಶೀಲವೆ?
ಪಂಚೇಂದ್ರಿಯ ಸಪ್ತಧಾತು ಅರಿಷಡ್ವರ್ಗವ ಕೊಂದಾತನು
ಕೂಡಲಚೆನ್ನಸಂಗನಲ್ಲಿ ಆತನೆ ಶೀಲವಂತನು. || ೮೯ ||

೫೯೦

ಶೀಲವಾದಡೆ ಪ್ರಪಂಚು ನಾಸ್ತಿಯಾಗಬೇಕು,
ಸೀಮೆಯಾದಡೆ ಪಂಚೇಂದ್ರಿಯ ನಾಸ್ತಿಯಾಗಿರಬೇಕು,
ಸೀಮೆಯಾದಲ್ಲದೆ ಭಕ್ತನೆನಿಸಬಾರದು,
ಶೀಲವಾದಲ್ಲದೆ ಶರಣನೆನಿಸಬಾರದು,

ಶೀಲಕ್ಕೆ ಭವಿನಾಸ್ತಿ, ಸೀಮೆಗೆ ಭವಂ ನಾಸ್ತಿ,
ಈ ದ್ವಿವಿಧನಾಸ್ತಿಯಾದಲ್ಲದೆ ಕೂಡಲಚೆನ್ನಸಂಗನಲ್ಲಿ
ಶೀಲವಂತನೆಂದೆನಿಸಬಾರದು. ‖ ೯೦ ‖

೫೯೧

ಶೀಲ ಸಂಬಂಧವನೆಂತು ಮಾಡುವರಯ್ಯ,
ಮನದಂತುವನರಿಯಬಾರದೆ?
ಕಾಯದ ಕಳವಳವು ತಮತಮಗೆ ತಟತಟ ತಾಗುತ್ತಿರಲು
ಶೀಲ ಶೀಲದಂತೆ, ತಾವು ತಮ್ಮಂತೆ, ಲಿಂಗ ಲಿಂಗದಂತೆ,
ಮನದೊಳಗೆ ಎನಗೆ ತನಗೆಂಬ ಭಾವ ಬಿಡದನ್ನಕ್ಕ ಶೀಲ ಮತ್ತೆಲ್ಲಿಯದೊ?
ಅಷ್ಟಮದವಳಿದು ಷಡ್ವರ್ಗವರತಡೆ,
ಕೂಡಲಚೆನ್ನಸಂಗನಲ್ಲಿ ಸುಶೀಲನೆಂಬೆನು. ‖ ೯೧ ‖

೫೯೨

ಶೀಲವಂತರು ಶೀಲವಂತರೆಂದೆಂಬರು,
ಶೀಲ ಸಂಬಂಧದ ಹೊಲಬನರಿಯದ ಭ್ರಮಿತ ಪ್ರಾಣಿಗಳು ನೀವು ಕೇಳಿ ಭೋ!
ಕಾಮವೆಂಬುದೊಂದು ಪಾಪಿ, ಮದವೆಂಬುದೊಂದು ದ್ರೋಹಿ,
ಮತ್ಸರವೆಂಬುದೊಂದು ಹೊಲೆಯ,
ಕ್ರೋಧವೆಂಬುದೊಂದು ಕೈಸೂನೆಗಾರ,
ಮನವ್ಯಾಪಕಂಗಳು ಭವಿ.
ಇಂತಿವಸರಿದು ಮರೆದು ಹರವಸಂಬೋಗಿ ಹೊಯಿ ಹಡೆದಂತಿದ್ದರೆ
ಕೂಡಲಚೆನ್ನಸಂಗನಲ್ಲಿ ಅವರ ಲಿಂಗವಂತರೆಂಬೆ. ‖ ೯೨ ‖

೫೯೩

ಅಗ್ಘಣಿ ಮೀಸಲಾಗಬೇಕೆಂಬುದು ಶೀಲವೆ?
ಪುಷ್ಪ ಮೀಸಲಾಗಬೇಕೆಂಬುದು ಶೀಲವೆ?
ಇವು ಶೀಲವಲ್ಲ ಕಾಣಿರಯ್ಯಾ!
ಪಂಚೇಂದ್ರಿಯ ಷಡ್ವರ್ಗ ಸಪ್ತಧಾತು ಅಷ್ಟಮದಂಗಳ ಕಳೆಯಬಲ್ಲಡೆ
ಕೂಡಲಚೆನ್ನಸಂಗನಲ್ಲಿ ಅಚ್ಚಶೀಲ. ‖ ೯೩ ‖

೫೯೪

ನದಿ ಕೂಪ ತಟಾಕ ಜಲದಲ್ಲಿ ಕನ್ನವನಿಕ್ಕಿ ಉದಕವ ತಂದು,
ಮಜ್ಜನಕ್ಕೆರೆವವರು ಸುಯಿಧಾನಿಗಳಪ್ಪರೆ?
ಪಾಕದಲ್ಲಿ ಭವಿಪಾಕ ಪರಪಾಕವೆಂದು ಭುಂಜಿಸುವ
ಉದರಪೋಷಕರೆಲ್ಲಾ ಶೀಲವಂತರಪ್ಪರೆ? ಅಲ್ಲ.
ಆಸೆಯುರತು, ವ್ಯಸನ ಬೆಂದು, ವ್ಯಾಪ್ತಿಗಳೆಲ್ಲವು ತಲ್ಲೀಯವಾಗಿ,
ತನುಗುಣಾದಿಗಳೆಲ್ಲಾ ಸಮಾಪ್ತಿಯಾದಡೆ
ಕೂಡಲಚೆನ್ನಸಂಗನಲ್ಲಿ ಶೀಲವಂತರೆಂಬೆ. || ೯೪ ||

೫೯೫

ಶೀಲವಂತರು ಶೀಲವಂತರೆಂದೆಂಬರು ನಾವಿದನರಿಯೆವಯ್ಯ.
ಅಂಗನೆಯರ ಅಧರಪಾನವು
ತನ್ನ ಉದರವ ಹೊಗುವನ್ನಕ್ಕ ಶೀಲವೆಲ್ಲಿಯದೊ?
ಈಷಣತ್ರಯವೆಂಬ ಸೊಣಗ ಬೆಂಬತ್ತಿ ಬರುತ್ತಿರಲು ಶೀಲವೆಲ್ಲಿಯದೊ?
ಹೆರಸಾರಿ ಮನವು ಮಹದಲ್ಲಿ ನಿಂದರೆ ಶೀಲ,
ಪರಿಣಾಮ ನೆಲೆಗೊಂಡರೆ ಶೀಲ.
ಇದು ಕಾರಣ ಕೂಡಲಚೆನ್ನಸಂಗನಲ್ಲಿ ಶೀಲವಂತರಪೂರ್ವ. || ೯೫ ||

೫೯೬

ಶೀಲವಂತರೆಲ್ಲಾ ಶೀಲವಂತರಯ್ಯಾ,
ಭಾಷೆವಂತರೆಲ್ಲಾ ಭಾಷೆವಂತರಯ್ಯಾ,
ವ್ರತವಂತರೆಲ್ಲಾ ವ್ರತವಂತರಯ್ಯಾ,
ಸತ್ಯವಂತರೆಲ್ಲಾ ಸತ್ಯವಂತರಯ್ಯಾ,
ನೇಮವಂತರೆಲ್ಲಾ ನೇಮವಂತರಯ್ಯಾ,
ಕೂಡಲಚೆನ್ನಸಂಗಮದೇವಯ್ಯಾ
ಸಂಗನಬಸವಣ್ಣನೊಬ್ಬನೆ ಲಿಂಗವಂತ. || ೯೬ ||

೫೯೭

ಭಕ್ತನೆ ಕುಲಜನೆಂಬರು, ಯುಕ್ತಿಯಲ್ಲಿ ವಿಚಾರಿಸರು ನೋಡಾ!
ವ್ಯಾಕುಳ ನಿರಾಕುಳವೆಂಬ ಎರಡು ಕುಳ ನೋಡಾ!
ವ್ಯಾಕುಳವೆ ಭವ, ನಿರಾಕುಳವೆ ನಿರ್ಭವ.

ವ್ಯಾಕುಳವೆ ಪಾಪ, ನಿರಾಕುಳವೆ ಪುಣ್ಯ.
ವ್ಯಾಕುಳವೆ ಭವಿ, ನಿರಾಕುಳವೆ ಭಕ್ತ.
ಭವ ಬೀಜಂ ತಥಾ ಭಕ್ತಿರ್ಭಕ್ತಿಬೀಜಂ ತಥಾ ಶಿವಃ।
ಶಿವಬೀಜಂ ತಥಾ ಜ್ಞಾನಂ ತ್ರೈಲೋಕ್ಯ ದುರ್ಲಭಂ॥
ಎಂದುದಾಗಿ, ಜ್ಞಾನಿಗೆ ಕತ್ತಲೆಯಿಲ್ಲ, ಅಜಾತಂಗೆ ಹೊಲೆಯಿಲ್ಲ,
ಕುಲಾಧೀಶ, ಕೂಡಲಚೆನ್ನಸಂಗಾ. ॥ ೯೭ ॥

೫೯೮

ಏನೆಂಬೆನಯ್ಯ? ಕಲ್ಪಿತ ಬಂಧನ ಬಿಡದು, ಪ್ರಸಾದಕ್ಕೆಂತೊ?
ಗಮನಶಂಕೆ ಬಿಡದು, ಪ್ರಾಣಲಿಂಗಕ್ಕೆಂತೊ?
ನಿಜತುಂಬಿ ನಿಕ್ಷೇಪವಾಗದು–
ಇದು ಕಾರಣ, ಅರ್ಪಿತವುಳ್ಳನ್ನಕ್ಕ ಪ್ರಸಾದಿಯಲ್ಲ.
ಅವಧಾನವುಳ್ಳನ್ನಕ್ಕ ಪ್ರಾಣಲಿಂಗಿಯಲ್ಲ,
ಕೂಡಲಚೆನ್ನಸಂಗಯ್ಯಾ. ॥ ೯೮ ॥

೫೯೯

ಧರೆಗೆ ಸೂತಕವುಂಟೆ? ವಾರಿಧಿಗೆ ಹೊಲೆಯುಂಟೆ?
ಉರಿವ ಅನಲಂಗೆ ಜಾತಿಭೇದವುಂಟೆ?
ಹರಿದು ಚರಿಸುವ ಅನಿಲಂಗೆ ಸೀಮೆಯುಂಟೆ?
ಆಕಾಶಕ್ಕೆ ದಾರಿ ಮೇರೆಯುಂಟೆ?
[ಇನಿತ]ರಿಂದಲೊದಗಿದ ಘಟವನು ಆರು ಹೊಲ್ಲೆಂಬರು?
ಸಾರವು ಕರ್ಮ, ಕೂಡಲಚೆನ್ನಸಂಗಮದೇವಾ
ನಿಮ್ಮ ಶರಣಂಗೆ. ॥ ೯೯ ॥

೬೦೦

ಕಾಲದಿಂದ ಸವೆದಡೆ ಲಿಂಗಪ್ರಾಣಿಯಲ್ಲ,
ಕಲ್ಪಿತದಿಂದ ಸವೆದಡೆ ಜಂಗಮಪ್ರೇಮಿಯಲ್ಲ,
ಸಂಸಾರದಿಂದ ಸವೆದಡೆ ಪ್ರಸಾದಸಂಬಂಧಿಯಲ್ಲ,
ಅರಿವಿಂದ ಸವೆದಡೆ ಲಿಂಗಾನುಭಾವಿಯಲ್ಲ.
ಕೂಡಲಚೆನ್ನಸಂಗನ ಶರಣನೊಬ್ಬಗಲ್ಲದಿಲ್ಲ. ॥ ೧೦೦ ॥

೬೦೧

ಆನು ಮಾಡಲು ಗುರುವಾದನಲ್ಲದೆ, ಗುರು ಮಾಡಲು ನಾನಾದೆನೆ?
ಗುರು ಮಾಡಲು ಲಿಂಗವಾಯಿತ್ತಲ್ಲದೆ, ಲಿಂಗ ಮಾಡಲು ಗುರುವಾದನೆ?
ಇಂತೀ ಉಭಯ ಕುಳಸ್ಥಳವನು ಕೂಡಲಚೆನ್ನಸಂಗನ ಶರಣ ಬಲ್ಲನಲ್ಲದೆ
ಎಲ್ಲರೂ ಎತ್ತ ಬಲ್ಲರು? ॥ ೧೦೧ ॥

೬೦೨

ಅಂಗದ ಆಪ್ಯಾಯನವಳಿಯದ ಕಾರಣ ಲಿಂಗ ಲಿಂಗವೆನುತ್ತಿದ್ದರು,
ಸಂಗದಾಪ್ಯಾಯನವಳಿಯದ ಕಾರಣ ಜಂಗಮ ಜಂಗಮವೆನುತ್ತಿದ್ದರು,
ಪರಿಣಾಮ ನೆಲೆಗೊಳ್ಳದ ಕಾರಣ ಪ್ರಸಾದ ಪ್ರಸಾದವೆನುತ್ತಿದ್ದರು.
ಒಂದೊಂದರಂಗವಿಡಿದು ನಾಮಭಂಗಿತರಾದರೆಲ್ಲ.
ಕೂಡಲಚೆನ್ನಸಂಗಾ ನಿಮ್ಮ ಶರಣ ಅಂಗವಿರಹಿತ. ॥ ೧೦೨ ॥

೬೦೩

ಕ್ರಿಯಾಲಿಂಗದ ಲಿಂಗಿಗಳೆಲ್ಲ ಕ್ರೀಯಳಿದ ಭಕ್ತರೆಂಬರಯ್ಯಾ.
ಕ್ರೀಯಳಿದ ಭಕ್ತಂಗೆ ಲಿಂಗವುಂಟೆ? ಕ್ರೀಯಳಿದ ಭಕ್ತಂಗೆ ಜಂಗಮವುಂಟೆ?
ಕ್ರೀಯಳಿದ ಭಕ್ತಂಗೆ ಪ್ರಸಾದವುಂಟೆ?
ಕ್ರೀಯಳಿದು ನಿಃಕ್ರೀಯಲ್ಲಿ ನಿಂದ ಕೂಡಲಚೆನ್ನಸಂಗಾ
ನಿಮ್ಮ ಶರಣ. ॥ ೧೦೩ ॥

೬೦೪

ಕಾಳಾಮುಖಿ ಕಂಗೆಟ್ಟ, ಶೈವ ಸೈವೆರಗಾದ,
ಪಾಶುಪತಿ ಪಥವರಿಯ, ಮಹಾವ್ರತಿ ಮದದಲಳಿದ,
ಕಾಪಾಲಿ ಮರುಳಾಗಿ ತಿರುಗಿದ.
ಈ ಐದುವನಲ್ಲೆಂದು ಕಳೆದು, ಕೂಡಲಚೆನ್ನಸಂಗನ ಶರಣನು
ಆರ ಮೀರಿ ಬೇರೆ ನಿಂದನು. ॥ ೧೦೪ ॥

೬೦೫

ಏಕೋವರ್ಣ ಷಡುವರ್ಣವೆಂಬೆನೆ ಪ್ರಭುವೆ? ಎನ್ನ ದೃಷ್ಟಿ ಕಾಣದು.
ಅಂಗವನೂ ಲಿಂಗವನೂ ಸಂಗವ ಮಾಡಿ ತೋರಿದರೆ
ಕೂಡಲಚೆನ್ನಸಂಗಯ್ಯಾ ನೀನೆಂಬೆನು. ॥ ೧೦೫

೬೦೬

ಆದಿ ಲಿಂಗಂ ಭೋ, ಅನಾದಿ ಶರಣಂ ಭೋ!
ಪೂರ್ವ ಲಿಂಗಂ ಭೋ, ಅಪೂರ್ವ ಶರಣಂ ಭೋ!
ಕೂಡಲಚೆನ್ನಸಂಗನಲ್ಲಿ ಸಾಧ್ಯ ಲಿಂಗಂ ಭೋ,
ಅಸಾಧ್ಯ ಶರಣಂ ಭೋ! ॥ ೧೦೬ ॥

೬೦೭

ತಾಪತ್ರಯವಿಲ್ಲದವ, ವ್ಯಾಪ್ತಿಯನರಿದವ,
ಇರುಳು ಹಗಲೆಂದು ಮನದಲ್ಲಿ ತಾಳದವ,
ತಾಳೋಷ್ಠ ಸಂಪುಟಕ್ಕೆ ಬಾರದವ,
ಭವಚ್ಛೇದ ಕಾಮಭಂಜನ ಕಾಯವಿಲ್ಲದವ,
ಕಾಲನ ಗೆದ್ದವ, ಮಾಯವ ತೊರೆದವ, ಮತ್ತೊಂದನರಿಯದವ
ನಮ್ಮ ಕೂಡಲಚೆನ್ನಸಂಗನನರಿದು ಸುಖಿಯಾದವ. ॥ ೧೦೭ ॥

## ಶರಣನ ಪ್ರಸಾದಿಸ್ಥಲ

೬೦೮

ಅರ್ಪಿತ ಅರ್ಪಿತವೆನುತ್ತಿಹರೆಲ್ಲ
ಅರ್ಪಿತವಾವುದೆಂದು ಹೇಳಿರಯ್ಯಾ?
ಕಾಯಾರ್ಪಿತವೆಂಬಿರೆ ಅಳಿವಿನೊಳಗಾಯಿತ್ತು,
ಭಾವಾರ್ಪಿತವೆಂಬಿರೆ ಭ್ರಮೆಗೊಳಗಾಯಿತ್ತು,
ಜಿಹ್ವಾರ್ಪಿತವೆಂಬಿರೆ ರುಚಿಯೊಳಗಾಯಿತ್ತು.
ಸರ್ವವೂ ಶಿವನಾಜ್ಞೆಯೊಳಗೆಂಬಿರೆ ಭವಬಂಧನ ಬಿಡದು.
ಅರ್ಪಿಸಲೇಬೇಕು, ಅರ್ಪಿಸಿದಲ್ಲದೆ ಪ್ರಸಾದವಾಗದು.
ಅರ್ಪಿತದ ವರ್ಮ ಸಕೀಲನು ಕೂಡಲಚೆನ್ನಸಂಗಾ
ನಿಮ್ಮ ಶರಣ ಬಲ್ಲ. ॥ ೧೦೮ ॥

೬೦೯

ಕಂಗಳ (ನೋಟ) ಲಿಂಗಕ್ಕೆ ಅರ್ಪಿತ,
ಮನ ಮುಟ್ಟಿದ ಆರೋಗಣೆಯೆಂಬುದೇನೊ?

ಸಂಕಲ್ಪವಿರಹಿತ ಶರಣನು,
ಆಗಮವಿರಹಿತ ಶರಣನಲ್ಲದೇನೊ? ಶರಣಂಗೆ ಸೀಮೆಯೆಂಬುದೇನೊ?
ನಿರ್ಭಾವದ ಕೈಯಲು ಮುಟ್ಟಿ ಲಿಂಗಾರ್ಪಿತವು,
ಮಿಕ್ಕುದು ಕಿಲ್ಬಿಷ ಕೂಡಲಚೆನ್ನಸಂಗಮದೇವಾ. || ೧೦೯ ||

೬೧೦

ಪ್ರಾಣಲಿಂಗಿಗಳಾದವರು ಪ್ರಸಾದಕಾಯರಪ್ಪರಲ್ಲದೆ
ಲಿಂಗಭಾಜನವೆಂತಳವಡುವುದಯ್ಯಾ?
ತನುವಿನಲ್ಲಿ ಪಂಚವಿಂಶತಿ ಗುಣಂಗಳೆಚ್ಚತ್ತಿಪ್ಪನ್ನಕ್ಕ,
ಲಿಂಗಭಾಜನವೆಂತಳವಡುವುದಯ್ಯಾ?
ಬಂದುದು ಬಾರದುದೆಂಬ ಸಂದೇಹವುಳ್ಳನ್ನಕ್ಕ,
ಕೊಂಡುದು ಕಿಲ್ಬಿಷ,–ಕೂಡಲಚೆನ್ನಸಂಗಮದೇವಾ. || ೧೧೦ ||

೬೧೧

ಅಂದಂದಿಂಗೆ ಬಂದ ಪದಾರ್ಥವನೆಂದೆಂದೂ
ತಾನುಂಬ ಕೈಯಲಿ ಕೊಡುವುದು ಎಂತೊ?
ಲಿಂಗಕ್ಕೆ ನೀಡುವರೆಂತೊ? ಲಿಂಗಕ್ಕೆ ಕೊಡುವರೆಂತೊ?
ಲಿಂಗಕ್ಕೆ ಸಲುವುದೆಂತೊ?
ಶಿವಶಿವಾ! ಮಂಚವೊಂದೆ, ಕಂಚು ಬೇರೆಂಬಪ್ರಪಂಚಿಯನೊಲ್ಲ
ಕೂಡಲಚೆನ್ನಸಂಗಮದೇವಾ. || ೧೧೧ ||

೬೧೨

ಅರ್ಪಿತ ಅನರ್ಪಿತವೆಂಬ ಉಭಯಕುಳದ ಶಂಕೆವುಳ್ಳನ್ನಕ್ಕ
ಅಚ್ಚಸಂಸಾರಿಯೆಂಬೆ.
ಅರ್ಪಿತ ಅನರ್ಪಿತವೆಂಬೆರಡ ಕಳೆದುನಿಂದಾತನಚ್ಚಲಿಂಗವಂತನೆಂಬೆ.
ಅರ್ಪಿತ ಅನರ್ಪಿತವನರ್ಪಿಸಿ ಪ್ರಸಾದ ಸ್ವೀಕರಿಸಬಲ್ಲಾತನ
ವಾಙ್ಮನಾತೀತನೆಂಬೆ.
ಅರ್ಪಿತವಿಲ್ಲ, ಅನರ್ಪಿತವಿಲ್ಲ, ಅಕಲ್ಪಿತವಯ್ಯಾ,
ಕೂಡಲಚೆನ್ನಸಂಗಮದೇವಾ. || ೧೧೨ ||

೬೧೩

ರೂಪುವಿಕಾರಿಗಳಿಗಿನ್ನಾಗದಯ್ಯಾ,
ರುಚಿವಿಕಾರಿಗಳಿಗಿನ್ನಾಗದಯ್ಯಾ,
ವಚನದ ರಚನೆಯ ನುಡಿವವರಿಗೆ ಪ್ರಸಾದ ವೇದ್ಯವಾಗದಯ್ಯಾ,
ಈ ತ್ರಿವಿಧದ ಮೊದಲನರಿಯದ ಅಸಂಬಂಧಿಗಳಿಗೆ ಇನ್ನಾಗದಯ್ಯಾ,
ಕೂಡಲಚೆನ್ನಸಂಗಾ ನಿಮ್ಮ ಪ್ರಸಾದ. || ೧೧೩ ||

೬೧೪

ಹದಿನೆಂಟು ಯುಗದವರು ಲಿಂಗವ ಪೂಜಿಸಿ
ದೃಷ್ಟವಾವುದು ನಷ್ಟವಾವುದೆಂದರಿಯದೆ
ಭಾವ ಭ್ರಾಮಿತರಾದರು.
ಜೀವ ಸಂಕಲ್ಪಿಗಳಾದವರು
ಜೀವದಾಹುತಿಯನೆ ಲಿಂಗಕ್ಕರ್ಪಿತವೆಂಬರು,
ಭವದ ಬಳ್ಳಿಯ ಹರಿಯಲರಿಯರು.
ಇಂಥವನೆ ಭಕ್ತ? ಇಂಥವನೆ ಪ್ರಸಾದಿ?
ಕೇಳು ಕೇಳು ಭಕ್ತನ ಮಹಿಮೆಯ (ಪ್ರಸಾದಿಯ ಮಹಿಮೆಯ):
ಪೃಥ್ವಿಯ ಸಾರಾಯದಲಾದ ಪದಾರ್ಥವ ಲಿಂಗಕ್ಕೆ ಕೊಡದ ಭಾಷೆ,
ಅಪ್ಪುವಿಂದಾದ ಅಗ್ಘಣೆಯ ಲಿಂಗಕ್ಕೆ ಕೊಡದ ಭಾಷೆ,
ತೇಜದಿಂದಾದ ನಿವಾಳಿಯ ಲಿಂಗಕ್ಕೆ ಕೊಡದ ಭಾಷೆ,
ವಾಯುವಿನಿಂದಾದ ಪರಿಮಳವ ಲಿಂಗಕ್ಕೆ ಕೊಡದ ಭಾಷೆ,
ಆಕಾಶದಿಂದಾದ ಶೂನ್ಯವ ಲಿಂಗಕ್ಕೆ ಕೊಡದ ಭಾಷೆ
ಇದೇನು ಕಾರಣವೆಂದಡೆ:
ಮತ್ತೊಂದು ಪೃಥ್ವಿವುಂಟಾಗಿ, ಮತ್ತೊಂದು ಅಪ್ಪುವುಂಟಾಗಿ,
ಮತ್ತೊಂದು ತೇಜವುಂಟಾಗಿ, ಮತ್ತೊಂದು ವಾಯುವುಂಟಾಗಿ
ಮತ್ತೊಂದು ಆಕಾಶವುಂಟಾಗಿ,
ಇವರ ಮೇಲಣ ಪಾಕದ್ರವ್ಯವ ಲಿಂಗಕ್ಕೆ ಕೊಡುವುದು ಭಕ್ತಿ.
ಕೂಡಲಚೆನ್ನಸಂಗಾ ಅರ್ಪಿತ ಮುಖವ ನಿಮ್ಮ ಶರಣ ಬಲ್ಲ. || ೧೧೪ ||

೬೧೫

ಕಾಯ ಪ್ರಸಾದವೊ, ಜೀವ ಪ್ರಸಾದವೊ, ಪ್ರಾಣ ಪ್ರಸಾದವೊ?
ಬಲ್ಲವರು ನೀವು ಹೇಳಿರೆ.
ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವೆಂದು ಹೆಸರಿಟ್ಟುಕೊಂಡು ಕರೆವಿರಿ,

ಕಾಯುವ ಕಳೆದು ಕಾಯಪ್ರಸಾದವೊ,
ಜೀವವ ಕಳೆದು ಜೀವಪ್ರಸಾದವೊ,
ಪ್ರಾಣವ ಕಳೆದು ಪ್ರಾಣಪ್ರಸಾಧವೊ?
ಇಂತಿವನುತ್ತರಿಸಿದ ಮಹಾಪ್ರಸಾದವನಲ್ಲದೆ ಕೊಳ್ಳೆ.
ರಂಜಕಪ್ರಸಾದಕಾನಂಜುವೆ ಕೂಡಲಚೆನ್ನಸಂಗಮದೇವಾ, ॥ ೧೧೫ ॥

೬೧೬

ಗಮನಿ ಲಿಂಗಜಂಗಮ, ನಿರ್ಗಮನಿ ಜಂಗಮಲಿಂಗ.
ಲಿಂಗಜಂಗಮ ಉಭಯಾರ್ಥದ ಸಂಚವನಾವುದ ಘನವೆಂಬೆ? ಆವುದ ಕಿರಿದೆಂಬೆ?
ಆಚಾರವುಳ್ಳಲ್ಲಿ ಪ್ರಾಣಲಿಂಗವಿಲ್ಲ, ಪ್ರಾಣಲಿಂಗವುಳ್ಳಲ್ಲಿ ಪ್ರಸಾದವಿಲ್ಲ.
ಇದು ಕಾರಣ ಕೂಡಲಚೆನ್ನಸಂಗಮದೇವಾ
ಅನಾಚಾರಿಗಲ್ಲದೆ ಪ್ರಸಾದವಿಲ್ಲ. ॥ ೧೧೬ ॥

೬೧೭

ಗುರುವುಳ್ಳಾತ ಶಿಷ್ಯನಲ್ಲ, ಪ್ರಸಾದವುಳ್ಳಾತ ಭಕ್ತನಲ್ಲ.
ಲಿಂಗೈಕ್ಯನಾದರೆ ಸ್ಥಾವರಲಿಂಗ ವಿರೋಧಿಯಾಗಿರಬೇಕು.
ಕಾಯಕ್ಕೆ ಸಾಹಿತ್ಯವಲ್ಲಿಯಾದರೆಯೂ ಉಂಟು,
ಆತ್ಮಸಾಹಿತ್ಯವಪೂರ್ವ.
ಆಚಾರಸಾಹಿತ್ಯ ಲೋಕ, ಅನಾಚಾರಸಾಹಿತ್ಯ ಶರಣ,
ಇದು ಕಾರಣ ಕೂಡಲಚೆನ್ನಸಂಗಯ್ಯಾ
ನಾನು ಅನಾಚಾರಿಯಾದ ಕಾರಣ ಎನಗೆ ಪ್ರಸಾದ ನೆಲೆಗೊಂಡಿತ್ತು. ॥ ೧೧೭ ॥

೬೧೮

ಭವಿಯು ತಂದು ಭಕ್ತನ ಮಾಡೂದನಾಚಾರ,
ಭಕ್ತನ ತಂದು ಭವಿಯ ಮಾಡೂದಾಚಾರ.
ಭವಿ ಮುಟ್ಟಿ ಪ್ರಸಾದ, ಭಕ್ತ ಮುಟ್ಟಿ ಓಗರ.
ಇದು ಕಾರಣ ಕೂಡಲಚೆನ್ನಸಂಗನಲ್ಲಿ
ಭವಿಯ ಪ್ರಸಾದವ ಕೊಂಡೆನ್ನ ಭವಂ ನಾಸ್ತಿಯಾಯಿತ್ತು. ॥ ೧೧೮ ॥

೬೧೯

ಲಿಂಗವನು ಭವಿಸೆಂಬೆ, ಜಂಗಮನು ಭವಿಯೆಂಬೆ,
ಪ್ರಸಾದವನು ಭವಿಯೆಂಬೆ,

ಅದೇನು ಕಾರಣ ಭವಿಯೆಂಬೆ?
ಈ ತ್ರಿವಿಧಕ್ಕೆ ಹಸ್ತಮಸ್ತಕ ಸಂಯೋಗವಿಲ್ಲದ ಕಾರಣ ಭವಿಯೆಂಬೆ.
ಇದು ಕಾರಣ ಈ ತ್ರಿವಿಧವನು
ಕೂಡಲಚೆನ್ನಸಂಗಾ ನಿಮ್ಮ ಶರಣ ಬಲ್ಲ. || ೧೧೯ ||

೬೨೦

ಅನಾಚಾರದ ಕಾಯ[ಕ]ವ ಮಾಡಿ, ಪದಾರ್ಥವನೆ ಗಳಿಸಿ
ಆ ಪದಾರ್ಥವನೆ ಪಾಕವ ಮಾಡಿ, ಓಗರವ ಮಾಡುವುದು,
ಆ ಓಗರವನೆ ಪ್ರಸಾದವ ಮಾಡಿ, ಆ ಪ್ರಸಾದವನೆ ಓಗರವ ಮಾಡಿ!
ಇದು ಕಾರಣ ಕೂಡಲಚೆನ್ನಸಂಗನ ಶರಣನು
ಅರ್ಪಿತವಲ್ಲದೆ ಮಾಡನು. || ೧೨೦ ||

೬೨೧

ಸಚರಾಚರದೊಳಗಿಪ್ಪ ಲಾಂಛನಧಾರಿಗಳೆಯ್ದಿ
ಸಯದಾನವೆ ಪ್ರಸಾದವೆಂದು ಹೆಸರಿಟ್ಟುಕೊಂಡುಂಬರು,
ಲೋಹಮೇವೋಚ್ಯತೇ ಲಿಂಗಂ ಲಿಂಗಮೇವೋಚ್ಯತೇ ಶಿವಃ|
ತಲ್ಲಿಂಗಧಾರಣಾಚ್ಛಿಷ್ಯಃ ಪೂರ್ವಜನ್ಮವಿವರ್ಜಿತಃ||
ಇಂತು ಪ್ರಕೃತ್ಯಾದಿಗಳ ಗುಣಂಗಳು ಪಲ್ಲಟವಾದ ಕಾರಣ.
ಕೂಡಲಚೆನ್ನಸಂಗನಲ್ಲಿ
ಬಸವನೆಂಬ ಪ್ರಸಾದಿಗೆ ನಾನೆಂಬ ಓಗರ. || ೧೨೧ ||

೬೨೨

ಲಿಂಗಸ್ವಾಯತ ಶರಣ ಪ್ರಸಾದಸ್ವಾಯತ ಪ್ರಸಾದಿ.
ಅರ್ಪಿತವಿಡಿದುದೆ ಪಥವು, ಅನರ್ಪಿತವಿಡಿದುದೆ ಭಂಗವು.
ಅಸಂಬಂಧ ಸಂಬಂಧವಾಯಿತ್ತು,
ಕೂಡಲಚೆನ್ನಸಂಗಾ ನಿಮ್ಮಲ್ಲಿ. || ೧೨೨ ||

೬೨೩

ಗುರು ಮುಟ್ಟಿತ್ತು ಪ್ರಸಾದವೆಂಬೆನೆ? ಅಲ್ಲ ಅದೇನು ಕಾರಣ?
ಅನಾದಿ ಲಿಂಗವ ತೋರಲರಿಯನಾಗಿ,
ಲಿಂಗ ಮುಟ್ಟಿತ್ತು ಪ್ರಸಾದವೆಂಬೆನೆ? ಅಲ್ಲ, ಅದೇನು ಕಾರಣ?

ಅಷ್ಟವಿಧಾರ್ಚನೆ ಷೋಡಶೋಪಚಾರಕ್ಕೊಳಗಾಯಿತ್ತಾಗಿ.
ಜಂಗಮ ಮುಟ್ಟಿತ್ತು ಪ್ರಸಾದವೆಂಬೆನೆ? ಅಲ್ಲ. ಅದೇನು ಕಾರಣ?
ಆಸೆಯಾಮಿಷಕ್ಕೊಳಗಾಗಿ ನಿಂದುದಾಗಿ.
ಲಿಂಗವಿಲ್ಲದ ಜಂಗಮ, ಜಂಗಮವಿಲ್ಲದ ಲಿಂಗ,
ಲಿಂಗಜಂಗಮವೆಂಬ ವಿಭೇದವ ಕಳೆದುಳಿದ ಪ್ರಸಾದಿಯ
ಎನಗೆ ತೋರಾ ಕೂಡಲಚೆನ್ನಸಂಗಮದೇವಾ. || ೧೨೩ ||

೬೨೪

ಶಿಷ್ಯನ ಮುಖದಿಂದಾದ ಗುರುವಿಂಗೆ–ಶಿಷ್ಯನ ಪ್ರಸಾದ ಗುರುವಿಂಗಲ್ಲದೆ,
ಗುರುವಿನ ಪ್ರಸಾದ ಶಿಷ್ಯಂಗಿಲ್ಲ, ಇದಕ್ಕಾ ಗುರುವೆ ಸಾಕ್ಷಿ.
ಶರಣನ ಮುಖದಿಂದಾದ ಲಿಂಗಕ್ಕೆ–ಶರಣನ ಪ್ರಸಾದ ಲಿಂಗಕ್ಕೆ ಅಲ್ಲದೆ,
ಲಿಂಗಪ್ರಸಾದ ಶರಣಂಗಿಲ್ಲ, ಇದಕ್ಕಾ ಲಿಂಗವೆ ಸಾಕ್ಷಿ.
ಭಕ್ತನ ಮುಖದಿಂದಾದ ಜಂಗಮಕ್ಕೆ–ಭಕ್ತನ ಪ್ರಸಾದ ಜಂಗಮಕ್ಕಲ್ಲದೆ,
ಜಂಗಮಪ್ರಸಾದ ಭಕ್ತಂಗಿಲ್ಲ, ಇದಕ್ಕಾ ಜಂಗಮವೆ ಸಾಕ್ಷಿ.
ಇದು ಕಾರಣ ಕೂಡಲಚೆನ್ನಸಂಗಮದೇವಾ
ಈ ತ್ರಿವಿಧದನುಭಾವವ ಬಸವಣ್ಣ ಬಲ್ಲ. || ೧೨೪ ||

೬೨೫

ಅರ್ಪಿತವನರ್ಪಿತವೆಂಬ ಸಂದೇಹವಳಿದುಳಿದ ಪ್ರಸಾದಿಗೆ.
ಅರ್ಪಿತಪ್ರಸಾದಕ್ಕೆಲ್ಲಿಯದೊ? ಆ ಪ್ರಸಾದ ಅರ್ಪಿತಕ್ಕೆಲ್ಲಿಯದೊ?
ಲಿಂಗಾರ್ಪಿತಪ್ರಸಾದಂ ಚ ನ ದದ್ಯಾಜ್ಜಂಗಮಾಯ ವೈ|
ಜಂಗಮಾರ್ಪಿತಪ್ರಸಾದಂ ದದ್ಯಾತ್ತು ಲಿಂಗ ಮೂರ್ತಯೇ||
ಮಹದಿಂದಾದ ಸುಖವ ಸೂತಕಕ್ಕಿಕ್ಕುವ ಪಾತಕರನೇನೆಂಬೆ,
ಕೂಡಲಚೆನ್ನಸಂಗಯ್ಯಾ. || ೧೨೫ ||

೬೨೬

ದಶವಿಧ ಉದಕ, ಏಕಾದಶ ಪ್ರಸಾದ, ಎಲ್ಲಾ ಎಡೆಯಲ್ಲಿ ಉಂಟು.
ಮತ್ತೊಂದ ಬಲ್ಲವರ ತೋರಾ ಎನಗೆ.
ಲಿಂಗವ ನೆನೆಯದೆ, ಲಿಂಗಾರ್ಪಿತವ ಮಾಡದೆ,
ಅನರ್ಪಿತವ ಕೊಳ್ಳದ ಅಚ್ಚಪ್ರಸಾದಿಯ ತೋರಿ
ಬದುಕಿಸಯ್ಯಾ ಕೂಡಲಚೆನ್ನಸಂಗಮದೇವಾ. || ೧೨೬ ||

೬೨೭

ತನ್ನ ಲಿಂಗಕ್ಕೆ ಕೊಟ್ಟಲ್ಲದೆ ಕೊಳ್ಳೆನೆಂಬ ಶರಣನು,
ಬಿಸಿಲಲಿ ನಿಂದರೆ ಬಿಸಿಲ ಲಿಂಗಾರ್ಪಿತವ ಮಾಡಬೇಕು,
ನೆಳಲಲಿ ನಿಂದರೆ ನೆಳಲ ಲಿಂಗಾರ್ಪಿತವ ಮಾಡಬೇಕು.
ಧೂಪ ದೀಪ ಪರಿಮಳ ವಾಯು ರುಚಿ ರೂಪನು ಕಾಯದ ಕೈಯ್ಯಲು
ಮುಟ್ಟಿ ಅರ್ಪಿಸೂದರಿದಲ್ಲ, ನಿಲ್ಲು ಮಾಣು.
ಭಾವದ ಕೈಯ್ಯಲು ಮುಟ್ಟಿ ಲಿಂಗಕ್ಕೆಂಬರು ನಾವಿದನರಿಯೆವಯ್ಯಾ.
ನಯನೇಂದ್ರಿಯ ಶಯನಾಶನ ಪರುಶನ ನಿರವಯಲಿಂಗದಲ್ಲಿ.
ಈ ತೆರನನರಿಯಬಲ್ಲರೆ ಕೂಡಲಚೆನ್ನಸಂಗಮದೇವ. || ೧೨೭ ||

೬೨೮

ಲಿಂಗೋದಕ ಲಿಂಗಾರ್ಚನೆ, ಪಾದೋದಕ ಪಂಚೇಂದ್ರಿಯಾರ್ಚನೆ,
ಪ್ರಸಾದೋದಕ ಪ್ರಾಣಾರ್ಚನೆ.
ಲಿಂಗೋದಕ, ಪಾದೋದಕ, ಪ್ರಸಾದೋದಕ
ಈ ತ್ರಿವಿಧವ ಮುಟ್ಟಲಾಗದು ಕೂಡಲಚೆನ್ನಸಂಗಮದೇವಾ. || ೧೨೮ ||

೬೨೯

ಕಾಯ ಗುರು, ಪ್ರಾಣ ಲಿಂಗ, ಜ್ಞಾನ ಜಂಗಮ,
ಕಾಯದಲ್ಲಿ ಶುದ್ಧಪ್ರಸಾದ, ಪ್ರಾಣದಲ್ಲಿ ಸಿದ್ಧಪ್ರಸಾದ,
ಜ್ಞಾನದಲ್ಲಿ ಪ್ರಸಿದ್ಧಪ್ರಸಾದ.
ಈ ತ್ರಿವಿಧಪ್ರಸಾದ ನಿರ್ಣಯ ಕೂಡಲಚೆನ್ನಸಂಗಾ
ನಿಮ್ಮ ಶರಣಂಗೆ. || ೧೨೯ ||

೬೩೦

ಶರಣಸಾಹಿತ್ಯ ಲಿಂಗ ನೋಡಾ, ಲಿಂಗ ಸಾಹಿತ್ಯ ಶರಣ ನೋಡಾ.
ಸಂಗವೆ ಸಮಮತವಾಗಿ ಮತ್ತೊಂದು ಪರಿಯಲ್ಲ.
ಶರಣನೆ ಓಗರ, ಲಿಂಗವೆ ಪ್ರಸಾದ,
ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ. || ೧೩೦ ||

೬೩೧

ಸ್ಥೂಲದಿಂದ ಸ್ಥೂಲವನರ್ಪಿಸೂದೊಡಲ ಗುಣ.
ನಿಃಸ್ಥೂಲದಿಂದ ನಿಃಸ್ಥೂಲವನರ್ಪಿಸೂದೆ ಪ್ರಾಣಗುಣ.

ಸ್ಥಲವೆನ್ನದೆ ನಿಃಸ್ಥಲವೆನ್ನದೆ ನೋಡದೆ ಆರಯ್ಯದೆ ಅರ್ಪಿಸೂದು ನಿರ್ಗುಣ.
ಇಂಥ ಮಹಂತರ ತೋರಿ ಬದುಕಿಸಯ್ಯಾ.
ಕೂಡಲಚೆನ್ನಸಂಗಮದೇವಾ. ॥ ೧೩೧ ॥

೬೩೨

ಲಿಂಗಗಂಭೀರ ನಿಸ್ಸಂಗಿಯ ಸಂಗವ ನಾನೇನೆಂಬೆನಯ್ಯಾ?
ಪರಮಾರ್ಥದಿಂ ಗಮಿಸುವ ಗಮನವ ನಾನೇನೆಂಬೆನಯ್ಯಾ?
ಕೂಡಲಚೆನ್ನಸಂಗನ ಶರಣರು ಕಾಯವ ಸೆವದಿಂದಲರ್ಪಿಸುವ
ಬೆಡಗ ನಾನೇನೆಂಬೆನಯ್ಯಾ?. ॥ ೧೩೨ ॥

೬೩೩

ಅಖಂಡಿತಪ್ರಸಾದ ಸಂಬಂಧದ, ಸೂಕ್ಷ್ಮದ ಕ್ರಮವ ಭೇದಿಸಿ,
ಲಿಂಗಾರ್ಪಿತ ಭೇದಾಭೇದದಲ್ಲಿ ಲಿಂಗಪ್ರಸಾದ(ಸಾಧ್ಯ) ಸಾಧಕನಾಗಿ,
ಕೂಡಲಚೆನ್ನಸಂಗನಲ್ಲಿ ಪ್ರಸಾದವ ಮಹಾಘನವೆಂಬೆ. ॥ ೧೩೩ ॥

೬೩೪

ಆಪ್ಯಾಯನ ಮುಂತಾಗಿ ಕೊಂಬುದು ಪ್ರಸಾದವಲ್ಲ.
ಸಯದಾನದೊಳಗಣ ಪ್ರಸಾದ ಆವ ಪರಿಯಲೂ ಅಲ್ಲ.
ಮತ್ತೆಯೂ ಪ್ರಸಾದವೆ ಬೇಕು.
ಇಂತಪ್ಪ ಪ್ರಸಾದಿಯ ತೋರು ಕೂಡಲಚೆನ್ನಸಂಗಮದೇವಾ. ॥ ೧೩೪ ॥

೬೩೫

ನಯನಾಗ್ರದ ನೋಡುವ ಸುಖವ ಲಿಂಗಾರ್ಪಿತವೆಂಬರು,
ನಾಸಿಕಾಗ್ರ ಪರಿಮಳದ ಸುಖವ ಲಿಂಗಾರ್ಪಿತವೆಂಬರು,
ಶ್ರೋತ್ರಾಗ್ರದ ಕೇಳುವ ಸುಖವ ಲಿಂಗಾರ್ಪಿತವೆಂಬರು,
ಜಿಹ್ವಾಗ್ರದ ರುಚಿಯ ಸುಖವ ಲಿಂಗಾರ್ಪಿತವೆಂಬರು,
ಮುಟ್ಟುವ ತ್ವಕ್ಕಿನ ಸುಖವ ಲಿಂಗಾರ್ಪಿತವೆಂಬರು.
ಇದು ಲಿಂಗಾರ್ಪಿತವೆ?
ಅರ್ಪಿತವ ಮಾಡದೆ, ಅನರ್ಪಿತವ ಹೊದ್ದದೆ, ಅರ್ಪಿಸಬೇಕು,
ಅರ್ಪಿಸುವ ಭಾವನೆಪುಳ್ಳನ್ನಕ್ಕ ಶರಣೆನಿಸಬಾರದು,
ಕೂಡಲಚೆನ್ನಸಂಗಮದೇವಾ. ॥ ೧೩೫ ॥

೬೩೬

ಲಿಂಗದಲ್ಲಿ ಕೊಡಲುಂಟು, ಕೊಳಲುಂಟಾಗಿ ಅರ್ಪಿತ,
ಜಂಗಮದಲ್ಲಿ ಕೊಟ್ಟು ಕೊಳಲಿಲ್ಲಾಗಿ ಅನರ್ಪಿತ,
ಪ್ರಸಾದದಲ್ಲಿ ಕೊಡಲು ಕೊಳಲಿಲ್ಲಾಗಿ ಉಭಯನಾಸ್ತಿ.
ಈ ತ್ರಿವಿಧ ಸಂಚದ ಸನುಮತವನು
ಕೂಡಲಚೆನ್ನಸಂಗಾ ನಿಮ್ಮ ಶರಣ ಬಲ್ಲ. || ೧೩೬ ||

೬೩೭

ಸಾವಧಾನಿ ಸರ್ವಸಂಸಾರಿ ನಿಸ್ಸಂದೇಹಿಯಲ್ಲ, ನಿಃಪ್ರಪಂಚಿಯಲ್ಲ.
ಅರ್ಪಿತಕ್ಕೆ ಅರಿವುಳ್ಳನ್ನಕ್ಕ, ಶರಣನಲ್ಲ ಪ್ರಸಾದಿಯಲ್ಲ ಲಿಂಗೈಕ್ಯನಲ್ಲ,
ಇಂತೆಂದುದು ಕೂಡಲಚೆನ್ನಸಂಗನ ವಚನ. || ೧೩೭ ||

೬೩೮

ಗುರುವಿಂಗೆ ಗುರುವಾಗಿ ಗುರುಪ್ರಸಾದವ ಕೊಂಬುದು,
ಲಿಂಗಕ್ಕೆ ಲಿಂಗವಾಗಿ ಲಿಂಗಪ್ರಸಾದವ ಕೊಂಬುದು,
ಜಂಗಮಕ್ಕೆ ಜಂಗಮವಾಗಿ ಜಂಗಮಪ್ರಸಾದವ ಕೊಂಬುದು,
ಪ್ರಸಾದಕ್ಕೆ ಪ್ರಸಾದವಾಗಿ ಪ್ರಸಾದವನೆ ಕೊಂಬುದು.
ಈ ಚತುರ್ವಿಧಸ್ಥಲಕ್ಕೆ ಚತುರ್ವಿಧವಾಗಬಲ್ಲಡೆ,
ಕೂಡಲಚೆನ್ನಸಂಗನಲ್ಲಿ ಲಿಂಗೈಕ್ಯವು. || ೧೩೮ ||

೬೩೯

ಅರ್ಪಿತದಲ್ಲಿ ಅವಧಾನವರತು,
ಅನರ್ಪಿತದಲ್ಲಿ ಸುಯಿಧಾನವರತು.
ಬಂದುದು ಬಾರದುದೆಂದರಿಯದೆ,
ನಿಂದ ನಿಲವಿನ ಪರಿಣಾಮತೆಯಾಯಿತ್ತು.
ರುಚೀ ರೂಪಂ ನ ಚ ಜ್ಞಾನಂ ಅರ್ಪಿತಾನರ್ಪಿತಂ ತಥಾ।
ಆದೌ ಪ್ರವರ್ತತೇ ಯಸ್ಯ ಶಿವೇನ ಸಹ ಮೋದತೇ॥
ಎಂದುದಾಗಿ, ಕೂಡಲಚೆನ್ನಸಂಗಯ್ಯಾ.
ನಿಮ್ಮವರು ಶಿವಸುಖಸಂಪನ್ನರಾದರಯ್ಯಾ. || ೧೩೯ ||

೬೪೦

ರೂಪನರ್ಪಿತವ ಮಾಡಿದ ಬಳಿಕ ರುಚಿಯನರ್ಪಿತವ ಮಾಡಲೇಬೇಕು,
ರುಚಿಯನರ್ಪಿತವ ಮಾಡಿದ ಬಳಿಕ ಮುಟ್ಟಿದ ಕೈ ವ್ರತಗೇಡಿಯಾಗಲೇಬೇಕು.

ಕೂಡಲಚೆನ್ನಸಂಗಯ್ಯಾ ನಿಮ್ಮ ಪ್ರಸಾದಿಗೆ
ನಮೋ ನಮೋ ಎಂಬೆ. || ೧೪೦ ||

೬೪೧

ಕೊಟ್ಟುದೊಂದು ಸೂತಕ [ಮುಟ್ಟಿದು]ದೊಂದು ಸೂತಕ,
ಕೊಟ್ಟು ಕೊಂಬುದೊಂದು ಸೂತಕ.
ಲಿಂಗನಿಜಾಯತಂಗೆ ಇವೆಲ್ಲಿಯವು?
ಕೂಡಲಚೆನ್ನಸಂಗಾ ಲಿಂಗ ನಾನೆಂಬ ಸೂತಕವಿಲ್ಲಾಗಿ. || ೧೪೧ ||

೬೪೨

ಸ್ಥೂಲ ಸೂಕ್ಷ್ಮವೆಂಬ ಶಬ್ದಪರಿಭಾವ ತಲೆದೋರದೆ,
ಸಂಗ ಮಹಾಸಂಗದ ಮರ್ಮದಾಸೋಹ
ಹೃದಯಕ್ಕೆ ಸಾಹಿತ್ಯವಾದ ಭಕ್ತಂಗೆ
ಅರ್ಪಿತ ಅನರ್ಪಿತವೆಂಬ ಸಂಕಲ್ಪ ವಿಕಲ್ಪವಿರಹಿತ,
ಮತ್ತೆ ಅರ್ಪಿಸಬಲ್ಲನಾಗಿ.
ಸದ್ಯೋಜಾತ, ವಾಮದೇವ, ಅಘೋರ. ತತ್ಪುರುಷ, ಈಶಾನ್ಯವೆಂಬ
ಪಂಚವಕ್ತ್ರವನು ಊರ್ಧ್ವಮುಖಕ್ಕೆ ತಂದು,
ಅರ್ಪಿಸಬಲ್ಲನಾಗಿ ಗುರುಪ್ರಸಾದಿ.
ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಚಂದ್ರ, ಸೂರ್ಯ, ಆತ್ಮ
ಇಂತೀ ಅಷ್ಟತನುವನು ದಾಸೋಹದಲ್ಲಿ
ಅರ್ಪಿಸಬಲ್ಲನಾಗಿ ಜಂಗಮಪ್ರಸಾದಿ.
ಹೊರಗೆ ಭಜಿಸಲಿಲ್ಲ, ಒಳಗೆ ನೆನೆಯಲಿಲ್ಲ.
ಸರ್ವಾಂಗಲಿಂಗಿಯಾಗಿಹ ಲಿಂಗಪ್ರಸಾದಿ.
ಇದು ಕಾರಣ ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣ ಮಹಾಪ್ರಸಾದಿ. || ೧೪೨ ||

೬೪೩

ಲಿಂಗಭೋಗೋಪಭೋಗದಲ್ಲಿ ಆಪ್ಯಾಯನಪ್ರಸಾದಿ ಶರಣ,
ಪ್ರಸಾದಭೋಗೋಪಭೋಗದಲ್ಲಿ ಆಪ್ಯಾಯನ ಶರಣ,
ಅನಪ್ಯಾಯನಪ್ರಸಾದಿ ಕುಳಾಕುಳರಹಿತನು.
ಕ್ರೀ ಹಿಂದಾದ, ಲಿಂಗ ಮುಂದಾದ ಪ್ರಸಾದಿ.

ಪ್ರಸಾದಕ್ಕೆ ತಾನವಗ್ರಾಹಿ, ಪ್ರಸಾದಿ ತನಗವಗ್ರಾಹಕನು.
ಕೂಡಲಚೆನ್ನಸಂಗಾ ನಿಮ್ಮ ಪ್ರಸಾದಿಗೆ ನಮೋ ನಮೋ ಎಂಬೆ. || ೧೪೩ ||

೬೪೪

ವಿನಾಶದೇಶದ, ವಿನಾಶ ವಿನೋದದ, ಭಾವದ ಉತುಕುಟದ,
ಶರೀರಂಗಳ ಹೊರೆಯಲ್ಲಿ ಮೋಹಿತವಿಲ್ಲದ ಪ್ರಸಾದಿ.
ಕರಕಾಲ ಸನ್ನಿಧಿಯಲ್ಲಿ, ತತ್ಪುರುಷರ ಸನ್ನಿಧಿಯಲ್ಲಿ, ಭೇದವಿಲ್ಲದೆ ಬೆಳೆದ ಪ್ರಸಾದಿ,
ರಾಗದ್ವೇಷಂಗಳ ಶಬ್ದವಿಲ್ಲದ ಪ್ರಸಾದಿ.
ಇದು ಕಾರಣ, ಕೂಡಲಚೆನ್ನಸಂಗನಲ್ಲಿ
ಸದಾಸನ್ನಹಿತವಾದ ಪ್ರಸಾದಿ. || ೧೪೪ ||

೬೪೫

ಆಲಂಬಿತವೆನ್ನದೆ, ಆಲಂಬದೊಳಡಗದೆ, ಆಲಂಬವ ಬಯಸದೆ,
ಸೂಕ್ಷ್ಮ ಶಿವಪಥ ಏಕೈಕ ಪ್ರಸಾದಿ.
ಸೂಕ್ಷ್ಮವೆನ್ನದೆ, ಸೂಕ್ಷ್ಮವ ಬಯಸದೆ, ಸೂಕ್ಷ್ಮ ನಿರಾಕರಣೆ ಪರಿಕರಣೆಯೆನ್ನದೆ,
ನಿತ್ಯ ನಿಜವಾದ ಪ್ರಸಾದಿ.
ಇದು ಕಾರಣ, ಕೂಡಲಚೆನ್ನಸಂಗಾ
ಸಯದಾನಕ್ಕೆಡೆಗುಡದ ಪ್ರಸಾದಿ. || ೧೪೫ ||

೬೪೬

ತನು ಮುಟ್ಟಿದ ಪದಾರ್ಥ ಲಿಂಗಾರ್ಪಿತವಲ್ಲ,
ಮನ ಮುಟ್ಟಿದ ಪದಾರ್ಥ ಲಿಂಗಾರ್ಪಿತವಲ್ಲ,
ಕಿವಿಗಳು ಕೇಳಿದ ಪದಾರ್ಥ ಲಿಂಗಾರ್ಪಿತವಲ್ಲ,
ಕಂಗಳು ನೋಡಿದ ಪದಾರ್ಥ ಲಿಂಗಾರ್ಪಿತವಲ್ಲ,
ಘ್ರಾಣ ಸೋಂಕಿದ ಪದಾರ್ಥ ಲಿಂಗಾರ್ಪಿತವಲ್ಲ,
ಜಿಹ್ವೆ ತಾಗಿದ ಪದಾರ್ಥ ಲಿಂಗಾರ್ಪಿತವಲ್ಲ.
ಅಹುದೆಂಬುದ ನಡೆಯ, ಅಲ್ಲೆಂಬುದ ನುಡಿಯ,
ಬೇಕು ಬೇಡೆಂಬುದಿಲ್ಲ, ಸಾವಯವೆಂಬುದಿಲ್ಲ.
ನಿರವಯದಲ್ಲಿ ಸಕಲಭೋಗಂಗಳ ಭೋಗಿಸುವನು,
ಕೂಡಲಚೆನ್ನಸಂಗಾ ನಿಮ್ಮ ಪ್ರಸಾದಿ. || ೧೪೬

೬೪೭

ಪ್ರಸಾದವನೆ ಬಿತ್ತಿ, ಪ್ರಸಾದವನೆ ಬೆಳೆವ,
ಫಲದ ಪರಿಯ ಬೆಸಗೊಳಲಿಲ್ಲ:
ಫಲದರ್ಥಿಯಲ್ಲ, (ಪದಾರ್ಥ) ಕಾಯ ಪ್ರಸಾದಕ್ಕೆ ಭೇದವಿಲ್ಲ,
ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ. ॥ ೧೪೭ ॥

## ಶರಣನ ಪ್ರಾಣಲಿಂಗಿಸ್ಥಲ

೬೪೮

ದೇಹದೊಳಗಣ ದೇಹಿಯೆನ್ನಬಹುದೆ ನಿಮ್ಮ ಶರಣನ?
ಅನ್ನ ಪಾನಾದಿಗಳೊಳಗಣ ಅನ್ನಪಾನವೆಂವೆನ್ನಬಹುದೆ ಪ್ರಸಾದವ?
ಎನಬಾರದಯ್ಯಾ, ಎನ್ನ ತಂದೆ!
ಸಾಧನದೊಳಗಣ ಸಂಯೋಗವೆಂತಿದ್ದುದು ಅಂತಿದ್ದುದಾಗಿ.
ಇದು ಕಾರಣ, ಶ್ರುತಿ ಸ್ಮೃತಿಗಗೋಚರ
ಕೂಡಲಚೆನ್ನಸಂಗಮದೇವಾ ನಿಮ್ಮ ಶರಣರು. ॥ ೧೪೮ ॥

೬೪೯

ಲಿಂಗವೆಂದರಿದಂಗೆ ಹಿಂದಿಲ್ಲ, ಜಂಗಮವೆಂದರಿದಂಗೆ ಮುಂದಿಲ್ಲ,
ಇದೇ ಶಿವಾಚಾರ, ಇದೇ ಶಿವದೊಡಕು,
'ಆತ್ಮನಂ ಪ್ರಕೃತಿಂ ಚ ಭಾವಯೇತ್' ಎಂದುದಾಗಿ,–
ಇದು ಕಾರಣ ಕೂಡಲಚೆನ್ನಸಂಗಮದೇವನು
ಮುಟ್ಟಬಾರದ ಠಾವ ಮರೆಗೊಂಡಿಪ್ಪ. ॥ ೧೪೯ ॥

೬೫೦

ಕಣ್ಣೊಳಗೆ ಕಣ್ಣಿದ್ದು ಕಾಣಲೇಕರಿಯರಯ್ಯಾ?
ಕಿವಿಯೊಳಗೆ ಕಿವಿಯಿದ್ದು ಕೇಳಲೇಕರಿಯರಯ್ಯಾ?
ಘ್ರಾಣದೊಳಗೆ ಘ್ರಾಣವಿದ್ದು ವಾಸಿಸಲೇಕರಿಯರಯ್ಯಾ?
ಜಿಹ್ವೆಯೊಳಗೆ ಜಿಹ್ವೆಯಿದ್ದು ರುಚಿಸಲೇಕರಿಯರಯ್ಯಾ?
ಸ್ಪರ್ಶದೊಳಗೆ ಸ್ಪರ್ಶವಿದ್ದು ಮುಟ್ಟಿಸಲೇಕರಿಯರಯ್ಯಾ?
ಪ್ರಾಣದೊಳಗೆ ಪ್ರಾಣವಿದ್ದುದನೇಕರಿಯರಯ್ಯಾ?

ಕಾಯವೊಳಗೆ ಕಾಯವಿದ್ದು ಬಿಡದು, ಬೇರಾಗದು,
ಕೂಡಲಚೆನ್ನಸಂಗಯ್ಯನಿಕ್ಕಿದ ಭೇದವ ಬಿಡಿಸಬಾರದು. || ೧೫೦ ||

೬೫೧

ಉಂಬ ಬಾಯೊಳು ಊಡಿಸಿಕೊಂಬ ಬಾಯಿಯಿದೇನಯ್ಯಾ?
ನೋಡುವ ನಯನದೊಳು ನೋಡಿಸಿಕೊಂಬ ನಯನವಿದೇನಯ್ಯಾ?
ಕೇಳುವ ಶ್ರೋತ್ರದೊಳು ಕೇಳಿಸಿಕೊಂಬ ಶ್ರೋತ್ರವಿದೇನಯ್ಯಾ?
ವಾಸಿಸುವ ವಾಸನೆಯೊಳು ವಾಸಿಸಿಕೊಂಬ ನಾಸಿಕವಿದೇನಯ್ಯಾ?
ಮುಟ್ಟುವ ಪರುಶದೊಳು ಮುಟ್ಟಿಸಿಕೊಂಬ ಪರುಶವಿದೇನಯ್ಯಾ?
(ಇಂತಿವರೊಳಗೆ) ನೀನಿಪ್ಪ ಅನುವನಾರು ಬಲ್ಲರು
ಕೂಡಲಚೆನ್ನಸಂಗಮದೇವಾ? || ೧೫೧ ||

೬೫೨

ಭಾವ ಭಾವಿಸಲುಂಟೆ ಭಾವಭಾವಿಸಲರಿಯದು. ಅದೇನು ಕಾರಣ?
ಭಾವದಲ್ಲಿ ಭರಿತನಾಗಿ,
ನೇತ್ರ ನೋಡಲುಂಟೆ? ನೇತ್ರ ನೋಡಲರಿಯದು, ಅದೇನು ಕಾರಣ?
ನೇತ್ರೇಂದ್ರಿಯದ ಬಾಗಿಲಲ್ಲಿ ನಿಂದು ನೋಡುವನಾಗಿ.
ಶ್ರೋತ್ರ ಕೇಳಲುಂಟೆ? ಶ್ರೋತ್ರ ಕೇಳಲರಿಯದು, ಅದೇನು ಕಾರಣ?
ಶ್ರೋತ್ರದ ಬಾಗಿಲಲ್ಲಿ ನಿಂದು ಕೇಳುವನಾಗಿ.
ನಾಸಿಕ ಪರಿಮಳವರಿವುದೆ? ನಾಸಿಕ ಪರಿಮಳವರಿಯದು, ಅದೇನು ಕಾರಣ?
ನಾಸಿಕದ ಬಾಗಿಲಲ್ಲಿ ನಿಂದು ವಾಸಿಸುವ ತಾನಾಗಿ.
ಜಿಹ್ವೆ ರುಚಿಯನರಿವುದೆ? ಜಿಹ್ವೆ ರುಚಿಯನರಿಯದು, ಅದೇನು ಕಾರಣ?
ಜಿಹ್ವೆಯ ಬಾಗಿಲಲ್ಲಿ ನಿಂದು ರುಚಿಯ ನಿಶ್ಚೈಸುವ ತಾನಾಗಿ.
(ತ್ವಕ್ಕು ಸ್ಪರ್ಶಿಸಬಲ್ಲುದೆ ತ್ವಕ್ಕು ಸ್ಪರ್ಶಿಸಲರಿಯದು, ಅದೇನು ಕಾರಣ?
ತ್ವಕ್ಕಿನಲ್ಲಿ ನಿಂದು ಸ್ಪರ್ಶಿಸುವ ತಾನಾಗಿ)
ಜಂತ್ರಂಗಳಾಡಬಲ್ಲವೆ? ಜಂತ್ರಂಗಳಾಡಲರಿಯವು, ಅದೇನು ಕಾರಣ?
ಜಂತ್ರಂಗಳನಾಡಿಸುವ ಯಂತ್ರವಾಹಕ ತಾನಾಗಿ.
ಇದು ಕಾರಣ, ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣ ಸರ್ವಾಂಗಲಿಂಗಿ. || ೧೫೨ ||

೬೫೩

ಅಂಗದಲಳವಟ್ಟ ಲಿಂಗೈಕ್ಯನ ನಿಲವ ಭಾವಭ್ರಮಿತರೆತ್ತ ಬಲ್ಲರು?
ಬಲ್ಲವರು ಬಲ್ಲರು, ಎಲ್ಲರೆತ್ತ ಬಲ್ಲರು?
ಕೂಡಲಚೆನ್ನಸಂಗಯ್ಯನಲ್ಲಿ ಶಬ್ದಸೂತಕಿಗಳವರೆತ್ತ ಬಲ್ಲರು? || ೧೫೩ ||

೬೫೪

ಉನ್ಮನಿಜ್ಞಾನದ ಗಮನ(ದ ಭಾವವು) ಲೌಕಿಕದ ನಿಷ್ಠೆಯ ದೃಷ್ಟಿ.
ಶಾಂಭವಜ್ಞಾನದ (ಗಮನದ) ಭಾವವು ಪ್ರಾಣದ ಪರಿಣಾಮದ ನಿಲವು.
ಸುಜ್ಞಾನದ ಗಮನದ ಭಾವವು ಉಪದೇಶ ಪ್ರಸೂತದ ಭಾವಭೇದ.
ಈ ತ್ರಿವಿಧ ಚರಿತ್ರ ಸಂಭಾಷಣೆಯ ಕೂಡಲಚೆನ್ನಸಂಗಾ.
ನಿಮ್ಮ ಶರಣ ಬಲ್ಲ. || ೧೫೪ ||

೬೫೫

ಸಾವ ಜೀವ ಬಿಂದುವಿನ ಸಂಚ, ಸಾಯದ ನಾದ ಪ್ರಾಣದ ಸಂಚ.
ಸಾವ ಜೀವದ, ಸಾಯದ ಪ್ರಾಣದ
–ಎರಡರ ಭೇದವನರಿಯದಿರ್ದಡೆ ಲಾಂಛನಧಾರಿ,
ಸಾವ ಜೀವದ, ಸಾಯದ ಪ್ರಾಣದ
ಎರಡರ ಭೇದವ ಭೇದಿಸಿ ಅರಿವು ಕಣ್ದೆರೆದ
ಪ್ರಾಣಲಿಂಗಸಂಬಂಧವಂತಿರಲಿ,
ಮತ್ತೆಯೂ ಪ್ರಾಣಲಿಂಗಸಂಬಂಧವೆಬೇಕು.
ಇಂತೀ ಉಭಯ ಸಂಬಂಧವಳಿದ ಸಂಬಂಧ ನಿಜವಾಯಿತ್ತು.
ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ. || ೧೫೫ ||

೬೫೬

ಲಿಂಗ ಪ್ರಾಣವೆಂಬೆನೆ? ಪ್ರಾಣದ ಹಂಗಿನ ಲಿಂಗ,
ಪ್ರಾಣ ಲಿಂಗವೆಂಬೆನೆ? ಲಿಂಗದ ಹಂಗಿನ ಪ್ರಾಣ.
ಪ್ರಾಣ ಲಿಂಗವಲ್ಲ, ಲಿಂಗ ಪ್ರಾಣವಲ್ಲ.
ಈ ಉಭಯ ಸಂದಳಿದವರ ತೋರಿ ಬದುಕಿಸಯ್ಯಾ,
ಕೂಡಲಚೆನ್ನಸಂಗಮದೇವಾ. || ೧೫೬

೬೫೭

ದೃಷ್ಟದಲ್ಲಿ ನಡೆ ನುಡಿ ತನುಕ್ರೀ, ಅದೃಷ್ಟದಲ್ಲಿ ಪ್ರಾಣ ಮನಕ್ರೀ
ಆಚಾರದಲ್ಲಿ ಸ್ಥಾನಾಸ್ಥಾನವೆ?
ಭಾವಸ್ಥಾನಾಂಗ ಲಿಂಗೇಷು ಪ್ರಾಣಲಿಂಗಾಂತರೇ ದ್ವಯಂ।
ಸನ್ನಿಧಾನಾತ್ಪರಂ ಲಿಂಗಂ ಸ್ಥಾಪ್ಯಮೇತ್ತತ್ತು ಧೀಮತಾ॥
ಈ ಉಭಯ ಸಂಗಾಸಂಗಿ ಲಿಂಗನಿರಂತರ,
ಕೂಡಲಚೆನ್ನಸಂಗಮದೇವಾ. ॥ ೧೫೭ ॥

೬೫೮

ಸುಖವಾವುದು? ಸುಖಿಯಾವುದು? ಸುಖದನುಭಾವವಾವುದು?
ಸುಖಲಿಂಗ, ಸುಖಿ ಶರಣ, ಸುಖದನುಭಾವ ಸುಸಂಗ,
ಕೂಡಲಚೆನ್ನಸಂಗಾ ಪರವಿಲ್ಲಾಗಿ. ॥ ೧೫೮ ॥

೬೫೯

ಜಗಭರಿತಲಿಂಗ ಎಲ್ಲಾ ಎಡೆಯಲುಂಟು,
ಶರಣಭರಿತ ಲಿಂಗವಪೂರ್ವ ನೋಡಾ.
ಗಮನವುಳ್ಳ ಜಂಗಮ ಎಲ್ಲಾ ಎಡೆಯಲುಂಟು,
ನಿರ್ಗಮನಿ ಜಂಗಮವಪೂರ್ವ ನೋಡಾ.
ಸುಚೈತನ್ಯ ಲಿಂಗಕ್ಕೆ ಚೈತನ್ಯ ಜಂಗಮಸಾಹಿತ್ಯ ನೋಡಾ.
ಈ ಲಿಂಗದ ಸಕೀಲ ಸಂಯೋಗದಲ್ಲಿ ಪರಿಣಾಮಿ
ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೧೫೯ ॥

೬೬೦

ಒಂದೆಂಬೆನೆ ಮೂರ್ತಿಯಾಗಿ ತೋರದು.
ಎರಡೆಂಬೆನೆ ನಿರ್ಣಯಕ್ಕರಸಲಿಲ್ಲ,
ಮೂರೆಂಬೆನೆ ಮೂರ್ತಿಯಾಗಿ ತೋರದು.
ಸಗುಣದಲಿಲ್ಲ, ನಿರ್ಗುಣದಲಿಲ್ಲ, ಸ್ಥೂಲದಲಿಲ್ಲ, ಸೂಕ್ಷ್ಮದಲಿಲ್ಲ.
ಕೂಡಲಚೆನ್ನಸಂಗಯ್ಯಾ ಕನ್ನಡಿಯೊಳಗಣ ಪ್ರತಿಬಿಂಬದಂತೆ
ತನ್ನೊಳಗೆ ತಾನಿಪ್ಪುದನರಿಯದೆ ಭಿನ್ನದಲರಸುವರೆ? ॥ ೧೬೦ ॥

೬೬೧

ನೇತ್ರಕಪಾಲದಲ್ಲಿ ನಿಂದ ಕಾಳಿಕೆ ಹೋದಡೆ.
ಶ್ರೋತ್ರಕಪಾಲದಲ್ಲಿ ಸೊಪ್ಪು ಸೊಗಡು ಹೋದಡೆ.
ಮನಕಪಾಲದಲ್ಲಿ ಮನಗ್ಲಾನಿಗೊಳ್ಳದೆ, ಪ್ರಾಣಿಯ ಕೊಲ್ಲದೆ,
ಪ್ರಾಣಲಿಂಗವ ಬಲ್ಲವರು ಎನ್ನ ಪ್ರಾಣಲಿಂಗ ಕಾಣಾ,
ಕೂಡಲಚೆನ್ನಸಂಗಮದೇವಾ. ॥ ೧೬೧ ॥

೬೬೨

ಕಾಯವಿಲ್ಲದ ಸಂಸಾರ ಚೋದ್ಯ, ಸಂಸಾರವಿಲ್ಲದ ಕಾಯ ಚೋದ್ಯ,
ಕಾಯದೊಳಗೊಂದು ನಿರಾಳ ಚೋದ್ಯ,
ನಿರಾಳದೊಳಗೊಂದು ಕೂಡಲಚೆನ್ನಸಂಗಯ್ಯನೆಂಬ ಶರಣ.
ಸಮ್ಯಕ್‌ಚೋದ್ಯ, ಮಹಾಚೋದ್ಯ! ॥ ೧೬೨ ॥

೬೬೩

ಅರಿವಿನೆಡೆಯನರಿದೆಹೆನೆಂದರೆ
ಅರಿವು ಮರಹಿಂಗೊಳಗಾಯಿತ್ತಾಗಿ,
ಆ ಅರಿವಿಂದ ಅರಿದೆವೆಂಬ ಬರಿಜ್ಞಾನಿಯ ಮಾತ ಕೇಳಲಾಗದು.
ಭಾವದಿಂದ ಭಾವಿಸಿದರೆ ಭಾವ ಭ್ರಾಂತಿಗೊಳಗಾಯಿತ್ತಾಗಿ
ಭಾವದಿಂದ ಭಾವಿಸಿಹೆವೆಂಬ ಭ್ರಮಿತರ ಮಾತ ಕೇಳಲಾಗದು.
ಜ್ಞಾನದಿಂದ ಅರಿದೆನೆಂದರೆ ಜ್ಞಾನ ಅಜ್ಞಾನಕ್ಕೊಳಗಾಯಿತ್ತಾಗಿ
ಜ್ಞಾನದಿಂದ ಅರಿದೆನೆಂಬ ಅಜ್ಞಾನಿಯ ಮಾತ ಕೇಳಲಾಗದು,
ಸುಜ್ಞಾನಭರಿತ ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೧೬೩ ॥

೬೬೪

ಬಸವ ಬಿಲ್ಲಾಳಾಗಿ, ಹೊಸಭಕ್ತಿ ಅಂಬಾಗಿ,
ಎಸೆದನಯ್ಯಾ ಆ ಲಿಂಗವನು ಗುರಿಮಾಡಿ.
ಶಿಶುವ ಬಾಣ ಕೊಂಡು, ಬಸುರಮಧ್ಯವ ತಾಗಿ,
ಹೊಸದೆಸೆಗಳೆಲ್ಲಾ ಕಾಣಬಂದವಯ್ಯಾ!
ಭಸ್ಮದೆಣ್ಣೆಯ ಹೂಸಿ ಕೂಡಲಚೆನ್ನಸಂಗನಲ್ಲಿ
ಬಸವಪೂಯದ ಬಂದು ಆರೈದ ಲಿಂಗವನು. ॥ ೧೬೪ ॥

೬೬೫

ಎಲ್ಲವ ಕಳೆದು ಶರಣನಿಂಬುಮಾಡಿ,
ಅಂತರಂಗ ಬಹಿರಂಗದಲ್ಲಿಯೆ ಬಳಿಕ ತನ್ನ ಹರೆ ತನ್ನ ಕೊಳಲು,
ಕೂಡಲಚೆನ್ನ ಸಂಗ ಲಿಂಗಸಂಗಿಯಾಗಿ. || ೧೬೫ ||

೬೬೬

ಜ್ಞಾನಸ್ವತನ್ನೊಳಗೆ, ಅಜ್ಞಾನ ತನ್ನೊಳಗೆ,
ಎರಡುವನರಿದ ಸಹಜಸುಜ್ಞಾನಿ ಸುಸಂಗ ಲಿಂಗವಶಕನಾಗಿದ್ದು
ಪರಿಣಾಮಿ ಕೂಡಲಚೆನ್ನ ಸಂಗಾ, ನಿಮ್ಮ ಶರಣ. || ೧೬೬ ||

## ಶರಣನ ಐಕ್ಯಸ್ಥಲ

೬೬೭

ತ್ರಿವಿಧಕ್ಕೆ ರತಿಯಾಗಿ, ತ್ರಿವಿಧದ ಜನಿತವ ತಿಳಿದು,
ತ್ರಿವಿಧ ಕಣ್ದೆರೆದು, ತ್ರಿವಿಧ ತ್ರಿವಿಧವ[ನವ]ಗ್ರಹಿಸಿ, ತ್ರಿವಿಧ ಪಥವ ಮೀರಿ
ತ್ರಿವಿಧ ನಿರ್ಣಯ ನಿಷ್ಪತ್ತಿ ಕೂಡಲಚೆನ್ನ ಸಂಗಾ, ನಿಮ್ಮ ಶರಣ. || ೧೬೭ ||

೬೬೮

ಗುರುಲಿಂಗ ಶಿವಲಿಂಗ ಜಂಗಮಲಿಂಗ ಪರೀಕ್ಷಿಸಿ, ತ್ರಿವಿಧ ತ್ರಿವಿಧ.
ಅನುಗ್ರಹ ಅರ್ಪಿತ ಅನುಭಾವದಿಂದ ಲಿಂಗ ತ್ರಿವಿಧ ತ್ರಿವಿಧ.
ಶಿಷ್ಯ ವ್ಯವಸ್ಥಾ ವೃತ್ತಿತನದಿಂದ ತ್ರಿವಿಧ ತ್ರಿವಿಧ.
ಲಿಂಗೋದಕ ಪಾದೋದಕ ಪರಿಣಾ[ಮೋದಕ] ತ್ರಿವಿಧ ತ್ರಿವಿಧ.
ಆದ್ಯ ವೇದ್ಯ ಸಹಜ ಸಾಧಕತನದಿಂದ ತ್ರಿವಿಧ ತ್ರಿವಿಧ.
ಸ್ಥಾನಾಸ್ಥಾನಾಪ್ಯ ಪೂಜೆ ಜ್ಞಾನಗಮನದಿಂದ ತ್ರಿವಿಧ ತ್ರಿವಿಧ.
ಇದು ಕಾರಣ ಕೂಡಲಚೆನ್ನ ಸಂಗಯ್ಯ
ನೀನೊಲಿದ ಮಹಂತಂಗಿದು ಸಹಜ. || ೧೬೮ ||

೭೭೯

ದಿಟದಾಕಾಶ, ಘಟದಾಕಾಶ, ಮಠದಾಕಾಶತ್ರಯಂಗಳಲ್ಲಿ
ಹೋಗಲಿಕಸಾಧ್ಯ, ಹೊರವಡಲಿಕಸಾಧ್ಯ.
ಚಿತ್ತಾಕಾಶಂ ಚಿದಾಕಾಶಂ ಆಕಾಶಂ ಚ ತೃತೀಯಕಂ।
ದ್ವಾಭ್ಯಾಂ ಶೂನ್ಯತರಂ ವಿದ್ಧಿ ಚಿದಾಕಾಶಂ ವರಾನನೇ॥
ಎಂದುದಾಗಿ-ಆಕಾಶತ್ರಯ ಕೂಡಲಚೆನ್ನಸಂಗಾ.
ನಿಮ್ಮ ಶರಣಂಗೆ ಸಾಧ್ಯ, ಉಳಿದವರಿಗಸಾಧ್ಯ. ॥ ೧೬೯ ॥

೭೮೦

ಲಿಂಗಸ್ಥಲ ಲಿಂಗಸ್ಥಲದಲ್ಲಿಯೇ ನಿಂದುದು,
ಜಂಗಮಸ್ಥಲ ಜಂಗಮಸ್ಥಲದಲ್ಲಿಯೇ ನಿಂದುದು,
ಪ್ರಸಾದಸ್ಥಲ ಪ್ರಸಾದಸ್ಥಲದಲ್ಲಿಯೇ ನಿಂದುದು.
ಈ ತ್ರಿವಿಧಸ್ಥಲ ತ್ರಿವಿಧದಲ್ಲಿಯೇ ನಿಂದುದು,
ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ. ॥ ೧೭೦ ॥

೭೮೧

ಅಣುಕುಂಡಲ ನಾಗಬಂಧನವೆಂಬ ಸುಷುಮ್ನನಾಳದಿಂದ ಒದಗಿದ
ನಿರೂಪ(ಬಿಂದು)ವನು ಒಸರಲೀಯದೆ ಕಟ್ಟಿದೆನೆಂದರೆ ಆ ಶಶಿಧರಂಗಳವಲ್ಲ.
ಒಡಲುಗೊಂಡರೆ ಒಸರುವುದು ಮಾಬುದೆ?
ಒಡಲಿಲ್ಲದಿದ್ದರೆ ಒಸರುವುದು ಮಾಬುದು.
ಒಸರಲೀಯದೆ ಕಟ್ಟಿದೆನೆಂಬ ಮೂರ್ಖರೆಲ್ಲಾ
ಭಂಗಬಟ್ಟು ನಿಸಿದ್ಧರಾಗಿ ಹೋದರಯ್ಯಾ.
ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿ,
ಕೋಟ್ಯನುಕೋಟಿ ಕರ್ಮವ ಪೂಜಿಸುವ ಕರ್ಮಿಗಳೆತ್ತ ಬಲ್ಲರು, ಆ ಶರಣನ?
ಭಕ್ತಿ ಹಿಂದುಮುಂದಾದ ಮಹಾಲಿಂಗೈಕ್ಯನ ನಿಲವ?
ಇದು ಕಾರಣ, ಕೂಡಲಚೆನ್ನಸಂಗಯ್ಯಾ
ಲಿಂಗೈಕ್ಯರ ನಿಲವ ಲಿಂಗೈಕ್ಯನೇ ಬಲ್ಲ. ॥ ೧೭೧ ॥

೭೮೨

ಎಲೆ ಗುರುಕಾರುಣ್ಯವಾಯಿತ್ತೆಂಬ ಅಣ್ಣಗಳು ನೀವು ಕೇಳಿರೆ:
ಶಿವನಾವಕಡೆ ಶಕ್ತಿ ಯಾವಕಡೆ?

ಉತ್ಪತ್ಯವ ಬಲ್ಲರೆ ನೀವು ಹೇಳಿರೆ!
ಶಕ್ತಿಯ ಮೇಲೆ ಸಾಹಿತ್ಯವ ಮಾಡಿಕೊಟ್ಟನಲ್ಲಾ ನಿಮ್ಮ ಗುರು.
ಶಿವನ ಶಿವಂಗರ್ಪಿಸುವ ಪರಿಯೆಂತೊ?
ಶಿವ ನಷ್ಟ, ಶಕ್ತಿ ನಷ್ಟ,
ಈ ಉಭಯಸ್ಥಳವನರಿದಡೆ
ಕೂಡಲಚೆನ್ನಸಂಗಾ ನೀನೆಂಬೆನು. || ೧೭೨ ||

೬೭೩

ಆತ್ಮಸಂಗವಾದ ಬಳಿಕ ಅರಿವ ಮರೆಯಲುಂಟೆ?
ಉಪಮೆ ನಿಃಸ್ಥಳವಾದ ಬಳಿಕ ಶಬ್ದಸಂದಣಿ ಉಂಟೆ?
ಅಖಂಡಿತ ಲಿಂಗಕ್ಕೆ ಅಪ್ರಮಾಣ ಶರಣ,
ಸೀಮೆಸಂಬಂಧವೆಂಬ ಸಂಕಲ್ಪ ಉಂಟೆ?
ಇದು ಕಾರಣ,-ಕೂಡಲಚೆನ್ನಸಂಗಯ್ಯಾ ನಿಮ್ಮ
ಶರಣಂಗೆ ಭವವಿಲ್ಲ, ಬಂಧನವಿಲ್ಲ. || ೧೭೩ ||

೬೭೪

ಆಚಾರದರಿವು ಆಗಮವ ಕೂಡಿಕೊಂಡಿಹುದು.
ಗುರುವಾಚಾರದ [ಅರಿವು] ನಿಷ್ಠೆಯ ಕೂಡಿಕೊಂಡಿಹುದು.
ಲಿಂಗಾಚಾರದರಿವು ಕ್ರೀಯ ಕೂಡಿಕೊಂಡಿಹುದು.
ಸಮಯಾಚಾರದ ಅರಿವು ಸಂಬಂಧವ ಕೂಡಿಕೊಂಡಿಹುದು.
ಇಂತೀ ಚತುರ್ವಿಧದೊಳಗಾವಂಗವೂ ಇಲ್ಲ-
ಕೂಡಲಚೆನ್ನಸಂಗನ ಶರಣರ ಪರಿ ಬೇರೆ. || ೧೭೪ ||

೬೭೫

ಲಿಂಗವೆಂಬವಂಗೆ ಲಿಂಗವಿಲ್ಲ, ಜಂಗಮವೆಂಬವಂಗೆ ಜಂಗಮವಿಲ್ಲ.
ಪ್ರಸಾದವೆಂಬವಂಗೆ ಪ್ರಸಾದವಿಲ್ಲ.
ಲಿಂಗವೆನ್ನದವಂಗೆ ಲಿಂಗವುಂಟು, ಜಂಗಮವೆನ್ನದವಂಗೆ ಜಂಗಮವುಂಟು,
ಪ್ರಸಾದವೆನ್ನದವಂಗೆ ಪ್ರಸಾದವುಂಟು.
ಈ ತ್ರಿವಿಧಸ್ಥಳವನರಿಯಬಲ್ಲರೆ
ಕೂಡಲಚೆನ್ನಸಂಗ ತಾನೇ ಉಂಟು. || ೧೭೫ ||

೬೭೬

ಲಿಂಗ ಲಿಂಗವೆಂಬವ ಲಿಂಗಸೂತಕಿಯಯ್ಯ,
ಜಂಗಮ ಜಂಗಮವೆಂಬವ ಜಂಗಮಸೂತಕಿಯಯ್ಯ,
ಪ್ರಸಾದ ಪ್ರಸಾದವೆಂಬವ ಪ್ರಸಾದಸೂತಕಿಯಯ್ಯ
ಈ ತ್ರಿವಿಧ ಸೂತಕಿಯ ಮಾತ ಕೇಳಲಾಗದು.
ಸರ್ವಸೂತಕ ನಿರ್ವಾಹವಾಯಿತ್ತು.
ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ. ॥ ೧೭೬ ॥

೬೭೭

ಓಲೆಯನಿಕ್ಕಿದ ಬಾಲೆಯ ಓಲೆಗಳೆಯದಿದೆಂತೊ?
ಓಲೆಯಿದ್ದು ಓಗಾಯತವಾಯಿತ್ತೆಲ್ಲರಿಗೆಯೂ,
ಓಲೆಯೂ ಹೋಯಿತ್ತೆನಗೆ, ಬಾಲೆಯೂ ಹೋಯಿತ್ತೆನಗೆ,
ಓಲೆಯ ಬಾಲೆಯ ಕೀಲಬಲ್ಲವರ
ಕೂಡಲಚೆನ್ನಸಂಗನೆಂಬೆನು. ॥ ೧೭೭ ॥

೬೭೮

ಸ್ಥಲವಿಡಿದು ಸರ್ವದಲಾಯತವಾಗಿ.
ಸಹಜವಿಡಿದು ನಿಜವಳವಟ್ಟುದಾಗಿ,
ಅದಿದೆಂದೆನಲುಂಟೆ? ರೂಪವಲ್ಲ ನಿರೂಪವಲ್ಲ,
ಕೂಡಲಚೆನ್ನಸಂಗಾ ನಿರ್ಗಮನವಾದ
ಕಾಯವೆ ಕೈಲಾಸ. ॥ ೧೭೮ ॥

೬೭೯

ಲಿಂಗ ಲಿಂಗವೆಂದಲ್ಲಿಯೇ ತಪ್ಪಿತ್ತು,
ಜಂಗಮ ಜಂಗಮವೆಂದಲ್ಲಿಯೇ ತಪ್ಪಿತ್ತು,
ಪ್ರಸಾದ ಪ್ರಸಾದವೆಂದಲ್ಲಿಯೇ ತಪ್ಪಿತ್ತು.
ಈ ತ್ರಿವಿಧದ ನಿಕ್ಷೇಪದ ಸಂಚವ ಬಲ್ಲರೆ
ಈ ಲೋಕದಲ್ಲಿ ಇದ್ದರೇನು? ಆ ಲೋಕಕ್ಕೆ ಹೋದರೇನು?
ಆ ಲೋಕದಿಂದ ಈ ಲೋಕಕ್ಕೆ ಬಂದರೇನು?
ಹದಿನಾಲ್ಕು ಭುವನದೊಳಗಿದ್ದ ನಿಸ್ಸಾರಮಂ ಬಿಟ್ಟು
ಲಿಂಗಸಾರಾಯ ಮೋನಿಯಾಗಿ ಕೂಡಲಚೆನ್ನಸಂಗನಲ್ಲಿ
ನಿರ್ಲೇಪನಾದ ಶರಣ. ॥ ೧೭೯ ॥

೭೮೦

ಸಕಳ ನಿಷ್ಕಳನಯ್ಯಾ ನಿಷ್ಕಳ ಸಕಳನಯ್ಯಾ,
ಸಕಳನಾಗಿ ಸಂಸಾರಿಯಲ್ಲ, ನಿಷ್ಕಳನಾಗಿ ವೈರಾಗಿಯಲ್ಲ,
ಸಂಸಾರಿಯಲ್ಲದ ಸಂಗ, ವೈರಾಗಿಯಲ್ಲದ ನಿಸ್ಸಂಗ,
(ಉಭಯ)ಸಂಗದಿಂದ ಮಹಂತಿಕೆಯನೆಯ್ದಿಹನಾಗಿ.
ಸ್ಥಾವರಂ ಜಂಗಮಶ್ಚೈವ ದ್ವಿವಿಧಂ ಲಿಂಗಮುಚ್ಯತೇ–[ಎಂದುದಾಗಿ]
ಕೂಡಲಚೆನ್ನಸಂಗನೆಂತಿದ್ದಡಂತೆ ಕ್ಷೀಣನಲ್ಲ. ॥ ೧೮೦ ॥

೭೮೧

ಅಜಾಂಡ ಮೊದಲಾದ ತ್ರಿಜಾಂಡದೊಳಗೆ ಅಜಾಂಡ ಕೋಟಿಗಳು.
ಇಂಥ ನವಕೋಟಿಬ್ರಹ್ಮರೆಲ್ಲರೂ ಹರ ನಿಮ್ಮ ಚರಣವನರಿಯರು.
ಎಲ್ಲಾ ಭವಭಾರಕರಾಗಿ, ಶಿವ ನಿಮ್ಮ ಚರಣವನರಿಯರು.
ಜಡೆಯ ಕಟ್ಟಿ ಕರ್ಣ ಕುಂಡಲವನ್ನಿಕ್ಕಿ ನಂದಿಯನೇರಿದ ರುದ್ರರು–
ಇಂಥ ನವಕೋಟಿರುದ್ರರೆಲ್ಲಾ ಹರ ನಿಮ್ಮ ಚರಣವನರಿಯರು,
ಎಲ್ಲಾ ಭವಭಾರಕರಾಗಿ,
ಅಷ್ಟವೃಕ್ಷಫಲದೊಳು ಸ್ಥೂಲ ಸೂಕ್ಷ್ಮವಾಗಿ,
ಕೂಡಲಚೆನ್ನಸಂಗಾ ನಿಮ್ಮ ಶರಣ
ಅನಲನಾಹುತಿಯಮೇಳದಂತಿಪ್ಪ. ॥ ೧೮೧ ॥

೭೮೨

ಉದ್ಭ್ರಮೆಯಿಲ್ಲ, ಉದ್ವೇಶಿಯಿಲ್ಲ, ನಿದ್ರೆಗೆಟ್ಟವನು,
ನಿಜವನೆ ಬೆಳಗುತಿಪ್ಪ ನಿಶ್ಚಿಂತ ಶರಣ.–
ಚಿಂತೆಗೆಟ್ಟು ಸ್ಥಿರವಾಗಿ ನಿಂದ, ಸೀಮೆಯ ಕೆಡಿಸಿ ನಿಸ್ಸೀಮನಾದ,
ಬೋಧೆಯ ಕೆಡಿಸಿ ನಿರ್ಬೋಧಿಯಾದ,
ಕಾಮವ ಕೆಡಿಸಿ ಕರ್ಮಾದಿ ಗುಣರಹಿತನಾದ,
ಆಸೆಯ ಕೆಡಿಸಿ ನಿರಾಶ್ರಯನಾಗಿ ತನ್ನ ಮರೆದನಾಗಿ.
ಇದು ಕಾರಣ, ಕೂಡಲಚೆನ್ನಸಂಗಾ
ನಿಮ್ಮ ಶರಣಂಗೆ ಆರೂ ಸರಿಯಿಲ್ಲ. ॥ ೧೮೨ ॥

೭೮೩

ಕರ್ತೃತ್ವವಿಲ್ಲಾಗಿ ಕರ್ಮವಿಲ್ಲ, ಕರ್ಮವಿಲ್ಲಾಗಿ ಜನನವಿಲ್ಲ,
ಜನನವಿಲ್ಲಾಗಿ ದೇಹವಿಲ್ಲ, ದೇಹವಿಲ್ಲಾಗಿ ಭೂತಾತ್ಮ ಪವಿತ್ರ.
ಕರಣಾದಿ ಗುಣಂಗಳು ಮುನ್ನಿಲ್ಲ, ಹಿಂದಣ ಸ್ಥಿತಿಯಿಲ್ಲ, ಮುಂದಣ ಲಯವಿಲ್ಲ,
ಆದಿ ಮಧ್ಯ ಅವಸಾನವಿಲ್ಲ,
ಬಿಚ್ಚಿ ಬೇರಿಲ್ಲ, ಬೆರಸಿವೊಂದಲ್ಲ, ಉಪಮಾತೀತನೆಂಬೆ.
ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣನು ನುಡಿಗಡಣವಿಲ್ಲದ ಮುಗ್ಧನು. || ೧೮೩ ||

೭೮೪

ಹತ್ತರಲೊಂದ ಕಳೆದು ಅರುವತ್ತಾಯಿತ್ತು.
ಸಪ್ತಕ ಸಾಧಿಸಲಾರವಶವಲ್ಲ,
ಶಶಿ ಸೂರ್ಯರ ವಶವಲ್ಲ, ದಶಕೋಟಿಯೆಯ್ದೆ ಅಳಿದುದು.
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ
ಹತ್ತರ ಮೇಲೆ ಹನ್ನೊಂದರತಿದ್ದೆನಯ್ಯಾ. || ೧೮೪ ||

೭೮೫

ಯೋಗಿ ಎನಲಿಲ್ಲ, ಭೋಗಿ ಎನಲಿಲ್ಲ,
ಕಾಮಿ ಎನಲಿಲ್ಲ, ನಿಃಕಾಮಿಯೆನಲಿಲ್ಲಾಗಿ,
ತನ್ನ ಪರಿ ಬೇರೆ ಕಾಣೆರಯ್ಯ.
ದೇವ ಎನಲಿಲ್ಲ, ಭಕ್ತ ಎನಲಿಲ್ಲ,
ಭಾವವೆನಲಿಲ್ಲ, ನಿರ್ಭಾವವೆನಲಿಲ್ಲಾಗಿ,
ತನ್ನ ಪರಿ ಬೇರೆ ಕಾಣೆರಣ್ಣಾ.
ಭವಭಯಂಗಳೆಲ್ಲವ ಪರಿಹರಿಸಿ ಕಳೆದನು.
ನಿಭ್ರಾಂತಿ ನಿರುತನು, ನಿಮ್ಮ ಶರಣ,
ಅಪ್ರತಿಗೆ ಪ್ರತಿವುಂಟೆ? ಕೂಡಲಚೆನ್ನಸಂಗಮದೇವಾ. || ೧೮೫ ||

೭೮೬

ಭಜಿಸಲಿಲ್ಲ, ಗತಿಮತಿ ಫಲವಿರಹಿತನಾಗಿ,
ಉಂಟೆಂಬ ಕುಳವಲ್ಲ, ಇಲ್ಲೆಂಬ ನಿಸ್ಸಾರನಲ್ಲ.
ಕೂಡಲಚೆನ್ನಸಂಗಾ ನಿಮ್ಮ ಶರಣ ಲಿಂಗೈಕ್ಯನಾಗಿ. || ೧೮೬ ||



## ಐಕ್ಯನ ಜ್ಞಾನಿಷ್ಠಲ:

೬೮೭

ಭಕ್ತನಾದರೆ ಭಕ್ತಿಸ್ಥಲವನರಿದು ಅರಿಯದಂತಿರಬೇಕು,
ಮಾಹೇಶ್ವರನಾದರೆ ನಿಷ್ಠೆಯ ಕುಳವನರಿದು ಅರಿಯದಂತಿರಬೇಕು,
ಪ್ರಸಾದಿಯಾದರೆ ಪ್ರಸಾದಿಸ್ಥಲವನರಿದು ಅರಿಯದಂತಿರಬೇಕು,
ಪ್ರಾಣಲಿಂಗಿಯಾದರೆ ಸ್ಥಿತಿ–ಗತಿಯನರಿದು ಅರಿಯದಂತಿರಬೇಕು,
ಶರಣನಾದರೆ ಸತಿಪತಿಯೆಂದರಿದು ಅರಿಯದಂತಿರಬೇಕು,
ಐಕ್ಯನಾದರೆ ತಾನು ತಾನಾಗಿ ಆಗದಂತಿರಬೇಕು,–
ಇಂತೀ ಷಡುಸ್ಥಲವನರಿಯದೆ ಮಾಡಿದನೆಂಬ
ಲಜ್ಜೆಗೆಟ್ಟ ಲಾಂಛನ ಧಾರಿಯನೇನೆಂಬೆ,
ಕೂಡಲಚೆನ್ನಸಂಗಮದೇವಾ. || ೧ ||

೬೮೮

ಲಾಂಛನದೆಡೆಯಲ್ಲಿ ಹುಸಿಯ ಸಂಪಾದಿಸುವವ ಭಕ್ತನಲ್ಲ,
ಹುರುಡುವಿಡಿದಾತ ಮಾಹೇಶ್ವರನಲ್ಲ,
ಪದಪದಾರ್ಥ ನಾಸ್ತಿ ಪ್ರಸಾದಿಗೆ, ಖತಿ ನಾಸ್ತಿ ಪ್ರಾಣಲಿಂಗಿಗೆ,
ಶರಣಂಗೆ ಸತಿ ನಾಸ್ತಿ, ಐಕ್ಯಂಗೆ ಪತಿ ನಾಸ್ತಿ.
ಇಂತೀ ಷಡುಸ್ಥಲಂಗಳ ಸಕೀಲ ಸಂಯೋಗ ಸಂಬಂಧ,
ಕೂಡಲಚೆನ್ನಸಂಗಮದೇವಾ ಸಾಧಕರಳವೆ
ಸಹಜದ ಒಡೆಯರಿಗಲ್ಲದೆ? || ೨ ||

೬೮೯

ಹೊನ್ನುಳ್ಳಾತ ಭಕ್ತನಲ್ಲ, ಹೆಣ್ಣುಳ್ಳಾತ ಶರಣನಲ್ಲ, ಮಣ್ಣುಳ್ಳಾತ ಲಿಂಗೈಕ್ಯನಲ್ಲ.
ಹೊನ್ನು ಜೀವ, ಹೆಣ್ಣು ಪ್ರಾಣ, ಮಣ್ಣು ದೇಹ.
ಹೊನ್ನು ಭವ, ಹೆಣ್ಣು ಭವಿ, ಮಣ್ಣು ಹಮ್ಮು.
ಇಂತೀ ತ್ರಿವಿಧ ಸ್ಥಲವಪೂರ್ವ ಕೂಡಲಚೆನ್ನಸಂಗಯ್ಯನಲ್ಲಿ. || ೩ ||

೬೯೦

ಲಿಂಗನಿಷ್ಠೆ ಪೂಜೆಯಲ್ಲಿ ಬೀಯವಾಯಿತ್ತು,
ಜಂಗಮ ನಿಷ್ಠೆ ಅನುಸರಣೆಯಲ್ಲಿ ಬೀಯವಾಯಿತ್ತು,

ಪ್ರಸಾದನಿಷ್ಠೆ ಬೆರಕೆಯಲ್ಲಿ ಬೀಯುವಾಯಿತ್ತು,
ಇಂತೊಂದರ ನಿಷ್ಠೆ ಅಂದಂದಿಂಗೆ ಬೀಯುವಾಯಿತ್ತು,
ಕೂಡಲಚೆನ್ನಸಂಗಯ್ಯನ ಭಕ್ತಿ ಜಗವನಾಳಿಗೊಂಡಿತ್ತು. || ೪ ||

೬೯೧

ಪವನದ ಕಡೆಯಿಂದ ಪರಿಮಳ ಬೀಸರವಾಯಿತ್ತು,
ನುಡಿಗಡಣದಿಂದ ಅನುಭಾವ ಬೀಸರವಾಯಿತ್ತು,
ಮಾಟದ ಬೆರಕೆಯಿಂದ ಭಕ್ತಿ ಬೀಸರವಾಯಿತ್ತು,
ಕೂಟದ ಬೆರಕೆಯಿಂದ ಅರಿವು ಬೀಸರವಾಯಿತ್ತು,
ಸೂಕ್ಷ್ಮ ಶಿವಪಥವು ಸಾಮಾನ್ಯರಿಗಳವೆ?
ಕೂಡಲಚೆನ್ನಸಂಗಯ್ಯನ ಶರಣರಿಗಲ್ಲದಿಲ್ಲ. || ೫ ||

೬೯೨

ವೇದ್ಯರ ನುಡಿಗಡಣವಿಲ್ಲದವರು ನಡೆದರೆಡಹರೆ?
ಅಹಿತರೆ ವೃಷಭಧ್ವಜರು?
ಪ್ರಕೃತಿ ಪ್ರಾಣಿಗಳಿಗೆಲ್ಲಿಯದು ಭಕ್ತಿ?
ಬಾಣ ನಿರ್ವಾಣ ಕೂಡಲಚೆನ್ನಸಂಗ ಲಿಂಗೈಕ್ಯವು. || ೬ ||

೬೯೩

ಎಂಜಲು ಮಾತು ನುಡಿವ ರಂಜಕರೆಲ್ಲರು ಮಿಗೆ ಮಿಗೆ ಮೊಸಲ ತಾವೆತ್ತ ಬಲ್ಲರು?
ಮೊಸಲು ಎಂಜಲಹುದೆ? ಎಂಜಲು ಮೊಸಲಹುದೆ?
ಮಾತಿನ ಬಣಬೆಯ ಮೇದ ಪಶು ಪ್ರಾಣಿಯಂತೆ
ಎಂಜಲು ಮಾತನೆ ನುಡಿಯುತ್ತಿಹರು,
ಲಿಂಗಸಕೀಲಸಂಯೋಗದ ವರ್ಮಸ್ಥಳವನವರೆತ್ತ ಬಲ್ಲರು!
ಕೂಡಲಚೆನ್ನಸಂಗಯ್ಯಾ,
ಉಪದೇಶ ಸೂತಕಿಗಳೆಲ್ಲರೂ ರೌರವನರಕಿಗಳು. || ೭ ||

೬೯೪

ಪುರಾತನರ ವಚನವ ಕಲಿತು ಪೇಳುವವರನೇನೆಂಬೆ!
ಅದ ಕುಳ್ಳಿದ್ದು ಕೇಳುವವರನೇನೆಂಬೆ! ಅದಕ್ಕೆ ಮನನಾಚದವರನೇನೆಂಬೆ!
ಇದು ಕಾರಣ, ಕೂಡಲಚೆನ್ನಸಂಗನಲ್ಲಿ ಶಬ್ದ ನಷ್ಟವಾಗದವರನೇನೆಂಬೆ! || ೮ ||

೬೯೫

ಒಡಲುಗೊಂಡು ಒಡಲುವಿಡಿಯದೆ ಒಡಲಿಲ್ಲದ ನಿಜವ ಬೆರಸಲವೊ!
ನರರು ಸುರರು ಕಿನ್ನರರು ಖೇಚರರು
ಪರಮ ಪದವಿಯನರಿಯದ ಕಾರಣ ಭವದೊಳಗೆ ಸಿಲುಕಿದರು.
ಕೂಡಲಚೆನ್ನಸಂಗನ ನಿಜರೂಪನೆ ಬೆರಸಿರೊ ಮುಮುಕ್ಷುಗಳಿರಾ. ॥ ೯ ॥

೬೯೬

ಧರಣಿಜರೆಲ್ಲರೂ ಭಕ್ತರೇ ಆಗಿ, ಪಾಷಾಣಂಗಳೆಲ್ಲವೂ ಲಿಂಗಂಗಳಾಗಿ,
ಆದಿ ಸೂತಕವೇದ್ಯನು ಭಕ್ತನು; ವಿರಕ್ತನು, ಮುಕ್ತನೆಂದೆನಿಸುವ,
ತ್ರಿವಿಧ ಸೂತಕವ ಕಳೆದುಳಿದಲ್ಲದೆ
ಕೂಡಲಚೆನ್ನಸಂಗನ ಹೊದ್ದಬಾರದು. ॥ ೧೦ ॥

೬೯೭

ಲಿಂಗಮುಖವರಿದಂಗೆ ಅಂಗವೆಂಬುದಿಲ್ಲ,
ಜಂಗಮಮುಖವರಿದಂಗೆ ಸಂಸಾರವೆಂಬುದಿಲ್ಲ,
ಪ್ರಸಾದಮುಖವರಿದಂಗೆ ಇಹಪರವೆಂಬುದಿಲ್ಲ,
ಈ ತ್ರಿವಿಧವೊಂದೆಂದರಿದಂಗೆ ಮುಂದೇನೂ ಇಲ್ಲ,
ಈ ತ್ರಿವಿಧದ ನೆಲೆಯ ಶ್ರುತಿಸ್ಮೃತಿಗಳರಿಯವು,
ಕೂಡಲಚೆನ್ನಸಂಗಾ ನಿಮ್ಮ ಶರಣಬಲ್ಲ. ॥ ೧೧ ॥

೬೯೮

ಕಾಯದೊಳಗೆ ಕಾಯವಾಗಿರ್ದೆಯಲ್ಲಾ ಹಂಸಾ,
ಸಂಸಾರ ಮಾಯಾಪಾಶವ ಬಿಡಲಾರದೆ ಡಿಂಭವ ನೆಚ್ಚಿ ಕೆಟ್ಟೆಯಲ್ಲಾ ಹಂಸಾ.
ಜೀವ ಶೂನ್ಯವಾಗಿ
ಕೂಡಲಚೆನ್ನಸಂಗನ ಶರಣರು ಪೋಪರು. ॥ ೧೨ ॥

೬೯೯

ಭಕ್ತಿ ಭಕ್ತಿಯ ಸುಖವ ಕಾಣಬಹುದಲ್ಲದೆ,
ಲಿಂಗ ಲಿಂಗದ ಸುಖವ ಕಾಣಬಾರದು.
ಲಿಂಗ ಲಿಂಗದ ಸುಖವ ಕಾಣಬಹುದಲ್ಲದೆ,
ಜಂಗಮ ಜಂಗಮದ ಸುಖವ ಕಾಣಬಾರದು.
ಜಂಗಮ ಜಂಗಮದ ಸುಖವ ಕಾಣಬಹುದಲ್ಲದೆ,

ನಿಜ ನಿಜದ ಸುಖವ ಕಾಣಬಾರದು.
ನಿಜ ನಿಜದ ಸುಖವ ಕಾಣಬಹುದಲ್ಲದೆ,
ನಿಷ್ಪತಿ ನಿಷ್ಪತಿಯ ಸುಖವ ಕಾಣಬಾರದು,
ನಿಷ್ಪತಿ ನಿಷ್ಪತಿಯ ಸುಖವ ಕಾಣಬಹುದಲ್ಲದೆ,
ನಿಜೈಕ್ಯ ನಿಜೈಕ್ಯದ ಸುಖವ ಕಾಣಬಾರದು,
ಇದು ಕಾರಣ, ಕೂಡಲಚೆನ್ನಸಂಗನಲ್ಲಿ
ನಿರ್ನಾಮಿಗಲ್ಲದೆ ನಿರ್ನಾಮದ ಸುಖವ ಕಾಣಬಾರದು. ॥ ೧೩ ॥

೭೦೦

ತನು ಮನ ಧನ ನಿವೇದಿಸಿದಲ್ಲಿ ಭಕ್ತರೆಂಬೆನು,
ಅರ್ಥಪ್ರಾಣಾಭಿಮಾನವ ನಿವೇದಿಸಿದಲ್ಲಿ ಪ್ರಸಾದಿಗಳೆಂಬೆನು,
ಹೊನ್ನು ಹೆಣ್ಣು ಮಣ್ಣು ನಿವೇದಿಸಿದಲ್ಲಿ ಶರಣರೆಂಬೆನು
ನವಸ್ಥಳವನರ್ಪಿಸಿದರೇನಯ್ಯ ನವಬ್ರಹ್ಮರ ಕುಳ ತಿಳಿಯದನ್ನಕ್ಕ?!
ನವಬ್ರಹ್ಮರ ಕುಳ ನಷ್ಟವಾದರೆ,
ಕೂಡಲಚೆನ್ನಸಂಗನಲ್ಲಿ ಲಿಂಗೈಕ್ಯರೆಂಬೆನು. ॥ ೧೪ ॥

೭೦೧

ಕಾಯಕದಲ್ಲಿ ಲಿಂಗೈಕ್ಯವೇ? ಅಲ್ಲ. ಜೀವದಲ್ಲಿ ಲಿಂಗೈಕ್ಯವೇ? ಅಲ್ಲ.
ಭಾವದಲ್ಲಿ ಲಿಂಗೈಕ್ಯವೇ? ಅಲ್ಲ.
ಇಂತೀ ತ್ರಿವಿಧ ಲಿಂಗೈಕ್ಯವೇ? ಅಲ್ಲ. ಮತ್ತೆಯೂ ಲಿಂಗೈಕ್ಯವೇ ಬೇಕು,
ಕೂಡಲಚೆನ್ನಸಂಗಮದೇವಾ. ॥ ೧೫ ॥

೭೦೨

ಭೂಮಿಯೊಳಗೆ ಬೀಜ ಬಿದ್ದಲ್ಲಿ ಕೆಟ್ಟಿತ್ತೆಂವೆನಬೇಡ,
ಮುಂದಣ ಫಲದೊಳಗರಸಿಕೊ!
ಕಾಸಿ ಕರಗಿಸಿದ ಬಂಗಾರ ಕೆಟ್ಟಿತ್ತೆಂದೆನಬೇಡ,
ಮುಂದಣ ಬಣ್ಣದೊಳಗರಸಿಕೊ!
ಹೊತ್ತಿಸಿದ ದೀಪ್ತಿ ಕೆಟ್ಟಿತ್ತೆಂದೆನಬೇಡ,
ಮುಂದಣ ಅಗ್ನಿಯೊಳಗರಸಿಕೊ!
ಲಿಂಗದೊಳಗೆ ಪ್ರಾಣ, ಪ್ರಾಣದೊಳಗೆ ಲಿಂಗ.
ಇದು ಕಾರಣ ಕೂಡಲಚೆನ್ನಸಂಗನ ಶರಣರ
ಪಾದ ಪ್ರತಿಬಿಂಬದೊಳಗರಸಿಕೊ
ಸಂಗನಬಸವಣ್ಣನ ಬಸವಣ್ಣನ. ॥ ೧೬ ॥

೭೦೩

ಕ್ಷತ್ರಿಯ ಮಂತ್ರಿ ಜಗಕ್ಕೆ ರಾಜಾಂಗವೆ?
ಸಪ್ತಾಂಗ ಸನ್ನಾಹವೆಂಬುದು ಸಂಭ್ರಮ ಸಹಿತ
ಉನ್ಮದನ ಮೋಹಿನಿಗಳೆಲ್ಲಾ ಅನುದಪ್ಪಿ ಹೋದರಾಗಿ
ಅಂತಃಕರಣ ಘನವೇದಿಸಿ ಶಬ್ದನಿಷ್ಪತ್ತಿಗಳಿಗಲ್ಲದೆ
ಸಹಭೋಜನವಳವಡದು ಕೂಡಲಚೆನ್ನಸಂಗಮದೇವಾ. ॥ ೧೭ ॥

೭೦೪

ಕ್ರಮವರಿದು ಭ್ರಮೆ ತಿಳಿದು ಅಮಳಸಂಯೋಗದಲ್ಲಿ ಸಮನಿಸೂದು,
'ಏಕಮೇವ ನ ದ್ವಿತೀಯ' ಎಂಬುದನರಿದು ಸಮನಿಸೂದು,
ಶಿವಾತ್ಮಕೋ ಲಿಂಗದೇಹೀ ಅಂಗಾಚಾರೇಣ ಲೌಕಿಕಃ।
ಸರ್ವಂ ಲಿಂಗಮಯಂ ಪ್ರೋಕ್ತಂ ಲಿಂಗೇನ ಸಹವರ್ತತೇ॥
ಇದು ಕಾರಣ, ಕೂಡಲಚೆನ್ನಸಂಗನಲ್ಲಿ
ಸಹ ಭೋಜನವ ಸಮನಿಸೂದು. ॥ ೧೮ ॥

೭೦೫

ಭವಿಯ ತಂದು ಭಕ್ತನ ಮಾಡುವುದೆ ಅನಾಚಾರ,
ಭಕ್ತನ ತಂದು ಭವಿಯ ಮಾಡುವುದೆ ಆಚಾರ.
ಭವಿ ಮಾಡಿದ ಓಗರವ ಭಕ್ತ ನೋಡಿದರೆ ನಾಯಕ ನರಕ,
ಆ ಭಕ್ತ ಭವಿಯಹನಲ್ಲದೆ ಆ ಭವಿ ಭಕ್ತನಾಗಲರಿಯನಾಗಿ.
ಈ ಕ್ರಮವರಿದು ಮಾಡೂದು
ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು. ॥ ೧೯ ॥

೭೦೬

ಹಸಿವರತಲ್ಲದೆ ಪ್ರಸಾದಿವೇದಿಯಲ್ಲ,
ತೃಷೆಯರತಲ್ಲದೆ ಪಾದೋದಕವೇದಿಯಲ್ಲ,
ನಿದ್ರೆಯರತಲ್ಲದೆ ಭವವಿರಹಿತನಲ್ಲ.
ಅನಲ ಪವನ (ಗುಣವರತಲ್ಲದೆ) ಜನನ ಮರಣ ರಹಿತನಲ್ಲಯ್ಯ.
ಇದು ಕಾರಣ, ಕೂಡಲಚೆನ್ನಸಂಗಯ್ಯನ
ಲಿಂಗೈಕ್ಯವೆಲ್ಲರಿಗೆಲ್ಲಿಯದು? ॥ ೨೦ ॥

೭೦೭

ಲಿಂಗವಿಡಿದು ಲಿಂಗಮಾಹೇಶ್ವರನೆನಿಸಿಕೊಂಬುದಯ್ಯಾ,
ಲಿಂಗವಿಡಿದು ಲಿಂಗೈಕ್ಯನೆನಿಸಿಕೊಂಬುದಯ್ಯಾ,
ಲಿಂಗವಿಡಿದು ಲಿಂಗ ಪ್ರಾಣಯೆನಿಸಿಕೊಂಬುದಯ್ಯಾ.
ಅರಿವರತು ಕ್ರಿಯಾನುಭಾವವಿಡಿದು ಮೀರಿ
[ಕೂಡಲಚೆನ್ನಸಂಗ ತಾನಾದ] ॥ ೨೧ ॥

೭೦೮

ಲಿಂಗಸ್ಥಲ ನಾಸ್ತಿಯಾದಲ್ಲದೆ ಭಕ್ತನಲ್ಲ,
ಜಂಗಮಸ್ಥಲ ನಾಸ್ತಿಯಾದಲ್ಲದೆ ಶರಣನಲ್ಲ,
ಗುರುಸ್ಥಲ, ನಾಸ್ತಿಯಾದಲ್ಲದೆ ಐಕ್ಯನಲ್ಲ.
ಇದು ಕಾರಣ ಕೂಡಲಚೆನ್ನಸಂಗಮದೇವಾ,
ಈ ತ್ರಿವಿಧನಾಸ್ತಿಯಾಗಿ ಭಕ್ತಿ ಕೆಟ್ಟು
ಭವಿಯಾದಲ್ಲದೆ ಲಿಂಗೈಕ್ಯನಲ್ಲ. ॥ ೨೨ ॥

೭೦೯

ಅಂಜಿಕೆಯುಳ್ಳನ್ನಕ್ಕ ಪ್ರಾಣಲಿಂಗಸಂಬಂಧಿಯಲ್ಲ,
ಸೂತಕವುಳ್ಳನ್ನಕ್ಕ ಶರಣನಲ್ಲ, ಎಂಜಲುಳ್ಳನ್ನಕ್ಕ ಪ್ರಸಾದಿಯಲ್ಲ.
ಈ ತ್ರಿವಿಧವುಳ್ಳನ್ನಕ್ಕ ಲಿಂಗೈಕ್ಯನಲ್ಲ,
ಕೂಡಲಚೆನ್ನಸಂಗಮದೇವಾ. ॥ ೨೩ ॥

೭೧೦

ಅಂಗದ ಗುಣದಿಂದ ಲಿಂಗೈಕ್ಯವೆಂಬರು,
ಲಿಂ(ಅಂ?)ಗದಗುಣದಿಂದ ಲಿಂಗೈಕ್ಯವಿಲ್ಲ ನೋಡಾ.
ಭಾವಾದ್ವೈತಂ ಪರಹಿತ ಕೂಡಲಚೆನ್ನಸಂಗಾ ಲಿಂಗೈಕ್ಯವು. ॥ ೨೪ ॥

೭೧೧

ಆಚಾರ ಅಂಗದ ಮೇಲೆ ಆಯತವಾದುದೆ ಇಷ್ಟಲಿಂಗ,
ಆ ಇಷ್ಟಲಿಂಗವಿಡಿದಿಹುದೆ ಪ್ರಾಣಲಿಂಗ ಸ್ವಾಯತ,
(ಇಷ್ಟಲಿಂಗ ಉದಯಿಸಿದಲ್ಲದೆ ಪ್ರಾಣಲಿಂಗವ ಕಾಣಬಾರದು)
ಪ್ರಾಣಲಿಂಗ ಉದಯಿಸಿದಲ್ಲದೆ ಇಷ್ಟಲಿಂಗವ ಕಾಣಬಾರದು,
ಈ ಭೇದವ ಭೇದಿಸಬಲ್ಲರೆ ಕೂಡಲಚೆನ್ನಸಂಗನಲ್ಲಿ ಲಿಂಗೈಕ್ಯವು. ॥ ೨೫ ॥

೭೧೨

ಕಾಯದ ಕೊನೆಯ ಮೊನೆಯ ಮೇಲಣ ಲಿಂಗವ
[ಇಷ್ಟ]ಲಿಂಗವೆಂದು ಪೂಜಿಸುವರು,
ಜೀವದ ಕೊನೆಯ ಮೊನೆಯ ಮೇಲಣ ಲಿಂಗವ ಪ್ರಾಣಲಿಂಗವೆಂದೆಂಬರು,
ಭಾವದ ಕೊನೆಯ ಮೊನೆಯ ಮೇಲಣ ಲಿಂಗವ
[ಭಾವ]ಲಿಂಗವೆಂದು ಪೂಜಿಸುವರು.
ಕಾಯ ಲಿಂಗವೆಂದು ಪೂಜಿಸುವ ಖಂಡಿತರನೇನೆಂಬೆ?
ಜೀವ ಲಿಂಗವೆಂದು ಪೂಜಿಸುವ ಉಪಜೀವಿಗಳನೇನೆಂಬೆ?
ಭಾವ ಲಿಂಗವೆಂದು ಪೂಜಿಸುವ ಭ್ರಮಿತರನೇನೆಂಬೆ?
ಕಾಯ ಲಿಂಗವೇ? ಅಲ್ಲ, ಜೀವ ಲಿಂಗವೇ? ಅಲ್ಲ, ಭಾವ ಲಿಂಗವೇ? ಅಲ್ಲ,
ಅದೃಶ್ಯಭಾವನಾ ನಾಸ್ತಿ ದೃಶ್ಯಮೇವ ವಿನಶ್ಯತಿ।
ಅವರ್ಣಮಕ್ಷರಂ ಬ್ರಹ್ಮ ಕಥಂ ಧ್ಯಾಯಂತಿ ಯೋಗಿನಃ॥
ಎಂದುದಾಗಿ–ಇಷ್ಟಲಿಂಗವ ಪೂಜಿಸಿ ದೃಷ್ಟಲಿಂಗದಲ್ಲಿ ನೆರೆಯಬಲ್ಲರೆ
ಕೂಡಲಚೆನ್ನಸಂಗಯ್ಯಾ, ಅವರ ಸರ್ವಾಂಗಲಿಂಗಿಗಳೆಂಬೆನು. ॥ ೨೬ ॥

೭೧೩

ಭಕ್ತನಾದರೆ ಕಿಂಕಿಲನಾಗಿರಬೇಕು.
ಮಾಹೇಶ್ವರನಾದರೆ ಆದಿ ಅನಾದಿಯನರಿಯದಿರಬೇಕು.
ಪ್ರಸಾದಿಯಾದರೆ ಒಡಲಗುಣವಿರಹಿತನಾಗಿರಬೇಕು.
ಪ್ರಾಣಲಿಂಗಿಯಾದರೆ ಪ್ರಸಾದವಿಲ್ಲದಿರಬೇಕು.
ಶರಣನಾದರೆ ನಿಸ್ಸಂಗಿಯಾಗಿರಬೇಕು.
ಐಕ್ಯನಾದರೆ ಬಯಲು ಬಯಲಾಗಿರಬೇಕು.
ಇಂತೀ ಸ್ಥಲವನರಿದಲ್ಲದೆ, ಕೂಡಲಚೆನ್ನಸಂಗನಲ್ಲಿ
ಸುಸಂವೇದ್ಯನೆಂದೆನಿಸಬಾರದು. ॥ ೨೭ ॥

೭೧೪

ಭಕ್ತಿಯನರಿಯಿರಿ, ಭಕ್ತರಾದ ಪರಿಯೆಂತಯ್ಯಾ?
ಭಾವಶುದ್ಧವಿಲ್ಲ, ಮಹೇಶ್ವರರೆಂತಪ್ಪಿರಯ್ಯಾ?
ಅರ್ಪಿತದನುವರಿದು ಅರ್ಪಿಸಲರಿಯಿರಿ,
ಪ್ರಸಾದವ ಗ್ರಹಿಸುವ ಪರಿಯೆಂತಯ್ಯಾ?
ನಡೆ–ನುಡಿ ಎರಡಾಗಿ ಇದೆ, ಪ್ರಾಣಲಿಂಗ ಸಂಬಂಧಿಯೆಂತಾದಿರಿ?
ಇಂದ್ರಿಯಂಗಳು ಭಿನ್ನವಾಗಿ, ಶರಣರಾದ ಪರಿಯೆಂತಯ್ಯಾ?

ವಿಧಿ ನಿಷೇಧ ಭ್ರಾಂತಿ ಮುಕ್ತಿಯಾದ ಪರಿಯನರಿಯಿರಿ, ಐಕ್ಯರೆಂತಪ್ಪಿರಿ?
ಈ ಪಡುಸ್ಥಲದ ಕ್ರಿಯಾಕರ್ಮವರ್ಮ ಆರಿಗೆಯೂ ಅರಿಯಬಾರದು.
ಈ ವರ್ಮವರಿದಡೆ ಲಿಂಗೈಕ್ಯವು ಕೂಡಲಚೆನ್ನಸಂಗಮದೇವಾ. ॥ ೨೮ ॥

೭೧೫

ಶಿವಯೋಗವಾದಲ್ಲಿ ಸಂಸಾರಯೋಗ ಮಾಬುದಯ್ಯಾ,
ಸಂಸಾರಯೋಗ ಮಾದಲ್ಲಿ ಭಕ್ತಾನುಗ್ರಹಯೋಗವಯ್ಯಾ,
ಭಕ್ತಾನುಗ್ರಹಯೋಗದಲ್ಲಿ ಲಿಂಗಾನುಗ್ರಹಯೋಗವಯ್ಯಾ,
ಲಿಂಗಾನುಗ್ರಹಯೋಗದಲ್ಲಿ ಜಂಗಮಾನುಗ್ರಹಯೋಗವಯ್ಯಾ,
ಜಂಗಮಾನುಗ್ರಹಯೋಗದಲ್ಲಿ ಪ್ರಸಾದಾನುಗ್ರಹಯೋಗವಯ್ಯಾ,
ಪ್ರಸಾದಾನುಗ್ರಹಯೋಗದಲ್ಲಿ ತ್ರಿವಿಧ ಸನುಮತಯೋಗವಯ್ಯಾ,
ತ್ರಿವಿಧ ಸನುಮತಯೋಗದಲ್ಲಿ ಮನಮಗ್ನಯೋಗವಯ್ಯಾ,
ಮನಮಗ್ನಯೋಗವಾದಲ್ಲಿ ಕೂಡಲಚೆನ್ನಸಂಗನಲ್ಲಿ
ಲಿಂಗಸಂಯೋಗವಯ್ಯಾ. ॥ ೨೯ ॥

೭೧೬

ಶಿಷ್ಯನೆಂಬ ಪ್ರತಿಭಾವವಿಲ್ಲದ ಗುರು, ಗುರುವೆಂಬ ಪ್ರತಿಭಾವವಿಲ್ಲದ ಶಿಷ್ಯ,
ಏನೆಂಬೆನಯ್ಯ ಎರಡಿಲ್ಲದ ಘನವ? ಏನೆಂಬೆನಯ್ಯ ಎರಡೊಂದಾದ ಘನವ!
ಕೂಡಲಚೆನ್ನಸಂಗನಲ್ಲಿ ಗುರುಶಿಷ್ಯಸಂಬಂಧವಪೂರ್ವ. ॥ ೩೦ ॥

೭೧೭

ಗ್ರಾಮದ ಪಥಗತಿಯನರಿಯರು, ಗ್ರಾಮಕ್ಕೆ ಗುರುವಾವುದೆಂದರಿಯರು,
ಗ್ರಾಮದ ಕರಣವಿಡಿದಲ್ಲಿ ನಿಚ್ಚಾಟವಾವುದೆಂದರಿಯರು.
ಇವನರಿದು ಮರೆದು ನಿಂದರೆ
ಕೂಡಲಚೆನ್ನಸಂಗನಲ್ಲಿ ಲಿಂಗೈಕ್ಯವು. ॥ ೩೧ ॥

೭೧೮

ಲಿಂಗವೆಂದು ಪೂಜಿಸಿದರೆ ಅಂಗದೊಡನೆ ಉಳಿಯಿತ್ತು.
ಅಂಗದೊಡನೆ ಉಳಿದ ಲಿಂಗವ ಹಿಂಗಿ ಪೂಜಿಸಬೇಕು.
ಹಿಂಗಿದ ಪೂಜೆಯನರಿದಡೆ ಪ್ರಾಣಲಿಂಗದಾಪ್ಯಾಯನವನರಿಯಬೇಕು.
ಪ್ರಾಣಲಿಂಗದಾಪ್ಯಾಯನವನರಿದಡೆ
ಕೂಡಲಚೆನ್ನಸಂಗನಲ್ಲಿ ಲಿಂಗೈಕ್ಯನೆನಿಸುವ. ॥ ೩೨ ॥

೭೧೯

ಮನದ ಸೂತಕವಳಿಯದೆ ಘನದಲ್ಲಿ ಕೂಡಿಹೆನೆಂದರೆ ದೊರೆಕೊಳ್ಳದು,
ಭಕ್ತಿಪಥ ದೊರೆಕೊಳ್ಳದು, ಶರಣಪಥದೊರೆಕೊಳ್ಳದು,
ಕೂಡಲಚೆನ್ನಸಂಗನಲ್ಲಿ ಲಿಂಗೈಕ್ಯನಾದಂಗಲ್ಲದೆ. ॥ ೩೩ ॥

೭೨೦

ಹೊತ್ತಾರೆಯ ಪೂಜೆ, ಹಗಲಿನ ಪೂಜೆ, ಬೈಗಿನ ಪೂಜೆ,
ನಿಚ್ಚಕ್ಕೆ ಪೂಜೆಯ ಮಾಡಿ ಅಚ್ಚಿಗಗೊಂಡರೆಲ್ಲರು.
ನಿಶ್ಚಿಂತ ನಿರಾಳ ನಿಜೈಕ್ಯ ಲಿಂಗವ ಹೊತ್ತಿಂಗೆ ತರಲಹುದೆ?
ಹೊತ್ತನೆ ಪೂಜಿಸಿ, ಹೊತ್ತನೆ ಅರ್ಚಿಸಿ, ಇತ್ತಲೆಯಾದರೆಲ್ಲರು.
ನಿಶ್ಚಿಂತವನರಿದು ನಿಜವನೆಯ್ದುವರೆ ಸುಚಿತ್ತ ಸಮಾಧಾನ.
ಕೂಡಲಚೆನ್ನಸಂಗನೆಂಬ ಲಿಂಗ ನಿಶ್ಚಿಂತ ನಿಜೈಕ್ಯವು. ॥ ೩೪ ॥

೭೨೧

ಅಂಗ ಲಿಂಗವೆಂಬರು, ಲಿಂಗ ಅಂಗವೆಂಬರು, ಅದು ಹುಸಿ ಕಾಣಿರೊ, ಅಯ್ಯಾ!
ಅಂಗವೇ ಲಿಂಗವಾದರೆ ಕಾಯದಲ್ಲಿ ಕಳವಳವುಂಟೆ?
ಲಿಂಗವೆ ಅಂಗವಾದರೆ ಪ್ರಳಯಕ್ಕೊಳಗಹುದೆ?
ಅಂಗ ಲಿಂಗವಲ್ಲ, ಲಿಂಗ ಅಂಗವಲ್ಲ.
ಅಂಗ–ಲಿಂಗ ಸಂಬಂಧವಳಿದಲ್ಲಿ ಪ್ರಾಣಲಿಂಗಸಂಬಂಧಿ,
ಪ್ರಾಣ ನಿಃಪ್ರಾಣವಾದಲ್ಲಿ ಲಿಂಗರೂಪು,
ನಿರೂಪು ನಾಸ್ತಿಯಾದಂದು ಕೂಡಲಚೆನ್ನಸಂಗನಲ್ಲಿ ಲಿಂಗೈಕ್ಯವು. ॥ ೩೫ ॥

೭೨೨

ದರುಶನಾದಿಗಳೆಲ್ಲಾ ವಿರಸವಾಯಿತ್ತು ನೋಡಾ!
ಲಿಂಗಾರ್ಚಕರಲ್ಲದವರು ಲಿಂಗೈಕ್ಯವ ಬಲ್ಲರೆ?
ಕೂಡಲಚೆನ್ನಸಂಗನಲ್ಲಿ ಲಿಂಗೈಕ್ಯವ ಲಿಂಗೈಕ್ಯರೇ ಬಲ್ಲರು. ॥ ೩೬ ॥

೭೨೩

ಶಿವಕಳಶ ಗುರುಕಳಶವೆಂದು ಪೆಸರಿಟ್ಟುಕೊಂಡು ನುಡಿವಿರಿ.
ಶಿವಕಳಶ ಗುರುಕಳಶವ ನೀವು ಬಲ್ಲರೆ ಹೇಳಿರೇ.
ಶಿವಕಳಶವಲ್ಲ ಇದು ಕುಂಭಕಳಶ.
ಓಂ ಧಾಮಂತೇ ಗೋತಮೋ ಆಪೋ ಬೃಹತೀ॥

ಧಾಮಂತೇ ವಿಶ್ವಂ ಬುವನಮಧಿಶ್ರಿತಮಂತಃ ಸಮುದ್ರೇ
ಹೃದ್ಯಾಂತರಾಯುಷಿ! ಅಪಾಮನಿಕೇ ಸಮಿಧೇಯ
ಅಭೃತಸ್ತಮಶ್ಯಾಮ ಮಧುಮಂತಂತ ಊರ್ಮಿಂ॥
ಇದು ಕಾರಣ, ಕೂಡಲಚೆನ್ನಸಂಗಯ್ಯಾ
ಶಿವಕಳಶ ಗುರುಕಳಶದ ಹೊಲಬ ನಮ್ಮ ಬಸವಣ್ಣ ಬಲ್ಲ. ॥ ೩೭ ॥

೭೨೪

ಉಂಟೆಂಬ ವಸ್ತು ಇಲ್ಲೆಂಬ ಪ್ರಮಾಣ ಬಹುದು
ಆಚಾರಕ್ಕಿಕ್ಕುವುದಿದು ಭಕ್ತಿಯೆ?
ಉಂಟೆಂಬ ಉದ್ಭಾವಿಯಲ್ಲ, ಇಲ್ಲೆಂಬ ನಿರ್ಭಾವಿಯಲ್ಲ.
ಇದು ಕಾರಣ ಕೂಡಲಚೆನ್ನಸಂಗಾ.
ಸಜ್ಜನ ಶುದ್ಧ ಶಿವಾಚಾರಿಗಲ್ಲದೆ ಲಿಂಗೈಕ್ಯವಳವಡದು. ॥ ೩೮ ॥

೭೨೫

ದೇವಪ್ರಭೆಯೊಳಗಿಹರಲ್ಲದೆ
ದೇವಗಹನವ ಮಾಡಬಾರದಾರಿಗೆಯೂ.
ದೇವಸಕೀಲದೊಳಗೆ ಬೆಳೆಯಬಹುದಲ್ಲದೆ,
ದೇವನಷ್ಟದೊಳಗೆ ಉತ್ಪತ್ಯವಾಗಬಾರದಾರಿಗೆಯೂ.
ಉತ್ಪತ್ತಿಯ ಗಣತಿಯನಾರೋಗಣೆಯ ಮೂಡಬಾರದಾರಿಗೆಯೂ.
ಸಚರಾಚರಪೆಲ್ಲವೂ ಈ ಪರಿಯಲ್ಲಿ ಸಂಭ್ರಮಿಸುತ್ತಿರ್ದುದಲ್ಲಾ,
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ
ಇದ್ದ ಭಾವವಳಿದಡೆ ಲಿಂಗೈಕ್ಯವು. ॥ ೩೯ ॥

೭೨೬

ರೂಪು ಶೂನ್ಯವಾಗಬೇಕು,
ಶೂನ್ಯ ಅಂಕುರಿತವಾಗಬೇಕು.
ಅಂಕುರಿತಕ್ಕೆ ಸಂದು ತೆರಹಿಲ್ಲದಿದ್ದರೆ
ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು. ॥ ೪೦ ॥

೭೨೭

ಪ್ರಸಾದ ಮುಖದಲ್ಲಿ ಕಲ್ಪಿತ
ಲಿಂಗಮುಖದಲ್ಲಿ ಸಂಕಲ್ಪಿತ.

ಜಂಗಮಮುಖದಲ್ಲಿ ಸಂದೇಹಿ
ಗುರುಮುಖದಲ್ಲಿ ಸಮಾಪ್ತಿ.
ಇಂತೀ ಚತುರ್ವಿಧವನೇಕಾರ್ಥವ ಮಾಡಬಲ್ಲರೆ
ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು. ॥ ೪೧ ॥

೭೨೮

ಭಕ್ತನಾದರೆ ತನುಮನಧನದಾಸೆ ಅಳಿದುಳಿದಿರಬೇಕು.
ಮಾಹೇಶ್ವರನಾದರೆ ಪರಧನ ಪರಸತಿಯಾಸೆಯಳಿದು ಉಳಿದಿರಬೇಕು.
ಪ್ರಸಾದಿಯಾದಡೆ ಪ್ರಸಾದ ಅವಗ್ರಾಹಿಯಾಗಿ, ಪ್ರಸಾದದ ಘಟವಳಿಯದೆ
ಉಳಿದಿರಬೇಕು.
ಪ್ರಾಣಲಿಂಗಿಯಾದರೆ ಸುಖ–ದುಃಖವ ಮರೆದು
ಪ್ರಾಣಲಿಂಗದಲ್ಲಿ ಪರಿಣಾಮಿಯಾಗಿರಬೇಕು.
ಶರಣನಾದರೆ ಸತಿಯುರ ಸಂಗವ ತೊರೆದು ತಾನು ಲಿಂಗಕ್ಕೆ ಸತಿಯಾಗಿರಬೇಕು–
ಲಿಂಗೈಕ್ಯನಾದರೆ ಲಿಂಗದಲ್ಲಿ ಬೆರಸಿ ಬೇರಿಲ್ಲದಿರಬೇಕು,
ಕೂಡಲಚೆನ್ನಸಂಗಯ್ಯಾ. ॥ ೪೨ ॥

೭೨೯

ಗುರುಲಿಂಗ ಆಚಾರಲಿಂಗ ಜಂಗಮಲಿಂಗ
ಪ್ರಸಾದಲಿಂಗ ಶಿವಲಿಂಗ ಮಹಾಲಿಂಗ
ಇಂತು ಷಡುಸ್ಥಲವಾರು.
ಗುರುಲಿಂಗ[ಸ್ಥಲ] ತ್ರಿವಿಧ:ದೀಕ್ಷೆ, ಶಿಕ್ಷೆ, ಸ್ವಾನುಭಾವ.
ದೀಕ್ಷೆಯೆಂದು ಗುರು,
ಶಿಕ್ಷೆಯೆಂದು ಜಂಗಮ,
ಸ್ವಾನುಭಾವವೆಂದು ತನ್ನಿಂದ ತಾನೆ ಅರಿವುದು,
ಇಂತು ಗುರುಲಿಂಗಸ್ಥಲ ತ್ರಿವಿಧ.
ಆಚಾರಲಿಂಗಸ್ಥಲ ತ್ರಿವಿಧ:ಸದಾಚಾರ, ನಿಯತಾಚಾರ, ಗಣಾಚಾರ.
ಎಲ್ಲಾ ಜನದ ಕೈಯಲೂ ಅಹುದೆನಿಸಿಕೊಂಬುದು ಸದಾಚಾರ
[ತಾನು] ಒಡಿದ ವ್ರತಾಚಾರವನು ನಡಸೂದು ನಿಯತಾಚಾರ,
ಶಿವನಿಂದೆಯ ಕೇಳದಿಪ್ಪುದು ಗಣಾಚಾರ,
ಇಂತು ಆಚಾರಲಿಂಗಸ್ಥಲ ತ್ರಿವಿಧ.
ಜಂಗಮಲಿಂಗಸ್ಥಲ ತ್ರಿವಿಧ: ಸ್ವಯ, ಚರ, ಪರ,
ಸ್ವಯವೆಂದು ತಾನು, ಚರವೆಂದು ಜಂಗಮ, ಪರವೆಂದು ಪರಶಿವನು,

ಇಂತು ಜಂಗಮಲಿಂಗಸ್ಥಲ ತ್ರಿವಿಧ.
ಪ್ರಸಾದಲಿಂಗಸ್ಥಲ ತ್ರಿವಿಧ: ಶುದ್ಧ, ಸಿದ್ಧ, ಪ್ರಸಿದ್ಧ.
ಶುದ್ಧ ಲಿಂಗಮುಖದಿಂದ ಬಂದುದು,
ಸಿದ್ಧ ಜಂಗಮಮುಖದಿಂದ ಬಂದುದು
ಪ್ರಸಿದ್ಧ ಗುರುಮುಖದಿಂದ ಬಂದುದು,
ಇಂತು ಪ್ರಸಾದಲಿಂಗಸ್ಥಲ ತ್ರಿವಿಧ.
ಶಿವಲಿಂಗ ತ್ರಿವಿಧ: ಇಷ್ಟಲಿಂಗ, ಪ್ರಾಣಲಿಂಗ, ತೃಪ್ತಿಲಿಂಗ.
ಗುರು ಲಿಂಗವ ಕರಸ್ಥಲದಲ್ಲಿ ಅನುಗ್ರಹಿಸಿದುದು ಇಷ್ಟಲಿಂಗ,
ತನುಗುಣನಾಸ್ತಿಯಾದುದು ಪ್ರಾಣಲಿಂಗ,
ಜಾಗ್ರಸ್ವಪ್ನ ಸುಷುಪ್ತಿಯಲ್ಲಿ ಲಿಂಗವಲ್ಲದೆ ಅರಿಯದಿಪ್ಪುದು ತೃಪ್ತಿಲಿಂಗ,
ಇಂತು ಶಿವಲಿಂಗಸ್ಥಲ ತ್ರಿವಿಧ.
ಮಹಾಲಿಂಗ ತ್ರಿವಿಧ: ಪಿಂಡಜ, ಅಂಡಜ, ಬಿಂದ್ವಾಕಾಶ.
ಪಿಂಡಜವೆಂದು ಘಟಾಕಾಶ, ಅಂಡಜವೆಂದು ಬ್ರಹ್ಮಾಂಡ,
ಬಿಂದ್ವಾಕಾಶವೆಂದು ಮಹದಾಕಾಶ,
ಇಂತು ಮಹಾಲಿಂಗಸ್ಥಲ ತ್ರಿವಿಧ.–ಇಂತು[ಲಿಂಗ]ಸ್ಥಲ ೧೮.
ಇದಕ್ಕೆ ಅಂಗಸ್ಥಲಂಗಳಾವುವೆಂದರೆ:
ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ–ಇಂತು ಸ್ಥಲ ೬.
ಭಕ್ತಸ್ಥಲ ತ್ರಿವಿಧ: ಗುರುಭಕ್ತ, ಲಿಂಗಭಕ್ತ, ಜಂಗಮ ಭಕ್ತ
ಇಂತು ಭಕ್ತಸ್ಥಲ ತ್ರಿವಿಧ.
ಮಾಹೇಶ್ವರಸ್ಥಲ ತ್ರಿವಿಧ: ಇಹಲೋಕವೀರ, ಪರಲೋಕವೀರ, ಲಿಂಗವೀರ.
ಇಂತು ಮಾಹೇಶ್ವರಸ್ಥಲ ತ್ರಿವಿಧ.
ಪ್ರಸಾದಿಸ್ಥಲ ತ್ರಿವಿಧ:
ಪದಾರ್ಥಪ್ರಸಾದಿ, ಆಪ್ಯಾಯನಪ್ರಸಾದಿ, ಸಮತಾಪ್ರಸಾದಿ.
ಇಂತು ಪ್ರಸಾದಿಸ್ಥಲ ತ್ರಿವಿಧ.
ಪ್ರಾಣಲಿಂಗಿಸ್ಥಲ ತ್ರಿವಿಧ: ಆಚಾರಪ್ರಾಣಿ, ಲಿಂಗಪ್ರಾಣಿ, ಜಂಗಮಪ್ರಾಣಿ.
ಇಂತು ಪ್ರಾಣಲಿಂಗಿಸ್ಥಲ ತ್ರಿವಿಧ.
ಶರಣಸ್ಥಲ ತ್ರಿವಿಧ: ಇಷ್ಟಲಿಂಗಾರ್ಚಕ, ಪ್ರಾಣಲಿಂಗಾರ್ಚಕ, ತೃಪ್ತಿಲಿಂಗಾರ್ಚಕ,
ಇಂತು ಶರಣಸ್ಥಲ ತ್ರಿವಿಧ.
ಐಕ್ಯಸ್ಥಲ ತ್ರಿವಿಧ: ಕಾಯಲಿಂಗೈಕ್ಯ, ಜೀವಲಿಂಗೈಕ್ಯ, ಭಾವಲಿಂಗೈಕ್ಯ,
ಇಂತು ಐಕ್ಯಸ್ಥಲ ತ್ರಿವಿಧ–ಇಂತು [ಅಂಗ]ಸ್ಥಲ ೧೮, ಉಭಯಸ್ಥಲ ೩೬.
ಇಂತೀ ಎಲ್ಲಾ ಸ್ಥಲವೂ ತಾನಾಗಬಲ್ಲರೆ
ಕೂಡಲಚೆನ್ನಸಂಗಾ ನಿಮ್ಮಲ್ಲಿ ಲಿಂಗೈಕ್ಯವು. || ೪೨ ||

೭೩೦

ಕಿಂಕುರ್ವಾಣತೆಯಿಂದ ಬಂದ ಜಂಗಮವೆ ಜಂಗಮಲಿಂಗವೆಂದು
ಉಳ್ಳುದನರಿದು ಮನಸಹಿತ ಮಾಡುವಲ್ಲಿ ಭಕ್ತ.
ನಿಷ್ಠೆ ನಿಬ್ಬೆರಸಿ ಗಟ್ಟಿಗೊಂಡು ಅಭಿಲಾಷೆಯ ಸೊಮ್ಮು ಸಮನಿಸವೆ
ಪರಿಚ್ಛೇದ ಬುದ್ಧಿಯುಳ್ಳಲ್ಲಿ ಮಾಹೇಶ್ವರ.
ಅನರ್ಪಿತ ಸಮನಿಸದೆ ಬಂದುದ ಕಾಯದ ಕರಣದ ಕೈಯಲು ಕೊಟ್ಟು,
ಲಿಂಗಸಹಿತ ಭೋಗಿಸುವಲ್ಲಿ ಪ್ರಸಾದಿ.
ಪ್ರಾಣಕ್ಕೆ ಪ್ರಾಣವಾಗಿ ಇದ್ದು ಕಾಯಸ್ಥಿತಿಯರಿದು ಎಚ್ಚರಿಕೆಗುಂದದಿಪ್ಪಲ್ಲಿ,
ಪ್ರಾಣಲಿಂಗಸಂಬಂಧಿ.
ತನಗೆ ಲಿಂಗವಾಗಿ, ಲಿಂಗಕ್ಕೆ ತಾನಾಗಿ ಬೆಚ್ಚ ಬೇರಿಲ್ಲದ
ಬೆಡಗಿನ ಒಲುಮೆಯಲ್ಲಿ ಶರಣ.
ಸದಾಚಾರ ಸಂಪತ್ತಿನಲ್ಲಿ ಬಂದ ಅನುಭಾವವ ಮೀರಿ
ಹೆಸರಡಗಿದ ಸುಖವದು ಲಿಂಗೈಕ್ಯ.
ಇದು ಕಾರಣ, ಕೂಡಲಚೆನ್ನಸಂಗನಲ್ಲಿ
ಬಸವಣ್ಣಂಗಲ್ಲದೆ ಷಡುಸ್ಥಲವಪೂರ್ವ. || ೪೪ ||

೭೩೧

ಭಕ್ತನೆಂದೆನಿಸಿಕೊಂಬುದಯ್ಯಾ ಭಕ್ತಿವಿಡಿದು,
ಮಾಹೇಶ್ವರನೆನಿಸಿಕೊಂಬುದಯ್ಯಾ ನಿಷ್ಠೆವಿಡಿದು,
ಪ್ರಸಾದಿಯೆನಿಸಿಕೊಂಬುದಯ್ಯಾ ಅವಧಾನವಿಡಿದು,
ಪ್ರಾಣಲಿಂಗಿಯೆನಿಸಿಕೊಂಬುದಯ್ಯಾ ಅನುಭಾವವಿಡಿದು,
ಶರಣನೆನಿಸಿಕೊಂಬುದಯ್ಯಾ [ಆನಂದದಿಂದ],
ಐಕ್ಯನೆನಿಸಿಕೊಂಬುದಯ್ಯಾ ಸಮರಸದಿಂದ.
ಇಂತೀ ಷಡುಸ್ಥಲ ಸಾಹಿತ್ಯನಾಗಿ
ಕೂಡಲಚೆನ್ನಸಂಗಯ್ಯನಲ್ಲಿ ಸಹಜನೆನಿಸಿಕೊಂಬುದಯ್ಯಾ. || ೪೫ ||

೭೩೨

ಆಚಾರ ಗುರುಸ್ಥಲ, ಅನುಭಾವ ಲಿಂಗಸ್ಥಲ,
ಅವಧಾನ ಅರ್ಪಿತಸ್ಥಲ, ಪರಿಣಾಮ ಪ್ರಸಾದಿಸ್ಥಲ,
ಸಮಾಧಾನ ಶರಣಸ್ಥಲ, ಅರಿವು ನಿಃಪತಿಯಾಗಿ ತೆರಹಿಲ್ಲದ ನಿಜದಲ್ಲಿ ಲಿಂಗೈಕ್ಯವು,
ಕೂಡಲಚೆನ್ನಸಂಗಮದೇವಾ. || ೪೬ ||

## ಐಕ್ಯನ ಐಕ್ಯಸ್ಥಲ

೭೩೩

ಕುಲವಳಿದು, ಛಲವಳಿದು, ಮದವಳಿದು, ಮತ್ಸರವಳಿದು,
ಆತ್ಮತೇಜವಳಿದು, ಸರ್ವಾಹಂಭಾವವಳಿದು,
ನಿಜ ಉಳಿಯಿತ್ತು.
ಲಿಂಗಜಂಗಮವೆಂಬ ಶಬ್ದವಿಡಿದು ಸಾಧ್ಯವಾಯಿತ್ತು ನೋಡಾ,
ತಾನಳಿದು ತಾನುಳಿದು ತಾನು ತಾನಾದ ಸಹಜ ನಿಜಪದವಿಯಲ್ಲಿ
ಕೂಡಲಚೆನ್ನಸಂಗ ಲಿಂಗೈಕ್ಯವು. ॥ ೪೭ ॥

೭೩೪

ಹೃತ್ಕಮಲಕರ್ಣಿಕೆಯ ಕುಹರದಲೊಮ್ಮೆ ಪೃಥಗ್ಭಾವದಿಂದ
ನೋಡಿ ಕಾಬನೆ ಶರಣನು?
ವಕ್ತ್ರಾಶ್ರಯದ ಜಿಹ್ವೆಯ ಕೊನೆಯಲ್ಲಿ ಪರವಕ್ತ್ರನಾಗಿ
ನೋಡಿ ನುಡಿವನೆ ಶರಣನು?
ಪ್ರಕೃತಿ ತನುಗುಣರಹಿತ, ಸುಕೃತ ಶೂನ್ಯ, ಘನಮುಗ್ಧ ಮಹಂತ,
ಕೂಡಲಚೆನ್ನಸಂಗಾ ಲಿಂಗೈಕ್ಯನು. ॥ ೪೮ ॥

೭೩೫

ಕಾಯದಲ್ಲಿ ಸಾರಿಪ್ಪ ಕಾಯಸಂಸಾರಿ,
ಲಿಂಗದಲ್ಲಿ ಸಾರಿಪ್ಪ ಕಾಯ ಲಿಂಗಸಂಸಾರಿ.
ಈ ದ್ವಿವಿಧ ಸಂಬಂಧಿಯ ಭೇದವ ಭೇದಿಸಿ ಕಳೆದು
ಕೂಡಲಚೆನ್ನಸಂಗಾ ಲಿಂಗೈಕ್ಯವು. ॥ ೪೯ ॥

೭೩೬

ತನು ಸೋಂಕಿ ತನುನಷ್ಟವಾಯಿತ್ತು,
ಮನ ಸೋಂಕಿ ಮನನಷ್ಟವಾಯಿತ್ತು,
(ಧನ ಸೋಂಕಿ ಧನನಷ್ಟವಾಯಿತ್ತು)
ಭಾವ ಸೋಂಕಿ ಭಾವನಷ್ಟವಾಯಿತ್ತು.
ಇದು ಕಾರಣ ಕೂಡಲಚೆನ್ನಸಂಗಯ್ಯಾ,

ಲಿಂಗ ಸೋಂಕಿ ಶರಣಸಂದು ನಷ್ಟವಾಯಿತ್ತು,
(ನಿಮ್ಮೊಳಗೇಕಾರ್ಥವಾಯಿತ್ತು). ॥ ೫೦ ॥

೭೩೭

ಅಂಗ ಲಿಂಗವೆಂದರೆ ಪ್ರಳಯಕ್ಕೆ ಒಳಗು,
ಪ್ರಾಣ ಲಿಂಗವೆಂದರೆ ಸಂಸಾರಕ್ಕೊಳಗು.
ಇದಾವಂಗವೆನಲಿಲ್ಲ, ಕೂಡಲಚೆನ್ನಸಂಗನಲ್ಲಿ ಲಿಂಗೈಕ್ಯವು. ॥ ೫೧ ॥

೭೩೮

ಆಚಾರವೆಂಬ ಬಿಲ್ಲಿಗೆ ವಿಚಾರವೆಂಬ ನಾರಿ,
ಸಮತೆಯೆಂಬ ತಿರುವ ಮೆಟ್ಟಿ ಜೇವೊಡೆಗೆಯ್ದು,
ಶಿಷ್ಯನೆಂಬ ಬಾಣವ ತೊಡಚಿ,
ಗುರುವೆಂಬ ವ್ಯಾಧನು ಲಿಂಗವೆಂಬ ಬಯಲ ಗುರಿಯನೆಚ್ಚಡೆ,
ಗರಿ ತೋರದಂತೆ ಮುಳುಗಿ ಅಡಗಿತ್ತು.
ಆ ಗರಿಯನು ಬಾಣವನು ಅರಸಲುಂಟೆ,
ಕೂಡಲಚೆನ್ನಸಂಗಾ ನಿಮ್ಮಲ್ಲಿ? ॥ ೫೨ ॥

೭೩೯

ಇದ್ದು ಬದ್ಧನಲ್ಲ, ಸುಳಿದು ಸೂತಕಿಯಲ್ಲ,
ಆವ ಸಂಗವೂ ಇಲ್ಲದ ನಿಜೈಕ್ಯನು.
ಬೇಕು ಬೇಡೆನ್ನದೆ, ಅಳಿದುಳಿದು
ಕರ್ಪುರದ ಗಿರಿಯನುರಿ ತಾಗಿದಂತೆ
ಕೂಡಲಚೆನ್ನಸಂಗನಲ್ಲಿ ಲಿಂಗೈಕ್ಯನು. ॥ ೫೩ ॥

೭೪೦

ಮುಟ್ಟಿವಲ್ಲಿ ಇಷ್ಟಲಿಂಗ, ಬೆರಸಿದಲ್ಲಿ ಪ್ರಾಣಲಿಂಗ,
ಸ್ವಾಯತವಾದರೆ ಅಂಗಲಿಂಗ, ಇದು ಲಿಂಗೈಕ್ಯವಲ್ಲ.
ಇದು ಕಾರಣ ಕೂಡಲಚೆನ್ನಸಂಗನು ಅಂಗವಿಲ್ಲದ ನಿಜಲಿಂಗೈಕ್ಯವು. ॥ ೫೪ ॥

೭೪೧

ಅಂಗ ಲಿಂಗೈಕ್ಯವೆಂದರೆ ಸಂಸಾರಕ್ಕೊಳಗಾಯಿತ್ತು,
ಮನ ಲಿಂಗೈಕ್ಯವೆಂದರೆ ಬಂಧನಕ್ಕೊಳಗಾಯಿತ್ತು,

ಪ್ರಾಣ ಲಿಂಗೈಕ್ಯವೆಂದರೆ ಭವಕ್ಕೊಳಗಾಯಿತ್ತು.
ಇದಾವಂಗವೆನಲಿಲ್ಲ, ಕೂಡಲಚೆನ್ನಸಂಗನಲ್ಲಿ ಲಿಂಗೈಕ್ಯ. || ೫೫ ||

೭೪೨

ಅರಿವಿನಾಶ್ರಯ ಸಂಗವನರಿತು ನೆರೆ ಕೂಡಲು,
ಭಾವದಲ್ಲಿ ಸರ್ಪದಷ್ಟವಾಗಿ ಆಕಾರ ಪ್ರಾಣದಲ್ಲಿಯೇ ವಿಶ್ರಮಿಸಿತ್ತು.
ಭಾವದಲ್ಲಿ ಭರಿತ, ನಿರ್ಭಾವದಲ್ಲಿ ನಿರುತ,
ಕೂಡಲಚೆನ್ನಸಂಗಯ್ಯ ಸಕಳಾಶ್ರಯಸಂಗ ನಿರ್ಣಯ. || ೫೬ ||

೭೪೩

ಆನು ನೀನೆಂಬ ಮೋಹವೆಲ್ಲಿಯದು,
ಭಾವ ನಿರ್ಭಾವವೆಂಬ ಪ್ರಸಂಗವೆಲ್ಲಿಯದು ಹೇಳಾ!
ಮನಲೀಯ ಮನಲೀಯ ಉಭಯಭಾವರಹಿತ
ಕೂಡಲಚೆನ್ನಸಂಗಾ ಲಿಂಗೈಕ್ಯವು. || ೫೭ ||

೭೪೪

ಅಂಗದ ಮೇಲೊಂದು ಲಿಂಗವು, ಲಿಂಗದ ಮೇಲೊಂದು ಅಂಗವು.
ಆವುದು ಘನವೆಂಬೆ? ಆವುದು ಕಿರಿದೆಂಬೆ?
ತಾಳೋಷ್ಠ ಸಂಪುಟಕ್ಕೆ ಬಾರದ ಘನ, ಉಭಯಲಿಂಗವಿರಹಿತವಾದ ಶರಣ.
ಕೂಡಲಚೆನ್ನಸಂಗಾ ಲಿಂಗೈಕ್ಯವು. || ೫೮ ||

೭೪೫

ಅಪ್ಪುವನಪ್ಪಿದ ಆಲಿಕಲ್ಲಿನಂತೆ, ವಾಯುವನಪ್ಪಿದ ಪರಿಮಳದಂತೆ,
ಲಿಂಗವನಪ್ಪಿದ ಶರಣ. ಆತನ ದೇಹಿಯೆನಬಹುದೆ?
ಅನಲನನಪ್ಪಿದ ಕರ್ಪುರದಂತೆ–ಈ ತ್ರಿವಿಧ ನಿರ್ಣಯ
ಕೂಡಲಚೆನ್ನಸಂಗಾ ನಿಮ್ಮಲ್ಲಿ. || ೫೯ ||

೭೪೬

ಗ್ರಾಮಮಧ್ಯದ ಧವಳಾರನೊಳಗೊಂದು ಸತ್ತ ಹೆಣನಿರುತ್ತಿರಲು,
ಗ್ರಾಮ ಸುತ್ತಿ ಬರುತಿದ್ದ ರಕ್ಕಸಿ ಆ ಸತ್ತುದ ಕಂಡಳಲ್ಲಾ.
ಗ್ರಾಮ ನನ್ನ ಕಾಹು, ಗ್ರಾಮದಲ್ಲಿ ನಾನಿಪ್ಪೆ, ಇದಾರೊ ಕೊಂದವರು?
ನಾನು ಕೊಲ್ಲದ ಮುನ್ನ, ಅದು ತಾನೆ ಸತ್ತಡೆ, ಎನಗಿದು ಸೋಜಿಗವು.

ಸತ್ತುದು ಗ್ರಾಮವ ಕೆಡಸಿತ್ತು, ಇನ್ನಿದ್ದರೆ ಎನ್ನನೂ ಕೆಡಸಿತ್ತು.
ಇಲ್ಲಿದ್ದವರಿಗುಪಟಳ ನೋಡಾ! (ಎಂದು) ಗ್ರಾಮ ಬಿಟ್ಟು ಹೋಯಿತ್ತಯ್ಯಾ
ಕೂಡಲಚೆನ್ನಸಂಗಮದೇವಾ. || ೬೦ ||

೭೪೭

ಸತ್ತ ಹೆಣನುವ ಹೊತ್ತವರೆಲ್ಲಾ ಅಚ್ಚುಗಗೊಂಡರಲ್ಲಾ.
ಹೊತ್ತವರೆಲ್ಲಾ ಸತ್ತುದ ಕಂಡು ಮೂರ್ಛೆವೋದರಲ್ಲಾ.
ಸುತ್ತಿಬಂದಿದ್ದವರೆಲ್ಲಾ ಹೋಗಿ ಅದ ಮುಟ್ಟಲಮ್ಮರು ನೋಡಾ!
ಮುಟ್ಟದ ಮುನ್ನ ಮೂವರ ಕೆಡಿಸಿತ್ತು. ಸತ್ತ ಪರಿಯ ನೋಡಾ!
ಅದು ಕಾಡಿನಲ್ಲಿ ಉರಿಯದು, ಕಿಚ್ಚಿನಲ್ಲಿ ಬೇಯದು.
ಸತ್ತ ಪರಿಯ ನೋಡಾ! ಕೂಡಲಚೆನ್ನಸಂಗನೆಂಬ
ಚಿಂತೆ ಸತ್ತಿತಲ್ಲಾ. || ೬೧ ||

೭೪೮

ಶರಣ ಸತ್ತರೆ ಭಕ್ತರು ಹೊತ್ತರು, ಪ್ರಸಾದಿಗಳತ್ತರಲ್ಲಾ,
ಸುತ್ತಲಿದ್ದ ಜಂಗಮವೆಲ್ಲಾ ಕಿಚ್ಚ ಹಿಡಿದರಲ್ಲಾ,
ಊರೊಳಗಿದ್ದವರು ಒಂಬತ್ತು ಬಾಗಿಲ ತುಂಬಿಕೊಂಡಿದ್ದರು ನೋಡಾ!
ಮರಳಿ ಒಂದು ಬಾಗಿಲ ತೆಗದು, ಸತ್ತುದ ಕಂಡು,
ಅದಾರು ಅದಾರು ಸತ್ತರೆಂದು, ಸತ್ತವರು ಬಹುದ ಕಂಡು ಇತ್ತಲೆಯಾದರಲ್ಲಾ.
ಕೂಡಲಚೆನ್ನಸಂಗ ಸತ್ತು ಸಯವಾದ. || ೬೨ ||

೭೪೯

ಸಮಸುಖ (ಸಮ)ಸಂಧಾನವಿಲ್ಲದ ಸಂಗ ನೋಡಾ!
ತಾಗು ನಿರೋಧವಿಲ್ಲದ ಸಂಗ ನೋಡಾ!
ಆವಂಗೆ ಆವಂಗೆ ಅನುಭಾವವಿಲ್ಲದ ಸಂಗ ನೋಡಾ!
ಕೂಡಲಚೆನ್ನಸಂಗಮದೇವಾ ಲಿಂಗಲೀಯ ಸಂಗ ನೋಡಾ. || ೬೩ ||

೭೫೦

ಕಾಣಬಹುದೆ ನಿರಾಕಾರ? ಕಾಣಬಹುದೆ ಮಹಾಘನವು?
ಕಂಡು ಭ್ರಮೆಗೊಂಡು ಹೋದರೆಲ್ಲರು.
ಕೂಡಲಚೆನ್ನಸಂಗನ ಅನುಭಾವವ ಲಿಂಗೈಕ್ಯನೇ ಬಲ್ಲ. || ೬೪ ||

೭೫೧

ಪ್ರಮಥವೇದಿಗಳೆಲ್ಲರೂ ಗತಿಯಲೆ ಸಿಲುಕಿದರು.
ಅತೀತ ಅನಾಗತವೆಂಬ ನುಡಿಯಲೆ ಸಿಲುಕಿದರು.
ಶ್ರುತಿವಂತರೆಲ್ಲರೂ ಆಗಮದಲ್ಲಿ ಸಿಲುಕಿದರು. ಇಂಥವನೆ ಲಿಂಗೈಕ್ಯನು?
ನುಡಿದ ನುಡಿಯ ನಡೆಯನು, ನಡೆದ ನಡೆಯ ನುಡಿಯನು,
ಬಂದಲ್ಲಿ ಬಾರನು, ನಿಂದಲ್ಲಿ ನಿಲ್ಲನು,
ನಿಸ್ಸೀಮನು ಕೂಡಲಚೆನ್ನ ಸಂಗಾ ಲಿಂಗೈಕ್ಯನು. ॥ ೬೫

೭೫೨

ಅರಿದೆನೆಂಬನ ಅರಿವೆ ನುಂಗಿತ್ತು.
ಮರೆದೆನೆಂಬನ ಮರಹೆ ನುಂಗಿತ್ತು.
ಇನ್ನೇನಿದ್ದುದಯ್ಯಾ, ಅವಧಾನಗೆಟ್ಟು ನಡೆಯದನ್ನಕ್ಕ!
ಅರಿವಿನ ಮರಹಿನ ಕುರುಹು ತಾನಲ್ಲ,
ಕೂಡಲಚೆನ್ನಸಂಗಾ ಲಿಂಗೈಕ್ಯವು. ॥ ೬೬ ॥

೭೫೩

ಪ್ರಾಣಲಿಂಗವೆಂಬೆನೆ ಪ್ರಾಣದ ಹಂಗಿನ ಲಿಂಗ.
ಲಿಂಗಪ್ರಾಣವೆಂಬೆನೆ ಲಿಂಗದ ಹಂಗಿನ ಪ್ರಾಣ.
ಲಿಂಗ ಪ್ರಾಣವೆಂಬ ಸಂದು ಸಮನಿಸದು,
ಕೂಡಲಚೆನ್ನಸಂಗನೆಂಬ ಲಿಂಗೈಕ್ಯಂಗೆ. ॥ ೬೭ ॥

೭೫೪

ಲಿಖಿತಕ್ಕೆ ಲಿಖಿತ ಮಹಾಲಿಖಿತವುಂಟೆಂಬೆನೆ? ಲಿಂಗ ಸಂಸಾರಿ,
ಲಿಂಗವಿಲ್ಲೆಂಬೆನೆ? ಅಂಗ ಸಂಸಾರಿ,
ಇಲ್ಲಿನ್ನಾವುದ ಘನವೆಂಬೆ, ಆವುದ ಕಿರಿದೆಂಬೆ,
ತಾಳಸಂಪುಟಕ್ಕೆ ಬಾರದ ಘನವ?
ಸುಖಕ್ಕೆ ಸುಖ ತಾರುಗಂಡು, ಸಮಸುಖವಾಗಿ,
ಉಪಮಾತೀತ ತ್ರಿವಿಧ ಸಂಪತ್ತುಗಳೆಂಬ ವಾಯುವಾಕುಳದಲ್ಲಿ,
ಆದಿ ಮಧ್ಯ ಅವಸಾನರಹಿತ ಅನಂತ ಶರಣ ಅಜಾತ
ಕೂಡಲಚೆನ್ನಸಂಗಾ ನಿರ್ನಾಮ ಲಿಂಗೈಕ್ಯ. ॥ ೬೮ ॥

೭೫೫

ಜಲಮಧ್ಯ ತನುವಳಯದ ಪ್ರಾಣಬದ್ಧನೆ? ಅಲ್ಲ.
ನಿಜಕ್ಕೆ ಪರಿಚಾರಕ, ಸರ ಸುರಸ, ಮೇಘರೂಪು ಕಂಠ, ನಿಜ ಕಂಠಕ್ಕೆ ಮಂಗಳ ವಸ್ತು.
ಇಂತಿದು ಕಾರಣ ಅಪ್ರತಿಗೆ ಪ್ರತಿ ಹುಟ್ಟಿ
ಇದು ಸಹಿತ ಇದು ಸಾಹಿತ್ಯ ನೋಡಾ,
ಕೂಡಲಚೆನ್ನಸಂಗಾ ಲಿಂಗೈಕ್ಯವು. || ೬೯ ||

೭೫೬

ಶಿವಶಕ್ತಿಸಂಪುಟವಿಹೀನ ಲಿಂಗ, ಹಾನಿವೃದ್ಧಿಯಿಲ್ಲದುದೆ ಜಂಗಮ.
ಜಾಗ್ರದಲ್ಲಿ ಕುರುಹು, ಸ್ವಪ್ನದಲ್ಲಿ ಆಕೃತಿ.
ನೆರೆ ಅರಿತ ಅರಿವು, ಹಿರಿದುಕಿರಿದೆನ್ನದ ಸಜ್ಜನ ಶುದ್ಧಶಿವಾಚಾರ
ಕೂಡಲಚೆನ್ನಸಂಗಾ ಲಿಂಗೈಕ್ಯವು. || ೭೦ ||

೭೫೭

ಮಾರ್ಗಕ್ರಿಯಾಸಮಯದಲ್ಲಿ ಶಿವಶಕ್ತಿಸಂಪುಟ.
ಮೀರಿದಕ್ರಿಯಾಸಮಯದಲ್ಲಿ ಶಿವಲಿಂಗಸಂಪುಟ.
ಉಭಯಕ್ರಿಯಾನುಭಾವ ನೆಲೆಗೊಂಡಲ್ಲಿ ಮನಲಿಂಗಸಂಪುಟ.
ಮನ ಲಿಂಗ ಲೀಯವಾದ ಬಳಿಕ ತೆರಹಿಲ್ಲದೆ ಕುರುಹಳಿದ ಲಂಗೈಕ್ಯ.
ಸುತ್ತಿದ ಪ್ರಪಂಚು ಮೆಲ್ಲಮೆಲ್ಲನೆ ಅಚ್ಚುಗವಿಲ್ಲದೆ ಹಿಂಗಿದವು
ಕೂಡಲಚೆನ್ನಸಂಗಾ ಲಿಂಗೈಕ್ಯಂಗೆ. || ೭೧ ||

೭೫೮

ಮಂತ್ರಯೋಗ, ಹಠಯೋಗ, ಲಯಯೋಗ, ಜ್ಞಾನಯೋಗ.
ಭಕ್ತಿಯೋಗದ ಮೇಲೆ ನಿಂದು, ರಾಜಯೋಗದ ಮೇಲೆ ನುಡಿವುದು ಕಾಣಿರೆ!
ರಾಜಯೋಗದ ಮೇಲೆ ನಡೆವುದು ಕಾಣಿರೆ!
ವಾಗತೀತಂ ಮನೋಽತೀತಂ ಭಾವಾತೀತಂ ನಿರಂಜನಂ।
ಸರ್ವಶ್ಯೂನಂ ನಿರಾಕಾರಂ ನಿತ್ಯತ್ವಂ ಪರಮಂ ಪದಂ॥
ಎಂದುದಾಗಿ, ಶಿವಜೀವ ಲಿಂಗಪ್ರಾಣಿ, ಶಿವಯೋಗವೆಂಬುದೆ ಐಕ್ಯ.
ಮಹಾಲಿಂಗೈಕ್ಯರ ನಿಲವನು ಅನುಮಾನಿಗಳೆತ್ತ ಬಲ್ಲರು,
ಕೂಡಲಚೆನ್ನಸಂಗಮದೇವಾ? || ೭೨ ||

೭೫೯

ಬಿಂದುಮಧ್ಯಗತೋ ನಾದಃ ನಾದಮಧ್ಯಗತಾ ಕಲಾ।
ಕಲಾ ಮಧ್ಯಗತಂ ಶೂನ್ಯಂ ಶೂನ್ಯಮಧ್ಯಗತಃ ಶಿವಃ॥
ಪರಾತ್ಪರಂ ಪರಂ ನಾಸ್ತಿ ಪರಮಿಚ್ಛಂತಿ
ಕೂಡಲಚೆನ್ನಸಂಗಯ್ಯ. ॥ ೭೩ ॥

೭೬೦

ಸ್ಥಲದಿಂದ ನಡೆನುಡಿಯಾಯಿತ್ತು, ನಿಃಸ್ಥಲದಿಂದ ನುಡಿನಡೆಗೆಟ್ಟಿತ್ತು.
ನೋಡಲೊಡನೆ ಸ್ಥಲವಾಗಿ ತೋರಿತ್ತು,
(ಆರಯ್ಯಲೊಡನೆ ನಿಃಸ್ಥಲವಾಗಿ ತೋರಿತ್ತು.)
ಸ್ಥಲವೂ ಅಲ್ಲ, ನಿಃಸ್ಥಲವೂ ಅಲ್ಲ,
ನೋಟವೆ ಕೂಟ, ಕೂಡಲಚೆನ್ನಸಂಗಾ. ॥ ೭೪ ॥

೭೬೧

ನೆನಹಿನ ಸುಖವ ನೋಟ ನುಂಗಿತ್ತು, ನೋಟದ ಸುಖವ ಕೂಟ ನುಂಗಿತ್ತು.
ಕೂಟದ ಸುಖವ ಸಮರಸ ನುಂಗಿತ್ತು, ಸಮರಸದ ಸುಖವ ಪರವಶ ನುಂಗಿತ್ತು,
ಪರವಶದ ಸುಖವ ಕೂಡಲಚೆನ್ನಸಂಗಯ್ಯ ತಾನೇ ಬಲ್ಲ. ॥ ೭೫ ॥

೭೬೨

ಅರಿಯಲಿಲ್ಲದ ಅರಿವು, ಮರೆಯಲಿಲ್ಲದ ಮರಹು.
ನೋಟವಿಲ್ಲದ ನೋಟ, ಕೂಟವಿಲ್ಲದ ಕೂಟ.
ಬೆರಸಲಿಲ್ಲದ ಬೆರಗು ನಿಂದುದು,
ಕೂಡಲಚೆನ್ನಸಂಗಾ ಲಿಂಗೈಕ್ಯವು. ॥ ೭೬ ॥

೭೬೩

ನೋಡಿ ನೋಟವ ಮರೆದು, ಕೂಡಿ ಕೂಟವ ಮರೆದು,
ಬಯಲು ಸಮರಸಕ್ಕೆ ಮರಳಾಯಿತ್ತಲ್ಲಾ,
ಜೀವಪ್ರಾಣನ ಭೇದವಳಿದು ನಿಜವದಕ್ಕಾಯಿತ್ತಲ್ಲಾ.
ಅನ್ಯಚಿಹ್ನವಳಿದು ತನ್ನ ತಾ ಮರೆಯಿತ್ತು,
ಕೂಡಲಚೆನ್ನಸಂಗಾ ನೀನೆಂದೆ ನಿಂದಿತಲ್ಲಾ. ॥ ೭೭ ॥

೭೬೪

ಸ್ಥಲವೆಂದೆನ್ನೆ, ನಿಃಸ್ಥಲವೆಂದೆನ್ನೆ, ತಾನು ಎನಗಾದ ಬಳಿಕ
ನಿಃಪತಿಯೆನಗಾದ ಬಳಿಕ ಎತ್ತಲೆಂದರಿಯೆನು.
ಇದು ಕಾರಣ ಕೂಡಲಚೆನ್ನಸಂಗಯ್ಯಾ,
ಲಿಂಗೈಕ್ಯವೆಂದು ಎನ್ನೆನಾಗಿ. ॥ ೭೮ ॥

೭೬೫

ಆದಿ ಮಧ್ಯ ಅವಸಾನವಿಲ್ಲದುದ ವೇದಿಸುವಡೆ ವೇದ್ಯಂಗರಿದು,
ಸಾಧಿಸುವ ಸಾಧಕಂಗಲ್ಲದೆ.
ವಾದಿಯಲ್ಲ ಪರವಾದಿಯಲ್ಲ, ಸಾಧಕನಲ್ಲ ಧರ್ಮದ ಬೋಧಕನಲ್ಲ.
ಗಡಣವಿಲ್ಲದ ನುಡಿಯನು ಎಡಬಲನೆಂದರಿಯನು,
ನಿಸ್ಸಂಗಿ ಶೂನ್ಯಸ್ಥಾನದಲ್ಲಿ ಸುಖಿಯಾಗಿಪ್ಪನು.
ದೇವನಲ್ಲ ಮಾನವನಲ್ಲ,
ಕೂಡಲಚೆನ್ನಸಂಗನಲ್ಲಿ ಸಯವಾದ ಲಿಂಗೈಕ್ಯನು. ॥ ೭೯ ॥

೭೬೬

ಕಾಣದೆ ಕೇಳದೆ ಮೂವರು ಹೋದರೆಂದರೆ,
ಕಂಡು ನುಡಿಸಿ ದಿಟವಾಯಿತ್ತು ಕಂಡೆನಿದೇನೊ!
ಬಯಲಶಬ್ದವಡಗಿತ್ತ ಕಂಡೆ, ಅಜಾತ, ಕೂಡಲಚೆನ್ನಸಂಗಯ್ಯಾ
ಲಿಂಗಜಂಗಮದನುಭಾವವೆನಲಿಲ್ಲ, ಎನಿಸಿಕೊಳಲಿಲ್ಲ. ॥ ೮೦

೭೬೭

ಭವವಿಲ್ಲದ ಭಕ್ತನ ಪರಿಯ ನೋಡಾ!
ಮನ ಪ್ರಾಣ ಮುಕ್ತಿಭಾವ ವಿರಹಿತ
ಒಡಲಿಲ್ಲದ ಜಂಗಮದ ಪರಿಯ ನೋಡಾ!
ಸಿಡಿಲು ಮಿಂಚಿನ ರೂಪನೊಂದೆಡೆಯಲ್ಲಿ ಹಿಡಿಯಲುಂಟೆ?
ಈ ಉಭಯ ಒಂದಾದವರ ಕಂಡರೆ ನೀವೆಂಬೆನಯ್ಯಾ.
ಕೂಡಲಚೆನ್ನಸಂಗಮದೇವಾ. ॥ ೮೧

೭೬೮

ಆದಿಯಾಧಾರವಾಗಿಹುದೇ ಘನ, ಆ ಘನವ ವೇಧಿಸಿದುದೇ ಮನ;
ಮನವು ಮಹದಲ್ಲಿ ನಿಂದುದೆ ಭಕ್ತಿ,
ಭಿನ್ನಭಾವಕ್ಕಿಚ್ಚೆದೋರದಿಹುದೆ ಆಚಾರ,
ತಟ್ಟು ಮುಟ್ಟು ತಾಗು ನಿರೋಧವಿಲ್ಲದಿಹುದೆ ಪೂಜೆ,
ಆಸೆ ರೋಷ ಹರುಷವಿಲ್ಲದಿಹುದೆ ಪ್ರಸಾದ,
ಕರಣಮಥನಕಿಚ್ಛೆ ತೋರದಿಹುದೆ ಅನುಭಾವ.
ಇಂತೀ ಸರ್ವಾಂಗದಲ್ಲಿ ಸಾಹಿತ್ಯವಾದ ನಿಜೈಕ್ಯಂಗೆ
ನಮೋ ನಮೋ ಎಂಬೆ ಕೂಡಲಚೆನ್ನಸಂಗಯ್ಯಾ. || ೮೨ ||

೭೬೯

ಕುಲವಿಲ್ಲದ ಅಕುಲನು, ಶರೀರವಿಲ್ಲದ ಸಂಬಂಧಿ,
ಕೋಪವಿಲ್ಲದ ಶಾಂತನು, ಮತ್ಸರವಿಲ್ಲದ ಮಹಿಮನು.
ಕರ್ಮವಿಲ್ಲದ ಕಾರಣಿಕನು, ಅರ್ಪಿತವಿಲ್ಲದ ಆಪ್ಯಾಯನಿ,
ಜಂಗಮವಿಲ್ಲದ ಸಮಶೀಲನು, ಲಿಂಗವಿಲ್ಲದ ನಿರುತನು.
ಪ್ರಸಾದವಿಲ್ಲದ ಪರಿಣಾಮಿ ಕೂಡಲಚೆನ್ನಸಂಗಾ ನಿಮ್ಮ ಶರಣನು. || ೮೩ ||

೭೭೦

ಭವಿಗೆ ಹುಟ್ಟಿದ ಭಕ್ತ, ಭಕ್ತಗೆ ಹುಟ್ಟಿದ ಪ್ರಸಾದ,
ಪ್ರಸಾದಕ್ಕೆ ಹುಟ್ಟಿದ ಅರ್ಪಿತ, ಅರ್ಪಿತಕ್ಕೆ ಹುಟ್ಟಿದ ಆರೂಢ.
ಆರೂಢಕ್ಕೆ ಹುಟ್ಟಿದ ಆಚಾರ, ಆಚಾರಕ್ಕೆ ಹುಟ್ಟಿದ ಆಗಮ.
ಕ್ರಿಯಾಜ್ಞಾನಸಂಪಾದನೆಯ ಕೂಡಲಚೆನ್ನಸಂಗಾ
ನಿಮ್ಮ ಶರಣ ಬಲ್ಲ. || ೮೪ ||

೭೭೧

ಆಚಾರವಿಲ್ಲದೆ ಅನುಗ್ರಹ[ವಿಲ್ಲ], ಅನುಗ್ರಹವಿಲ್ಲದೆ ಏನೂ ಇಲ್ಲ.
ದೇಶಗ್ರಾಹಕ ಅನುಗ್ರಾಹಕ ಸಮಗ್ರಾಹ ಸಂಗ್ರಾಹಿಯು
ಕೂಡಲಚೆನ್ನಸಂಗಯ್ಯಾ ಅನುಗ್ರಹ ಕಾರಣ ಅಂತಿಂತೆನಲಿಲ್ಲ. || ೮೫ ||

೭೭೨

ಮಾಡುವ ಮಾಡಿಸಿಕೊಂಬ ಎರಡರ ಉಭಯ ಒಂದೆ.
ಲಿಂಗವೊಂದೆ, ಜಂಗಮವೊಂದೆ, ಪ್ರಸಾದವೊಂದೆ.
ಒಂದಾದಲ್ಲಿ ಎರಡಾಗಿ ಮಾಡುವ ಭಕ್ತ ನೀನೇ,
ಕೂಡಲಚೆನ್ನಸಂಗಮದೇವಾ. || ೮೬ ||

೭೭೩

ಅನ್ಯಲಿಂಗ ಅನ್ಯಲಿಂಗವೆಂದೆಂಬಿರಿ,
ಅನ್ಯಲಿಂಗವದಾವುದು? ತನ್ನ ಲಿಹುದಾವುದು?
ಅಂಗದ ಮೇಲೆ ಲಿಂಗವುಳ್ಳವರ ಮನೆಯ ಹೊಗಿಸಲಾಗದು,
ಬರುಕಾಯರಿಗೆ ನೀಡಲಾಗದು.
ಗುರು ಲಿಂಗ ಜಂಗಮ ಪ್ರಸಾದವಿಲ್ಲದವರ ಕಂಡರೆ ಮಾಡುವಾತ ಭಕ್ತನಲ್ಲ,
ಕೂಡಲಚೆನ್ನಸಂಗಮದೇವಾ. || ೮೭ ||

೭೭೪

ತಾನು ಜಂಗಮವಾದರೆ ತನ್ನ ಕೈಯ ಲಿಂಗವು ತನಗೆ
ಬೆಸಮಗ[ನಾ]ಗಿರಬೇಡಾ?
ಇಂತಿದ್ದುದು ಉಭಯಾರ್ಥವು, ಇದು ಕಾರಣ ಕೂಡಲಚೆನ್ನಸಂಗಯ್ಯಾ
ಆ ಲಿಂಗವಾದ ಜಂಗಮವಪೂರ್ವ. || ೮೮ ||

## ಐಕ್ಯನ ಮಾಹೇಶ್ವರಸ್ಥಲ

೭೭೫

ಲಿಂಗ ಲಿಂಗವೆಂಬನ್ನಕ್ಕ ಜಂಗಮವಲ್ಲ,
ಪ್ರಸಾದ ಪ್ರಸಾದವೆಂಬನ್ನಕ್ಕ ಶರಣನಲ್ಲ,
ಗುರು ಲಿಂಗವೆಂಬುದಕ್ಕೆ ಅನಂಗವಿಸಲಾರೆ, ಕೂಡಲಚೆನ್ನಸಂಗಯ್ಯಾ. || ೮೯ ||

೭೭೬

ಕಾಯ ಸಂಮೋಹಿನಿಯುನು ಲಾಂಛನಧಾರಿಯೆಂಬೆ,
ಜೀವ ಸಂಮೋಹಿಯನು ಸಂಸಾರಿಯೆಂಬೆ,
ಭಾವ ಸಂಮೋಹಿಯನು ಅಜ್ಞಾನಿಯೆಂಬೆ,
ಮಿಗೆ ಮಿಗೆ ಮೀಸಲು ಸಹಜ ಶರಣನ ಕೂಡಲಚೆನ್ನಸಂಗನೆಂಬೆ. ॥ ೯೦ ॥

೭೭೭

ದೇಹೇಂದ್ರಿಯ ಮನಃಪ್ರಾಣಾದಿ ಅಹಮದೆ ತತ್ವಪದಾರ್ಥವ ಕೆಡಸಿತಲ್ಲಾ,
ಕೋಽಹಮೆನಲರಿಯದ ಮುಗ್ಧಾ, ಸೋಽಹಂ ನಿನ್ನ ನೀ ತಿಳಿಯಾ,
ತತ್ವಮಸಿ ವಾಕ್ಯಾರ್ಥ ನೀನಾಗಿ, ಕೂಡಲಚೆನ್ನಸಂಗ ಬೇರಿಲ್ಲ. ॥ ೯೧ ॥

೭೭೮

ಯದ್ಭಾವಂ ತದ್ಭವತಿಯೆಂಬ ಭಾವವುಂಟಾಗಿ ಗುರುವಾಯಿತ್ತು,
ಯದ್ಭಾವಂ ತದ್ಭವತಿಯೆಂಬ ಭಾವವುಂಟಾಗಿ ಶಿಷ್ಯನಾದ.
ಯದ್ಭಾವಂ ತದ್ಭವತಿಯೆಂಬ ಭಾವವುಂಟಾಗಿ ಲಿಂಗವಾಯಿತ್ತು,
ಯದ್ಭಾವಂ ತದ್ಭವತಿಯೆಂಬ ಭಾವವುಂಟಾಗಿ ಭಕ್ತನಾದ.
ಯದ್ಭಾವಂ ತದ್ಭವತಿಯೆಂಬ ಭಾವವುಂಟಾಗಿ ಪ್ರಸಾದವಾಯಿತ್ತು,
ಯದ್ಭಾವಂ ತದ್ಭವತಿಯೆಂಬ ಭಾವವುಂಟಾಗಿ ಪ್ರಸಾದಿಯಾದ.
ಯದ್ಭಾವಂ ತದ್ಭವತಿಯೆಂಬ ಭಾವವುಂಟಾಗಿ
ಕೂಡಲಚೆನ್ನಸಂಗ ತಾನಾದ. ॥ ೯೨ ॥

೭೭೯

ಆ ಮಾತನೆ ಮನೆಯು ಮಾಡಿ, ಸತಿಯು (ಪತಿಯು?) ನೆಲೆಗೊಳಿಸಿ,
ನಿಭ್ರಾಂತಿನ ಕದವನಿಕ್ಕಿ, ಸೂತಕವಳಿಯೆ ಸುಯಿದಾನಿ.
ಇದನರಿದು ಮರೆದವರ ಕೂಡಲಚೆನ್ನಸಂಗಯ್ಯನೆಂಜೆಸು. ॥ ೯೩ ॥

೭೮೦

ಅಂಧಕನ ಕೈಯ ಬಿಟ್ಟಲ್ಲಿ ಲೋಕವಿರೋಧ,
ಲೋಕವಿರೋಧಿ ಭಕ್ತ, ಭಕ್ತವಿರೋಧಿ ಶರಣ, ಶರಣವಿರೋಧಿ ಲಿಂಗೈಕ್ಯ.
ಈ ತ್ರಿವಿಧ ವಿರೋಧಿ ಕೂಡಲಚೆನ್ನಸಂಗನ ಮಹಾಘನವು. ॥ ೯೪ ॥

೭೮೧

ಭಕ್ತನೆಂಬೆನೆ? ಭಕ್ತಸ್ಥಲ ಮುನ್ನವೆಯಿಲ್ಲ,
ಮಾಹೇಶ್ವರನೆಂಬೆನೆ? ಮಾಹೇಶ್ವರಸ್ಥಲ ಮುನ್ನವೆಯಿಲ್ಲ,
ಪ್ರಸಾದಿಯೆಂಬೆನೆ? ಪ್ರಸಾದಿಸ್ಥಲ ಮುನ್ನವೆಯಿಲ್ಲ,
ಪ್ರಾಣಲಿಂಗಿಯೆಂಬೆನೆ? ಪ್ರಾಣಲಿಂಗಿಸ್ಥಲ ಮುನ್ನವೆಯಿಲ್ಲ,
ಶರಣನಂಬೆನೆ? ಶರಣಸ್ಥಲ ಮುನ್ನವೆಯಿಲ್ಲ,
ಐಕ್ಯನೆಂಬೆನೆ? ಐಕ್ಯಸ್ಥಲ ಮುನ್ನವೆಯಿಲ್ಲ,
ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ. ॥ ೯೫ ॥

೭೮೨

ಅಂಗ ಲಿಂಗೈಕ್ಯನ ಲಾಂಛನಧಾರಿಯೆಂಬೆ,
ಜೀವಲಿಂಗೈಕ್ಯನ ಉಪಜೀವಿಯೆಂಬೆ,
ಪ್ರಾಣಲಿಂಗೈಕ್ಯನ ಸಂಸಾರಿಯೆಂಬೆ.
ಈ ತ್ರಿವಿಧ ಲಿಂಗೈಕ್ಯನೆ? ಅಲ್ಲ,
ಮತ್ತೆಯೂ ಲಿಂಗೈಕ್ಯನೇ ಬೇಕು. ತಿಳಿದು ನೋಡಾ!
ಸಾಹಿತ್ಯವಾದಲ್ಲಿ ಅಂಗಲಿಂಗೈಕ್ಯವು,
ಮುಟ್ಟಿದಲ್ಲಿ ಇಷ್ಟಲಿಂಗೈಕ್ಯವು,
ಬೆರಸಿದಲ್ಲಿ ಪ್ರಾಣಲಿಂಗೈಕ್ಯವು,
ಈ ತ್ರಿವಿಧ ಲಿಂಗೈಕ್ಯವು ಅಲ್ಲ, ಮತ್ತೆಯೂ ಲಿಂಗೈಕ್ಯವೆ ಬೇಕು. ತಿಳಿದು ನೋಡಾ!
ಕಾಯದ ಕೊನೆಯಲಿಪ್ಪುದು ಪ್ರಾಣಲಿಂಗವು,
ಜೀವದ ಕೊನೆಯಲಿಪ್ಪುದು ಪ್ರಾಣಲಿಂಗವು,
ಭಾವದ ಕೊನೆಯಲಿಪ್ಪುದು ಪ್ರಾಣಲಿಂಗವು.
ಕಾಯ ಲಿಂಗವೆಂದು ಪೂಜಿಸುವ ಖಂಡಿತರನೇನೆಂಬೆ!
ಜೀವ ಲಿಂಗವೆಂದು ಪೂಜಿಸುವ ಉಪಜೀವಿಗಳನೇನೆಂಬೆ!
ಭಾವ ಲಿಂಗವೆಂದು ಪೂಜಿಸುವ ಭ್ರಮಿತರನೇನೆಂಬೆ!
ಈ ಲಿಂಗವನರಿದು, ಏಕೋನಿಷ್ಠೆ ಲಿಂಗವ ಮರೆದು
ಆ ಇಷ್ಟದಲ್ಲಿ ನೆರೆಯ ಬಲ್ಲರೆ ಕೂಡಲಚೆನ್ನಸಂಗಯ್ಯಾ
ಅವರನಿಷ್ಟಲಿಂಗೈಕ್ಯರೆಂಬೆ. ॥ ೯೬ ॥

೭೮೩

ಅರಿವಿಲ್ಲದ ಕಾರಣ ಭವಕ್ಕೆ ಬಂದರು,
ಅರಿವಿಲ್ಲದವಂಗೆ ಗುರುವಿಲ್ಲ, ಗುರುವಿಲ್ಲದವಂಗೆ ಆಚಾರವಿಲ್ಲ.

ಆಚಾರವಿಲ್ಲದವಂಗೆ ಲಿಂಗವಿಲ್ಲ, ಲಿಂಗವಿಲ್ಲದವಂಗೆ ಜಂಗಮವಿಲ್ಲ.
ಜಂಗಮವಿಲ್ಲದವಂಗೆ ಪ್ರಸಾದವಿಲ್ಲ, ಪ್ರಸಾದವಿಲ್ಲದವಂಗೆ ಗಣತ್ವವಿಲ್ಲ.
ಅರಿವುಸಾಹಿತ್ಯ ಗುರು, ಗುರುಸಾಹಿತ್ಯ ಆಚಾರ,
ಆಚಾರಸಾಹಿತ್ಯ ಲಿಂಗ, ಲಿಂಗಸಾಹಿತ್ಯ ಜಂಗಮ,
ಜಂಗಮಸಾಹಿತ್ಯ ಪ್ರಸಾದ, ಪ್ರಸಾದಸಾಹಿತ್ಯ ಗಣತ್ವ.
ಇದು ಕಾರಣ, ಕೂಡಲಚೆನ್ನಸಂಗನಲ್ಲಿ
ಈ ಸ್ಥಲಪಾದವರಿಗೆಲ್ಲಾ ಭಕ್ತಿ ಉನ್ಮದ ಉಂಟು,
[ಸಕಳ] ನಿರ್ವಾಣ ಲಿಂಗೈಕ್ಯಪದವಪೂರ್ವ. ॥ ೯೭ ॥

೭೮೪

ಲಿಂಗ ಲಿಂಗವೆಂದು ಕಾಣದನ್ನಕ್ಕ,
ಜಂಗಮ ಜಂಗಮವೆಂದು ಕಾಣದನ್ನಕ್ಕ,
ಇನ್ನಾಗದಯ್ಯಾ, ಇನ್ನಾಗದಯ್ಯಾ.
ಅರಿವಿನೊಳಗಣ ಘನವೆ ಸುಳುಹಡಗಿದ ಸೂತಕ,
ಇನ್ನಾಗದಯ್ಯಾ, ಇನ್ನಾಗದಯ್ಯಾ.
ಇದು ಕಾರಣ, ಕೂಡಲಚೆನ್ನಸಂಗಮದೇವಯ್ಯ,
ಸರ್ವಾಂಗ ಸಂದೇಹಿಗಳಿಗೆಂತೊಲಿವ? ॥ ೯೮ ॥

೭೮೫

ಗುರು ಉಂಟೆಂಬವಂಗೆ ಗುರುವಿಲ್ಲ, ಲಿಂಗ ಉಂಟೆಂಬವಂಗೆ ಲಿಂಗವಿಲ್ಲ,
ಜಂಗಮ ಉಂಟೆಂಬವಂಗೆ ಜಂಗಮವಿಲ್ಲ, ಪ್ರಸಾದ ಉಂಟೆಂಬವಂಗೆ ಪ್ರಸಾದವಿಲ್ಲ.
ಗುರುವಿಲ್ಲವೆಂಬವಂಗೆ ಗುರು ಉಂಟು, ಲಿಂಗವಿಲ್ಲವೆಂಬವಂಗೆ ಲಿಂಗ ಉಂಟು,
ಜಂಗಮವಿಲ್ಲವೆಂಬವಂಗೆ ಜಂಗಮವುಂಟು,
ಪ್ರಸಾದವಿಲ್ಲವೆಂಬವಂಗೆ ಪ್ರಸಾದವುಂಟು.
ಇದು ಕಾರಣ, ಕೂಡಲಚೆನ್ನಸಂಗಯ್ಯಾ, ತಾನಿಲ್ಲೆಂಬವಂಗೆ ತಾನುಂಟು. ॥ ೯೯ ॥

೭೮೬

ಅರ್ಪಿತವೆಂದರೆ ಅನರ್ಪಿತವಾಯಿತ್ತು, ಅನರ್ಪಿತವೆಂದರೆ ಅರ್ಪಿತವಾಯಿತ್ತು.
ಗುರುವೆಂದರೆ ಶಿಷ್ಯನಾಯಿತ್ತು, ಶಿಷ್ಯನೆಂದರೆ ಗುರುವಾಯಿತ್ತು.
ಗುರುಶಿಷ್ಯ ಸಂಬಂಧ ಕ್ರೀ ಪ್ರತಿಭಾವವುಳ್ಳನ್ನಕ್ಕ,
ಘನಲಿಂಗೈಕ್ಯವೆಲ್ಲಿಯದೊ? ಕೂಡಲಚೆನ್ನಸಂಗಮದೇವಾ? ॥ ೧೦೦ ॥

೭೮೭

ನರರಿಗೆಂದ್ದಿ ಗುರುವಪ್ಪ ಹಿರಿಯರು, ನೀವು ಕೇಳಿರೆ!
ನಿಮ್ಮ ಗುರುತನ ಕೆಟ್ಟು ಶಿಷ್ಯನ ಶಿಷ್ಯತನವ ಕೆಡಿಸಬಲ್ಲರೆ,
ಅವರ ಹಿರಿಯರೆಂಬೆ, ಕೂಡಲಚೆನ್ನಸಂಗಮದೇವಾ. || ೧೧೧ ||

೭೮೮

ಲಿಂಗಸ್ಥಲವಿಲ್ಲದವರ ಭಕ್ತರೆಂಬೆ,
ಗುರುಸ್ಥಲವಿಲ್ಲದವರ ಪ್ರಸಾದಿಗಳೆಂಬೆ,
ಪ್ರಸಾದಸ್ಥಲವಿಲ್ಲದವರ ಜಂಗಮವೆಂಬೆ,
ಈ ತ್ರಿವಿಧಸ್ಥಲವಿಲ್ಲದವರ ಶರಣರೆಂಬೆ.
ಇದು ಕಾರಣ, ಕೂಡಲಚೆನ್ನಸಂಗನಲ್ಲಿ
ಭವಿಸಹಿತವಾಗಿದ್ದಾತನ ಲಿಂಗೈಕ್ಯನೆಂಬೆ. || ೧೧೨ ||

೭೮೯

ಲಿಂಗದ್ರೋಹಿಯನೆ ಗುರುವೆಂಬೆ, ಗುರುದ್ರೋಹಿಯನೆ ಶಿಷ್ಯನೆಂಬೆ.
ಸಮಯದ್ರೋಹಿಯನೆ ಭಕ್ತನೆಂಬೆ, ಪ್ರಸಾದದ್ರೋಹಿಯನೆ ಮಾಹೇಶ್ವರನೆಂಬೆ.
ಇದು ಕಾರಣ, ಕೂಡಲಚೆನ್ನಸಂಗಯ್ಯಾ,
ನಿಮ್ಮ ಶರಣ ಸರ್ವಾಂಗದ್ರೋಹಿಯ ಲಿಂಗೈಕ್ಯನೆಂದೆಂಬೆ. || ೧೧೩ ||

೭೯೦

ಮನ ನಷ್ಟವಾದರೆ ಭಕ್ತನೆಂಬೆ,
ಉಪದೇಶ ನಷ್ಟವಾದರೆ ಗುರುವೆಂಬೆ,
ಭಾವ ನಷ್ಟವಾದರೆ ಲಿಂಗವೆಂಬೆ,
ಗಮನ ನಷ್ಟವಾದರೆ ಜಂಗಮವೆಂಬೆ,
ಅರ್ಪಿತ ನಷ್ಟವಾದರೆ ಪ್ರಸಾದಿಯೆಂಬೆ,
ಆಕಾ(ಚಾ?)ರ ನಷ್ಟವಾದರೆ ಐಕ್ಯನೆಂಬೆ.
ಇಂತೀ ಷಡುಸ್ಥಲ ನಿಂದ ನಿಲವಿನ ಪರಿಣಾಮಪದವ
ಕೂಡಲಚೆನ್ನಸಂಗಾ ನಿಮ್ಮ ಶರಣನೆ ಬಲ್ಲ. || ೧೧೪ ||

೭೯೧

ಸ್ಥಲ ಹೋಯಿತ್ತೆನಗೆ, ನಿಃಸ್ಥಲ ಹೋಯಿತ್ತೆನಗೆ
ಗೋರಿಕಲ್ಲ ಮಾಡ ಹೋಯಿತ್ತೆನಗೆ,

ಹೂವಿಮಾನ ಹೋಯಿತ್ತೆನಗೆ,
ಬಸವ ಹೋದನೆನಗೆ, ಬಸವನ ಜಂಗಮ ಹೋದನೆನಗೆ.
ಇನ್ನು ಬಸವಾಯೆಂದೆನಾದರೆ ಕೂಡಲಚೆನ್ನಸಂಗಾ ನಿಮ್ಮಾಣೆ. ॥ ೧೦೫

೭೯೨

ಗುರುವಾದರೆ ಲಿಂಗವನೆತ್ತ ಬಲ್ಲ?
ಜಂಗಮನಾದರೆ ಪ್ರಸಾದವನೆತ್ತ ಬಲ್ಲ?
ಇದು ಕಾರಣ,
ಕೂಡಲಚೆನ್ನಸಂಗಮದೇವಯ್ಯನೆತ್ತ ಬಲ್ಲ ಬಸವಣ್ಣನ? ॥ ೧೦೬

೭೯೩

ಗುರು ಮುಟ್ಟಿ ಗುರುವಾಯಿತ್ತು,
ಲಿಂಗಮುಟ್ಟಿ ಲಿಂಗವಾಯಿತ್ತು,
ಜಂಗಮ ಮುಟ್ಟಿ ಜಂಗಮವಾಯಿತ್ತು,
ಪ್ರಸಾದ ಮುಟ್ಟಿ ಪ್ರಸಾದವಾಯಿತ್ತು,
ಪ್ರಸಾದ ಪರವಸ್ತು, ಪರದಲ್ಲಿಪ್ಪುದಾಗಿ,
ಇನ್ನು ಪ್ರಸಾದವ ಮುಟ್ಟಬೇಕೆಂಬವರ ಮುಖವ ನೋಡಲಾಗದು,
ಕೂಡಲಚೆನ್ನಸಂಗಯ್ಯಾ. ॥ ೧೦೭ ॥

## ಐಕ್ಯನ ಪ್ರಸಾದಿಸ್ಥಲ

೭೯೪

ಆಯತ ಪ್ರಸಾದಿ, ಸ್ವಾಯತ ಪ್ರಸಾದ,
ಸನ್ನಿಹಿತ ಪ್ರಸಾದಿ, ಸಮಯಭೋಗ ಪ್ರಸಾದಿ.
ಪ್ರಸಾದವೆ ಪ್ರಾಣವಾಗಿ,
ಪ್ರಸಾದವು ಪ್ರಸಾದಿಯನೆ ಅವಗ್ರಹಿಸಿಕೊಂಡಿಪ್ಪುದು,
ಪ್ರಸಾದವೂ ಪ್ರಸಾದಿಯೂ ಏಕವಾಗಿದ್ದಡಾನು
ನಮೋ ನಮೋಯೆಂಬೆ ಕೂಡಲಚೆನ್ನಸಂಗಮದೇವಾ. ॥ ೧೦೮ ॥

೭೯೫

ರುಚಿಯೆಂದರೆ ರೂಪಾಯಿತ್ತು, ಸವಿಯೆಂದರೆ ಸಂದಾಯಿತ್ತು.
ರುಚಿಯೆನ್ನದ, ರೂಪೆನ್ನದ, ಸವಿಯೆನ್ನದ, ಸಂದಿಲ್ಲದ
ಕೂಡಲಚೆನ್ನಸಂಗನ ಪ್ರಸಾದಿಗೆ ನಮೋ ನಮೋಯೆಂಬೆ. ॥ ೧೦೯ ॥

೭೯೬

ರುಚಿವಿರಹಿತ ಪ್ರಸಾದ, ಸ್ಪರ್ಶವಿರಹಿತ ಅರ್ಪಿತ
ಎಂದೆಸಂದೆನಾರಿಗಾದರೆಯೂ ಸಾಧ್ಯವಾಗಲಿ!
ಕೂಡಲಚೆನ್ನಸಂಗನ ಪ್ರಸಾದಿಯ ಪ್ರಸಾದದಿಂದ
ಎಂದೆನೆಂದೆನಾರಿಗಾದರೆಯೂ ಸಾಧ್ಯವಾಗಲಿ! || ೧೧೦ ||

೭೯೭

ಅವಿನಾಶಂಗೆ ವಿನಾಶವರ್ಜಿತವಾದರೆ ಪ್ರಸಾದಿ.
ಆ ಪ್ರಸಾದ ವರ್ಣನಾಸ್ತಿಯಾಗಿ ಕೊಳಬಲ್ಲಡೆ ಪ್ರಸಾದಿ.
ಆ ಪ್ರಸಾದಿಯೆಂಬ ಅವಿನಾಶಂಗೆ ನಮೋ ನಮೋಯೆಂಬೆ
ಕೂಡಲಚೆನ್ನಸಂಗಮದೇವಾ. || ೧೧೧ ||

೭೯೮

ಸಾಲವ ಕೊಂಡು ನಿಮ್ಮ ಶರಣ ಶಿವಲೋಕಕ್ಕೆ ಹೋದನಲ್ಲಾ:
ಪೃಥ್ವಿಯ ಸಾಲವ ಪೃಥ್ವಿಗೆ ಕೊಟ್ಟು,
ಅಪ್ಪುವಿನ ಸಾಲವ ಅಪ್ಪುವಿಗೆ ಕೊಟ್ಟು,
ತೇಜದ ಸಾಲವ ತೇಜಕ್ಕೆ ಕೊಟ್ಟು,
ವಾಯುವಿನ ಸಾಲವ ವಾಯುವಿಗೆ ಕೊಟ್ಟು,
ಆಕಾಶದ ಸಾಲವ ಆಕಾಶಕ್ಕೆ ಕೊಟ್ಟು
ಪ್ರಸಾದವನಾರಿಗೆಯೂ ಕೊಡಲಿಲ್ಲೆಂದು
ಕೂಡಲಚೆನ್ನಸಂಗನಲ್ಲಿ ಹೂಣೆಹೊಕ್ಕ ಶರಣಂಗೆ
ಮಿಗೆ ಮಿಗೆ ನಮೋ ನಮೋಯೆಂಬೆ. || ೧೧೨ ||

೭೯೯

ನವಖಂಡ ಪೃಥ್ವಿ ಚತುರ್ದಶಭುವನದೊಳಗೆ
ಸ್ಥೂಲವಾವುದು, ಸೂಕ್ಷ್ಮವಾವುದು ಬಲ್ಲವರು ನೀವು ಹೇಳಿರೆ!
ಕಾಲಚಕ್ರವೊ, ಕರ್ಮಚಕ್ರವೊ, ನಾದಚಕ್ರವೊ, ಬಿಂದುಚಕ್ರವೊ.
ಇವರೊಳಗೆ ಆವುದ ಹಿರಿದೆಂಬೆನಾವುದ ಕಿರಿದೆಂಬೆ? ಬಲ್ಲವರು ನೀವು ಹೇಳಿರೆ!
ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವೆಂಬಡೆ
ಇಕ್ಕಿದ ರಾಟಳ ತುಂಬುತ ಕೆಡಹುತಲಿದ್ದುದಾಗಿ.

ಕೀಲು ಮುರಿದು ರಾಟಳ ನಿಂದು ನಿಶ್ಶೂನ್ಯವಾಗಿ
ಕೂಡಲಚೆನ್ನಸಂಗನಲ್ಲಿ ಮಹಾಪ್ರಸಾದಿ. ॥ ೧೧೩ ॥

೮೦೦

ಸ್ವಯಮಜ್ಜನ, ಸ್ವಯಪೂಜೆ, ಸ್ವಯಾರೋಗಣೆ ಕೃತ್ಯ ಶಯನರತಿಮುಚ್ಯತೆ,–
ಎಂದುದಾಗಿ, ನಾ ನೀನೆಂಬ ಸಂಶಯ ನಿಂದ ನಿಲವೆಂತಿದ್ದಿತೆಂದರೆ:
[ಪ್ರ]ಪಂಚ ಪರತಂತ್ರವ ಮೀರಿ,
ಭಾವವ ಬಿಟ್ಟು, ಘನರವಿಲೋಚನನಾಗಿ,
ಅರ್ಪಿತವೆ (ಭುಂಜಿತ), ಅನರ್ಪಿತವೆ ಅಭುಂಜಿತ,
ಸ್ಥೂಲ ಸೂಕ್ಷ್ಮ ಘನನಿತ್ಯವೆಂದರಿಯರು, ಜಡವೇಷಲಾಂಛನಧಾರಿಗಳು.
ಕಾಯ ಜೀವ ಪ್ರಸಾದವಂ ಬಿಟ್ಟು ಸರ್ವಭಾವ ರುಚಿ ಪ್ರಸಾದಿ,
ಕೂಡಲಚೆನ್ನಸಂಗಯ್ಯಾ ಆತ ಸರ್ವಾಂಗಪ್ರಸಾದಿ. ॥ ೧೧೪ ॥

೮೦೧

ಅರಿವರತು ಮರಹು (ಕುರುಹು?) ನಷ್ಟವಾದರೆ ಭಕ್ತ,
ಆಚಾರವರತು ಅನಾಚಾರ ನಷ್ಟವಾದರೆ ಜಂಗಮ,
ಅರ್ಪಿತವರತು ಅನರ್ಪಿತ ನಷ್ಟವಾದರೆ ಪ್ರಸಾದಿ,
ಪ್ರಸಾದವರತು ಪದಾರ್ಥ ನಷ್ಟವಾದರೆ ಪರಿಣಾಮಿ,
ಪರಿಣಾಮವರತು ಪರಮಸುಖ ನೆಲೆಗೊಂಡರೆ
ಕೂಡಲಚೆನ್ನಸಂಗನಲ್ಲಿ ಲಿಂಗೈಕ್ಯವು. ॥ ೧೧೫ ॥

೮೦೨

ಕಾಮಿಸಿ ಕಲ್ಪಿಸಲಿಲ್ಲ, ಕಲ್ಪಿಸಿ ಭಾವಿಸಲಿಲ್ಲ,
ಭಾವಿಸಿ ರೂಪಿಸಲಿಲ್ಲ, ರೂಪಿಸಿ ಭೇದಿಸಲಿಲ್ಲ.
ಇದು ಕಾರಣ, ಕೂಡಲಚೆನ್ನಸಂಗಮದೇವಾ,
ಸರ್ವಾಂಗಲಿಂಗವಾದಲ್ಲಿ ಅನರ್ಪಿತವಿಲ್ಲ. ॥ ೧೧೬ ॥

೮೦೩

ಉಭಯ ಕಾಮ, ಉಭಯ ಶಕ್ತಿ, ಉಭಯ ಆಶ್ರಮವು–
ಅನಾಶ್ರಮವು, ಉಭಯ ತಾನೆ ಪ್ರಸಾದಿ.
ಉಭಯನಾಮದ ಮೇಲೆ ನಾಮವಾದುದನು
ಲಿಂಗದೇಹಿಯೆಂಬಾತಂಗರಿಯಬಾರದು.

ಇದು ಕಾರಣ, ಕೂಡಲಚೆನ್ನಸಂಗಾ ನಿಮ್ಮ ಪ್ರಸಾದಿಗಲ್ಲದೆ
ಅರಿಯಬಾರದು. || ೧೧೭ ||

೮೦೪

ಸರ್ಪದಷ್ಟವಾದರೆ ಗಾರುಡವುಂಟು, ಪ್ರಸಾದವಸ್ಟವಾದರೆ ಗಾರುಡವಿಲ್ಲ.
ಅಂಗದ ಕೈಯಲಾದುದ ಲಿಂಗಕ್ಕೆ ಕೊಡಲಿಲ್ಲ.
ಲಿಂಗದ ಕೈಯಲಾದುದ ಅಂಗಕ್ಕೆ ಕೊಡಲಿಲ್ಲ.
ಲಿಂಗದ ಒಡಲೆಂಬರು, ಲಿಂಗಕ್ಕೆ ಒಡಲುಂಟೆ?
ಈ ಉಭಯಸಂಗ ಕೂಡಲಚೆನ್ನಸಂಗಾ ನಿಮ್ಮಲ್ಲಿ ವಿಚಾರಿಸೂದು
ಮಹಾಘನ ತಾನು. || ೧೧೮ ||

೮೦೫

ಶಬ್ದವೆಂಬುದು ಶ್ರೋತ್ರದೆಂಜಲು, ರೂಪೆಂಬುದು ನಯನದೆಂಜಲು,
ವಾಸನೆಯೆಂಬುದು ನಾಸಿಕದೆಂಜಲು, ರುಚಿಯೆಂಬುದು ಜಿಹ್ವೆಯೆಂಜಲು,
ಸ್ಪರ್ಶವೆಂಬುದು ತ್ವಕ್ಕಿನೆಂಜಲು, ಮಾಡಲಾಗದು.
ಲಿಂಗಕ್ಕೆ ರೂಹಿಲ್ಲ, ಜಂಗಮಕ್ಕೆ ಅಂಗವಿಲ್ಲ.
ಪದಾರ್ಥವ ನೀಡಬಲ್ಲ ನಿಜೈಕ್ಯ ನಿಮ್ಮ ಶರಣ,
ಕೂಡಲಚೆನ್ನಸಂಗಮದೇವಾ. || ೧೧೯ ||

೮೦೬

ಆದಿಯ ಪ್ರಸಾದವ ಕೊಂಬಡೆ ಆತ್ಮದ್ರೋಹಿ,
ಗುರುಪ್ರಸಾದವ ಕೊಂಬಡೆ ಗುರುದ್ರೋಹಿ,
ಲಿಂಗ ಪ್ರಸಾದವ ಕೊಂಬಡೆ ಲಿಂಗದ್ರೋಹಿ,
ಜಂಗಮ ಪ್ರಸಾದವ ಕೊಂಬಡೆ ಜಂಗಮದ್ರೋಹಿ.
ಸಮಯ ಪ್ರಸಾದವ ಕೊಂಬಡೆ ಭಾವವಳಿಯದಾಗಿ,
ಕೂಡಲಚೆನ್ನಸಂಗನ ಹಿರಿಯರ ಹಿರಿಯ ಮಗ
ಸಂಗನಬಸವಣ್ಣನ ಪ್ರಸಾದಕ್ಕೆ ನಾನೆಂಬ ಓಗರ. || ೧೨೦ ||

೮೦೭

ಕಾಯ ವಿರೋಧಿ ಸ್ಪರ್ಶನ, ಭಾವ ವಿರೋಧಿ ದರ್ಶನ, ರುಚಿ ವಿರೋಧಿ ಪ್ರಸಾದಿ.
ಕೂಡಲಚೆನ್ನಸಂಗಾ
ನಿಮ್ಮ ಶರಣನ ಕಾಯ ಲಿಂಗಕ್ಕೆ ಓಗರವಾಯಿತ್ತು. || ೧೨೧ ||

೮೦೮

ಸಂಕಲ್ಪ ವಿಕಲ್ಪವೆಂಬುದಿಲ್ಲ, [ವಿಕಲ್ಪ ಸಂಕಲ್ಪವೆಂಬುದಿಲ್ಲ].
ಭಾವ ಅಭಾವವೆಂಬುದಿಲ್ಲ, ಅಭಾವ ಭಾವವೆಂಬುದಿಲ್ಲ.
ಪದಾರ್ಥ ಪ್ರಸಾದವೆಂಬುದಿಲ್ಲ, ಪ್ರಸಾದ ಪದಾರ್ಥವೆಂಬುದಿಲ್ಲ.
ಅದೇನು ಕಾರಣ? ನಿಃಪದಾರ್ಥ ನಿಃಪ್ರಸಾದ ಕೂಡಲಚೆನ್ನಸಂಗಯ್ಯಾ
ಗುರುಲಿಂಗವಾರೋಗಣೆಯ ಮಾಡಿದ ಕಾರಣ. || ೧೨೨ ||

೮೦೯

ನೀನಳವಡಿಸಿಕೊಟ್ಟುದು ನಿನಗೆ ಅರ್ಪಿತವಯ್ಯಾ,
ಆರೋಗಣೆ ಮಹಾರೋಗಣೆ ಸಕಲಗಣಂಗಳಿಗೆ ಹಿತಾರ್ಥ.
ಕೂಡಲಚೆನ್ನಸಂಗಯ್ಯಾ ನಿನಗೆ ಕ್ಷುತ್ತಿಲ್ಲಾಗಿ
ಅರ್ಪಿತವ ಮಾಡಲಿಲ್ಲ. || ೧೨೩ ||

೮೧೦

ನಿತ್ಯನೆಂಬ ಭಕ್ತನ ಮನೆಗೆ ಘನಚೈತನ್ಯವೆಂಬ ಜಂಗಮ ಬಂದಡೆ,
ಜಲವಿಲ್ಲದ ಜಲದಲ್ಲಿ ಪಾದಾರ್ಚನೆಯ ಮಾಡಿದಡೆ,
ಮಾಡಿದ ಆ ಪಾದೋದಕವೆ ಮಹಾಪದವಯ್ಯಾ,
ಸ್ವೇಚ್ಛಾನಂದಜಲೇ ನಿತ್ಯಂ ಪ್ರಕ್ಷಾಲ್ಯ ಚರಪಾದುಕಾಂ।
ತಚ್ಚ ಪಾದೋದಕಂ ಪೀತ್ವಾ ಸ ಮುಕ್ತೋ ನಾತ್ರ ಸಂಶಯಃ॥
ಎಂದುದಾಗಿ,
ಆ ಪಾದೋದಕದಲ್ಲಿ ಪರಮಪರಿಣಾಮಿ
ಕೂಡಲಚೆನ್ನಸಂಗಾ ನಿಮ್ಮ ಶರಣ. || ೧೨೪ ||

೮೧೧

ಸರ್ವಾಂಗವೂ ಲಿಂಗವಾದ ಆರೋಗಣೆಗೆ ಆಪ್ಯಾಯನವೆ ಕರಸ್ಥಲ.
ನಿಂದುದೆ ಓಗರ, ಬಂದ ಪರಿಣಾಮವೆ ಪ್ರಸಾದವಾಗಿ
ಹೇಳಲಿಲ್ಲದ ಕೇಳಲಿಲ್ಲದ ನಿರ್ಣಯ, ಕೂಡಲಿಲ್ಲ ಕಳೆಯಲಿಲ್ಲ ನೋಡಾ.
ಇದು ಕಾರಣ, ಕೂಡಲಚೆನ್ನಸಂಗಮದೇವಾ,
ಬಸವನನುಗ್ರಹಿಸಿಕೊಂಡ, ನಿಂದ ನಿಲವಿನ ಸಹಜವಲ್ಲಿ
ಉದಯಿಸಿದ ಲಿಂಗ ನಿರಂತರ. || ೧೨೫ ||

೮೧೨

ಹನ್ನೆರಡು ಗಾವುದ ವಿಸ್ತೀರ್ಣದ ಮಹಾಪಟ್ಟಣಕ್ಕೆ
ಕಲ್ಯಾಣವೆಂಬ ಪ್ರಣತೆ, ಮಹತ್ತೆಂಬ ಎಣ್ಣೆ,
ಬಸವನೆಂಬ ಸ್ವಯಂಜ್ಯೋತಿ.
ಅಲ್ಲಿ ಕಾಳಯ್ಯ ಚವುಡಯ್ಯ ಕೋಲ ಸಾತಯ್ಯ,
ಮುಖವಾಡದ ಕೇಶಿರಾಜ ಖಂಡನೆಯ ಬೊಮ್ಮಣ್ಣ,
ಮಿಂಡ ಮಲ್ಲಿನಾಥ ಹಡಪದ ಅಪ್ಪಣ್ಣ ಮಡಿವಾಳ ಮಾಚಯ್ಯ,
ಅವ್ವೆ ನಾಗವ್ವೆ ಸಹಿತ ಇವರೆಲ್ಲರೂ ಸಂಗನಬಸವಣ್ಣನ ಬಯಲ ಕೂಡಿದರು.
ಇದು ಕಾರಣ, ಕೂಡಲಚೆನ್ನಸಂಗನಲ್ಲಿ
ಇವರ ಪ್ರಸಾದದ ಬಯಲೆನಗಾಯಿತ್ತು. ॥ ೧೨೬ ॥

೮೧೩

ದಾಸ ಪ್ರಸಾದವ ದಾಸಿಮಯ್ಯಗಳು ಕೊಂಡರು,
ಪ್ರಾಣ ಪ್ರಸಾದವ ಸಿರಿಯಾಳ ಕೊಂಡ,
ಸಮತೆ ಪ್ರಸಾದವ ಬಲ್ಲಾಳ ಕೊಂಡ,
ಜಂಗಮ ಪ್ರಸಾದವ ಬಸವಣ್ಣ ಕೊಂಡ,
ಸಮಯ ಪ್ರಸಾದವ ಬಿಬ್ಬ ಬಾಚಯ್ಯಗಳು ಕೊಂಡರು,
ಜ್ಞಾನ ಪ್ರಸಾದವ ಅಕ್ಕಗಳು ಕೊಂಡರು,
ಶೂನ್ಯ ಪ್ರಸಾದವ ಪ್ರಭುದೇವರು ಕೊಂಡರು.
ಎನಗಿನ್ನೆಂತಯ್ಯಾ? ಮುಳ್ಳುಗುತ್ತ ತೆರಹಿಲ್ಲ.
ಇದು ಕಾರಣ, ಕೂಡಲಚೆನ್ನಸಂಗನ ಶರಣರ
ಒಕ್ಕು ಮಿಕ್ಕ ಪ್ರಸಾದವೆನಗಾಯಿತ್ತು. ॥ ೧೨೭

೮೧೪

ಗೋಚರ ಅಗೋಚರ ಸಾಕಾರ ನಿರಾಕಾರ,
ಶೂನ್ಯ ನಿಶ್ಶೂನ್ಯವೆಂದುದು ಪುರಾತನರ ವಚನ.
ಕೂಡಲಚೆನ್ನಸಂಗಯ್ಯ ಮುಟ್ಟಿತ್ತೇ ಆಯಿತ್ತು ಮಹಾಪ್ರಸಾದ. ॥ ೧೨೮ ॥

೮೧೫

ಮುಟ್ಟದ ಮುನ್ನ ದಿಟ ಘಟಿಸಿ ನಿಂದುದು ಸಟೆಯಿಲ್ಲ ಕಾಣಿರೆ!
ಮುಟ್ಟಿತ್ತೆ ಮಹಾಪ್ರಸಾದ ಕೂಡಲಚೆನ್ನಸಂಗನಲ್ಲಿ. ॥ ೧೨೯ ।

೮೧೬

ಕಾಯ ಪ್ರಸಾದ ಒಂದೆಡೆಯಲ್ಲಿ,
ಜೀವ ಪ್ರಸಾದ ಒಂದೆಡೆಯಲ್ಲಿ,
ವ್ಯಾಪಾರ ಪ್ರಸಾದ ಒಂದೆಡೆಯಲ್ಲಿ,
ಪ್ರಸಾದಿ ಪ್ರಸಾದವನೆ ಪತಿಕರಿಸಿಕೊಂಡಿಪ್ಪ.
ಓಗರ ಪ್ರಸಾದವೆಂಬ ಸಂಕಲ್ಪವಿರಹಿತ ಪ್ರಸಾದಿ,
ಭ್ರಾಂತು ಸೂತಕವಳಿದುಳಿದ ಪ್ರಸಾದಿ,
ಕೂಡಲಚೆನ್ನಸಂಗನಲ್ಲಿ ತಾನೆ ಪ್ರಸಾದಿ. ॥ ೧೩೦ ॥

೮೧೭

ಕಾಯಪ್ರಸಾದ ಒಂದೆಡೆಯಲ್ಲಿ, ಜೀವಪ್ರಸಾದ ಒಂದೆಡೆಯಲ್ಲಿ,
ವ್ಯಾಪಾರ ಪ್ರಸಾದ ಒಂದೆಡೆಯಲ್ಲಿ, ನಿತ್ಯಪ್ರಸಾದ ಒಂದೆಡೆಯಲ್ಲಿ,
ವಚನಪ್ರಸಾದ ಒಂದೆಡೆಯಲ್ಲಿ, ಅರ್ಥ ಪ್ರಾಣ ಅಭಿಮಾನ ಒಂದೆಡೆಯಲ್ಲಿ,
ಅಖಂಡಿತವೆನಿಸಿ ತಾ ಲಿಂಗಪ್ರಸಾದ ಒಂದೆಡೆಯಲ್ಲಿ.
ಇಂತಿವೆಲ್ಲವೂ ಏಕವಾದ ಪ್ರಸಾದಿಯ ಪ್ರಸಾದದಿಂದ
ಕೂಡಲಚೆನ್ನಸಂಗಾ ನಿಮ್ಮ ಪ್ರಸಾದಿಯಾದೆನಯ್ಯಾ. ॥ ೧೩೧ ॥

೮೧೮

ನಿಷ್ಠ ಲಿಂಗದಲ್ಲಿ ದಷ್ಟಲಿಂಗದಲ್ಲಿ ದೃಷ್ಟಲಿಂಗದಲ್ಲಿ,
ನಷ್ಟಂಗದಲ್ಲಿ ಮುಟ್ಟಿ ನಿಷ್ಠೆಯಾದ ಪ್ರಸಾದಿ,
ನಿಷ್ಠಾನಿಷ್ಠಪರವಾದ ಪ್ರಸಾದಿ, ಪ್ರಸಾದದಿಂದ ಪ್ರಸಾದಿ,
ಕೂಡಲಚೆನ್ನಸಂಗಯ್ಯಾ ಲಿಂಗೈಕ್ಯ ಪ್ರಸಾದಿ. ॥ ೧೩೨ ॥

೮೧೯

ಸಯದಾನ ಸರೂಪವನು ನಿರೂಪಕ್ಕೆ ತಂದು,
ನಯನಾದಿ ಅನಿಮಿಷದಷ್ಟವಾದ ಪ್ರಸಾದಿ,
ನಿಷ್ಠಾನಿಷ್ಠವಾದ ಪ್ರಸಾದಿ, ಪ್ರಸಾದದಿಂದ ಪ್ರಸಾದಿ,
ಕೂಡಲಚೆನ್ನಸಂಗಯ್ಯಾ ಲಿಂಗೈಕ್ಯ ಪ್ರಸಾದಿ. ॥ ೧೩೩ ॥

೮೨೦

ಸ್ಥಾವರಾರಾಧನೆಯ ಪೂಜನೆಯ ಪುರಸ್ಕಾರದ
ಲಿಂಗ ರಚನೆಯ ರತಿಯಿಲ್ಲದ ಪ್ರಸಾದಿ,

ಜಂಗಮಗುಣಾದಿ ಸಂಗವ ಮನಕ್ಕೆ ತಾರದ ಪ್ರಸಾದಿ.
ತ್ರೈಪುರುಷ ಏಕೋವರ್ಣದ ಸಂಯೋಗವಿಲ್ಲದ ಪ್ರಸಾದಿ.
ನಾದದ ಸಾರಸಾರವನು ಕರಸ್ಥಲಕ್ಕೆ ತಂದು ಪರಗಮನರಹಿತ ಪ್ರಸಾದಿ.
ಇದು ಕಾರಣ, ಕೂಡಲಚೆನ್ನಸಂಗಾ
ಸಮಾಪ್ತವಾಗಿ, ಲಿಂಗಲೀಯವಾದ ಪ್ರಸಾದಿ. || ೧೩೪ ||

೮೨೧

ನಾಥನು ಅನಾಥನು ಪುಣ್ಯನಾಥನು ಕರುಣಾಕರನೆಂಬ
ಶಬ್ದಂಗಳ ಮನಕ್ಕೆ ತಾರದ ಪ್ರಸಾದಿ,
ಸ್ಥಾಪ್ಯಾಯನ, ಸ್ತಂಭ ಆ ಎರಡರ ಅನ್ವಯವಳಿದ ಪ್ರಸಾದಿ,
ಸಂಗ ಲಿಂಗೈಕ್ಯವೆಂಬ ನುಡಿಯ ಹಂಗಿಲ್ಲದ ಪ್ರಸಾದಿ.
ಇದು ಕಾರಣ, ಕೂಡಲಚೆನ್ನಸಂಗಯ್ಯಾ,
ನಾನೆನ್ನದ ಪ್ರಸಾದಿ. || ೧೩೫ ||

೮೨೨

ರವಿಯ ಕಿರಣಂಗಳ ರಮಿಸದೆ ಪಾಲಿಸದೆ ಆಲಿಸದೆ ಎಂದೂ ನಿಂದುದಾಗಿ,
ಹಿಮಕರಕರಾದಿಗಳನು ಮನಸ್ತಂಭನೆಗೆ ತಾರದೆ ನಿಂದುದಾಗಿ,
ದಿನಕರ ಅಬೋಧ ಸ್ತಂಭಗಳ ಅರ್ಪಿತವೆನ್ನದೆ ಆಯಿತ್ತಾಗಿ,
ಘನಮನವೇದ್ಯ ಪ್ರಸಾದಿ.
ಇದು ಕಾರಣ, ಕೂಡಲಚೆನ್ನಸಂಗಾ ಆನೆನ್ನದ ಪ್ರಸಾದಿ. || ೧೩೬ ||

೮೨೩

ಆಧಾರಾಧೇಯ ಸೊಮ್ಮು ಸಂಬಂಧವಿಲ್ಲದ ಪ್ರಸಾದಿ,
ಭೋಗ ಅಭೋಗಂಗಳ ಸಾರಾಯವಿಲ್ಲದ ಪ್ರಸಾದಿ,
ಕ್ರಿಯಾಮೋಹಿತದ, ನಿಃಕ್ರಿಯಾನಿರ್ಮೋಹಿತದ,
ಎರಡರ ಭೇದವನು ಶರೀರಾರ್ಥಕ್ಕೆ ಹೊದ್ದಲೀಯದೆ
ಜಂಗಮದಲ್ಲಿ ನಿವೇದಿಸಿ ಲಿಂಗಲೀಯವಾದ ಪ್ರಸಾದಿ,
ಚತುಷ್ಟಯಂಗಳ ಜಿಹ್ವೆಕ್ಕೆ ತಲೆದೋರದ ಪ್ರಸಾದಿ.
ಇದು ಕಾರಣ–ಕೂಡಲಚೆನ್ನಸಂಗಯ್ಯಾ,
ಸರ್ವಾಂಗಲೀಯವಾದ ಪ್ರಸಾದಿ. || ೧೩೭ ||

೮೨೪

ಪದಾರ್ಥವೆತ್ತ? ಪ್ರಸಾದವೆತ್ತ? ಪದಾರ್ಥವೇ ಪ್ರಸಾದ.
ಈ ಎರಡರ ಮಸಮಥನವಿಲ್ಲದ ಪ್ರಸಾದಿ,
'ಮಧ್ಯಂ ದೇವದತ್ತಂ ಮಧ್ಯಂ ಭುವನಸಂಗ'ವಿಲ್ಲದ ಪ್ರಸಾದಿ,
ಪ್ರಸಾದ ಪಾಕದ ವಿವರವನು ಕೂಡಲಚೆನ್ನಸಂಗಾ
ನಿಮ್ಮ ಪ್ರಸಾದಿಯೇ ಬಲ್ಲ. ॥ ೧೩೮ ॥

೮೨೫

ಮನ ಮತವಲ್ಲದೆ, ಸಯದಾನ ಮತವಲ್ಲದೆ,
ಶರೀರಾರ್ಥದಲ್ಲಿ ದ್ರವ್ಯವಂತನಲ್ಲದೆ, ಅರ್ಪಿತಮುಖವರಿತ ಪ್ರಸಾದಿ,
ಸಕೀಲಸುಖವಳಿಯದ ಪ್ರಸಾದಿ,
ಶೋಣಿತ ಇಚ್ಛಾದಿಗಳಳಿದ ಪ್ರಸಾದಿ,
ನಾದ ಬಿಂದುವಿನ ಪರಿಭಾವವಳಿದ ಪ್ರಸಾದಿ.
ಪ್ರಸಾದವೆ ಭಾವ, ಪ್ರಸಾದವೆ ನಿರ್ಭಾವ,
ನಡೆ ನುಡಿ ಚೈತನ್ಯ ಆಳಾಪ, ಸಂಗ ಸುಸಂಗ ಮಹಾಸಂಗ
ಘನಸಂಗದಲ್ಲಿ ಮನನಿಂದ ಪ್ರಸಾದಿ.
ಇದು ಕಾರಣ, ಕೂಡಲಚೆನ್ನಸಂಗಮದೇವಾ
ಶಬ್ದಾರ್ಥದಲ್ಲಿ ಮನನಿಂದ ಪ್ರಸಾದಿ. ॥ ೧೩೯ ॥

೮೨೬

ಅಂಗಕ್ಕೆ ಆಚಾರವಳವಟ್ಟಲ್ಲಿ ಆ ಲಿಂಗಕ್ಕೆ ಅಂಗವೆ ಅರ್ಪಿತ.
ಪ್ರಾಣಕ್ಕೆ ಪ್ರಸಾದ ಸಾಧ್ಯವಾದಲ್ಲಿ ಆ ಲಿಂಗಕ್ಕೆ ಆ ಪ್ರಾಣವೆ ಅರ್ಪಿತ.
ಮನವು ಮಹವನಿಂಬುಗೊಂಡಲ್ಲಿ ಆ ಲಿಂಗಕ್ಕೆ ಮನವೆ ಅರ್ಪಿತ.
ಭಾವಕ್ಕೆ ಭ್ರಮೆಯುಳಿದು ನಿಭ್ರಾಂತುವಾದಲ್ಲಿ ಆ ಲಿಂಗಕ್ಕೆ ಆ ಭಾವವೆ ಅರ್ಪಿತ.
ಜ್ಞಾತೃ ಜ್ಞಾನ ಜ್ಞೇಯು ಸಂಪುಟವಾಗಿ, ಅರಿವು ನಿರ್ಣಯಿಸಿ ನಿಷ್ಪತ್ತಿಯಾಗಿ
ಕುರುಹುಗೆಟ್ಟಲ್ಲಿ ಆ ಲಿಂಗಕ್ಕೆ ಆ ಅರಿವೆ ಅರ್ಪಿತ.
ಇಂತು, ಸರ್ವಾಂಗವರ್ಪಿತವಾದ ಲಿಂಗಕ್ಕೆ ಒಡೆತನವನಿತ್ತ ಕಾರಣ,
ಕೂಡಲಚೆನ್ನಸಂಗಯ್ಯನಲ್ಲಿ ನಾನೆಂದೆನಲರಿಯದೆ
ನಿಂದ ನಿಜದ ಮಹಾಪ್ರಸಾದಿ. ॥ ೧೪೦ ॥

೮೨೭

ಅರ್ಪಿತ ಭುಂಜಕನ, ಪ್ರಸಾದ ಭುಂಜನಕ ಪರಿ ಬೇರೆ,
ಅರ್ಪಿತವೆಂದಳಿದು ಸ್ಥೂಲ ಸೂಕ್ಷ್ಮವೆಂದೆನ್ನದೆ
ಘನಕ್ಕೆ ಘನ ಮಹಾಘನ ಕಾಯ ಜೀವವೊಂದಯ್ಯಾ.
ಅರ್ಥ ಪ್ರಾಣ ಅಭಿಮಾನ ಸವೆದಡೆ ಸಮಭೋಗರುಚಿಪ್ರಸಾದಿ.
ಈ ಉಭಯಲಿಂಗದ ಮಹಿಮೆಯನು ಇನ್ನು ಪಮಿಸಬಾರದು.
ರೂಹಿಸಿ ಭಾವಿಸಿ ಗುಣಪ್ರಪಂಚವನತಿಗಳೆದು ನಿರ್ವಿಕಲ್ಪಿತನಾದಾತ
ಆನೆಂಬ ಶಬ್ದವಳಿದುಳಿದ ಪ್ರಸಾದಗ್ರಾಹಕ ನಿಂದ ನಿಲವು,
ಪರತಂತ್ರ ಪರಿಭಾವ ಪ್ರಪಂಚುವ ಬಿಟ್ಟು ಘನರವಿಲೋಚನನಾಗಿ,
ಅರ್ಪಿತ ಭುಂಜಕನಲ್ಲ, ಆದಿವಿಡಿದಾಗಮನಲ್ಲ.
ಅರ್ಪಿತ ಅನರ್ಪಿತರಹಿತ ಕೂಡಲಚೆನ್ನಸಂಗನಲ್ಲಿ
ಆತ ದಿಟಪ್ರಸಾದಿ. || ೧೪೧ ||

೮೨೮

ಅಂಗಲೀಯ ಲಿಂಗಲೀಯ, ಅಭಾವಲೀಯ, ಸಭಾವಲೀಯ,
ಸಂಗದಲ್ಲಿ ಪ್ರಸಾದಿ, ಅಕೃತವಾದ ಪ್ರಸಾದಿ.
ಆಧಾರ ಆಧೇಯ ದೇವನಾಮಕ್ರೀಯನು ಮನಕ್ಕೆ ತಾರದ ಪ್ರಸಾದಿ.
ಇದು ಕಾರಣ,- ಕೂಡಲಚೆನ್ನಸಂಗಾ
ಮಹಾಘನದಲ್ಲಿ ನಿಂದ ಪ್ರಸಾದಿ. || ೧೪೨ ||

೮೨೯

ಆದಿ ಅನಾದಿಯಿಲ್ಲದಂದು, ಮಹಾಬಯಲು ಬೆಳಗಿಲ್ಲದಂದು
ನಿಜಪ್ರಸಾದವ ತೋರಿಸಾ.
ನಾದವನೆ ಬಯಲು ನುಂಗಿ, ಬಯಲನೆ ಕಳೆ ನುಂಗಿ
ಹೊಳೆವ ಲಿಂಗವಿದೆಲ್ಲಿಯದೊ?
ಪ್ರಸಾದಿಯ ಪ್ರಸಾದ ಮುಟ್ಟಿದಲ್ಲದೆ ಲಿಂಗಾರ್ಪಿತಕ್ಕೆ ಸಲ್ಲದು,
ಜಗಕ್ಕೆ ಪ್ರಸಾದಿಗಳೆಂತಪ್ಪರೊ?
ಅನಾದಿಯ ಸೋಂಕಿಲ್ಲವ ಕಾರಣ ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣನು ಅನಂತ ಕುಳರಹಿತನು. || ೧೪೩ ||

# ಐಕ್ಯನ ಪ್ರಾಣಲಿಂಗಿಸ್ಥಲ

೮೩೦

ಸಾವಧಾನಿ ಸರ್ವಸಂಸಾರಿ, ನಿಃಪ್ರಪಂಚಿ ನಿಸ್ಸಂಸಾರಿ.
ಅರ್ಪಿತಕ್ಕೆ ಅರಿವುಳ್ಳನ್ನಕ ಆಚಾರ್ಯನು.
ನಿಯತಾತ್ಮಂಗೆ ಇದಾವಂಗವೂ ಇಲ್ಲ,
ಕೂಡಲಚೆನ್ನಸಂಗನೆನ್ನದ ಸುಯಿಧಾನಿಗೆ. || ೧೪೪ ||

೮೩೧

ಭಕ್ತನಾದಡೆ ಲಿಂಗಸ್ಥಲವ ಮೆಟ್ಟಲಾಗದು,
ಶರಣನಾದಡೆ ಭಕ್ತಸ್ಥಲವ ಮೆಟ್ಟಲಾಗದು,
ಲಿಂಗೈಕ್ಯನಾದಡೆ ಪ್ರಸಾದಿಸ್ಥಲವ ಮೆಟ್ಟಲಾಗದು.
ಈ ತ್ರಿವಿಧ ಸಾಹಿತ್ಯ ಮಹಾಬೆಳಗಿನ ಬೆಳಗು
ಕೂಡಲಚೆನ್ನಸಂಗಮದೇವ. || ೧೪೫ ||

೮೩೨

ಲಿಂಗದ ರಚನೆಯ ಮಾಡುವರೆ ಇಲ್ಲಿಯ ರಚನೆ ಕೆಡಬೇಕು.
ರಚನೆ ರುಚಕ ಭುಂಜಕ ಹೊಂದಿದ ಸುಗಸೂತಕವಿಲ್ಲ, ಲಿಂಗವಿಯೋಗವಿಲ್ಲ,
ಅಂಗದ ನಿಲವ ಸಂಗಕ್ಕೆ ತರಲುಂಟೆ?
ಆನಂದದಿಂದ ವಿಚಾರಿಸಿ ನೋಡಲು ಸಂಗ ನಿಸ್ಸಂಗ ನೋಡಾ!
ಕೂಡಲಚೆನ್ನಸಂಗನೆಂಬ ನಿಶ್ಚಿಂತ ನಿರಾಳವು. || ೧೪೬ ||

೮೩೩

ಸಾರಾಯ ಪದಾರ್ಥವನಾರಯ್ಯಾ ಅರಿವರು?
ಆರರಿಂದ ಬೇರೆ ತೋರಲಿಲ್ಲೆನಿಸಿತ್ತು.
ಹೆಸರೆನಿಸಿಕೊಂಬಡೆ ಹೆಸರು ಮುನ್ನಿಲ್ಲ,
ಹೆಸರೆಲ್ಲವೂ ಪರಿಣಾಮಿಸಲಾಯಿತ್ತು.
ಕಂಡೆನೆಂದರೆ ಕಾಣಲಾಯಿತ್ತು, ಕಂಡು ನುಡಿಸುವಂಥದಲ್ಲ,
ಕಂಡಾತ ಕಲಿಕೆಯೊಳಗಿಲ್ಲದಂತಿಪ್ಪ, ಕಾರ್ಯವಿಲ್ಲದ ಕಾರಣಕರ್ತ.
ಆರರಿಂದತ್ತ ತಾನಿಲ್ಲೆಂದೆನಿಸಿಕೊಂಡ ಕೂಡಲಚೆನ್ನಸಂಗಯ್ಯಾ,

ಆ ಮಹಾಲಿಂಗದ ಅನುಭಾವ ಶರಣಫಲದ
ಸಂಬಂಧವ ಮೀರಿತ್ತು. || ೧೪೭ ||

೮೩೪

ನೋಡಿಹೆನೆಂದರೆ ದೃಷ್ಟಿ ಕೊಳ್ಳದು.
ಪೂಜಿಸಿಹೆನೆಂದರೆ ಪೂಜೆಗೊಳ್ಳದಿನ್ನೆಂತೊ!
ಅರಿದೆನೆಂದಡೆ ಏನೂ ಇಲ್ಲ,
ಘನದೃಷ್ಟ ಕೂಡಲಚೆನ್ನಸಂಗಾ
ಈ ಉಭಯಗೆಟ್ಟ ಲಿಂಗಾರ್ಚನೆ. || ೧೪೮ ||

೮೩೫

ಮನಸ್ಥಂ ಮನಮಧ್ಯಸ್ಥಂ ಮನಸಾ ಮನವರ್ಜಿತಂ।
ಮನಸಾ ಮನ ಆಲೋಕ್ಯ ಸ್ವಯಂ ಸಿದ್ಧಾಂತಯೋಗಿನಃ॥
ಅರಿದೆನೆಂಬ ಅರಿವು ಅರಿವನೆ ನುಂಗಿತ್ತು,
ಮರೆದೆನೆಂಬ ಮರಹು ಮರಹನೆ ನುಂಗಿತ್ತು.
ನೆನಹೆ ಅವಧಾನಗೆಟ್ಟಿತು ಕೂಡಲಚೆನ್ನಸಂಗನೆಂಬ ಲಿಂಗ
ಅವಧಾನವಿಲ್ಲಾಗಿ. || ೧೪೯ ||

೮೩೬

ಅರಿವಿಂದಲಾದ ಮರಹಿನ ಶಬ್ದವನರಿಯಲಾಗದು,
ಅರಿದಡದಕ್ಕೆ ಭವವು,
ಅರಿವರತು ಮರಹು ನಷ್ಟವಾಗಿ ಜ್ಞಾನ ಬೆಂದಲ್ಲಿ ನಿರ್ನಾಮವೆಲ್ಲಿಯದು?
ಜ್ಞಾನದೊಳಗಣ ಬುದ್ಧಿಯ ಭಸ್ಮವಾಗಿ ಧರಿಸಿದಲ್ಲಿ
ಕೂಡಲಚೆನ್ನಸಂಗಮದೇವರು ಸರ್ವನಿವಾಸಿ. || ೧೫೦ ||

೮೩೭

ಸ್ಥಲವಿಡಿದು ಸರ್ವದಲಾಯುತನಾಗಿ
ಸಹಜವಳಿವಟ್ಟಲ್ಲಿ ಇದದೆನ್ನಲುಂಟೆ?
ಭಾವವಳಿದು ನಿರ್ಭಾವವುಳಿದಲ್ಲಿ ಇದದೆನ್ನಲುಂಟೆ?
ಕದಂಬ ಕಳಾಸ (ಕಲಶ?) ಕೂಡಲಚೆನ್ನಸಂಗಯ್ಯ
ಸರ್ವಾಂಗಮಯವಾದಲ್ಲಿ. || ೧೫೧ ||

೮೩೮

ಜಗಭರಿತನೆನ್ನ ದೇವ, ಜಗವ ಹೊದ್ದನೆನ್ನ ದೇವ.
ಭಕ್ತನ ಕರಸ್ಥಲಕ್ಕೆ ಬಂದನೆನ್ನ ದೇವ, ಭಕ್ತನನವಗ್ರಹಿಸಿಕೊಂಡನಾಗಿ ಎನ್ನ ದೇವ.
"ಓಂ ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವಭ್ಯೋ ನಮಃ||
ಆಶಿನೇಭ್ಯಃ ಯಜಾಮ ದೇವಾನ್ಯದಿಶಕ್ನವಾಮ ಮಮಾಜ್ಯಾಯಸಃ|
ತಂ ಸಮಾವೃಕ್ಷಿ ದೇವಾ" ಎಂದುದಾಗಿ ಎನ್ನದೇವ.
ಇದು ಕಾರಣ, ಕೂಡಲಚೆನ್ನಸಂಗಮದೇವರು
ಅಕ್ಷರಾಕ್ಷರವ ಮೀರಿದ ಘನವು. || ೧೫೨ ||

೮೩೯

"ಅತೀತಃ ಪಂಥಾನಂ ತವ ಚ ಮಹಿಮಾ" ಎಂಬ ಶ್ರುತಿಗಳು
ನಿಮ್ಮ ಕಾಣಲರಿಯವು ದೇವಾ.
ಲಿಂಗದೇವಾ, ನಿಮ್ಮ ಮಹಿಮೆಯ ಸ್ತುತಿಯಿಸಿ ಕಾಣಲರಿಯವು ದೇವಾ.
ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ|
ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ||
ಎಂಬ ತುದಿ ಪದವು,
ಕೂಡಲಚೆನ್ನಸಂಗಮದೇವಾ ಪರವಿಲ್ಲಾಗಿ. || ೧೫೩ ||

೮೪೦

ಶೂನ್ಯ ಹುಟ್ಟದುದು, ನಿಶ್ಶೂನ್ಯವಿಲ್ಲವಂದು,
ಬ್ರಹ್ಮ ವಿಷ್ಣು ಮಹೇಶ್ವರರಿಲ್ಲದಂದು,
ಹದಿನಾಲ್ಕು ದಿಗುವಳಯವಿಲ್ಲದಂದು,
ಕೂಡಲಚೆನ್ನಸಂಗಯ್ಯನೆಂಬ ಹೆಸರು ಮುನ್ನಿಲ್ಲವಂದು. || ೧೫೪ ||

೮೪೧

ಏನೆಂಬೆನೇನೆಂಬೆ ಆಶ್ರಯವಿರಹಿತವ,
ಏನೆಂಬೆನೇನೆಂಬೆ ನಾಮ ನಿರ್ನಾಮವ,
ಏನೆಂಬೆನೇನೆಂಬೆ ಸಾರಾಯ ಸನುಮತವಲ್ಲದುದ,
ಏನೆಂಬೆನೇನೆಂಬೆ ದೇವಾ ಕ್ರೀಯ ಮೀರಿದ ಸಂಬಂಧವ,
ಕೂಡಲಚನ್ನಸಂಗಮದೇವಾ.
ಆನೆಂಬುದಿಲ್ಲದುದನೇನೆಂದುಪಮಿಸುವೆ. || ೧೫೫ ||

೮೪೨

ಸಹಜವೆನ್ನದೆ, ನಿಜವೆನ್ನದೆ, ಅಚಳವೆನ್ನದೆ, ಶೂನ್ಯವೆನ್ನದೆ,
ಅಖಂಡಿತ ಪರಿಪೂರ್ಣವೆನ್ನದೆ, ಏನೂ ಎನ್ನದೆ,
ಕೂಡಲಚೆನ್ನಸಂಗಾ ಲಿಂಗೈಕ್ಯವು. ॥ ೧೫೬ ॥

## ಐಕ್ಯನ ಶರಣಸ್ಥಲ

೮೪೩

ಸಮತೆ ಸಯುವಾದ ಶರಣಂಗೆ ಅರಿವ ಮರೆಯಲುಂಟೆ?
ಉಪಮೆ ನಿಃಸ್ಥಲವಾದ ಶರಣಂಗೆ ಶಬ್ದಸಂದಣಿ ಉಂಟೆ?
ಅಖಂಡಿತ ಲಿಂಗಕ್ಕೆ, ಅಪ್ರಮಾಣ ಶರಣಂಗೆ ಸೀಮೆ ಸಂಬಂಧವೆಂಬ ಸಂಕಲ್ಪವುಂಟೆ?
ಇದು ಕಾರಣ,–ಸುಳುಹಿಂಗೆ ಭವವಿಲ್ಲ, ಬಂಧನವಿಲ್ಲ
ಕೂಡಲಚೆನ್ನಸಂಗಯ್ಯಾ ನಿಮ್ಮ ಶರಣಂಗೆ. ॥ ೧೫೭ ॥

೮೪೪

ದೃಷ್ಟ ನಷ್ಟಕ್ಕೇನು ದೃಷ್ಟ? ಭಾವ ನಷ್ಟವೇ ದೃಷ್ಟ.
ಭಾವ ನಷ್ಟಕ್ಕೇನು ದೃಷ್ಟ? ಅನುಭಾವ ನಷ್ಟವೇ ದೃಷ್ಟ.
ಅನುಭಾವ ನಷ್ಟಕ್ಕೇನು ದೃಷ್ಟ? ಸ್ವಯ ಪರವಾವುದೆಂದರಿಯದುವೆ ದೃಷ್ಟ.
ಸ್ವಯ ಪರವಾವುದೆಂದರಿಯದಕ್ಕೇನು ದೃಷ್ಟ?
ಕೂಡಲಚೆನ್ನಸಂಗನೆಂದು ಎನ್ನದುವೆ ದೃಷ್ಟ. ॥ ೧೫೮ ॥

೮೪೫

ಓದಿದ ವೇದದಲ್ಲಿ ಏನಹುದಯ್ಯಾ? ಓದಿಸಬಾರದಂಥ ಲಿಂಗಸ್ಥಲ.
ಸಾಧಿಸಿದ ಶಾಸ್ತ್ರದಲೇನಹುದಯ್ಯಾ? ಸಾಧ್ಯವಾಗದಂಥ ಜಂಗಮಸ್ಥಲ.
ತರ್ಕಿಸಿದ ತರ್ಕದಲ್ಲಿ ಏನಹುದಯ್ಯಾ? ತರ್ಕಕ್ಕಗೋಚರವಹಂಥ ಪ್ರಸಾದಿಸ್ಥಲ.
ಓದು ವೇದಶಾಸ್ತ್ರ ತರ್ಕಕ್ಕಗೋಚರ
ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೧೫೯ ॥

೮೪೬

ಆನು, ನೀನು, ಅರಿದೆ ಮರೆದೆ, ಅಳಿದೆನುಳಿದೆನೆಂಬ ಸಂಶಯ ಭ್ರಮೆ,
ಅತತ್ವ ತತ್ವವಿವೇಕಭ್ರಮೆ, ಮೂಲ ಸ್ಥೂಲ ಸೂಕ್ಷ್ಮ ವಿಪರೀತ ಭ್ರಮೆ,
ಪುಣ್ಯಪಾಪ ಸ್ವರ್ಗ ನರಕ ಬಂಧಮೋಕ್ಷ ಪ್ರವರ್ತಕ ನಿವರ್ತಕ
ಆದಿಯಾದ ಸಪ್ತಕರ್ಮ ಬಂಧಭ್ರಮೆ, ಹುಸಿಜೀವ ಪರಮನೈಕ್ಯ ಸಂಧಾನ ಭ್ರಮೆ,
ಯೋಗದಾಸೆ ಸಿಲುಕುಭ್ರಮೆ, ಅಂತರ್ಮುಖಭ್ರಮೆ ಬಹಿರ್ಮುಖಭ್ರಮೆ,
ಅನೃತಭ್ರಮೆ ಸತ್ಯಭ್ರಮೆ ನಿತ್ಯಭ್ರಮೆ, ವಾಗದ್ವೈತಭ್ರಮೆ, ಅದ್ವೈತಭ್ರಮೆ,
ಮಂತ್ರಭ್ರಮೆ ತಂತ್ರಭ್ರಮೆ, ನಾಹಂ ಭ್ರಮೆ, ಕೋಹಂ ಭ್ರಮೆ, ಸೋಹಂ ಭ್ರಮೆ.
ತತ್ವ ಸಕರಣವೇಷ್ಟಿತ ಜಗತ್ರಯಕ್ಕೆಲ್ಲಾ ಮಾಯಾಮಯ.
ಕೂಡಲಚೆನ್ನಸಂಗಾ
ನಿಮ್ಮ ಶರಣಂಗಾವ ಭ್ರಮೆಯೂ ಇಲ್ಲ. ॥ ೧೬೦ ॥

೮೪೭

ಊರ್ಧ್ವಬಿಂದು ನಾದ ಮುಟ್ಟಲಿಕೆ ಜಂಗಮ,
ಮಧ್ಯಬಿಂದು ಊರ್ಧ್ವ ಮುಟ್ಟಲಿಕೆ ಸ್ಥಾವರ,
ಸ್ಥಾವರಬಿಂದು ಸ್ಥಾವರವಾದ ಊರ್ಧ್ವ ಮುಟ್ಟಲಿಕೆ ಭಕ್ತ,
ಭವಿ(ಭಕ್ತ?)ಬಿಂದು ನಾದ ಮುಟ್ಟಲಿಕೆ ಭವಿ.
ಇಂತು ಜಾತಿಸೂತಕ ಪ್ರೇತಸೂತಕವನಳಿದಾತಂಗೆ,
ಕಾಲವಿಲ್ಲ ಕರ್ಮವಿಲ್ಲ, ಭವಿಗೆ ಕೊಡಲಿಲ್ಲ ಭಕ್ತಂಗೆ ಕೊಡಲಿಲ್ಲ.
ಇದು ಕಾರಣ, ಕೂಡಲಚೆನ್ನಸಂಗಮದೇವಾ
ನಿಮ್ಮ ಶರಣಂಗಲ್ಲದೆ ಉಳಿದವರಿಗಪೂರ್ವ. ॥ ೧೬೧ ॥

೮೪೮

ತ್ರಿವಿಧವಿರಹಿತಲಿಂಗ, ಆಗಮವಿರಹಿತ ಪ್ರಸಾದಿ,
ಲಿಂಗವಿಲ್ಲದ ಜಂಗಮ, ಜಂಗಮವಿಲ್ಲದ ಲಿಂಗ,–ಇದ ಕೇಳ
ಗುರುವಿಲ್ಲದ ಶಿಷ್ಯ, ಶಿಷ್ಯನಿಲ್ಲದ ಗುರು,
ಇವೆಲ್ಲವ ಕಂಡು–ಯುಕ್ತಿಯಿಲ್ಲದ ಭಕ್ತಿ,
ಭಕ್ತಿಯಿಲ್ಲದ ಯುಕ್ತಿ ನೋಡಯ್ಯ!
ಇದು ಐಕ್ಯಸ್ಥಲವಲ್ಲ, ನಿಃಸ್ಥಲ ನಿರವಯ
ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೧೬೨ ॥

೮೪೯

ಶ್ರೀ ಗುರುಲಿಂಗ ತ್ರಿವಿಧ: ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರು.
ಶಿವಲಿಂಗ ತ್ರಿವಿಧ: ಕ್ರಿಯಾಲಿಂಗ, ಜ್ಞಾನಲಿಂಗ, ಭಾವಲಿಂಗ.
ಜಂಗಮಲಿಂಗ ತ್ರಿವಿಧ: ಸ್ವಯ ಚರ ಪರ–ಇಂತು ಸ್ಥಲ ೯.
ಆಗಮಲಿಂಗ ತ್ರಿವಿಧ: ಕ್ರಿಯಾಗಮ, ಭಾವಾಗಮ, ಜ್ಞಾನಾಗಮ.
ಕಾಯಲಿಂಗ ತ್ರಿವಿಧ: ಸಕಾಯ, ಅಕಾಯ, ಪರಕಾಯ.
ಆಚಾರಲಿಂಗ ತ್ರಿವಿಧ: ಧರ್ಮಾಚಾರ, ಭಾವಾಚಾರ, ಜ್ಞಾನಾಚಾರ.
ಇಂತು ಸ್ಥಲ ೯–ಉಭಯಸ್ಥಲ ೧೮.
ಅನುಗ್ರಹಲಿಂಗ ತ್ರಿವಿಧ: ಕಾರ್ಯಾನುಗ್ರಹ, ಇಂದ್ರಿಯಾನುಗ್ರಹ, ಪ್ರಾಣಾನುಗ್ರಹ.
ಅರ್ಪಿತಲಿಂಗ ತ್ರಿವಿಧ: ಕಾಯಾರ್ಪಿತ, ಕರಣಾರ್ಪಿತ, ಭಾವಾರ್ಪಿತ.
ತನುಗುಣಲಿಂಗ ತ್ರಿವಿಧ: ಶಿಷ್ಯ, ಶುಶ್ರೂಷೆ, ಸೇವ್ಯ.
ಇಂತುಸ್ಥಲ ೯–ತೃತೀಯ ಸ್ಥಲ ೨೭.
ಒಲವುಲಿಂಗ ತ್ರಿವಿಧ: ಜೀವಾತ್ಮ, ಅಂತರಾತ್ಮ, ಪರಮಾತ್ಮ.
ನಿರೂಪಲಿಂಗ ತ್ರಿವಿಧ: ನಿರ್ದೇಹಾಗಮ, ನಿರ್ಭಾವಾಗಮ, ನಷ್ಟಾಗಮ.
ಪ್ರಸಾದಲಿಂಗ ತ್ರಿವಿಧ: ಆದಿ ಪ್ರಸಾದಿ, ಅಂತ್ಯ ಪ್ರಸಾದಿ, ಸೇವ್ಯ ಪ್ರಸಾದಿ.
ಪಾದೋದಕಲಿಂಗ ತ್ರಿವಿಧ: ದೀಕ್ಷಾಪಾದೋದಕ, ಶಿಕ್ಷಾಪಾದೋದಕ,
ಜ್ಞಾನ ಪಾದೋದಕ. ಇಂತು ಸ್ಥಲ ೧೨–ಚತುರ್ಥಸ್ಥಲ ೩೯.
ಮೀರಿದ ಕ್ರಿಯಾ ದೀಕ್ಷಾಕ್ರಮದಿಂದತ್ತತ್ತಲು
ನಿಃಪತಿಲಿಂಗ ತ್ರಿವಿಧ: ಕ್ರಿಯಾ ನಿಃಪತಿ, ಭಾವನಿಃಪತಿ, ಜ್ಞಾನನಿಃಪತಿ.
ಆಕಾಶಲಿಂಗ ತ್ರಿವಿಧ: ಪಿಂಡಾಕಾಶ, ಬಿಂದ್ವಾಕಾಶ,ಮಹದಾಕಾಶ.
ಪ್ರಕಾಶಲಿಂಗ ತ್ರಿವಿಧ: ಕ್ರಿಯಾಪ್ರಕಾಶ, ಭಾವಪ್ರಕಾಶ, ಜ್ಞಾನಪ್ರಕಾಶ.
ಇಂತು ಸ್ಥಲ ೯, ಪಂಚಮಸ್ಥಲ ೪೮.
ಆ ಲಿಂಗೈಕ್ಯ ಕೊಂಪುದು ಪ್ರಸಾದ, ನಿಂದುದೋಗರ, ಚರಾಚರನಾಸ್ತಿ–
ಇಂತು ತ್ರಿವಿಧ.
ಭಾಂಡ, ಭಾಜನ, ಅಂಗಲೇಪ–ಇಂತು ತ್ರಿವಿಧ.
ಸ್ವಯ ಚರ ಪರವಿಯ[ದ], ಭಾವಾಭಾವನಷ್ಟ, ಜ್ಞಾನಶೂನ್ಯ–
ಇಂತು ಸ್ಥಲ ೯. ಷಡುಸ್ಥಲ ೫೭.
ಇಂತೀವಲ್ಲ ಸ್ಥಲಂಗಳನೊಳಕೊಂಡ ಮಹಾಮಹಿಮನು
ಜ್ಞಾನಿಯಲ್ಲ ಅಜ್ಞಾನಿಯಲ್ಲ, ಶೂನ್ಯನಲ್ಲ ಅಶೂನ್ಯನಲ್ಲ,
ಉಭಯಕುಳ ತಾನೊದರಿದ ಪರಮಜ್ಞಾನಿಗೆ ಕೊಳುಕೊಡೆಯಿಲ್ಲ.
ಸಾಕಾರ ಸಂಬಂಧವನುಯ, ನಿತ್ಯಮುಕ್ತ, ನಿರವಯ,

ಉಭಯಾತ್ಮಕ ತಾನು ಕೂಡಲಚೆನ್ನಸಂಗನೆಂದು
ಎನ್ನದ ಸುಯಿಧಾನಿ. || ೧೬೩ ||

೮೫೦

ಸಾಕಾರ ಹದಿನೆಂಟುಕುಳವಸಂಗದಲ್ಲಿ ಆಚರಿಸುತ್ತ
ಅಲ್ಲಲ್ಲಿಗೆ ಭಕ್ತ, ಅಲ್ಲಲ್ಲಿಗೆ ಮಾಹೇಶ್ವರ, ಅಲ್ಲಲ್ಲಿಗೆ ಪ್ರಸಾದಿಯಾಗಿಪ್ಪ
ಆ ಸಾಕಾರವನೇನೆಂದುಪಮಿಸುವೆ!
ನಿರಾಕಾರ ಹದಿನೆಂಟುಕುಳವನಾತ್ಮನಲ್ಲಿ ಆಚರಿಸುತ್ತ
ಅಲ್ಲಲ್ಲಿಗೆ ಪ್ರಾಣಲಿಂಗಿ, ಅಲ್ಲಲ್ಲಿಗೆ ಶರಣ, ಅಲ್ಲಲ್ಲಿಗೆ ಐಕ್ಯನಾಗಿಪ್ಪ
ಆ ನಿರಾಕಾರವನೇನೆಂದುಪಮಿಸುವೆ!
ಇಂತು ಉಭಯಸ್ಥಲ ಒಂದಾಗಿ ನಿಂದ ನಿಜದ ಘನದಲ್ಲಿ
ಕುಳವಡಗಿತ್ತು, ಕೂಡಲಚೆನ್ನಸಂಗಾ. || ೧೬೪ ||

೮೫೧

ಅರಿವಾರಡಿಗೊಂಡುದು ಮನ, ಮನದಲ್ಲಿ ಘನವಡಗಿತ್ತು,
ಆಶ್ರಯವಿಲ್ಲ.
ಬಲ್ಲೆನೆಂಬರೆ ನೆರೆ ಅರಿತ ಅರಿವು ಘನ,
ಘನದಲ್ಲಿ ಆಶ್ರಯ ನಿರಾಶ್ರಯವಿಲ್ಲ,
ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ. || ೧೬೫ ||

೮೫೨

ಭಕ್ತಸ್ಥಲ ಘನವೆಂದೆಂಬಿರಿ, ಭಕ್ತಸ್ಥಲಕ್ಕೆ ಮಾಹೇಶ್ವರಸ್ಥಲವೆ ಪ್ರತಿ,
ಮಾಹೇಶ್ವರಸ್ಥಲಕ್ಕೆ ಪ್ರಸಾದಿಸ್ಥಲವೆ ಪ್ರತಿ,
ಪ್ರಸಾದಿಸ್ಥಲಕ್ಕೆ ಪ್ರಾಣಲಿಂಗಿಸ್ಥಲವೆ ಪ್ರತಿ.
ಪ್ರಾಣಲಿಂಗಿಸ್ಥಲಕ್ಕೆ ಶರಣಸ್ಥಲವೆ ಪ್ರತಿ,
ಶರಣಸ್ಥಲಕ್ಕೆ ಐಕ್ಯಸ್ಥಲವೆ ಪ್ರತಿ.
ಪ್ರತಿಯುಳ್ಳದರಿವೆ? ಪ್ರತಿಯುಳ್ಳುದು ಜ್ಞಾನವೆ?
ಪ್ರತಿಯುಳ್ಳುದು ನಿರ್ಭಾವವೆ? ಪ್ರತಿಯುಳ್ಳುದು ಮೋಕ್ಷವೆ?
ಇಂತು ಸ್ಥಲದ ಮಾರ್ಗವಲ್ಲ, ಸಾವಯವಲ್ಲ, ನಿರವಯವಲ್ಲ,
ಸ್ಥಲವೂ ಅಲ್ಲ ನಿಃಸ್ಥಲವೂ ಅಲ್ಲ, ಒಳಗೂ ಅಲ್ಲ, ಹೊರಗೂ ಅಲ್ಲ,
ಕೂಡಲಚೆನ್ನಸಂಗಾ ನಿಮ್ಮ ಶರಣ. || ೧೬೬ ||

೮೫೩

ಅಂಗದ ಪಾದತೀರ್ಥವ ಲಿಂಗದ ಮಜ್ಜನಕ್ಕೆರೆವುದು,
ಲಿಂಗದ ಪಾದತೀರ್ಥವ ಪಂಚಪಾದಾರ್ಚನೆಯ ಮಾಡುವದು
ಮಾಡಿದ ಪ್ರಾಣಂಗೆ ಪರಿಣಾಮವನೈದಿಸುವದು.
ಇಂತೀ ತ್ರಿವಿಧ ಉದಕದ ಭೇದವನರಿಯದೆ,
ಆವನೊಬ್ಬ ಮಜ್ಜನಕ್ಕೆರೆದಡೆ
ಭವಿಚಾಂಡಾಲರ ಮೂತ್ರದಲ್ಲಿ ಎರೆದಂತೆ ಕಾಣಾ
ಕೂಡಲಚೆನ್ನಸಂಗಮದೇವಯ್ಯಾ. ॥ ೧ ॥

೮೫೪

ಅಂಗದ ಮೇಲಣ ಲಿಂಗವೆಲ್ಲಿಯಾದರೂ ಉಂಟು,
ಪ್ರಾಣದ ಮೇಲಣ ಲಿಂಗವಪೂರ್ವ.
ಆವರನೆ ಅರಸಿ ತೊಳಲಿ ಬಳಲುತ್ತಿದೇನಯ್ಯಾ.
ಇದು ಕಾರಣ– ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣರು ಸಕೃತ್ ಕಾಣಲಾರರು. ॥ ೨ ॥

೮೫೫

ಅಂಗದ ಮೇಲಣ ಲಿಂಗ ಹಿಂಗದಂತಿರಬೇಕು,
ಅಂಗಕ್ಕೆ ಲಿಂಗಕ್ಕೆ ಸಂಬಂಧವೇನೊ ಮನ ಮುಟ್ಟದನ್ನಕ್ಕರ?
ಕಾಯ ಕಾಯಕವ ಮಾಡುತ್ತಿರಲು,
ಮನವು ಲಿಂಗದಲ್ಲಿ ಬೆರಸಿ ತೆರಹಿಲ್ಲದಿಪ್ಪ ಮಡಿವಾಳನ ಪರಿಯ ನೋಡಾ!
ಅಂಗ ಲಿಂಗ ಸಂಗವೆಂಬ ಸಂದು ಸಂಶಯವಳಿದು,
ಸರ್ವಾಂಗಲಿಂಗಸಂಬಂಧಿ ಕೂಡಲಚೆನ್ನಸಂಗಯ್ಯನಲ್ಲಿ
ಮಡಿವಾಳ ಮಾಚಯ್ಯನು! ॥ ೩ ॥

೮೫೬

ಅಂಗದ ಮೇಲಿಹ ಲಿಂಗಕ್ಕರ್ಪಿಸಿದಲ್ಲದೆ ಕೊಳಲಾಗದು.
ಅಂಗೈಯಲ್ಲಿ ಹಿಡಿದು ಅರ್ಪಿಸಿಹೆನೆಂದಡೆ ಅರ್ಪಿತವಾಗದು.
ಇನ್ನು ಅರ್ಪಿಸುವ ಪರಿ ಎಂತೆಂದಡೆ:
ನಾಸಿಕದಲ್ಲಿ ಗಂಧ ಅರ್ಪಿತ, ಜಿಹ್ವೆಯಲ್ಲಿ ರುಚಿ ಅರ್ಪಿತ,
ನೇತ್ರದಲ್ಲಿ ರೂಪು ಅರ್ಪಿತ, ತ್ವಕ್ಕಿನಲ್ಲಿ ಸ್ಪರ್ಶನ ಅರ್ಪಿತ,
ಶ್ರೋತ್ರದಲ್ಲಿ ಶಬ್ದ ಅರ್ಪಿತ, ಹೃದಯದಲ್ಲಿ ಪರಿಣಾಮ ಅರ್ಪಿತ.

ಇದನರಿದು ಭೋಗಿಸಬಲ್ಲಡೆ ಪ್ರಸಾದ.
ಈ ಕ್ರಮವನರಿಯದೆ ಕೊಂಡ ಪ್ರಸಾದವೆಲ್ಲವು ಅನರ್ಪಿತ.
ನುಂಗಿದ ಉಗುಳೆಲ್ಲವು ಕಿಲ್ಬಿಷ, ಕೂಡಲಚೆನ್ನಸಂಗಮದೇವಾ. ॥ ೪ ॥

೮೫೭

ಅಂಗದ ಮೇಲೆ ಆಚಾರಲಿಂಗಸ್ವಾಯತವಾಯಿತ್ತು;
ಪ್ರಾಣದ ಮೇಲೆ ಜಂಗಮಲಿಂಗಸ್ವಾಯತವಾಯಿತ್ತು;
ಆತ್ಮನ ಮೇಲೆ ಸಮ್ಯಗ್‌ಜ್ಞಾನಲಿಂಗ ಸ್ವಾಯತವಾಯಿತ್ತು.
ಇಂತೀ ತ್ರಿವಿಧಕ್ಕೆ ತ್ರಿವಿಧ ಸ್ವಾಯತವಾಗಿಪ್ಪ
ನಮ್ಮ ಕೂಡಲಚೆನ್ನಸಂಗನ ಶರಣ ಬಸವಣ್ಣಂಗೆ
ನಮೋ ನಮೋ ಎನುತಿರ್ದೆನು. ॥ ೫ ॥

೮೫೮

ಅಂಗದ ಮೇಲೆ ಆಯತವಾದುದೆ ಇಷ್ಟಲಿಂಗ.
ಇಷ್ಟಲಿಂಗವಿಡಿದು ಪ್ರಾಣಲಿಂಗಸ್ವಾಯತ.
ಪ್ರಾಣಲಿಂಗ ಉದಿಸಿದಲ್ಲದೆ ಇಷ್ಟಲಿಂಗವ ಕಾಣಬಾರದು.
ಈ ಭೇದವ ಭೇದಿಸಬಲ್ಲಡೆ ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು. ॥ ೬ ॥

೮೫೯

ಅಂಗದ ಮೇಲೆ ಲಿಂಗಯುಕ್ತವಾದ ಭಕ್ತನು
ಆ ಭಕ್ತಿಯಾಚಾರದ ನೆಲೆಯನರಿಯದೆ
ಸಂಬಂಧಕ್ಕನ್ಯವಾದ ನಂದಿ ವೀರಭದ್ರ ಮತ್ತೆ ಲಿಂಗಂಗಳೆಂಬನಾದಿಯಾದ
ಭವಿಶೈವದೈವಂಗಳ ಹೆಸರಿನಲ್ಲಿ ಮೀಸಲುವಿಡಿದು ಬಾಸಣಿಸಿ
ಮನೆನೈವಕ್ಕೆಂದು ನೇಮಿಸಿ ಮಾಡಿದ ಪಾಕವ
ತನ್ನ ಕರಸ್ಥಲದ ನಿಜ ವೀರಶೈವಲಿಂಗಕ್ಕೆ
ಓಗರವೆಂದರ್ಪಿಸುವದು ಅನಾಚಾರ, ಪಂಚಮಹಾಪಾತಕ.
ಅವನು ಸದಾಚಾರಕ್ಕೆ ಹೊರಗು, ಅದೇನು ಕಾರಣವೆಂದೊಡೆ:
ಅದು ಶೈವದೈವೋಚ್ಛಿಷ್ಟವಾದ ಕಾರಣ.
ಅದರಿಂದಲೂ ಭವಿಯ ಮನೆಯ ಅಶನ ಉತ್ತಮ.
ಅದೆಂತೆಂದೊಡೆ: ಅದು ಅನ್ನವಾದ ಕಾರಣ.
ಆ ಅನ್ನದ ಪೂರ್ವಾಶ್ರಯವ ಕಳೆಯಬಹುದಾಗಿ
ಆ ಉಚ್ಛಿಷ್ಟದ ಪೂರ್ವಾಶ್ರಯ ಹೋಗದಾಗಿ. ಅದೆಂತೆಂದೊಡೆ:
ಭವಿಹಸ್ತಕೃತಂ ಪಾಕಂ ಲಿಂಗನೈವೇದ್ಯ ಕಿಲ್ಬಿಷಂ

ಶಿವಭಕ್ತ ಕೃತಂ ಪಾಕಂ ಲಿಂಗನೈವೇದ್ಯಮುತ್ತಮಂ– ಎಂದುದಾಗಿ
ಭಕ್ತಂಗೆ ಭವಿಯ ಮನೆಯ ಅಶನ ನಾಯಡಗು ನರಮಾಂಸ
ಕ್ರಿಮಿ ಮಲಕ್ಕೆ ಸಮವೆಂದರಿದು ಶಿವಭಕ್ತರಾದವರು ಮುಟ್ಟರು;
ಅದಕಿಂದಲೂ ಕರಕಷ್ಟ ಕರಕಷ್ಟ ನೋಡಾ.
ಅರೆ ಭಕ್ತರು ತಮ್ಮ ಕುಲದೈವವ ಕೂರ್ತು ಮಾಡಿದ
ಆ ಭವಿ ಶೈವ ದೈವೋಚ್ಛಿಷ್ಟವ
ತಾ ನೆರೆ ಭಕ್ತನಾಗಿ ಆಚಾರವನನುಸರಣೆಯ ಮಾಡಿಕೊಂಡು
ಆ ಅರೆ ಭಕ್ತರ ಮನೆಯಲ್ಲಿ ಹೊಕ್ಕು ಲಿಂಗಾರ್ಚನೆಯ ಮಾಡುವವಕಿಂದಲೂ
ಹೊರಗಣ ಹೊಲೆಯರ ಮನೆಯ ಅನ್ನವೇ ಮಿಗೆ ಮಿಗೆ ಉತ್ತಮ ಕಾಣಾ
ಕೂಡಲಚೆನ್ನಸಂಗಯ್ಯಾ. ॥ ೭ ॥

೮೬೦

ಅಂಗದ ಮೇಲೆ ಲಿಂಗವ ಕಟ್ಟಿ ಸುಳಿವಾತ ಜಂಗಮವಲ್ಲ;
[ಆ] ಜಂಗಮಕ್ಕೆ ಮಾಡುವಾತ ಭಕ್ತನಲ್ಲ.
ಉಭಯ ಕುಲವಳಿದಾತ ಜಂಗಮ,
ಆ ಜಂಗಮಕ್ಕೆ ಅನುವರಿದು ಮಾಡುವಾತ ಭಕ್ತ.
ಇದು ಕಾರಣ–ಕೂಡಲಚೆನ್ನಸಂಗಯ್ಯಾ
ಉಭಯಕುಲವಳಿದ ಭಕ್ತ ಜಂಗಮ ಅಪೂರ್ವ. ॥ ೮ ॥

೮೬೧

ಅಂಗದ ಮೇಲೆ ಲಿಂಗವಿಲ್ಲದನ್ನಕ್ಕರ,
ಪ್ರಾಣದಲ್ಲಿ ಲಿಂಗಪರಿಣಾಮವನೆಯ್ದುವ ಪರಿಯೆಂತಯ್ಯಾ?
ಅಂಗತ್ರಯವುಳ್ಳವರು ಲಿಂಗತ್ರಯಸಂಪನ್ನರಾಗಬೇಕು,
ಒಂದಂಗ ವಿರಹಿತರಾಗಿಪ್ಪವರುಂಟೆ?
ಕಂಗಳ ನೋಟಕ್ಕೆ ಇಂಬಾವುದು ಹೇಳಾ?
ಒಂದಂಗ ಬಿಟ್ಟು ಒಂದಂಗ ತೋರದಾಗಿ.
ಸಂದುಭೇದವಿಲ್ಲದಿಪ್ಪ ಮಡಿವಾಳನ ನಿಲವು
ಕೂಡಲಚೆನ್ನಸಂಗಯ್ಯನಲ್ಲಿ ನಿನಗೆಂತು ಸಾಧ್ಯವಾಯಿತ್ತು ಹೇಳಾ
ಸಿದ್ಧರಾಮಯ್ಯ? ॥ ೯ ॥

೮೬೨

ಅಂಗದ ಮೇಲೆ ಲಿಂಗವುಳ್ಳುದೆಲ್ಲಾ ಸಂಗಮನಾಥನೆಂಬ ಭಾವ
ಬಸವಣ್ಣಂಗಾಯಿತ್ತಲ್ಲದೆ, ಎನಗೆ ಆ ಭಾವವಿಲ್ಲ ನೋಡಾ.

ಲಿಂಗೈಕ್ಯ ಶರಣರ ಕಂಡಡೆ ಕರುಣಾಮೃತ ಸುರಿವುದೆನಗೆ.
ಅವರ ಪಾದಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರವ
ಮಾಡುವುದೆನ್ನ ಮನವು.
ಕೂಡಲಚೆನ್ನಸಂಗಮದೇವಾ, ನಿಮ್ಮ ಶರಣ ಪ್ರಭುವೆಂಬ ಜಂಗಮವ ಕಂಡು
ಪೂಜಿಸಿ ಪೂಜಿಸಿ ದಣಿಯದೆನ್ನ ಮನವು. ॥ ೧೦ ॥

೮೬೩

ಅಂಗದ ಮೇಲೆ ಲಿಂಗಸಾಹಿತ್ಯವನುಳ್ಳ ನಿಜವೀರಶೈವ ಸಂಪನ್ನರು
ತಮ್ಮ ಸ್ವಯಾಂಗಲಿಂಗವನರ್ಚಿಸುವಲ್ಲಿ ಭವಿಶೈವ ಭಿನ್ನ ಕರ್ಮಿಗಳಂತೆ
ಅಂಗನ್ಯಾಸ ಪಂಚಮಶುದ್ಧಿ ಮೊದಲಾದ
ಅಶುದ್ಧಭಾವವಪ್ಪ ಕ್ಷುದ್ರ ಕರ್ಮಂಗಳ ಹೊದ್ದಲಾಗದು.
ಅದೆಂತೆಂದೊಡೆ: "ನಕಾರಮಾತ್ಮಶುದ್ಧಿಶ್ಚ ಮಕಾರಂ ಸ್ನಾನಶೋಧನಂ
ಶಿಕಾರಂ ಲಿಂಗ ಶುದ್ಧಿಶ್ಚ ವಾಕಾರಂ ದ್ರವ್ಯ ಶೋಧನಂ
ಯಕಾರಂ ಮಂತ್ರಶುದ್ಧಿಶ್ಚ ಪಂಚಮಶುದ್ಧಿ ಪ್ರಕೀರ್ತಿತಾ
ಕಾಯಶುದ್ಧಿಶ್ಯಾತ್ಮಶುದ್ಧಿಶ್ಚಾಂಗನ್ಯಾಸ ಕರಸ್ಯ ಚ
ಸರ್ವಶುದ್ಧಿ ಭವೇ ನಿತ್ಯಂ ಲಿಂಗಧಾರಣಮೇವ ಚ"–ಇಂತೆಂದುದಾಗಿ.
ಅವಲ್ಲದೆ ಅರ್ಘ್ಯ ಪಾದ್ಯ ಆಚಮನಂಗಳು ಮೊದಲಾದ ಉಪಪಾತ್ರಗಳಲ್ಲಿ
ಅಗಣಿತಂಗೆ ಅಳತೆಯ ನೀರನೆರೆದು
ಸುಖಿಮುಖಾರ್ಪಿತಕ್ಕೆ ಸಲುವ ಸುರಸದ್ರವ್ಯಂಗಳಪ್ಪ ಪಂಚಾಮೃತಂಗಳ
ನಿರ್ಮಲನಪ್ಪ ನಿಜಲಿಂಗದ ಮಸ್ತಕಕ್ಕೆರೆದು ಜಿಡ್ಡು ಮಾಡಿ ತೊಳೆವ
ಅಜ್ಞಾನಿ ನರಕಜೀವಿಗಳ ಮುಖವ ನೋಡಲಾಗದು.
ಅದೇನುಕಾರಣವೆಂದಡೆ:
"ಅರ್ಘ್ಯ ಪಾದ್ಯಂ ತಥಾಚಮ್ಯ ಸ್ನಾನಂ ಪಂಚಾಮೃತಂ ಯದಿ
ಲಿಂಗದೇಹಿ ಸ್ವಲಿಂಗೇಷು ಕೃತಾರ್ಚಂತೇ ಬಹಿರ್ನರಃ
ತೇ ಪಾಷಂಡಂ ಕೃತಂ ತೇನ ಕೃತ ಕರ್ಮನರ ನಾರಕೀ"–ಇಂತೆಂದುದಾಗಿ.
ಇದು ಕಾರಣ ಸ್ವಯಾಂಗಲಿಂಗದೇಹಿಗಳು ತಮ್ಮ ಲಿಂಗಮಂತ್ರವಿಡಿದು ಬಂದು
ಲಿಂಗೋದಕ ಪಾದೋದಕಂಗಳಲ್ಲಿ
ತಮ್ಮ ಕರ ಮುಖ ಪದ ಪ್ರಕ್ಷಾಲನವ ಮಾಡಿಕೊಂಬುದೆ?
ಅಂಗಲಿಂಗಿಗಳಿಗೆ ಸ್ವಯಾರ್ಘ್ಯ ಪಾದ್ಯಾಚಮನವೆಂಬುದನರಿಯವೆ
ಕೃತಕರ್ಮ ಭವಿಜೀವಿ ಶೈವಪಾಷಂಡರಂತೆ ಭಿನ್ನವಿಟ್ಟು ಮಾಡಿ
ಫಲಪದಂಗಳನೈದಿಹೆನೆಂಬ ನರಕಜೀವಿಗಳನು ಕೂಡಲಚೆನ್ನಸಂಗಯ್ಯ
ರವಿ ಸೋಮರುಳ್ಳನ್ನಕ್ಕ
ನಾಯಕ ನರಕದಲ್ಲಿಕ್ಕುವ. ॥ ೧೧ ॥

೮೬೪

ಅಂಗದ ಮೇಲೆ ಲಿಂಗಸಾಹಿತ್ಯವನುಳ್ಳ ಭಕ್ತಾಂಗನೆಯರು
ತಮ್ಮ ಲಿಂಗಶರೀರಂಗಳ ಮಧ್ಯದಲ್ಲಿ
ಹರಭಕ್ತಿಗೆ ಹೊರಗಾದ ಅಸು[ರಾಂಶಿ]ಕವಪ್ಪ
ಪಸುರು ಹಚ್ಚೆಗಳೆಂಬ ಪತಿತ ಲೇಖನ ಇವಾದಿಯಾದ
ಅನ್ಯ ಚಿಹ್ನಗಳನು ಅಂಕಿತಧಾರಣ ಲೇಖನಂಗಳ ಮಾಡಿಕೊಂಡು
ಮತ್ತೆ ತಾವು ಲಿಂಗವನರ್ಚಿಸಿ ಭಕ್ತರಾದೆವೆಂಬ
ಈ ಭಂಗಮಾರಿ ಹೊಲೆಜಂಗುಳಿಗಳಿಗೆ
ಉಪದೇಶವ ಕೊಟ್ಟ ಗುರು, ಪ್ರಸಾದ ನೀಡುವ ಜಂಗಮ,
ಅವರಗೊಡಗೂಡಿಕೊಂಡು ನಡೆವ ಭಕ್ತತತಿ
ಈ ಚತುರ್ವಿಧರು ಶ್ವಪಚಗೃಹದ ಶ್ವಾನಯೋನಿಗಳಲ್ಲಿ
ಶತಸಹಸ್ರ ವೇಳೆ ಬಂದು ನರಕವಿಪ್ಪತ್ತೆಂಟುಕೋಟಿಯನೈದುವರು,
ಅದೆಂತೆಂದೊಡೆ:
“ಭಕ್ತನಾರೀ ಸ್ವಯಾಂಗೇಷು ಪತಿತಾದ್ಯನ್ಯ ಚಿಹ್ನಯೇತ್
ಲೇಖನಾಂಕಃ ಯದಿ ಕೃತ್ವಾ ತೇಪಿ ಸ್ತ್ರೀ ಪತಿತ ಸ್ತ್ರೀಣಾಂ
ತಸ್ಯೋಪದೇಶ ಶೇಪಂಚ ದತ್ವಾಶ್ಚೈ ಗುರುಃ ಚರಾನ್
ತಪತ್ಸಂಗ ಸಯೋದ್ಭಕ್ತಾ ತದಾದಿ ಚತುರಾಸ್ವಯಂ
ಶ್ವಾನಯೋನಿ ಶತಂಗತ್ವಾಶ್ಚಾಂಡಾಲ ಗೃಹಮಾಚರೇತ್
ಅಷ್ಟವಿಂಶತಿ ಕೋಟ್ಯಸ್ತು ನರಕಂ ಯಾಂತಿ ಸಧ್ರುವಂ”
ಇಂತೆಂದುದಾಗಿ
ಇದು ಕಾರಣ ಇಂತಪ್ಪ ಅನಾಚಾರಿಗಳನು ಕೂಡಲಚೆನ್ನಸಂಗಯ್ಯ
ಅಘೋರ ನರಕದಲ್ಲಿಕ್ಕುವ. || ೧೨ ||

೮೬೫

ಅಂಗದ ಮೇಲೆ ಲಿಂಗಸಾಹಿತ್ಯವಾದ ಬಳಿಕ, ಅಂಗವೆ ಲಿಂಗ,
ಮನದ ಮೇಲೆ ಲಿಂಗಸಾಹಿತ್ಯವಾದ ಬಳಿಕ, ಕರಣಂಗಳೆ ಲಿಂಗ,
ಪ್ರಾಣದ ಮೇಲೆ ಲಿಂಗಸಾಹಿತ್ಯವಾದ ಬಳಿಕ,
ಅರಿವಿನ ವಿಷಯಾದಿಭೋಗಂಗಳೆ ಲಿಂಗ–
ಅದು ಕಾರಣ ಸರ್ವಾಂಗಲಿಂಗ ಸರ್ವಭೋಗ ಲಿಂಗಭೋಗ
ಕೂಡಲಚೆನ್ನಸಂಗಮದೇವಾ. || ೧೩ ||

## ಐಕ್ಯನ ಪ್ರಾಣಲಿಂಗಿಸ್ಥಲ

೮೩೦

ಸಾವಧಾನಿ ಸರ್ವಸಂಸಾರಿ, ನಿಃಪ್ರಪಂಚಿ ನಿಸ್ಸಂಸಾರಿ.
ಅರ್ಪಿತಕ್ಕೆ ಅರಿವುಳ್ಳನ್ನಕ ಆಚಾರ್ಯನು.
ನಿಯತಾತ್ಮಂಗೆ ಇದಾವಂಗವೂ ಇಲ್ಲ,
ಕೂಡಲಚೆನ್ನಸಂಗನೆನ್ನದ ಸುಯಿಧಾನಿಗೆ. ॥ ೧೪೪ ॥

೮೩೧

ಭಕ್ತನಾದಡೆ ಲಿಂಗಸ್ಥಲವ ಮೆಟ್ಟಲಾಗದು,
ಶರಣನಾದಡೆ ಭಕ್ತಸ್ಥಲವ ಮೆಟ್ಟಲಾಗದು,
ಲಿಂಗೈಕ್ಯನಾದಡೆ ಪ್ರಸಾದಿಸ್ಥಲವ ಮೆಟ್ಟಲಾಗದು.
ಈ ತ್ರಿವಿಧ ಸಾಹಿತ್ಯ ಮಹಾಬೆಳಗಿನ ಬೆಳಗು
ಕೂಡಲಚೆನ್ನಸಂಗಮದೇವ. ॥ ೧೪೫ ॥

೮೩೨

ಲಿಂಗದ ರಚನೆಯ ಮಾಡುವರೆ ಇಲ್ಲಿಯ ರಚನೆ ಕೆಡಬೇಕು.
ರಚನೆ ರುಚಿಕ ಭುಂಜಕ ಹೊಂದಿದ ಸುಗಸೂತಕವಿಲ್ಲ, ಲಿಂಗವಿಯೋಗವಿಲ್ಲ,
ಅಂಗದ ನಿಲವ ಸಂಗಕ್ಕೆ ತರಲುಂಟೆ?
ಆನುದದಿಂದ ವಿಚಾರಿಸಿ ನೋಡಲು ಸಂಗ ನಿಸ್ಸಂಗ ನೋಡಾ!
ಕೂಡಲಚೆನ್ನಸಂಗನೆಂಬ ನಿಶ್ಚಿಂತ ನಿರಾಳವು. ॥ ೧೪೬ ॥

೮೩೩

ಸಾರಾಯ ಪದಾರ್ಥವನಾರಯ್ಯಾ ಅರಿವರು?
ಆರರಿಂದ ಬೇರೆ ತೋರಲಿಲ್ಲೆನಿಸಿತ್ತು.
ಹೆಸರೆನಿಸಿಕೊಂಬಡೆ ಹೆಸರು ಮುನ್ನಿಲ್ಲ,
ಹೆಸರೆಲ್ಲವೂ ಪರಿಣಾಮಿಸಲಾಯಿತ್ತು.
ಕಂಡೆನೆಂದರೆ ಕಾಣಲಾಯಿತ್ತು, ಕಂಡು ನುಡಿಸುವಂಥದಲ್ಲ,
ಕಂಡಾತ ಕಲಿಕೆಯೊಳಗಿಲ್ಲದಂತಿಪ್ಪ, ಕಾರ್ಯವಿಲ್ಲದ ಕಾರಣಕರ್ತ.
ಆರರಿಂದತ್ತ ತಾನಿಲ್ಲೆಂದೆನಿಸಿಕೊಂಡ ಕೂಡಲಚೆನ್ನಸಂಗಯ್ಯಾ,

ಆ ಮಹಾಲಿಂಗದ ಅನುಭಾವ ಶರಣಫಲದ
ಸಂಬಂಧವ ಮೀರಿತ್ತು. ॥ ೧೪೭ ॥

೮೩೪

ನೋಡಿಹೆನೆಂದರೆ ದೃಷ್ಟಿ ಕೊಳ್ಳದು.
ಪೂಜಿಸಿಹೆನೆಂದರೆ ಪೂಜೆಗೊಳ್ಳದಿನ್ನೆಂತೊ!
ಅರಿದೆನೆಂದಡೆ ಏನೂ ಇಲ್ಲ,
ಘನದೃಷ್ಟ ಕೂಡಲಚೆನ್ನಸಂಗಾ
ಈ ಉಭಯಗೆಟ್ಟ ಲಿಂಗಾರ್ಚನೆ. ॥ ೧೪೮ ॥

೮೩೫

ಮನಸ್ಥಂ ಮನಮಧ್ಯಸ್ಥಂ ಮನಸಾ ಮನವರ್ಜಿತಂ।
ಮನಸಾ ಮನ ಆಲೋಕ್ಯ ಸ್ವಯಂ ಸಿದ್ಧಾಂತಯೋಗಿನಃ॥
ಅರಿದೆನೆಂಬ ಅರಿವು ಅರಿವನೆ ನುಂಗಿತ್ತು,
ಮರೆದೆನೆಂಬ ಮರಹು ಮರಹನೆ ನುಂಗಿತ್ತು.
ನೆನಹೆ ಅವಧಾನಗೆಟ್ಟಿತು ಕೂಡಲಚೆನ್ನಸಂಗನೆಂಬ ಲಿಂಗ
ಅವಧಾನವಿಲ್ಲಾಗಿ. ॥ ೧೪೯ ॥

೮೩೬

ಅರಿವಿಂದಲಾದ ಮರಹಿನ ಶಬ್ದವನರಿಯಲಾಗದು,
ಅರಿದಡದಕ್ಕೆ ಭವವು,
ಅರಿವರತು ಮರಹು ನಷ್ಟವಾಗಿ ಜ್ಞಾನ ಬೆಂದಲ್ಲಿ ನಿರ್ನಾಮವೆಲ್ಲಿಯದು?
ಜ್ಞಾನದೊಳಗಣ ಬುದ್ಧಿಯ ಭಸ್ಮವಾಗಿ ಧರಿಸಿದಲ್ಲಿ
ಕೂಡಲಚೆನ್ನಸಂಗಮದೇವರು ಸರ್ವನಿವಾಸಿ. ॥ ೧೫೦ ॥

೮೩೭

ಸ್ಥಲವಿಡಿದು ಸರ್ವದಲಾಯತನಾಗಿ
ಸಹಜವಳವಟ್ಟಲ್ಲಿ ಇದದೆನ್ನಲುಂಟೆ?
ಭಾವವಳಿದು ನಿರ್ಭಾವವುಳಿದಲ್ಲಿ ಇದದೆನ್ನಲುಂಟೆ?
ಕದಂಬ ಕಾಳಾಸ (ಕಲಶ?) ಕೂಡಲಚೆನ್ನಸಂಗಯ್ಯ
ಸರ್ವಾಂಗಮಯವಾದಲ್ಲಿ. ॥ ೧೫೧ ॥

೮೩೮

ಜಗಭರಿತನೆನ್ನ ದೇವ, ಜಗವ ಹೊದ್ದನೆನ್ನ ದೇವ.
ಭಕ್ತನ ಕರಸ್ಥಲಕ್ಕೆ ಬಂದನೆನ್ನ ದೇವ, ಭಕ್ತನನವಗ್ರಹಿಸಿಕೊಂಡನಾಗಿ ಎನ್ನ ದೇವ.
"ಓಂ ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವಭ್ಯೋ ನಮಃ॥
ಆಶಿನೇಭ್ಯಃ ಯಜಾಮ ದೇವಾನ್ಯದಿಶಕ್ನವಾಮ ಮಮಾಜ್ಯಾಯಸಃ।
ತಂ ಸಮಾವೃಕ್ಷಿ ದೇವಾ" ಎಂದುದಾಗಿ ಎನ್ನದೇವ.
ಇದು ಕಾರಣ, ಕೂಡಲಚೆನ್ನಸಂಗಮದೇವರು
ಅಕ್ಷರಾಕ್ಷರವ ಮೀರಿದ ಘನವು. ॥ ೧೫೨ ॥

೮೩೯

"ಅತೀತಃ ಪಂಥಾನಂ ತವ ಚ ಮಹಿಮಾ" ಎಂಬ ಶ್ರುತಿಗಳು
ನಿಮ್ಮ ಕಾಣಲರಿಯವು ದೇವಾ.
ಲಿಂಗದೇವಾ, ನಿಮ್ಮ ಮಹಿಮೆಯ ಸ್ತುತಿಯಿಸಿ ಕಾಣಲರಿಯವು ದೇವಾ.
ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ।
ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ॥
ಎಂಬ ತುದಿ ಪದವು,
ಕೂಡಲಚೆನ್ನಸಂಗಮದೇವಾ ಪರವಿಲ್ಲಾಗಿ. ॥ ೧೫೩ ॥

೮೪೦

ಶೂನ್ಯ ಹುಟ್ಟದಂದು, ನಿಶ್ಶೂನ್ಯವಿಲ್ಲದಂದು,
ಬ್ರಹ್ಮ ವಿಷ್ಣು ಮಹೇಶ್ವರರಿಲ್ಲದಂದು,
ಹದಿನಾಲ್ಕು ದಿಗುವಳಯವಿಲ್ಲದಂದು,
ಕೂಡಲಚೆನ್ನಸಂಗಯ್ಯನೆಂಬ ಹೆಸರು ಮುನ್ನಿಲ್ಲದಂದು. ॥ ೧೫೪ ॥

೮೪೧

ಏನೆಂಬೆನೇನೆಂಬೆ ಆಶ್ರಯವಿರಹಿತವ,
ಏನೆಂಬೆನೇನೆಂಬೆ ನಾಮ ನಿರ್ನಾಮವ,
ಏನೆಂಬೆನೇನೆಂಬೆ ಸಾರಾಯ ಸನುಮತವಲ್ಲದುದ,
ಏನೆಂಬೆನೇನೆಂಬೆ ದೇವಾ ಕ್ರೀಯ ಮೀರಿದ ಸಂಬಂಧವ,
ಕೂಡಲಚೆನ್ನಸಂಗಮದೇವಾ.
ಆನೆಂಬುದಿಲ್ಲದುದನೇನೆಂದುಪಮಿಸುವೆ. ॥ ೧೫೫ ॥

೮೪೨

ಸಹಜವೆನ್ನದೆ, ನಿಜವೆನ್ನದೆ, ಅಚಳವೆನ್ನದೆ, ಶೂನ್ಯವೆನ್ನದೆ,
ಅಖಂಡಿತ ಪರಿಪೂರ್ಣವೆನ್ನದೆ, ಏನೂ ಎನ್ನದೆ,
ಕೂಡಲಚೆನ್ನಸಂಗಾ ಲಿಂಗೈಕ್ಯವು. || ೧೫೬ ||

## ಐಕ್ಯನ ಶರಣಸ್ಥಲ

೮೪೩

ಸಮತೆ ಸಯವಾದ ಶರಣಂಗೆ ಅರಿವ ಮರೆಯಲುಂಟೆ?
ಉಪಮೆ ನಿಃಸ್ಥಲವಾದ ಶರಣಂಗೆ ಶಬ್ದಸಂದಣಿ ಉಂಟೆ?
ಅಖಂಡಿತ ಲಿಂಗಕ್ಕೆ, ಅಪ್ರಮಾಣ ಶರಣಂಗೆ ಸೀಮೆ ಸಂಬಂಧವೆಂಬ ಸಂಕಲ್ಪವುಂಟೆ?
ಇದು ಕಾರಣ,–ಸುಳುಹಿಂಗೆ ಭವವಿಲ್ಲ, ಬಂಧನವಿಲ್ಲ
ಕೂಡಲಚೆನ್ನಸಂಗಯ್ಯಾ ನಿಮ್ಮ ಶರಣಂಗೆ. || ೧೫೭ ||

೮೪೪

ದೃಷ್ಟ ನಷ್ಟಕ್ಕೇನು ದೃಷ್ಟ? ಭಾವ ನಷ್ಟವೇ ದೃಷ್ಟ.
ಭಾವ ನಷ್ಟಕ್ಕೇನು ದೃಷ್ಟ? ಅನುಭಾವ ನಷ್ಟವೇ ದೃಷ್ಟ.
ಅನುಭಾವ ನಷ್ಟಕ್ಕೇನು ದೃಷ್ಟ? ಸ್ವಯ ಪರವಾವುದೆಂದರಿಯದುವೆ ದೃಷ್ಟ.
ಸ್ವಯ ಪರವಾವುದೆಂದರಿಯದಕ್ಕೇನು ದೃಷ್ಟ?
ಕೂಡಲಚೆನ್ನಸಂಗನೆಂದು ಎನ್ನದುವೆ ದೃಷ್ಟ. || ೧೫೮ ||

೮೪೫

ಓದಿದ ವೇದದಲ್ಲಿ ಏನಹುದಯ್ಯಾ? ಓದಿಸಬಾರದಂಥ ಲಿಂಗಸ್ಥಲ.
ಸಾಧಿಸಿದ ಶಾಸ್ತ್ರದಲೇನಹುದಯ್ಯಾ? ಸಾಧ್ಯವಾಗದಂಥ ಜಂಗಮಸ್ಥಲ.
ತರ್ಕಿಸಿದ ತರ್ಕದಲ್ಲಿ ಏನಹುದಯ್ಯಾ? ತರ್ಕಕ್ಕಗೋಚರವಹಂಥ ಪ್ರಸಾದಿಸ್ಥಲ.
ಇದು ವೇದಶಾಸ್ತ್ರ ತರ್ಕಕ್ಕಗೋಚರ
ಕೂಡಲಚೆನ್ನಸಂಗಾ ನಿಮ್ಮ ಶರಣ. || ೧೫೯ ||

೮೪೬

ಆನು, ನೀನು, ಅರಿದೆ ಮರೆದೆ, ಅಳಿದೆನುಳಿದೆನೆಂಬ ಸಂಶಯ ಭ್ರಮೆ,
ಅತತ್ವ ತತ್ವವಿವೇಕಭ್ರಮೆ, ಮೂಲ ಸ್ಥೂಲ ಸೂಕ್ಷ್ಮ ವಿಪರೀತ ಭ್ರಮೆ,
ಪುಣ್ಯಪಾಪ ಸ್ವರ್ಗ ನರಕ ಬಂಧಮೋಕ್ಷ ಪ್ರವರ್ತಕ ನಿವರ್ತಕ
ಆದಿಯಾದ ಸಪ್ತಕರ್ಮ ಬಂಧಭ್ರಮೆ, ಹುಸಿಜೀವ ಪರಮನೈಕ್ಯ ಸಂಧಾನ ಭ್ರಮೆ,
ಯೋಗದಾಸೆ ಸಿಲುಕುಭ್ರಮೆ, ಅಂತರ್ಮುಖಭ್ರಮೆ ಬಹಿರ್ಮುಖಭ್ರಮೆ,
ಅನೃತಭ್ರಮೆ ಸತ್ಯಭ್ರಮೆ ನಿತ್ಯಭ್ರಮೆ, ವಾಗದ್ವೈತಭ್ರಮೆ, ಅದ್ವೈತಭ್ರಮೆ,
ಮಂತ್ರಭ್ರಮೆ ತಂತ್ರಭ್ರಮೆ, ನಾಹಂ ಭ್ರಮೆ, ಕೋಹಂ ಭ್ರಮೆ, ಸೋಹಂ ಭ್ರಮೆ.
ತತ್ವ ಸಕರಣವೇಷ್ಟಿತ ಜಗತ್ರಯಕ್ಕೆಲ್ಲಾ ಮಾಯಾಮಯ.
ಕೂಡಲಚೆನ್ನಸಂಗಾ
ನಿಮ್ಮ ಶರಣಂಗಾವ ಭ್ರಮೆಯೂ ಇಲ್ಲ. || ೧೬೦ ||

೮೪೭

ಊರ್ಧ್ವಬಿಂದು ನಾದ ಮುಟ್ಟಲಿಕೆ ಜಂಗಮ,
ಮಧ್ಯಬಿಂದು ಊರ್ಧ್ವ ಮುಟ್ಟಲಿಕೆ ಸ್ಥಾವರ,
ಸ್ಥಾವರಬಿಂದು ಸ್ಥಾವರವಾದ ಊರ್ಧ್ವ ಮುಟ್ಟಲಿಕೆ ಭಕ್ತ,
ಭವಿ(ಭಕ್ತ?)ಬಿಂದು ನಾದ ಮುಟ್ಟಲಿಕೆ ಭವಿ.
ಇಂತು ಜಾತಿಸೂತಕ ಪ್ರೇತಸೂತಕವನಳಿದಾತಂಗೆ,
ಕಾಲವಿಲ್ಲ ಕರ್ಮವಿಲ್ಲ, ಭವಿಗೆ ಕೊಡಲಿಲ್ಲ ಭಕ್ತಂಗೆ ಕೊಡಲಿಲ್ಲ.
ಇದು ಕಾರಣ, ಕೂಡಲಚೆನ್ನಸಂಗಮದೇವಾ
ನಿಮ್ಮ ಶರಣಂಗಲ್ಲದೆ ಉಳಿದವರಿಗಪೂರ್ವ. || ೧೬೧ ||

೮೪೮

ತ್ರಿವಿಧವಿರಹಿತಲಿಂಗ, ಆಗಮವಿರಹಿತ ಪ್ರಸಾದಿ,
ಲಿಂಗವಿಲ್ಲದ ಜಂಗಮ, ಜಂಗಮವಿಲ್ಲದ ಲಿಂಗ,–ಇದ ಕೇಳ
ಗುರುವಿಲ್ಲದ ಶಿಷ್ಯ, ಶಿಷ್ಯನಿಲ್ಲದ ಗುರು,
ಇವೆಲ್ಲವ ಕಂಡು–ಯುಕ್ತಿಯಿಲ್ಲದ ಭಕ್ತಿ,
ಭಕ್ತಿಯಿಲ್ಲದ ಯುಕ್ತಿ ನೋಡಯ್ಯ!
ಇದು ಐಕ್ಯಸ್ಥಲವಲ್ಲ, ನಿಃಸ್ಥಲ ನಿರವಯ
ಕೂಡಲಚೆನ್ನಸಂಗಾ ನಿಮ್ಮ ಶರಣ. || ೧೬೨ ||

೮೪೯

ಶ್ರೀ ಗುರುಲಿಂಗ ತ್ರಿವಿಧ: ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರು.
ಶಿವಲಿಂಗ ತ್ರಿವಿಧ: ಕ್ರಿಯಾಲಿಂಗ, ಜ್ಞಾನಲಿಂಗ, ಭಾವಲಿಂಗ.
ಜಂಗಮಲಿಂಗ ತ್ರಿವಿಧ: ಸ್ವಯ ಚರ ಪರ–ಇಂತು ಸ್ಥಲ ೯.
ಆಗಮಲಿಂಗ ತ್ರಿವಿಧ: ಕ್ರಿಯಾಗಮ, ಭಾವಾಗಮ, ಜ್ಞಾನಾಗಮ.
ಕಾಯಲಿಂಗ ತ್ರಿವಿಧ: ಸಕಾಯ, ಅಕಾಯ, ಪರಕಾಯ.
ಆಚಾರಲಿಂಗ ತ್ರಿವಿಧ: ಧರ್ಮಾಚಾರ, ಭಾವಾಚಾರ, ಜ್ಞಾನಾಚಾರ.
ಇಂತು ಸ್ಥಲ ೯–ಉಭಯಸ್ಥಲ ೧೮.
ಅನುಗ್ರಹಲಿಂಗ ತ್ರಿವಿಧ: ಕಾರ್ಯಾನುಗ್ರಹ, ಇಂದ್ರಿಯಾನುಗ್ರಹ, ಪ್ರಾಣಾನುಗ್ರಹ.
ಅರ್ಪಿತಲಿಂಗ ತ್ರಿವಿಧ: ಕಾಯಾರ್ಪಿತ, ಕರಣಾರ್ಪಿತ, ಭಾವಾರ್ಪಿತ.
ತನುಗುಣಲಿಂಗ ತ್ರಿವಿಧ: ಶಿಷ್ಯ, ಶುಶ್ರೂಷೆ, ಸೇವ್ಯ.
ಇಂತುಸ್ಥಲ ೯–ತೃತೀಯ ಸ್ಥಲ ೨೭.
ಒಲವುಲಿಂಗ ತ್ರಿವಿಧ: ಜೀವಾತ್ಮ, ಅಂತರಾತ್ಮ, ಪರಮಾತ್ಮ.
ನಿರೂಪಲಿಂಗ ತ್ರಿವಿಧ: ನಿರ್ದೇಹಾಗಮ, ನಿರ್ಭಾವಾಗಮ, ನಷ್ಟಾಗಮ.
ಪ್ರಸಾದಲಿಂಗ ತ್ರಿವಿಧ: ಆದಿ ಪ್ರಸಾದಿ, ಅಂತ್ಯ ಪ್ರಸಾದಿ, ಸೇವ್ಯ ಪ್ರಸಾದಿ.
ಪಾದೋದಕಲಿಂಗ ತ್ರಿವಿಧ: ದೀಕ್ಷಾಪಾದೋದಕ, ಶಿಕ್ಷಾಪಾದೋದಕ,
ಜ್ಞಾನ ಪಾದೋದಕ. ಇಂತು ಸ್ಥಲ ೧೨–ಚತುರ್ಥಸ್ಥಲ ೩೯.
ಮೀರಿದ ಕ್ರಿಯಾ ದೀಕ್ಷಾಕ್ರಮದಿಂದತ್ತತ್ತಲು
ನಿಃಪತಿಲಿಂಗ ತ್ರಿವಿಧ: ಕ್ರಿಯಾ ನಿಃಪತಿ, ಭಾವನಿಃಪತಿ, ಜ್ಞಾನನಿಃಪತಿ.
ಆಕಾಶಲಿಂಗ ತ್ರಿವಿಧ: ಪಿಂಡಾಕಾಶ, ಬಿಂದ್ವಾಕಾಶ,ಮಹದಾಕಾಶ.
ಪ್ರಕಾಶಲಿಂಗ ತ್ರಿವಿಧ: ಕ್ರಿಯಾಪ್ರಕಾಶ, ಭಾವಪ್ರಕಾಶ, ಜ್ಞಾನಪ್ರಕಾಶ.
ಇಂತು ಸ್ಥಲ ೯, ಪಂಚಮಸ್ಥಲ ೪೮.
ಆ ಲಿಂಗೈಕ್ಯ ಕೊಂಬುದು ಪ್ರಸಾದ, ನಿಂದುದೋಗರ, ಚರಾಚರನಾಸ್ತಿ–
ಇಂತು ತ್ರಿವಿಧ.
ಭಾಂಡ, ಭಾಜನ, ಅಂಗಲೇಪ–ಇಂತು ತ್ರಿವಿಧ.
ಸ್ವಯ ಚರ ಪರವಿಯ[ದ], ಭಾವಾಭಾವನಷ್ಟ, ಜ್ಞಾನಶೂನ್ಯ–
ಇಂತು ಸ್ಥಲ ೯. ಷಡುಸ್ಥಲ ೫೭.
ಇಂತೀವೆಲ್ಲ ಸ್ಥಲಂಗಳನೊಳಕೊಂಡ ಮಹಾಮಹಿಮನು
ಜ್ಞಾನಿಯಲ್ಲ ಅಜ್ಞಾನಿಯಲ್ಲ, ಶೂನ್ಯನಲ್ಲ ಅಶೂನ್ಯನಲ್ಲ,
ಉಭಯಕುಳ ತಾನೊಪರಿದ ಪರಮಜ್ಞಾನಿಗೆ ಕೊಳುಕೊಡೆಯಿಲ್ಲ.
ಸಾಕಾರ ಸಂಬಂಧವನುಳಿಯ, ನಿತ್ಯಮುಕ್ತ, ನಿರವಯ,

ಉಭಯಾತ್ಮಕ ತಾನು ಕೂಡಲಚೆನ್ನಸಂಗನೆಂದು
ಎನ್ನದ ಸುಯಿಧಾನಿ. ॥ ೧೬೩ ॥

೮೫೦

ಸಾಕಾರ ಹದಿನೆಂಟುಕುಳವಸಂಗದಲ್ಲಿ ಆಚರಿಸುತ್ತ
ಅಲ್ಲಲ್ಲಿಗೆ ಭಕ್ತ, ಅಲ್ಲಲ್ಲಿಗೆ ಮಾಹೇಶ್ವರ, ಅಲ್ಲಲ್ಲಿಗೆ ಪ್ರಸಾದಿಯಾಗಿಪ್ಪ
ಆ ಸಾಕಾರವನೇನೆಂದುಪಮಿಸುವೆ!
ನಿರಾಕಾರ ಹದಿನೆಂಟುಕುಳವನಾತ್ಮನಲ್ಲಿ ಆಚರಿಸುತ್ತ
ಅಲ್ಲಲ್ಲಿಗೆ ಪ್ರಾಣಲಿಂಗಿ, ಅಲ್ಲಲ್ಲಿಗೆ ಶರಣ, ಅಲ್ಲಲ್ಲಿಗೆ ಐಕ್ಯನಾಗಿಪ್ಪ
ಆ ನಿರಾಕಾರವನೇನೆಂದುಪಮಿಸುವೆ!
ಇಂತು ಉಭಯಸ್ಥಲ ಒಂದಾಗಿ ನಿಂದ ನಿಜದ ಘನದಲ್ಲಿ
ಕುಳವಡಗಿತ್ತು, ಕೂಡಲಚೆನ್ನಸಂಗಾ. ॥ ೧೬೪ ॥

೮೫೧

ಅರಿವಾರಡಗೊಂಡುದು ಮನ, ಮನದಲ್ಲಿ ಘನವಡಗಿತ್ತು,
ಆಶ್ರಯವಿಲ್ಲ.
ಬಲ್ಲೆನೆಂಬರೆ ನೆರೆ ಅರಿತ ಅರಿವು ಘನ,
ಘನದಲ್ಲಿ ಆಶ್ರಯ ನಿರಾಶ್ರಯವಿಲ್ಲ,
ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ. ॥ ೧೬೫ ॥

೮೫೨

ಭಕ್ತಸ್ಥಲ ಘನವೆಂದೆಂಬಿರಿ, ಭಕ್ತಸ್ಥಲಕ್ಕೆ ಮಾಹೇಶ್ವರಸ್ಥಲವೆ ಪ್ರತಿ,
ಮಾಹೇಶ್ವರಸ್ಥಲಕ್ಕೆ ಪ್ರಸಾದಿಸ್ಥಲವೆ ಪ್ರತಿ,
ಪ್ರಸಾದಿಸ್ಥಲಕ್ಕೆ ಪ್ರಾಣಲಿಂಗಿಸ್ಥಲವೆ ಪ್ರತಿ.
ಪ್ರಾಣಲಿಂಗಿಸ್ಥಲಕ್ಕೆ ಶರಣಸ್ಥಲವೆ ಪ್ರತಿ,
ಶರಣಸ್ಥಲಕ್ಕೆ ಐಕ್ಯಸ್ಥಲವೆ ಪ್ರತಿ.
ಪ್ರತಿಯುಳ್ಳದರಿವೆ? ಪ್ರತಿಯುಳ್ಳುದು ಜ್ಞಾನವೆ?
ಪ್ರತಿಯುಳ್ಳುದು ನಿರ್ಭಾವವೆ? ಪ್ರತಿಯುಳ್ಳುದು ಮೋಕ್ಷವೆ?
ಇಂತು ಸ್ಥಲದ ಮಾರ್ಗವಲ್ಲ, ಸಾವಯವಲ್ಲ, ನಿರವಯವಲ್ಲ,
ಸ್ಥಲವೂ ಅಲ್ಲ ನಿಃಸ್ಥಲವೂ ಅಲ್ಲ, ಒಳಗೂ ಅಲ್ಲ, ಹೊರಗೂ ಅಲ್ಲ,
ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೧೬೬ ॥

■ ■

೮೫೩

ಅಂಗದ ಪಾದತೀರ್ಥವ ಲಿಂಗದ ಮಜ್ಜನಕ್ಕೆರೆವುದು,
ಲಿಂಗದ ಪಾದತೀರ್ಥವ ಪಂಚಪಾದಾರ್ಚನೆಯ ಮಾಡುವದು
ಮಾಡಿದ ಪ್ರಾಣಂಗೆ ಪರಿಣಾಮವನ್ನೈದಿಸುವದು.
ಇಂತೀ ತ್ರಿವಿಧ ಉದಕದ ಭೇದವನರಿಯದೆ,
ಆವನೊಬ್ಬ ಮಜ್ಜನಕ್ಕೆರೆದಡೆ
ಭವಿಚಾಂಡಾಲರ ಮೂತ್ರದಲ್ಲಿ ಎರೆದಂತೆ ಕಾಣಾ
ಕೂಡಲಚೆನ್ನಸಂಗಮದೇವಯ್ಯಾ. ॥ ೧ ॥

೮೫೪

ಅಂಗದ ಮೇಲಣ ಲಿಂಗವೆಲ್ಲಿಯಾದರೂ ಉಂಟು,
ಪ್ರಾಣದ ಮೇಲಣ ಲಿಂಗವಪೂರ್ವ.
ಅವರನೆ ಅರಸಿ ತೊಳಲಿ ಬಳಲುತ್ತಿದೇನಯ್ಯಾ.
ಇದು ಕಾರಣ– ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣರು ಸಕೃತ್ ಕಾಣಲಾರರು. ॥ ೨ ॥

೮೫೫

ಅಂಗದ ಮೇಲಣ ಲಿಂಗ ಹಿಂಗದಂತಿರಬೇಕು,
ಅಂಗಕ್ಕೆ ಲಿಂಗಕ್ಕೆ ಸಂಬಂಧವೇನೊ ಮನ ಮುಟ್ಟದನ್ನಕ್ಕರ?
ಕಾಯ ಕಾಯಕವ ಮಾಡುತ್ತಿರಲು,
ಮನವು ಲಿಂಗದಲ್ಲಿ ಬೆರಸಿ ತೆರಹಿಲ್ಲದಿಪ್ಪ ಮಡಿವಾಳನ ಪರಿಯ ನೋಡಾ!
ಅಂಗ ಲಿಂಗ ಸಂಗವೆಂಬ ಸಂದು ಸಂಶಯವಳಿದು,
ಸರ್ವಾಂಗಲಿಂಗಸಂಬಂಧಿ ಕೂಡಲಚೆನ್ನಸಂಗಯ್ಯನಲ್ಲಿ
ಮಡಿವಾಳ ಮಾಚಯ್ಯನು! ॥ ೩ ॥

೮೫೬

ಅಂಗದ ಮೇಲಿಹ ಲಿಂಗಕ್ಕರ್ಪಿಸಿದಲ್ಲದೆ ಕೊಳಲಾಗದು.
ಅಂಗೈಯಲ್ಲಿ ಹಿಡಿದು ಅರ್ಪಿಸಿಹೆನೆಂದಡೆ ಅರ್ಪಿತವಾಗದು.
ಇನ್ನು ಅರ್ಪಿಸುವ ಪರಿ ಎಂತೆಂದಡೆ:
ನಾಸಿಕದಲ್ಲಿ ಗಂಧ ಅರ್ಪಿತ, ಜಿಹ್ವೆಯಲ್ಲಿ ರುಚಿ ಅರ್ಪಿತ,
ನೇತ್ರದಲ್ಲಿ ರೂಪು ಅರ್ಪಿತ, ತ್ವಕ್ಕಿನಲ್ಲಿ ಸ್ಪರ್ಶನ ಅರ್ಪಿತ,
ಶ್ರೋತ್ರದಲ್ಲಿ ಶಬ್ದ ಅರ್ಪಿತ, ಹೃದಯದಲ್ಲಿ ಪರಿಣಾಮ ಅರ್ಪಿತ.

ಇದನರಿದು ಭೋಗಿಸಬಲ್ಲಡೆ ಪ್ರಸಾದ.
ಈ ಕ್ರಮವನರಿಯದೆ ಕೊಂಡ ಪ್ರಸಾದವೆಲ್ಲವು ಅನರ್ಪಿತ.
ಸುಂಗಿದ ಉಗುಳೆಲ್ಲವು ಕಿಲ್ಬಿಷ, ಕೂಡಲಚೆನ್ನಸಂಗಮದೇವಾ. || ೪ ||

೮೫೭

ಅಂಗದ ಮೇಲೆ ಆಚಾರಲಿಂಗಸ್ವಾಯತವಾಯಿತ್ತು;
ಪ್ರಾಣದ ಮೇಲೆ ಜಂಗಮಲಿಂಗಸ್ವಾಯತವಾಯಿತ್ತು;
ಆತ್ಮನ ಮೇಲೆ ಸಮ್ಯಗ್‌ಜ್ಞಾನಲಿಂಗ ಸ್ವಾಯತವಾಯಿತ್ತು.
ಇಂತೀ ತ್ರಿವಿಧಕ್ಕೆ ತ್ರಿವಿಧ ಸ್ವಾಯತವಾಗಿಪ್ಪ
ನಮ್ಮ ಕೂಡಲಚೆನ್ನಸಂಗನ ಶರಣ ಬಸವಣ್ಣಂಗೆ
ನಮೋ ನಮೋ ಎನುತಿರ್ದೆನು. || ೫ ||

೮೫೮

ಅಂಗದ ಮೇಲೆ ಆಯತವಾದುದೆ ಇಷ್ಟಲಿಂಗ.
ಇಷ್ಟಲಿಂಗವಿಡಿದು ಪ್ರಾಣಲಿಂಗಸ್ವಾಯತ.
ಪ್ರಾಣಲಿಂಗ ಉದಿಸಿದಲ್ಲದೆ ಇಷ್ಟಲಿಂಗವ ಕಾಣಬಾರದು.
ಈ ಭೇದವ ಭೇದಿಸಬಲ್ಲಡೆ ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು. || ೬ ||

೮೫೯

ಅಂಗದ ಮೇಲೆ ಲಿಂಗಯುಕ್ತವಾದ ಭಕ್ತನು
ಆ ಭಕ್ತಿಯಾಚಾರದ ನೆಲೆಯನರಿಯದೆ
ಸಂಬಂಧಕ್ಕನ್ಯವಾದ ನಂದಿ ವೀರಭದ್ರ ಮುತ್ತೆ ಲಿಂಗಂಗಳೆಂಬಿವಾದಿಯಾದ
ಭವಿಶೈವದೈವಂಗಳ ಹೆಸರಿನಲ್ಲಿ ಮೀಸಲುವಿಡಿದು ಬಾಸಣಿಸಿ
ಮನೆದೈವಕ್ಕೆಂದು ನೇಮಿಸಿ ಮಾಡಿದ ಪಾಕವ
ತನ್ನ ಕರಸ್ಥಲದ ನಿಜ ವೀರಶೈವಲಿಂಗಕ್ಕೆ
ಓಗರವೆಂದರ್ಪಿಸುವದು ಅನಾಚಾರ, ಪಂಚಮಹಾಪಾತಕ.
ಅವನು ಸದಾಚಾರಕ್ಕೆ ಹೊರಗು, ಅದೇನು ಕಾರಣವೆಂದೊಡೆ:
ಅದು ಶೈವದೈವೋಚ್ಛಿಷ್ಟವಾದ ಕಾರಣ.
ಅದರಿಂದಲೂ ಭವಿಯ ಮನೆಯ ಅಶನ ಉತ್ತಮ.
ಅದೆಂತೆಂದೊಡೆ: ಅದು ಅನ್ನವಾದ ಕಾರಣ.
ಆ ಅನ್ನದ ಪೂರ್ವಾಶ್ರಯವ ಕಳೆಯಬಹುದಾಗಿ
ಆ ಉಚ್ಛಿಷ್ಟದ ಪೂರ್ವಾಶ್ರಯ ಹೋಗದಾಗಿ. ಅದೆಂತೆಂದೊಡೆ:
ಭವಿಹಸ್ತಕೃತಂ ಪಾಕಂ ಲಿಂಗನೈವೇದ್ಯ ಕಿಲ್ಬಿಷಂ

ಶಿವಭಕ್ತ ಕೃತಂ ಪಾಕಂ ಲಿಂಗನೈವೇದ್ಯಮುತ್ತಮಂ– ಎಂದುದಾಗಿ
ಭಕ್ತಂಗೆ ಭವಿಯ ಮನೆಯ ಅಶನ ನಾಯಡಗು ನರಮಾಂಸ
ಕ್ರಿಮಿ ಮಲಕ್ಕೆ ಸಮವೆಂದರಿದು ಶಿವಭಕ್ತರಾದವರು ಮುಟ್ಟರು;
ಅದಕಿಂದಲೂ ಕರಕಷ್ಟ ಕರಕಷ್ಟ ನೋಡಾ.
ಅರೆ ಭಕ್ತರು ತಮ್ಮ ಕುಲದೈವವ ಕೂರ್ತು ಮಾಡಿದ
ಆ ಭವಿ ಶೈವ ದೈವೋಚ್ಛಿಷ್ಟವ
ತಾ ನೆರೆ ಭಕ್ತನಾಗಿ ಆಚಾರವನನುಸರಣೆಯ ಮಾಡಿಕೊಂಡು
ಆ ಅರೆ ಭಕ್ತರ ಮನೆಯಲ್ಲಿ ಹೊಕ್ಕು ಲಿಂಗಾರ್ಚನೆಯ ಮಾಡುವುದಕಿಂದಲೂ
ಹೊರಗಣ ಹೊಲೆಯರ ಮನೆಯ ಅನ್ನವೇ ಮಿಗೆ ಮಿಗೆ ಉತ್ತಮ ಕಾಣಾ
ಕೂಡಲಚೆನ್ನಸಂಗಯ್ಯಾ. ॥ ೭ ॥

೮೬೦

ಅಂಗದ ಮೇಲೆ ಲಿಂಗವ ಕಟ್ಟಿ ಸುಳಿವಾತ ಜಂಗಮವಲ್ಲ;
[ಆ] ಜಂಗಮಕ್ಕೆ ಮಾಡುವಾತ ಭಕ್ತನಲ್ಲ.
ಉಭಯ ಕುಲವಳಿದಾತ ಜಂಗಮ,
ಆ ಜಂಗಮಕ್ಕೆ ಅನುವರಿದು ಮಾಡುವಾತ ಭಕ್ತ.
ಇದು ಕಾರಣ–ಕೂಡಲಚೆನ್ನಸಂಗಯ್ಯಾ
ಉಭಯಕುಲವಳಿದ ಭಕ್ತ ಜಂಗಮ ಅಪೂರ್ವ. ॥ ೮ ॥

೮೬೧

ಅಂಗದ ಮೇಲೆ ಲಿಂಗವಿಲ್ಲದನ್ನಕ್ಕರ,
ಪ್ರಾಣದಲ್ಲಿ ಲಿಂಗಪರಿಣಾಮವನೆಯ್ದುವ ಪರಿಯೆಂತಯ್ಯಾ?
ಅಂಗತ್ರಯವುಳ್ಳವರು ಲಿಂಗತ್ರಯಸಂಪನ್ನರಾಗಬೇಕು,
ಒಂದಂಗ ವಿರಹಿತರಾಗಿಪ್ಪವರುಂಟೆ?
ಕಂಗಳ ನೋಟಕ್ಕೆ ಇಂಬಾವುದು ಹೇಳಾ?
ಒಂದಂಗ ಬಿಟ್ಟು ಒಂದಂಗ ತೋರದಾಗಿ.
ಸಂಮುಭೇದವಿಲ್ಲದಿಪ್ಪ ಮಡಿವಾಳನ ನಿಲವು
ಕೂಡಲಚೆನ್ನಸಂಗಯ್ಯನಲ್ಲಿ ನಿನಗೆಂತು ಸಾಧ್ಯವಾಯಿತ್ತು ಹೇಳಾ
ಸಿದ್ಧರಾಮಯ್ಯ? ॥ ೯ ॥

೮೬೨

ಅಂಗದ ಮೇಲೆ ಲಿಂಗವುಳ್ಳುದೆಲ್ಲಾ ಸಂಗಮನಾಥನೆಂಬ ಭಾವ
ಬಸವಣ್ಣಂಗಾಯಿತ್ತಲ್ಲದೆ, ಎನಗೆ ಆ ಭಾವವಿಲ್ಲ ನೋಡಾ.

ಲಿಂಗೈಕ್ಯ ಶರಣರ ಕಂಡಡೆ ಕರುಣಾಮೃತ ಸುರಿವುದೆನಗೆ.
ಅವರ ಪಾದಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರವ
ಮಾಡುವುದೆನ್ನ ಮನವು.
ಕೂಡಲಚೆನ್ನಸಂಗಮದೇವಾ, ನಿಮ್ಮ ಶರಣ ಪ್ರಭುವೆಂಬ ಜಂಗಮವ ಕಂಡು
ಪೂಜಿಸಿ ಪೂಜಿಸಿ ದಣಿಯದೆನ್ನ ಮನವು. || ೧೦ ||

೮೬೩

ಅಂಗದ ಮೇಲೆ ಲಿಂಗಸಾಹಿತ್ಯವನುಳ್ಳ ನಿಜವೀರಶೈವ ಸಂಪನ್ನರು
ತಮ್ಮ ಸ್ವಯಾಂಗಲಿಂಗವನರ್ಚಿಸುವಲ್ಲಿ ಭವಿಶೈವ ಭಿನ್ನ ಕರ್ಮಿಗಳಂತೆ
ಅಂಗನ್ಯಾಸ ಪಂಚಮಶುದ್ಧಿ ಮೊದಲಾದ
ಅಶುದ್ಧಭಾವವಪ್ಪ ಕ್ಷುದ್ರ ಕರ್ಮಂಗಳ ಹೊದ್ದಲಾಗದು.
ಅದೆಂತೆಂದೊಡೆ: "ನಕಾರಮಾತ್ಮಶುದ್ಧಿಶ್ಚ ಮಕಾರಂ ಸ್ನಾನಶೋಧನಂ
ಶಿಕಾರಂ ಲಿಂಗ ಶುದ್ಧಿಶ್ಚ ವಾಕಾರಂ ದ್ರವ್ಯ ಶೋಧನಂ
ಯಕಾರಂ ಮಂತ್ರಶುದ್ಧಿಶ್ಚ ಪಂಚಮಶುದ್ಧಿ ಪ್ರಕೀರ್ತಿತಾ
ಕಾಯಶುದ್ಧಿಶ್ಯಾತ್ಮಶುದ್ಧಿಶ್ಚಾಂಗನ್ಯಾಸ ಕರಸ್ಯ ಚ
ಸರ್ವಶುದ್ಧಿ ಭವೇ ನಿತ್ಯಂ ಲಿಂಗಧಾರಣಮೇವ ಚ"–ಇಂತೆಂದುದಾಗಿ.
ಅವಲ್ಲದೆ ಅರ್ಘ್ಯ ಪಾದ್ಯ ಆಚಮನಂಗಳು ಮೊದಲಾದ ಉಪಪಾತ್ರಗಳಲ್ಲಿ
ಅಗಣಿತಂಗೆ ಅಳತೆಯ ನೀರನೆರೆದು
ಸುಖಮುಖಾರ್ಪಿತಕ್ಕೆ ಸಲುವ ಸುರಸದ್ರವ್ಯಂಗಳಪ್ಪ ಪಂಚಾಮೃತಂಗಳ
ನಿರ್ಮಲನಪ್ಪ ನಿಜಲಿಂಗದ ಮಸ್ತಕಕ್ಕೆರೆದು ಜಿಡ್ಡು ಮಾಡಿ ತೊಳೆವ
ಅಜ್ಞಾನಿ ನರಕಜೀವಿಗಳ ಮುಖವ ನೋಡಲಾಗದು.
ಅದೇನುಕಾರಣವೆಂದಡೆ:
"ಅರ್ಘ್ಯ ಪಾದ್ಯಂ ತಥಾಚಮ್ಯ ಸ್ನಾನಂ ಪಂಚಾಮೃತಂ ಯದಿ
ಲಿಂಗದೇಹಿ ಸ್ವಲಿಂಗೇಷು ಕೃತಾರ್ಚಂತೇ ಬಹಿರ್ನರಃ
ತೇ ಪಾಷಂಡಂ ಕೃತಂ ತೇನ ಕೃತ ಕರ್ಮನರ ನಾರಕೀ"–ಇಂತೆಂದುದಾಗಿ.
ಇದು ಕಾರಣ ಸ್ವಯಾಂಗಲಿಂಗದೇಹಿಗಳು ತಮ್ಮ ಲಿಂಗಮಂತ್ರವಿಡಿದು ಬಂದ
ಲಿಂಗೋದಕ ಪಾದೋದಕಂಗಳಲ್ಲಿ
ತಮ್ಮ ಕರ ಮುಖ ಪದ ಪ್ರಕ್ಷಾಲನವ ಮಾಡಿಕೊಂಬುದೆ?
ಅಂಗಲಿಂಗಿಗಳಿಗೆ ಸ್ವಯಾರ್ಘ್ಯ ಪಾದ್ಯಾಚಮನವೆಂಬುದನರಿಯದೆ
ಕೃತಕರ್ಮ ಭವಿಜೀವಿ ಶೈವಪಾಷಂಡರಂತೆ ಭಿನ್ನವಿಟ್ಟು ಮಾಡಿ
ಫಲಪದಂಗಳನೈದಿಹೆನೆಂಬ ನರಕಜೀವಿಗಳನು ಕೂಡಲಚೆನ್ನಸಂಗಯ್ಯ
ರವಿ ಸೋಮರುಳ್ಳನ್ನಕ್ಕ
ನಾಯಕ ನರಕದಲ್ಲಿಕ್ಕುವ. || ೧೧ ||

೮೬೪

ಅಂಗದ ಮೇಲೆ ಲಿಂಗಸಾಹಿತ್ಯವನುಳ್ಳ ಭಕ್ತಾಂಗನೆಯರು
ತಮ್ಮ ಲಿಂಗಶರೀರಂಗಳ ಮಧ್ಯದಲ್ಲಿ
ಹರಭಕ್ತಿಗೆ ಹೊರಗಾದ ಅಸು[ರಾಂಶಿ]ಕವಪ್ಪ
ಪಸುರು ಹಚ್ಚೆಗಳೆಂಬ ಪತಿತ ಲೇಖನ ಇವಾದಿಯಾದ
ಅನ್ಯ ಚಿಹ್ನಗಳನು ಅಂಕಿತಧಾರಣ ಲೇಖನಂಗಳ ಮಾಡಿಕೊಂಡು
ಮತ್ತೆ ತಾವು ಲಿಂಗವನರ್ಚಿಸಿ ಭಕ್ತರಾದೆವೆಂಬ
ಈ ಭಂಗಮಾರಿ ಹೊಲೆಜಂಗುಳಿಗಳಿಗೆ
ಉಪದೇಶವ ಕೊಟ್ಟ ಗುರು, ಪ್ರಸಾದ ನೀಡುವ ಜಂಗಮ,
ಅವರಗೊಡಗೂಡಿಕೊಂಡು ನಡೆವ ಭಕ್ತತತಿ
ಈ ಚತುರ್ವಿಧರು ಶ್ವಪಚಗೃಹದ ಶ್ವಾನಯೋನಿಗಳಲ್ಲಿ
ಶತಸಹಸ್ರ ವೇಳೆ ಬಂದು ನರಕವಿಪ್ಪತ್ತೆಂಟುಕೋಟಿಯನೈದುವರು,
ಅದೆಂತೆಂದೊಡೆ:
"ಭಕ್ತನಾರೀ ಸ್ವಯಾಂಗೇಷು ಪತಿತಾದ್ಯನ್ಯ ಚಿಹ್ನಯೇತ್
ಲೇಖನಾಂಕಂ ಯದಿ ಕೃತ್ವಾ ತೇಪಿ ಸ್ತ್ರೀ ಪತಿತ ಸ್ತ್ರೀಣಾಂ
ತಸ್ಯೋಪದೇಶ ಶೇಷಂಚ ದತ್ವಾಶ್ಚೈ ಗುರುಃ ಚರಾನ್
ತಪತ್ಸಂಗ ಸಯೋದ್ಭಕ್ತಾ ತದಾದಿ ಚತುರಾಸ್ವಯಂ
ಶ್ವಾನಯೋನಿ ಶತಂಗತ್ವಾಶ್ಚಾಂಡಾಲ ಗೃಹಮಾಚರೇತ್
ಅಷ್ಟವಿಂಶತಿ ಕೋಟ್ಯಸ್ತು ನರಕಂ ಯಾಂತಿ ಸಧ್ರುವಂ"
ಇಂತೆಂದುದಾಗಿ
ಇದು ಕಾರಣ ಇಂತಪ್ಪ ಅನಾಚಾರಿಗಳನು ಕೂಡಲಚೆನ್ನಸಂಗಯ್ಯ
ಅಘೋರ ನರಕದಲ್ಲಿಕ್ಕುವ. || ೧೨ ||

೮೬೫

ಅಂಗದ ಮೇಲೆ ಲಿಂಗಸಾಹಿತ್ಯವಾದ ಬಳಿಕ, ಅಂಗವೆ ಲಿಂಗ,
ಮನದ ಮೇಲೆ ಲಿಂಗಸಾಹಿತ್ಯವಾದ ಬಳಿಕ, ಕರಣಂಗಳೆ ಲಿಂಗ,
ಪ್ರಾಣದ ಮೇಲೆ ಲಿಂಗಸಾಹಿತ್ಯವಾದ ಬಳಿಕ,
ಅರಿವಿನ ವಿಷಯಾದಿಭೋಗಂಗಳೆ ಲಿಂಗ–
ಅದು ಕಾರಣ ಸರ್ವಾಂಗಲಿಂಗ ಸರ್ವಭೋಗ ಲಿಂಗಭೋಗ
ಕೂಡಲಚೆನ್ನಸಂಗಮದೇವಾ. || ೧೩ ||

೮೬೬

ಅಂಗದ ಮೇಲೆ ಲಿಂಗಸಾಹಿತ್ಯವಾದ ಬಳಿಕ
ಭಕ್ತನಾಗಲಿ ಜಂಗಮವಾಗಲಿ ತನ್ನ ಅಂಗದ ಮೇಲೆ
ಅನ್ಯ ಮಣಿಮಾಲೆ ನಂದಿವುಂಗುರ ನಾಗಕುಂಡಲ ಮೊದಲಾದ
ಭವಿಶೈವದ ಮುದ್ರೆಗಳ ಧರಿಸಲಾಗದು.
ಭೂತೇಶನೆಂಬ ಲಿಂಗವನರ್ಚಿಸಿ ಪ್ರಸಾದವ ಕೊಂಡೆವೆಂಬ ದ್ರೋಹಿಗಳ
ಕುಂಭೀಪಾಕ ನಾಯಕ ನರಕದಲ್ಲಿಕ್ಕುವ ಕೂಡಲಚೆನ್ನಸಂಗಮದೇವ. ॥ ೧೪ ॥

೮೬೭

ಅಂಗದ ಮೇಲೆ ಲಿಂಗಸಾಹಿತ್ಯವಾದ ಬಳಿಕ ಸ್ಥಾವರಲಿಂಗಕ್ಕೆರಗಲಾಗದು.
ತನ್ನ ಪುರುಷನ ಬಿಟ್ಟು ಅನ್ಯಪುರುಷರ ಸಂಗ ಸಲ್ಲುವುದೆ?
ಕರಸ್ಥಲದಲ್ಲಿ ಲಿಂಗದೇವನಿದ್ದಂತೆ ಧರೆಯ ಮೇಲಣ ಪ್ರತಿಷ್ಠೆಗೆರಗಿದಡೆ
ನರಕದಲ್ಲಿಕ್ಕುವ ನಮ್ಮ ಕೂಡಲಚೆನ್ನಸಂಗಮದೇವಾ! ॥ ೧೫ ॥

೮೬೮

ಅಂಗದ ಲಿಂಗವ ಲಿಂಗವೆಂದು ಪೂಜಿಸುವೆನೆ?
ಅದು ಅಂಗಲಿಂಗವಲ್ಲ–ಅದೇನು ಕಾರಣ?
ಅದು ಅಂಗದ ಮೇಲರತು ಮುಂದೆ ಜಂಗಮವೆಂದು ತೋರಿತ್ತಾಗಿ.
ಜಂಗಮವ ಲಿಂಗವೆಂದು ಅರ್ಚಿಸಿ ಪೂಜಿಸಿಕೊಂಡಿಹೆನೆ?
ಆ ಜಂಗಮ ಲಿಂಗವಲ್ಲ–ಅದೇನು ಕಾರಣ?
ಮುಂದೆ ಪ್ರಸಾದಲಿಂಗವೆಂದು ತೋರಿತ್ತಾಗಿ.
ಆ ಪ್ರಸಾದಲಿಂಗವ ಲಿಂಗವೆಂದು ಅರ್ಚಿಸಿ ಪೂಜಿಸಿಕೊಂಡಿಹೆನೆ?
ಅದು ಪ್ರಸಾದಲಿಂಗವಲ್ಲ–ಅದೇನು ಕಾರಣ?
ಮುಂದೆ ಮಹಾಪ್ರಸಾದವ ತೋರಿತ್ತಾಗಿ.
ಆ ಮಹಾಪ್ರಸಾದವೆ ನೀವಾಗಿ ಸುಖಿಯಾದೆ
ಕೂಡಲಚೆನ್ನಸಂಗಮದೇವಾ. ॥ ೧೬ ॥

೮೬೯

ಅಂಗದಲ್ಲಿ ಆಚಾರಲಿಂಗಸಂಬಂಧಿಯಾಗಿಪ್ಪ.
ಮನದಲ್ಲಿ ಮಹಾಲಿಂಗಸಂಬಂಧಿಯಾಗಿಪ್ಪ.
ಇಂತೀ ಉಭಯಸಂಗ ಸಂಬಂಧ ಸನ್ನಿಹಿತನಾಗಿಪ್ಪ
ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೧೭ ॥

೮೭೦

ಅಂಗದಲ್ಲಿ ಗುರುಲಿಪಿಯ ತಿಳಿಯಬೇಕು,
ಮನದಲ್ಲಿ ಲಿಂಗಲಿಪಿಯ ತಿಳಿಯಬೇಕು,
ಜೀವದಲ್ಲಿ ಜಂಗಮಲಿಪಿಯ ತಿಳಿಯಬೇಕು,
ಪ್ರಾಣದಲ್ಲಿ ಪ್ರಸಾದಲಿಪಿಯ ತಿಳಿಯಬೇಕು.
ಈ ಚತುರ್ವಿಧವೇಕವಾದ ಅನುಭವಲಿಪಿಯ ತಿಳಿದು ನೋಡಲು
ಮಹಾಲಿಂಗಲಿಪಿ ಕಾಣಬಂದಿತ್ತು.
ಆ ಮಹಾಲಿಂಗಲಿಪಿಯ ಮುಟ್ಟಿದ ಸುಜ್ಞಾನಿ
ಬಚ್ಚ ಬರಿಯ ನಿರಾಳ, ನೀನೇ, ಕೂಡಲಚೆನ್ನಸಂಗಮದೇವಾ. ॥ ೧೮ ॥

೮೭೧

ಅಂಗದಲ್ಲಿ ಲಿಂಗವರತು, ಲಿಂಗದಲ್ಲಿ ಅಂಗವರತು
ಒಡಲುಪಾಧಿ ಎಂಬುದಿಲ್ಲ ನೋಡಾ!
ನಿಂದಡೆ ನೆಳಲಿಲ್ಲ ಸುಳಿದಡೆ ಹೆಜ್ಜೆಯಿಲ್ಲ,
ಅಪರಿಮಿತ ಘನಮಹಿಮನನೇನೆಂಬೆನಯ್ಯಾ!
ಶಬ್ದವನರಿದು ಸಾರಾಯನಲ್ಲ, ಗತವಿಡಿದು ಅಜಡನಲ್ಲ,
ಈ ಎರಡೂ ಅಳಿದುಳಿದ ನಿಶ್ಚಿಂತನು ತನಗೆ ತಾ ನಿಜವಾದ,
ಕೂಡಲಚೆನ್ನಸಂಗಯ್ಯನಲ್ಲಿ ಪ್ರಭುದೇವರ ಪಾದಕ್ಕೆ
ನಮೋ ನಮೋ ಎನುತಿರ್ದೆನು. ॥ ೧೯ ॥

೮೭೨

ಅಂಗದಿಚ್ಛೆಗೆ ಮದ್ದು ಮಾಂಸ ಬಳ್ಳ ಬಂಗಿಯ ತಿಂಬರು.
ಕಂಗಳಿಚ್ಛೆಗೆ ಪರರ ವಧುವ ನೆರೆವರು,
ಲಿಂಗಲಾಂಛನವಿದ್ದಲ್ಲಿ ಫಲವೇನು? ಲಿಂಗವನರಿಯರವೆ.
ಜಂಗಮಮುಖದಲ್ಲಿ ಕುಂದೆಯವು [ಕುಂದು?] ಬಂದರೆ
ಪೂರ್ವದ ಕೊಂಡ ಮಾರಿಗೆ ಹೋಗುವರೆಂದ
ಕೂಡಲಚೆನ್ನಸಂಗಮದೇವ. ॥ ೨೦ ॥

೮೭೩

ಅಂಗದುದಯ ಲಿಂಗಸುಖ, ಲಿಂಗದುದಯ ಅಂಗಸುಖ!
ಎರಡಿಲ್ಲದ ಘನವನೇನೆಂಬೆನಯ್ಯಾ

ಮಿಕ್ಕು ಮೀರಿ ನಿಂದ ನಿಲವನೇನೆಂಬೆನಯ್ಯಾ
ಕೂಡಲಚೆನ್ನಸಂಗನ ನಿಲವನೇನೆಂಬೆನಯ್ಯಾ! ॥ ೨೧ ॥

೮೭೪

ಅಂಗಪ್ರಸಾದಿ ಆತ್ಮದ್ರೋಹಿ, ಲಿಂಗಪ್ರಸಾದಿ ಲಿಂಗದ್ರೋಹಿ,
ಜಂಗಮಪ್ರಸಾದಿ ಜಂಗಮದ್ರೋಹಿ ಎಂದುದಾಗಿ,
ಭಾವದಿಂದ ಪ್ರಸಾದವ ಕೊಂಡು, ಅನುಭಾವದಿಂದತಿಗಳೆದಡೆ
ಅದು ಪ್ರಸಾದವಲ್ಲ, ಮಾಂಸ.
ಇದು ಕಾರಣ–ಕೂಡಲಚೆನ್ನಸಂಗಯ್ಯನಲ್ಲಿ
ಪ್ರಸಾದಸಂಪತ್ತು ಬಸವಣ್ಣನೆ ಬಲ್ಲ. ॥ ೨೨ ॥

೮೭೫

ಅಂಗಭೋಗವನೆ ಕುಂದಿಸಿ ಪ್ರಸಾದವನು ರುಚಿಸುವೆವೆಂಬ
ಲಿಂಗವಂತರೆಲ್ಲ ಅರಿವುಗೇಡಿಗಳಾಗಿ ಹೋದರು.
ಅಂಗಭೋಗವೆ ಲಿಂಗಭೋಗ, ಅಂಗಭೋಗವು [ಲಿಂಗಕ್ಕೆ] ಅರ್ಪಿತವಾಗಿ.
ಸ್ವಕೀಯ ಪಾಕಸಂಬಂಧಭೋಗೋ ಜಂಗಮವರ್ಜಿತಃ ।
ನಾಸ್ತಿ ಲಿಂಗಾರ್ಚನಂ ಚೈವ ಪ್ರಸಾದೋ ನಿಷ್ಫಲೋಭವೇತ್ ॥
ಅಂಗಕ್ಕೆ ಬಂದ ರುಚಿ, ಲಿಂಗಕ್ಕೆ ಬಾರದೆ?
ಇದು ಕಾರಣ–ಕೂಡಲಚೆನ್ನಸಂಗಯ್ಯಾ
ಪಾಕಸಂಬಂಧಿಗೆ ಪ್ರಸಾದ ದೂರ. ॥ ೨೩ ॥

೮೭೬

ಅಂಗ ಲಿಂಗಕ್ಕೆ ಭಾಜನವೆಂಬರು, ಅಂಗ ಲಿಂಗಕ್ಕೆ ಭಾಜನವಲ್ಲ.
ಕಾಯಗುಣಂಗಳ ಕಳೆದುಳಿದು ಮಾಯಾಮಲವ ಹಿಂಗಿಸಿ,
ಮನವೆಂಬ ಘನಪರಿಯಾಣವ ಬೆಳಗಿ,
ಸಕಲ ಇಂದ್ರಿಯುಗಳೆಂಬ ಕೆಲವಟ್ಟಲನಳವಡಿಸಿ,
ಜ್ಞಾನಪ್ರಕಾಶವೆಂಬ ದೀಪಸ್ತಂಭವ ಬೆಳಗಿ,
ಷಡಾಧಾರಚಕ್ರವೆಂಬ ಅಡ್ಡಣಿಗೆಯನಿಟ್ಟು,
ಸಕಲಕಾರಣಂಗಳೆಂಬ ಮೇಲುಸಾಧನಂಗಳ ಹಿಡಿದು,
ಸದ್ಭಕ್ತ್ಯಾನಂದವೆಂಬ ಬೋನವ ಬಡಿಸಿ,
ವಿನಯ ವಿವೇಕವೆಂಬ ಅಭಿಘಾರವ ಗಡಣಿಸಿ
ಪ್ರಸನ್ನ ಪರಿಣಾಮದ ಮಹಾರುಚಿಯೆಂಬ

ಚಿಲುಪಾಲಘಟ್ಟಿಯ ತಂದಿಳುಹಿ,
ಸುಚಿತ್ತ ಸುಯಿಧಾನದಿಂದ, ನಿಮ್ಮ ಹಸ್ತದ ಅವಧಾನವೆ ಅನುವಾಗಿ,
ಬಸವಣ್ಣನೆ ಬೋನ ನಾನೆ ಪದಾರ್ಥವಾಗಿ
ನಿಮ್ಮ ಪರಿಯಾಣಕ್ಕೆ ನಿವೇದಿಸಿದೆನು.
ಆರೋಗಣೆಯ ಮಾಡಯ್ಯಾ, ಕೂಡಲಚೆನ್ನಸಂಗಮದೇವಾ. || ೨೪ ||

೮೭೭

ಅಂಗಲಿಂಗಸಂಗವು ಲಿಂಗದಲ್ಲಿ ಆಯತವಯ್ಯಾ.
ನಿಮಿಷ ಕರಸ್ಥಲವನಗಲಿದಡೆ ಭಂಗವಯ್ಯಾ.
ಕಂಗಳೆ ಕರುವಾಗಿ, ಲಿಂಗವೆ ಗೂಡಾಗಿ, ಲಿಂಗನಿಷ್ಪತ್ತಿಯಲಿಪ್ಪ
ಕೂಡಲಚೆನ್ನಸಂಗಾ ನಿಮ್ಮ ಶರಣ. || ೨೫ ||

೮೭೮

ಅಂಗಲಿಂಗ ಸಂಬಂಧವನುಳ್ಳ ನಿಜವೀರಶೈವ ದೀಕ್ಷೆಯನು
ಗುರು ತನ್ನ ಶಿಷ್ಯಂಗೆ ಉಪದೇಶಿಸಿ
ಮತ್ತೆ ಆ ಲಿಂಗದಲ್ಲಿ ಮಾಡುವ ಜಪ ಧ್ಯಾನ ಅರ್ಚನೆ ಉಪಚರಿಯ
ಅರ್ಪಿತ ಪ್ರಸಾದಭೋಗವಾದಿಯಾದ ವೀರಶೈವರ
ಸಾವಧಾನ ಸತ್ಕ್ರಿಯಾಚಾರಂಗಳ ಹೊಲಬನರಿಯದೆ
ಭವಿಶೈವ ಭಿನ್ನಕರ್ಮಿಗಳಂತೆ ಅಂಗನ್ಯಾಸ ಕರನ್ಯಾಸ
ಪಂಚಮಶುದ್ಧಿ ಪಂಚಾಮೃತಾಭಿಷೇಕ ಶ್ರೀರುದ್ರ
ಪಂಚಬ್ರಹ್ಮಸ್ಥಲಾದಿ ಶೈವಪಂಚಪಂಚಾಕ್ಷರ
ಭೂತಾದಿದೇವತಾದಿಗಣಿಕಾ ಜನನಿಕರ
ಗಣನಾಕೃತ ಪರಿಪೂರಿತ ಅಕ್ಷಮಣಿ
ಭವಮಾಲಿಕಾ ಜಪೋಪಚರಿಯಂಗಳಾದಿಯಾದ
ಶೈವ ಪಾಷಂಡಕೃತ ಕರ್ಮಮಯವಪ್ಪ
ಭವಿಮಾಟಕೂಟಂಗಳನುಪದೇಶಿಸಿ
ಭವಹರನಪ್ಪ ಘನವೀರಶೈವಲಿಂಗದಲ್ಲಿ
ಮಾಡಿ ಕೂಡಿ ನಡೆಸಿಹನೆಂಬ ಕಡುಸ್ವಾಮಿದ್ರೋಹಿಗೆ
ಆ ನಿಜದೀಕ್ಷೆ ಗೆಟ್ಟು
ಗುರುಶಿಷ್ಯರಿರ್ವರು ನರಕಭಾಜನಪ್ಪುದು ತಪ್ಪದು
ಅದೆಂತೆಂದೊಡೆ: "ನಾಮಧಾರಕಶಿಷ್ಯಾನಾಂ ನಾಮಧಾರ ಗುರುಸ್ತಥಾ
ಅಂಧಕಂಧಕರಬದ್ಧೇ ದ್ವಿವಿಧಂ ಪಾತಕಂ ಭವೇತ್" ಎಂತೆಂದುದಾಗಿ

ಗುರುಭಕ್ತಿ ಪರಾಙ್ಮುಖರಾದವರ ಭಕ್ತ ಜಂಗಮವೆಂದಾರಾಧಿಸಿ
ಪ್ರಸಾದವ ಕೊಳಲಾಗದು ಸಲ್ಲದು ಕಾಣಾ ಕೂಡಲಚೆನ್ನಸಂಗಮದೇವ. ॥ ೨೮ ॥

೮೮೧

ಅಂಗವನಾಚಾರಕ್ಕರ್ಪಿಸಿ, ಆಚಾರವನಂಗಕ್ಕರ್ಪಿಸಿ
ಆಚಾರಲಿಂಗಪ್ರಸಾದಿಯಾದ.
ಪ್ರಾಣವ ಲಿಂಗಕ್ಕರ್ಪಿಸಿ, ಆ ಲಿಂಗವ ಪ್ರಾಣಕ್ಕರ್ಪಿಸಿ
ಪ್ರಾಣಲಿಂಗಪ್ರಸಾದಿಯಾದ.
ದೇಹಭಾವದಹಂಕಾರ ದಾಸೋಹಭಾವದೊಳಗಲ್ಲದೆ ಅಳಿಯದೆಂದು
ಲಿಂಗಜಂಗಮಕ್ಕೆ ತೊತ್ತುವೊಕ್ಕು ಲಿಂಗಜಂಗಮಪ್ರಸಾದಿಯಾದ.
ಸತ್ಯಶರಣರ ಅಂಗಳದೊಳಗೆ ಬಿದ್ದಗುಳನೆತ್ತಿಕೊಂಡಿಪ್ಪೆನೆಂದು,
ನಿಮ್ಮ ಪ್ರಸಾದದ ಕುಳಿಯೊಳಗೆ
ಹನ್ನೆರಡು ವರ್ಷ ನಿರಂತರ ಪ್ರಸಾದಿಯಾಗಿರ್ದ,
ಕೂಡಲಚೆನ್ನಸಂಗಮದೇವರಲ್ಲಿ ಮರುಳಶಂಕರದೇವರ
ಶ್ರೀಪಾದದ ಘನವನು ನಿಮ್ಮಿಂದ ಕಂಡು ಬದುಕಿದೆನು
ಕಾಣಾ ಸಂಗನಬಸವಣ್ಣಾ. ॥ ೨೯ ॥

೮೮೨

ಅಂಗವ ಬಿಟ್ಟು ಹೋಹ ಪ್ರಾಣಕ್ಕೆ ಲಿಂಗವಿಲ್ಲ ಎಂದೆಂಬರು,
ಒಡಂಬಡಿಸಿಹೆನು ಕೇಳಿರಣ್ಣಾ.
ಹಿಂಗಿದ ಪುಷ್ಪದ ಪರಿಮಳವನುಂಡೆಳ್ಳು
ಅವು ತಮ್ಮಂಗವ ಬಿಟ್ಟು ಹೋಹಾಗ ಕಮ್ಮೆಣ್ಣೆಯಾಗದಿಪ್ಪವೆ?
ಲಿಂಗೈಕ್ಯರು ಅಳಿದಡೆ,
ಕೈಲಾಸದಲ್ಲಿ ತಮ್ಮ ಇಷ್ಟಲಿಂಗಸಹವಾಗಿಪ್ಪರು ನೋಡಾ
ಕೂಡಲಚೆನ್ನಸಂಗಮದೇವಾ. ॥ ೩೦ ॥

೮೮೩

ಅಂಗವಿಲ್ಲೆಂಬಲ್ಲಿಯೆ ಅಂಗಶಂಕೆ ಬಿಡದು,
ಲಿಂಗವುಂಟೆಂಬಲ್ಲಿಯೆ ಲಿಂಗಶಂಕೆ ಬಿಡದು.
ಇಲ್ಲೆಂಬುದಕ್ಕೆ ಉಂಟೆಂಬುದೆ ಮರಹು,
ಉಂಟೆಂಬುದಕ್ಕೆ ಇಲ್ಲೆಂಬುದೆ ಮರಹು.
ಉಂಟಿಲ್ಲೆಂಬುದಳಿದಲ್ಲದೆ ಪ್ರಾಣಲಿಂಗಸಂಬಂಧ ಸ್ವಯವಾಗದು,

ಕೂಡಲಚೆನ್ನಸಂಗಯ್ಯನಲ್ಲಿ
ಪ್ರಾಣಲಿಂಗಸಂಬಂಧ ನಿನಗೆಲ್ಲಿಯದು ಹೇಳಾ ಸಿದ್ಧರಾಮಯ್ಯ? || ೩೧ ||

೮೮೪

ಅಂಗವು ಲಿಂಗದಲ್ಲಿ ಸಂಬಂಧವಾದವರ ಲಿಂಗವೆಂದೇ ಕಾಂಬುದು,
'ಕೀಟೋಪಿ ಭ್ರಮರಾಯತೇ' ಎಂಬ ನ್ಯಾಯದಂತೆ.
ಅಂಗವು ಲಿಂಗ ಸೋಂಕಿ ಲಿಂಗವಾಯಿತ್ತಾಗಿ
ಲಿಂಗ ಎಂದೇ ಕಾಂಬುದು.
ಅಂಗೇಂದ್ರಿಯಗಳೆಂಬುವಿಲ್ಲ, ಅವೆಲ್ಲವೂ ಲಿಂಗೇಂದ್ರಿಯಂಗಳಾದ ಕಾರಣ,
ಲಿಂಗವೆಂದೇ ಕಾಂಬುದು.
ಸರ್ಪದಷ್ಟಸ್ಯ ಯದ್ದೇಹಂ ತದ್ದೇಹಂ ವಿಷದೇಹವತ್।
ಲಿಂಗದಷ್ಟಸ್ಯ ಯದ್ದೇಹಂ ತದ್ದೇಹಂ ಲಿಂಗದೇಹವತ್॥ ಎಂದುದಾಗಿ
ಸರ್ವಾಂಗಲಿಂಗಿ ಕೂಡಲಚೆನ್ನಸಂಗಾ ನಿಮ್ಮ ಶರಣ! || ೩೨ ||

೮೮೫

ಅಂಗ ಸಂಸಾರವಿರಹದೊಳು ಸವೆದು,
ಲಿಂಗವು ಅವಗ್ರಹಿಸಿಕೊಂಡ ಮೃತ್ತಿಕಾ ಪಂಜರದೊಳಗೆ,
ಭುಜಂಗ ತಲೆಯೆತ್ತಿ ನೋಡಲು,
ಥಳಥಳನೆ ಹೊಳೆವ ಮಾಣಿಕ್ಯದ ಬೆಳಗುಗಳೆಸೆಯೆ
ಸದ್ಯೋಜಾತನ ಜಟಾಮಕುಟವ ಸುತ್ತಿರ್ದ ಫಣೇಂದ್ರನಲ್ಲದೆ
ಮತ್ತಾರೂ ಅಲ್ಲವೆಂದು ಶಿಖರವ ಮೊದಲುಗೊಂಡಗುಳಿಸಲುದೆ
ಸುತ್ತಿರ್ದ ಫಣಿಸೂತ್ರವ ಕಂಡು ಚಕ್ಕನೆ ಕದವ ತೆರೆಯಲು
ಧೃಷ್ಟಿದೃಷ್ಟವಾದ (ಅ) ನಿಮಿಷನ ಕರಸ್ಥಲವ ಕಂಡು
ಧೃಷ್ಟತನದಲ್ಲಿ ಲಿಂಗವ ತೆಗೆದುಕೊಂಡಡೆ
ಸಂದು ಕಳಾಸಂಗಳು ತಪ್ಪಿ ಅಸ್ಥಿಗಳು ಬಳಬಳನುದುರಲು
ಆತನ ಬೆರಗು ನಿಮ್ಮ ಹೊಡೆದು
ಖ್ಯಾತಿಯಾಯಿತ್ತು ನೋಡಯ್ಯಾ, ಅಲ್ಲಮಪ್ರಭುವೆಂಬ ನಾಮ ನಿಮಗೆ!
ಭಕ್ತವಳದುಳದಿಂದ ಬಂದಿಕಾರರಾಗಿ ಬಂದು ಹೊಕ್ಕಡೆ
ಬಸನೆಯ ಕಾಯಿಗಳು ಬಾಣಲಿಂಗವಾಗವೆ ನಮ್ಮ ಬಸವಣ್ಣನ ದೃಷ್ಟಿತಾಗಲು?
ಇದು ಕಾರಣ–ಕೂಡಲಚೆನ್ನಸಂಗನಲ್ಲಿ
ಅನಿಮಿಷಪ್ರಭುವಿಂಗೆ ಬಸವಣ್ಣ ಗುರುವಾದ ಕಾರಣ
ನಾನು ನಿಮಗೆ ಚಿಕ್ಕತಮ್ಮ ಕೇಳಾ ಪ್ರಭುವೆ. || ೩೩ ||

೮೮೬

ಅಂಗಸ್ಥಲ ಮೂವತ್ತಾರು ಕಲ್ಪನಾಡಿಭೇದಮಂ ಭೇದಿಸುತ್ತ
ವಾಕು ಪಾಣಿ ಪಾದ ಪಾಯು ಗುಹ್ಯವೆಂಬ
ಕರ್ಮೇಂದ್ರಿಯಂಗಳ ವರ್ಮದಲ್ಲಿರಿಸಿ
ಶಬ್ದ ಸ್ಪರ್ಶ ರೂಪ ರಸ ಗಂಧವೆಂಬ ಪಂಚೇಂದ್ರಿಯ[ವಿಷಯಂ]ಗಳ
ಪೂರ್ವನಾಮವಿಮೋಚನೆಯಂ ಮಾಡುವ ಪರಿ:
ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ,
ಘ್ರಾಣವೆಂಬ ಪಂಚೇಂದ್ರಿಯಂಗಳ
ಬಾಹ್ಯಾಭ್ಯಂತರವನರಿವ ಪರಿ,
ಆದ್ಯಕ್ಷರವೊಂದಾದಡೆ ಅಂತ್ಯಕ್ಷರ ಶೂನ್ಯ,
ಅದಕ್ಕೆ ಶಾಸ್ತ್ರಕ್ರಮದೊಳಗಾಡುವ
ಭೇದಖಂಡದಿಂದ ಲಿಂಗಪ್ರಸಾದವ ಭೇದಿಸಿ,
ಆ ಲಿಂಗವಂ ಭೂಮಿಯ ಬಿಡಿಸುವುದು.
ಕಳಾವಿಧಸ್ಥಾನಕ್ಕೆ ತಂದಲ್ಲಿ ಸರ್ಪನು ಹಲವ ರುಚಿಸುವುದು.
ಆ ರುಚಿಸುವ ಸರ್ಪನನು ತನ್ನಿಚ್ಛೆಗೆ ಹರಿಯಲೀಯದೆ
ಅರಿವೆ ಪ್ರಾಣವಾಗಿ ಆ ಅರಿವಿನಿಂ ದೃಢವಿಡಿದು,
ಹರಿವ ಹತ್ತುವ ಪರಿಯನೊಡೆದು
ಮೂವತ್ತೆರಡು ಜವೆಯ ತೊರೆದಲ್ಲಿ ತೋರುವ, ನಾಡಿ ಮಧ್ಯಮಸ್ವರ
ಮಹಿತಸ್ವರ, ಭೂಸ್ವರವೆಂಬ ಮಧ್ಯನಾಡಿ ಮಥನಂಗಳಂ ಮಥಿಸುವುದು.
ಅಂಗಕ್ಕೆ ಲಿಂಗ ಬಂದಡೆ ಅಂಗದಾಪ್ಯಾಯನವನರಿವುದು.
ಗುರುವಿನಿಂದ ಕರಣಾದಿಗಳು ಶುದ್ಧವಹವು,
ಆದಿಪ್ರಭೆಯಿಂ ಕಿರಣಂಗಳು ಶುದ್ಧವಹವು,
ಕರಣಂಗಳ ಆರತವಡಗುವುದು,
ಕಾದ್ರಮಾ ಕಾದು ಕಾವುದು;
ಆ ಲಿಂಗವನು ಉದಯದಲ್ಲಿ
ನಾಲ್ಕು ಘಳಿಗೆ ತನಕ ಲಿಂಗಾರ್ಚನೆಯಂ ಮಾಡುವುದು.
ಆ ಲಿಂಗವನು ವಾಮಕ್ಕೆ ಆ ಲಿಂಗವನು ದಕ್ಷಿಣಕ್ಕೆ
ಆ ಲಿಂಗವನು ಪೂರ್ವಕ್ಕೆ, ಆ ಲಿಂಗವನು ಪಶ್ಚಿಮಕ್ಕೆ
ಆ ಲಿಂಗವನು ಅಧಮಕ್ಕೆ,
ಆ ಲಿಂಗವನು ಊರ್ಧ್ವಕ್ಕೆ ಆ ಲಿಂಗವನು ಜಡಿವುದು.
ಪ್ರಭಾಲಿಂಗವೆಂಬ ಭಾವವನು ಭಾವಿಸಿ,
ವಾತ ಪಿತ್ತ ಶ್ಲೇಷ್ಮವೆಂಬ ತ್ರಿಧಾತುವನರಿವುದು.

ವಾತೋದ್ರೇಕವಾದಡೆ ಶೀತೋಷ್ಣಂಗಳ ಲಿಂಗಕ್ಕೆ ಸಮ ಮಾಡುವುದು,
ಪಿತ್ತೋದ್ರೇಕವಾದಡೆ ಶೈತ್ಯವಂ ಮಾಡಿ ಕಾವುದು.
ಶ್ಲೇಷ್ಮೋದ್ರೇಕವಾದಡೆ ಬಿಗಿದು ಲಿಂಗಾರ್ಚನೆಯಂ ಮಾಡುವುದು.
ವಾತಪ್ರಕೃತಿಯಲ್ಲಿ ಲಿಂಗದ ಮೊದಲು ದೊಡ್ಡ ತುದಿ ಸಣ್ಣವಾಗಿಹುದು.
ಪಿತ್ತಪ್ರಕೃತಿಯಲ್ಲಿ ತುದಿ ಮೊದಲು ಸಣ್ಣದಾಗಿ ನಡು ದೊಡ್ಡದಾಗಿಹುದು.
ಶ್ಲೇಷ್ಮಪ್ರಕೃತಿಯಲ್ಲಿ ಲಿಂಗತುದಿ ಮೊದಲೊಂದಾಗಿ ದೊಡ್ಡದಾಗಿಹುದು
ಇಂತು ತ್ರಿಧಾತುವನರಿದು ಲಿಂಗಾರ್ಚನೆಯ ಮಾಡುವುದು–
ಇದು ವರ್ತನಾಕ್ರಮ.
ಆದಿಕ್ರಮ ಅಂತ್ಯಕ್ರಮ ಅನ್ವಯಕ್ರಮ ವಿನಾದಾದಿಕ್ರಮವೆಂಬ
ಭೇದಾದಿ ಭೇದಂಗಳಂ ಭೇದಿಸುವುದು.
ಶಾಸ್ತ್ರ ಸಂಧಿಯಲ್ಲಿ ಬಾಹ್ಯಂಗಳನರಿವುದು, ಕ್ರಮಾದಿಕ್ರಮಂಗಳಂ ತಿಳಿವುದು
ವಿನಾದದಲ್ಲಿ ಚಿತ್ರಪತ್ರಂಗಳನರಿವುದು, ಕರಣಂಗಳಂ ಶುದ್ಧಮಂ ಮಾಡುವುದು.
ಹಿರಿದು ನಡೆಯದೆ, ಹಿರಿದು ನುಡಿಯದೆ
ಹಿರಿದುಂ ದಿವಾರಾತ್ರಿಯಲ್ಲಿ ಶೀತೋಷ್ಣಾದಿಗಳಂ ಮುಟ್ಟಿಸಿಕೊಳ್ಳದೆ
ಮಹಾಮಾರ್ಗವ ತಿಳಿವುದು.
ಇದಿರಿಂಗೆ ತನ್ನ ಮಾರ್ಗಮಂ ತೋರದೆ ಮಹಾಮಾರ್ಗದಲ್ಲಿ ಮಾರ್ಗಿಯಾಗಿ
ಇದರ ಭೇದಸಂಬಂಧದಲ್ಲಿ ಉಚ್ಛ್ವಾಸ ನಿಶ್ವಾಸಕ್ರಮವನು ಓದಿ
ಭರತಕ್ರಮವನು ಅನುಕ್ರಮಿಸಿ ಮೂಲಕಸ್ಥಾನದಲ್ಲಿ ಹೊರೆಹೊಗದೆ
ಇಕ್ಕುವ ಚಿತ್ರಕ್ರಮದಲ್ಲಿ ಹೊರೆಹೊಗದೆ
ಇಂತಿವನರಿತು ಲಿಂಗಾರ್ಚನೆಯಂ ಮಾಡುವ ಪ್ರಕರಣ:
ಬ್ರಾಹ್ಮೀ ಮಹಾಮುಹೂರ್ತದಲ್ಲಿ ಎದ್ದು, ಅಂಗಪ್ರಕ್ಷಾಲನಮಂ ಮಾಡಿ
ಕಂಬುವಂ ವಿಸರ್ಜಿಸಿ, ಶಿಶು ಪ್ರಕಾರವಂ ಮಾಡಿ
ಶಮೆಯೆಂಬ ಸಮಾಧಿಯಲ್ಲಿ ಕುಳ್ಳಿರ್ದು, ದಮೆಯೆಂಬ ಪೀಠವನಿಕ್ಕಿ,
ಶಾಂತಿಯೆಂಬ ನಿಜವಸ್ತ್ರವ ತಂದು, ಆದಿ ಶಿಶುವಿಂಗೆ ಅನುಬಂಧವಂಮಾಡಿ
ತಲೆವಲದಲ್ಲಿ ಶಿಶುವಂ ತೆಗೆದು ಕರವೆಂಬ ತೊಟ್ಟಿಲಲ್ಲಿಕ್ಕಿ ಜೋಗೈಸಿ
ಕೈಗೆ ಬಾಯಿಗೆ ಬಂದಿತ್ತು ನೋಡಾ,
ಬಾಯಿಗೆ ಬಂದಲ್ಲಿ ಭಾವ ಶುದ್ಧವಾಯಿತ್ತು, ಕೈಗೆ ಬಂದಲ್ಲಿ ಆದಿ ಶುದ್ಧವಾಯಿತ್ತು,
ಭಾವಲಿಂಗ ಜೀವಕರವಾಯವೆಂಬ ಪಟ್ಟಣದಲ್ಲಿ,
ಸೀಮೆ ಸಂಬಂಧವ ಮೀರಿ, ಮಂತ್ರಮಯವಾಯಿತ್ತು ನೋಡಾ!
ಮಂತ್ರಲಿಂಗವೊ! ಅಮಂತ್ರಲಿಂಗವೊ ಹೇಳಾ!
ಮಂತ್ರದಿಂ ವಸ್ತ್ರ, ಅಮಂತ್ರದಿಂ ವಸ್ತ್ರ
ಇಂತು ಮಂತ್ರ ಅಮಂತ್ರಂಗಳೆರಡನು ಕೂಡಿ ರಕ್ಷಿಸುತ್ತಿದ್ದಿತ್ತು ನೋಡಾ!

ಶಿರಸ್ಸೆಂಬ ಧೇನು ಲಿಂಗವೆಂಬ ಮೊಲೆಯ ಕರವೆಂಬ ವತ್ಸ ತೊರೆಯಿತ್ತು ನೋಡಾ!
ಮಂತ್ರವೆಂಬ ಅಮೃತವ ಕರೆಯಿತ್ತು ನೋಡಾ!
ಬಸವಯ್ಯ ನೋಡಾ ಊಡದ ಹಸು, ಉಣ್ಣದ ಕರು, ಆಗೂಢದ ಭಾಂಡ!
ಅಂಗದಲ್ಲಿ ಹುಟ್ಟಿದ ಅಮೃತಜಲವನು ಲಿಂಗಕ್ಕೆ ಕೊಡದೆ
ಧರೆಯಲ್ಲಿ ಬಿಟ್ಟಡೆ ಎಂತೊ ಲಿಂಗೋದಯವಹುದು?
ಎಂತೋ ಪಾದೋದಕ ಪ್ರಸಾದಜೀವಿಯಹನು?
ಜೀವ ಪರಮರ ಐಕ್ಯಭಾವವನರಿದ(ವ?)ಡೆ
ಲಿಂಗೋದಯುದಲಲ್ಲವೆ ಅರಿಯಬಾರದು
ನಿಜಭಾವ ನಿಜಭಕ್ತಿ ನಿಜಸಮರಸವಾದಲ್ಲದೆ ಲಿಂಗೋದಯುವಾಗದು.
ನಿಜಮರ್ತ್ಯದಲ್ಲಿ ಜನಿಸಿದ ಅಂಗ ಅಂಗಿಗಳೆಲ್ಲರು
ಪ್ರಾಣಲಿಂಗ ಸಂಬಂಧವನರಿಯರು.
ಅಂತು ಅಂಗಲಿಂಗಿಗಳು ಪ್ರಾಣಲಿಂಗಿಗಳಿಗೆ ಭವಿಗಳು,
ಅಂತು ಪ್ರಾಣಲಿಂಗಿಗಳು ಆಂಗಲಿಂಗಿಗಿಳನೊಲ್ಲರು.
ಅದು ಹೇಗೆಂದಡೆ:
ಅವರಿಗೆ ಪ್ರಸಾದ ಪ್ರಾಣಲಿಂಗವಾಗಿ
ನಾಮಗೋಪ್ಯ ಮಂತ್ರಗೋಪ್ಯಂಗಳಲ್ಲಿ ಆ ಮಹಾಮಾರ್ಗವನರಿಯರಾಗಿ,
ಅಂಗಲಿಂಗಿಗಳಲ್ಲದೆ ಪ್ರಾಣಲಿಂಗಿಗಳಲ್ಲ
ಪ್ರಸಾದಸೇವನಾಧ್ಯಾನಾದರ್ಚನಾದರ್ಪಣಾತ್ ಶುಚಿಃ।
ಪ್ರಸಾದಹೀನಸ್ಯಾಂಗೇ ತು ಲಿಂಗಂ ನಾಸ್ತಿ ಪುನಃ ಪುನಃ॥ ಎಂದುದಾಗಿ
ಇಂತು ಲಿಂಗಾರ್ಚನೆಯುಂ ಮಾಡುವುದು
ಲಿಂಗಪಾದೋದಕ ಪ್ರಸಾದವನು ಬಾಹ್ಯಾಂತರಂಗದಲ್ಲಿ ವಿರಳವಿಲ್ಲದೆ
ಅವಿರಳಭಾವಸಂಬಂಧದಲ್ಲಿ ಧರಿಸುವುದು; ಧರಿಸುವಾತ ಲಿಂಗವಂತನು.
ಅಂಗಲಿಂಗಿ ಪ್ರಾಣಲಿಂಗಿ ಪ್ರಸಾದಲಿಂಗಿ
ನಿಜನಿಂದ ಮಾರ್ಗವಿರಳ ಪಂಚಕನಾಡಿಯಲ್ಲಿ ಪೊರಹೊಗವೆ
ನಿರ್ನಾದಮಂ ಆಶ್ರಯಿಸುವುದು.
ಇದು ಮಹಾಮಾರ್ಗ ಪುರಾತನರ ಪೂರ್ವ;
ಅಪರದಲ್ಲಿ ಅಂಥ ಲಿಂಗವನರಿ, ಆದಿಯಲ್ಲಿ ಅನಾಪತಲಿಂಗವನರಿ.
ಲಿಂಗವಾರು ಅಂಗಾಂಗಲಿಂಗ ಸರ್ವಾಂಗಲಿಂಗ, ಲಿಂಗಸನುಮತವಾಯಿತ್ತು,
ಮಹಾವೃತ್ತಿಗೆ ಅನುಮತವಾಯಿತು, ನಿರ್ವಿಕಲ್ಪ ಪರಮಪದಕ್ಕೆ ತಾನೆ ಆಯಿತ್ತು.
ಇನ್ನು ಮಾನಸ ವಾಚಕ ಕಾಯಕದಲ್ಲಿ ಅವಿತಥವಿಲ್ಲದೆ
ಲಿಂಗಾರ್ಚನೆಯುಂ ಮಾಡುವರ ತೋರಿ ಬದುಕಿಸಾ
ಕೂಡಲಚೆನ್ನಸಂಗಮದೇವಯ್ಯಾ. ॥ ೩೪ ॥

೮೮೭

ಅಂಗಾಲಿಂದ ಮೊಳಕಾಲ ಪರಿಯಂತರ ಬಸವಣ್ಣ
ಮೊಳಕಾಲಿಂದ ಕಂಠ ಪರಿಯಂತರ ಚೆನ್ನಬಸವರಾಜದೇವರು
ಕಂಠದಿಂದ ಮೇಲೆ ಪ್ರಭುದೇವರು.
ಒಂದು ವಸ್ತು ಎರಡಾಯಿತ್ತು, ಎರಡು ವಸ್ತು ಮೂರಾಯಿತ್ತು.
ಆ ಮೂರುವಸ್ತುವನು ತಿಳಿದು ನೋಡಿದಡೆ
ಕೂಡಲಚೆನ್ನಸಂಗಯ್ಯನಲ್ಲಿ ಒಂದೆಯಾಯಿತ್ತು. || ೩೫ ||

೮೮೮

ಅಂಡಜ ಪಿಂಡಜ ಸ್ವೇದಜ ಉದ್ಭಿಜವೆಂಬ ಚೌರಾಸಿ ಜೀವಂಗಳಲ್ಲಿ ಹೊರಳದೆ,
ಕೃತಯುಗ ತ್ರೇತಾಯುಗ ದ್ವಾಪರಯುಗ ಕಲಿಯುಗವೆಂಬ
ಆಜ್ಞಾಪಾಶದಲ್ಲಿ ನಿದಿಯಾಗಿರ್ದು,
ಧರ್ಮ ಅರ್ಥ ಕಾಮ ಮೋಕ್ಷವು ಕನಸಿನಲ್ಲಿಯೂ ಹೊಗದೆ,
ಮನ ಬುದ್ಧಿ ಚಿತ್ತ ಅಹಂಕಾರವೆಂಬ ಅಂತಃಕರಣ ಚತುಷ್ಟಯಂಗಳಂ ಕೆಡಿಸಿ,
ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯವೆಂಬ ಚತುರ್ವಿದಪದಂಗಳಂ
ಬಯಸದೆ
ಹಠಯೋಗ ಲಯಯೋಗ ಮಂತ್ರಯೋಗ ರಾಜಯೋಗದಲ್ಲಿ ಹಂಬಲಿಸದೆ
ಬ್ರಹ್ಮಚಾರಿ ಗೃಹಸ್ಥ ವಾನಪ್ರಸ್ಥ ಯತಿಯೆಂಬ ಆಶ್ರಮಂಗಳಲ್ಲಿ
ವಿಶ್ರಾಮವಿಲ್ಲವೆಂದರಿದು
ಬ್ರಹ್ಮಕ್ಷತ್ರಿಯ ವೈಶ್ಯ ಶೂದ್ರನೆಂಬ ಸಮಾರೂಢಿಯಲ್ಲಿ ಬಳಸದೆ,
ಭೂಮಿ ಜಲ ಅಗ್ನಿ ಅನಿಲವೆಂದರಿಯದೆ,
ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣವೇದವೆಂಬ ಚತುರ್ವೇದದ
ಹೊಲಬನರಿಯದೆ
ಗುರುಲಿಂಗಜಂಗಮ ಪ್ರಸಾದವೆಂಬ ಘನವನರಿತು, ಪ್ರಪಂಚಿಗೆ ಹೊರತಾಗಿ
ಇಂತು ಚತುರ್ವಿದ ಸಂಪಾದನೆಗಳಂ ತೋರಿದ ಗುಹೇಶ್ವರ ಲಿಂಗದಲ್ಲಿ
ಬಸವಣ್ಣನಿಂದ ನಾಲ್ಕರ ಅಂತಸ್ಥವನರಿದೆನು ಕೂಡಲಚೆನ್ನಸಂಗಮದೇವಾ. || ೩೬ ||

೮೮೯

ಅಂತರಂಗದ ಅರಿವು, ಬಹಿರಂಗದ ಕ್ರಿಯೆ–
ಈ ಉಭಯಸಂಪುಟ ಒಂದಾದ ಶರಣಂಗೆ
ಓಂಗಿತ್ತು ತನುಸೂತಕ, ಹಿಂಗಿತ್ತು ಮನಸೂತಕ.

ಕೂಡಲಚೆನ್ನಸಂಗಯ್ಯನಲ್ಲಿ
ಸಂಗವಾದುದು ಸರ್ವೇಂದ್ರಿಯ. ॥ ೩೭ ॥

೮೯೦

ಅಂತರಂಗದ ನಿರವಯುವದು ಲಿಂಗವೆ?
ಬಹಿರಂಗದ ಸಾವಯುವದು ಜಂಗಮವೆ?
ಅಂತರಂಗದ ನಿರವಯುವದು
ಜ್ಞಾನಸೂಚನೆಯ ಭಾವವೆಂದು ನಾಚರು ನೋಡಾ.
ಬಹಿರಂಗದ ಸಾವಯುವ ವಿಷಯದೃಷ್ಟಿಯೆಂದು ಹೆಸರು ನೋಡಾ.
ಈ ಉಭಯ ಒಂದಾದಡದು ಅಭೇದ್ಯ ಕೂಡಲಚೆನ್ನಸಂಗ ನಿಮ್ಮಲ್ಲಿ. ॥ ೩೮ ॥

೮೯೧

ಅಂತರಂಗದಲ್ಲಿ ಅರಿವಾದಡೇನಯ್ಯಾ ಬಹಿರಂಗದಲ್ಲಿ ಕ್ರೀ ಇಲ್ಲದನ್ನಕ್ಕ?
ದೇಹವಿಲ್ಲದಿರ್ದಡೆ ಪ್ರಾಣಕ್ಕಾಶ್ರಯವುಂಟೆ?
ಕನ್ನಡಿಯಿಲ್ಲದಿರ್ದಡೆ ತನ್ನ ಮುಖವ ಕಾಣಬಹುದೆ?
ಸಾಕಾರ ನಿರಾಕಾರ ಏಕೋದೇವ,
ನಮ್ಮ ಕೂಡಲಚೆನ್ನಸಂಗಯ್ಯನು. ॥ ೩೯ ॥

೮೯೨

ಅಂತರಂಗದಲ್ಲಿ ಪ್ರಭುದೇವರನೊಳಕೊಂಡ,
ಬಹಿರಂಗದಲ್ಲಿ ಎನ್ನನೊಳಕೊಂಡ;
ಈ ಉಭಯಸಂಗ ಮಧ್ಯದಲ್ಲಿ ನಿಜೈಕ್ಯನಾಗಿರ್ದನು.
ಪ್ರಸಾದದಲ್ಲಿ ಪರಮಾನಂದ ಸುಖಿ;
ಅರಿವಿನಲ್ಲಿ ಕುರುಹಳಿದ ಘನದ ನಿಲವು.
ಕೂಡಲಚೆನ್ನಸಂಗಮದೇವಾ
ಬಸವಣ್ಣನ ಪಾದಕ್ಕೆ ನಮೋ ನಮೋ ಎಂಬೆನು. ॥ ೪೦ ॥

೮೯೩

ಅಂತರಂಗದಲ್ಲಿ ಭಾವಿಸುವನಲ್ಲ, ಬಹಿರಂಗದಲ್ಲಿ ಬಳಸುವನಲ್ಲ.
ಎರಡನತಿಗಳೆದು ತನ್ನಲ್ಲಿ ತಾನೆ ಸಹಜ ನೋಡಾ.
ಅಂತರಂಗವಿಲ್ಲ ಬಹಿರಂಗವಿಲ್ಲ
ಕೂಡಲಚೆನ್ನಸಂಗಾ, ನಿಮ್ಮ ಶರಣಂಗೆ. ॥ ೪೧ ॥

೮೯೪

ಅಂದೊಮ್ಮೆ ಧರೆಯ ಮೇಲೆ ಬೀಜವಿಲ್ಲದಂದು
ಬಸವನೆಂಬ ಗಣೇಶ್ವರನು ಭೋಂಕರಿಸಿ ಕೆಲೆದಡೆ
ಬೀಜ ಉತ್ಪತ್ತಿಯಾಯಿತ್ತು.
ಅದನೆ ಬಿತ್ತಿ ಅದನೆ ಬೆಳೆದು ಅದನೆ ಅಟ್ಟಟ್ಟು ಲಿಂಗಕ್ಕೆ ಬೋನವ ಮಾಡಿ–
ನಾಗಲೋಕದ ನಾಗಗಣಂಗಳಿಗೆಯೂ ಬಸವಣ್ಣನ ಪ್ರಸಾದ,
ಮರ್ತ್ಯಲೋಕದ ಮಹಾಗಣಂಗಳಿಗೆಯೂ ಬಸವಣ್ಣನ ಪ್ರಸಾದ,
ದೇವಲೋಕದ ದೇವಗಣಂಗಳಿಗೆಯೂ ಬಸವಣ್ಣನ ಪ್ರಸಾದ,
ಎಲೆ ಕೂಡಲಚೆನ್ನಸಂಗಮದೇವಾ,
ನಿಮ್ಮಾಣೆ, ನಿಮಗೂ ಎನಗೂ ಬಸವಣ್ಣನ ಪ್ರಸಾದ! || ೪೨ ||

೮೯೫

ಅಂಧಕನು ಓಡ ಹಿಡಿದು ತನ್ನ ಸ್ವರೂಪವ ತಾ ನೋಡುವಂತೆ,
ಶೈವ ಗುರುವಿನಲ್ಲಿ ಲಿಂಗಸಾಹಿತ್ಯವಾದ ಶಿಷ್ಯನ ವಿಧಿಯ ನೋಡಿರೆ!
ಗುರುವಿಂಗೆ ದೂರಾರ್ಚನೆ ಶಿಷ್ಯಂಗೆ ಇಷ್ಟಲಿಂಗಾರ್ಚನೆ,
ಗುರು ವಾಯುಪ್ರಾಣಿ, ಶಿಷ್ಯ ಲಿಂಗಪ್ರಾಣಿ,
ಗುರು ಭೂತದೇಹಿ, ಶಿಷ್ಯ ಲಿಂಗದೇಹಿ,
ಗುರು ಅನರ್ಪಿತಭುಂಜಕ, ಶಿಷ್ಯ ಲಿಂಗಾರ್ಪಿತಭುಂಜಕ,
ಗುರು ಅಗ್ನಿದಹನಸಂಪತ್ತು, ಶಿಷ್ಯ ಸಿದ್ಧಸಮಾಧಿಸಂಪತ್ತು,
ಎಂತುಂಟು ಹೇಳಿರಣ್ಣಾ?
"ಜ್ಞಾನಹೀನ ಗುರೌಪ್ರಾಪ್ತೇ ಶಿಷ್ಯಜ್ಞಾನಂ ನ ಸಿಧ್ಯತಿ।
ಮೂಲಚ್ಛಿನ್ನೇ ತಥಾ ವೃಕ್ಷೇ ಕಥಂ ಪುಷ್ಪಂ ಫಲಂ ಭವೇತ್॥ ಎಂದುದಾಗಿ
ಇವರಿಬ್ಬರ ಗುರುಶಿಷ್ಯಸಂಬಂಧಕ್ಕೆ ನರಕ ತಪ್ಪದು ಕಾಣಾ
ಕೂಡಲಚೆನ್ನಸಂಗಮದೇವಾ. || ೪೬ ||

೮೯೬

ಅಂಧಕಾರವೆಂಬ ಗಹ್ವರದೊಳಗೆ ನಿಪ್ರೇಯೆಂಬ ರಾಕ್ಷಸಿ ಗ್ರಹಿಸಿ
ವೀರರ ಮುಚ್ಚುಮಾಡಿ, ಧೀರರ ಧೃತಿಗೆಡಿಸಿ
ಶಾಪಾನುಗ್ರಹಸಮರ್ಥರ ಸತ್ತ್ವಂಕಿರಿಸಿ
ನಿಚ್ಚ ನಿಚ್ಚ ಜೀವನ ನಾಶವ ಮಾಡುತ್ತಿಹುದು ನೋಡಯ್ಯಾ,
ಕೂಡಲಚೆನ್ನಸಂಗಮದೇವಾ. || ೪೪ ||

೮೯೭

ಅಕಾಯನೆಂಬ ಜಂಗಮು ಮರ್ತ್ಯಕ್ಕೆ ಬಂದು,
ಎನ್ನ ಧನ್ಯನ ಮಾಡಲೆಂದು,
ಸಕಲ ಧಾನ್ಯಗಳ ಪೂರ್ವಾಶ್ರಯವ ಕಳೆದು
ಪ್ರಸಾದವೆಂದು ಹೆಸರಿಟ್ಟನು.
ಆ ಜಂಗಮದ ಹಸ್ತದಲ್ಲಿ ಭಕ್ತಿ ಇಹುದು,
ಆ ಜಂಗಮದ ಜಿಹ್ವೆಯಲ್ಲಿ ಪ್ರಸಾದ ಇಹುದು,
ಆ ಜಂಗಮದ ದೇಹದಲ್ಲಿ ಜಂಗಮು ಇಹುದು.
ಇಂತೀ ತ್ರಿವಿಧಪ್ರಸಾದವನಿಕ್ಕಿದ ಜಂಗಮಕ್ಕೆ ಶರಣೆಂದು
ಶುದ್ಧನಾದೆನಯ್ಯಾ ಕೂಡಲಚೆನ್ನಸಂಗಮದೇವಾ. || ೪೫ ||

೮೯೮

ಅಕಾಯ ಸನ್ನಹಿತವಾಯಿತ್ತಲ್ಲಾ;
ಅಕಾಯ ಅಳವಟ್ಟಿತ್ತಲ್ಲಾ;
ಅಕಾಯ ನಿಂದು ನಿವಾಸವಾಯಿತ್ತಲ್ಲಾ;
ಕೂಡಲಚೆನ್ನಸಂಗಾ ನಿನ್ನಿಂದೆ ನಿಂದಿತಲ್ಲಾ! || ೪೬ ||

೮೯೯

ಅಗ್ಗವಣಿ ಸುಯಿದಾನವಾದ ಶರಣಂಗೆ,
ತನು ಸುಯಿದಾನವಾಗಬೇಕು.
ತನು ಸುಯಿದಾನವಾದ ಶರಣಂಗೆ
ಮನ ಸುಯಿದಾನವಾಗಬೇಕು.
ಮನ ಸುಯಿದಾನವಾದ ಶರಣಂಗೆ
ಪ್ರಾಣದ ಮೇಲೆ ಲಿಂಗ ಸಯುವಾಗಬೇಕು.
ಪ್ರಾಣದ ಮೇಲೆ ಲಿಂಗ ಸಯುವಾಗದಿರ್ದಡೆ
ಇವೆಲ್ಲ ವೃಥಾ ಎಂದಿತ್ತು ಕೂಡಲಚೆನ್ನಸಂಗಯ್ಯನ ವಚನ. || ೪೭ ||

೯೦೦

ಅಘಟಿತ ಘಟಿತವೆಂಬ ಮಹಾಘನವ ಸಾಧಿಸುವಡೆ,
ಮಡಿವಾಳನ ಕೃಪೆಯಿಲ್ಲದನ್ನಕ್ಕರ, ಎಂತರಿಯಬಪ್ಪುದು ನಿಜಲಿಂಗೈಕ್ಯವನು?
ಎನ್ನ ಆರೂಢಿಯ ಅರಿವಿಂಗೆ ನೀನೆ ಶೃಂಗಾರ.

ಕೂಡಲಚೆನ್ನಸಂಗಮದೇವರಲ್ಲಿ
ಮಡಿವಾಳನ ಕೈಯ ಸ್ವಾಯತವಾದೆನು ಕಾಣಾ ಪ್ರಭುವೆ. || ೪೮ ||

೬೦೧

ಅಗ್ಘವಣಿಯನೆ ತುಂಬಿ,
ಪುಷ್ಪವನೆ ತಂದು ಪೂಜಿಸಿ ಲಯಕ್ಕೊಳಗಾದರು.
ಜನಮರುಳೋ ಜಾತ್ರೆಮರುಳೊ
ಅಘ್ಘವಣಿಯನೆ ತುಂಬಿದ ಜಲ ಬತ್ತಿಹೋಯಿತ್ತು,
ಪುಷ್ಪವನೆ ತಂದು ತಂದು ಗಿಡು ಅಡವಿ ಕೂಡಿತ್ತು.
ನೀ ಪೂಜಿಸಿದ ಪೂಜೆ
ಗಿಡುವು ಮಡವಿಗಲ್ಲದೆ ನಿನಗೆಲ್ಲಿಹುದೋ?
ಮಾಡಿ ಮಾಡಿ ಮಡಕೆ ಕೇಡು.
ಮಾಡಿ ಮನ ಮರುಗದೆ, ನೀಡಿ ನಿಜವಿಲ್ಲದೆ
ಅಣ್ಣಗಳ ಕೆಟ್ಟ ಕೇಡು ನೋಡಾ
ಮಹಾದಾನಿ ಕೂಡಲಚೆನ್ನಸಂಗಮದೇವಾ. || ೪೯ ||

೬೦೨

ಅಚ್ಚಪ್ರಸಾದಿ ಅಚ್ಚಪ್ರಸಾದಿಗಳೆಂಬ
ಹುಚ್ಚರ ನಾನೇನೆಂಬೆನಯ್ಯಾ.
ಲಿಂಗದ ಹವಣನರಿಯದೆ ತನ್ನ ಒಡಲ ಹವಣಿಂಗೆ
ಗಡಣಿಸಿಕೊಂಬ ದುರಾತ್ಮರನೇನೆಂಬೆನಯ್ಯಾ
ತನ್ನ ಒಡಲ ಹವಣಿಂಗೆ ಮನವು ಸಾಕೆಂದು
ತೃಪ್ತಿಯಾದುದು
ಲಿಂಗಾರ್ಪಿತಕ್ಕೆ ಅದು ಸಲುವುದೆ, ಹೇಳಿರೆ?
ಆ ಲಿಂಗವು ಮುಟ್ಟದ ಅನರ್ಪಿತವನುಂಡು
ಅಚ್ಚಪ್ರಸಾದಿಗಳೆನಿಸಿಕೊಂಬವರ
ಲಿಂಗದಲ್ಲಿ ಸಜ್ಜನ ಸನ್ನಹಿತ ಶರಣರು ಮೆಚ್ಚುವರೆ?
ಬಂದ ಬಂದ ಸಕಲ ಪದಾರ್ಥಗಳೆಲ್ಲವ
ಲಿಂಗಕ್ಕೆ ಅರ್ಪಿಸಿಕೊಳ್ಳಬಲ್ಲಡೆ
ಕೂಡಲಚೆನ್ನಸಂಗಯ್ಯನಲ್ಲಿ ಆತನೆ ಅಚ್ಚಪ್ರಸಾದಿ. || ೫೦ ||

೯೦೩

ಅಚ್ಚಪ್ರಸಾದಿ ಅಚ್ಚಪ್ರಸಾದಿಯೆಂದು
ನಿಚ್ಚಕ್ಕೆ ಬಗುಳುವ ಕುನ್ನಿಗಳ ನೋಡಾ!
ಬರದ ನಾಡಿಂದ ಬಂದ ಬಣಗುಗಳಂತೆ
ಮತ್ತಿಕ್ಕುವರೊ ಇಕ್ಕರೊ ಎಂದು ಒಟ್ಟೈಸಿಕೊಂಡು ತಿಂದು
ಮಿಕ್ಕುದ ಬಿಸುಡುವ ಕುನ್ನಿಗಳ ಮೆಚ್ಚುವನೆ
ನಮ್ಮ ಕೂಡಲಚೆನ್ನಸಂಗಮದೇವರು? ॥ ೫೧ ॥

೯೦೪

ಅಚ್ಚಪ್ರಸಾದಿ, ನಿಚ್ಚಪ್ರಸಾದಿ, ಸಮಯ ಪ್ರಸಾದಿಗಳ ವಿವರ:
ಗುರು ಮೊದಲು 'ಆಚರಿಸುವಂತಹ ಮರ್ಮವನು ತಿಳಿದು
ಶಿವಸಂಸ್ಕಾರವನು ಹೊಂದಿ ನಡೆ' ಎಂದು, ಅತಿ ಮೋಹನದಿಂದ
ಸಮಸ್ತ ಮರ್ಮವನು ತಿಳುಹಿ
ಹಿಡಿದ ವ್ರತಾಚರಣೆಗೆ ಸಂದು ಇಲ್ಲದ ಹಾಗೆ
ಅಪಮೃತ್ಯು ಬಂದು ಸೋಂಕದ ಹಾಗೆ
ಪ್ರಮಥಕೃಪಾಕಟಾಕ್ಷದಿಂದ ನಡೆದು ಹೋಗುವರು;
ಅವರೆ ಅಚ್ಚಪ್ರಸಾದಿಗಳು, ಮರ್ತ್ಯಲೋಕದ ಮಹಾಗಣಂಗಳೆನಿಸುವರು.
ಮಿಕ್ಕಿನ ನಿಚ್ಚಪ್ರಸಾದಿಗಳು ಸಮಯ ಪ್ರಸಾದಿಗಳು–
ಅವರು ನಡೆದ ಮೇಲುಪಂಕ್ತಿ ಆಚರಣೆಯ ನೋಡಿ,
ಅವರಂತಹ ಸುವಿವೇಕ ನಮಗೆ ಬಾರದೆಂಬುದ ತಿಳಿದು,
ಅವರೆ ತಮ್ಮ ಇಷ್ಟಲಿಂಗವಾಗಿ, ತಾವೆ ಅವರ ಭೃತ್ಯರಾಗಿ ನಡೆಯುತ್ತ
ಏಕಾರ್ಥ ಪರಮಾರ್ಥಕ್ಕೆ ಸಮಾನವಾಗಿ ಆಚರಿಸಬೇಕೆಂಬ
ಅನುಸರಣೆ ಅವರಲ್ಲಿ ಹುಟ್ಟಿದ ನಿಮಿತ್ತ,
ಅದೇ ಜಂಗಮ ಬಂದು ನಿಚ್ಚಪ್ರಸಾದಿಗಳಿಗೆ ಎರಡರಲ್ಲಿ ಅಶಕ್ತರೆಂದು ತಿಳಿದು
ಅತಿ ಸೂಕ್ಷ್ಮವಾಗಿ ಅವರಿಬ್ಬರ ಆಚರಣೆಯ ಅವರಿಬ್ಬರಲ್ಲಿ ಪರಿಸಿ,
ಆಯಾಯ ತತ್ಕಾಲಕ್ಕೆ ಜಂಗಮ ದೊರೆದಂತಹದೆ ಆಚರಣೆ,
ಜಂಗಮ ದೊರೆಯದಂತಹದೆ ಸಂಬಂಧ ಎಂದು ಅರುಹಿಕೊಟ್ಟಲ್ಲಿ,
ದೊರೆದಾಗಲಿಂತು ಆಚಾರ ಒಡಂಬಡಿಕೆ,
ದೊರೆಯದಾಗ ಆಚಾರ ಒಡಂಬಡಿಕೆಯಾಗದು–ಎಂದು ಮರ್ಮವ ತಿಳಿದು,
ಜಂಗಮವು ಇಲ್ಲದ ವೇಳೆಗೆ ಅತಿಸೂಕ್ಷ್ಮವಾಗಿ
ಅತಿವಿಶಾಲದಿಂದ ನಿರೂಪಿಸುತಿರ್ದರು–
ಆ ಗುರು ಮೊದಲಲ್ಲಿ ಲಿಂಗವ ಕರುಣಿಸಿ ಕೊಟ್ಟಂತಹುದೆ ನಿಮ್ಮ ಕಳೆ;

ನಾ ನಿಮ್ಮ ಚಿತ್ತು; ಎರಡರ ಸಮರಸವೆ ನಿಮ್ಮ ಬಿಂದು;
ಆ ಬಿಂದುವೆ 'ಅ'ಕಾರ ಪ್ರಣವ:
ನಿಮ್ಮ ಇಷ್ಟಲಿಂಗದ ಶಕ್ತಿಪೀಠದಲ್ಲಿ ಗುರುವಾಗಿ,
ಆ ಕಳೆಯೆ 'ಮ'ಕಾರ ಪ್ರಣವ.
ನಿಮ್ಮ ಲಿಂಗದ ಗೋಮುಖದಲ್ಲಿ ಜಂಗಮವಾಗಿ,
ಆ ಎರಡರ ಕೂಟವೆ ನಾದ; ಅದೆ 'ಉ'ಕಾರ ಪ್ರಣವ.
ನಿಮ್ಮ ಲಿಂಗದ ಗೋಳಕದಲ್ಲಿ ಲಿಂಗವಾಗಿ,
ಆ ಲಿಂಗವೆ ನಿಮ್ಮ ರಮಣನೆಂದು ಭಾವಿಸಿದ ನಿಮಿತ್ತ
ನೀವೆ ಲಿಂಗವಾದ ಕಾರಣ ಆ ಲಿಂಗವೆ ನಿಮ್ಮ ಅಂಗವಾಗಿ,
ಆ ಜಂಗಮವೆ ನಿಮ್ಮ ಪ್ರಾಣವಾಗಿ,
ಗುರುವೆ ನಿಮ್ಮ ಆಚರಣೆಯಾಗಿರ್ದ ನಿಮಿತ್ತ,
ಅದೇ ಗುರುವೆ ನಿಮ್ಮ ವಾಙ್ಮನದಲ್ಲಿ, ಅದೇ ಲಿಂಗವೆ ನಿಮ್ಮ ಕರಕಮಲದಲ್ಲಿ
ಅದೇ ಜಂಗಮವೆ ನಿಮ್ಮ ವಿಗ್ರಹದಲ್ಲಿ,
ನೆಲೆಗೊಂಡಿರ್ಪುದೆಂದು ಸಂಬಂಧಿಸಿಕೊಟ್ಟಲ್ಲಿ
ಆ ಗುರು ಹೇಳಿದಂತಹ ಪತಿವ್ರತಾಧರ್ಮ ತಿಳಿಯದೆ ಆಚರಿಸಿದ ಕಾರಣ
ಆಯಾಯ ತತ್ಕಾಲದಲ್ಲಿ ಬಂದೊದಗುವವು,
ಅದೇ ಸಮರಸಾಚರಣೆಯ ಉಪಚಾರವು.
ನೀವು ಯಾವಸ್ಥಲವಿಡಿದು ಆಚರಿಸಿದಡೆಯೂ, ಆಯಾಯ ಸ್ಥಲಂಗಳಲ್ಲಿ
ಆರು ಸ್ಥಲಂಗಳು ಬಂದು ಸಂಬಂಧವಾಗುವುವು.
ಮಿಕ್ಕಿನ ಉಪದೇಶವಿಲ್ಲದೆ ಶುದ್ಧಶೈವರಿಗೆ ಗುರು,
ಅಷ್ಟಷ್ಟು ಜಪ-ಶಿವಾರ್ಚನೆಯ ಹೇಳಿ
'ಹೀಗೆ ಆಚರಿಸು' ಎಂದರುಹಿಕೊಟ್ಟಲ್ಲಿ, ಅವರಿಗೆ ಒಂದೆ ಸ್ಥಲ ಸಂಬಂಧವು.
ಅವರಿಗೆ ಮತ್ತೊಂದು ಸ್ಥಲದ ಮರ್ಮವ ಗುರು ಅರುಹಿ ಕೊಡಲಿಲ್ಲ.
ಏನು ಕಾರಣವೆಂದಡೆ ಅವರು ಅಶಕ್ತರಾದ ನಿಮಿತ್ತ.
ಅವರು ಖಂಡಿತಾಚರಣೆಯುಳ್ಳವರು.
ಅವರಿಗೆ ಸಮರಸಾಚರಣೆ ಹೊಂದದ ನಿಮಿತ್ತ
ಅವರು ಮೂರು ಜನ್ಮಕ್ಕೆ ಮುಕ್ತರು.
ಅದರಲ್ಲಿ ತಪ್ಪಿ ನಡೆದಡೆ ನೂರು ಜನ್ಮಕ್ಕೆ ಮುಕ್ತರು.
ಹಾಗಾದಡೆಯೂ ಖಂಡಿತಮುಕ್ತರಲ್ಲದೆ ನಿಜಮುಕ್ತರಲ್ಲ.
ಇದನರಿತು ಶ್ರೀಗುರುನಾಥನು ಅವರಿಗೆ ತಕ್ಕಂತಹ ನಡತೆಯು
ಅರುಹಿಕೊಡುವನಲ್ಲದೆ ಹೆಚ್ಚಾಗಿ ಅರುಹಿಕೊಡನು.
ಕೂಡಲಚೆನ್ನಸಂಗಮದೇವಾ. ॥ ೫೨ ॥

೯೦೫

ಅಚೇತನವಪ್ಪ ಶಿಲಾಮಯಲಿಂಗವು,
ಸಚೇತನವಪ್ಪ ಭಕ್ತನ ಭವರೋಗವನೆಂತು ಕಳೆಯಬಲ್ಲುದು?
ಎಂಬ ಬರುಮಾತಿನ ಮಾನವರ ಮಾತ ಕೇಳಲಾಗದು.
ಅದೇನು ಕಾರಣವೆಂದಡೆ,
ಮಿಸುನಿಯಿಂದುಂಟಾದ ಕಟಕ ಮಕುಟಾದಿ ತೊಡವುಗಳು
ಮಿಸುನಿಯಲ್ಲದೆ ಮತ್ತೊಂದು ರೂಪಾಗಬಲ್ಲುದೆ ಹೇಳಾ?
ಆತ್ಮನಿಂದಾದ ಆಕಾಶಾದಿ ಭೂತಪಂಚಕವು
ಆತ್ಮನೆ ಅಲ್ಲದೆ ಮತ್ತೊಂದು ರೂಪಾಗಬಲ್ಲುದೆ ಹೇಳಾ?
ಅದುಕಾರಣ–ಧರೆಯ ಕಠಿಣಾಂಗವಾದ ಶಿಲೆಯಲ್ಲೂ
ಶಿವಾಂಶವಿರ್ಪುದು ಸಹಜವೆಂದರಿತು
ಶ್ರೀಗುರು, ಶಾಸ್ತ್ರಸಮ್ಮತವಾದ ಶಿಲಾಮಯಲಿಂಗದಲ್ಲಿ
ವ್ಯಕ್ತವಾಗುವಂತೆ ಶಿವಕಲೆಯ ಪ್ರತಿಷ್ಠಿಸಿ,
ಇಷ್ಟಲಿಂಗವಾಗಿ ಮಾಡಿ ಶಿಷ್ಯನ ಕರಕಮಲಕ್ಕೆ ಕರುಣಿಸಿಕೊಟ್ಟು,
ಆ ನಿರಾಕಾರವಪ್ಪ ಪರಬೊಮ್ಮವೆ ತಿಳಿದುಪ್ಪ ಬಿಳಿದುಪ್ಪವಾದಂತೆ
ಸಾಕಾರವಾಗಿ ನಿನ್ನ ಕರಕಮಲಕ್ಕೆ ಬಂದಿರ್ಪುದು.
'ಯದ್ಭಾವಸ್ತದ್ಭವತಿ' ಎಂಬ ಪ್ರಮಾಣವುಂಟಾಗಿ,
ಇದನಿನ್ನು ಸದ್ಭಾವದಿಂದರ್ಚಿಸೆಂದು ಅಪ್ಪಣೆಯನಿತ್ತನು.
ಈ ಮರ್ಮವನರಿಯದೆ ಮನಬಂದಂತೆ ಮಾತಾಡುವ ಮನುಜರ
ಮಳುಗೊಂಡದಲ್ಲಿಕ್ಕದೆ ಮಾಣ್ಬನೆ ನಮ್ಮ ಕೂಡಲಚೆನ್ನಸಂಗಮದೇವ? || ೫೩ ||

೯೦೬

ಅಜಕೋಟಿ ಕಲ್ಪ ವರುಷದವರೆಲ್ಲರು ಹಿರಿಯರೆ?
ಪುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರು ಹಿರಿಯರೆ?
ನಡುಮುರಿದು ಗುಡುಗೂರಿ ತಲೆ ನಡುಗಿ ನೆರೆತೆರೆ ಹೆಚ್ಚಿ, ಮತಿಗೆಟ್ಟು
ಒಂದನಾಡ ಹೋಗಿ ಒಂಬತ್ತನಾಡುವ ಅಜ್ಞಾನಿಗಳೆಲ್ಲರು ಹಿರಿಯರೆ?
ಅಸುವನರಿದು, ಘಸವ ಬೆರಸಿ ಹಿರಿದು ಕಿರಿದೆಂಬ ಭೇದವ ಮರೆದು
ಕೂಡಲಚೆನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ
ನಮ್ಮ ಮಹಾದೇವಿಯಕ್ಕಂಗಾಯಿತ್ತು. || ೫೪ ||

೯೦೭

ಅಜ್ಞಾನ ವಶೀಕೃತರಾದವರು ಷಡುದರುಶನಂಗಳಲ್ಲಿ ಹೊಕ್ಕು
ಪರವೈವಂಗಳ ಲಾಂಛನ ಮುದ್ರೆಯಪ್ಪ ಶಂಖ ಚಕ್ರ ಅಂಕುಶ ಪಾಶ

ಗದಾದಿಯಾದವರಿಂದ ಶ್ರೇಷ್ಠೋಪದೇಶವೆಂದು
ಕರ ಬಾಹು ಭುಜ ಉರ ಲಲಾಟ ಮೊದಲಾದ ಅವಯುವಂಗಳಲ್ಲಿ
ರಚಿಸಲ್ಪಟ್ಟವರಾಗಿ
ದಹನಾಂಕ ಲೇಖನವಾದವರು ಷಡುದರ್ಶನ ಬ್ರಾಹ್ಮಣರಲ್ಲ.
ಅದಂತೆಂದಡೆ:
ಯಮಸ್ಮೃತಿಯಲ್ಲಿ : ನಾಕಯೇನಾಂಚ ದೇಹತ್ರ ದೇವತಾಯುಧ ಲಾಂಛನಃ
ದಹನ ಲೇಖನಾ ದ್ವಿಪ್ರ ಪಾತ್ಯಯಾಂತಿ ಲಕ್ಷಣಾತ್–ಎಂದುದಾಗಿ
ಯಜ್ಞವೈಭವ ಕಾಂಡದಲ್ಲಿ–
ಕೆನ ಚಿಹ್ನಾಂಕಿತೋಮರ್ತ್ಯೋಃನ ಸಾಕ್ಷಿ ಸರ್ವತೋ ಭವೇತ್
ಶ್ರೌತಾರ್ಥೇಷು ಸದಾಚಾರೇ ನಾಧಿಕಾರಿ ಚಲಾಂಕಿತಃ–ಎಂದುದಾಗಿ
ಇಂತಪ್ಪ ಪಾಷಂಡಿ ಪತಿತ ನರಕ ಜೀವಿಗಳಿಗೆ
ಶಾಸ್ತ್ರಾರ್ಥಾದಿಯಾದ ಸದಾಚಾರಂಗಳಲ್ಲಿ ದೈವಕರ್ಮಂಗಳಲ್ಲಿ
ಅಧಿಕಾರತ್ವವಿಲ್ಲವಾಗಿ ನರಕವನೈದುವರು
ಕಾಣಾ ಕೂಡಲಚೆನ್ನಸಂಗಮದೇವಾ. || ೫೫ ||

೯೦೮

ಅಜ್ಞಾನವೆಂಬ ಕಾಳಿಕೆವಿಡಿದ
ಮನದ ಮೋಹವ ಪರಿಹರಿಸಿದ ಪರಿಯ ನೋಡಿರೆ!
ಒಮ್ಮೆ ಕಾಸಿ ಒಮ್ಮೆ ಕರಗಿಸಿ ಒಮ್ಮೆ ಬಣ್ಣವಿಟ್ಟು
ಎನ್ನ ಮನದ ಮೋಹವ ಕಳೆದನಯ್ಯಾ
ಕೂಡಲಚೆನ್ನಸಂಗಯ್ಯಾ ನಿಮ್ಮ ಶರಣ ಬಸವಣ್ಣನು. || ೫೬ ||

೯೦೯

ಅಡಿಗಡಿಗೆ ಸ್ಥೂಲಸೂಕ್ಷ್ಮವೆಂಬ ಶಬ್ದಪರಿಭಾವ ತಲೆದೋರದೆ,
ಸಂಗ–ಮಹಾಸಂಗ–ಸಂಕಲ್ಪವಿರಹಿತನು.
ಸದ್ಯೋಜಾತ ವಾಮದೇವ ತತ್ಪುರುಷ ಅಘೋರ ಈಶಾನವೆಂಬ
ಪಂಚವಕ್ತ್ರವನು ಊರ್ಧ್ವಮುಖಕ್ಕೆ ತಂದು
ಅರ್ಪಿಸಬಲ್ಲನಾಗಿ ಗುರುಪ್ರಸಾದಿ.
ಪೃಥ್ವಿ ಅಪ್ಪು ತೇಜ ವಾಯು ಆಕಾಶ ಚಂದ್ರ ಸೂರ್ಯ ಆತ್ಮ
ಇಂತೀ ಅಷ್ಟಮೂರ್ತಿಮದವನು
ದಾಸೋಹದಲ್ಲಿ ಅರ್ಪಿಸಬಲ್ಲನಾಗಿ ಜಂಗಮಪ್ರಸಾದಿ.
ಹೊರಗೆ ಭಜಿಸಲಿಲ್ಲ, ಒಳಗೆ ನೆನೆಯಲಿಲ್ಲ
ಸರ್ವಾಂಗಲಿಂಗಿಯಾಗಿ ಲಿಂಗಪ್ರಸಾದಿ.

ಇದು ಕಾರಣ, ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣ ಮಹಾಪ್ರಸಾದಿ. ॥ ೫೭ ॥

೯೧೦

ಅಡಿಪಾದದಿಂದೆ ಮೂರು ವೇಳೆ ಸ್ಪರ್ಶನವ ಮಾಡಿಕೊಳ್ಳುವುದೆ
ಧೂಳಪಾದೋದಕ,
ಅದೇ ದೀಕ್ಷಾಪಾದೋದಕವೆನಿಸುವುದು.
ಅದರಿಂದ ಸ್ನಾನ ಮುಖಪ್ರಕ್ಷಾಲನ ಅಭಿಷೇಕವ ಮಾಡಿಕೊಂಬುದು.
"ಜಂಗಮಾನಾಂ ಚ ಪಾದೋದಂ ಪಾನೀಯಂ ಚ ಕದಾಚನ।
ಸ್ನಾತವ್ಯಂ ಮೂರ್ಧ್ನಿ ಧರ್ತವ್ಯಂ ಪ್ರೋಕ್ಷಿತವ್ಯಂ ಸ್ವದೇಹಕೇ"॥ –ಎಂದುದಾಗಿ,
ಈ ರೀತಿಯಲ್ಲಿ ನಡೆಯಬಲ್ಲಡೆ
ಆತನೆ ಅಚ್ಚಶರಣನೆಂಬೆ ಕೂಡಲಚೆನ್ನಸಂಗಮದೇವಾ. ॥ ೫೮ ॥

೯೧೧

'ಅಣೋರಣೀಯಾನ್ ಮಹತೋ ಮಹೀಯಾನ್'। ಎಂದು ಶ್ರುತಿವಿಡಿದು
ಅಣು ರೇಣು ತೃಣಕಾಷ್ಠದೊಳಗೆ ಶಿವನು ಕೂಡೆ ಜಗಭರಿತನೆಂಬ
ಪಾತಕರ ನುಡಿಯ ಕೇಳಲಾಗದು, ಅದೇನು ಕಾರಣವೆಂದಡೆ:
ಜನ್ನಕ್ಕೆ ತಂದ ಕನ್ನೆಯಾಡು ಶ್ರುತಿಯಿಂದ ಹೊರಗು.
ಸರ್ವವೂ ಶಿವಮಯವೆಂಬ ಪಾತಕರ ನುಡಿಗಿನ್ನೆಂತೊ?
ಅಂತ್ಯಜ–ಅಗ್ರಜ, ಮೂರ್ಖ–ಪಂಡಿತರೆಂಬ ಭೇದಕ್ಕಿನ್ನೆಂತೊ?
ಜಗದೊಳಗೆ ಶಿವ, ಶಿವನೊಳಗೆ ಜಗವೆಂಬ ಭ್ರಮಿತರ ನುಡಿಗಿನ್ನೆಂತೊ?
'ಜಲಮಿತಿ ಭಸ್ಮ ಸ್ಥಲಮಿತಿ ಭಸ್ಮ ಅಗ್ನಿರಿತಿ ಭಸ್ಮ
ವಾಯುರಿತಿ ಭಸ್ಮ ವ್ಯೋಮೇತಿ ಭಸ್ಮ, ಸೋಮ ಇತಿ ಭಸ್ಮ
ಸೂರ್ಯ ಇತಿ ಭಸ್ಮ ಸರ್ವಮಿದಂ ಭಸ್ಮ'॥ ಎಂದುದಾಗಿ
ಜಗದೊಳಗೆ ಶಿವನಿಲ್ಲ, ಶಿವನೊಳಗೆ ಜಗವಿಲ್ಲ, ಶಿವ ಜಗವಾದ ಪರಿ ಇನ್ನೆಂತೊ?
ಅದೆಂತೆಂದಡೆ:
ಯಂತ್ರಧಾರೀ ಮಹಾದೇವೋ ಯಂತ್ರಪಾಣಸ್ಸ ಏವ ಹಿ।
ಯಂತ್ರಕರ್ಮ ಚ ಕರ್ತಾ ಯಂತ್ರವಾಹಾಯ ವೈ ನಮಃ॥
ಎಂದುದಾಗಿ; ಸಕಲಬ್ರಹ್ಮಾಂಡಗಳೆಂಬ ಯಂತ್ರಗಳ ವಾಹಕ
ನಮ್ಮ ಕೂಡಲಚೆನ್ನಸಂಗಯ್ಯ. ॥ ೫೯ ॥

೯೧೨

ಅತಮಥನವೆಂಬ ಶೂನ್ಯಸಿಂಹಾಸನವನೇರಿಕೊಂಡು
ನಾವೆ ಹಿರಿಯರು ನಾವೆ ದೇವರೆಂಬರು,
ತಮ್ಮ ತಾವರಿಯರು.
ಅದ್ಭುತಮನಭುಂಜಕರ ಮೆಚ್ಚ
ನಮ್ಮ ಕೂಡಲಚೆನ್ನಸಂಗಮದೇವ. ||೬೦||

೯೧೩

ಅದ್ವೈತಿಗಳು ಲಿಂಗಾರಾಧನೆ ಹುಸಿಯೆಂದು ಬುದ್ಧಿಗೆಟ್ಟರು
ಆಗಮವನರಿಯದೆ ಬೊಮ್ಮನ ನೆರೆದಡೆ
ಬ್ರಹ್ಮನ ಶಿರವ ಕೊಂಡುದನರಿಯಿರೊ!
ಬೊಮ್ಮವಾದಿಗಳೆಲ್ಲ ಲಿಂಗಕ್ಕೆ ದೂರವಾದರು.
ನಮ್ಮ ಕೂಡಲಚೆನ್ನಸಂಗನ ಶರಣರು ಜಗದ್ವಂದ್ಯರಾದರು. ||೬೧||

೯೧೪

ಅನಂತ ಅದ್ಭುತ ತಮಂಧ ತಾರಜ ತಂಡಜ ಭಿನ್ನಜ
ಭಿನ್ನಾಯುಕ್ತ ಅದ್ಭೂತ ಅಮದಾಯುಕ್ತ ಮಣಿರಣ
ಮಾನ್ಯರಣ ವಿಶ್ವಾರಣ ವಿಶ್ವಾವಸು ಅಲಂಕೃತ
ಕೃತಯುಗ ತ್ರೇತಾಯುಗ ದ್ವಾಪಾರ ಕಲಿಯುಗ
ಇಂತೀ ಹದಿನೆಂಟು ಯುಗುಗಳಲ್ಲಿ ಪುಟ್ಟಿದವಾವೆಂದಡೆ:
ಅನಂತವೆಂಬ ಯುಗದಲ್ಲಿ ಸಾಕ್ಷಾತ್ ಸರ್ವಜ್ಞ ತಾನೊಬ್ಬನೆ ಇದ್ದ.
ಅದ್ಭುತವೆಂಬ ಯುಗದಲ್ಲಿ ಪಾರ್ವತಿ ಹುಟ್ಟಿದಳು.
ತಮಂಧವೆಂಬ ಯುಗದಲ್ಲಿ ನಾರಾಯಣ ಪುಟ್ಟಿದನು.
ಆ ನಾರಾಯಣನ ನಾಭಿಯಲ್ಲಿ ಒಂದು ಕಮಲ ಹುಟ್ಟಿತ್ತು.
ಆ ಕಮಲದಲ್ಲಿ ಬ್ರಹ್ಮ ಹುಟ್ಟಿದನು.
ತಾರಜವೆಂಬ ಯುಗದಲ್ಲಿ ಆ ಬ್ರಹ್ಮಂಗೆ ಅಜನೆಂಬ ಹೆಸರಾಯಿತ್ತು.
ತಂಡಜವೆಂಬ ಯುಗದಲ್ಲಿ ಬ್ರಹ್ಮಾಂಡವೆಂಬುದೊಂದು ತತ್ತಿ ಪುಟ್ಟಿತ್ತು.
ಭಿನ್ನಜವೆಂಬ ಯುಗದಲ್ಲಿ ಆ ತತ್ತಿ ಭಿನ್ನವಾಯಿತ್ತು.
ಭಿನ್ನಾಯುಕ್ತವೆಂಬ ಯುಗದಲ್ಲಿ ಮೇಘ ಪಾರಿಜಾತಂಗಳು ಪುಟ್ಟಿದವು.
ನಿಂದಲ್ಲಿ ಭೂಮಿ ಪುಟ್ಟಿತ್ತು.
ಅದ್ಭೂತವೆಂಬ ಯುಗದಲ್ಲಿ ಅಷ್ಟ ಕುಲಪರ್ವತಂಗಳು ಪುಟ್ಟಿದುವು.
ಅಮದಾಯುಕ್ತ ವೆಂಬ ಯುಗದಲ್ಲಿ ಸಪ್ತಸಮುದ್ರಂಗಳು ಪುಟ್ಟಿದವು.

ಮಣೆರಣವೆಂಬ ಯುಗದಲ್ಲಿ ಉತ್ತಮ ಮಧ್ಯಮ ಕನಿಷ್ಠಂಗಳು ಪುಟ್ಟಿದವು.
ಮಾಸ್ಯರಣಪೆಂಬ ಯುಗದಲ್ಲಿ ನಕ್ಷತ್ರಂಗಳಾಗಿರ್ದ
ಚೌರಾಸೀತಿ ಲಕ್ಷಣ ಜೀವರಾಶಿಗಳು ಪುಟ್ಟಿದವು.
ವಿಶ್ವಾರಣವೆಂಬ ಯುಗದಲ್ಲಿ ಚಂದ್ರ ಸೂರ್ಯರು ಪುಟ್ಟಿದರು.
ವಿಶ್ವಾವಸುವೆಂಬ ಯುಗದಲ್ಲಿ ದೇವಾದಿ ದೇವರ್ಕಳು ಪುಟ್ಟಿದರು.
ಅಲಂಕೃತವೆಂಬ ಯುಗದಲ್ಲಿ ಕಾಮಾದಿವರಂಗಳು ಪುಟ್ಟಿದುವು
ಕೃತಯುಗದಲ್ಲಿ ದೇವ ದಾನವ ಮಾನವರಿಗೆ ಯುದ್ಧವಾಯಿತ್ತು.
ತ್ರೇತಾಯುಗದಲ್ಲಿ ರಾಮರಾವಣರಿಗೆ ಯುದ್ಧವಾಯಿತ್ತು.
ದ್ವಾಪರಯುಗದಲ್ಲಿ ಕೌರವ ಪಾಂಡವರಿಗೆ ಯುದ್ಧವಾಯಿತ್ತು.
ಕಲಿಯುಗದಲ್ಲಿ ಮೌರಿಯ ಕದಂಬರಿಗೆ ಯುದ್ಧವಾಯಿತ್ತು.
ಇಂತೀ ಹದಿನೆಂಟು ಯುಗಗಳಲ್ಲಿ ರಾಜ್ಯವನಾಳಿದ
ಸೂರ್ಯವಂಶದ ಕ್ಷತ್ರಿಯರ ಹೆಸರಾವವೆಂದಡೆ
ಆದಿನಾರಾಯಣ, ಆದಿನಾರಾಯಣನ ಮಗ ಬ್ರಹ್ಮ,
ಬ್ರಹ್ಮನ ಮಗ ಭೃಗು, ಭೃಗುವಿನ ಮಗ ಇಂದ್ರ,
ಇಂದ್ರನ ಮಗ ನಯನೇಂದ್ರಿಯ,
ನಯನೇಂದ್ರಿಯನ ಮಗ ಕಾಲಸ್ವಾಲ,
ಕಾಲಸ್ವಾಲನ ಮಗ ದುಂದುಮಹಂತ,
ದುಂದುಮಹಂತನ ಮಗ ತ್ರಿಶಂಕು,
ತ್ರಿಶಂಕುವಿನ ಮಗ ಹರಿಶ್ಚಂದ್ರ, ಹರಿಶ್ಚಂದ್ರನ ಮಗ ಲೋಹಿತಾಕ್ಷ,
ಲೋಹಿತಾಕ್ಷನ ಮಗ ನಳ, ನಳನ ಮಗ ಕೂರ್ಪಸ್ಯ,
ಕೂರ್ಪಸ್ಯನ ಮಗ ಪ್ರನೋರಪಿ, ಪ್ರನೋರಪಿಯ ಮಗ ಪರಿತಾಪಿ,
ಪರಿತಾಪಿಯ ಮಗ ಅಮರ, ಅಮರನ ಮಗ ಮಾಂಧಾತ,
ಮಾಂಧಾತನ ಮಗ ಮಾಗ್ರೀಚ, ಮಾಗ್ರೀಚನ ಮಗ ಬಿಂದು,
ಬಿಂದುವಿನ ಮಗ ಲವಲ, ಲವಲನ ಮಗ ಪರಿತಾಪಿ,
ಪರಿತಾಪಿಯ ಮಗ ಸಿಳ್ಳಗೋಪಾಲ,
ಸಿಳ್ಳಗೋಪಾಲನ ಮಗ ನಂದಗೋಪಾಲ,
ನಂದಗೋಪಾಲನ ಮಗ ವಾಸುದೇವ,
ವಾಸುದೇವನ ಮಗ ಶ್ರೀಕೃಷ್ಣ,
ಶ್ರೀಕೃಷ್ಣನ ಮಗ ಸಿಳಪ್ಪ, ಸಿಳಪ್ಪನ ಮಗ ದಿಗು,
ದಿಗುವಿನ ಮಗ ರಘು, ರಘುವಿನ ಮಗ ಅರಣ್ಯ,
ಅರಣ್ಯನ ಮಗ ಮೃಗರಾಜ, ಮೃಗರಾಜನ ಮಗ ದಶರಥ,
ದಶರಥನ ಮಗ ರಾಮ.
ಇಂತಿವರೆಲ್ಲರೂ ಪ್ರಳಯಕ್ಕೊಳಗಾದರು ನೋಡಿರೆ!

ಪ್ರಳಯರಹಿತ ನಮ್ಮ ಸಂಗನಬಸವಣ್ಣ
ಕೂಡಲಚೆನ್ನಸಂಗಮದೇವರು ತಾನು ತಾನಾಗಿರ್ದರು. || ೬೨ ||

೯೧೫

ಅನಂತ ವರುಷದವರ ಹಿರಿಯರೆಂಬೆನೆ?
ಎನ್ನೆನು– ಅವರು ಭೂಭಾರಕರಾಗಿ.
ಏಳು ವರುಷದ ಹಿರಿಯ ಚೀಲಾಳ;
ಹನ್ನೆರಡು ವರುಷದ ಹಿರಿಯಳು ಮಹಾದೇವಿಯಕ್ಕ.
ಅಂಡಜ ಪಿಂಡಜ ಮೀನಜರೆಂಬವರೆಲ್ಲಾ ಅಂದಂದಿನ ಬಾಲಕರು.
ನಿಮಗೆ ಬುದ್ಧಿಯ ಹೇಳುವಡೆ ಎನಗೆ ಬುದ್ಧಿಯಿಲ್ಲ,
ಕೂಡಲಚೆನ್ನಸಂಗಮದೇವಾ. || ೬೩ ||

೯೧೬

ಅನ್ನದಾನವ ಮಾಡಿದಡೇನಹುದು? ಧರ್ಮವಹುದು.
ಹೊನ್ನದಾನವ ಮಾಡಿದಡೇನಹುದು? ಶ್ರೀಯಹುದು.
ವಸ್ತ್ರದಾನವ ಮಾಡಿದಡೇನಹುದು? ಪುಣ್ಯವಹುದು.
ಹೆಣ್ಣುದಾನವ ಮಾಡಿದಡೇನಹುದು? ಫಲಪದವಹುದು–
ಇಂತೀ ಚತುರ್ವಿಧ ಕರಣಾದಿಗಳು ಶುದ್ಧವಾದರೆ
ಮುಕ್ತಿಯಾಗುವುದು ಕಾಣಾ ಕೂಡಲಚೆನ್ನಸಂಗಮದೇವಾ. || ೬೪ ||

೯೧೭

ಅನ್ನದಾನಿ, ವಸ್ತ್ರದಾನಿ, ಹಿರಣ್ಯದಾನಿಗಳ ಮನೆಯ ಬಾಗಿಲ ಕಾದಿಪ್ಪರಯ್ಯಾ
ಬಹುವಿಧದ ವೇಷಧಾರಿಗಳು,
"ವಯೋವೃದ್ಧಾಸ್ತಪೋವೃದ್ಧಾ ವೇದವೃದ್ಧಾ ಬಹುಶ್ರುತಾಃ।
ಸರ್ವೇ ತೇ ದಾನವೃದ್ಧಸ್ಯ ದ್ವಾರೇ ತಿಷ್ಠಂತಿ ಕಿಂಕರಾಃ"॥ –ಎಂದುದಾಗಿ
ದೈನ್ಯವ ಬಿಟ್ಟಿಪ್ಪ ನಿರಾಭಾರಿಯ ತೋರಿ ಬದುಕಿಸಾ
ಕೂಡಲಚೆನ್ನಸಂಗಮದೇವಾ. || ೬೫ ||

೯೧೮

ಅನ್ಯದೈವವ ಬಿಟ್ಟುದಕ್ಕೆ ಆವುದು ಕ್ರಮವೆಂದರೆ:
ಅನ್ಯದೈವವ ಮನದಲ್ಲಿ ನೆನೆಯಲಾಗದು, ಅನ್ಯದೈವವ ಮಾತನಾಡಲಾಗದು.
ಅನ್ಯದೈವದ ಪೂಜೆಯ ಮಾಡಲಾಗದು.

ಸ್ಥಾವರಲಿಂಗಕ್ಕೆರಗಲಾಗದು.
ಆ ಲಿಂಗ ಪ್ರಸಾದವ ಕೊಳಲೆಂತೂ ಬಾರದು.
ಇಷ್ಟು ನಾಸ್ತಿಯಾದರೆ ಆತ ಅನ್ಯದೈವವ ಬಿಟ್ಟು ಲಿಂಗವಂತನೆನಿಸಿಕೊಂಬನು.
ಇವರೊಳಗೆ ಅನುಸರಣೆಯ ಮಾಡಿಕೊಂಡು
ನಡೆದನಾದೊಡೆ ಅವಂಗೆ ಕುಂಭೀಪಾತಕ
ನಾಯಕನರಕ ತಪ್ಪದು ಕಾಣಾ ಕೂಡಲಚೆನ್ನಸಂಗಯ್ಯ. || ೬೬ ||

೯೧೯

ಅನ್ಯದೈವವುಳ್ಳ ಭಕ್ತನ ಮನೆಯ ಆರೋಗಣೆ ಅನ್ಯಾಹಾರದ ಕೂಳು,
ನಂಬಿಗೆಯಿಲ್ಲದ ಭಕ್ತನ ಮನೆಯ ಆರೋಗಣೆ ಸಂದೇಹದ ಕೂಳು,
ಮಾಡಿ, ಹಮ್ಮನುಡಿವ ಭಕ್ತನ ಮನೆಯ ಆರೋಗಣೆ ಕಾರಿದ ಕೂಳು,
ನಿಮ್ಮ ನಂಬಿದ ಸಜ್ಜನ ಭಕ್ತನ ಮನೆಯ ಆರೋಗಣೆ
ಸದಾಚಾರ ಭೃತ್ಯಾಚಾರ ಶಿವಾಚಾರದಿಂ ಬಂದುದಾಗಿ
ಲಿಂಗಾರ್ಪಿತವಾಯಿತ್ತಯ್ಯಾ ಕೂಡಲಚೆನ್ನಸಂಗಮದೇವಾ. || ೬೭ ||

೯೨೦

ಅನ್ನ ವಿಕಾರವಳಿದು ಸತಿಸಂಗವರಿಯ ನೋಡಾ.
ದೇಹ ಗುಣಂಗಳಳಿದು ನಿರ್ದೇಹಪ್ರಸಾದಿ ನೋಡಯ್ಯಾ.
ಅಶನ ವ್ಯಸನಾದಿಗಳು ಇರಲಂಜಿ ಹೋದವು ನೋಡಾ!
ಇವೆಲ್ಲ ಗುಣಂಗಳಳಿದು ಕೂಡಲಚೆನ್ನಸಂಗಯ್ಯನಲ್ಲಿ
ಬಸವಣ್ಣನೊಬ್ಬನೆ ಸಾವಧಾನಪ್ರಸಾದಿ ನೋಡಾ. || ೬೮ ||

೯೨೧

[ಅ]ನಾದಿ ಕುಳಸನ್ಮತವಾದ ಏಕಾದಶಪ್ರಸಾದದ ಕುಳವ ತಿಳಿವಡೆ;
ಪ್ರಥಮದಲ್ಲಿ ಗುರುಪ್ರಸಾದ, ದ್ವಿತೀಯದಲ್ಲಿ ಲಿಂಗಪ್ರಸಾದ,
ತೃತೀಯದಲ್ಲಿ ಜಂಗಮಪ್ರಸಾದ, ಚತುರ್ಥದಲ್ಲಿ ಪ್ರಸಾದಿಪ್ರಸಾದ
ಪಂಚಮದಲ್ಲಿ ಆಪ್ಯಾಯನ ಪ್ರಸಾದ, ಷಷ್ಠಮದಲ್ಲಿ ಸಮಯ ಪ್ರಸಾದ,
ಸಪ್ತಮದಲ್ಲಿ ಪಂಚೇಂದ್ರಿಯ ವಿರಹಿತ ಪ್ರಸಾದ,
ಅಷ್ಟಮದಲ್ಲಿ ಅಂತಃಕರಣ ಚತುಷ್ಟಯ ವಿರಹಿತ ಪ್ರಸಾದ,
ನವಮದಲ್ಲಿ ಸದ್ಭಾವಪ್ರಸಾದ, ದಶಮದಲ್ಲಿ ಸಮತಾಪ್ರಸಾದ,
ಏಕಾದಶದಲ್ಲಿ ಜ್ಞಾನಪ್ರಸಾದ.–
ಇಂತೀ ಏಕಾದಶ ಪ್ರಸಾದಸ್ಥಲವನತಿಗಳೆದ

ಕೂಡಲಚೆನ್ನಸಂಗಯ್ಯನಲ್ಲಿ ಐಕ್ಯಪ್ರಸಾದಿಗೆ
ನಮೋ ನಮೋ ಎಂದೆನು. || ೯೯ ||

೯೨೨

ಅನಾದಿ ಪರಶಿವನಿಂದಾಕಾರವಾದ
ಆದಿಬಿಂದು ಅನಾದಿಬಿಂದು ಚಿದ್ಬಿಂದು ಪರಬಿಂದುವೆ
ಜಗದ ಮಧ್ಯದಲ್ಲಿ ಸ್ವಯ, ಚರ, ಪರ, ಭಕ್ತ, ಮಹೇಶ್ವರ, ಪ್ರಸಾದಿ
ಪೂಜ್ಯ ಪೂಜಕತ್ವದಿಂದ ಚರಿಸುತ್ತಿರಲು,
ಆ ಸಮಯದಲ್ಲಿ ಪ್ರಮಾದವಶದಿಂದ ಲಿಂಗಾಂಗಕ್ಕೆ
ಸುಯಿಧಾನ ತಪ್ಪಿ ವಿಘ್ನಾದಿಗಳು ಬಂದು ತಟ್ಟಿ ಶಂಕೆ ಬಂದಲ್ಲಿ
ಭಕ್ತ ಮಹೇಶ್ವರ ಶರಣಗಣಂಗಳು ವಿಚಾರಿಸಿ ನೋಡಿದಲ್ಲಿ
ಸ್ಥೂಲವಾದಡೆ ಸದಾಚಾರಕ್ಕೆ ಹೋರಗು
ಸೂಕ್ಷ್ಮವಾದಡೆ ಶರಣಗಣಂಗಳ ಸಮೂಹಮಧ್ಯದಲ್ಲಿ
ಭೃತ್ಯಭಾವದಿಂದ ಹತ್ತು ಹನ್ನೊಂದ
ಕೊಳತಕ್ಕುದಲ್ಲ ನೋಡಾ (ಕೊಳತಕ್ಕುದಲ್ಲದೆ?)
ಕರ್ತೃತ್ವದಿಂದ ಹತ್ತು ಹನ್ನೊಂದ ಕೊಡತಕ್ಕುದಲ್ಲ ನೋಡಾ!
ಸ್ಥೂಲ ಸೂಕ್ಷ್ಮದ ವಿಚಾರಪಂತೆಂದಡೆ:
ಪರಶಿವಸ್ವರೂಪವಾದ ಇಷ್ಟಲಿಂಗದ ಷಟ್‌ಸ್ಥಾನದೊಳಗೆ
ಆವ ಮುಖದಿಂದಾದಡೆಯು ಸುಯಿಧಾನ ತಪ್ಪಿ ಪೆಟ್ಟುಹತ್ತಿ ಭಿನ್ನವಾದಡೆ,
ಭಕ್ತ ಮಹೇಶ್ವರ ಶರಣಗಣಂಗಳು ವಿಚಾರಿಸಿ ನೋಡಿ
ಸ್ಥೂಲ ಸೂಕ್ಷ್ಮಕ್ಕೆ ತಕ್ಕ ಪರಗುರುವಚನ ವಿಚಾರಿಸಿರಿ
ಸ್ಥೂಲ ಸೂಕ್ಷ್ಮಕ್ಕೆ ತಕ್ಕ ಪ್ರತಿಜ್ಞೆಯ ಮಾಡುವುದು,
ಶಕ್ತಿ ಸ್ವರೂಪವಾದ ಅಂಗದ ಅವಯವಂಗಳಿಗೆ ಶಿವಾನುಕೂಲದಿಂದ
ವ್ಯಾಘ್ರ ಭಲ್ಲೂಕ ದಂಷ್ಟ್ರ ಕರ್ಕಟ ವಾಜಿ ಮಹಿಷ ಸಾಗರದುಪ್ಪಿ
ಗಜ ಶುನಿ ಶೂಕರ ಮಾರ್ಜಾಲ ಹೆಗ್ಗಣ ಉರಗ ಮೊದಲಾದ
ಮಲಮಾಂಸಭಕ್ಷಕ ಪ್ರಾಣಿಗಳು ಮೋಸದಿಂದ
ಪಾದ ಪಾಣಿ ಗುದ ಗುಹ್ಯ ದೇಹವ ಕಚ್ಚಿದಡೆ
ಸ್ಥೂಲವೆನಿಸುವುದಯ್ಯಾ!
ಅವರಿಂದ ಮೇಲೆ ಜಿಹ್ವೆ ನಾಸಿಕ ನೇತ್ರ ಲಲಾಟ ಶ್ರೋತ್ರಂಗಳ ಕಚ್ಚಿದಡೆ
ಸೂಕ್ಷ್ಮವೆನಿಸುವುದಯ್ಯಾ!
ಈ ಪ್ರಕಾರದಲ್ಲಿ ಲಿಂಗಾಂಗಕ್ಕೆ ಅಪಮೃತ್ಯು ಬಂದು ತಟ್ಟಿದಲ್ಲಿ
ಆಚಾರಕ್ಕೆ ಹೊರಗಾದವರು ಗಣಮಧ್ಯದಲ್ಲಿ ಪ್ರಾಣವ ಬಿಡುವುದಯ್ಯಾ,

ಇಂತಪ್ಪ ಆಚಾರಕ್ರಿಯಾನಿಷ್ಠನ ಭಕ್ತ ಮಹೇಶ್ವರ ಶರಣಗಣಂಗಳು
ಜಂಗಮದ ಪಾದದಲ್ಲಿ ಸಮಾಧಿಯ ಮಾಡುವುದಯ್ಯಾ
ಪ್ರಾಣತ್ಯಾಗವ ಮಾಡಲಾರದಿರ್ದಡೆ,
ಭಕ್ತ ಮಹೇಶ್ವರ ಶರಣಗಣಂಗಳ ಮಹಾನೈಷ್ಠೆಯಿಂದ
ಸಾಕ್ಷಾತ್ಪ್ರಭುವೆಂದು ನಂಬಿ ಅವರು ತೋರಿದ ಸೇವೆಯ ಮಾಡಿ,
ಅವರು ಕೊಟ್ಟ ಧಾನ್ಯಾದಿಗಳ ಸ್ವಪಾಕವ ಮಾಡಿ ಮಹಾಪ್ರಸಾದವೆಂದು ಭಾವಿಸಿ
ಪಾತಕಸೂತಕಂಗಳ ಹೊದ್ದದೆ ಆಚರಿಸಿದಾತಂಗೆ
ಅವಸಾನಕಾಲದಲ್ಲಿ ಮಹಾಗಣಂಗಳು ಲಿಂಗಮುದ್ರಾಭೂಮಿಯಲ್ಲಿ
ಪಾದದಳತೆಯಿಲ್ಲದೆ ನೋಟಮಾತ್ರ ಪ್ರಮಾಣಿಸಿ ಸಹಜಸಮಾಧಿಯ ಮಾಡಿ
ಲಿಂಗಾಕೃತಿಪ್ರಣವಸಂಬಂಧವಾದ ತಗಡ ಸಂಬಂಧವ ಮಾಡದೆ
ಪುಷ್ಪಾಂಜಲಿಯ ಮಾಡದೆ, ಆ ನಿಕ್ಷೇಪಸ್ಥಾನದಲ್ಲಿ ಜಂಗಮದ ಪಾದವಿಟ್ಟು
ಆ ಮರಣಸನ್ನಧ್ಧನ ನಿಕ್ಷೇಪನ ಮಾಡುವುದಯ್ಯಾ.
ಈ ರೀತಿಯಿಂದಾಚರಿಸಿದಡೆ ಮರಳಿ ಗುರುಕರಜಾತನಾಗಿ
ಸದ್ಭಕ್ತಿ ಜ್ಞಾನಾಚಾರ ಕ್ರೀಯಲ್ಲಿ ನಡೆನುಡಿಸಂಪನ್ನನಾಗಿ
ಷಟ್ಸ್ಥಲದ ಬ್ರಹ್ಮವ ಕೂಡಿ ಘನಸಾರದಂತೆ
ಸರ್ವಾಂಗವೆಲ್ಲ ಜ್ಯೋತಿರ್ಮಯ ಲಿಂಗದಲ್ಲಿ
ನಿರವಯವಪ್ಪುದು ನೋಡಾ!
ಇಂತು ಗುರುಮಾರ್ಗಾಚಾರವ ಮೀರಿ, ಅವಧೂತಮಾರ್ಗದಲ್ಲಿ ನಡೆದಡೆ,
ಇರುವೆ ಮೊದಲಾನೆ ಕಡೆಯಾದ ಸಮಸ್ತ ಯೋನಿಯಲ್ಲಿ ಜನಿಸಿ,
ಸುಖ–ದುಃಖ, ಪುಣ್ಯ–ಪಾಪ, ಸ್ವರ್ಗ–ನರಕವನನುಭವಿಸಿ
ಕಾಲಕಾಮಾದಿಗೊಳಗಾಗಿ ಗುರುಮಾರ್ಗಾಚಾರಕ್ಕೆ ಹೊರಗಾಗಿ
ಹೋಹರು ನೋಡಾ, ಕೂಡಲಚೆನ್ನಸಂಗಮದೇವಾ! || ೭೦ ||

೯೨೩

ಅನಾಹತಮಹೇಶ್ವರನೆಂಬಾತಂಗೆ,
ಪ್ರಸಾದಸ್ಥಲದ ಪ್ರಸಾದಾಶ್ರಯದ ಭವಿತ್ವವ ನೀಕರಿಸಿ
ಪ್ರಸಾದವನು ನೆಲೆಗೊಳಿಸಿ;
ಅನ್ಯಥಾ ಪವನ ಆಧಾರ ಆಶ್ರಯವ ನೀಕರಿಸಿ
ದ್ವಿಜ ಪ್ರಜ ತ್ರಜವೆಂಬ ಡಿಂಬ ಮರ್ತ್ಯಕ್ಕೆ ಕಳುಹಿದಿರಿ ಬಸವಣ್ಣನನು.
ಮಡಿ ಮಡಿವಾಳನನು ಒಡನೆ ಕಳುಹಿದಿರಿ.
ಕನ್ನಡಿಯಾಗಿ ಭವಕ್ಕೆ ಬಾರದಂತೆ ಭಾವವ ನಿಲಿಸಿದಿರಿ.
ಬಳಿಕ ಲಿಂಗಸ್ಥಲ, ಜಂಗಮಸ್ಥಲ, ಪ್ರಸಾದಸ್ಥಲ ನಿರ್ಧಾರವಾದವು.

ಚಿರಕಾಲದಲ್ಲಿ ಮಹಾಸುನಾದಗಣ,
ಅನಾಹತನಾದಗಣ ಸಂಪೂರ್ಣನಾಗಿಪ್ಪನಯ್ಯಾ
ಕೂಡಲಚೆನ್ನಸಂಗಾ, ನಿಮ್ಮ ಶರಣ ಬಸವಣ್ಣನು! ॥ ೭೧ ॥

೯೨೪

ಅನಿಮಿಷಂಗೆ ಲಿಂಗವ ಕೊಟ್ಟಾತ ಬಸವಣ್ಣ.
ಆ ಲಿಂಗ ನಿನಗೆ ಸೇರಿತ್ತಾಗಿ,
ಬಸವಣ್ಣನ ಸಂಪ್ರದಾಯದ ಕಂದನು ನೋಡಾ ನೀನು.
ಭಕ್ತಿದಳದುಳದಿಂದ ಚೆನ್ನಸಂಗಮನಾಥನೆಂಬ ಲಿಂಗವನವಗ್ರಹಿಸಿಕೊಂಡೆನಾಗಿ
ಬಸವಣ್ಣನ ಸಂಪ್ರದಾಯದ ಕಂದನು ನೋಡಾ ನಾನು.
ಇಂತಿಬ್ಬರಿಗೆಯೂ ಒಂದೆ ಕುಲಸ್ಥಲವಾದ ಕಾರಣ,
ಕೂಡಲಚೆನ್ನಸಂಗಯ್ಯನಲ್ಲಿ ಮಹಾಮನೆಯ ಪ್ರಸಾದ
ಇಬ್ಬರಿಗೆಯೂ ಒಂದೆ ಕಾಣಾ ಪ್ರಭುವೆ. ॥ ೭೨ ॥

೯೨೫

ಅನುಶ್ರುತವ ಮಾಡೆಹೆನೆಂದು ಉಪ್ಪರಗುಡಿಯನೆತ್ತಿ ಮಾಡುವ
ಭಕ್ತನ ಮನೆ, ಅಟ್ಟಿಕ್ಕುವ ಲಂಡಣಗಿತ್ತಿಯ ಮನೆ.
ಸರ್ವಜೀವರೊಳಗೆ ಚೈತನ್ಯಾತ್ಮಕ ಶಿವನೆಂದು ಮಾಡುವುದು,
ಭೂತದಯೆಕಿಕ್ಕುವುದು ಸಯದಾನದ ಕೇಡು.
ಸೂಳೆಯ ಮಗನಾಗಿ ಮಹಳವನಿಕ್ಕುವಡೆ ತಾಯ ಹೆಸರಾಯಿತ್ತು,
ತಂದೆಯ ಹೆಸರಿಲ್ಲ– ಕೂಡಲಚೆನ್ನಸಂಗಮದೇವಾ. ॥ ೭೩ ॥

೯೨೬

ಅಪರವಿಲ್ಲದಂದು, ಪರಬ್ರಹ್ಮವಿಲ್ಲದಂದು
ಆದಿಯಿಲ್ಲದಂದು ಅನಾದಿಯಿಲ್ಲದಂದು
ಸದಾಶಿವನಿಲ್ಲದಂದು ಶಿವನಿಲ್ಲದಂದು
ಆನು ನೀನೆಂಬುದು ತಾನಿಲ್ಲದಂದು
ಕೂಡಲಚೆನ್ನಸಂಗಯ್ಯ ಏನೂ ಎನ್ನದಿರ್ದನಂದು. ॥ ೭೪ ॥

೯೨೭

ಅಭ್ಯಾಸವೆನಗೆ ಭ್ರಾಂತುವಿದ್ದಿತಯ್ಯಾ
ಭಕ್ತಿ ಸಾಧ್ಯವಾಗದಯ್ಯಾ.

ಅಂಗಗುಣಂಗಳ ಬಿಟ್ಟವರಿಗೆ ಶರಣೆಂಬೆ
ಕೂಡಲಚೆನ್ನಸಂಗಯ್ಯಾ. || ೭೫ ||

೯೨೮

ಅಮಲರಪ್ಪವರಾರೆಂದಡೆ;
ಅನಾದಿಮಲ ಸಂಸಾರವೆಂದರಿದು ನಿರ್ಮೋಹಿಗಳಾದವರು.
ಅಕಾಯಚರಿತ್ರರಾರೆಂದಡೆ;
ಸದ್ಗುರುಪಥದಲ್ಲಿ ನಿಂದು, ಆನೆಂಬ ತನುಗುಣವಳಿದವರು.
ಆದಿ–ಅನಾದಿಗಳೆಂಬೆರಡಳಿದವರಾರೆಂದಡೆ
ಶಾಂತಿಸ್ಥಲದಲ್ಲಿ ನಿಂದು ಪರಮಸುಖಿಗಳಾಗಿಪ್ಪವರು.
ದ್ವೈತಾದ್ವೈತವನತಿಗಳೆಧವರಾರೆಂದಡೆ,
ತೋರುವ ತೋರಿಕೆ ನಿರ್ಮಲಸ್ವರೂಪರಾದವರು.
ಅವರು ತಾವೆ ನಿಮಗರ್ಪಿತ, ನಿಮ್ಮಾಣೆ,
ಕೂಡಲಚೆನ್ನಸಂಗಮದೇವಾ. || ೭೬ ||

೯೨೯

ಅಯ್ಯಾ, ಅನಾದಿ ವಸ್ತುವೆ ಗುರು–ಶಿಷ್ಯ,
ಭಕ್ತ–ಜಂಗಮ, ಗುರು–ಲಿಂಗ,
ಶರಣಸತಿ–ಲಿಂಗಪತಿ– ಎಂಬ ಸಾಕಾರಲೀಲೆಯ ಧರಿಸಿ
ಅವಿರಳಾನಂದ ನಿಜ ವೇಧಾ–ಮಂತ್ರ–ಕ್ರಿಯಾದೀಕ್ಷಾಯುಕ್ತವಾದ
ಮೂರೇಳು ಇಪ್ಪತ್ತೊಂದು ದೀಕ್ಷೆಯ
ಭಿನ್ನವಿಲ್ಲದೆ ಸದ್ಗುರುಮುಖದಿಂದ ಅರಿದಾನಂದಿಸ ಬಲ್ಲಡೆ;
ಸಹಜ ದೀಕ್ಷೆಯುಳ್ಳ ಶ್ರೀಗುರುಲಿಂಗಜಂಗಮ,
ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ
ನಿರವಯಮೂರ್ತಿಯೆಂಬೆಸಯ್ಯಾ ಕೂಡಲಚೆನ್ನಸಂಗಮನಲ್ಲಿ. || ೭೭ ||

೯೩೦

'ಅಯ್ಯಾ ಅಯ್ಯಾ' ಎಂದಡೆ ಅಯ್ಯ 'ಓ' ಎಂಬುವ ಮಾಣ್ಬನೆ?
'ಅವ್ವಾ ಅವ್ವಾ' ಎಂದಡೆ ಅವ್ವೆ 'ಓ' ಎಂಬುದ ಮಾಣ್ಬಳೆ?–
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ
'ಬಸವಲಿಂಗಾ ಬಸವಲಿಂಗಾ ಬಸವಲಿಂಗಾ' ಎಂದಡೆ
ಎನ್ನ ಕಾಯ ಬಯಲಾಗದೆ? || ೭೮ ||

೯೩೧

ಅಯ್ಯಾ, ಆದಿಸೃಷ್ಟಿಯಿಂದ ಇಂದು ಪರ್ಯಂತರವೂ
ನಾನಾ ಯೋನಿಯಲ್ಲಿ ಹುಟ್ಟಿ ಹುಟ್ಟಿ ಬಳಲಿ ಬಾಯಾರಿದವಂಗೆ
ಅಂಧ ಟಿಟ್ಟಿಭ ನ್ಯಾಯದಂತೆ
ಅಕಸ್ಮಾತ್ ಅರಿವುಳ್ಳ ನರಜನ್ಮವು ದೊರೆವುದೆ ದುರ್ಲಭ
ಅದರಲ್ಲಿಯೂ ಶೈವಕುಲದಲ್ಲಿ ಜನ್ಮವೆತ್ತಿರ್ಪುದು ಅತಿ ದುರ್ಲಭ.
ಅದಕ್ಕಿಂತಲೂ ವೀರಶೈವ ವಂಶದಲ್ಲಿ ಜನಿಸಿಹುದು
ಅತ್ಯಂತ ದುರ್ಲಭವಾಗಿರ್ಪುದು ಕಾಣಾ.
ಕಿಮಸ್ತಿ ಬಹುನೋಕ್ತೇನ ಮಾನುಷಂ ಜನ್ಮ ದುರ್ಲಭಂ।
ತತ್ರಾಪಿ ದುರ್ಲಭಂ ಜನ್ಮ ಕುಲೇ ಶೈವಸ್ಯ ಕಸ್ಯಚಿತ್॥
ವೀರಶೈವಾನ್ವಯೇ ಜನ್ಮ ಪರಮಂ ದುರ್ಲಭಂ ಸ್ಮೃತಂ– ಎಂದುದಾಗಿ
ಸಕಲ ಪ್ರಾಣಿಗಳಲ್ಲಿ ವೀರಶೈವನೆ ಸರ್ವೋತ್ತಮನಯ್ಯಾ
ಕೂಡಲಚೆನ್ನಸಂಗಮದೇವಾ. ॥ ೭೯ ॥

೯೩೨

ಅಯ್ಯಾ, (ಆಯತ) ಲಿಂಗದಲ್ಲಿ ಆಗಾಗಿ ಆಚಾರಲಿಂಗಪ್ರಾಣಿಯಾದ,
ಆಚಾರಲಿಂಗದಲ್ಲಿ ಅವಧಾನಿಯಾಗಿ ಸರ್ವಾಚಾರಸಂಪನ್ನನಾದ,
ಸರ್ವಾಚಾರಸಂಪತ್ತಿನಲ್ಲಿ ಲಿಂಗೈಕ್ಯವಾಗಿಪ್ಪನು.
ಕೂಡಲಚೆನ್ನಸಂಗನಲ್ಲಿ
ಸಂಗನಬಸವಣ್ಣನು ಆಚಾರವ ಬಲ್ಲನಲ್ಲದೆ
ನಾನೆತ್ತ ಬಲ್ಲೆನಯ್ಯಾ ಪ್ರಭುವೆ? ॥ ೮೦ ॥

೯೩೩

ಅಯ್ಯಾ ಎನಗೆ ವಿಭೂತಿಯೆ ಕುಲದೈವ:
ಅಯ್ಯಾ ಎನಗೆ ವಿಭೂತಿಯೆ ಮನೆದೈವ;
ಅಯ್ಯಾ ಎನಗೆ ವಿಭೂತಿಯೆ ಸರ್ವಕಾರಣ;
ಅಯ್ಯಾ ಎನಗೆ ವಿಭೂತಿಯೆ ಸರ್ವಸಿದ್ಧಿ;
ಅಯ್ಯಾ ಎನಗೆ ವಿಭೂತಿಯೆ ಸರ್ವವಶ್ಯ;
ಅಯ್ಯಾ ಕೂಡಲಚೆನ್ನಸಂಗಮದೇವಾ
ಶ್ರೀಮಹಾಭೂತಿಯೆಂಬ ಪರಂಜ್ಯೋತಿ ನೀವಾದಿರಾಗಿ,
ಎನಗೆ ವಿಭೂತಿಯೆ ಸರ್ವಸಾಧನ. ॥ ೮೧ ॥

ಅಂಗಗುಣಂಗಳ ಬಿಟ್ಟವರಿಗೆ ಶರಣೆಂಬೆ
ಕೂಡಲಚೆನ್ನಸಂಗಯ್ಯಾ. ॥ ೭೫ ॥

೯೨೮

ಅಮಲರಪ್ಪವರಾರೆಂದಡೆ;
ಅನಾದಿಮಲ ಸಂಸಾರವೆಂದರಿದು ನಿರ್ಮೋಹಿಗಳಾದವರು.
ಅಕಾಯಚರಿತ್ರರಾರೆಂದಡೆ;
ಸದ್ಗುರುಪಥದಲ್ಲಿ ನಿಂದು, ಆನೆಂಬ ತನುಗುಣವಳಿದವರು.
ಆದಿ–ಅನಾದಿಗಳೆಂಬೆರಡಳಿದವರಾರೆಂದಡೆ
ಶಾಂತಿಸ್ಥಲದಲ್ಲಿ ನಿಂದು ಪರಮಸುಖಿಗಳಾಗಿಪ್ಪವರು.
ದ್ವೈತಾದ್ವೈತವನತಿಗಳೆದವರಾರೆಂದಡೆ,
ತೋರುವ ತೋರಿಕೆ ನಿರ್ಮಲಸ್ವರೂಪರಾದವರು.
ಅವರು ತಾವೆ ನಿಮಗರ್ಪಿತ, ನಿಮ್ಮಾಣೆ,
ಕೂಡಲಚೆನ್ನಸಂಗಮದೇವಾ. ॥ ೭೬ ॥

೯೨೯

ಅಯ್ಯಾ, ಅನಾದಿ ವಸ್ತುವೆ ಗುರು–ಶಿಷ್ಯ,
ಭಕ್ತ–ಜಂಗಮ, ಗುರು–ಲಿಂಗ,
ಶರಣಸತಿ–ಲಿಂಗಪತಿ– ಎಂಬ ಸಾಕಾರಲೀಲೆಯ ಧರಿಸಿ
ಅವಿರಳಾನಂದ ನಿಜ ವೇಧಾ–ಮಂತ್ರ–ಕ್ರಿಯಾದೀಕ್ಷಾಯುಕ್ತವಾದ
ಮೂರೇಳು ಇಪ್ಪತ್ತೊಂದು ದೀಕ್ಷೆಯ
ಭಿನ್ನವಿಲ್ಲದೆ ಸದ್ಗುರುಮುಖದಿಂದ ಅರಿದಾನಂದಿಸ ಬಲ್ಲಡೆ;
ಸಹಜ ದೀಕ್ಷೆಯುಳ್ಳ ಶ್ರೀಗುರುಲಿಂಗಜಂಗಮ,
ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ
ನಿರವಯಮೂರ್ತಿಯೆಂಬೆನಯ್ಯಾ ಕೂಡಲಚೆನ್ನಸಂಗಮನಲ್ಲಿ. ॥ ೭೭ ॥

೯೩೦

'ಅಯ್ಯಾ ಅಯ್ಯಾ' ಎಂದಡೆ ಅಯ್ಯ 'ಓ' ಎಂಬುದ ಮಾಣ್ಬನೆ?
'ಅವ್ವಾ ಅವ್ವಾ' ಎಂದಡೆ ಅವ್ವೆ 'ಓ' ಎಂಬುದ ಮಾಣ್ಬಳೆ?–
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ
'ಬಸವಲಿಂಗಾ ಬಸವಲಿಂಗಾ ಬಸವಲಿಂಗಾ' ಎಂದಡೆ
ಎನ್ನ ಕಾಯ ಬಯಲಾಗದೆ? ॥ ೭೮ ॥

೯೩೧

ಅಯ್ಯಾ, ಆದಿಸೃಷ್ಟಿಯಿಂದ ಇಂದು ಪರ್ಯಂತರವೂ
ನಾನಾ ಯೋನಿಯಲ್ಲಿ ಹುಟ್ಟಿ ಹುಟ್ಟಿ ಬಳಲಿ ಬಾಯಾರಿದವಂಗೆ
ಅಂಧ ಟಿಟ್ಟಿಭ ನ್ಯಾಯದಂತೆ
ಅಕಸ್ಮಾತ್ ಅರಿವುಳ್ಳ ನರಜನ್ಮವು ದೊರೆವುದೆ ದುರ್ಲಭ
ಅದರಲ್ಲಿಯೂ ಶೈವಕುಲದಲ್ಲಿ ಜನ್ಮವೆತ್ತಿರ್ಪುದು ಅತಿ ದುರ್ಲಭ.
ಅದಕ್ಕಿಂತಲೂ ವೀರಶೈವ ವಂಶದಲ್ಲಿ ಜನಿಸಿಹುದು
ಅತ್ಯಂತ ದುರ್ಲಭವಾಗಿರ್ಪುದು ಕಾಣಾ.
ಕಿಮಸ್ತಿ ಬಹುನೋಕ್ತೇನ ಮಾನುಷಂ ಜನ್ಮ ದುರ್ಲಭಂ।
ತತ್ರಾಪಿ ದುರ್ಲಭಂ ಜನ್ಮ ಕುಲೇ ಶೈವಸ್ಯ ಕಸ್ಯಚಿತ್॥
ವೀರಶೈವಾನ್ವಯೇ ಜನ್ಮ ಪರಮಂ ದುರ್ಲಭಂ ಸ್ಮೃತಂ– ಎಂದುದಾಗಿ
ಸಕಲ ಪ್ರಾಣಿಗಳಲ್ಲಿ ವೀರಶೈವನೆ ಸರ್ವೋತ್ತಮನಯ್ಯಾ
ಕೂಡಲಚೆನ್ನಸಂಗಮದೇವಾ. ॥ ೭೯ ॥

೯೩೨

ಅಯ್ಯಾ, (ಆಯತ) ಲಿಂಗದಲ್ಲಿ ಆಗಾಗಿ ಆಚಾರಲಿಂಗಪ್ರಾಣಿಯಾದ,
ಆಚಾರಲಿಂಗದಲ್ಲಿ ಅವಧಾನಿಯಾಗಿ ಸರ್ವಾಚಾರಸಂಪನ್ನನಾದ,
ಸರ್ವಾಚಾರಸಂಪತ್ತಿನಲ್ಲಿ ಲಿಂಗೈಕ್ಯವಾಗಿಪ್ಪನು.
ಕೂಡಲಚೆನ್ನಸಂಗನಲ್ಲಿ
ಸಂಗನಬಸವಣ್ಣನು ಆಚಾರವ ಬಲ್ಲನಲ್ಲದೆ
ನಾನೆತ್ತ ಬಲ್ಲೆನಯ್ಯಾ ಪ್ರಭುವೆ? ॥ ೮೦ ॥

೯೩೩

ಅಯ್ಯಾ ಎನಗೆ ವಿಭೂತಿಯೆ ಕುಲದೈವ:
ಅಯ್ಯಾ ಎನಗೆ ವಿಭೂತಿಯೆ ಮನೆದೈವ;
ಅಯ್ಯಾ ಎನಗೆ ವಿಭೂತಿಯೆ ಸರ್ವಕಾರಣ;
ಅಯ್ಯಾ ಎನಗೆ ವಿಭೂತಿಯೆ ಸರ್ವಸಿದ್ಧಿ;
ಅಯ್ಯಾ ಎನಗೆ ವಿಭೂತಿಯೆ ಸರ್ವವಶ್ಯ;
ಅಯ್ಯಾ ಕೂಡಲಚೆನ್ನಸಂಗಮದೇವಾ
ಶ್ರೀಮಹಾಭೂತಿಯೆಂಬ ಪರಂಜ್ಯೋತಿ ನೀವಾದಿರಾಗಿ,
ಎನಗೆ ವಿಭೂತಿಯೆ ಸರ್ವಸಾಧನ. ॥ ೮೧ ॥

ಅಂಗಗುಣಂಗಳ ಬಿಟ್ಟವರಿಗೆ ಶರಣೆಂಬೆ
ಕೂಡಲಚೆನ್ನಸಂಗಯ್ಯಾ. ॥ ೭೫ ॥

೯೨೮

ಅಮಲರಪ್ಪವರಾರೆಂದಡೆ;
ಅನಾದಿಮಲ ಸಂಸಾರವೆಂದರಿದು ನಿರ್ಮೋಹಿಗಳಾದವರು.
ಅಕಾಯಚರಿತ್ರರಾರೆಂದಡೆ;
ಸದ್ಗುರುಪಥದಲ್ಲಿ ನಿಂದು, ಆನೆಂಬ ತನುಗುಣವಳಿದವರು.
ಆದಿ–ಅನಾದಿಗಳೆಂಬೆರಡಳಿದವರಾರೆಂದಡೆ
ಶಾಂತಿಸ್ಥಲದಲ್ಲಿ ನಿಂದು ಪರಮಸುಖಿಗಳಾಗಿಪ್ಪವರು.
ದ್ವೈತಾದ್ವೈತವನತಿಗಳೆದವರಾರೆಂದಡೆ,
ತೋರುವ ತೋರಿಕೆ ನಿರ್ಮಲಸ್ವರೂಪರಾದವರು.
ಅವರು ತಾವೆ ನಿಮಗರ್ಪಿತ, ನಿಮ್ಮಾಣೆ,
ಕೂಡಲಚೆನ್ನಸಂಗಮದೇವಾ. ॥ ೭೬ ॥

೯೨೯

ಅಯ್ಯಾ, ಅನಾದಿ ವಸ್ತುವೆ ಗುರು–ಶಿಷ್ಯ,
ಭಕ್ತ–ಜಂಗಮ, ಗುರು–ಲಿಂಗ,
ಶರಣಸತಿ–ಲಿಂಗಪತಿ– ಎಂಬ ಸಾಕಾರಲೀಲೆಯ ಧರಿಸಿ
ಅವಿರಳಾನಂದ ನಿಜ ವೇಧಾ–ಮಂತ್ರ–ಕ್ರಿಯಾದೀಕ್ಷಾಯುಕ್ತವಾದ
ಮೂರೇಳು ಇಪ್ಪತ್ತೊಂದು ದೀಕ್ಷೆಯ
ಭಿನ್ನವಿಲ್ಲದೆ ಸದ್ಗುರುಮುಖದಿಂದ ಅರಿದಾನಂದಿಸ ಬಲ್ಲಡೆ;
ಸಹಜ ದೀಕ್ಷೆಯುಳ್ಳ ಶ್ರೀಗುರುಲಿಂಗಜಂಗಮ,
ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ
ನಿರವಯಮೂರ್ತಿಯೆಂಬೆನಯ್ಯಾ ಕೂಡಲಚೆನ್ನಸಂಗಮನಲ್ಲಿ. ॥ ೭೭ ॥

೯೩೦

'ಅಯ್ಯಾ ಅಯ್ಯಾ' ಎಂದಡೆ ಅಯ್ಯ 'ಓ' ಎಂಬುದ ಮಾಣ್ಬನೆ?
'ಅವ್ವಾ ಅವ್ವಾ' ಎಂದಡೆ ಅವ್ವೆ 'ಓ' ಎಂಬುದ ಮಾಣ್ಬಳೆ?–
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ
'ಬಸವಲಿಂಗಾ ಬಸವಲಿಂಗಾ ಬಸವಲಿಂಗಾ' ಎಂದಡೆ
ಎನ್ನ ಕಾಯ ಬಯಲಾಗದೆ? ॥ ೭೮ ॥

೯೩೧

ಅಯ್ಯಾ, ಆದಿಸೃಷ್ಟಿಯಿಂದ ಇಂದು ಪರ್ಯಂತರವೂ
ನಾನಾ ಯೋನಿಯಲ್ಲಿ ಹುಟ್ಟಿ ಹುಟ್ಟಿ ಬಳಲಿ ಬಾಯಾರಿದವಂಗೆ
ಅಂಧ ಟಿಟ್ಟಿಭ ನ್ಯಾಯದಂತೆ
ಅಕಸ್ಮಾತ್ ಅರಿವುಳ್ಳ ನರಜನ್ಮವು ದೊರೆವುದೆ ದುರ್ಲಭ
ಅದರಲ್ಲಿಯೂ ಶೈವಕುಲದಲ್ಲಿ ಜನ್ಮವೆತ್ತಿರ್ಪುದು ಅತಿ ದುರ್ಲಭ.
ಅದಕ್ಕಿಂತಲೂ ವೀರಶೈವ ವಂಶದಲ್ಲಿ ಜನಿಸಿಹುದು
ಅತ್ಯಂತ ದುರ್ಲಭವಾಗಿರ್ಪುದು ಕಾಣಾ.
ಕಿಮಸ್ತಿ ಬಹುನೋಕ್ತೇನ ಮಾನುಷಂ ಜನ್ಮ ದುರ್ಲಭಂ।
ತತ್ರಾಪಿ ದುರ್ಲಭಂ ಜನ್ಮ ಕುಲೇ ಶೈವಸ್ಯ ಕಸ್ಯಚಿತ್॥
ವೀರಶೈವಾನ್ವಯೇ ಜನ್ಮ ಪರಮಂ ದುರ್ಲಭಂ ಸ್ಮೃತಂ– ಎಂದುದಾಗಿ
ಸಕಲ ಪ್ರಾಣಿಗಳಲ್ಲಿ ವೀರಶೈವನೆ ಸರ್ವೋತ್ತಮನಯ್ಯಾ
ಕೂಡಲಚೆನ್ನಸಂಗಮದೇವಾ. ॥ ೭೯ ॥

೯೩೨

ಅಯ್ಯಾ, (ಆಯತ) ಲಿಂಗದಲ್ಲಿ ಆಗಾಗಿ ಆಚಾರಲಿಂಗಪ್ರಾಣಿಯಾದ,
ಆಚಾರಲಿಂಗದಲ್ಲಿ ಅವಧಾನಿಯಾಗಿ ಸರ್ವಾಚಾರಸಂಪನ್ನನಾದ,
ಸರ್ವಾಚಾರಸಂಪತ್ತಿನಲ್ಲಿ ಲಿಂಗೈಕ್ಯವಾಗಿಪ್ಪನು.
ಕೂಡಲಚೆನ್ನಸಂಗನಲ್ಲಿ
ಸಂಗನಬಸವಣ್ಣನು ಆಚಾರವ ಬಲ್ಲನಲ್ಲದೆ
ನಾನೆತ್ತ ಬಲ್ಲೆನಯ್ಯಾ ಪ್ರಭುವೆ? ॥ ೮೦ ॥

೯೩೩

ಅಯ್ಯಾ ಎನಗೆ ವಿಭೂತಿಯೆ ಕುಲದೈವ;
ಅಯ್ಯಾ ಎನಗೆ ವಿಭೂತಿಯೆ ಮನೆದೈವ;
ಅಯ್ಯಾ ಎನಗೆ ವಿಭೂತಿಯೆ ಸರ್ವಕಾರಣ;
ಅಯ್ಯಾ ಎನಗೆ ವಿಭೂತಿಯೆ ಸರ್ವಸಿದ್ಧಿ;
ಅಯ್ಯಾ ಎನಗೆ ವಿಭೂತಿಯೆ ಸರ್ವವಶ್ಯ;
ಅಯ್ಯಾ ಕೂಡಲಚೆನ್ನಸಂಗಮದೇವಾ
ಶ್ರೀಮಹಾಭೂತಿಯೆಂಬ ಪರಂಜ್ಯೋತಿ ನೀವಾದಿರಾಗಿ,
ಎನಗೆ ವಿಭೂತಿಯೆ ಸರ್ವಸಾಧನ. ॥ ೮೧ ॥

೯೩೪

ಅಯ್ಯಾ, ಕರ್ಮದಾಗರವ ಹೊಕ್ಕು,
ವಿಷಯದ ಬಲೆಯಲ್ಲಿ ಸಿಲುಕಿ,
ದೇಹಮೋಹವೆಂಬ ಮಹಾದುಃಖಕ್ಕೀಡಾಗಿ ಸಾವುತ್ತಿದ್ದೇನೆ, ಬೇವುತ್ತಿದ್ದೇನೆ.
ಅಯ್ಯಾ ತಪ್ಪೆನ್ನದು ತಪ್ಪೆನ್ನದು.
ಈ ಮೊರೆಯ ವಿಚಾರಿಸಿ ಕಾರುಣ್ಯವ ಮಾಡು, ಕಾರುಣ್ಯವ ಮಾಡು.
ಅಯ್ಯಾ ಆಳಿನಪಮಾನ ಆಳ್ದಂಗೆಂಬಂತೆ,
ಎನ್ನಳಲು ನಿಮಗೆ ತಪ್ಪದು.
ಕಾರುಣ್ಯವ ಮಾಡು, ಅಯ್ಯಾ ಕಾರುಣ್ಯವ ಮಾಡು,
ಕೂಡಲಚೆನ್ನಸಂಗಮದೇವಾ. ॥ ೮೨ ॥

೯೩೫

ಅಯ್ಯಾ, ಕ್ರಿಯಾವಿಭೂತಿಯ ಧರಿಸಿದ ಭಕ್ತನು
ಚಿದ್ರುದ್ರಾಕ್ಷಿಯ ಧರಿಸಿ ಮಂತ್ರಧ್ಯಾನವ ಮಾಡಬೇಕಾದ ನಿಮಿತ್ತ,
ಪ್ರಥಮದಲ್ಲಿ ರುದ್ರಾಕ್ಷಮಣಿಗಳ ಕ್ರಮವ ಮಾಡದೆ,
ಅವರು ಹೇಳಿದಂತೆ ಕ್ರಯವ ಕೊಟ್ಟು ಮುಖಭಿನ್ನವಾದುದನುಳಿದು,
ಸ್ವಚ್ಛವಾದ ರುದ್ರಾಕ್ಷಿಗಳ ಶ್ರೀಗುರುಲಿಂಗಜಂಗಮದ ಸನ್ನಿಧಿಗೆ ತಂದು
ವೃತ್ತಸ್ಥಾನದ ಪರಿಯಂತರವು ಧೂಳಪಾದೋದಕವ ಮಾಡಿ,
ಆ ರುದ್ರಾಕ್ಷಿಯ ಪೂರ್ವಾಶ್ರಯವ ಕಳೆದು,
ಲಿಂಗಧಾರಕಭಕ್ತರಿಂದ ಗುರುಪಾದೋದಕ ಮೊದಲಾಗಿ
ಶಿವಪಂಚಾಮೃತದಿಂದ ಇಪ್ಪತ್ತೊಂದು ಪೂಜೆಯ ಮಾಡಿ,
ಆಮೇಲೆ ಶ್ರೀಗುರುಲಿಂಗಜಂಗಮದ ಪಾದಪೂಜೆಗೆ ಧರಿಸಿ,
ಆಮೇಲೆ ಲಿಂಗಜಂಗಮಕ್ಕೆ ಸಮರ್ಪಿಸಿ,
ಅವರಿಂದ ದಯಚಿತ್ತವ ಪಡೆದು,
ಶರಣುಹೊಕ್ಕು ಮಹಾಪ್ರಸಾದವೆಂದು ಬೆಸಗೊಂಡು,
ಆ ಕರುಣಾಕಟಾಕ್ಷ ಮಾಲೆಗಳ ಭಿನ್ನವಿಟ್ಟು ಅರ್ಚಿಸದೆ,
ಅಭಿನ್ನಸ್ವರೂಪು ಮುಂದುಗೊಂಡು ಬಹುಸುಯಿಧಾನದಿಂದ
ತನ್ನ ತೊಡೆಯ ಮೇಲೆ ಮೂರ್ತವ ಮಾಡಕೊಂಡು,
ತನ್ನ ಜ್ಞಾನಪ್ರಕಾಶವೆಂದು ಭಾವಿಸಿ ತನ್ನ ತಾನರ್ಚಿಸಿ,
ಮಂತ್ರಧ್ಯಾನಾರೂಢನಾಗಿ ತತ್ತತ್ ಸ್ಥಾನದಲ್ಲಿ ಧರಿಸುವುದಯ್ಯಾ.
ಇಂತು ವಿಭೂತಿರುದ್ರಾಕ್ಷಿಯ ಧರಿಸಿ ಲಿಂಗನಿಷ್ಠಾಪರನಾದ ಭಕ್ತನು
ಸ್ಥಲಮೆಟ್ಟಿಗೆಯಿಂದ ಆಯಾಯ ಮಂತ್ರವ ಹೇಳುವುದಯ್ಯಾ.

ಅದರ ವಿಚಾರವೆಂತೆಂದಡೆ:
ಕ್ರಿಯಾದೀಕ್ಷಾಯುಕ್ತನಾದ ಉಪಾಧಿಭಕ್ತಂಗೆ
ಗುರುಮಂತ್ರವ ಹೇಳುವುದಯ್ಯಾ.
ಕ್ರಿಯಾದೀಕ್ಷೆಯ ಪಡೆದು ಗುರುಲಿಂಗಜಂಗಮದಲ್ಲಿ
ಅರ್ಥಪ್ರಾಣಾಭಿಮಾನಂಗಳ ನಿರ್ವಂಚಕತ್ವದಿಂದ ಸಮರ್ಪಿಸಿ
ನಡೆನುಡಿ ಸಂಪನ್ನನಾದ ನಿರುಪಾಧಿಭಕ್ತಂಗೆ
ಲಿಂಗಮಂತ್ರವ ಹೇಳುವುದಯ್ಯಾ
ಇವರಿಬ್ಬರ ಆಚರಣೆಯ ಪಡೆದು ಸಮಸ್ತ ಭೋಗಾದಿಗಳ ನೀಗಿಸಿ
ಸಚ್ಚಿದಾನಂದನಾದ ಸಹಜಭಕ್ತಂಗೆ
ಜಂಗಮಮಂತ್ರವ ಹೇಳುವುದಯ್ಯಾ.
ಆ ಮಂತ್ರಂಗಳಾವುವೆಂದಡೆ:
ಶಕ್ತಿಪ್ರಣವ ಹನ್ನೆರಡು ಗುರುಮಂತ್ರವೆನಿಸುವುದಯ್ಯಾ,
ಶಿವಪ್ರಣವ ಹನ್ನೆರಡು ಲಿಂಗಮಂತ್ರವೆನಿಸುವುದಯ್ಯಾ,
ಶಿವಶಕ್ತಿರಹಿತವಾದ ಹನ್ನೆರಡು ಜಂಗಮಮಂತ್ರವೆನಿಸುವುದಯ್ಯಾ.
ಇಂತು ವಿಚಾರದಿಂದ ಉಪಾಧಿ ನಿರುಪಾಧಿ
ಸಹಜಭಕ್ತ ಮಹೇಶ್ವರರಾಚರಿಸುವುದಯ್ಯಾ.
ಇನ್ನು ನಿರಾಭಾರಿ ವೀರಶೈವ ನಿರ್ವಾಣ ಸದ್ಭಕ್ತ ಜಂಗಮಗಣಂಗಳು
ಶುದ್ಧಪ್ರಸಾದಪ್ರಣವ ಹನ್ನೆರಡು,
ಸಿದ್ಧಪ್ರಸಾದಪ್ರಣವ ಹನ್ನೆರಡು,
ಪ್ರಸಿದ್ಧಪ್ರಸಾದಪ್ರಣವ ಹನ್ನೆರಡು,
ಇಂತು ವಿಚಾರದಿಂದ ಮೂವತ್ತಾರು ಪ್ರಣವವನೊಡಗೂಡಿ,
ಶುದ್ಧಪ್ರಸಾದಪ್ರಣವ ಆಚಾರಲಿಂಗ ಗುರುಲಿಂಗ ಇಷ್ಟಲಿಂಗ ಪರಿಯಂತರ
ತ್ರಿವಿಧ ಲಿಂಗಕ್ಕೆಂದು ಮಾಡುವುದಯ್ಯಾ.
ಸಿದ್ಧಪ್ರಸಾದಪ್ರಣವ ಶಿವಲಿಂಗ ಜಂಗಮಲಿಂಗ ಪ್ರಾಣಲಿಂಗ ಪರಿಯಂತರ
ತ್ರಿವಿಧಲಿಂಗಕ್ಕೆಂದು ಮಾಡುವುದಯ್ಯಾ.
ಪ್ರಸಿದ್ಧಪ್ರಸಾದಪ್ರಣವ ಪ್ರಸಾದಲಿಂಗ ಮಹಾಲಿಂಗ ಭಾವಲಿಂಗ ಪರಿಯಂತರ
ತ್ರಿವಿಧಲಿಂಗಕ್ಕೆಂದು ಮಾಡುವುದಯ್ಯಾ.
ಹೀಗೆ ಹರುರಿಲ್ಲದೆ ಸ್ಥಲಮೆಟ್ಟಿಗೆಯಿಂದ
ಕರುಣಿಸಿದ ಗುರುವಿಂಗೆ ಬೆಸಗೊಂಡ ಶಿಷ್ಯೋತ್ತಮಂಗೆ.
ಆಯಾಯ ಲಿಂಗಪ್ರಸಾದ ಒದಗುವುದೆಂದಾತ
ನಮ್ಮ ಕೂಡಲಚೆನ್ನಸಂಗಮದೇವ. || ೮೩ ||

೯೩೬

ಅಯ್ಯಾ, ಗುರುಲಿಂಗಜಂಗಮ ಕರುಣಕಟಾಕ್ಷದಿಂದ
ಚಿದ್ವಿಭೂತಿ ರುದ್ರಾಕ್ಷಿ ಚಿನ್ಮಂತ್ರಗಳ
ಗುರುವಚನ ಪ್ರಮಾಣದಿಂದ ನಿರಂತರವು ಆಚರಿಸಿ,
ಚಿದ್ಘನ ಇಷ್ಟ ಮಹಾಲಿಂಗವ ಉರಸ್ಥಲದಲ್ಲಿ ಧರಿಸಬೇಕಾದಡೆ,
ದಾರದಿಂದ ಹುಟ್ಟಿದ ಸಜ್ಜೆಯ ಕರಕಮಲವಟುವ
ನೂಲಕಾಯಿ, ಬಿಲ್ವಕಾಯಿ, ಗಂಧದ ಮನೆ, ನಾರಂಗದ ಕಾಯಿ,
ರಜತ, ಹೇಮ, ತಾಮ್ರ, ಹಿತ್ತಾಳೆ, ಮೃತ್ತಿಕೆ ಮೊದಲಾದ
ಆವುದು ತನಗೆ ಯೋಗ್ಯವಾಗಿ ಬಂದ
ಚಿದ್ಘನಲಿಂಗದೇವಂಗೆ ಪರಿಣಾಮ ಕಟ್ಟುವಂತೆ,
ಮೂವತ್ತಾರೆಳೆಯ ದಾರವಾದಡೆಯೂ ಸರಿಯೆ,
ನಾಲ್ವತ್ತೆರಡೆಳೆಯ ದಾರವಾದಡೆಯೂ ಸರಿಯೆ,
ಐವತ್ತಾರೆಳೆಯಾದಡೆಯೂ ಸರಿಯೆ,
ಅರುವತ್ತುಮೂರಾದಡೆಯೂ ಸರಿಯೆ
ನೂರೆಂಟು, ಇನ್ನೂರ ಹದಿನಾರು, ಮುನ್ನೂರರುವತ್ತು ಎಳೆ ಮೊದಲಾಗಿ
ಲಿಂಗಾಣತಿಯಿಂದ ಒದಗಿ ಬಂದಂತೆ
ಶಿವಲಾಂಛನಸಂಯುಕ್ತದಿಂದ ದಾರವ ಕೂಡಿ
ಜ್ಞಾನಕ್ರಿಯಾಯುಕ್ತವಾದ ಎರಡೆಳೆಯಾದಡೆಯೂ ಸರಿಯೆ,
ಸತ್ತು ಚಿತ್ತು ಆನಂದ ನಿತ್ಯವೆಂಬ ಸ್ವಾನುಭಾವ ಸೂತ್ರಯುಕ್ತವಾದ
ನಾಲ್ಕೆಳೆಯಾದಡೆಯೂ ಸರಿಯೆ
ಪರಿಪೂರ್ಣ ಅವಿರಳ ಪರಂಜ್ಯೋತಿ ಎಂಬ ಮಹಾಜ್ಞಾನ ಸೂತ್ರಯುಕ್ತವಾದ
ಮೂರೆಳೆಯಾದಡೆಯೂ ಸರಿಯೆ.
ಆ ಲಿಂಗಗೃಹಂಗಳಿಗೆ ಮಂತ್ರಧ್ಯಾನದಿಂದ ಸೂತ್ರವ ರಚಿಸಿ
ಲಾಂಛನಯುಕ್ತವಾದ ಪಾವಡ ಯಾವುದಾದಡೆಯೂ ಸರಿಯೆ,
ಗುರುಪಾದೋದಕದಲ್ಲಿ ತೊಳೆದು ಮಡಿಕೆಯ ಮಾಡಿ,
ಬೆಳ್ಳಿ ಬಂಗಾರ ತಾಮ್ರ ಹಿತ್ತಾಳೆ ಕರತಾಳವೋಲೆ ಮೊದಲಾಗಿ ತಗಡ ಮಾಡಿ,
ಪ್ರಮಾಣಯುಕ್ತವಾಗಿ ಪಾವಡವ ಮಡಿಚಿ ಹುದುಗಿ,
ಪೂರ್ವ ಗಳಿಗೆಯುಲ್ಲಿ ತ್ರಿವಿಧ ಪ್ರಣವ, ಪಶ್ಚಿಮ ಗಳಿಗೆಯುಲ್ಲಿ ತ್ರಿವಿಧ ಪ್ರಣವ,
ಮಧ್ಯ ಗಳಿಗೆಯುಲ್ಲಿ ತ್ರಿವಿಧ ಪ್ರಣವ, ಎತ್ತುವ ಹುದುಗದಲ್ಲಿ ಪಂಚಪ್ರಣವ,
ಉತ್ತರ ಭಾಗದರಗಿನಲ್ಲಿ ಚಿಚ್ಛಕ್ತಿಪ್ರಣವ,
ದಕ್ಷಿಣ ಭಾಗದರಗಿನಲ್ಲಿ ಚಿಚ್ಛಿವಪ್ರಣವ,
ಇಂತು ಹದಿನಾರು ಪ್ರಣವಂಗಳ
ಷೋಡಶವರ್ಣಸ್ವರೂಪವಾದ ಷೋಡಶಕಳೆಗಳೆಂದು ಭಾವಿಸಿ,

ಕ್ರಿಯಾಭಸಿತದಿಂದ ಆಯಾಯ [ಸ್ಥಲದಲ್ಲಿ] ಸ್ಥಾಪಿಸಿ,
ಆ ಮಂತ್ರಗೃಹದಲ್ಲಿ ಚಿದ್ಘನಮಹಾಪರತತ್ವಮೂರ್ತಿಯ
ಮೂರ್ತವ ಮಾಡಿಸುವುದಯ್ಯಾ,
ಆಮೇಲೆ ನಿರಂಜನ ಜಂಗಮದ ಪಾದಪೂಜೆಯ ಮಾಡಬೇಕಾದಡೆ
ರೋಮಶಾಟಿಯಾಗಲಿ ಪಾವಡವಾಗಲಿ, ಆಸನವ ರಚಿಸಿ,
ಮಂತ್ರಸ್ಮರಣೆಯಿಂದ ಗುರುಪಾದೋದಕದ ವಿಭೂತಿಯಿಂದ
ಸಂಪ್ರೋಕ್ಷಣೆಯ ಮಾಡಿ ಪುಷ್ಪಪತ್ರೆಗಳ ರಚಿಸಿ,
ಆ ಮಹಾಪ್ರಭುಜಂಗಮಕ್ಕೆ ಅರ್ಘ್ಯಪಾದ್ಯಾಚಮನವ ಮಾಡಿಸಿ,
ಪಾವುಗೆಯ ಮೆಟ್ಟಿಸಿ ಮಂತ್ರಸ್ಮರಣೆಯಿಂದ ಪಾಣಿಗಳನೇಕಭಾಜನವ ಮಾಡಿ,
ಬಹುಪರಾಕೆಂದು ಆ ಸಿಂಹಾಸನಕ್ಕೈತಂದು ಮೂರ್ತವ ಮಾಡಿದ ಮೇಲೆ
ಪಾದಾಭಿಷೇಕಜಲವ ಶಿವಗೃಹಕ್ಕೆ ತಳಿದು,
ಪಾದೋದಕ ಪುಷ್ಪೋದಕ ಗಂಧೋದಕ ಭಸ್ಮೋದಕ
ಮಂತ್ರೋದಕದಿಂದ ಲಿಂಗಾಭಿಷೇಕವ ಮಾಡಿಸಿ,
ಸಾಕಾರ ನಿರಾಕಾರ ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡಿ,
ಸಮ್ಮುಖದಲ್ಲಿ ಗದ್ದುಗೆಯ ಹಾಕಿ, ಅಷ್ಟಾಂಗಹೊಂದಿ ಶರಣುಹೊಕ್ಕು,
ಗದ್ದುಗೆಯ ಮೇಲೆ ಮೂರ್ತವ ಮಾಡಿ,
ಆ ಲಿಂಗಜಂಗಮವ ಮೂಲಮಂತ್ರದಿಂದ ಅನಿಮಿಷದೃಷ್ಟಿಯಿಂದ ನಿರೀಕ್ಷಿಸಿ
ತನ್ನ ವಾಮಕರವ ಪಂಚಾಂಗುಲಿಗಳಲ್ಲಿ ಪಂಚಪ್ರಣವವ ಲಿಖಿಸಿ
ಮಧ್ಯಸಿಂಹಾಸನದಲ್ಲಿ ಮೂಲಪ್ರಣವವ ಸ್ಥಾಪಿಸಿ ಅರ್ಚಿಸಿ,
ಮಹಾಪ್ರಭುಜಂಗಮದ ಶ್ರೀಪಾದವ ಮೂರ್ತವ ಮಾಡಿ
ಬಹಿರಂಗದ ಕ್ರೀ ಅಂತರಂಗದ ಕ್ರೀಯಿಂದರ್ಚಿಸಿ
ಪ್ರಥಮ ತಳಿಗೆಯಲ್ಲಿ ಪೂರ್ವ ಪಶ್ಚಿಮ ಉತ್ತರ ದಕ್ಷಿಣ ತ್ರಿಪುಂಡ್ರರೇಖೆಗಳ ರಚಿಸಿ,
ಪಂಚದಿಕ್ಕುಗಳಲ್ಲಿ ಪ್ರಣವವ ಲಿಖಿಸಿ,
ದ್ವಿತೀಯ ಬಟ್ಟಲೊಳಗೆ ಮೂಲಪ್ರಣವವ ಲಿಖಿಸಿ
ಗುರುಪಾದೋದಕದ ಪಾತ್ರೆಯಲ್ಲಿ
ಬಿಂದುಯುಕ್ತವಾಗಿ ಮೂಲಪ್ರಣವವ ಲಿಖಿಸಿ
ತ್ರಿವಿಧಲಿಂಗಸ್ವರೂಪವಾದ ಸ್ಥಾನವನರಿದು
ಪಂಚಾಕ್ಷರ, ಷಡಕ್ಷರ, ನವಾಕ್ಷರ ಸ್ಮರಣೆಯಿಂದ ಪಡಕೊಂಡು
ಮಂತ್ರಸ್ಮರಣೆಯಿಂದ ಲಿಂಗ ಜಂಗಮ ಭಕ್ತ ಶರಣಗಣಂಗಳಿಗೆ ಸಲಿಸಿ,
ಮುಕ್ತಾಯವ ಮಾಡಿ ಪ್ರಸಾದಭೋಗವ ಕೆಳಿದಾಚರಿಸೆಂದಾತ
ನಮ್ಮ ಕೂಡಲಚೆನ್ನಸಂಗಮದೇವ. || ೮೪ ||

೯೩೭

ಅಯ್ಯಾ, ಗುರುವರನ ಹೊಂದಿ ಗುರುಪುತ್ರನಾದ ಬಳಿಕ
ಅಕಸ್ಮಾತ್ ಆ ಗುರುವಿನಲ್ಲಿ ಅನಾಚಾರ ದುರಾಚಾರಗಳು ಮೈದೋರಿದಲ್ಲಿ,
ಅವು ಸೂಕ್ಷ್ಮವಿದ್ದಡೆ ತಿದ್ದಿಕೊಳ್ಳಬೇಕು,
ಸ್ಥೂಲವಿದ್ದಡೆ ಆ ಗುರುವ್ಯಕ್ತಿಯನುಳಿದು
ತಾನರಿದ ಗುರುತತ್ವವ ನಂಬಿ ಸದಾಚಾರವ ಸಾಧಿಸುತ್ತಿರಬೇಕು.
ಇಂತೀ ಆಚರಣೆಯೆ ನಿಮ್ಮ ಶರಣರಿಗೆ ಸದಾ ಸಮ್ಮತವಾಗಿರ್ಪುದು ಕಾಣಾ
ಕೂಡಲಚೆನ್ನಸಂಗಮದೇವಾ. ॥ ೮೫

೯೩೮

ಅಯ್ಯಾ, ಘನಗಂಭೀರವಪ್ಪ ಸಮುದ್ರದೊಳಗೊಂದು ರತ್ನ ಹುಟ್ಟಿದಡೆ,
ಆ ಸಮುದ್ರದೊಳಗಡಗಿರ್ಪುದಲ್ಲದೆ ಘನವಾಗಿ ತೋರಬಲ್ಲುದೆ?
ನಿಮ್ಮ ಕರುಣಕಟಾಕ್ಷದಿಂದುದಯಿಸಿ, ಅನಂತ ಪುರಾಣವೆಲ್ಲವು
ನಿಮ್ಮ ಕೃಪೆಯಿಂದ ಸಾಧ್ಯವಾಯಿತ್ತೆನಗೆ.
ಆದಿಯನಾದಿ ಇಲ್ಲದಂದು ನೀನೊಬ್ಬನೆ ಪ್ರಸಾದಿ.
ಉಮೆಯ ಕಲ್ಯಾಣವಿಲ್ಲದಂದು ನೀನೊಬ್ಬನೆ ಪ್ರಸಾದಿ.
ಕೂಡಲಚೆನ್ನಸಂಗಮದೇವರು ಸಾಕ್ಷಿಯಾಗಿ
ಬಸವಣ್ಣಾ, ನಿಮ್ಮ ತೊತ್ತಿನ ತೊತ್ತಿನ ಮರುದೊತ್ತಿನ ಮಗ ನಾನಯ್ಯಾ.॥ ೮೭ ॥

೯೩೯

ಅಯ್ಯಾ ತನುಶುದ್ಧನಾಗಿ ಇಷ್ಟಲಿಂಗವ ಪೂಜಿಸಬೇಕು.
ಮನಶುದ್ಧನಾಗಿ ಪ್ರಾಣಲಿಂಗವ ಧ್ಯಾನಿಸಬೇಕು.
ಭಾವಶುದ್ಧನಾಗಿ ಭಾವಲಿಂಗವ ಭಾವಿಸಬೇಕು.
ಇಂತೀ ತ್ರಿವಿಧವನರಿಯದೆ;
'ಲಿಂಗದೇಹೀ ಸದಾಶುಚಿಃ'। ಎಂಬೊಂದು ವಾಕ್ಯವನೆ ಮುಂದುಮಾಡಿ
'ಕ್ರಿಯಾದ್ವೈತಂ ನ ಕರ್ತವ್ಯಂ'। ಎಂಬ ವಾಕ್ಯವ ಮರೆಮಾಜಿ,
ಸ್ನಾನಪೂಜಾದಿ ಸತ್ಕ್ರಿಯಾಸಂಪನ್ನನಾಗದೆ
ಶಮದಮಾದಿ ಸದ್ಗುಣಸಂಪತ್ತಿಯ ಪಡೆಯದೆ,
ನಿತ್ಯನಿರ್ಮಲತ್ವ ನೆಲೆಯಾಗದ,
ಆನು ಶುದ್ಧನಾದೆನೆಂಬ ಕ್ರಿಯಾದ್ವೈತಿಯಾದ ಪಾತಕನ
ನಾಯಕನರಕದಲ್ಲಿಕ್ಕುವ ನಮ್ಮ ಕೂಡಲಚೆನ್ನಸಂಗಮದೇವ. ॥ ೮೭ ॥

೯೪೦

ಅಯ್ಯಾ ನಿಮ್ಮ ನಿಜಾಚರಣೆಯ ನಿಲುಕಡೆಯ
ಭವಪಾಶಪ್ರಾಣಿಗಳೆತ್ತ ಬಲ್ಲರಯ್ಯಾ?
ಅದೆಂತೆಂದಡೆ, ಲೋಕದಲ್ಲಿ ದೃಷ್ಟವುಂಟು.
ಅಯ್ಯಾ ಕುರಿ ಬಲ್ಲುದೆ ರಸದಾಳಿ ಕಬ್ಬಿನ ಸ್ವಾದವ?
ಶುನಿ ಬಲ್ಲುದೆ ಕಲ್ಪವೃಕ್ಷವ? ದಂಷ್ಟ್ರಿ ಬಲ್ಲುದ ಕಾಮಧೇನುವ?
ಗಾರ್ದಭ ಬಲ್ಲುದ ಚಿಂತಾಮಣಿಯ? ನರಿ ಬಲ್ಲುದೆ ಗಜಭದ್ರವ?
ಕಾಗೆ ಬಲ್ಲುದೆ ಪರಮಾಮೃತವ?
ಅಂಧಕ ಬಲ್ಲನೆ ಕನ್ನಡಿ ಬಿಂಬ ಮೊದಲಾಗಿ ಅನಂತ ಚಿತ್ರವಿಚಿತ್ರಂಗಳ?
ಬಧಿರ ಬಲ್ಲನೆ ಪ್ರಣವೋಂ ನಾದ ಮೊದಲಾದ ದಶನಾದಗಳ?
ಷಂಡ ಬಲ್ಲನೆ ರತಿಸಂಯೋಗವ?
ತೊತ್ತು ಬಲ್ಲಳೆ ರಾಜಭೋಗವ? ಹೇಡಿ ಬಲ್ಲನೆ ರಣಧೀರತ್ವವ?
ದರಿದ್ರ ಬಲ್ಲನೆ ನವರತ್ನಂಗಳ?
ಬೆಸ್ತ ಬಲ್ಲನೆ ಅಂದಳ ಮೊದಲಾದ ಅಷ್ಟಭೋಗಂಗಳ?
ಮೂಢಬಲ್ಲನೆ ಶಿವಕವಿತ್ವವ? ಕಾಮಿ ಬಲ್ಲನೆ ಶಿವಯೋಗದ ಸುಖವ?
ರೋಗಿ ಬಲ್ಲನೆ ರಂಭಾರಸವ? ಗೂಗಿ ಬಲ್ಲುದೆ ಚಿತ್ಸೂರ್ಯನ ಬೆಳಗ?
ಇಂತೆಂದುದಾಗಿ, ಲೋಕದ ದೃಷ್ಟದಂತೆ,
ಪೊನ್ನು ಹೆಣ್ಣು ಮಣ್ಣು ಅನ್ನ ನೀರು ವಸ್ತ್ರ ಆಭರಣ ವಾಹನವೆಂಬ
ಅಷ್ಟಮಲಂಗಳಲ್ಲಿ, ಅಷ್ಟಕಾಮವಿಕಾರದಿಂದ,
ಮಾಯಾಪಾಶಬದ್ಧಮಲದಲ್ಲಿ ಬಿದ್ದು ತೊಳಲುವ ಜಡಜೀವಿಗಳೆತ್ತ ಬಲ್ಲರಯ್ಯ
ನಿಮ್ಮ ಸರ್ವಾಚಾರಸಂಪತ್ತಿನಾಚರಣೆಯ?
ನಿಜಸುಖದ ರಾಜಾಧಿರಾಜ ಶಿವಯೋಗದ ನಿಲುಕಡೆಯ
ಕೂಡಲಚೆನ್ನಸಂಗಮದೇವಾ? || ೮೮ ||

೯೪೧

ಅಯ್ಯಾ ನಿಮ್ಮ ಭಕ್ತರಲ್ಲಿ ಪೊಲೆಸೂತಕವ ಕಲ್ಪಿಸುವಾತನೆ ಗುರುದ್ರೋಹಿ
ಜಂಗಮದಲ್ಲಿ ಜಾತಿಸೂತಕವ ನರಸುವಾತನೆ ಲಿಂಗದ್ರೋಹಿ
ಪ್ರಸಾದದಲ್ಲಿ ಎಂಜಲಸೂತಕವ ಭಾವಿಸುವಾತನೆ ಜಂಗಮದ್ರೋಹಿ
ಪಾದೋದಕದಲ್ಲಿ ಸಂಕಲ್ಪಸೂತಕವ ನೆನೆವಾತನೆ ಪ್ರಸಾದದ್ರೋಹಿ
ಈ ಚತುರ್ವಿಧದಲ್ಲಿ ಭಯ ಭಕ್ತಿ ಪ್ರೀತಿ ಪ್ರೇಮ ವಿಶ್ವಾಸವುಳ್ಳಾತನೆ ಭಕ್ತನು.
ಈ ಚತುರ್ವಿಧದಲ್ಲಿ ಛಲ ನಿಷ್ಠೆ ದೃಢತರವಾದಾತನೆ ಮಾಹೇಶ್ವರನು
ಈ ಚತುರ್ವಿಧದಲ್ಲಿ ನಿಜಾವಧಾನವುಳ್ಳಾತನೆ ಪ್ರಸಾದಿ

ಈ ಚತುರ್ವಿಧದಲ್ಲಿ ತದ್ಗತಾನುಭಾವವುಳ್ಳಾತನೆ ಪ್ರಾಣಲಿಂಗಿ
ಈ ಚತುರ್ವಿಧದಲ್ಲಿ ನಿರ್ಣಯಾನಂದವುಳ್ಳಾತನೆ ಶರಣ
ಈ ಚತುರ್ವಿಧದಲ್ಲಿ ಸ್ಥಿರೀಕರಿಸಿ ಸಂದಳಿದೊಂದಾಗಿ ಕೂಡಿದಾತನೆ ಲಿಂಗೈಕ್ಯನು
ಈ ಚತುರ್ವಿಧದೊಳಗಡಗಿತು ಷಟ್ಸ್ಥಲವು.
ಆತಂಗೆ ಸರ್ವವೂ ಸಾಧ್ಯವಹುದು.
ಆತ ಲಿಂಗದೇಹಿ ಲಿಂಗಪ್ರಾಣಿ ಲಿಂಗಕಾಯನು.
ಆತ ನಡೆಯಿತ್ತೇ ಬಟ್ಟೆ, ಆತನುಡಿದುದೇ ಶಿವಮಂತ್ರ,
ಆತನಿರ್ದುದೇ ಶಿವಕ್ಷೇತ್ರ, ಆತನಿರ್ದೋಷಿ, ಕೂಡಲಚೆನ್ನಸಂಗಯ್ಯನಲ್ಲಿ
ಆತನೆ ಸರ್ವಾಂಗಲಿಂಗಿ. ॥ ೮೯ ॥

೯೪೨

ಅಯ್ಯಾ ನಿಮ್ಮ ಶರಣನು ಮೂರ್ತನಲ್ಲ ಅಮೂರ್ತನಲ್ಲ.
ಲಿಂಗದಲ್ಲಿ ಪ್ರಾಣಸಂಚಿತ, ಪ್ರಾಣದಲ್ಲಿ ಪ್ರಸಾದ ಸಂವರಣೆ,
ಪ್ರಸಾದದಲ್ಲಿ ಕಾಯಾಶ್ರಿತನು.
ಲೋಕ ಲೌಕಿಕದ ಪ್ರಕಾರದುದಯನಲ್ಲ,
ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೯೦ ॥

೯೪೩

ಅಯ್ಯಾ ಪಾದಪೂಜೆಯೆಂಬುದು ಅಗಮ್ಯ ಅಗೋಚರ ಅಪ್ರಮಾಣ ಅಸಾಧ್ಯ.
ಶ್ರೀಗುರು ಬಸವೇಶ್ವರದೇವರು ತಮ್ಮ ಅಂತರಂಗದೊಳಗಣ
ಪಾದಪೂಜೆಯಿಂದಾದ ತೀರ್ಥಪ್ರಸಾದವ
'ಗಣಸಮೂಹಕ್ಕೆ ಸಲ್ಲಲಿ' ಎಂದು ನಿರ್ಮಿಸಿ, ಭಕ್ತಿಯ ತೊಟ್ಟು ಮೆರೆದರು.
ಇಂತಪ್ಪ ತೀರ್ಥಪ್ರಸಾದವ ಸೇವಿಸುವ ಕ್ರಮವೆಂತೆಂದಡೆ:
ಗ್ರಾಮಸೇವಾದಿಸಂರಂಭನೃತ್ಯಗೀತಾದಿ ವರ್ಜಿತಃ।
ಅನಾಚಾರ ವಿಹೀನೋ ಯೋ ತಸ್ಯ ತೀರ್ಥಂ ಪಿಬೇತ್ ಸದಾ॥ ಇಂತೆಂದುದಾಗಿ,
ತಂಬೂರಿ ಕಿನ್ನರಿವಿಡಿದು ಮನೆಮನೆಯ ಬೇಡುವಾತ
ಹಲವು ವೇಷವ ತೊಟ್ಟು ಆಡುವಾತ,
ನಗಾರಿ ಸಮ್ಮೇಳ ಕರಣೆ ಕಹಳೆ ಶಂಖ ಬಾರಿಸುವಾತ
ಅಷ್ಟಾವರಣ ಪಂಚಾಚಾರದಲ್ಲಿ ಅಹಂಕರಿಸುವಾತ ಅನಾಚಾರಿ.
ಪರ್ವತದ ಕಂಬಿ ಮಹಾಧ್ವಜವ ಹೊರುವಾತ
ರಾಜಾರ್ಥದಲ್ಲಿ ಅಹುದ ಅಲ್ಲವ ಮಾಡಿ, ಅಲ್ಲವ ಅಹುದ ಮಾಡುವಾತ
ಅನಾಚಾರವ ಹೇಳುವಾತ ಸದಾಚಾರದಲ್ಲಿ ತಪ್ಪುವಾತ
ಭಕ್ತಗಣಂಗಳ ನಿಂದೆಯ ಮಾಡುವಾತ

ಸದಾಚಾರಸದ್ಭಕ್ತಗಣಂಗಳ ಕಂಡಡೆ ಗರ್ವಿಸುವಾತ
ಧಾನ್ಯ ಅರಿವೆ ಬೆಳ್ಳಿ ಬಂಗಾರಂಗಳ ಕ್ರಯವಿಕ್ರಯದಲ್ಲಿ ವಂಚಿಸುವಾತ
ಗುರುಹಿರಿಯರಲ್ಲಿ ಹಾಸ್ಯರಹಸ್ಯವ ಮಾಡುವಾತ
ಪರದೈವ ಪರಧನ ಪರಸ್ತ್ರೀ ಗಮಿಸುವಾತ
ಸೂಳೆ ಬಸವಿಯರ ಗೃಹದಲ್ಲಿ ಇರುವಾತ
ಆಚಾರಭ್ರಷ್ಟ ಮಾನಹೀನರ ಸಂಗವ ಮಾಡುವಾತ, ದುರುಳು ಮಂಕು.
ಅವರ ಗುರುಲಿಂಗಜಂಗಮವೆಂದು ನುಡಿಯಲಾಗದು.
ಅದೆಂತೆಂದಡೆ:
ಖೇಟಕೋ ದಂಡಚಕ್ರಾಸಿ ಗದಾತೊಮರಧಾರಿಣಃ।
ಜಂಗಮಾನಾನುಮಂತವ್ಯಾಃ ಸ್ವಯಲಕ್ಷಣಸಂಯುತಾಃ॥
ಆಶಾತೋ ವೇಷಧಾರೀ ಚ ವೇಷಸ್ಯ ಗ್ರಾಸತೋಷಕಃ।
ಗ್ರಾಸಶ್ಚ ದೋಷವಾಹೀ ಚ ಇತಿ ಭೇದೋ ವರಾನನೇ॥
ಅನಾಚಾರ ವಿಭಾವೇನ ಸದಾಚಾರಂ ನ ವರ್ಜಯೇತ್।
ಸದಾಚಾರಿ ಸುಭಕ್ತಾನಾಂ ಪಾದತೀರ್ಥಪ್ರಸಾದಕಂ॥
ಮಹಾಭೋಗೀ ಮಹಾತ್ಯಾಗೀ ಲೋಲುಪ್ತೋ ವಿಷಯಾತುರಃ।
ಯಸ್ತ್ವಂಗ ವಿಹೀನಸ್ಯಾತ್ತಸ್ಯ ಪಾದತೀರ್ಥಂ ಸೇವಯೇತ್॥
ಕುಷ್ಠೀ ಕರಣಹೀನಶ್ಚ ಬಧಿರಃ ಕಲಹಪ್ರಿಯಃ।
ವ್ಯಾಧಿಭಿಸ್ತ್ವಂಗಹೀನಶ್ಚತ್ವೈರ್ಸವಾಸಂ ಚ ಕಾರಯೇತ್॥
ಇಂತೀ ದುರ್ಮಾರ್ಗ ನಡತೆಗಳಿಲ್ಲದೆ,
ಅಯೋಗ್ಯವಾದ ಜಂಗಮವನುಳಿದು, ಯೋಗ್ಯಜಂಗಮವ ವಿಚಾರಿಸಿ
ತನು ಮನ ಧನ ವಂಚನೆಯಿಲ್ಲದೆ ಸಮರ್ಪಿಸಿ
ಅವರ ತೀರ್ಥಪ್ರಸಾದವ ಕೈಕೊಳ್ಳಬೇಕಲ್ಲದೆ
ದುರ್ಮಾರ್ಗದಲ್ಲಿ ಆಚರಿಸುವಾತನಲ್ಲಿ ತ್ರಿಣೇತ್ರವಿದ್ದಡೆಯೂ
ತೀರ್ಥಪ್ರಸಾದ ಉಪದೇಶವ ಕೊಳಲಾಗದು ಕಾಣಾ.
ಕೂಡಲಚೆನ್ನಸಂಗಮದೇವ ಸಾಕ್ಷಿಯಾಗಿ
ಗುರುವಚನವ ತಿಳಿದು ನೋಡಾ ಸಂಗನಬಸವಣ್ಣಾ. ॥ ೯೧ ॥

೯೪೪

ಅಯ್ಯಾ, ಪಿಂಡಬ್ರಹ್ಮಾಂಡದ ಮಧ್ಯದಲ್ಲಿ,
ಭಕ್ತನೆಂಬ ವೃಕ್ಷವಾಗಿ ಚಿದಂಡವಿಪ್ಪುದು.
ಆ ಚಿದಂಡದ ಮಧ್ಯದಲ್ಲಿ ಜಂಗಮವೆಂಬ ಬೀಜವಾಗಿ ಚಿನ್ಮಯಾಂಡವಿಪ್ಪುದು.
ಆ ಪರಪರ ಮಧ್ಯದಲ್ಲಿ ಸತ್ಕ್ರಿಯೆ ಸಮ್ಯಕ್‌ಜ್ಞಾನ ಮಹಾಜ್ಞಾನವೆಂಬ

ಚಿತ್ಸೂರ್ಯ ಚಿದಗ್ನಿ ಚಿಚ್ಚಂದ್ರಮಂಡಲವಿರ್ಪುದು.
ಆ ಮಂಡಲದ ಮಧ್ಯದಲ್ಲಿ ಏಕಾದಶ ದಿಕ್ಕುಗಳಿರ್ಪುವು.
ಆ ದಿಕ್ಕುಗಳ ಮಧ್ಯದಲ್ಲಿ ಲಕ್ಷದಳ ಕಮಲವಿರ್ಪುದು.
ಆ ಕಮಲದಳಂಗಳಲ್ಲಿ ಲಕ್ಷ ಲಿಂಗಗಳಿರ್ಪುವು.
ಆ ಲಿಂಗಂಗಳಂಗುಷ್ಠಾಗ್ರದಲ್ಲಿ ಲಕ್ಷ ಗಂಗೆಗಳಿರ್ಪುವು.
ಆ ಗಂಗೆಗಳ ಮಧ್ಯದಲ್ಲಿ ಲಕ್ಷ ಪ್ರಣವಂಗಳಿರ್ಪುವು.
ಆ ಪ್ರಣವಂಗಳ ಮಧ್ಯದಲ್ಲಿ ಬಸವ ಮೊದಲಾದ ಮಹಾಶರಣಗಣಂಗಳು
ಪರಿಪೂರ್ಣವಾಗಿ ಮೂರ್ತಗೊಂಡಿರ್ಪರು ನೋಡಾ.
ಇಂತು ಪ್ರಮಥಗಣಂಗಳು ನೆರೆದಿರ್ದ ಸ್ವಸ್ವರೂಪದ ನಿಲುಕಡೆಯನರಿಯದೆ,
ಕೊಟ್ಟಿದನವ ದೊಡ್ಡ ವೃಕ್ಷಕ್ಕೆ ಕಟ್ಟಿದಂತೆ,
ಅಂಗದ ಮೇಲೆ ಲಿಂಗವ ಕಟ್ಟಿಕೊಂಡು ಸುಳಿವಾತ ಜಂಗಮವಲ್ಲ,
ಆ ಜಂಗಮಕ್ಕೆ ತನುಮನಧನಂಗಳ ಕೊಟ್ಟು
ಅವರಡಿಯಿಂದ ಹುಟ್ಟಿದ ಜಲಶೇಷವ ಕೊಂಬಾತ ಭಕ್ತನಲ್ಲ.
ಇಂತು, ಉಭಯಾಂಧಕ ಭಕ್ತಜಂಗಮಕುಲವಳಿದು
ಪ್ರಮಥರಾಚರಿಸಿದ ಸನ್ಮಾರ್ಗದಲ್ಲಿ ಸುಳಿಯಬಲ್ಲಾತ ಜಂಗಮ.
ಆ ಜಂಗಮದನುವರಿದು ಅಡಗಬಲ್ಲಾತ ಭಕ್ತ.
ಇದು ಕಾರಣ,–ಕೂಡಲಚೆನ್ನಸಂಗಯ್ಯಾ
ಇಂತಪ್ಪ ಭಕ್ತ ಜಂಗಮರ ಪಾದವ ತೋರಿ ಬದುಕಿಸಯ್ಯಾ ಗುರುವೆ. ॥ ೯೨ ॥

೯೪೫

ಅಯ್ಯಾ, ಶ್ರೀಗುರು ಕರುಣಿಸಿಕೊಟ್ಟ ಲಿಂಗ ಜಂಗಮವಲ್ಲದೆ,
ಅನ್ಯದೈವಂಗಳ ತ್ರಿಕರಣದಲ್ಲಿ ಅರ್ಚಿಸದಿರ್ಪುದೆ ಲಿಂಗಾಚಾರವೆಂಬೆನಯ್ಯಾ.
ಭಕ್ತನಾದಡೆ ಸತ್ಯಶುದ್ಧ ಕಾಯಕ[ವ ಮಾಡಿ],
ಮಹೇಶನಾದಡೆ ಸತ್ಯಶುದ್ಧ ಭಿಕ್ಷವ ಬೇಡಿ
ಸಮಸ್ತ ಪ್ರಾಣಿಗಳಲ್ಲಿ ಪಾತ್ರಾಪಾತ್ರವ ತಿಳಿದು ಹಸಿವು ತೃಷೆ ಶೀತಕ್ಕೆ
ಪರಹಿತಾರ್ಥಿಯಾಗಿರ್ಪುದೆ ಸದಾಚಾರವೆಂಬೆನಯ್ಯಾ.
ಗುರುಮಾರ್ಗಾಚಾರದಲ್ಲಿ ನಿಂದ ಶಿವಲಾಂಛನಧಾರಿಗಳೆಲ್ಲಾ
ಪರಶಿವಲಿಂಗವೆಂದು ಭಾವಿಸಿ,
ಅರ್ಥ ಪ್ರಾಣಾಭಿಮಾನವನರ್ಪಿಸುವುದೆ ಶಿವಾಚಾರವೆಂಬೆನಯ್ಯಾ.
ಅಷ್ಟಾವರಣಂಗಳ ಮೇಲೆ ಅನ್ಯರಿಂದ ಕುಂದು ನಿಂದೆಗಳು ಬಂದು ತಟ್ಟಿದಲ್ಲಿ
ಗಣಸಮೂಹವನೊಡಗೂಡಿ ಆ ಸ್ಥಲವ ತ್ಯಜಿಸುವುದೆ ಗಣಾಚಾರವೆಂಬೆನಯ್ಯಾ.
ಜಾತ್ಯಾಶ್ರಮ ಕುಲಗೋತ್ರ ನಾಮರೂಪು ಕ್ರಿಯಾರಹಿತನಾಗಿ,
ಗುರೂಪಾವಸ್ಥೆಯಿಂದ ಗುರುವ ಪ್ರತ್ಯಕ್ಷವ ಮಾಡಿ,

ಆ ಗುರುವಿನಿಂದ ಚಿದ್ಘನ ಮಹಾಲಿಂಗವ ಪಡೆದು,
ಆ ಲಿಂಗಸಹಿತವಾಗಿ ಭಕ್ತಿಜ್ಞಾನವೈರಾಗ್ಯ ಪಾದೋದಕ ಪ್ರಸಾದ
ವಿಭೂತಿ ರುದ್ರಾಕ್ಷಿ ಮಂತ್ರ ಮೊದಲಾದ ಷಟ್‌ಸ್ಥಲಮಾರ್ಗದಲ್ಲಿ ನಿಂದ
ಭಕ್ತಗಣಂಗಳಲ್ಲಿ ಪಂಚಸೂತಕಂಗಳ ಕಲ್ಪಿಸದೆ ಅವರಿದ್ದ ಸ್ಥಳಕ್ಕೆ ಹೋಗಿ,
ತನುಮನಧನಂಗಳ ಸಮರ್ಪಿಸಿ, ಅವರೊಕ್ಕುಮಿಕ್ಕುದ ಹಾರೈಸಿ
ಹಸ್ತಾಂಜಲಿತರಾಗಿ ಪ್ರತ್ಯುತ್ತರವ ಕೊಡದಿರ್ಪುದೆ ಭೃತ್ಯಾಚಾರವೆಂಬೆನಯ್ಯಾ.
ಮಲಮಾಯಾ ಪಾತಕ ಸೂತಕರಹಿತವಾದ ದೀಕ್ಷಾಗುರು,
ಶಿಕ್ಷಾಗುರು, ಜ್ಞಾನಗುರುವಿನಿಂದ
ಮಹಾಮಂತ್ರ ಕ್ರಿಯಾದೀಕ್ಷೆಯ ಪಡೆದು ದ್ವಾದಶ ಮಲಪಾಶ ಕರ್ಮವ ತ್ಯಜಿಸಿ,
ಮನ ಮಾರುತ ಮೊದಲಾದ ದ್ವಾದಶ ಇಂದ್ರಿಯಂಗಳ
ಗುರುಪಾದಜಲದಿಂದ ಪ್ರಕ್ಷಾಲಿಸಿ ದಂತಪಙ್ತಿಕ್ರಿಯೆಗಳ ಮಾಡಿ,
ಕಟಿಸ್ನಾನ ಕಂಠಸ್ನಾನ ಮಂಡೆಸ್ನಾನ ಸರ್ವಾಂಗಸ್ನಾನವ ಮಾಡಿ,
ಕ್ರಿಯಾಭಸಿತದಿಂದ ಸ್ನಾನ ಧೂಳನ ಧಾರಣದ ಮರ್ಮವ ತಿಳಿದಾಚರಿಸಿ,
ಸಾಕಾರ ನಿರಾಕಾರ ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ
ಗುರುಲಿಂಗಜಂಗಮವನರ್ಚಿಸಿ,
ನಿರ್ವಂಚಕತ್ವದಿಂದ ಘನಪಾದತೀರ್ಥಪ್ರಸಾದ ಮಂತ್ರದಲ್ಲಿ ನಿಂದ
ನಿಜಾವಸ್ಥೆಯ ಕ್ರಿಯಾಚಾರವೆಂಬೆನಯ್ಯಾ.
ಅಂತರಂಗದಲ್ಲಿ ಕರಣವಿಷಯ ಕರ್ಕಶದಿಂದ ಅಹಂಕರಿಸಿ
ಗುರುಹಿರಿಯರಲ್ಲಿ ಸಂಕಲ್ಪವಿಕಲ್ಪಂಗಳಿಂದ
ಕುಂದುನಿಂದೆ ಹಾಸ್ಯರೋಷಂಗಳೆಂಬ ಅಜ್ಞಾನವ ಬಳಸದೆ,
ಪರಮಪಾತಕರ ದರ್ಶನ ಸ್ಪರ್ಶನ ಸಂತರ್ಪಣೆ ಪಙ್ತಿಪಾಕವ ಕೊಳ್ಳದೆ,
ಸತ್ಯ ನಡೆನುಡಿಯುಳ್ಳ ಶಿವಶರಣಗಣಂಗಳಲ್ಲಿ ಷಡ್ವಿಧಭಕ್ತಿ ಮುಂದುಗೊಂಡು,
ಎರಡೆಂಬತ್ತೆಂಟುಕೋಟಿ ವಚನಾನುಭವದಲ್ಲಿ
ನಿಂದ ನಿಲುಕಡೆಯೆ ಜ್ಞಾನಾಚಾರವೆಂಬೆನಯ್ಯಾ.
ತನುವಿಕಾರದಿಂದ ಕಾಮ ಕ್ರೋಧ ಲೋಭ ಮೋಹ
ಮದ ಮತ್ಸರಂಗಳ ಬಳಕೆ ಮಾಡದೆ
ಲೋಕದಂತೆ ನಡೆನುಡಿಗಳ ಬಳಸದೆ,
ತನ್ನ ಗುಣಾವಗುಣಂಗಳ ಸ್ವಾತ್ಮಾನುಭವದಿಂದರಿದು, ದುರ್ಗುಣವ ತ್ಯಜಿಸಿ,
ಸದ್ಗುಣವ ಹಿಡಿದು ಬಿಡದಿಪ್ಪುದೆ ಭಾವಾಚಾರವೆಂಬೆನಯ್ಯಾ.
ಕೊಡುವಲ್ಲಿ ಕೊಂಬಲ್ಲಿ ಅತಿಯಾಸೆಯಿಂದ ಹುಸಿಯ ನುಡಿಯದೆ,
ಕೊಟ್ಟ ಭಾಷೆಗಳ ಪ್ರಾಣಾಂತ್ಯ ಬಂದಡೆಯೂ
ನುಡಿಯಂತೆ ನಡೆವುದೆ ಸತ್ಯಾಚಾರವೆಂಬೆನಯ್ಯಾ.
ಕಾಲ ಕಾಮರ ಬಾಧೆಗೊಳಗಾಗದ ಹಠಯೋಗ ಫಲಪದಂಗಳ

ತಟ್ಟುಮುಟ್ಟು ಸೋಂಕುಗಳಿಲ್ಲದೆ ಲಿಂಗಾಣತಿಯಿಂದ ಬಂದೊದಗಿದ
ಪರಿಣಾಮಪ್ರಸಾದದಲ್ಲಿ ಲೋಲುಪ್ತನಾಗಿರ್ಪುದೆ ನಿತ್ಯಾಚಾರವೆಂಬೆನಯ್ಯಾ.
ಸರ್ವಾವಸ್ಥೆಯಲ್ಲಿ ದಶವಿಧಪಾದೋದಕ ಏಕಾದಶಪ್ರಸಾದ
ಛತ್ತೀಸ ಪ್ರಣವ ಮೊದಲಾದ ಮಹಾಮಂತ್ರಂಗಳಲ್ಲಿ
ಎರಕವನುಳ್ಳುದೆ ಧರ್ಮಾಚಾರವೆಂಬೆನಯ್ಯಾ.
ಇಂತೀ ಏಕಾದಶವರ್ಮವ ಗುರುಕೃಪಾಮುಖದಿಂದರಿದು,
ಆಚಾರವೆ ಅಂಗ ಮನ ಪ್ರಾಣ ಭಾವಂಗಳಾಗಿ, ಇಹಪರವ ಮೀರಿ,
ಪಿಂಡಾದಿ ಜ್ಞಾನಶೂನ್ಯಾಂತವಾದ ಏಕೋತ್ತರಮಾರ್ಗದಲ್ಲಿ ನಿಂದು,
ಬಯಲೊಳಗೆ ಬಟ್ಟಬರಿಯ ನಿರ್ವಯಲ ಸಾಧಿಸುವುದೆ
ಸರ್ವಾಚಾರ ಸುಪತ್ತಿನಾಚಾರದ ನಿಲುಕಡೆ ನೋಡಾ.
ಇಂತು ಆಚಾರದ ಕುರುಹ ತಿಳಿದು ಪಂಚಾಚಾರವ ಬಹಿಷ್ಕರಿಸಿ
ಸಪ್ತಾಚಾರವ ಗೋಪ್ಯವ ಮಾಡಿ,
ದರಿದ್ರನಿಗೆ ನಿಧಿನಿಧಾನ ದೊರೆದಂತೆ, ರೋಗಿಗೆ ವೈದ್ಯದ ಲತೆ ದೊರೆದಂತೆ,
ಮೂಕ ಫಲರಸವ ಸವಿದಂತೆ, ಕಳ್ಳಗೆ ಚೇಳೂರಿದಂತೆ,
ತಮ್ಮ ಚಿದಂಗಸ್ವರೂಪರಾದ ಶರಣಗಣಂಗಳಲ್ಲಿ ಉಸುರಿ,
ಮರ್ಜನಾತ್ಮರಲ್ಲಿ ಬಳಸವೆ ನಿಂದ ಪರಮಸುಖಿ ನಿಮ್ಮ ಶರಣನಲ್ಲವೆ
ಉಳಿದ ಕಣ್ಗೆಟ್ಟಣ್ಣಗಳೆತ್ತ ಬಲ್ಲರಯ್ಯಾ ಕೂಡಲಚೆನ್ನಸಂಗಮದೇವಾ? || ೯೩ ||

೯೪೬

ಅಯ್ಯಾ, ಶ್ರೀವಿಭೂತಿಯ ಧರಿಸುವ ಭೇದವೆಂತೆಂದಡೆ:
ಸಹಜಲಿಂಗಧಾರಕರು ಎಂಟುಸ್ಥಾನದಲ್ಲಿ ಧರಿಸುವುದಯ್ಯಾ.
ಕ್ರಿಯಾದೀಕ್ಷಾನ್ವಿತರಾದ ಉಪಾಧಿಭಕ್ತರು
ಹದಿನಾರು ಸ್ಥಾನದಲ್ಲಿ ಧರಿಸುವುದಯ್ಯಾ.
ಕ್ರಿಯಾದೀಕ್ಷೆ, ಮಂತ್ರದೀಕ್ಷೆಯುಕ್ತರಾದ ನಿರುಪಾಧಿಭಕ್ತರು
ಮೂವತ್ತೆರಡು ಸ್ಥಾನದಲ್ಲಿ ಧರಿಸುವುದಯ್ಯಾ.
ಕ್ರಿಯಾದೀಕ್ಷೆ ಮಂತ್ರದೀಕ್ಷೆ ವೇಧಾದೀಕ್ಷೆಯುಕ್ತರಾದ ಸಹಜಭಕ್ತರು
ಮೂವತ್ತಾರು ಸ್ಥಾನದಲ್ಲಿ ಧರಿಸುವುದಯ್ಯಾ.
ಕ್ರಿಯಾದೀಕ್ಷೆ ಮಂತ್ರದೀಕ್ಷೆ ವೇಧಾದೀಕ್ಷೆ ಸಚ್ಚಿದಾನಂದದೀಕ್ಷಾಯುಕ್ತರಾದ
ನಿರ್ವಾಂಚನಭಕ್ತರು ನಾಲ್ವತ್ತುನಾಲ್ಕು ಸ್ಥಾನದಲ್ಲಿ ಧರಿಸುವುದಯ್ಯಾ.
ಕ್ರಿಯಾ–ಮಂತ್ರ–ವೇಧಾ–ಸಚ್ಚಿದಾನಂದ–ನಿರ್ವಾಣಪದದೀಕ್ಷಾ ಸಮನ್ವಿತರಾದ
ಸದ್ಭಕ್ತಶರಣಗಣಂಗಳು, ಆಪಾದಮಸ್ತಕ ಪರಿಯಂತರ
ಸ್ನಾನ ಧೂಳನವ ಮಾಡಿ ನಾಲ್ವತ್ತೆಂಟು ಸ್ಥಾನದಲ್ಲಿ

ಮಂತ್ರಸ್ಮರಣೆಯಿಂದ ತ್ರಿಪುಂಡ್ರವ ಧರಿಸುವುದಯ್ಯಾ
ಕೂಡಲಚೆನ್ನಸಂಗಮದೇವಾ. ॥ ೯೪ ॥

೯೪೭

ಅಯ್ಯಾ, ಶ್ರೀವಿಭೂತಿಯ ಸತ್ಕ್ರಿಯೆಯಿಂದ (ಮಾಡಿ)
ಧರಿಸುವ ಭೇದವೆಂತೆಂದಡೆ:
ಆವ ವರ್ಣದ ಗೋವಾದಡೆಯೂ ಸರಿಯೆ, ಅವಯವಂಗಳು ಸೂನು-ಕೂನಿಲ್ಲದೆ,
ಬರೆಗಳ ಹಾಕದೆ ಇರುವಂತಹ ಗೋವ ತಂದು,
ಅದಕ್ಕೆ ಧೂಳಪಾದೋದಕ ಸ್ನಾನವ ಮಾಡುವಂತಹದೆ
ಕ್ರಿಯಾಲಿಂಗಧಾರಣದೀಕ್ಷೆ; ಧೂಳಪಾದೋದಕಸೇವನೆಯೆ ಮಹಾತೀರ್ಥ.
ಭಕ್ತ ಆತನ ಭಾಂಡದಲ್ಲಿರುವ ಪದಾರ್ಥವ
ಹಸ್ತ ಮುಟ್ಟಿ ಹಾಕಿದ ಮೇಲೆ ಮಹಾಪ್ರಸಾದವಾಯಿತ್ತು.
ಇಂತಹ ಆಚಾರಯುಕ್ತವಾದ ಗೋವಿನ ಸಗಣಿಯ
ಸ್ವಚ್ಛವಾದ ಸ್ಥಳದಲ್ಲಿ ಚೂರ್ಣ ಮಾಡಿ ಒಣಗಿಸಿ
ಕ್ರಿಯಾಗ್ನಿಯಿಂದ ದಹಿಸಿದ ಬೂದಿಯ ಧೂಳಪಾದೋದಕದಲ್ಲಿ ಶೋಧಿಸಿ,
ಅದರೊಳಗೆ ತಿಳಿಯ ತೆಗೆದು ಘಟ್ಟಿಯ ಮಾಡಿ
ಪೂರ್ವದಲ್ಲಿ (ಗುರು) ಹೇಳಿದ ವಚನೋಕ್ತಿಯಿಂದ
ಧರಿಸಿದ ಲಿಂಗಧಾರಕಭಕ್ತಂಗೆ ಗುರುದೀಕ್ಷೆಯುಂಟಾಗುವುದಯ್ಯಾ,
ಉಪಾಧಿಭಕ್ತಂಗೆ ಗುರುಲಿಂಗಜಂಗಮದ ಸದ್ಭಕ್ತಿ ದೊರೆವುದಯ್ಯಾ,
ನಿರುಪಾಧಿಭಕ್ತಂಗೆ ತ್ರಿವಿಧ ಪಾದೋದಕ ಪ್ರಸಾದ ದೊರೆವುದಯ್ಯಾ,
ಸಹಜಭಕ್ತಂಗೆ ಸಚ್ಚಿದಾನಂದಪದ ದೊರೆವುದಯ್ಯಾ
ನಿರ್ವಂಚಕಭಕ್ತಂಗೆ ನಿರ್ವಾಣಪದವಾಗುವುದಯ್ಯಾ,
ನಿರ್ವಾಣಭಕ್ತಂಗೆ ನಿಷ್ಕಳಂಕ ಜ್ಯೋತಿರ್ಮಯ ಪರಶಿವಲಿಂಗದಲ್ಲಿ
ಕೂಟಸ್ಥವಾಗಿ, ನಿರಂಜನಜಂಗಮದಲ್ಲಿ ಕೂಡಿ
ಹರಗಣಸಹವಾಗಿ ನಿರವಯಸಮಾಧಿ ತಪ್ಪದು ನೋಡಾ
ಕೂಡಲಚೆನ್ನಸಂಗಮದೇವಾ. ॥ ೯೫ ॥

೯೪೮

ಅಯ್ಯಾ, ಷೋಡಶದಳ ಕಮಲದ ಮಧ್ಯದಲ್ಲಿ ನೆಲಸಿರ್ಪ
ಅನಾದಿ ನಿಷ್ಕಲಂಕ ಜ್ಯೋತಿರ್ಮಯ ಪರಶಿವಲಿಂಗದೇವಂಗೆ
ಕ್ರಿಯಾಶಕ್ತಿಸ್ವರೂಪವಾದ ಚಿತ್‌ಪೃಥ್ವಿಹೃದಯಮಧ್ಯದಲ್ಲಿ ನೆಲಸಿರ್ಪ
ಪರಿಣಾಮಜಲವ ಚಿದ್ಭಾಂಡದೊಳಗೆ ಪರಿಣಾಮಪಾವಡದಿಂದ ಶೋಧಿಸಿ,

ಗುರು ಚರ ಪರ ಸ್ವರೂಪವಾದ ಜಂಗಮಮೂರ್ತಿಗಳ
ಮೊಳಕಾಲ ಪರಿಯಂತರ ಪ್ರಕ್ಷಾಲನವ ಮಾಡಿ,
ಉಳಿದುದಕದಿಂದ ಉಭಯಪಾದಕಮಲವನು
ಅಡಿಪಾದವ ಮೂರು ವೇಳೆ, ಅಂಗುಲಿಗಳ ಒಂದು ವೇಳೆ
ಸ್ಪರ್ಶನವ ಮಾಡಿದಂತಹ ಗುರುಪಾದೋದಕವ ಭಾಂಡಭಾಜನದಲ್ಲಿ ತುಂಬಿ,
ಕರಕಮಲದಲ್ಲಿ ಅನಾದಿ ನಿಷ್ಕಲಂಕ ಜ್ಯೋತಿರ್ಮಯ
ಇಷ್ಟಮಹಾಲಿಂಗದೇವನ ಮೂರ್ತವ ಮಾಡಿಸಿಕೊಂಡು
ಪಂಚರಸಯುಕ್ತವಾದ ಆವುದಾದಡೆಯೂ ಒಂದು ಕಾಷ್ಠದಿಂದ
ಹಸ್ತಪಾದಮುಖಂಗಳಲ್ಲಿ ಸ್ಥಾಪಿಸಿರುವ
ಐವತ್ತೆರಡು ನಖದಂತಪಙ್ತಿಗಳ ತೀಡಿ,
ನೇತ್ರ ಮೊದಲಾದ ಲಿಂಗದವಯವಂಗಳ ಪ್ರಕ್ಷಾಲಿಸಿ,
ಕಟಿಸ್ನಾನ ಕಂಠಸ್ನಾನ ಮಂಡೆಸ್ನಾನ
ಮೊದಲಾದ ತ್ರಿವಿಧಲಿಂಗಸ್ನಾನವ ಮಾಡಿ, ಪಾವುಗೋರಡ ಮೆಟ್ಟಿ,
ಪಾವಡವಾಗಲಿ, ಪರ್ಣಾಸನವಾಗಲಿ
ದರ್ಭೆ ಬೆತ್ತ ಮೊದಲಾದಾಸನದಲ್ಲಿ ಮೂರ್ತವ ಮಾಡಿ,
ಗುರುಪಾದೋದಕದೊಳಗೆ ಭಸ್ಮ ಗಂಧ ಪುಷ್ಪ ಮಂತ್ರವ ಸ್ಥಾಪಿಸಿ,
ಪಂಚಾಮೃತವೆಂದು ಭಾವಿಸಿ
ಅನಾದಿ ನಿಷ್ಕಲಂಕ ಜ್ಯೋತಿರ್ಮಯ ಇಷ್ಟಮಹಾಲಿಂಗದೇವಂಗೆ
ಲೀಲಾಮಜ್ಜನವ ಮಾಡಿಸಿ,
ಕ್ರಿಯಾಚಾರದಲ್ಲಿ ದಹಿಸಿದ ವಿಭೂತಿಯಲ್ಲಿ
ಗುರುಪಾದೋದಕ ಲಿಂಗಪಾದೋದಕ ಮಂತ್ರಸಂಬಂಧವಾದ
ಚಿದ್ಭಸಿತವ ಸ್ನಾನ ಧೂಲನ ಧಾರಣಂಗಳ ಮಾಡಿ,
ಅಷ್ಟವಿಧಾರ್ಚನೆ ಷೋಡಶೋಪಚಾರಂಗಳೊಳಗೆ
ಲಿಂಗಾಣತಿಯಿಂದ ಬಂದುದ ಸಮರ್ಪಿಸಿ,
ಕ್ರಿಯಾಗುರುಲಿಂಗಜಂಗಮದ ತೀರ್ಥಪ್ರಸಾದವಾದಡೆಯೂ ಸರಿಯೆ
ಜ್ಞಾನಗುರುಲಿಂಗಜಂಗಮದ ತೀರ್ಥಪ್ರಸಾದವಾದಡೆಯೂ ಸರಿಯೆ,
ಆ ಕ್ರಿಯಾಜ್ಞಾನಗುರುಲಿಂಗಜಂಗಮದ ಮಹಾತೀರ್ಥವ
ಆ ಗುರುಲಿಂಗಜಂಗಮಕ್ಕೆ ಸಮರ್ಪಿಸಿ,
ಆಮೇಲೆ ತಳಿಗೆಬಟ್ಟಲಲ್ಲಿ
ಕಡುಬು ಕಜ್ಜಾಯ ಹೋಳಿಗೆ ಹುಗ್ಗಿ ಗುಗ್ಗರಿ ಬೆಳಸೆ ಅಂಬಲಿ ತುಂಬಿಸೊಪ್ಪು
ಮೊದಲಾದ ಶಾಕಪಾಕಾದಿಗಳ,
ಕ್ಷೀರ ದಧಿ ನವನೀತ ತಕ್ರ ಘೃತ ಕಬ್ಬಿನ ಹಾಲು
ಎಳೆ ಅಗ್ಗಿಣಿ ಪನ್ನೀರು ಮೊದಲಾದ ಸಮಸ್ತದ್ರವ್ಯಂಗಳ

ಭಾಜನದಲ್ಲಿ ಸ್ಥಾಪಿಸಿ ಹಸ್ತಸ್ಪರ್ಶನವ ಮಾಡಿ,
ಆ ಕ್ರಿಯಾಜ್ಞಾನ ಗುರುಲಿಂಗಜಂಗಮ ಪ್ರಸಾದವಾದಡೆಯೂ ಸರಿಯೆ,
ಮತ್ತಾ ಗುರುಲಿಂಗಜಂಗಮಕ್ಕೆ ಸಮರ್ಪಿಸಿ
ತಾನಾ ಪರಿಣಾಮ ಪಾದೋದಕ ಪ್ರಸಾದದಲ್ಲಿ
ಸಂತೃಪ್ತನಾದಾತನೆ ನಿಮ್ಮ ಅಚ್ಚಶರಣನಲ್ಲದೆ
ಉಳಿದ ನಾಹಂ ಭ್ರಮೆಯಿಂದ ತೊಳಲುವ ಬಡಜೀವಿಗಳೆತ್ತ ಬಲ್ಲರಯ್ಯಾ
ನಿಮ್ಮ ನಿಜಾಚರಣೆಯ ವಿಚಾರದ ಪರಿಣಾಮವ,
ಕೂಡಲಚನ್ನಸಂಗಮದೇವಾ? || ೯೬ ||

೯೪೯

ಅಯ್ಯಾ, ಸಜ್ಜನ ಸದ್ಭಾವಿಗಳ ಸಂಗದಿಂದ ಮಹಾನುಭಾವಿಗಳ ಕಾಣಬಹುದು,
ಮಹಾನುಭಾವಿಗಳ ಸಂಗದಿಂದ ಶ್ರೀಗುರುವ ಕಾಣಬಹುದು,
ಶ್ರೀಗುರುವಿನ ಸಂಗದಿಂದ ಲಿಂಗವ ಕಾಣಬಹುದು,
ಲಿಂಗಸಂಗದಿಂದ ಜಂಗಮವ ಕಾಣಬಹುದು,
ಜಂಗಮಸಂಗದಿಂದ ಪ್ರಸಾದವ ಕಾಣಬಹುದು,
ಪ್ರಸಾದದಿಂದ ಆಚಾರವ ಕಾಣಬಹುದಯ್ಯಾ.
ಆಚಾರದಿಂದ ತನ್ನ ಕಾಣಬಹುದಯ್ಯಾ
ಇದು ಕಾರಣ ಕೂಡಲಚೆನ್ನಸಂಗಮದೇವಾ,
ನಿಮ್ಮ ಸಜ್ಜನ ಸದ್ಭಾವಿಗಳ ಸಂಗವನೆ ಕರುಣಿಸಯ್ಯಾ
ನಿಮ್ಮ ಧರ್ಮ. || ೯೭ ||

೯೫೦

ಅಯ್ಯಾ, ಸಮಸ್ತ ಮಾಯಾಬಲೆಯಲ್ಲಿ, ಜನ್ಮಜನ್ಮಾಂತರವೆತ್ತ ತೊಳಲಿ ಬಳಲಿ
ಅಂತ್ಯದಲ್ಲಿ ಜ್ಞಾನೋದಯವಾಗಿ 'ಶಿವಧೋ' ಎಂದು
ಗುರೂಪಾವಸ್ಥೆಯ ಮಾಡುತಿರ್ದ ಶಿವಕಳಾತ್ಮಂಗೆ
ಶ್ರೀಗುರು ಪ್ರತ್ಯಕ್ಷವಾಗಿ ಕೃಪಾದೃಷ್ಟಿಯಿಂದ ನೋಡಲು
ಆ ಶಿವಕಳಾತ್ಮನು ಅತಿಸಂತೋಷದಿಂದ
'ಎಲೆ ಗುರುನಾಥನೆ, ಎನ್ನ ಅಪರಾಧವ ನೋಡದೆ
ನಿನ್ನ ದಯಾಂಬುಧಿಯಲ್ಲಿ ಮಡಗಿಕೋ,
ಎನ್ನ ಸರ್ವಾಧಾರ ಮೂರ್ತಿಯೆ' –ಎಂದು ಅಭಿವಂದಿಸಲು
ಆಗ, ಶ್ರೀಗುರುನಾಥನು ಮಹಾಸಂತೋಷ ಪುಟ್ಟಿ
ಆ ಶಿವಕಳಾತ್ಮಂಗೆ ಪೂರ್ವದ ಜಡಶೈವಮಾರ್ಗವ ಬಿಡಿಸಿ
ನಿಜ ವೀರಶೈವದೀಕ್ಷೆಯನೆ ಇತ್ತು ಹಸ್ತಮಸ್ತಕಸಂಯೋಗವ ಮಾಡಿ

ಅಂತರಂಗದಲ್ಲಿರುವ ಪ್ರಾಣಲಿಂಗವ ಬಹಿಷ್ಕರಿಸಿ, ಕರಸ್ಥಲಕ್ಕೆ ತಂದುಕೊಟ್ಟನು.
ಮತ್ತಾ ಲಿಂಗವ ಸರ್ವಾಂಗದಲ್ಲಿ ಪೂರ್ಣವ ಮಾಡಿ
ಲಿಂಗಾಂಗ ಷಟ್‌ಸ್ಥಾನವ ತೋರಿ
ಚಿದ್ವಿಭೂತಿ, ರುದ್ರಾಕ್ಷಿ, ಪಂಚಾಕ್ಷರಿ, ಷಡಕ್ಷರಿ
ಮೊದಲಾದ ಸಪ್ತಕೋಟಿ ಮಹಾಮಂತ್ರವನರುಹಿ
ಷಟ್‌ಸ್ಥಲಮಾರ್ಗ, ಷಡ್ವಿಧ ಶೀಲ ವ್ರತನೇಮಂಗಳನರುಹಿ
ಷೋಡಶವರ್ಣ, ದ್ವಾದಶಾಚಾರ, ಸಗುಣನಿರ್ಗುಣಲೀಲೆಯ ಕರುಣಿಸಿ
ನನಗೂ ನಿನಗೂ ಚೈತನ್ಯಸ್ವರೂಪವಾದ ನಿರಂಜನಜಂಗಮಲಿಂಗ
ಲಿಂಗಜಂಗಮವೆ ಗತಿಯೆಂದು ನಿರೂಪವಕೊಡಲು–
ಆಚರಣೆಯ ವಿಚಾರವ ಕರುಣಿಸಬೇಕಯ್ಯಾ ಸ್ವಾಮಿ ಎಂದು ಬೆಸಗೊಳಲು,
ಕೇಳಯ್ಯಾ, ವರಕುಮಾರ ದೇಶಿಕೋತ್ತಮನೆ
ಆ ಲಿಂಗಜಂಗಮ ಜಂಗಮಲಿಂಗದಾಚರಣೆಯ ಸಂಬಂಧವ:
ಸದ್ಗುರುಮಾರ್ಗಹಿಡಿದ ಜಂಗಮ, ಭಕ್ತನಾದ ನಿಜಪ್ರಸಾದಿ
ಇವರಿಬ್ಬರಾಚರಣೆಯ ನಿನ್ನೊಬ್ಬನಲ್ಲಿ ಹುರಿಗೊಳಿಸಿಕೊಟ್ಟೆವು ನೋಡಯ್ಯಾ.
ಅದೆಂತೆಂದಡೆ: ಕ್ರಿಯಾಜಂಗಮಮೂರ್ತಿಗಳು ನಿನ್ನರ್ಚನಾ ಸಮಯಕ್ಕೆ
ದಿವಾರಾತ್ರಿಗಳೆನ್ನದೆ ಒದಗಿ ಬಂದಲ್ಲಿ,
ಅಚ್ಚಪ್ರಸಾದಿಯೋಪಾದಿಯಲ್ಲಿ, ಕ್ರಿಯಾಚರಣೆಯನ್ನಾಚರಿಸುವುದಯ್ಯಾ.
ನಿನ್ನ ಸಮಯೋಚಿತಕ್ಕೆ ಕ್ರಿಯಾಜಂಗಮ ದೊರೆಯದಿರ್ದಡೆ
ದಿವಾರಾತ್ರಿಯಲ್ಲಿ ನಿಚ್ಚಪ್ರಸಾದಿ ಸಂಬಂಧದಂತೆ
ಜ್ಞಾನಜಂಗಮಸ್ವರೂಪವಾದ ಇಷ್ಟಮಹಾಲಿಂಗದಲ್ಲಿ
ಚಿದ್ಘನತೀರ್ಥಪ್ರಸಾದವ ಸಮರ್ಪಿಸಿ
ತಾನಾ ಪರಿಣಾಮಪ್ರಸಾದದಲ್ಲಿ ಲೋಲುಪ್ತನಾದಾತನೆ
ಲಿಂಗಭಕ್ತನಾದ ಸಮಯಪ್ರಸಾದಿ ನೋಡಾ,
ಕೂಡಲಚೆನ್ನಸಂಗಮದೇವಾ. ॥ ೯೮ ॥

೯೫೧

ಅಯ್ಯಾ, ಸಹಜಲಿಂಗಧಾರಕ ಭಕ್ತ ಉಪಾಧಿಕಭಕ್ತರು
ಗುರುಪಾದೋದಕದಲ್ಲಿ ಸಮ್ಮಿಶ್ರವ ಮಾಡಿ ಧರಿಸುವದಯ್ಯಾ.
ನಿರುಪಾಧಿಕಭಕ್ತ–ಸಹಜಭಕ್ತರು
ಗುರುಪಾದೋದಕ–ಲಿಂಗಪಾದೋದಕ ಸಮ್ಮಿಶ್ರವ ಮಾಡಿ
ಷಡಕ್ಷರಮಂತ್ರವ ಸ್ಥಾಪಿಸಿ ಧರಿಸುವದಯ್ಯಾ.
ನಿರ್ವಂಚಕಭಕ್ತ–ನಿರ್ವಾಣಶರಣಗಣಂಗಳು
ಗುರುಪಾದೋದಕದಲ್ಲಿ ಘಟ್ಟಿಯ ಕಟ್ಟಿ

ಲಿಂಗಪಾದೋದಕವ ಆ ಘುಟ್ಟಿಗೆ ಸಮ್ಮಿಶ್ರವ ಮಾಡಿ
ಆದಿ ಪ್ರಣಮಗಳಾರು ಅನಾದಿ ಪ್ರಣಾಮಗಳಾರು
ಚಿತ್ಕಲಾ ಪ್ರಸಾದ ಪ್ರಣಮಗಳಾರು ನಿಷ್ಕಳಂಕ ಚಿತ್ಕಲಾಮೂಲ
ಪ್ರಣಮ ಮೂರು
ಇಂತು ಇಪ್ಪತ್ತೊಂದು ಪ್ರಣಮಂಗಳ ಸ್ಥಾಪಿಸಿ
ಜಂಗಮಮೂರ್ತಿಗಳು ಧರಿಸಿದ ಮೇಲೆ ಧರಿಸುವುದಯ್ಯಾ.
ಹಿಂಗೆ ಧರಿಸಿದವರಿಗೆ ನಿಜಕೈವಲ್ಯಪದವಾಗುವದೆಂದಾತ
ನಮ್ಮ ಕೂಡಲಚೆನ್ನಸಂಗಮದೇವ. ॥ ೯೯ ॥

೯೫೨

ಅಯ್ಯಾ, ಸಾಧಕ ಸಿದ್ಧ ಅವತಾರಿಕರೆಂಬ ಗುರುಗಳು
ಲೋಕದ ಮಾನವರನುದ್ಧರಿಸುವ ಪರಿ ಎಂತೆಂದಡೆ:
ತಾನು ಪರಿಪೂರ್ಣತತ್ವವನರಿವ ಸಾಧನದಲ್ಲಿಹನಾಗಿ
ಭವಿಯ ಭವಿತ್ವವ ಕಳೆದು ಭಕ್ತನ ಮಾಡುವ ಸಾಮರ್ಥ್ಯವು
ಆ ಸಾಧಕ ಗುರುವಿನಿಂದ ಸಾಧ್ಯವಾಗದು ನೋಡಾ.
ಷಟ್‌ಸ್ಥಲಜ್ಞಾನದಲ್ಲಿ ಸಿದ್ಧನಾದ ಸದ್ಗುರು ತಾನು ನಿತ್ಯನಿರ್ಮಲನಾದಡೆಯೂ
ವೀರಶೈವ ಕ್ರಮಾಚರಣೆಯನಾಚರಿಸುತ್ತ,
ತನ್ನ ಶಿವಭಕ್ತಿಯ ಶಕ್ತಿಯನ್ನು ಬಿತ್ತರಿಸಲು
ಅಕಸ್ಮಾತ್ ತನ್ನ ದಿವ್ಯದೃಷ್ಟಿಯಿಂದ ಪರೀಕ್ಷಿಸಿ
ಭವಿಯ ಭವಿತ್ವವ ಕಳೆದು ಭಕ್ತನ ಮಾಡುತ್ತಿಹನು ನೋಡಾ.
ಶಿವನು ಮತ್ತು ಶಿವನಾಣತಿಯಿಂ ಪಡೆದ ಪ್ರಮಥರು
ಗುರುರೂಪದಿಂ ಧರೆಗವತರಿಸಿ ಬಂದು,
ಭವಿ–ಭಕ್ತರೆಂಬ ಭೇದವನೆಣಿಸದೆ
ಕ್ರಮಾಚಾರಮಂ ಮೀರಿದ ದಿವ್ಯಲೀಲೆಯಿಂದ
ತಮ್ಮಡಿಗೆರಗಿದ ನರರೆಲ್ಲರ ಭಕ್ತರ ಮಾಡುತ್ತಿಹರು ನೋಡಾ.
ಇದು ಕಾರಣ, ಕೂಡಲಚೆನ್ನಸಂಗಮದೇವನ ಶರಣರು
ಈ ಕ್ರಮವನರಿದು ಗುರುಸೇವೆಗೈದರು. ॥ ೧೦೦ ॥

೯೫೩

ಅರಮನೆಯ ಕೂಳನಾದಡೆಯು ತಮ್ಮುದರದ ಕುದಿಪಕ್ಕೆ ಲಿಂಗಾರ್ಪಿತವೆಂದಡೆ
ಅದು ಲಿಂಗಾರ್ಪಿತವಲ್ಲ ಅನಾರ್ಪಿತ. ಅದೆಂತೆಂದಡೆ:
ಅರ್ಪಿತಂಚ ಗುರೋರ್ವಾಕ್ಯಂ ಕಿಲ್ಬಿಷಸ್ಯ ಮನಾರ್ಪಿತಂ
ಅನಾರ್ಪಿತಸ್ಯ ಭುಂಜಿಯಾನ್ ರೌರವಂ ನರಕಂ ವ್ರಜೇತ್ ಎಂದುದಾಗಿ

ತನ್ನ ಒಡಲಕಕ್ಕುಲತೆಗೆ ಆಚಾರವನನುಸರಿಸಿ
ಭವಿಶೈವ ದೈವ ತಿಥಿವಾರಂಗಳ ಹೆಸರಿನಲ್ಲಿ ಅಟ್ಟಿ
ಕೂಳತಂದು ತಮ್ಮ ಇಷ್ಟಲಿಂಗಕ್ಕೆ ಕೊಟ್ಟು
ಹೊಟ್ಟೆಯ ಹೊರೆವ ಆಚಾರಭ್ರಷ್ಟ ಪಂಚಮಹಾಪಾತಕರಿಗೆ
ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ
ಪಾದೋದಕವಿಲ್ಲ ಪ್ರಸಾದವಿಲ್ಲ, ಪ್ರಸಾದವಿಲ್ಲವಾಗಿ ಮುಕ್ತಿಯಿಲ್ಲ.
ಮುಂದೆ ಅಘೋರ ನರಕವನುಂಬರು.
ಇದನರಿದು ನಮ್ಮ ಬಸವಣ್ಣನು ತನುವಿನಲ್ಲಿ ಆಚಾರಸ್ವಾಯತವಾಗಿ.
ಮನದಲ್ಲಿ ಅರಿವು ಸಾಹಿತ್ಯವಾಗಿ
ಪ್ರಾಣದಲ್ಲಿ ಪ್ರಸಾದ ಸಾಹಿತ್ಯವಾಗಿ
ಇಂತೀ ತನು–ಮನ–ಪ್ರಾಣಂಗಳಲ್ಲಿ ಸತ್ಯ ಸದಾಚಾರವಲ್ಲದೆ
ಮತ್ತೊಂದನರಿಯದ ಭಕ್ತನು
ಭವಿಶೈವ ದೈವ ತಿಥಿ ಮಾಟ ಕೂಟಂಗಳ ಮನದಲ್ಲಿ ನೆನೆಯ.
ತನುವಿನಲ್ಲಿ ಬೆರಸಿ ಭಾವದಲ್ಲಿ ಬಗೆಗೊಳ್ಳ ಏಕಲಿಂಗ ನಿಷ್ಠಾಪರನು
ಪಂಚಾಚಾರಯುಕ್ತನು ವೀರಶೈವ ಸಂಪನ್ನ
ಸರ್ವಾಂಗಲಿಂಗಿ ಸಂಗನಬಸವಣ್ಣನು
ಈ ಅನುವ ಎನಗೆ ಅರುಹಿಸಿ ತೋರಿದ ಕಾರಣ
ನಾನು ಬದುಕಿದೆನು ಕಾಣಾ ಕೂಡಲಚೆನ್ನಸಂಗಮದೇವಾ. ॥ ೧೧೧ ॥

೯೫೪

ಅರಸಿನ ಭಕ್ತಿ ಅಹಂಕಾರದಿಂದ ಕೆಟ್ಟಿತ್ತು,
ಸೂಳೆಯ ಭಕ್ತಿ ಎಂಜಲ ತಿಂದಾಗಲೆ ಹೋಯಿತ್ತು,
ನಂಟುತನದ ಭಕ್ತಿ ನಾಯಕನರಕ,
ಬಡವನ ಭಕ್ತಿ ನಿಧಾನ–
ಇದು ಕಾರಣ, ಕೂಡಲಚೆನ್ನಸಂಗಮದೇವಾ
ನಿಮ್ಮ ಭಕ್ತರಿಗೆ ಬಡತನವನೆ ಕೊಡು. ॥ ೧೧೨ ॥

೯೫೫

ಅರಸಿನ ಭಕ್ತಿ ಅಹಂಕಾರದಲ್ಲಿ ಹೋಯಿತ್ತು,
ಓಲೆಕಾರನ ಭಕ್ತಿ ಅರಗಿನ ಮನೆಯಲ್ಲಿ ಹೋಯಿತ್ತು,
ಬಣಜಿಗನ ಭಕ್ತಿ ಬಳ್ಳದ ಮೊನೆಯಲ್ಲಿ ಹೋಯಿತ್ತು,
ಅಕ್ಕಸಾಲಿಯ ಭಕ್ತಿ ಅಗ್ಗಷ್ಟಿಗೆಯಲ್ಲಿ ಹೋಯಿತ್ತು,
ಶೀಲವಂತನ ಭಕ್ತಿ ಶಂಕೆಯಲ್ಲಿ ಹೋಯಿತ್ತು,

ಮಾಟ ಕೂಟದವನ ಭಕ್ತಿ ಅಂಜಿಕೆಯಲ್ಲಿ ಹೋಯಿತ್ತು,
ವ್ರತಸ್ಥನ ಭಕ್ತಿ ಪ್ರಪಂಚಿನಲ್ಲಿ ಹೋಯಿತ್ತು.
ಇದು ಕಾರಣ, ಕೂಡಲಚೆನ್ನಸಂಗಯ್ಯಾ
ಕಿರಾತರು ಹುಟ್ಟಿ ಪುರಾತರು ಅಡಗಿದರು. || ೧೦೩ ||

೯೫೬

ಅರಸಿ ನೋಡುವುದು, ನೋಡಿ ನಂಬುವುದು,
ನಂಬಿ ನಚ್ಚುವುದು, ನಚ್ಚಿ ಮಚ್ಚುವುದು,
ಮಚ್ಚಿ ಅವರೊಕ್ಕುದ ಕೊಂಬುದು;
ಭಕ್ತನಪ್ಪೆ, ಮುಕ್ತನಪ್ಪೆ, ಕೂಡಲಚೆನ್ನಸಂಗಮನಪ್ಪೆ. || ೧೦೪ ||

೯೫೭

ಅರಸುವಂಗೆ ಅರಸುವಂಗೆ ಅರಕೆ ತಾನಹುದು, ದೇವಾ!
ಬಯಸುವಂಗೆ ಬಯಸುವಂಗೆ ಬಯಕೆ ತಾನಹುದು, ದೇವಾ!
ನೀವು ಭಾವಿಸಿದಂತಲ್ಲದೆ ಬೇರೊಂದಾಗಬಲ್ಲುದೆ?
ಈರೇಳು ಭುವನಸ್ಥಾಪ್ಯ ಪ್ರಾಣಿಗಳೆಲ್ಲ ನಿಮ್ಮಿಂದಲಾದವಾಗಿ.
ನಿಮ್ಮಿಂದಲಹುದಾಗದೆಂಬ ಸಂದೇಹವುಂಟೆ ಬಸವಣ್ಣ?
ನಿಮ್ಮಡಿಗಳೆಂದಂತೆ, ನೆನೆದಂತೆ, ನೋಡಿದಂತೆ, ತಪ್ಪದು.
ಕೂಡಲಚೆನ್ನಸಂಗಮದೇವರು ಸಾಕ್ಷಿಯಾಗಿ
ಪ್ರಭುವಿನಾಣೆ ಕಟ್ಟು ಗುಡಿಯಸು. || ೧೦೫ ||

೯೫೮

ಅರಿವ ಅರಿಯ ಹೇಳಿ,
ಸದ್ಗುರುನಾಥ ಕುರುಹ ಕೈಯಲ್ಲಿ ಕೊಟ್ಟನಲ್ಲದೆ
ತನ್ನ ಅರುಹನೆ ಮರೆದು ಕುರುಹನೆ ಪೂಜಿಸುವ
ನರಗುರಿಗಳ ನೋಡಾ, ಕೂಡಲಚೆನ್ನಸಂಗಮದೇವಾ. || ೧೦೬ ||

೯೫೯

ಅರಿವರತು ಕುರುಹು ನಷ್ಟವಾದ ಬಳಿಕ
ಕುರುಹಿನ ಬಣ್ಣ ಅಂಗದ ಮೇಲೇಕೊ ಘಟ್ಟಿವಾಳಂಗೆ?
ಅರಿವನಾರು? ಅರುಹಿಸಿಕೊಂಬನಾರು?
ಬರಿಯ ಬಯಲು ಕಾಣಾ, ಕೂಡಲಚೆನ್ನ ಸಂಗಾ
ನಿಮ್ಮ ಶರಣ ಘಟ್ಟಿವಾಳನಲ್ಲದೆ ನೆರೆ ಅರಿವರಾರೊ? || ೧೦೭ |

೯೬೦

ಅರಿವಿನ ಹಾವಿಂಗೆ ಹಾಲನೆರೆವ ಪ್ರಾಣಿಗಳು,
ಆ ಹಾವು ಹಾಲಿನ ಅಂತರವ ತಾವೆತ್ತ ಬಲ್ಲರೊ?
ಕೈಯಲೆಡೆಗೊಟ್ಟ ಲಿಂಗಕ್ಕೆ ಮಜ್ಜನಕ್ಕೆರೆವ ಪ್ರಾಣಿಗಳು
ಲಿಂಗಸಕೀಲಸಂಬಂಧವ ತಾವೆತ್ತ ಬಲ್ಲರೊ?
ಪಾಣಿನಾ ಧೃತಲಿಂಗಂ ತತ್ ಪ್ರಾಣಸ್ಥಾನೇಷು ನಿಕ್ಷಿಪೇತ್।
ಯಸ್ತು ಭೇದೇನ ಜಾನಾತಿ ನ ಚ ಲಿಂಗಂ ನ ಚಾರ್ಚನಂ॥
ಕೂಡಲಚೆನ್ನಸಂಗಯ್ಯಾ
ಈ ಭೇದವನರಿಯದೆ ಪೂಜಿಸಿದಡೆ ನಾಯಕನರಕ. ॥ ೧೨೮ ॥

೯೬೧

ಅರಿವು ನಾಸ್ತಿಯಾದುದೆ ಗುರು, ಕುರುಹು ನಾಸ್ತಿಯಾದುದೆ ಲಿಂಗ,
ಕಾಯಗುಣ ನಾಸ್ತಿಯಾದುದೆ ವಿಭೂತಿ,
ಕರಣಗುಣನಾಸ್ತಿಯಾದುದೆ ರುದ್ರಾಕ್ಷಿ,
ಮರಣ (ಮರಹು?) ನಾಸ್ತಿಯಾದುದೆ ಮಂತ್ರ–
ಇಂತೀ ಪಂಚಾಚಾರಪ್ರತಿಷ್ಠೆಯುಳ್ಳಾತನೆ
ಕೂಡಲಚೆನ್ನಸಂಗಯ್ಯನಲ್ಲಿ ಸದಾಚಾರಿ. ॥ ೧೨೯ ॥

೯೬೨

ಅರಿವು ಮುಂತಾಗಿ ಕೊಂಬುದು ಪ್ರಸಾದವಲ್ಲ,
ಲಿಂಗ ಮುಂತಾಗಿ ಕೊಂಬುದು ಪ್ರಸಾದವಲ್ಲ,
ಜಂಗಮ ಮುಂತಾಗಿ ಕೊಂಬುದು ಪ್ರಸಾದವಲ್ಲ,
ಸಯಜ್ಞಾನವಳಿದರೂ ಪ್ರಸಾದವಲ್ಲ,
ಇವು ಏನೂ ಪ್ರಸಾದವಲ್ಲ, ಸಹಜಪ್ರಸಾದವೆ ಬೇಕು.
ಅಂತಪ್ಪ ಪ್ರಸಾದಿಯ ತೋರಿ ಬದುಕಿಸಯ್ಯಾ
ಕೂಡಲಚೆನ್ನಸಂಗಮದೇವಾ. ॥ ೧೩೦ ॥

೯೬೩

ಅರುಹಿನಾಪ್ಯಾಯನಕ್ಕೆ ಅನುಭಾವವೇ ತೃಪ್ತಿ.
ಅರಿವು ನೆರೆ ಕೂಡಿ, ಆಕಾರವೆ ಪ್ರಾಣವಾಗಿ
ವಿಶ್ರಮಿಸಿದ ಬಳಿಕ, ಶ್ರೀಗುರು ಕೃಪೆಮಾಡಿದ
ಪ್ರಾಣಲಿಂಗದ ದುರುಶನ ಎಂತೆಂದಡೆ:

ಮತ್ಸ್ಯನುಂಗಿದ ಮಾಣಿಕ್ಯದಂತೆ
ಹೊಸ್ತಿಲಲೆತ್ತಿದ ಜ್ಯೋತಿಯಂತೆ
ಸ್ಫಟಿಕದ ಘಟದಂತೆ, ಮುತ್ತು ನುಂಗಿದ ನೀರಿನಂತೆ
ಕಣ್ಣಾಲೆ ನುಂಗಿದ ನೋಟದಂತೆ
ಬಯಲನೊಳಕೊಂಡ ಬ್ರಹ್ಮಾಂಡದೊಳಗಿಪ್ಪ
ಸ್ವಾನುಭಾವಿಗಳ ಅನುಭಾವವ ತೋರಿ
ಬದುಕಿಸು ಕೂಡಲಚೆನ್ನಸಂಗಮದೇವಾ. ॥ ೧೧೧ ॥

೯೬೪

ಅರೆಭಕ್ತರಾದವರ ನೆರೆಮನೆಯುಲ್ಲಿರಲಾಗದು
ಲಿಂಗನಿಷ್ಠೆಯಿಲ್ಲದವರ ಅಂಗಳವ ಮೆಟ್ಟಲಾಗದು
ಜಂಗಮಪ್ರೇಮವಿಲ್ಲದವರೊಡನೆ ಮಾತನಾಡಲಾಗದು
ಪ್ರಸಾದ ಪ್ರಸನ್ನಿಕೆಯಿಲ್ಲದವರ ಸಹಪಂಕ್ತಿಯಲ್ಲಿ ಕುಳ್ಳಿರಲಾಗದು.
ಇದು ಕಾರಣ, ಕೂಡಲಚೆನ್ನಸಂಗಯ್ಯಾ ನೀವು ಸಾಕ್ಷಿಯಾಗಿ
ಚತುರ್ವಿಧ ಸನ್ನಿಹಿತರಲ್ಲದವರ ಮೆಚ್ಚರು ನಿಮ್ಮ ಶರಣರು. ॥ ೧೧೨ ॥

೯೬೫

ಅರ್ಥದ ಭಕ್ತಿ ಉತ್ತರಿಸಿ ಹೋಯಿತ್ತು,
ಅರಸು ಭಕ್ತಿ 'ನಿಲ್ಲು, ಮಾಣು' ಎಂದಲ್ಲಿ ಹೋಯಿತ್ತು,
ಆಚರಣೆಯ ಭಕ್ತಿ ಅಡಗಿ ಹೋಗಿತ್ತು,
ಕೂಡಲಚೆನ್ನಸಂಗಮದೇವರಲ್ಲಿ
ಕೀಟಕರು ಹೆಚ್ಚಿ, ಪುರಾತರು ಅಡಗಿಹೋದರು. ॥ ೧೧೩ ॥

೯೬೬

ಅರ್ಥಪ್ರಾಣಾಭಿಮಾನವ ಕೊಟ್ಟು ಕರ್ತೃ-ಭೃತ್ಯನ ಮಾತಿಗೆ
ಮನೆಯ ಬಾಗಿಲಿಗೆ ಹೋಗಿ, 'ನನಗೆ ಮಾಡಿ ನೀಡು' ಎಂದು
ಉಪಾಧಿಕೆಯ ನುಡಿವರೆ ಅವನ ಕರ್ತೃತನ ಅದೇ ಹಾಳು.
ಅದೇನು ಕಾರಣ ಎಂದರೆ
ಕರ್ತನಿದ್ದೆಡೆಗೆ ಭೃತ್ಯ ತಾನೆ ಬಂದು, ದೀರ್ಘದಂಡ ನಮಸ್ಕಾರ ಮಾಡಿ,
ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡಬಲ್ಲಾತನೆ ಭೃತ್ಯ,
ಪರಿಣಾಮಿಸಬಲ್ಲಾತನೆ
ಕೂಡಲಚೆನ್ನಸಂಗಮದೇವರಲ್ಲಿ ಮೀರಿದ ಸಮಸ್ಥಲವಪೂರ್ವ. ॥ ೧೧೪ ॥

೯೬೭

ಅರ್ಥೇಷಣ ಪುತ್ರೇಷಣ ದಾರೇಷಣವೆಂಬ
ಈಷಣತ್ರಯಂಗಳನೆ ಬಿಟ್ಟು, ಮಂಡೆ ಬೋಳಾದ ಬಳಿಕ
ಮರಳಿ ಹೊನ್ನಿಂಗೆರಗಿದಡೆ ಗುರುದ್ರೋಹಿ,
ಹೆಣ್ಣಿಂಗೆರಗಿದಡೆ ಲಿಂಗದ್ರೋಹಿ
ಮಣ್ಣಿಂಗೆರಗಿದಡೆ (ಜಂಗಮದ್ರೋಹಿ),
ಆತ ಪೂರ್ವಾಚಾರಿಯಲ್ಲ.
"ಸ್ಥಾವರಂ ಭಿನ್ನದೋಷೇಣ ವ್ರತಭ್ರಂಶೇನ ಜಂಗಮಃ।
ಉಭಯೋರ್ಭಿನ್ನಭಾವೇನ ನ ಚಾರ್ಚಂ ನ ಚ ವಂದನಂ॥
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ,
ಬಸವಣ್ಣನೊಬ್ಬನೆ ಭಕ್ತ; ಪ್ರಭುವೆ ಜಂಗಮ. || ೧೧೫ |

೯೬೮

ಅಲ್ಲಲ್ಲಿ ಮುಟ್ಟಿತ್ತನಲ್ಲಲ್ಲಿಯೆ ಕೊಡಲು
ಎಲ್ಲಿ ಹೋಯಿತ್ತಯ್ಯಾ, ನಿಮ್ಮ ಅಂಗಲಿಂಗಾರ್ಪಿತ?
ಕಾಲ ತಪ್ಪಿದ ಬಳಿಕ ಕೈಗೂಡಿದುದುಂಟೆ?
ಕೂಡಲಚೆನ್ನಸಂಗಯ್ಯಾ
ಅಶನ ಮರಳುವುದಲ್ಲದೆ ರುಚಿ ಮರಳಲುಂಟೆ? || ೧೧೬ ||

೯೬೯

ಅವಸರ ಮಾದ ಬಳಿಕ ಅಂಗಭೋಗಂಗಳನೆಲ್ಲವ ಮರೆಯಬೇಕು.
ಅದ ಮೀರಿದ ಘನವು ಅಗಮ್ಯವಾಯಿತ್ತು.
ಅದನರಿಯಬಾರದು ಅಂತಿರಲಿ–
ನಾನು ನೀನೆಂಬ ಭ್ರಾಂತುಳ್ಳನ್ನಕ್ಕ,
ಅಷ್ಟವಿಧಾರ್ಚನೆ, ಷೋಡಶೋಪಚಾರವ ಮಾಡಬೇಕು,
ಕೂಡಲಚೆನ್ನಸಂಗಯ್ಯಾ ಇದ ಮಾಡದಿದ್ದಡೆ ನಾಯಕನರಕ. || ೧೧೭ ||

೯೭೦

ಅವಿಶ್ವಾಸದ ಲೋಕದ ಕರ್ಮಿಗಳಿಗೆ,
ಯಮದೂತರೆಂಬ ದಂಡಣೆಯ ಮಾಡಿದೆಯಯ್ಯಾ.
ಶಿವಭಕ್ತರಿಗೆ ಶಿವದೂತರೆಂಬ ದಂಡಣೆಯ ಮಾಡಿದೆಯಯ್ಯಾ.

ಇದು ಕಾರಣ, ಭಕ್ತಿಯನರಿಯೆ, ಯುಕ್ತಿಯನರಿಯೆ
ಜಂಗಮವೆ ಕೂಡಲಚೆನ್ನಸಂಗಯ್ಯನೆಂಬೆ. || ೧೧೮ ||

೯೭೧

ಅಷ್ಟದಳಕಮಲದ ಮೇಲಣ ನಿಃಶೂನ್ಯದ
ವರ್ಮವನರಿಯದ ಅಂಧಕರೆಲ್ಲ
ಪ್ರಾಣಲಿಂಗ ಪ್ರಾಣಲಿಂಗವೆಂಬ ವ್ಯವಹಾರ ಸಂತೆಯ ಪಸರ!
ಅಂಗದ ಆಪ್ಯಾಯನಕ್ಕೆ ಲಿಂಗವ ಹುಡುಕಿ ನೋಡುವ
ಭಂಗಿತರ ನೋಡಾ ಕೂಡಲಚೆನ್ನಸಂಗಮದೇವಾ. || ೧೧೯ ||

೯೭೨

ಅಷ್ಟದಳಕಮಲದ ಹೂಗಲ್ಲಂ ಹಿಡಿದು
ಶೂನ್ಯಸಿಂಹಾಸನಕ್ಕೆ ಧವಳಾಲಯವೆತ್ತಿತ್ತು.
ಚಂದ್ರಕಾಂತದ ಶಿಲೆಯಲ್ಲಿ ಪಶ್ಚಿಮದ್ವಾರಮಂ ತೆಗೆದುನೋಡುವರೆ ವಿಪರೀತ.
ಏಕೋಭಾವವೆಂಬುದೊಂದು ಕಂಬ ಅದಕ್ಕೆ ಅನೇಕ ಚಿತ್ರಂಗಳಡಗಿ
ನಾಚಿಸುವ ಪ್ರಕಾಶವೆತ್ತಿರಲು ಆ ಪ್ರಭೆಯೊಳಗೆ
ಆ ಬ್ರಹ್ಮರಂಧ್ರವೆಂಬ ಮಸ್ತಕದ ಮೇಲೆ ಪವಳಹಾರದ ಪಂಜರವು.
ಮೌಕ್ತಿಕದ ಗೊಂಚಲ ಇಳಿಯಬಿಟ್ಟು ಮಲಕು ಮಲಕನೇ ಮಾಡಿ
ನಡುವೆ ಕಟ್ಟಿದವು ನವರತ್ನದ ಗೊಂಡೆಯಂಗಳು.
ಅದಕ್ಕೆ ಕಾಳಿಕೆಯ ಕಪ್ಪಡದ ಮೇಲುಹೊದಿಕೆ
ಉಲುಹಿಸರಳೆಲೆಯ ಕಟ್ಟಿ ದಶವಾಯುವನೊಂದುಮಾಡಿ
ಲಿಂಗಸುಖವಾಯುವ ಸಂತೈಸಿ ಆಲವಟ್ಟವ ಮಾಡಿ
ಕಾಣಬಹುದೆ ನಿರಾಕಾರ ಕಾಣಬಹುದೆ ಮಹಾಘನವ
ಕಂಡೆನೆಂದು ಭ್ರಮೆಗೊಂಡು ಹೋದರೆಲ್ಲರು
ಕೂಡಲಚೆನ್ನಸಂಗಯ್ಯನನುಭಾವವ ಲಿಂಗೈಕ್ಯನೇ ಬಲ್ಲ. || ೧೨೦ ||

೯೭೩

ಅಷ್ಟವಿಧಾರ್ಚನೆ ಷೋಡಶೋಪಚಾರ ಅರಸರಿಯದ ಬಿಟ್ಟಿ ಕಾಣ ಭೋ.
ಸಗುಣ ನಿರ್ಗುಣ [ಸ್ಥೂಲ] ಸೂಕ್ಷ್ಮ ಅವು ನಿಮ್ಮನರಿವುವೆ?
ಕನ್ನಡಿಯೊಳಗಣ ಪ್ರತಿಬಿಂಬದಂತೆ, ಅವು ತಮ್ಮ ತಾವರಿಯವು.
ಅವ ಭಿನ್ನಭಾವದಿಂದರಸಲುಂಟೆ
ಕೂಡಲಚೆನ್ನಸಂಗಮದೇವ ತಾನು ತಾನಾದ ಬಳಿಕ? || ೧೨೧ ||

೯೭೪

ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡಲಾಗದು,
ಮಾಡಿದರು ಮಾಡಿರಿ ಬೇಡಿ ಮಾಡಲಾಗದು.
ಬೇಡಿ ಮಾಡಿದ ಭಕ್ತಿ ಈಡಾಗಲರಿಯದು
ಕೂಡಲಚೆನ್ನಸಂಗಯ್ಯಾ. || ೧೨೨ ||

೯೭೫

ಅಷ್ಟವಿಧಾರ್ಚನೆ ಷೋಡಶೋಪಚಾರವಲ್ಲದೆ
ಮುಟ್ಟಲರಿಯದವರ ಕಂಡಡೆ ಆನವರನೇನೆಂಬೆನಯ್ಯಾ?
ಆವ ಭಾವದಲ್ಲಿ ಆವ ಮುಖದಲ್ಲಿ ಆವ ಜ್ಞಾನದಲ್ಲಿ
ಅವರನು 'ಅಯ್ಯಾ' ಎಂಬೆನು?
ನಿಮ್ಮಲ್ಲಿ ಸಮ್ಯಗೈಕ್ಯವಾದ ಸತ್ಯಶರಣನ 'ಅಯ್ಯಾ' ಎಂಬೆನು
ಕೂಡಲಚೆನ್ನಸಂಗಯ್ಯಾ. || ೧೨೩ ||

೯೭೬

ಅಸುರರ ಸುರರ ಶಿರೋಮಾಲೆಯ ಕೊರಳಲಿಕ್ಕಿ
ಶಿವಕಳೆಯೆದ್ದಾಡುವಲ್ಲಿ ಅವಕಳೆಯಾಗದೆ?
ಅಸುರ ದೇವಾದಿಗಳೆಲ್ಲಿಯಯ್ಯಾ!
ನೀ ಮಾಡಿದ ಧಾರುಣಿ ರಸಾತಳಕ್ಕಿಳಿದು, ಕೂರ್ಮ ಕುಸಿದು
ದಿಗುದಂತಿಗಳು ಘೀಳಿಟ್ಟು, ಫಣಿಯ ಹೆಡೆ ಮುರಿದು
ನಿನ್ನ ಪಾದದ ಗುಡುಗಾಟದಿಂದ ಕೆಂಧೂಳಿ ನೆಗೆದು
ನರಲೋಕ ಸುರಲೋಕ ಬ್ರಹ್ಮಲೋಕ ವಿಷ್ಣುಲೋಕ
ಇಂದ್ರಲೋಕ ಸೂರ್ಯಲೋಕ ಚಂದ್ರಲೋಕ ತಾರಾಲೋಕ
ಅಸುರಲೋಕಂಗಳು ಬೂದಿಯಲ್ಲಿ ಮುಸುಕಿದವಯ್ಯಾ.
ಪ್ರಭುವೆದ್ದು ಪಗರಣವಾಡುತ್ತಿರಲು,
ಈರೇಳು ಭುವನದೊಳಗುಳ್ಳ ಆತ್ಮಾದಿಗಳೆಲ್ಲ ದೆಸೆವೆಸೆಗೆಡಲು,
ಶಶಿಧರ ನಾಟ್ಯಕ್ಕೆ ನಿಂದಲ್ಲಿ, ಇನ್ನಾರಯ್ಯ ಸಂತೈಸುವರು
ಕೂಡಲಚೆನ್ನಸಂಗಯ್ಯಾ? || ೧೨೪ ||

೯೭೭

ಅಪುದಪುದು,
ಅಂಗಕ್ಕೆ ಲಿಂಗವಸರಸಬೇಕಲ್ಲವೆ ಲಿಂಗಕ್ಕೆ ಲಿಂಗವಸರಸಲುಂಟೆ?

ಪ್ರಾಣಕ್ಕೆ ಜ್ಞಾನವನರಸಬೇಕಲ್ಲದೆ ಜ್ಞಾನಕ್ಕೆ ಜ್ಞಾನವನರಸಲುಂಟೆ?
ಎರಡಾಗಿರ್ದುದನೊಂದು ಮಾಡಿಹೆನೆನಬಹುದಲ್ಲದೆ,
ಒಂದಾಗಿರ್ದುದನೊಂದು ಮಾಡಲಿಲ್ಲ.
ಕೂಡಲಚೆನ್ನಸಂಗಯ್ಯನಲ್ಲಿ ನಿಸ್ಸೀಮ ಸಿದ್ಧರಾಮಯ್ಯನ ಶ್ರೀಪಾದಕ್ಕೆ
ಶರಣೆಂದು ಬದುಕಿದೆನು ಕಾಣಾ ಪ್ರಭುವೆ. ॥ ೧೨೫ ॥

೯೭೮

ಅಹುದೆಂಬುದ ಬಸವಣ್ಣ ಕೊಂಡ,
ಅಲ್ಲ ಎಂಬುದ ಪ್ರಭುದೇವರು ಕೊಂಡರು
ಇನ್ನಾವುದನಹುದೆಂಬೆನು? ಇನ್ನಾವುದನಲ್ಲಾ ಎಂಬೆನು?
ಇವರೆಲ್ಲ ಸದರ್ಥರಲ್ಲದ ಲಿಂಗಸದರ್ಥರೊಬ್ಬರೂ ಇಲ್ಲ;
ಕೂಡಲಚೆನ್ನಸಂಗಾ ನಿಮ್ಮಾಣೆ. ॥ ೧೨೬ ॥

೯೭೯

ಅಳಲದೆ ಸೈರಣೆ, ಬಳಲದೆ ಸಮತೆ, ಸೂರೆಯೆ ಸೂರೆಯೆ?
ಲಿಂಗಾರಾಧನೆ ಜಂಗಮಾರಾಧನೆ ಸೂರೆಯೆ ಸೂರೆಯೆ?
ಕೂಡಲಚೆನ್ನಸಂಗನಭಕ್ತ ಸೂರೆಯೆ ಸೂರೆಯೆ? ॥ ೧೨೭ ॥

೯೮೦

ಆಕಳ ಹೊಟ್ಟೆಯಲ್ಲಿ ಹೋರಿ ಹುಟ್ಟಿದಡೇನು?
ಲಿಂಗಮುದ್ರೆಯನೊತ್ತುವನ್ನಕ್ಕ ಬಸವನಲ್ಲ.
ಜಂಗಮದ ಆತ್ಮದಲ್ಲಿ ಪಿಂಡ ಉತ್ಪತ್ತಿಯಾದಡೇನು?
ದೀಕ್ಷಿತನಾಗದನ್ನಕ್ಕ ಜಂಗಮದೇವನಲ್ಲ.
ದೀಕ್ಷೆಯಿಲ್ಲವೆ ಹೋಗಿ ಭಕ್ತರಲ್ಲಿ ಅಗ್ಗಣಿಯ ಮುಕ್ಕುಳಿಸಿದಡೆ
ಹಾದಿಗೊಂಡು ಹೋಗುವ ನಾಯಿ
ಗಿಡದ ಮೇಲೆ ಉಚ್ಚೆಯ ಹೊಯ್ದಂತಾಯಿತ್ತು ಕಾಣಾ
ಕೂಡಲಚೆನ್ನಸಂಗಮದೇವಾ. ॥ ೧೨೮ ॥

೯೮೧

ಆಕಾರವೇ ಭಕ್ತ
ನಿರಾಕಾರವೇ ಮಹೇಶ್ವರ
ಸಹಕಾರವೇ ಪ್ರಸಾದಿ



ಸನ್ಮತ ಈಗಲೇ ಪ್ರಾಣಲಿಂಗಿ
ಲೋಕವಿರಹಿತನೇ ಶರಣ
ಈ ಭ್ರಾಂತುವಿನ ಬಲೆಯೊಳಗೆ ಸಿಲುಕದಾತನೇ ಐಕ್ಯ.
ಅದು ಎಂತು ಎಂದರೆ:
ಪೃಥ್ವಿ ಈಗಲೇ ಭಕ್ತ
ಅಪ್ಪು ಈಗಲೇ ಮಹೇಶ್ವರ
ಅಗ್ನಿ ಈಗಲೇ ಪ್ರಸಾದಿ
ವಾಯು ಈಗಲೇ ಪ್ರಾಣಲಿಂಗಿ
ಆಕಾಶ ಈಗಲೇ ಶರಣ
ಈ ಪಂಚತತ್ವದ ಒಳಗೆ
ಬೆಳಕು ಕತ್ತಲೆ ಐಕ್ಯವು.
ಇದು ಕಾರಣ, ಕೂಡಲಚೆನ್ನಸಂಗಮದೇವಯ್ಯಾ
ನಿಮ್ಮ ಶರಣ ಪಂಚತತ್ವದ ಒಳಗೆ
ಪಂಚತತ್ವ ಪಂಚತತ್ವ ಎಂಬ ಅಣ್ಣಗಳಿರಾ ನೀವು ಕೇಳಿರೊ. ॥ ೧೨೯ ॥

೯೮೨

ಆಕಾಶದಲ್ಲಾಡುವ ಪಟಕ್ಕಾದಡೆಯೂ ಮೂಲಸೂತ್ರವಿರಬೇಕು.
ಕಲಿಯಾದಡೆಯೂ ಕಜ್ಜವಿಲ್ಲದೆ ಆಗದು.
ಭೂಮಿಯಿಲ್ಲದೆ ಬಂಡಿ ನಡೆವುದೆ?
ಅಂಗಕ್ಕೆ ಲಿಂಗವಿಲ್ಲದೆ ನಿಸ್ಸಂಗವಾಗಬಾರದು.
ಕೂಡಲಚೆನ್ನಸಂಗಮದೇವರಲ್ಲಿ
ಸಂಗವಿಲ್ಲದೆ ನಿಸ್ಸಂಗಿಯೆಂದು ನುಡಿಯಬಹುದೆ ಪ್ರಭುವೆ? ॥ ೧೩೦ ॥

೯೮೩

ಆಗುವುದಯ್ಯಾ ನಿರಾಭಾರಿಗಳ ತೀರ್ಥ ಜಗದ್ವಂದ್ಯವಾಗಿ:
ಆಗುವುದಯ್ಯಾ ಪೀಠಾಧಿಕಾರಿಗಳ ತೀರ್ಥ ಜಗನ್ಮಾನ್ಯವಾಗಿ,
ಆಗುವುದಯ್ಯಾ ದೇಶಿಕರ ತೀರ್ಥ ದೇಶಿಕರೂಪಾಗಿ,
ದೇಶಿಕನಾಗಿ ಉಪದೇಶಪ್ರಸಾದಮುಖಿಯಾಗದಿರಬಾರದು
ಕ್ರಿಯಾವಂತ ಶರಣಂಗೆ ಕಾಣಾ–ಕೂಡಲಚೆನ್ನಸಂಗಮದೇವಾ. ॥ ೧೩೧ ॥

೯೮೪

ಆಚಾರದ ಕಾಯಕವನೆ ಮಾಡಿ,
ಪದಾರ್ಥವನೆ....ಪಾಕವ ಮಾಡಿ,

ಓಗರವನೆ ಮಾಡೆಂದು.
ಆ ಓಗರವನೆ ಪ್ರಸಾದ ಮಾಡಿ....
.................................
ಇದು ಕಾರಣ ಕೂಡಲಚೆನ್ನಸಂಗ, ಶರಣನು
ಅನರ್ಪಿತ.... ॥ ೧೩೨ ॥

೯೮೫

ಆಚಾರದುಂದುಭಿಯನೇನೆಂದು ಭಾವಿಸುವೆ,
ಬೆಳಗಿನೊಳಗೆ ತೊಳಗುತ್ತಿರ್ದನು.
ಅರಿವಿನಾಚರಣೆಯ ತೆರನ ಪೇಳುತಿರ್ದನು
ಭೇದಾಭೇದದೊಳಗಣ ಮಹಾಘನ ಸ್ಫಟಿಕದ ಗಿರಿಯ ತಟವಲ್ಲಿ ನಿಂದರೆ
ಘಟಹೊಳೆವುದು ಒಳಗೆ ಹೊರಗೆನ್ನದೆ.
ಪರುಷದ ಗಿರಿಯ ಕಡಿಯಲೆಂದು ಹೋದರಾ ಓಡಿಮುಳಿ ಕೊಡತಿ
ಪರುಷವಾದ ಬಳಿಕಾಚಾರ ಮಾಣಿಕ್ಯವ ಹಿಡಿದವನ ಕೈ ಸೆಕೆ ಪತ್ತುವವೆ?
ಲಿಂಗ ಜಂಗಮ ಪ್ರಸಾದವೆಂದರಿದಂಗಾಚಾರ ಸಂಪಗೆಯ ಪ್ರಪ್ಪದಲ್ಲಿ
ಕಂಪುಂಡ ಭ್ರಮರನಂತೆ
ಕೂಡಲಚೆನ್ನಸಂಗನ ಶರಣಂಗಾಯಿತ್ತಾಚಾರ. ॥ ೧೩೩ ॥

೯೮೬

ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ
ಮಹಾಲಿಂಗ ಈ ಆರುಲಿಂಗಸ್ಥಲಗಳು.
ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ
ಐಕ್ಯನೆಂದಿಂತು ಆರು ಅಂಗಸ್ಥಲಗಳು.
ಅವರವರ ಸಂಬಂಧವಾವಾವೆಂದರೆ:
ಘ್ರಾಣದಲ್ಲಿ ಆಚಾರಲಿಂಗ ಸಂಬಂಧ
ಜಿಹ್ವೆಯಲ್ಲಿ ಗುರುಲಿಂಗ ಸಂಬಂಧ
ನೇತ್ರದಲ್ಲಿ ಶಿವಲಿಂಗ ಸಂಬಂಧ
ತ್ವಕ್ಕಿನಲ್ಲಿ ಜಂಗಮಲಿಂಗ ಸಂಬಂಧ
ಶ್ರೋತ್ರದಲ್ಲಿ ಪ್ರಸಾದಲಿಂಗ ಸಂಬಂಧ
ಭಾವದಲ್ಲಿ ಮಹಾಲಿಂಗ ಸಂಬಂಧ.
ತತ್‌ಪದವೆಂದು ಲಿಂಗ, ತ್ವಂ ಪದವೆಂದು ಅಂಗ
ಅಸಿಪದವೆಂದುಭಯ ಸಂಬಂಧ.
ಭಕ್ತನೆಂಬ ಲಿಂಗಕ್ಕೆ ಆಚಾರಲಿಂಗ ಸುಚಿತ್ತವೆ ಪಸ್ತು.

ಘ್ರಾಣೇಂದ್ರಿಯವೆ, ಮುಖ ಸದ್‌ಭಕ್ತಿ, ಕ್ರಿಯಾಶಕ್ತಿ,
ಪರಿಮಳ ದ್ರವ್ಯ, ಅರ್ಪಿತ ಗಂಧ ಪ್ರಸಾದ.
ಮಹೇಶ್ವರನೆಂಬ ಅಂಗಕ್ಕೆ ಗುರುಲಿಂಗ, ಸುಬುದ್ಧಿಯೇ ಹಸ್ತ,
ಜಿಹ್ವೆಯೆ ಮುಖ, ನೈಷ್ಠಿಕವೇ ಭಕ್ತಿ, ಜ್ಞಾನ ಶಕ್ತಿ,
ರಸದ್ರವ್ಯಾರ್ಪಿತ ರುಚಿಪ್ರಸಾದ.
ಪ್ರಸಾದಿ ಎಂಬ ಅಂಗಕ್ಕೆ ಶಿವಲಿಂಗ, ನಿರಹಂಕಾರವೆ ಹಸ್ತ
ನೇತ್ರೇಂದ್ರಿಯವೆ ಮುಖ್ಯ, ಸಾವಧಾನವೇ ಭಕ್ತಿ,
ಇಚ್ಛಾಶಕ್ತಿ, ರೂಪ ಅರ್ಪಿತ, ರೂಪ ಪ್ರಸಾದ.
ಪ್ರಾಣಲಿಂಗಿ ಎಂಬ ಅಂಗಕ್ಕೆ ಚರಲಿಂಗ
ಸುಮನವೆ ಹಸ್ತ,
ತ್ವಗಿಂದ್ರಿಯವೆ ಮುಖ, ಅನುಭವವೇ ಭಕ್ತಿ, ಆದಿಶಕ್ತಿ,
ಸೋಂಕೆ ಅರ್ಪಿತ, ಸ್ಪರ್ಶನವೇ ಪ್ರಸಾದ.
ಶರಣನೆಂಬ ಅಂಗಕ್ಕೆ ಪ್ರಸಾದಲಿಂಗ ಜ್ಞಾನವೇ ಹಸ್ತ
ಶ್ರೋತ್ರೇಂದ್ರಿಯವೇ ಮುಖ, ಆನಂದವೇ ಭಕ್ತಿ, ಪರಾಶಕ್ತಿ,
ಶಬ್ದವೆ ಅರ್ಪಿತ, ಶಬ್ದಪ್ರಸಾದ.
ಐಕ್ಯನೆಂಬ ಅಂಗಕ್ಕೆ ಮಹಾಲಿಂಗ, ಭಾವವೆ ಹಸ್ತ,
ಹೃದಯವೇ ಮುಖ, ಸಮರಸವೇ ಭಕ್ತಿ,
ಚಿಚ್ಛಕ್ತಿ, ತೃಪ್ತಿಯೆ ಅರ್ಪಿತ, ಪರಿಣಾಮವೇ ಪ್ರಸಾದ.
ಇಂತು ಅಂಗ ಲಿಂಗ ಹಸ್ತ ಮುಖ ಶಕ್ತಿ ಭಕ್ತಿ
ಅರ್ಪಿತ ಪ್ರಸಾದ ಎಂಬ ಅಷ್ಟವಿಧದ ಬ್ರಹ್ಮದ ಭೇದವನರಿದು
ನಡೆಸಬಲ್ಲ ಮಹಾಮಹಿಮಂಗೆ ನಮೋ ನಮೋ ಎಂಬೆನಯ್ಯಾ
ಕೂಡಲಚೆನ್ನಸಂಗಮದೇವ. ॥ ೯೮೬ ॥

೯೮೭

ಆಚಾರಲಿಂಗ ಗುರುಲಿಂಗ ಶಿವಲಿಂಗ
ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗವೆಂದಿಂತು
ಲಿಂಗಸ್ಥಲವಾರಕ್ಕಂ ವಿವರ:
ಆಚಾರಲಿಂಗಸ್ಥಲ ತ್ರಿವಿಧ: ಸದಾಚಾರ, ನಿಯತಾಚಾರ, ಗಣಾಚಾರ.
ಇವಕ್ಕೆ ವಿವರ:
ಎಲ್ಲ ಜನವಹುದೆಂಬುದೆ ಸದಾಚಾರ.
ಹಿಡಿದ ವ್ರತನಿಯಮವ ಬಿಡದಿಹುದೆ ನಿಯತಾಚಾರ.
ಶಿವನಿಂದೆಯ ಕೇಳದಿಹುದೆ ಗಣಾಚಾರ.
ಗುರುಲಿಂಗಸ್ಥಲ ತ್ರಿವಿಧ: ದೀಕ್ಷೆ, ಶಿಕ್ಷೆ, ಸ್ವಾನುಭಾವ.

ಇದಕ್ಕೆ ವಿವರ:
ದೀಕ್ಷೆಯೆಂದಡೆ ಗುರು, ಶಿಕ್ಷೆಯೆಂದಡೆ ಜಂಗಮ,
ಸ್ವಾನುಭಾವವೆಂದಡೆ ತನ್ನಿಂದ ತಾನರಿವುದು.
ಶಿವಲಿಂಗಸ್ಥಲ ತ್ರಿವಿಧ: ಇಷ್ಟಲಿಂಗ, ಪ್ರಾಣಲಿಂಗ, ತೃಪ್ತಿಲಿಂಗ
ಇದಕ್ಕೆ ವಿವರ:
ಶ್ರೀಗುರು ಕರಸ್ಥಲದಲ್ಲಿ ಅನುಗ್ರಹವ ಮಾಡಿಕೊಟ್ಟುದೀಗ ಇಷ್ಟಲಿಂಗ,
ತನುಗುಣ ನಾಸ್ತಿಯಾದುದೇ ಪ್ರಾಣಲಿಂಗ,
ಜಾಗ್ರಸ್ವಪ್ನಸುಷುಪ್ತಿಯಲ್ಲಿ ಲಿಂಗವಲ್ಲದೆ
ಪೆರತೊಂದನರಿಯದಿಪ್ಪುದೆ ತೃಪ್ತಿಲಿಂಗ.
ಜಂಗಮಲಿಂಗಸ್ಥಲ ತ್ರಿವಿಧ: ಸ್ವಯ, ಚರ, ಪರ.
ಇದಕ್ಕೆ ವಿವರ:
ಸ್ವಯವೆಂದಡೆ ತಾನು.
ಚರವೆಂದಡೆ ಲಾಂಛನ ಮುಂತಾಗಿ ಚರಿಸುವುದು.
ಪರವೆಂದಡೆ ಅರಿವು ಮುಂತಾಗಿ ಚರಿಸುವುದು.
ಪ್ರಸಾದಲಿಂಗಸ್ಥಲ ತ್ರಿವಿಧ: ಶುದ್ಧ, ಸಿದ್ಧ, ಪ್ರಸಿದ್ಧ
ಇದಕ್ಕೆ ವಿವರ:
ಶುದ್ಧವೆಂದಡೆ ಗುರುಮುಖದಿಂದ ಮಲತ್ರಯವ ಕಳೆದುಳಿದ ಶೇಷ.
ಸಿದ್ಧವೆಂದಡೆ ಲಿಂಗಮುಖದಿಂದ ಕರಣಮಥನಂಗಳ ಕಳೆದುಳಿದ ಶೇಷ.
ಪ್ರಸಿದ್ಧವೆಂದಡೆ ಜಂಗಮಮುಖದಿಂದ ಸರ್ವಚೈತನ್ಯಾತ್ಮಕ ತಾನೆಯಾಗಿ
ಖಂಡಿತವಳಿದುಳಿದ ಶೇಷ.
ಮಹಾಲಿಂಗಸ್ಥಲ ತ್ರಿವಿಧ: ಪಿಂಡಜ, ಅಂಡಜ, ಬಿಂದುಜ.
ಇದಕ್ಕೆ ವಿವರ:
ಪಿಂಡಜವೆಂದಡೆ ಘಟಾಕಾಶ.
ಅಂಡಜವೆಂದಡೆ ಬ್ರಹ್ಮಾಂಡ.
ಬಿಂದುಜವೆಂದಡೆ ಮಹಾಕಾಶ.
ಇಂತು ಲಿಂಗಸ್ಥಲ ಆರಕ್ಕಂ ಪದಿನೆಂಟು ಸ್ಥಲವಾಯಿತ್ತು.
ಇನ್ನು ಅಂಗಸ್ಥಲವಾವುವೆಂದಡೆ:
ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ.
ಇನ್ನು ಅಂಗಸ್ಥಲವಾರಕ್ಕೆ ವಿವರ:
ಭಕ್ತಸ್ಥಲ ತ್ರಿವಿಧ: ಗುರುಭಕ್ತ, ಲಿಂಗಭಕ್ತ, ಜಂಗಮಭಕ್ತ.
ತನುಕ್ರೀಯಿಂದ ತನುಮನಧನವನರ್ಪಿಸುವನಾಗಿ ಗುರುಭಕ್ತ.
ಮನಕ್ರೀಯಿಂದ ಮನತನುಧನವನರ್ಪಿಸುವನಾಗಿ ಲಿಂಗಭಕ್ತ.

ಧನಕ್ರೀಯಿಂದ ಧನಮನತನುವನರ್ಪಿಸುವನಾಗಿ ಜಂಗಮಭಕ್ತ.
ಮಾಹೇಶ್ವರಸ್ಥಲ ತ್ರಿವಿಧ: ಇಹಲೋಕವೀರ, ಪರಲೋಕವೀರ, ಲಿಂಗವೀರ.
ಅದಕ್ಕೆ ವಿವರ:
ಮರ್ತ್ಯಲೋಕದ ಮಹಾಗಣಂಗಳು ಮೆಚ್ಚುವಂತೆ,
ಷಡ್ದರ್ಶನಂಗಳ ನಿರಸನವ ಮಾಡಿ,
ತನ್ನ ಸಮಯಕ್ಕೆ ಪ್ರಾಣವ ವೆಚ್ಚಿಸುವನಾಗಿ ಇಹಲೋಕವೀರ.
ದೇವಲೋಕದ ದೇವಗಣಂಗಳು ಮೆಚ್ಚುವಂತೆ,
ಸರ್ವಸಂಗಪರಿತ್ಯಾಗವ ಮಾಡಿ ಚತುರ್ವಿಧಪದಂಗಳ
ಧರ್ಮಾರ್ಥಕಾಮಮೋಕ್ಷಂಗಳ ಬಿಟ್ಟಿಹನಾಗಿ ಪರಲೋಕವೀರ.
ಅಂಗಲಿಂಗಸಂಗದಿಂದ ಸರ್ವಕರಣಂಗಳು
ಸನ್ನಹಿತವಾಗಿಪ್ಪನಾಗಿ ಲಿಂಗವೀರ.
ಪ್ರಸಾದಿಸ್ಥಲ ತ್ರಿವಿಧ: ಅರ್ಪಿತಪ್ರಸಾದಿ, ಅವಧಾನಪ್ರಸಾದಿ, ಪರಿಣಾಮಪ್ರಸಾದಿ.
ಅದಕ್ಕೆ ವಿವರ:
ಕಾಯದ ಕೈಯಲ್ಲಿ ಸಕಲಪದಾರ್ಥಂಗಳ
ಇಷ್ಟಲಿಂಗಕ್ಕೆ ಕೊಟ್ಟು ಕೊಂಬನಾಗಿ ಅರ್ಪಿತಪ್ರಸಾದಿ.
ಪಂಚೇಂದ್ರಿಯಂಗಳಲ್ಲಿ ಪಂಚಲಿಂಗಪ್ರತಿಷ್ಠೆಯ ಮಾಡಿ,
ಅಲ್ಲಲ್ಲಿ ಬಂದ ಸುಖವನಲ್ಲಲ್ಲಿ ಮನದ ಕೈಯಲ್ಲಿ
ಕೊಟ್ಟು ಕೊಂಬನಾಗಿ ಅವಧಾನಪ್ರಸಾದಿ.
ಅಂಗಾಶ್ರಯವಳಿದು ಲಿಂಗಾಶ್ರಯವುಳಿದು,
ಭಾವಭರಿತನಾಗಿಪ್ಪನಾಗಿ ಪರಿಣಾಮಪ್ರಸಾದಿ.
ಪ್ರಾಣಲಿಂಗಿಸ್ಥಲ ತ್ರಿವಿಧ: ಆಚಾರಪ್ರಾಣಿ, ಲಿಂಗಪ್ರಾಣಿ, ಜಂಗಮಪ್ರಾಣಿ.
ಅದಕ್ಕೆ ವಿವರ:
ಮನೋವಾಕ್ಕಾಯದಲ್ಲಿ ಆಚಾರವ ಅವಗ್ರಹಿಸಿಹನಾಗಿ ಆಚಾರಪ್ರಾಣಿ.
ಬಾಹ್ಯೋಪಚಾರಂಗಳ ಮರೆದು ಲಿಂಗಕ್ಕೆ ತನ್ನ ಪ್ರಾಣವನೆ
ಪೂಜೆಯ ಮಾಡುವನಾಗಿ ಲಿಂಗಪ್ರಾಣಿ.
ಬಾಹ್ಯಭಕ್ತಿಯ ಮರೆದು ಜಂಗಮಕ್ಕೆ ತನ್ನ ತನುಮನಪ್ರಾಣಂಗಳ
ನಿವೇದಿಸುವನಾಗಿ ಜಂಗಮಪ್ರಾಣಿ.
ಶರಣಸ್ಥಲ ತ್ರಿವಿಧ: ಇಷ್ಟಲಿಂಗಾರ್ಚಕ, ಪ್ರಾಣಲಿಂಗಾರ್ಚಕ, ತೃಪ್ತಿಲಿಂಗಾರ್ಚಕ.
ಅದಕ್ಕೆ ವಿವರ:
ಅನಿಷ್ಟ ನಷ್ಟವಾಯಿತ್ತಾಗಿ ಇಷ್ಟಲಿಂಗಾರ್ಚಕ.
ಸ್ವಯಪರವನರಿಯನಾಗಿ ಪ್ರಾಣಲಿಂಗಾರ್ಚಕ.
ಇಹಪರವನರಿಯನಾಗಿ ತೃಪ್ತಿಲಿಂಗಾರ್ಚಕ.
ಐಕ್ಯಸ್ಥಲ ತ್ರಿವಿಧ: ಕಾಯಲಿಂಗೈಕ್ಯ, ಜೀವಲಿಂಗೈಕ್ಯ, ಭಾವಲಿಂಗೈಕ್ಯ.

ಆದಕ್ಕೆ ವಿವರ:
ಕ್ರಿಯೆಯರತುದೆ ಕಾಯಲಿಂಗೈಕ್ಯ.
ಅನುಭಾವವರತುದೆ ಜೀವಲಿಂಗೈಕ್ಯ.
ಅರಿವು ಸಿನೆ ಬಂಜೆಯಾದುದೆ ಭಾವಲಿಂಗೈಕ್ಯ.
ಇಂತೀ ಅಂಗಸ್ಥಲ ಆರಕ್ಕಂ ಹದಿನೆಂಟು ಸ್ಥಲವಾಯಿತ್ತು.
ಉಭಯಸ್ಥಲ ಮೂವತ್ತಾರರೊಳಗಾದ ಸರ್ವಾಚಾರಸಂಪತ್ತನು
ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣನೆ ಬಲ್ಲ. ॥ ೧೩೪ ॥

೯೮೮

ಆಚಾರಲಿಂಗಭಕ್ತಿ ಗುರುಲಿಂಗಭಕ್ತಿ ಶಿವಲಿಂಗಭಕ್ತಿ,
ಜಂಗಮಲಿಂಗಭಕ್ತಿ ಪ್ರಸಾದಲಿಂಗಭಕ್ತಿ, ಮಹಾಲಿಂಗಭಕ್ತಿ,
ಇಂತೀ ಆರು ಸಹಿತ ಆಚಾರ; ಆಚಾರಸಹಿತ ಗುರು,
ಗುರುಸಹಿತ ಲಿಂಗ, ಲಿಂಗಸಹಿತ ಜಂಗಮ.
ಜಂಗಮಸಹಿತ ಪ್ರಸಾದ, ಪ್ರಸಾದಸಹಿತ ಮಹಾಲಿಂಗ.
ಇಂತೀ ಎಲ್ಲ ಸ್ಥಲಗಳು ತಾನಾಗ ಬಲ್ಲಡೆ
ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು. ॥ ೧೩೫ ॥

೯೮೯

ಆಚಾರಲಿಂಗಮೋಹಿತನಾದಡೆ ಸಹೋಸಹೋದರಮೋಹವ ಮರೆಯಬೇಕು.
ಆಚಾರಲಿಂಗಭಕ್ತನಾದಡೆ, ಪೂರ್ವಾಚಾರವ ನಡೆಯಲಾಗದು.
ಆಚಾರಲಿಂಗಪೂಜಕನಾದಡೆ, ಅನ್ಯಪೂಜೆಯ ಮಾಡಲಾಗದು.
ಆಚಾರಲಿಂಗವೀರನಾದಡೆ, ಹಿಡಿದ ವ್ರತನೇಮವ ಬಿಡಲಾಗದು.
ಆಚಾರಲಿಂಗಪ್ರಸಾದಿಯಾದಡೆ, ಅಶುಚಿಯಾಗಿರಲಾಗದು.
ಆಚಾರಲಿಂಗಪ್ರಾಣಿಯಾದಡೆ, ಭಕ್ತನಿಂದೆಯ ಕೇಳಲಾಗದು.
ಇದು ಕಾರಣ–ಕೂಡಲಚೆನ್ನಸಂಗಯ್ಯನಲ್ಲಿ
ಈ ಆರುಸಹಿತ ಆಚಾರಲಿಂಗ ಭಕ್ತಿ. ॥ ೧೩೬ ॥

೯೯೦

ಆಚಾರಲಿಂಗಪಿಡಿದು ಅನುಭಾವ ಲಿಂಗಸಿದ್ಧಿ.
ಅನುಭಾವಲಿಂಗಪಿಡಿದು, ಮಾರ್ಗಕ್ರಿಯಾಲಿಂಗಸಿದ್ಧಿ.
ಮಾರ್ಗಕ್ರಿಯಾಲಿಂಗಪಿಡಿದು, ಮೀರಿದ ಕ್ರಿಯಾಲಿಂಗಸಿದ್ಧಿ
ಮೀರಿದ ಕ್ರಿಯಾಲಿಂಗಪಿಡಿದು, ಕ್ರಿಯಾನಿಷ್ಪತ್ತಿಲಿಂಗಸಿದ್ಧಿ.

'ಲಿಂಗಜಾತಃ ಲಿಂಗಬೀಜಂ'–ಎಂದುದಾಗಿ,
ಕೂಡಲಚೆನ್ನಸಂಗಯ್ಯಾ ಲಿಂಗವಿಡಿದು ಲಿಂಗಸಿದ್ಧಿ ॥ ೧೨೮ ॥

೯೯೧

ಆಚಾರವಡಗಿತ್ತು ಅನಾಚಾರವೆದ್ದಿತ್ತು.
ಅಲ್ಲದ ನಡೆಯ ನಡದಾರು ಸಲ್ಲದಚ್ಚುಗಳ ಮರಳಿವೊತ್ತಿಯಾರು.
ಭಕ್ತನೆ ಹೊಲೆಯನಾದಾನು ಜಂಗಮವೆ ಅನಾಚಾರಿಯಾದಾನು.
ಲಂಡ ಭಕ್ತನಾದಾನು ಪುಂಡ ಜಂಗಮವಾದೀತು.
ಲಂಡ ಪುಂಡ ಕೂಡಿ ಜಗಭಂಡರಾಗಿ ಕೆಟ್ಟಾರು.
ಮನದ ಹಿರಿಯರ ಬಿಟ್ಟಾರು ಕುಲದ ಹಿರಿಯರ ಪೂಜಿಸಿಯಾರು.
ಹದಿನೆಂಟು ಜಾತಿಯೆಲ್ಲ ಕೂಡಿ ಒಂದೆ ತಳಿಗೆಯಲ್ಲಿ ಉಂಡಾರು.
ಮತ್ತೆ ಕುಲಕ್ಕೆ ಹೋರಿಯಾಡಿಯಾರು, ಗುರುವೆ ನರನೆಂದಾರು.
ಲಿಂಗವ ಶಿಲೆಯೆಂದಾರು, ಜಂಗಮವ ಜಾತಿವಿಡಿದು ನುಡಿದಾರು.
ಭಕ್ತ ಜಂಗಮ ಪ್ರಸಾದವನೆಂಜಲೆಂದತಿಗಳೆದಾರು,
ತೊತ್ತು ಸೂಳೆಯರೆಂಜಲ ತಿಂದಾರು.
ಮತ್ತೆ ನಾ ಘನ ತಾ ಘನವೆಂದಾರು, ಒತ್ತಿದಚ್ಚುಗಳು ಮತ್ತೇರಿ ಹುಳಿತಾವು,
ಅಷ್ಟರೊಳಗೆ ಶರಣರು ಹುಟ್ಟಿ ಸಂಹಾರವ ಮಾಡಿಯಾರು,
ಹೊಟ್ಟು ಹಾರೀತು, ಘಟ್ಟಿಯುಳಿದೀತು.
ಮಿಕ್ಕಿದ್ದು ಪಲ್ಲವಿಸೀತು ಮರ್ತ್ಯವೇ ಕೈಲಾಸವಾದೀತು.
ಭಕ್ತಿಯು ಬೆಳೆ ಬೆಳೆದೀತು ಘನಪ್ರಸಾದವುದ್ಧರಿಸೀತು.
ಕೂಡಲಚೆನ್ನಸಂಗಯ್ಯನ ಶ್ರೀಪಾದವೆ ಸಾಕ್ಷಿಯಾಗಿ ಬಸವಣ್ಣನೊಬ್ಬನೆ
ಕರ್ತನಾದನು. ॥ ೧೨೯

೯೯೨

ಆಚಾರವುಳ್ಳಡೆ ಗುರು ಆಚಾರವುಳ್ಳಡೆ ಲಿಂಗ ಆಚಾರವುಳ್ಳಡೆ ಜಂಗಮ
ಆಚಾರವುಳ್ಳಡೆ ಪಾದೋದಕ ಆಚಾರವುಳ್ಳಡೆ ಪ್ರಸಾದ ಆಚಾರವುಳ್ಳಡೆ ಸದ್ಭಕ್ತಿ
ಆಚಾರವುಳ್ಳಡೆ ದಾಸೋಹ.
ಆಚಾರವಿಲ್ಲದಿದ್ದಡೆ ಗುರುವಲ್ಲ ನರನು
ಆಚಾರವಿಲ್ಲದಿದ್ದಡೆ ಲಿಂಗವಲ್ಲ ಶಿಲೆ
ಆಚಾರವಿಲ್ಲದಿದ್ದಡೆ ಜಂಗಮನಲ್ಲ ವೇಷಧಾರಿ
ಆಚಾರವಿಲ್ಲದಿದ್ದಡೆ ಪಾದೋದಕವಲ್ಲ ನೀರು
ಆಚಾರವಿಲ್ಲದಿದ್ದಡೆ ಪ್ರಸಾದವಲ್ಲ ಅಶನ

ಆಚಾರವಿಲ್ಲದಿದ್ದಡೆ ಭಕ್ತನಲ್ಲ ಭೂತಪ್ರಾಣಿ
ಆಚಾರವಿಲ್ಲದಿದ್ದಡೆ ದಾಸೋಹದ ಮನೆಯಲ್ಲ ವೇಶಿಯ ಗುಡಿಸಲು.
ಇದು ಕಾರಣ ಕೂಡಲಚೆನ್ನಸಂಗಯ್ಯಾ
ಆಚಾರವಿಲ್ಲದವರಿಗೆ ನಾಯಕನರಕ ತಪ್ಪದು. || ೧೪೦ ||

೯೯೩

ಆಚಾರವೆಂಬುದು ಕೂರಲಗು, ತಪ್ಪಿ ಬಂದಡೆ ಪ್ರಾಣವ ತಗಲುವುದು.
ಅದು ಕಾರಣ, ಅರಿದರಿದು ಆಚರಿಸಬೇಕು.
ಆಚಾರವಿಚಾರ ಉಭಯದ ವಿಚಾರವ ನೋಡದೆ,
ಶಿವದೀಕ್ಷೆಯ ಮಾಡಲಾಗದು.
ಅದೆಂತೆಂದಡೆ:
ಪರರ ಹೆಣ್ಣಿಗೆ ಕಣ್ಣಿಡದಿಹುದೆ ಒಂದನೆಯ ಆಚಾರ.
ಪರರ ದ್ರವ್ಯವ ಅಪಹಾರ ಮಾಡದಿಹುದೆ ಎರಡನೆಯ ಆಚಾರ.
ಸುಳ್ಳಾಡದಿರುವುದೆ ಮೂರನೆಯ ಆಚಾರ.
ವಿಶ್ವಾಸಘಾತವ ಮಾಡದಿಹುದೆ ನಾಲ್ಕನೆಯ ಆಚಾರ.
ಪ್ರಾಣಹಿಂಸೆಯ ಮಾಡದಿಹುದೆ ಐದನೆಯ ಆಚಾರ.
ಸಕಲ ಶಿವಶರಣರ್ಗೆ ಸಂತೋಷವಂ ಪುಟ್ಟಿಸುವುದೆ ಆರನೆಯ ಆಚಾರ.
ಸ್ವೀಕರಿಸಿದ ನೇಮವ ಪ್ರಾಣಾಂತ್ಯವಾಗಿ ಬಿಡೆನೆಂಬುದೆ ಏಳನೆಯ ಆಚಾರ.
ಷಟ್ಸ್ಥಲದವರ ಧಿಕ್ಕರಿಸುವ ಜನರ ಸೀಳುವೆನೆಂಬುವ ವ್ರತವೆ ಎಂಟನೆಯ ಆಚಾರ.
ಕೆಟ್ಟಜನರ ಸಹವಾಸವ ಮಾಡದಿಹುದೆ ಒಂಬತ್ತನೆಯ ಆಚಾರ.
ಸಜ್ಜನಸಂಗತಿಯ ಬಿಡದಿಹುದೆ ಹತ್ತನೆಯ ಆಚಾರ.
ಅನ್ಯದೇವತಾಭಜನೆಗೆ ವಿಮುಖನಾಗುವುದೆ ಹನ್ನೊಂದನೆಯ ಆಚಾರ.
ಶಿವನೇ ಸರ್ವದೇವಶಿಖಾಮಣಿಯೆಂದು ಮನದಲ್ಲಿ ಅಚ್ಚೊತ್ತಿಪ್ಪುದೆ
ಹನ್ನೆರಡನೆಯ ಆಚಾರ.
ಶಿವನಿಗೆ ಶಿವಗಣಂಗಳಿಗೆ ಭೇದವ ಮಾಡದಿಹುದೆ ಹದಿಮೂರನೆಯ ಆಚಾರ.
ಸಕಲ ಜೀವಿಗಳಿಗೆ ಹಿತವ ಬಯಸುವುದೆ ಹದಿನಾಲ್ಕನೆಯ ಆಚಾರ.
ಸರ್ವರಿಗೆ ಹಿತವ ಮಾಡುವುದೆ ಹದಿನೈದನೆಯ ಆಚಾರ.
ಕಡ್ಡಿಯ ಲಿಂಗಕ್ಕೆ ತೋರಿ ದಂತಧಾವನೆಯ ಮಾಡುವುದೆ ಹದಿನಾರನೆಯ ಆಚಾರ.
ಸರ್ವಾವಯವವ ಸ್ವಚ್ಛ ಪ್ರಕ್ಷಾಳಿಸುವುದೆ ಹದಿನೇಳನೆಯ ಆಚಾರ.
ಲಿಂಗಮುದ್ರೆ ಇಲ್ಲದ ಗುಡಿಯಲ್ಲಿ ಪಾಕವ ಮಾಡದಿಹುದೆ
ಹದಿನೆಂಟನೆಯ ಆಚಾರ.
ಪ್ರಣವಮುದ್ರೆ ಇಲ್ಲದ ವಸ್ತ್ರವ ಹೊದೆಯದಿಹುದೆ ಹತ್ತೊಂಬತ್ತನೆಯ ಆಚಾರ.

ಹುಟ್ಟಿದ ಶಿಶುವಿಗೆ ಲಿಂಗಧಾರಣವ ಮಾಡದೆ,
ತಾಯ ಮೊಲೆಹಾಲು ಜೇನುತುಪ್ಪ ಮುಟ್ಟಿಸದಿಹುದೆ ಇಪ್ಪತ್ತನೆಯ ಆಚಾರ.
ಆಡಿದ ಭಾಷೆಯ ಕಡೆಪೂರೈಸುವುದೆ ಇಪ್ಪತ್ತೊಂದನೆಯ ಆಚಾರ.
ಸತ್ಯವ ನುಡಿದು ತಪ್ಪದಿಹುವೆ ಇಪ್ಪತ್ತೆರಡನೆಯ ಆಚಾರ.
ತುರುಗಳ ಕಟ್ಟಿ ರಕ್ಷಿಸುವುದೆ ಇಪ್ಪತ್ತುಮೂರನೆಯ ಆಚಾರ.
ತುರುಗಳಿಗೆ ಲಿಂಗಮುದ್ರೆಯಿಕ್ಕಿ ಹಾಲು ಕರೆವುದು ಇಪ್ಪತ್ತುನಾಲ್ಕನೆಯ ಆಚಾರ.
ಮಂತ್ರಸಹಿತ ಗೋಮಯವ ಹಿಡಿದು, ಮಂತ್ರಸಹಿತ ಪುಟವಿಕ್ಕಿ
ಭಸ್ಮದ ರಾಶಿಯ ಮಾಡುವುದೆ ಇಪ್ಪತ್ತೈದನೆಯ ಆಚಾರ.
ಆ ಭಸ್ಮದ ರಾಶಿಯ ಪಾದೋದಕದೊಡನೆ ಉಂಡಿಯ ಕಟ್ಟುವುದೆ
ಇಪ್ಪತ್ತಾರನೆಯ ಆಚಾರ.
ವಿಧಿಯರಿತು ಸ್ಥಾನವರಿತು ರುದ್ರಾಕ್ಷಿಗಳ ಧರಿಸುವುದೆ
ಇಪ್ಪತ್ತೇಳನೆಯ ಆಚಾರ.
ಶಿವಾನುಭವವ ಶಾಸ್ತ್ರವ ವಿಚಾರಿಸುವುದೆ ಇಪ್ಪತ್ತೆಂಟನೆಯ ಆಚಾರ.
ಮನವ ನೋಯಿಸಿ ಮಾತನಾಡದಿಹುದೆ ಇಪ್ಪತ್ತೊಂಬತ್ತನೆಯ ಆಚಾರ.
ಲಿಂಗದ ಕಲೆಯರಿತು ಲಿಂಗವ ಪೂಜಿಸುವುದೆ ಮೂವತ್ತನೆಯ ಆಚಾರ.
ಗುರುಮುಖದಿಂದ 'ತಾನಾರು' ತನ್ನ ನಿಜವೇನೆಂದು ಬೆಸಗೊಳ್ಳುವುದೆ
ಮೂವತ್ತೊಂದನೆಯ ಆಚಾರ.
ಷಡ್ವರ್ಗಂಗಳ ಮೆಟ್ಟಿ ಷಟ್ಸ್ಥಲವನಿಂಬುಗೊಂಡುವೆ
ಮೂವತ್ತೆರಡನೆಯ ಆಚಾರ.
ಅವಿಚ್ಛಿನ್ನವಾಗಿ ಅಂಗತ್ರಯದಲ್ಲಿ ಮನ ಓಕರಿಸಿಕೊಂಡುವೆ
ಮೂವತ್ತುಮೂರನೆಯ ಆಚಾರ.
ಲಿಂಗದಲ್ಲಿ ಶಿಲೆಯ ಭಾವವನರಸದಿಹುದೆ ಮೂವತ್ತುನಾಲ್ಕನೆಯ ಆಚಾರ.
ಜಂಗಮದಲ್ಲಿ ಕುಲವನರಸದಿಹುವೆ ಮೂವತ್ತೈದನೆಯ ಆಚಾರ.
ವಿಭೂತಿಯ ಮೆಟ್ಟದಿಹುದೆ ಮೂವತ್ತಾರನೆಯ ಆಚಾರ.
ರುದ್ರಾಕ್ಷಿಯ ಶುದ್ಧವ ಮಾಡಿ ಮಣಿಗಳ ಅರಸುವುದೆ
ಮೂವತ್ತೇಳನೆಯ ಆಚಾರ.
ಪಾದೋದಕದಲ್ಲಿ ಉಚ್ಛಿಷ್ಟವಳಿಬುವೆ ಮೂವತ್ತೆಂಟನೆಯ ಆಚಾರ.
ಪ್ರಸಾದದಲ್ಲಿ ರುಚಿಯ ನೋಡದಿಹುವೆ ಮೂವತ್ತೊಂಬತ್ತನೆಯ ಆಚಾರ.
ಮಂತ್ರದಲ್ಲಿ ಕುತ್ಸಿತಕಲ್ಪನೆಯ ಮಾಡದಿಹುವೆ ನಾಲ್ವತ್ತನೆಯ ಆಚಾರ.
ಲಿಂಗಾರ್ಚನವಿರಹಿತ ಭೋಜನ ಮಾಡದಿಹುವೆ ನಾಲ್ವತ್ತೊಂದನೆಯ ಆಚಾರ.
ಐಕ್ಯರ ಸಮಾಧಿಗೊಳಿಸಿ ತಾನು ಲಿಂಗಪೂಜೆಯ ಮಾಡುವುವೆ
ನಾಲ್ವತ್ತೆರಡನೆಯ ಆಚಾರ.
ಲಿಂಗದ್ರೋಹವ ಕೇಳಿ ತಾನು ಪ್ರಾಣಬಿಡುವುವೆ

ನಾಲ್ವತ್ತುಮೂರನೆಯ ಆಚಾರ.
ಜಂಗಮದ್ರೋಹವ ಕೇಳಿ ತಾನು ಐಕ್ಯನಾಗುವುದೆ
ನಾಲ್ವತ್ತುನಾಲ್ಕನೆಯ ಆಚಾರ.
ಲಿಂಗದ್ರೋಹವ ಮಾಡಿದವನ ಪ್ರಾಣವ ಭೇದಿಸುವುದೆ
ನಾಲ್ವತ್ತೈದನೆಯ ಆಚಾರ.
ಜಂಗಮದ್ರೋಹವ ಮಾಡಿದವನ ಶಿರವನೀಡಾಡುವುದೆ
ನಾಲ್ವತ್ತಾರನೆಯ ಆಚಾರ.
ಅಷ್ಟಾವರಣಸಂಗವ ಮಾಡುವ ಭೇದವ ತಿಳಿವುದೆ ನಾಲ್ವತ್ತೇಳನೆಯ ಆಚಾರ.
ತಾನಾರು ಲಿಂಗವಾರು ಎಂಬ ಭೇದವು ತಿಲಮಾತ್ರ ಇಲ್ಲದಿರುವುದೆ
ನಾಲ್ವತ್ತೆಂಟನೆಯ ಆಚಾರ.
ತನ್ನ ನಿಜವಿಚಾರವ ತಾ ಮರೆಯದೆ ಷಟ್ಸ್ಥಲದವರಿಗೆ ಅರುಹಿ
ತನ್ನಂತೆ ಮಾಡುವುದೆ ನಾಲ್ವತ್ತೊಂಬತ್ತನೆಯ ಆಚಾರ.
ಇಂತಿಷ್ಟು ಆಚಾರಂಗಳ ಕಡೆಮುಟ್ಟಿಸುವುದೆ, ಕೂಡಲಚೆನ್ನಸಂಗಮದೇವರಲ್ಲಿ
ಐವತ್ತನೆಯ ಆಚಾರ ನೋಡಾ ಸಿದ್ಧರಾಮಯ್ಯಾ. || ೧೪೧ ||

೯೯೪

ಆಚಾರಸಹಿತ ಲಿಂಗಭಕ್ತನಾದರೆ, ದೈವವೆಂಬುದ ತನ್ನಲ್ಲಿಯೆ ಅರಿಯಬೇಕು.
ಇದಿರನ್ಯಭವಿಯ (ದೈವವ), ಕೊಂಡ ಕಾರಣವೇನಯ್ಯಾ?
ಲಿಂಗೈಕ್ಯಂಗೆ ಅರಿಷಡ್ವರ್ಗ ಮಲತ್ರಯಂಗಳೆಂಬ ಭವಿಗಳನರಿಯಬೇಕು.
ಅರಿದರಿದು ಆನಂದವೆಂಬ ಗುರುವಿನ ಕರದಿಂದ ಇವರ ಭಕ್ತರ ಮಾಡಿ,
ದೀಕ್ಷೆ ಶಿಕ್ಷೆ ಸ್ವಾನುಭಾವದಿಂದ ತನ್ನನೇ ಅರಿಯಬೇಕು.
ತ್ರಿಕರಣ ಘುಟಿಕೆಯಿಂ ಜೀವಕಳೆಯನಿಕ್ಕಿ ಇವರ ಭಕ್ತರಂ ಮಾಡಿ
ಶಿವಲಿಂಗಾರ್ಚನೆಯ ಮಾಡುವಾತನೀಗ ಶೀಲವಂತ.
ಅವರಿಂ ಘುತ್ತನಾಗಿ ವಿಸಟಂಬರಿದು,
ಅವು ಹೇಳಿಂಗೆ ಪ್ರಯೋಗಿಸಿದವು ಅವರಿಚ್ಛೆಗೆ ತಾನು ಪ್ರಯೋಗಿಸವೆ,
ಪರಿಣಾಮದಿಂದ ಬಂದ ಪದಾರ್ಥವ
ಲಿಂಗಾರ್ಪಿತವ ಮಾಡಿಕೊಂಬಾತನೀಗ ಲಿಂಗಸುಖಿಧಾನಿ, ಭವಿಪಾಕವ ಬಿಟ್ಟಾತ.
"ಅರ್ಪಯೇದ್ಯಃ ಸ್ವಯಂ ಪಾಕಂ ಪರಪಾಕಂ ವಿವರ್ಜಯೇತ್।
ವ್ಯಾಪಾರಂ ಸಕಲಂ ತ್ಯಕ್ತ್ವಾ ಸ ರುದ್ರೋ ನಾತ್ರ ಸಂಶಯಃ॥
ಇಂತಪ್ಪಾತನೀಗ ಲಿಂಗೈಕ್ಯನು.
ಇನ್ನು ಅನ್ಯದೈವವೆಂಬವು:
ಪ್ರಾಣ ಅಪಾನ ವ್ಯಾನ ಉದಾನ ಸಮಾನ
ನಾಗ, ಕೂರ್ಮ, ಕ್ರಕರ, ದೇವದತ್ತ, ಧನಂಜಯವೆಂಬ ದಶವಾಯುಗಳುಂಟಾಗಿ

ತನ್ನ ತಾನರಿದ ಪುರುಷಂಗೆ ಇವೆ ಅನ್ಯದೈವ ಕಾಣಭೋ!
"ಭೂತಲಿಂಗಮಿದಂ ಜ್ಞೇಯಂ ಪ್ರೇತಲಿಂಗಂ ಶಿವಾರ್ಚಕಃ।
ಭೂತ ಪ್ರೇತ ಪಿಶಾಚಾಂಶ್ಚ ದೂರತಃ ಪರಿವರ್ಜಯೇತ್॥
ಇಂತಪ್ಪ ಭವಿ–ಭಕ್ತರೆಂಬ ಭೇದವನರಿಯದೆ
ಇದಿರಲ್ಲಿ ಅನ್ಯದೈವವುಂಟೆಂಬ ಶೀಲರೆಲ್ಲ ಶೀಲವಂತರೆ? ಅವರಂತಿರಲಿ.
ತನ್ನ ಮನದ ತಮಂಧವ ಕಳೆದು, ತನ್ನೊಳಗಿದ್ದ ಭವಿಗಳ ಭಕ್ತರ ಮಾಡಿ
ತನ್ನ ವಾಯುಭೂತಂಗಳ ಅನ್ಯದೈವವೆಂದನಿಸದೆ, ಶಿವಸಂಸ್ಕಾರಿಗಳೆಂದೆನಿಸಿ
ನಿತ್ಯ ಲಿಂಗಾರ್ಚನೆಯ ಮಾಡಬಲ್ಲ ಮಹಾಪುರುಷನ,
ಶ್ರೀಹಸ್ತಂಗಳಲ್ಲಿ ಪೊಗಳುತ್ತಿದ್ದವೈ ವೇದ.
"ಅಯಂ ಮೇ ಹಸ್ತೋ ಭಗವಾನ್ ಅಯಂ ಮೇ ಭಗವತ್ತರಃ।
ಅಯಂ ಮೇ ವಿಶ್ವಭೇಷಜಃ ಅಯಂ ಶಿವಾಭಿಮರ್ಶನಃ,
ಅಯಂ ಮಾತಾ ಅಯಂ ಪಿತಾ॥
ಇಂತಪ್ಪ ಲಿಂಗಾರ್ಚನೆಯ ಮಾಡಬಲ್ಲಾತ ಸಂಬಂಧಿಯೆನಿಸಿಕೊಳ್ಳಬಲ್ಲಾತ.
ಕೂಡಲಚೆನ್ನಸಂಗಯ್ಯಾ,
ನಿಮ್ಮ ಶರಣ, ಬಸವಣ್ಣಂಗೆ ಸುಲಭವಾಯಿತ್ತು
ಮಿಕ್ಕಿನವರಿಗೆಲ್ಲ ಅಸುಲಭ. ॥ ೧೪೨ ॥

೯೯೫

ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳಂ ಕಳೆದು
ಆಜ್ಞಾದೀಕ್ಷೆ ಉಪಮಾದೀಕ್ಷೆ ಸ್ವಸ್ತಿಕಾರೋಪಣ ಕಳಶಾಭಿಷೇಕ,
ವಿಭೂತಿಯ ಪಟ್ಟ ಲಿಂಗಾಯತ ಲಿಂಗಸ್ವಾಯತ–
ಈ ಏಳನು ಕಾಯಕ್ಕುಪದೇಶವ ಮಾಡುವುದು.
ಸಮಯ ನಿಸ್ಸಂಸಾರ ನಿರ್ವಾಣ ತತ್ತ್ವದೀಕ್ಷೆ ಆಧ್ಯಾತ್ಮ ಅನುಗ್ರಹ ಶುದ್ಧವಿದ್ಯೆ–
ಈ ಏಳನು ಪ್ರಾಣಕ್ಕುಪದೇಶವ ಮಾಡುವುದು.
ಏಕಾಗ್ರಚಿತ್ತ, ದೃಢವ್ರತ, ಪಂಚೇಂದ್ರಿಯಾರ್ಪಿತ, ಅಹಿಂಸೆ
ಮನೊ ಲಯ ಲಿಂಗನಿಜ ಸದ್ಯೋನ್ಮುಕ್ತಿ–
ಈ ಏಳನು ಮನಕ್ಕುಪದೇಶವ ಮಾಡುವುದು.
ಈ ಪ್ರಕಾರದುಪದೇಶ ಕೂಡಲಚೆನ್ನಸಂಗಯ್ಯನಲ್ಲಿ ಸಹಜದೀಕ್ಷೆ. ॥ ೧೪[illegible] ॥

೯೯೬

ಆತ್ಮನ ನಿಜವನರಿದು ಪರಮಾತ್ಮಲಿಂಗ ತಾನೆಂದರಿದ ಶರಣಂಗೆ
ಏಂತಿರ್ದಡಂತೆ ಪೂಜೆ ನೋಡಾ!

ಆ ಶರಣ ಭೋಗಿಸಿತ್ತೆಲ್ಲ ಲಿಂಗಾರ್ಪಿತ, ರುಚಿಸಿತ್ತೆಲ್ಲ ಪ್ರಸಾದ
ಆ ಶರಣನರಿದುದೆಲ್ಲ ಪರಬ್ರಹ್ಮ, ನುಡಿದುದೆಲ್ಲ ಪರತತ್ತ್ವ,
ಆ ಶರಣ ತಾನೆ ಕೂಡಲಚೆನ್ನಸಂಗಯ್ಯನು. ॥ ೧೪೪ ॥

೯೯೭

ಆತ್ಮನಲ್ಲಿ ಪ್ರಣವಪಂಚಾಕ್ಷರಿಯ ನಿರವಿಸಿ,
ಸದ್ಗುರುವೆ ಎನ್ನ ಶಿವಾತ್ಮನ ಮಾಡಿದಿರಾಗಿ, ಆತ್ಮಶುದ್ಧಿಯಾಯಿತ್ತೆನಗೆ.
ಪಂಚಭೂತಂಗಳಲಿ ಪಂಚಬ್ರಹ್ಮನನಿರಿಸಿದಿರಾಗಿ, ಭೂತಶುದ್ಧಿಯಾಯಿತ್ತೆನಗೆ.
ಅಂಡಜ ಜರಾಯುಜಾದಿ ಎಂಬತ್ತುನಾಲ್ಕುಲಕ್ಷ ಯೋನಿಯಲ್ಲಿ ಬಹ ಜೀವನ
ಅಯೋನಿಜನ ಮಾಡಿದಿರಾಗಿ ಜೀವಶುದ್ಧಿಯಾಯಿತ್ತೆನಗೆ.
ಅಂಗಾಶ್ರಯವ ಕಳೆದು ಲಿಂಗಾಶ್ರಯವ ಮಾಡಿದಿರಾಗಿ
ಮನಶ್ಶುದ್ಧಿಯಾಯಿತ್ತೆನಗೆ.
ಪಶುವೆಂಬ ಅಜ್ಞಾನದ್ರವ್ಯವ ಕಳೆದು ಪರಮಸುಜ್ಞಾನದ್ರವ್ಯವ ಮಾಡಿದಿರಾಗಿವ
ದ್ರವ್ಯಶುದ್ಧಿಯಾಯಿತ್ತೆನಗೆ.
ಇಂತು ಸರ್ವಶುದ್ಧನಂ ಮಾಡಿ ಪೂರ್ವಾಶ್ರಯವ ಕಳೆದಿರಾಗಿ
ಕೂಡಲಚೆನ್ನಸಂಗಾ,
ನಿಮ್ಮವ 'ನ ಗುರೋರಧಿಕಂ ನ ಗುರೋರಧಿಕಂ ನ ಗುರೋರಧಿಕಂ'
ಎನುತಿರ್ದೆನು. ॥ ೧೪೫ ॥

೯೯೮

ಆತ್ಮನು ಅಷ್ಟದಳ ಕಮಲದಳಂಗಳ ಮೆಟ್ಟಿ ಚರಿಸಾಡುವ ವಿಧವೆಂತೆಂದಡೆ:
ಇಂದ್ರದಳವೇರಿದಲ್ಲಿ ಗುಣಿಯಾಗಿಹನು.
ಅಗ್ನಿದಳವೇರಿದಲ್ಲಿ ಕ್ಷುಧಾತುರದಿಂ ಹಸಿದಿರುತ್ತಿಹನು.
ಯಮದಳವೇರಿದಲ್ಲಿ ಕ್ರೋಧದಿಂ ದುರಿತ ಚೇಷ್ಟಿತನಾಗಿಹನು.
ನೈಋತ್ಯದಳವೇರಿದಲ್ಲಿ ದ್ವೇಷಿಸುತ್ತಲಿಹನು.
ವರುಣದಳವೇರಿದಲ್ಲಿ ನಿದ್ರೆಗೈವುತ್ತಿಹನು.
ವಾಯುವ್ಯದಳವೇರಿದಲ್ಲಿ ಸಂಚಲಚಿತ್ತದಿಂ ಗಮನಿಯಾಗಿಹನು.
ಕುಬೇರದಳವೇರಿದಲ್ಲಿ ಧರ್ಮಬುದ್ಧಿಯಿಂ ಪರಹಿತಾರ್ಥನಾಗಿಹನು.
ಈಶಾನ್ಯದಳವೇರಿದಲ್ಲಿ ಸ್ತ್ರೀಗೋಷ್ಠಿ ವಿಷಯಾತುರನಾಗಿಹನು.
ಮಧ್ಯಸ್ಥಾನಕ್ಕೆ ಬಂದುನಿಂತಲ್ಲಿ ಸದ್ಭಾವಿಯಾಗಿ ಉತ್ತರಪಥ
ಪರಮಾರ್ಥ ಮೋಕ್ಷಗಾಮಿಯಾಗಿಹನು.

ಇಂತೀ ಅಷ್ಟದಳಂಗಳ ಮೆಟ್ಟಿ ಚರಿಸುವ ಹಂಸನ ನೆಲೆಗೆಡಿಸಿ
ಸದ್ಭಾವಿಯಾಗಿರಬಲ್ಲ ಕೂಡಲಚೆನ್ನಸಂಗಾ ನಿಮ್ಮ ಶರಣನು. || ೧೪೬ ||

೯೯೯

ಆತ್ಮ ಲಿಂಗ, ಪರಮಾತ್ಮ ಜಂಗಮ,
ತನು ಮಧ್ಯದಲ್ಲಿ ಪ್ರಸಾದವಾಯಿತ್ತು,
ನಿಶ್ಚಿಂತನಿವಾಸವಾಯಿತ್ತು.
ಕೂಡಲಚೆನ್ನಸಂಗನ ಶರಣರ ಸಂಗದಿಂದ
ನಿಶ್ಚಿಂತವಾಸವಾಯಿತ್ತು. || ೧೪೭ ||

೧೦೦೦

ಆತ್ಮಸ್ಥಿತಿ ಶಿವಯೋಗ ಸಂಬಂಧವ
ಅರಿದೆನೆಂದಡೆ ಹೇಳಿರಣ್ಣ
ಪೃಥ್ವಿ ಅಪ್ಪು ತೇಜ ವಾಯು ಆಕಾಶವೆಂಬ ಪಂಚತತ್ವದ
ವಿವರಮಂ ಪೇಳ್ವೆ:
ಅಸ್ಥಿ ಮಾಂಸ ಚರ್ಮ ರುಧಿರ ಶುಕ್ಲ ಮೇಧಸ್ಸು ಮಜ್ಜೆ
ಎಂಬ ಸಪ್ತಧಾತುವಿನ ಇಹವು,
ಶ್ರೋತ್ರ ನೇತ್ರ ಘ್ರಾಣ ಜಿಹ್ವೆ ತ್ವಕ್ಕು ಎಂಬ
ಪಂಚಜ್ಞಾನೇಂದ್ರಿಯಂಗಳಿಂದ ಶರೀರವೆನಿಸಿಕೊಂಬುದು.
ಶಬ್ದ ಸ್ಪರ್ಶ ರೂಪು ರಸ ಗಂಧವೆಂಬಿವು ಪಂಚೇಂದ್ರಿಯಗಳು,
ವಾಕು ಪಾಣಿ ಪಾದ ಪಾಯು ಗುಹ್ಯವೆಂಬ
ಪಂಚಕರ್ಮೇಂದ್ರಿಯಂಗಳಿವರು ಪರಿಚಾರಕರು,
ಇಡಾ ಪಿಂಗಲಾ ಸುಷುಮ್ನಾ ಗಾಂಧಾರಿ ಹಸ್ತಿಜಿಹ್ವಾ ಪೂಷಾ
ಅಲಂಬು ಲಕುಹಾ ಪಯಸ್ವಿನಿ ಶಂಖಿನಿಯೆಂಬ ದಶನಾಡಿಗಳಂ ಭೇದಿಸುತ್ತಂ.
ಪ್ರಾಣ ಅಪಾನ ವ್ಯಾನ ಉದಾನ ಸಮಾನ ನಾಗ ಕೂರ್ಮ ಕೃಕರ
ದೇವದತ್ತ ಧನಂಜಯವೆಂಬ ದಶವಾಯುವಿನ ಸ್ಥಾನಂಗಳನರಿದು,
ಆಧ್ಯಾತ್ಮಿಕ ಆಧಿದೈವಿಕ ಆದಿಭೌತಿಕವೆಂಬ ತಾಪತ್ರಯಂಗಳನರಿದು,
ರಾಜಸ ತಾಮಸ ಸಾತ್ವಿಕವೆಂಬ ಗುಣತ್ರಯಂಗಳನಳಿದು,
ಮನ ಬುದ್ಧಿ ಚಿತ್ತ ಅಹಂಕಾರವೆಂಬ ಅಂತಃಕರಣ ಚತುಷ್ಟಯಂಗಳಂ ತಿಳಿದು,
ಕಾಮ ಕ್ರೋಧ ಲೋಭ ಮೋಹ ಮದ
ಮತ್ಸರವೆಂಬ ಅರಿಷಡ್ವರ್ಗಂಗಳ ಗೆಲಿದು,
ಜಾಯತೆ ಅಸ್ತಿತೆ ವರ್ಧತೆ ಪರಿಣಮತೆ ಅಪಕ್ಷೀಯತೆ ವಿನಶ್ಯತೆ ಎಂಬ
ಷಡ್ಭಾವ ವಿಕಾರಂಗಳಂ ಬಿಟ್ಟು,

ಕ್ಷುತ್ತು ಪಿಪಾಸೆ ಶೋಕ ಮೋಹ ಜರೆ
ಮರಣವೆಂಬ ಷಡೂರ್ಮಿಗಳ ವರ್ಮವ ತಿಳಿದು,
ಜಾತಿ ವರ್ಣ ಆಶ್ರಮ ಕುಲ ಗೋತ್ರ ನಾಮವೆಂಬ ಷಡಭ್ರಮೆಗಳಂ ತಟ್ಟಲೀಯದೆ.
ಅನ್ನಮಯ ಪ್ರಾಣಮಯ ಮನೋಮಯ ಆನಂದಮಯವೆಂಬ
ಪಂಚಕೋಶಂಗಳ ಸಂಬಂಧವನರಿದು,
ಕುಲ ಛಲ ದಾನ ಯೌವನ ರೂಪು ರಾಜ್ಯ ವಿದ್ಯೆ
ತಪವೆಂಬ ಅಷ್ಟಮದಂಗಳಂ ಕೆಡಿಸಿ,
ಧರ್ಮ ಅರ್ಥ ಕಾಮ ಮೋಕ್ಷವೆಂಬ ಚತುರ್ವಿಧ ಪುರುಷಾರ್ಥಂಗಳಂ ಕೆಡಿಸಿ,
ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯವೆಂಬ
ಚತುರ್ವಿಧ ಮುಕ್ತಿಯ ಬಯಸದೆ,
ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ಜಾತಿಯಲ್ಲಿ ಭೇದವೆಂತೆಂದರಿದು
ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ ಆಜ್ಞಾ
ಎಂಬ ಷಡುಚಕ್ರಂಗಳಂ ಭೇದಿಸಿ,
ಕೃತಯುಗ ತ್ರೇತಾಯುಗ ದ್ವಾಪರಯುಗ ಕಲಿಯುಗಂಗಳಡಗಿ,
ಪೃಥ್ವಿ ಸಲಿಲ ಪಾವಕ ಪವನ ಅಂಬರ ರವಿ ಶಶಿ ಆತ್ಮವೆಂಬ
ಅಷ್ಟತನು ಮದಂಗಳ ಭೇದಾಭೇದಂಗಳ ಭೇದಿಸಿ,
ಸ್ಥೂಲತನು ಸೂಕ್ಷ್ಮತನು ಕಾರಣತನು ಚಿದ್ರೂಪತನು ಚಿನ್ಮಯತನು
ಆನಂದತನು ಅದ್ಭುತತನು ಶುದ್ಧತನುವೆಂಬ ಅಷ್ಟತನುವ ಏಕಾರ್ಥನಂ ಮಾಡಿ,
ಕಪಿಲವರ್ಣ ನೀಲವರ್ಣ ಮಾಂಜಿಷ್ಟವರ್ಣ ಪೀತವರ್ಣ ಕಪ್ಪುವರ್ಣ
ಗೌರವರ್ಣ ಶ್ವೇತವರ್ಣವೆಂಬ ಸಪ್ತಧಾತುಗಳ ಸ್ವಸ್ಥಾನವಂ ಮಾಡಿ,
ಜಾಗ್ರ ಸ್ವಪ್ನ ಸುಷುಪ್ತಿ ಎಂಬ ಅವಸ್ಥಾತ್ರಯಂಗಳಂ ಮೀರಿ,
ಜೀವಾತ್ಮ ಅಂತರಾತ್ಮ ಪರಮಾತ್ಮನೆಂಬೀ ಆತ್ಮತ್ರಯಂಗಳನೊಂದು ಮಾಡಿ,
ಅಣಿಮಾ ಮಹಿಮಾ ಗರಿಮಾ ಲಘಿಮಾ ಪ್ರಾಪ್ತಿ ಪ್ರಾಕಾಮ್ಯ ವಶಿತ್ವ
ಈಶತ್ವವೆಂಬ ಅಷ್ಟಸಿದ್ಧಿಗಳಂ ಬಿಟ್ಟು,
ಅಂಜನಸಿದ್ಧಿ ಘುಟಿಕಾಸಿದ್ಧಿ ರಸಸಿದ್ಧಿ ಶರೀರಸಿದ್ಧಿ ಪರಕಾಯಪ್ರವೇಶಸಿದ್ಧಿ
ದೂರಶ್ರವಣಸಿದ್ಧಿ ದೂರದೃಷ್ಟಿಸಿದ್ಧಿ ತ್ರಿಕಾಲಜ್ಞಾನಸಿದ್ಧಿ ಎಂಬ
ಅಷ್ಟಮಹಾಸಿದ್ಧಿಗಳಂ ತೃಣೀಕೃತಮಂ ಮಾಡಿಕೊಂಬುದು.
ತನುವ್ಯಸನ ಮನವ್ಯಸನ ಧನವ್ಯಸನ ರಾಜ್ಯವ್ಯಸನ ವಿಶ್ವವ್ಯಸನ
ಉತ್ಸಾಹವ್ಯಸನ ಸೇವಕವ್ಯಸನವೆಂಬ ಸಪ್ತವ್ಯಸನಂಗಳಂ ಬಿಟ್ಟು,
ವಡಬಾಗ್ನಿ ಮಂದಾಗ್ನಿ ಉದರಾಗ್ನಿ ಶೋಕಾಗ್ನಿ ಕಾಮಾಗ್ನಿ ಎಂಬ
ಪಂಚಾಗ್ನಿಯಂ ಕಳೆದು,
ಶರೀರಾರ್ಥ ಪರಹಿತಾರ್ಥ ಯೋಗಾರ್ಥ ಪರಮಾರ್ಥ
ತತ್ವಾರ್ಥಂಗಳಲ್ಲಿ ಅವಧಾನಿಯಾಗಿ,

ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ
ಪ್ರಸಾದಲಿಂಗ ಮಹಾಲಿಂಗವೆಂಬ ಷಡುಸ್ಥಲಂಗಳಂ ಭೇದಿಸಿ,
ದಾಸ ವೀರದಾಸ ಭೃತ್ಯ ವೀರಭೃತ್ಯ ಸಜ್ಜನಸಮಯಾಚಾರ
ಸಕಲಾವಸ್ತೀಯರ್ಚನೆಯೆಂಬ ಷಡ್ವಿಧ ದಾಸೋಹದಿಂದ ನಿರಂತರ ತದ್ಗತವಾಗಿ.
ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ
ಧ್ಯಾನ ಧಾರಣ ಯೋಗ ಸಮಾಧಿ ಎಂಬ ಅಷ್ಟಾಂಗ ಯೋಗದಲ್ಲಿ ಮುಕ್ತವಾಗಿ,
ಬಾಲ ಬೋಳ ಪಿಶಾಚ ರೂಪಿಗೆ ಬಾರದ ದೇಹಂಗಳನರಿದು
ಅನಿತ್ಯವಂ ಬಿಡುವುದು.
ಲಯಯೋಗವನರಿದು ಹಮ್ಮ ಬಿಡುವುದು.
ಮಂತ್ರಯೋಗವನರಿದು ಆಸೆಯಂ ಬಿಡುವುದು.
ಮರೀಚಿಕಾಜಲದಂತೆ ಬೆಳಗುವ ಶರಣ
ಆತ ರಾಜಯೋಗಿ, ಆತಂಗೆ ನಮೋ ನಮೋ ಎಂಬೆನಯ್ಯಾ
ಕೂಡಲಚೆನ್ನಸಂಗಮದೇವಾ. ॥ ೧೪೮ ॥

೧೦೦೧

ಆದಿ ಅನಾದಿ ಅಧಿ ದೇವತೆಗಳು
ಮೀನಜ ರೋಮಜ ಚಿಟ್ಟಜ ಚಪ್ಪಜ
ಋಷಿಯರುಗಳು ಮೊದಲಾದನಂತ
ಬ್ರಹ್ಮರಿಲ್ಲದಂದಲ್ಲಿಂದತತ್ತ
ಏಕಲಿಂಗ ಒಬ್ಬನೆ ಶರಣ.
ಗುರುವೆ ಪರಮಗುರುವೆ ನೀನೆಯಯ್ಯಾ.
ಆದಿಕುಳಕ್ಕೆ ಮೂಲಿಗನಾಗಿ ಸುಳುಹುದೋರಿ
ಪಾವನವ ಮಾಡಬಂದೆಯಯ್ಯಾ.
ಬಹುಮುಖ ಜೀವಿಗಳಿಗೆ ಬಹುಮುಖದಾಹಾರವ
ತೋರಿದೆಯಯ್ಯಾ.
ಭುವನವ ಸಲಹಲೆಂದು ಆದಿಯ ಲಿಂಗವ
ಅನಾದಿಯ ಶರಣನ ಕೈಯಲ್ಲಿ ಕೊಟ್ಟಿರಿ.
ಆ ಲಿಂಗವ ನೀವು ಸಂಘಟಿಸಿದ ಘಟಕ್ಕೆ ಕಾರುಣ್ಯವ ಮಾಡಿ
ಸಲಹಯ್ಯಾ ಕೂಡಲಚೆನ್ನಸಂಗಮದೇವಾ.

೧೦೦೨

ಆದಿ, ಅನಾದಿ, ಅನಾಗತ, ಅನಂತ, ಅದ್ಭುತ,
ತಮಂಧ, ತಾರಜ, ತಂಡಜ, ಬಿಂದುಜ,

ಛಿನ್ನಾಯುಕ್ತ, ಅವ್ಯಕ್ತ, ಅಮದಾಯುಕ್ತ,
ಮಣಿರಣ, ಮಾನ್ಯರಣ, ವಿಶ್ವರಣ, ವಿಶ್ವಾವಸು, ಅಲಂಕೃತ,
ಕೃತಯುಗ, ತ್ರೇತಾಯುಗ, ದ್ವಾಪರ [ಯುಗ], ಕಲಿಯುಗ–
ಇಂತೀ ಇಪ್ಪತ್ತೊಂದು ಯುಗಂಗಳ ನಿರ್ಮಿಸಿದಾತ ನಮ್ಮ ಬಸವಣ್ಣ.
ಪ್ರಥಮ ಯುಗದಲ್ಲಿ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶಂಗಳಿಲ್ಲದಂದು
ಆರೂ ಆರೂ ಇಲ್ಲದಂದು, ನಾಮವಿಲ್ಲದಂದು,
ಅಂದು ನಿಃಶೂನ್ಯವಾಗಿದ್ದ ಕಾಣ ನಮ್ಮ ಬಸವಣ್ಣ.
ಅಂದು ನಿಮ್ಮ ನಾಭಿಕಮಲದಲ್ಲಿ ಜಲಪ್ರಳಯ ಪುಟ್ಟಿತ್ತು.
ಆ ಜಲಪ್ರಳಯದಲ್ಲಿ ಒಂದುಗುಳ್ಳೆ ಲಿಂಗಾಕಾರವಾಗಿ ಪುಟ್ಟಿತ್ತು.
ಆ ಲಿಂಗವ ತಕ್ಕೊಂಡು ಸ್ಥಾಪ್ಯವಿಟ್ಟಾತ ನಮ್ಮ ಬಸವಣ್ಣನು.
ಇಪ್ಪತ್ತನೆಯ ಯುಗದಲ್ಲಿ
ಓಂಕಾರವೆಂಬ ಮೇವ ಮೇದು, ಮೆಲುಕಿರಿದು, ಪರಮಾರ್ಥವೆಂಬ ಹೆಂಡಿಯನಿಕ್ಕಿ
ನೊಸಲ ಕಣ್ಣ ತೆರೆದು ನೋಡಲಾಗಿ ಆ ಹೆಂಡಿ ಭಸ್ಮವಾಯಿತ್ತು.
ಆ ಭಸ್ಮವನೆ ತೆಗೆದು ತಳಿಯಲಾಗಿ ಭೂಮಂಡಲ ಹೆಪ್ಪಾಯಿತ್ತು
ಹೆಪ್ಪಾಗಲಿಕ್ಕಾಗಿ ತೊಡೆಯ ಮೇಲಿದ್ದ ಲಿಂಗವ ತಕ್ಕೊಂಡು ಸ್ಥಾಪ್ಯವಿಟ್ಟಾತ
ನಮ್ಮ ಬಸವಣ್ಣ.
ಹತ್ತೊಂಬತ್ತನೆಯ ಯುಗದಲ್ಲಿ
ಏಕಪಾದದ ಮಾಹೇಶ್ವರನ ನಿರ್ಮಿಸಿದಾತ ನಮ್ಮ ಬಸವಣ್ಣ.
ಹದಿನೇಳನೆಯ ಯುಗದಲ್ಲಿ
ಕತ್ತಲೆಯ ಕಾಳೋದರನೆಂಬ ರುದ್ರನ ನಿರ್ಮಿಸಿದಾತ ನಮ್ಮ ಬಸವಣ್ಣ.
ಹದಿನೆಂಟನೆಯ ಯುಗದಲ್ಲಿ
ಏಕ ಪಾದದ ಮಾಹೇಶ್ವರನ ನಿರ್ಮಿಸಿದಾತ ನಮ್ಮ ಬಸವಣ್ಣ.
ಹದಿನೇಳನೆಯ ಯುಗದಲ್ಲಿ
ವೇದಪುರಾಣಾಗಮಶಾಸ್ತ್ರಂಗಳ ನಿರ್ಮಿಸಿದಾತ ನಮ್ಮ ಬಸವಣ್ಣ
ಹದಿನಾರನೆಯ ಯುಗದಲ್ಲಿ........
ಹದಿನೈದನೆಯ ಯುಗದಲ್ಲಿ
ಅಮೃತಮಥನವ ಮಾಡಿದಾತ ನಮ್ಮ ಬಸವಣ್ಣ.
ಹದಿನಾಲ್ಕನೆಯ ಯುಗದಲ್ಲಿ
ತೆತ್ತೀಸಕೋಟಿ ದೇವರ್ಕಳ ನಿರ್ಮಿಸಿದಾತ ನಮ್ಮ ಬಸವಣ್ಣ.
ಹದಿಮೂರನೆಯ ಯುಗದಲ್ಲಿ
ಸೌರಾಷ್ಟ್ರಸೋಮೇಶ್ವರನ ನಿರ್ಮಿಸಿದಾತ ನಮ್ಮ ಬಸವಣ್ಣ.
ಹನ್ನೆರಡನೆಯ ಯುಗದಲ್ಲಿ
ಪಾರ್ವತಿಪರಮೇಶ್ವರರ ನಿರ್ಮಿಸಿದಾತ ನಮ್ಮ ಬಸವಣ್ಣ.
ಹನ್ನೊಂದನೆಯ ಯುಗದಲ್ಲಿ

ಏಕಾದಶ ರುದ್ರರ ನಿರ್ಮಿಸಿದಾತ ನಮ್ಮ ಬಸವಣ್ಣ.
ಹತ್ತನೆಯ ಯುಗದಲ್ಲಿ
ದಶವಿಷ್ಣುಗಳ ನಿರ್ಮಿಸಿದಾತ ನಮ್ಮ ಬಸವಣ್ಣ.
ಒಂಬತ್ತನೆಯ ಯುಗದಲ್ಲಿ
ನವಬ್ರಹ್ಮರ ನಿರ್ಮಿಸಿದಾತ ನಮ್ಮ ಬಸವಣ್ಣ.
ಎಂಟನೆಯ ಯುಗದಲ್ಲಿ
ಅಷ್ಟದಿಕ್ಪಾಲರ ನಿರ್ಮಿಸಿದಾತ ನಮ್ಮ ಬಸವಣ್ಣ.
ಏಳನೆಯ ಯುಗದಲ್ಲಿ
ಸಪ್ತ ಸಮುದ್ರಂಗಳ ನಿರ್ಮಿಸಿದಾತ ನಮ್ಮ ಬಸವಣ್ಣ.
ಆರನೆಯ ಯುಗದಲ್ಲಿ
ಷಣ್ಮುಖದೇವರ ನಿರ್ಮಿಸಿದಾತ ನಮ್ಮ ಬಸವಣ್ಣ.
ಐದನೆಯ ಯುಗದಲ್ಲಿ
ಪಂಚಮುಖದೀಶ್ವರನ ನಿರ್ಮಿಸಿದಾತ ನಮ್ಮ ಬಸವಣ್ಣ.
ನಾಲ್ಕನೆಯ ಯುಗದಲ್ಲಿ
ಚತುರ್ಮುಖದ ಬ್ರಹ್ಮನ ನಿರ್ಮಿಸಿದಾತ ನಮ್ಮ ಬಸವಣ್ಣ.
ಮೂರನೆಯ ಯುಗದಲ್ಲಿ
ಬ್ರಹ್ಮ, ವಿಷ್ಣು, ರುದ್ರರ ನಿರ್ಮಿಸಿದಾತ ನಮ್ಮ ಬಸವಣ್ಣ.
ಎರಡನೆಯ ಯುಗದಲ್ಲಿ
ಸಂಗಯ್ಯನ ನಿರ್ಮಿಸಿದಾತ ನಮ್ಮ ಬಸವಣ್ಣ.
ಒಂದನೆಯ ಯುಗದಲ್ಲಿ
ಪ್ರಭುವೆಂಬ ಜಂಗಮವ ನಿರ್ಮಿಸಿದಾತ ನಮ್ಮ ಬಸವಣ್ಣ.
ಇಂತೀ ಇಪ್ಪತ್ತೊಂದು ಯುಗಂಗಳಲ್ಲಿ
ಬಸವಣ್ಣನು ತಮ್ಮ ಕರಕಮಲವೆಂಬ ಗರ್ಭದಲ್ಲಿ ಜನಿಸಿದನೆಂದು,
ಕಕ್ಕಯ್ಯಗಳು ತಮ್ಮ ಮೋಹದ ಮಗನೆಂದು
ಒಕ್ಕುದನಿಕ್ಕಿ ಸಲಹಿದರು ಕಾಣಾ ಕೂಡಲಚೆನ್ನಸಂಗಮದೇವಾ. || ೧೦೦೨ ||

೧೦೦೩

ಆದಿ ಅನಾದಿ ಆತ್ಮವಿವೇಕ ಅನುಭಾವಸಂಬಂಧ ಎಂತಿಪ್ಪುದೆಂದಡೆ:
ಆದಿಯೆ ದೇಹ, ಅನಾದಿಯೆ ಆತ್ಮ.
ಇಂತೀ ಆದಿ ಅನಾದಿಯ ಮೇಲಿಪ್ಪುದೆ ಪರಮಪ್ರಣವ.
ಆ ಪರಮಪ್ರಣವದ ಪರಮಪ್ರಕಾಶವೆ ಚಿಚ್ಛಕ್ತಿ.
ಆ ಚಿಚ್ಛಕ್ತಿಯ ಸುವರ್ಣಪ್ರಭೆಯ ಮೇಲಣ ಪರಮನಾದವೆ ಸುನಾದ ಬ್ರಹ್ಮ.
ಆ ಸುನಾದಬ್ರಹ್ಮದ ಮೇಲಣ ಸೂಕ್ಷ್ಮಲಿಂಗವೆ ನಾದಬಿಂದು ಕಳಾತೀತವಾದ

ಜ್ಯೋತಿರ್ಮಯಲಿಂಗ.
ಆ ಲಿಂಗದಿಂದೊಗೆದ ದೇಹೇಂದ್ರಿಯ ಮನಃ ಪ್ರಾಣಾದಿಗಳೆಲ್ಲ
ಆ ಲಿಂಗದ ಉಪಕರಣಂಗಳಾದ ಕಾರಣ
ಆ ಮನಃ ಪ್ರಾಣಾದಿಗಳೆಲ್ಲ ಆ ಪರವಸ್ತುವಿಗೆ ಭಿನ್ನವೆಂಬ ಅಜ್ಞಾನಿಯ
ಮೆಚ್ಚ ಕೂಡಲಚೆನ್ನಸಂಗಯ್ಯ. ॥ ೧೫೧ ॥

೧೦೦೪

ಆದಿ ಅನಾದಿ ಇಲ್ಲದಂದು, ಸ್ಥಿತಿಗತಿ ಉತ್ಪನ್ನವಾಗದಂದು
ಭಕ್ತಿಯನುಭಾವಿಯ ಬಸುರೊಳಗೆ ಸತ್ಯಜ್ಞಾನವೆಂಬ ಶಾಸ್ತ್ರಂಗಳು ಹುಟ್ಟಿದವು.
ಆ ಶಾಸ್ತ್ರದೊಳಡಗಿದವು ವೇದಪುರಾಣಾಗಮಂಗಳು.
ಆ ಆಗಮಂಗಳೊಳಡಗಿದವು ಐವತ್ತೆರಡಕ್ಷರಂಗಳು
ಆ ಅಕ್ಷರಂಗಳೊಳಡಗಿದವು ಇಪ್ಪತ್ತೇಳು ನಕ್ಷತ್ರಂಗಳು.
ಆ ಇಪ್ಪತ್ತೇಳು ನಕ್ಷತ್ರಂಗಳೊಳಡಗಿದವು
ಈರೇಳು ಲೋಕದ ಗಳಿಗೆ ಜಾವ ದಿನ ಮಾಸ ಸಂವತ್ಸರಂಗಳು.
ಇಂತಿವೆಲ್ಲವನು ಒಳಗಿಟ್ಟುಕೊಂಡಿಹಾತ 'ಓಂ ನಮಃ ಶಿವಾಯ' ಎಂಬಾತ ಕಾಣಿರೆ!
ಹೊರಗಿಪ್ಪಾತನು 'ಓಂ ನಮಃ ಶಿವಾಯ' ಎಂಬಾತ ಕಾಣಿರೆ!
ಉಳಿದಿಪ್ಪಾತನು 'ಓಂ ನಮಃ ಶಿವಾಯ' ಎಂಬಾತ ಕಾಣಿರೆ!
ಮತ್ತಿದ್ದ ಯೋನಿಜರೆಲ್ಲರೂ ಶಾಪಹತರಾಗಿ ಹೋದರು.
ಇದು ಕಾರಣ—'ಓಂ ನಮಃ ಶಿವಾಯ' ಎಂಬಾತನೆ ಲಿಂಗವು,
ಪಂಚಾಕ್ಷರಿಯೆ ಪರಮೇಶ್ವರನು, ಪಂಚಾಕ್ಷರಿಯೆ ಪರಮತತ್ವ,
ಪಂಚಾಕ್ಷರಿಯೆ ಪರಮಯೋಗ,
ಪಂಚಾಕ್ಷರಿಯೆ ಪರಂಜ್ಯೋತಿ, ಪಂಚಾಕ್ಷರಿಯೆ ಪಾಪಾಂತಕ.
'ನ' ಎಂಬಕ್ಷರವೆ ದೇವರ ಚರಣ, 'ಮ' ಎಂಬಕ್ಷರವೆ ದೇವರ ಒಡಲು,
'ಶಿ' ಎಂಬಕ್ಷರವೆ ದೇವರ ಹಸ್ತ, 'ವಾ' ಎಂಬಕ್ಷರವೆ ದೇವರ ನಾಸಿಕ,
'ಯ' ಎಂಬಕ್ಷರವೆ ದೇವರ ನೇತ್ರ.
ಮತ್ತೆ:
'ನ' ಎಂಬಕ್ಷರವೆ ದೇವರ ದಯೆ, 'ಮ' ಎಂಬಕ್ಷರವೆ ದೇವರ ಶಾಂತಿ,
'ಶಿ' ಎಂಬಕ್ಷರವೆ ದೇವರ ಕ್ರೋಧ, 'ವಾ' ಎಂಬಕ್ಷರವೆ ದೇವರ ದರ್ಪ,
'ಯ' ಎಂಬಕ್ಷರವೆ ದೇವರ ಶಬ್ದ.
ಮತ್ತೆ:
'ನ' ಎಂಬಕ್ಷರವೆ ಪೃಥ್ವಿ, 'ಮ' ಎಂಬಕ್ಷರವೆ ಅಪ್ಪು,
'ಶಿ' ಎಂಬಕ್ಷರವೆ ಅಗ್ನಿ, 'ವಾ' ಎಂಬಕ್ಷರವೆ ವಾಯು,
'ಯ' ಎಂಬಕ್ಷರವೆ ಆಕಾಶ.

ಮತ್ತೆ:
'ನ' ಎಂಬಕ್ಷರವೆ ಬ್ರಹ್ಮ, 'ಮ' ಎಂಬಕ್ಷರವೆ ವಿಷ್ಣು,
'ಶಿ' ಎಂಬಕ್ಷರವೆ ರುದ್ರ, 'ವಾ' ಎಂಬಕ್ಷರವೆ ಶಕ್ತಿ,
'ಯ' ಎಂಬಕ್ಷರವೆ ಲಿಂಗ.
ಇಂತು ಪಂಚಾಕ್ಷರನೊಳಗಳಿವಕ್ಷರ ನಾಲ್ಕು, ಉಳಿವಕ್ಷರ ಒಂದು.
ಈ ಪಂಚಾಕ್ಷರವನೇಕಾಕ್ಷರವ ಮಾಡಿದ ಬಳಿಕ ದೇವನೊಬ್ಬನೆ ಎಂದರಿದು,
ಬ್ರಹ್ಮ ದೈವವೆಂಬ ಬ್ರಹ್ಮೇತಿಕಾರರನೇನೆಂಬೆನಯ್ಯ!
ವಿಷ್ಣು ದೈವವೆಂಬ ವಿಚಾರಹೀನರನೇನೆಂಬೆನಯ್ಯ!
ಅಶ್ವಿನಿ ಭರಣಿ ಕೃತ್ತಿಕೆ ಮೊದಲಾದ ಇಪ್ಪತ್ತೇಳು ನಕ್ಷತ್ರಂಗಳೊಳಗೆ,
ಮೂಲಾನಕ್ಷತ್ರದಲ್ಲಿ (ವಿಷ್ಣು) ಹುಟ್ಟಿದನಾಗಿ ಮೂಲನೆಂಬ ಹೆಸರಾಯಿತ್ತು.
ದೇವರ ಸೇವ್ಯಕಾರ್ಯಕ್ಕೆ ಪ್ರಾಪ್ತನೆಂದು ವೇದಂಗಳು ಬಿನ್ನೈಸಲು,
ಜ್ಯೋತಿಷ್ಯಜ್ಞಾನ ಶಾಸ್ತ್ರಂಗಳು ಹುಸಿಯಾದವೆಂದು
ನಿಮ್ಮ ಹರಿಯ ಅಡವಿಯಲ್ಲಿ ಬೀಸಾಡಲು,
ಅಲ್ಲಿ ಅಳುತ್ತಿದ್ದ ಮಗನ ಭೂದೇವತೆ ಸಲಹಿ, ಭೂಕಾಂತನೆಂಬ ಹೆಸರುಕೊಟ್ಟು,
ಭೂಚಕ್ರ ತನ್ನ ಪ್ರತಿರೂಪ ತೋಳಲ್ಲಿ ಸೂಡಿಸಿ
ಶಿವಧರ್ಮಾಗಮ ಪೂಜೆ ಭಕ್ತಿಯಲ್ಲಿ ಯುಕ್ತನ ಮಾಡಿದ ಬಳಿಕ,
ಮತ್ತೆ ನಮ್ಮ ದೇವರ ಶ್ರೀಚರಣದಲ್ಲಿರ್ದು ಒಳಗೆ ತೋರಲು
ದೇವರು ಪುರಾಣಂಗಳ ಕರೆದು ವಿಷ್ಣುವಿನ ಪಾಪಕ್ಷಯವ ನೋಡಿ ಎಂದರೆ,
ಆ ಪುರಾಣಂಗಳಿಂತೆಂದವು:
"ಪಾಪಂತು ಮೂಲನಕ್ಷತ್ರಂ ಜನನೀಮರಣಂ ಪುನಃ।
ಪಾಪಂ ತು ಪರ್ವತಸ್ಥೂಲಂ ಶಿವೇ ವೈರಮತಃ ಪರಂ।
ಶಿವದಾಸೋಹ ಭಾವೇನ ಪಾಪಕ್ಷಯಮವಾಪ್ನುಯಾತ್"॥
ಎಂದು ಪುರಾಣಂಗಳು ಹೇಳಲಾಗಿ;
ವಿಷ್ಣು ಕೇಳಿ, ಪುರಾಣದ ಕೈಯಲು ದೀಕ್ಷಿತನಾಗೆ,
ಪುರಾಣ ಪುರುಷೋತ್ತಮನೆಂಬ ಹೆಸರು ಬಳಿಕಾಯಿತ್ತು.
ಮತ್ತೆ ನಮ್ಮ ದೇವರ ಪಾದರಕ್ಷೆಯ ತಲೆಯಲ್ಲಿ ಹೊತ್ತುಕೊಂಡು
ಭೂತಂಗಳಿಗಂಜಿ ಶಂಖಮಂ ಪಿಡಿದುಕೊಂಡು,
ದುರಿತಂಗಳಿಗಂಜಿ ನಾಮವನಿಟ್ಟು, ಪ್ರಳಯಂಗಳಿಗಂಜಿ ವೇಷವ ತೊಟ್ಟು,
ರಾಕ್ಷಸರಿಗಂಜಿ ಚಕ್ರಮಂ ಪಿಡಿದು,
ಶಿವನ ದಾಸೋಹದ ದಾಸಿಯೆಂದು ಕಸಕಿಲಂ ಪಿಡಿದು ಬಯಲಸುಡುಗಿ,
ಹೊತ್ತ ನೀರಲ್ಲಿ ಪ್ರತ್ಥಳಿಯ ಸೌಖ್ಯಮಂ ಮಾಡಿ
ಇಪ್ಪತ್ತೇಳು ಲಕ್ಷವರುಷ ಶಿವನ ಸೇವೆಯುಂ ಮಾಡಿ
ಮತ್ತೆ ಗರುಡವಾಹನ ಸತಿ ಲಕ್ಷ್ಮಿ ಪಾರ್ಥಿಜಯುಮಂ ಪಡೆದು

ದೇವರ ಎಡದ ಗದ್ದುಗೆಯನೋಲೈಸಿಪ್ಪವನ
ದೇವರೆಂದರೆ ನೀವೆಂದಂತೆ ಎಂಬರೆ? ಕೇಳಿರಣ್ಣಾ!
ವಚನಶುದ್ಧ ಭಾವದಲ್ಲಿ ಭಕ್ತಿಯುಳ್ಳವರು ನೀವು
ಹೊತ್ತಿದ್ದ ವೇಷದಲ್ಲಿ ತಿಳಿದು ನೋಡಿ.
ತಂದೆತಾಯ ಇಂದ್ರಿಯದಲ್ಲಿ ಬಂದವರು ದೇವರೆ?
ಸಂದೇಹ ಭ್ರಮೆಯೊಳಗೆ ಸಿಕ್ಕಿದವರು ದೇವರೆ?
ಶುಕ್ಲ ಶೋಣಿತದೊಳಗೆ ಬೆಳೆದವರು ದೇವರೆ?
ಆ ತಂದೆ ತಾಯ ಹುಟ್ಟಿಸಿದವರಾರೆಂದು ಕೇಳಿರೆ:
ಹಿಂದೆ ಸಂದ ಯುಗಂಗಳು ಶತಕೋಟಿ ಸಂಖ್ಯೆಯ ಮೇಲೆ
ಏಳುನೂರೆಪ್ಪತ್ತುಸಾವಿರ ಯುಗಂಗಳು,
ಇದಕ್ಕೆ ನವಕೋಟಿ ನಾರಾಯಣರಳಿದರು,
ಶತಕೋಟಿ ಸಂಖ್ಯೆ ಬ್ರಹ್ಮರಳಿದರು
ಉಳಿದವರ ಪ್ರಳಯವ ಹೊಗಳಲಿನ್ನಾರ ವಶ?
ಇಂತಿವೆಲ್ಲವನು ಬಿಟ್ಟು ಉಳಿದಿಪ್ಪಾತನೊಬ್ಬನೆ,
ಆತಂಗೆ ನಮೋ ನಮೋ ಎಂಬೆ ಕೂಡಲಚೆನ್ನಸಂಗಮದೇವಾ. ॥ ೧೫೨ ॥

೧೨೦೫

ಆದಿಯಲ್ಲಿ ಬಂದುದಲ್ಲ, ನಾದಬಿಂದುವಿನಲ್ಲಿ ಆದುದಲ್ಲ.
ನಾದವನು ಕಳೆ ನುಂಗಿ, ಕಳೆಯ ನಾದವ ನುಂಗಿ,
ಹೊಳೆವ ಲಿಂಗ ನಿನಗೆಂತು ಸಾಧ್ಯವಾಯಿತ್ತು ಹೇಳಾ?
ಅಪ್ಪಣೆಯಿಲ್ಲದ ಅಪ್ಪಣೆ ಸಲುವುದೆ ಜಂಗಮದೊಳಗೆ?
ಇದು ಕಾರಣ– ಕೂಡಲಚೆನ್ನಸಂಗಮದೇವರಲ್ಲಿ
ಆದಿಸೋಂಕು ನಿನಗೆಂತು ಸಾಧ್ಯವಾಯಿತ್ತು ಹೇಳಾ ಪ್ರಭುವೆ! ॥ ೧೫೩ ॥

೧೨೦೬

ಆದಿಯಲ್ಲಿ ವೇದ್ಯ ಶಿವಸಂಪತ್ತಿನ ಮಹಾಘನ,
ಲಿಂಗಪ್ರಾಣ ಸಹಜದಲ್ಲಿ ಉದಯವಾದ
ಸಂಗನಬಸವ ನಮೋ ಸಂಗನಬಸವ ನಮೋ!
ಚೆನ್ನಸಂಗನ ಬಸವಿದೇವಂಗೆ ಅಪ್ರತಿಮಂಗೆ ಪ್ರತಿಯಿಲ್ಲ.
ಆ ಧರ್ಮವೆ ಧರ್ಮ.
ಕೂಡಲಚೆನ್ನಸಂಗಾ,
ನಿಮ್ಮ ಶರಣ ಬಸವಣ್ಣನು ಉಪಮಾತೀತನಯ್ಯಾ. ॥ ೧೫೪ ॥

೧೦೦೭

ಆದಿಯಲ್ಲಿ ಹುಟ್ಟಿತ್ತಲ್ಲ, ಅನಾದಿಯಲ್ಲಿ ಬೆಳೆಯಿತ್ತಲ್ಲ;
ಮೂರ್ತಿಯಲ್ಲಿ ನಿಂದುದಲ್ಲ, ಅಮೂರ್ತಿಯಲ್ಲಿ ಭಾವಿಯಲ್ಲ;
ಅರಿವಿನೊಳಗೆ ಅರಿದುದಲ್ಲ, ಮರಹಿನೊಳಗೆ ಮರೆದುದಿಲ್ಲ;
ಎಂತಿರ್ದಡಂತೆ ಬ್ರಹ್ಮ ನೋಡಾ!
ಮನ ಮನ ಲೀಯವಾಗಿ ಘನ ಘನ ಒಂದಾದಡೆ
ಮತ್ತೆ ಮನಕ್ಕೆ ವಿಸ್ಮಯವೇನು ಹೇಳಾ?
ಕೂಡಲಚೆನ್ನಸಂಗನ ಶರಣರು
ಕಾಯವೆಂಬ ಕಂಥೆಯ ಕಳೆಯದೆ ಬಯಲಾದಡೆ
ನಿಜವೆಂದು ಪರಿಣಾಮಿಸಬೇಕಲ್ಲದೆ
ಅಂತಿಂತೆನಲುಂಟೆ ಸಂಗನಬಸವಣ್ಣಾ? || ೧೫೫ ||

೧೦೦೮

ಆದಿಯಲೊಬ್ಬ ಮೂರ್ತಿಯಾದ, ಆ ಮೂರ್ತಿಯಿಂದ ಸದಾಶಿವನಾದ,
ಆ ಸದಾಶಿವನ ಮೂರ್ತಿಯಿಂದ ಜ್ಞಾನಶಕ್ತಿಯಾದಳು.
ಆ ಸದಾಶಿವಂಗೆಯೂ ಜ್ಞಾನಶಕ್ತಿಯಿಬ್ಬರಿಗೆಯೂ ಶಿವನಾದ,
ಆ ಶಿವಂಗೆ ಇಚ್ಛಾಶಕ್ತಿಯಾದಳು.
ಆ ಶಿವಂಗೆಯೂ ಇಚ್ಛಾಶಕ್ತಿಯಿಬ್ಬರಿಗೆಯೂ ರುದ್ರನಾದ.
ಆ ರುದ್ರಂಗೆ ಕ್ರಿಯಾಶಕ್ತಿಯಾದಳು.
ಆ ರುದ್ರಂಗೆಯೂ ಕ್ರಿಯಾಶಕ್ತಿಯಿಬ್ಬರಿಗೆಯೂ ವಿಷ್ಣುವಾದ.
ಆ ವಿಷ್ಣುವಿಂಗೆ ಮಹಾಲಕ್ಷ್ಮಿಯಾದಳು.
ಆ ವಿಷ್ಣುಂಗೆಯೂ ಮಹಾಲಕ್ಷ್ಮಿಯಿಬ್ಬರಿಗೆಯೂ ಬ್ರಹ್ಮನಾದ.
ಆ ಬ್ರಹ್ಮಂಗೆ ಸರಸ್ವತಿಯಾದಳು.
ಆ ಬ್ರಹ್ಮಂಗೆಯೂ ಸರಸ್ವತಿಯರಿಬ್ಬರಿಗೆಯೂ
ನರರು ಸುರರು ದೇವರ್ಕಳು ಹೆಣ್ಣು ಗಂಡು
ಸಚರಾಚರಂಗಳು ಸಹಿತವಾಗಿ ಎಂಬತ್ತುನಾಲ್ಕುಲಕ್ಷ ಜೀವಜಂತುಗಳು,
ತೋರುವ ತೋರಿಕೆಯೆಲ್ಲ ಹುಟ್ಟಿತ್ತು ಕೂಡಲಚೆನ್ನಸಂಗಯ್ಯಾ. || [illegible] ||

೧೦೦೯

ಆದಿಯಾಧಾರವೆ (ಆದಿಯನಾದಿಯೆ?) ಏಕ ಅನುಭಾವ ಸಂಬಂಧವೆಂತೆಂದಡೆ:
ಆದಿಯೆ ದೇಹ, ಅನಾದಿಯೆ ಆತ್ಮ.
ಇಂತೀ ಆದಿಯಾಧಾರದ (ಇಂತೀ ಆದಿಯನಾದಿಯ?)

ಮೇಲಿಪ್ಪುದೆ ಪರಮ ಪ್ರಣವ.
ಆ ಪರಮ ಪ್ರಣವದ ಚಿತ್ತವಿಕ್ಕಿ ಸುವರ್ಣದ ಪ್ರಭೆಯು ಪೋಗಳ
ಸೂಕ್ಷ್ಮಲಿಂಗವೆ ನಾದ ಬಿಂದು ಕಳಾತೀತವಾದ ಜ್ಯೋತಿರ್ಮಯಲಿಂಗ.
ದೇಹ ಮನ ಪ್ರಾಣ ಇಂದ್ರಿಯಂಗಳೆಲ್ಲವು
ಆ ಲಿಂಗಕ್ಕೆ ಭಿನ್ನವೆಂಬ ಅಜ್ಞಾನಿಗಳ ಮೆಚ್ಚನು
ಕೂಡಲಚೆನ್ನಸಂಗಮದೇವ. || ೧೫೭ ||

೧೦೧೦

ಆದಿಯಿಂದತ್ತತ್ತ ನೀನೆ ಅಯ್ಯಾ, ಅನಾದಿಯಿಂದತ್ತತ್ತ ನೀನೆ ಅಯ್ಯಾ.
ಈ ಎರಡನೂ ಮೀರಿದ ಅತ್ಯತಿಷ್ಠದ್ದಶಾಂಗುಲನಾದೆಯಯ್ಯಾ.
'ಚತುರ್ಯುಗ ಸಹಸ್ರಾಣಿ' ಎಂಬ ಸಂಖ್ಯೆ ಯುಗಂಗಳ ಪವಣಿಸದಂದು
ಕೆಸರುಗಲ್ಲನಿಕ್ಕಿ ಧರೆ ಮೇರುವ ನೆಲೆಗೊಳಿಸಿ ಅಂಡಜ ಉತ್ಪತ್ಯವಾಗದಂದು
ಆತನಂತುವ ನೀನೆ ಬಲ್ಲೆ ನಿನ್ನಂತುವನಾತನೆ ಬಲ್ಲ.
ನಿಮ್ಮಿಬ್ಬರ ಮಹಿಮೆಯ ನಾನೆತ್ತ ಬಲ್ಲೆನಯ್ಯಾ
ಕೂಡಲಚೆನ್ನಸಂಗಮದೇವಾ. || ೧೫೮ ||

೧೦೧೧

ಆದಿಲಿಂಗ, ಅನಾದಿ ಶರಣ ಎಂಬುದು ತನ್ನಿಂದ ತಾನಾಯಿತ್ತು ಕೇಳಿರಣ್ಣಾ;
ಆದಿ ಕಾಯ, ಅನಾದಿ ಪ್ರಾಣ ಎಂಬ ಉಭಯದ ಭೇದವ ತಿಳಿದು
ವಿಚಾರಿಸಿ ನೋಡಿರಣ್ಣಾ. ಅನಾದಿಯ ಪ್ರಸಾದ ಆದಿಗೆ ಸಲುವುದು.
ಅನಾದಿ ಜಂಗಮಶ್ಚೈವ ಆದಿಲಿಂಗಸ್ಥಲಂ ಭವೇತ್।
ಅನಾದೇಸ್ತು ವಿರೋಧೇನ ಇಷ್ಟೋಚ್ಛಿಷ್ಟಂ ತು ಕಿಲ್ಬಿಷಂ॥
ಇದನರಿದು ಪ್ರಾಣಪ್ರಸಾದ ವಿರೋಧವಾಗಿ
ಪಿಂಡಪ್ರಸಾದವ ಕೊಂಡಡೆ ಕಿಲ್ಬಿಷ ನೋಡಾ
ಕೂಡಲಚೆನ್ನಸಂಗಮದೇವಾ. || ೧೫೯ ||

೧೦೧೨

ಆದಿಲಿಂಗ, ಅನಾದಿ ಶರಣನೆಂಬುದು ತಪ್ಪದು;
ಆದಿ ಗುರು, ಅನಾದಿ ಶಿಷ್ಯನೆಂಬುದು ತಪ್ಪದು.
ಗುರುವಿಂಗೆ ಶಿಷ್ಯಂಗೆ ಏನು ದೂರ ದೇವಾ?
ಮುಳ್ಳುಗುತ್ತುವಡೆ ತೆರಹಿಲ್ಲದ ಪರಿಪೂರ್ಣ ಘನವು.
ಒಬ್ಬರಲ್ಲಿ ಒಂದು ಭಾವವುಂಟೆ?
ಎನ್ನೊಳಗೆ ಬೆಳಗುವ ಜ್ಞಾನ, ನಿನ್ನ ಹೃದಯಕಮಲದೊಳಗಣ ಅವ್ಯಕ್ತಲಿಂಗ.

ನಿನ್ನೊಳು ತೊಳಗಿ ಬೆಳಗುವ ಜ್ಯೋತಿರ್ಲಿಂಗ
ಎನ್ನಂತರಂಗದ ಸುಜ್ಞಾನಲಿಂಗ.
ಒಂದರಲ್ಲಿ ಒಂದು ಬಿಚ್ಚಿ ಬೇರೆ ಮಾಡಬಾರದಾಗಿ,
ಪ್ರಾಣಲಿಂಗ ಒಂದೆ, ಉಪದೇಶ ಒಂದೆ, ಕ್ರಿಯಾಕರ್ಮ ಒಂದೆ.
ನೀವಿನ್ನಾವುದ ಬೇರೆಮಾಡಿ ನುಡಿವಿರಯ್ಯಾ?
ಕಾರ್ಯದಲ್ಲಿ ಗುರುವಾಗಿ,
ಅಂತರಂಗಕ್ಕೆ ಸುಜ್ಞಾನೋಪದೇಶವ ಮುನ್ನವೆ ಮಾಡಿದ ಬಳಿಕ
ಕ್ರೀಯಿಂದ ಮಾಡಲಮ್ಮೆನೆಂದಡೆ ಹೋಹುದೆ?
ಕೂಡಲಚೆನ್ನಸಂಗಮದೇವರು ಸಾಕ್ಷಿಯಾಗಿ
ಎನಗೆ ನೀವು ಉಪದೇಶವ ಮಾಡಿದಡೆ
ಮರ್ತ್ಯಲೋಕದ ಮಹಾಗಣಂಗಳ ಕೈಯಲ್ಲಿ
ಅಹುದಹುದೆನಿಸುವೆ ಕಾಣಾ ಸಂಗನಬಸವಣ್ಣ. || ೧೬೦ ||

೧೧೧೩

ಆದಿಶೂನ್ಯಂ ಮಧ್ಯಶೂನ್ಯಂ ಅಂತ್ಯಶೂನ್ಯಂ ನಿರಾಮಯಂ|
ಸರ್ವಶೂನ್ಯಂ ನಿರಾಕಾರಂ ನಿಶ್ಶಬ್ದಂ ಬ್ರಹ್ಮ ಉಚ್ಯತೇ||
ಆ ನಿರವಯಸ್ಥಲವು, ಉರಿಯುಂಡ ಕರ್ಪುರದಂತಿದ್ದಿತ್ತು;
ಇಂತಿದು ನಿರವಯಸ್ಥಲವಯ್ಯಾ, ಕೂಡಲಚೆನ್ನಸಂಗಮದೇವಾ. || ೧೬೧ ||

೧೧೧೪

ಆಧಾರ, ಲಿಂಗ, ನಾಭಿ ಮಧ್ಯನಾಳ ಕಂದದ ಬಯಲೊಳಗಿರ್ಪ
ಸೂಕ್ಷ್ಮಾಗ್ನಿಯಸು ವ್ಯಾವೃತ್ತಿಯಿಂದೂರ್ಧ್ವಮುಖಕ್ಕೆ ತಂದು
ಧ್ರುವಮಂಡಲದ ಮೇಲೆ ನಿಲಿಸಿ,
ಪ್ರಭಾಮಂಡಲದೊಳಗೆ ಹೊಳೆವ ಪ್ರಾಣಲಿಂಗಕ್ಕೆ
ನವಚಕ್ರಮಧ್ಯದಲ್ಲಿರ್ಪ ಅಮೃತವನು, ಅರ್ಪಿತವ ಮಾಡಿ ಪ್ರಸಾದವ ಕೊಳಬಲ್ಲ,
ಕೂಡಲಚೆನ್ನಸಂಗಾ ನಿಮ್ಮ ಶರಣ. || ೧೬೨ ||

೧೧೧೫

ಆಧಾರಾದಿ ಷಡುಚಕ್ರಂಗಳು ಇವಕ್ಕೆ ವಿವರ:
ಆಧಾರ ಸ್ಥಾನದಲ್ಲಿ ಚತುರ್ದಳ ಪದ್ಮವಿಹುದು ಅದು ಸುವರ್ಣವರ್ಣ
ಅದಕ್ಕೆ ಅಕ್ಷರ ವಶಷಸ ಎಂಬ ನಾಲ್ಕಕ್ಷರ, ಅಧಿದೈವ ಬ್ರಹ್ಮನು.
ಸ್ವಾಧಿಷ್ಠಾನ ಸ್ಥಾನದಲ್ಲಿ ಷಡ್ದಳ ಪದ್ಮವಿಹುದು, ಅದು ಕಪ್ಪುವರ್ಣ
ಅದಕ್ಕೆ ಅಕ್ಷರ ಬಭಮಯರಲ ಎಂಬ ಷಡಕ್ಷರ, ವಿಷ್ಣು ಅಧಿದೈವ.

ಮಣಿಪೂರದ ಸ್ಥಾನದಲ್ಲಿ ದಶದಳ ಪದ್ಮವಿಹುದು, ಅದು ಕೆಂಪುವರ್ಣ
ಅದಕ್ಕೆ ಅಕ್ಷರ ಡಢಣ ತಥದಧನ ಪಫ ಎಂಬ ದಶ ಅಕ್ಷರ, ರುದ್ರನಧಿದೈವ.
ಅನಾಹತ ಸ್ಥಾನದಲ್ಲಿ ದ್ವಾದಶದಳದ ಪದ್ಮವಿಹುದು, ಅದು ನೀಲವರ್ಣ,
ಅದಕ್ಕೆ ಅಕ್ಷರ ಕಖಗಘಙ ಚ ಛ ಜಝಞ ಟಠ ಎಂಬ
ದ್ವಾದಶ ಅಕ್ಷರ ಅದಕ್ಕೆ ಮಹೇಶ್ವರ ಅಧಿದೈವ.
ವಿಶುದ್ಧಿ ಸ್ಥಾನದಲ್ಲಿ ಷೋಡಶದಳ ಪದ್ಮವಿಹುದು, ಅದು ಸ್ಪಟಿಕವರ್ಣ
ಅದಕ್ಕೆ ಅಕ್ಷರ ಅ ಆ ಇ ಈ ಉ ಊ ಋ ೠ ಎ ಏ ಐ ಒ ಓ ಔ
ಅಂ ಅಃ ಎಂಬ ಷೋಡಶಾಕ್ಷರ, ಅದಕ್ಕೆ ಸದಾಶಿವ ಅಧಿದೈವ.
ಆಜ್ಞಾಸ್ಥಾನದಲ್ಲಿ ದ್ವಿದಳದ ಪದ್ಮವಿಹುದು.
ಅದು ಮಾಣಿಕ್ಯವರ್ಣ, ಅದಕ್ಕೆ ಅಕ್ಷರ 'ಹಕ್ಷ'
ಎಂಬ ದ್ವಯಾಕ್ಷರ ಅದಕ್ಕೆ ಮಹಾಶ್ರೀಗುರು ಅಧಿದೈವ.
ಅಲ್ಲಿಂದ ಮೇಲೆ ಬ್ರಹ್ಮರಂಧ್ರಸ್ಥಾನದಲ್ಲಿ ಸಹಸ್ರದಳ ಪದ್ಮವಿಹುದು.
ಅದು ಹೇಮವರ್ಣ ಅಲ್ಲಿಗೆ ಓಂಕಾರವೆಂಬ ಅಕ್ಷರ
ಪರಂಜ್ಯೋತಿ ಪರಬ್ರಹ್ಮ ಅದು ಅನಂತಕೋಟಿ
ಸೂರ್ಯ ಪ್ರಕಾಶವಾಗಿ ಬೆಳಗುತ್ತಿಹುದು ಅಲ್ಲಿಗೆ ಅಧಿದೈವ
ಶ್ರೀಗುರು ಮೂರ್ತಿಯೇ ಕರ್ತನು.
ಇಂತೀ ಷಟ್ ಚಕ್ರಂಗಳಂ ತಿಳಿದು ಪರತತ್ವದಲ್ಲಿ ಇರಬಲ್ಲಡೆ
ಕೂಡಲಚೆನ್ನಸಂಗಯ್ಯನಲ್ಲಿ ಶರಣನೆನಿಸುವನು. || ೧೬೩ ||

೧೦೧೬

ಆನೆಂಬುದಿಲ್ಲ, ನೀನೆಂಬುದಿಲ್ಲ,
ಸ್ವಯವೆಂಬುದಿಲ್ಲ, ಪರವೆಂಬುದಿಲ್ಲ,
ಅರಿವೆಂಬುದಿಲ್ಲ, ಮರವೆಂಬುದಿಲ್ಲ,
ಒಳಗೆಂಬುದಿಲ್ಲ, ಹೊರಗೆಂಬುದಿಲ್ಲ,
ಕೂಡಲಚೆನ್ನಸಂಗಯ್ಯನೆಂಬ ಶಬ್ದ ಮುನ್ನಿಲ್ಲ! || ೧೬೪ ||

೧೦೧೭

ಆನೆಯನೇರಿದಡೇಸಯ್ಯಾ, ಮಾನವರಿಗೆ ಕೈಯಾನುವಾತ?
ಬೇಡುವು[ದ] ಬೇಡಲಾರ, ಏರಿ ಬರ್ಪ ಹೆಮ್ಮೆಯ ನೋಡಾ!
ಭವದ ಬಟ್ಟೆಯಲ್ಲಿ ಬಿದ್ದ ಬ್ರಹ್ಮಚಾರಿಯ ಕಂಡು
ಕೂಡಲಚೆನ್ನಸಂಗಯ್ಯ ನಗುತಿರ್ದ. || ೧೬೫ ||

೧೦೧೮

ಆನೆಯನೇರಿದ ಮಾವತಿಗ ಚಕ್ರೇಶ್ವರನಾಗಬಲ್ಲನೆ ಅಯ್ಯಾ?
ವೇದಾಗಮಶಾಸ್ತ್ರ ಪುರಾಣಂಗಳನೋದಿ ಕೇಳಿ,
ನಡೆ ನುಡಿ ಪೂರಾಯವಾದ ಪುರಾತನರಾಗಬಲ್ಲರೆ ಅಯ್ಯಾ?
ಅದೆಂತೆಂದಡೆ: 'ಪೂರ್ಣಶ್ಚ ಪುರಾತನಃ' ಎಂದುದಾಗಿ.
ತೊತ್ತು ಲಕ್ಷಣವಿರಲು, ನಾಣ್ಯವ ನುಡಿಸಿ,
ನವರತ್ನಾಭರಣಂಗಳ ತೊಡಿಸಿ, ದಂಡಿಗೆಯನೇರಿಸಲು
'ಶಂಕರಸ್ಯ ಯಥಾ ಗೌರೀ' ಎನಿಸಿಕೊಳ್ಳಬಲ್ಲಳೆ ಅಯ್ಯಾ?
ಖ್ಯಾತಿಗಾಗಿ ನಿಜತತ್ವಂಗಳನೋದಿ ಕೇಳಿ ಹೇಳಿದಡೇನು?
ಅದಕ್ಕೆ ತಕ್ಕ ಅರಿವು ಆಚಾರ ನಡೆನುಡಿಯಲ್ಲಿ ನಿರ್ಣಯವಿಲ್ಲದಿರ್ದಡೆ
ಕುಂಭೀಪಾತಕ ನಾಯಕನರಕ ತಪ್ಪದು–
ಕೂಡಲಚೆನ್ನಸಂಗಮದೇವಾ. ॥ ೧೬೬ ॥

೧೦೧೯

ಆಪ್ಯ ತ್ರಿವಿಧಾರ್ಪಿತವು ಲಿಂಗಮುಖವಲ್ಲಿ ಪ್ರಸಾದವಾಯಿತ್ತೆಂಬೆ.
ಅವಸರ ಅನವಸರ ಆತ್ಮಲಿಂಗಮುಖದಲ್ಲಿ
ಅರ್ಪಿತವೆರಡಾಗಿ ಪ್ರಸಾದವಾಯಿತ್ತೆಂಬೆ.
ಅವಸರ ಅನವಸರ ಉಭಯಕುಲವರಿದು ಅರ್ಪಿಸಬಲ್ಲಡೆ ಪ್ರಸಾದಿ ಎಂಬೆ.
'ಲಿಂಗಸ್ಯಾವಸರೇ ಯತ್ತು ದದ್ಯಾತ್ತತ್ಸುಖದಂ ಭವೇತ್।
ಇದು ಕಾರಣ, ಕೂಡಲಚೆನ್ನಸಂಗಯ್ಯಾ,
ಲಿಂಗಮುಖವರಿದ ಅರ್ಪಿತ ಅಪೂರ್ವ. ॥ ೧೬೭ ॥

೧೦೨೦

ಆಮಿಷ ತಾಮಸವೆಂಬ ಸಂದೇಹ ನಿಂದಿತ್ತು;
ಪುಣ್ಯ ಪಾಪವೆಂಬ ಭಯವಳಿಯಿತ್ತು;
ಇಷ್ಟ ಪ್ರಾಣವೆಂಬ ಉಭಯದ ಬೆಳಗು ಒಡಗೂಡಿತ್ತು.
ಪ್ರಭುದೇವರ ಸುಳುಹು ಕಾಣಲಾಗಿ
ಕೂಡಲಚೆನ್ನಸಂಗಮದೇವರ ಕಾಣಬಂದಿತ್ತು. ॥ ೧೬೮ ॥

೧೦೨೧

ಆಯತವಿಲ್ಲದ ಅನುಭಾವ, ಸ್ವಾಯತವಿಲ್ಲದ ಸಮಾಧಾನ,
ಸನ್ನಿಹಿತವಿಲ್ಲದ ಸಂಬಂಧವ ಏನೆನಬಹುದಯ್ಯಾ?

ಘನಮನವ ಭೇದಿಸಿ, ಆದಿಯು ಅನಾದಿಯನೊಳಕೊಂಡು
ಆಧಾರವಿಲ್ಲದ ನಿಲವು ಸಾಧ್ಯವಾಯಿತ್ತು ನೋಡಾ.
ಕೂಡಲಚೆನ್ನಸಂಗಮದೇವರ ಶರಣ ಪ್ರಭುದೇವರು
ಅಜಾತರೆಂಬ ಭೇದವೆನಗಿಂದು ತಿಳಿಯಿತ್ತು. || ೧೯ ||

೧೦೨೨

ಆಯತ ಸ್ವಾಯತ ಅನುಭಾವವ ನಾನೆತ್ತ ಬಲ್ಲೆನಯ್ಯಾ?
ಗುರುಲಿಂಗಜಂಗಮಕ್ಕೆ ಅರ್ಥಪ್ರಾಣಾಭಿಮಾನವ ಸಮರ್ಪಿಸಿ
ಅಹಂಕಾರವಳಿದಿಹ ಪುರಾತನರ ಮನೆಯಲ್ಲಿ ಭೃತ್ಯ ಭೃತ್ಯನಾಗಿಪ್ಪೆನಯ್ಯಾ
ಇದು ಕಾರಣ– ಕೂಡಲಚೆನ್ನಸಂಗಮದೇವರ ಗಣಂಗಳಲ್ಲಿದ್ದು
ಏಸುವನರಿಯೆನಯ್ಯಾ. || ೧೭೦ ||

೧೦೨೩

ಆರಂಬವ ಮಾಡಿ ಸಂಸಾರಸ್ಥಿತಿ ಕಳೆಯದಿದ್ದರೆ
ಆ ಆರಂಬವೆ ಕೇಡು.
ವ್ಯವಹಾರವ ಮಾಡಿ ಸಂಸಾರಸ್ಥಿತಿ ಕಳೆಯದಿದ್ದರೆ
ಆ ವ್ಯವಹಾರವೆ ಕೇಡು.
ಓಲಗವ ಮಾಡಿ ಸಂಸಾರಸ್ಥಿತಿ ಕಳೆಯದಿದ್ದರೆ
ಆ ಓಲಗವೆ ಕೇಡು.
ಭಕ್ತಿಯ ಮಾಡಿ ಜನನ ಮರಣ ವಿರಹಿತನಾಗದಿದ್ದರೆ
ಆ ಭಕ್ತಿಯೆ ಕೇಡು. ಕೂಡಲಚೆನ್ನಸಂಗಮದೇವಾ. || ೧೭೧ ||

೧೦೨೪

ಆರಾದಡೆಯೂ ನಿಮ್ಮ ನೆನೆವರಯ್ಯಾ, ನಾ ನಿಮ್ಮ ನೆನೆವನಲ್ಲ.
ಅದೇನು ಕಾರಣವೆಂದಡೆ: ನೆನೆವ ಎನ್ನ ಮನ ನೀವೆಯಾದಿರಾಗಿ.
ಆರಾದಡೆಯೂ ನಿಮ್ಮ ಪೂಜಿಸುವರಯ್ಯಾ, ನಾ ನಿಮ್ಮ ಪೂಜಿಸುವನಲ್ಲ.
ಅದೇನು ಕಾರಣವೆಂದಡೆ: ಎನ್ನ ತನುವಿಂಗೆ ನೀವೆ ಪೂಜೆಯಾದಿರಾಗಿ.
ಆರಾದಡೆಯೂ ನಿಮಗರ್ಪಿಸುವರಯ್ಯಾ, ನಾ ನಿಮಗರ್ಪಿಸುವನಲ್ಲ.
ಅದೇನು ಕಾರಣವೆಂದಡೆ: ಎನ್ನ ಸರ್ವಾಂಗವೂ ನಿಮಗರ್ಪಿತವಾಯಿತ್ತಾಗಿ.
ಇದು ಕಾರಣ–ಭಕ್ತದೇಹಿಕ ದೇವದೇವ ದೇಹಿಕ ಭಕ್ತನೆಂಬ ಶ್ರುತಿಯನರಿದು,
ನಿಮ್ಮ ಮುಟ್ಟಿ ಅಭಿನ್ನನಾದೆನು, ಕೂಡಲಚೆನ್ನಸಂಗಮದೇವಾ. || ೧೭೨ ||

೧೦೨೫

ಆರಿಗೆ ಮಾಡಬಹುದಯ್ಯಾ ಸದ್ಭಕ್ತಿಯೆಂಬುದನು ಬಸವಣ್ಣಂಗಲ್ಲದೆ?
ಆರಿಗೆ ತಿಳಿವುದಯ್ಯಾ ಶಿವಜ್ಞಾನದ ಸೆರಗು ಬಸವಣ್ಣಂಗಲ್ಲದೆ?
ನಿರಾಳದ ಸಿಂಹಾಸನದ ಮೇಲೆ ನಿರವಯ ಬಂದೆರಗಿದಡೆ
ಆ ನಿರಾಕಾರ ಪದಾರ್ಥವನರ್ಪಿಸಿ, ಪ್ರಸನ್ನತೆಯ ಪಡೆದ ಬಸವಣ್ಣನು!
ಸಾಕಾರಸಿಂಹಾಸನದ ಮೇಲೆ ಮೂರ್ತಿಗೊಂಡ ಸಂಗಮನಾಥ
ಮುನಿದೆದ್ದು ಹೋದಡೆ; ತನುವಿನೊಳಗೆ ತನುವಾಗಿ ಹೊಕ್ಕು
ಮನದೊಳಗೆ ಮನವಾಗಿ, ಭಾವದೊಳಗೆ ಭಾವವಾಗಿ ವೇಧಿಸಿ
ಶಿವಶರಣರ ಮನದ ಕಂದುಕತ್ತಲೆಯ ಕಳೆದು, ತನ್ನತ್ತ ತಿರುಗಿ
ಪ್ರಸನ್ನತೆವಡೆದ–ಇಂತೀ ಉಭಯ ನಿರ್ಣಯದಲ್ಲಿ
ನಿಸ್ಸೀಮನಾದ ಬಸವಣ್ಣ.
ಕೂಡಲಚೆನ್ನಸಂಗಮದೇವರ ಶರಣ ಬಸವಣ್ಣಂಗೆ
ತ್ರಿಜಗದೊಳಗೆ ಆರನೂ ಸರಿ ಕಾಣೆನು. ॥ ೧೭೩ ॥

೧೦೨೬

ಆ ಲಿಂಗವೆ ಅಮಳೋಕ್ಯವಾದ ಬಳಿಕ
ಆ ಲಿಂಗವೆ ಮುಖಸೆಜ್ಜೆಯಾದ ಬಳಿಕ
ಆ ಲಿಂಗವೆ ಭುಜಂಗನಾಗವಟ್ಟಿಗೆಯಾದ ಬಳಿಕ
ಆ ಮಹಿಮನೆ ಪ್ರಾಣನಾಥನಾದ ಬಳಿಕ, ಇದಿರಿಟ್ಟು ಕೇಳಲುಂಟೆ?
ಅಂಗಲಿಂಗಸಂಬಂಧಿ ಶಿವಶರಣರ ಅಂಘ್ರಿಯಲ್ಲಿ ಇರಿಸಾ ಎನ್ನ,
ಕೂಡಲಚೆನ್ನಸಂಗಮದೇವಾ. ॥ ೧೭೪ ॥

೧೦೨೭

ಆವಲ್ಲಿ ಸರ್ವಪ್ರಪಂಚು ನಿವೃತ್ತಿಯಾಗಿಹುದು, ಅದೀಗ ಬ್ರಹ್ಮಜ್ಞಾನ.
ಆವಲ್ಲಿ ಕೇವಲ ನಿಶ್ಚಿಂತವಾಗಿಹುದು, ಅದೀಗ ಬ್ರಹ್ಮಜ್ಞಾನ.
ಆವಲ್ಲಿ ತಾನೆಂಬ ತೋರಿಕೆ ಹುಟ್ಟದಿಹುದು, ಅದೀಗ ಬ್ರಹ್ಮಜ್ಞಾನ.
ಆವಲ್ಲಿ ಕೂಡಲಚೆನ್ನಸಂಗಯ್ಯನಲ್ಲದೆ
ಪೆರತೊಂದನರಿಯದಿಹುದು ಅದೀಗ ಬ್ರಹ್ಮಜ್ಞಾನವಯ್ಯಾ. ॥ ೧೭೫ ॥

೧೦೨೮

ಆವಾವ ಪರಿಯಲ್ಲಿ ಆವಾವ ಭಾವದಲ್ಲಿ
ಗುರುಲಿಂಗಜಂಗಮಕ್ಕೆ ದಾಸೋಹವ ಮಾಡಿಹೆನೆಂಬ, ಕೂಡಿಹೆನೆಂಬ

ಸದ್ಭಕ್ತರ ಬಾಗಿಲ ತೋರಿ ಬದುಕಿಸಯ್ಯಾ.
ಎಲ್ಲವನೊಪ್ಪಿಸಿ 'ಲಿಂಗಜಂಗಮವೆನ್ನ ಪ್ರಾಣೇಶ್ವರ' ಎಂಬ
ಮಹಾಪುರಾತನರ ಪಾದರಕ್ಷೆಯ ಹೊತ್ತಿರಿಸೆನ್ನನು
ಕೂಡಲಚೆನ್ನಸಂಗಮದೇವಾ. ‖ ೧೭೬ ‖

೧೦೨೯

ಇಂದ್ರದಳವೇರಲು ಗುಣಿಯಾಗಿಹನು.
ಅಗ್ನಿದಳವೇರಲು ಹಸಿವನು.
ಯಮದಳವೇರಲು ದುರಿತಚೇಷ್ಟಿತನಾಗಿಹನು.
ನೈಋತ್ಯದಳವೇರಲು ಕೋಪಿಸುತ್ತಿಹನು.
ವರುಣದಳವೇರಲು ನಿದ್ರೈಗೈವನು.
ವಾಯುವ್ಯದಳವೇರಲು ಸಂಚಲನಾಗಿಹನು.
ಕುಬೇರದಳವೇರಲು ಧರ್ಮಬುದ್ಧಿಯಾಗಿಹನು.
ಈಶಾನ್ಯದಳವೇರಲು ವಿಷಯಾತುರನಾಗಿಹನು.
ಮಧ್ಯಸ್ಥಾನಕ್ಕೆ ಬಂದಲ್ಲಿ ಸದ್ಭಾವಿಯಾಗಿ ಮೋಕ್ಷವ ಬಯಸುತ್ತಿಹನು.
ಇಂತೀ ಅಷ್ಟದಳಂಗಳಲ್ಲಿ ತಿರುಗುವ ಹಂಸನ ನೆಲೆಯ ಕೆಡಿಸಿ
ಸದ್ಭಾವಿಯಾಗಿರಬಲ್ಲ, ಕೂಡಲಚೆನ್ನಸಂಗಾ ನಿಮ್ಮ ಶರಣ. ‖ ೧೭೭ ‖

೧೦೩೦

ಇಡುವ ಕೊಡುವ ಬಿಡುವ ಕಟ್ಟುವ ಗೊಡವೆಗಾರನಯ್ಯಾ;
ಶರಣನು ಗಾಳಿಯ ಮರೆಯ ಜ್ಯೋತಿಯಂತೆ, ಸುಖಸೂಸದೆ ಇಪ್ಪನು.
ತನ್ನರಿವು ಮರವೆಗಳೆಲ್ಲಾ ಪ್ರಾಣಲಿಂಗಾಧೀನವಲ್ಲದೆ, ಮತ್ತೊಂದನರಿಯನು.
ಆಸರುವನಲ್ಲ ಬೇಸರುವನಲ್ಲ; ಜಗದ ಕಳಕಳಕ್ಕೆ ಎದ್ದು ಹರಿದಾಡುವನಲ್ಲ.
ಸುಖಮುದ್ರಿತನು ಕೂಡಲಚೆನ್ನಸಂಗಾ ಲಿಂಗೈಕ್ಯನು. ‖ ೧೭೮ ‖

೧೦೩೧

ಇನಿಗಬ್ಬಿನೊಳಗಿನ ತನಿರಸವನರಿಯುವೆ
ಸೋಗೆಯ ಹೊರಗಿನ ರವದಿಯ ಸವಿದು ಸಂತಸಬಡುವ ಮೋಹದಂತೆ,
ಅಂತರಂಗದ ಆತ್ಮತೀರ್ಥವನುಳಿದು
ಹೊರಗಿನ ಜಡಭೌತಿಕತೀರ್ಥವ ಬೆದಕಿ ಬೆಂಡಾಗಿ
ಹಲವೆಡೆಗೆ ಹರಿವ ನರಗುರಿಗಳು
ಕೈಸೇರಿದ ರತ್ನವನೊಗೆದು ಕಾಜಿನ ಗುಂಡನು ಕೊಂಡ

ಮರುಳನಂತಾಗಿಪ್ಪರು ನೋಡಾ!
ಆತ್ಮತೀರ್ಥಂ ಸಮುತ್ಸೃಜ್ಯ ಬಹಿಸ್ತೀರ್ಥಾಣಿ ಯೋ ವ್ರಜೇತ್।
ಕರಸ್ಥಂ ಸುಮಹಾರತ್ನಂ ತ್ಯಕ್ತ್ವಾ ಕಾಚಂ ವಿಮಾರ್ಗತೇ॥ ಎಂದುದಾಗಿ,
ಕೂಡಲಚೆನ್ನಸಂಗಮದೇವಾ,
ನಿಮ್ಮ ನಿಲವಿನ ಗುರುಲಿಂಗಜಂಗಮವೆ ಎನ್ನ ಸ್ವರೂಪವೆಂದರಿದೆನಾಗಿ
ಆ ಗುರುಲಿಂಗಜಂಗಮದ ಪಾದೋದಕವೆ
ಆತ್ಮತೀರ್ಥವಾಗಿಪ್ಪುದು ಕಾಣಾ.
ಅಂತಪ್ಪ ಆತ್ಮತೀರ್ಥವ ಪಡೆದು ಪರಮಪವಿತ್ರನಾಗಿಪ್ಪೆನು. || ೧೭೯ ||

೧೦೩೨

ಇನ್ನು ಅವಿಶ್ವಾಸದ ಲೋಕದ ಕರ್ಮಿಗಳಿಗೆ
ಯಮದೂತರೆಂಬ ದಂಡಣೆಯೆಂಬುದಂ
ಮಾಡಿದೆಯಯ್ಯಾ!
ಇದು ಕಾರಣ, ಭಕ್ತಿಯನರಿಯೆ, ಯುಕ್ತಿಯನರಿಯೆ!
ಜಂಗಮವೆ ಕೂಡಲಚೆನ್ನಸಂಗಯ್ಯನೆಂಬೆ. || ೧೮೦ ||

೧೦೩೩

ಇನ್ನು ಮುಕ್ತಿಯೆಂದು ಮನದಲ್ಲಿ ಹೊಳೆದು ಕಾಮಿಸುವನ್ನಕ್ಕ
ಪ್ರಸಾದಲಿಂಗ ಸಾಹಿತ್ಯವಾದುದಿಲ್ಲ.
ಇನ್ನು ಪರವೆಂದು ಹೊಳೆದು ಕಾಮಿಸುವನ್ನಕ್ಕ
ಜಂಗಮಲಿಂಗ ಸಾಹಿತ್ಯವಾದುದಿಲ್ಲ.
ಇನ್ನು ಲಿಂಗವ ಬೆರಸೇನೆಂದು ಮನದಲ್ಲಿ ಹೊಳೆದು ಕಾಮಿಸುವನ್ನಕ್ಕ
ಶಿವಲಿಂಗವು ಸಾಹಿತ್ಯವಾದುದಿಲ್ಲ.
ಇನ್ನು ವಿಶೇಷತ್ವವುಂಟೆಂದು ಮನದಲ್ಲಿ ಹೊಳೆದು ಕಾಮಿಸುವನ್ನಕ್ಕ
ಶ್ರೀಗುರುಲಿಂಗವು ಸಾಹಿತ್ಯವಾದುದಿಲ್ಲ.
ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ
ಈ ಚತುರ್ವಿಧವು ಏಕೀಭವಿಸಿ ಮಹಾಲಿಂಗವಾದ ಮಹಾಮಹಿಮಂಗೆ
ಇನ್ನು ಕಾಮಿಸಲಿಲ್ಲ ಕಲ್ಪಿಸಲಿಲ್ಲ ಭಾವಿಸಲಿಲ್ಲ ಚಿಂತಿಸಲಿಲ್ಲ.
ಆತ ನಿಶ್ಚಿಂತ ಪರಮಸುಖಿ ಪರಿಣಾಮಿ, ಆತನಿದ್ದುದೆ ಕೈಲಾಸ,
ಆತ ಸರ್ವಾಂಗಲಿಂಗಿ, ಕೂಡಲಚೆನ್ನಸಂಗಯ್ಯಾ. || ೧೮೧ ||

೧೦೩೪

ಇಲ್ಲದ ಮಾಯೆಯನುಂಟುಮಾಡಿಕೊಂಡು
ಬಲ್ಲತನಕ್ಕೆ ಬಾಯ ಬಿಡಲೇತಕೊ?
ಇಲ್ಲದ ಮಾಯೆಯ ಇಲ್ಲೆನಲರಿಯದೆ
ತಲ್ಲಣಿಸಿ ಬಾಯ ಬಿಡಲೇತಕೊ?
ಎಲ್ಲವ, ತನ್ನ ತಾ ತಿಳಿದು ನೋಡಿದಡೆ
ಕೂಡಲಚೆನ್ನಸಂಗಯ್ಯ ತಾನೆ ಬೇರಿಲ್ಲ. ॥ ೧೮೨ ॥

೧೦೩೫

ಇಲ್ಲದ ಸಂಸಾರ ಕಣ್ಣ ಮುಂದೆ ರೂಪಾಗಿ ಕಾಡುತ್ತಿರ್ದಡೆ,
ಸುಜ್ಞಾನವೆಂಬ ಅಂಜನವಹಚ್ಚಿ,
ಸಕಲಭ್ರಮೆಯೆಂಬ ಕತ್ತಲೆಯ ಕಳೆದು,
ನಿಜಲಿಂಗಸಂಬಂಧವ ನೆಲೆಗೊಳಿಸಿ, ನಿತ್ಯದಲ್ಲಿ ಅಚ್ಚೊತ್ತಿದನಾಗಿ,
ಕೂಡಲಚೆನ್ನಸಂಗಯ್ಯನಲ್ಲಿ ಪ್ರಭುವಿನ ಶ್ರೀಪಾದಕ್ಕೆ
ನಮೋ ನಮೋ ಎಂಬೆನು. ॥ ೧೮೩ ॥

೧೦೩೬

ಇಲ್ಲೆಂಬುದನಿಲ್ಲೆನಬಲ್ಲಡೆ ಅರ್ಪಿತ.
ಉಂಟೆಂಬುದನುಂಟೆನಬಲ್ಲಡೆ ಪ್ರಸಾದ.
ಆ ಪ್ರಸಾದವ ತಾನಿಲ್ಲದೆ ಕೊಳಬಲ್ಲಡೆ ಪ್ರಸಾದಿ.
ಆ ಪ್ರಸಾದಿಯ ಪರಮ ಪರಿಣಾಮವೆ ಮಹಾಪ್ರಸಾದವಾಗಿ,
ಆ ಮಹಾಪ್ರಸಾದವೆ ತಾನಾಗಿ ಬೆಳಗುತಿಪ್ಪನಯ್ಯಾ
ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೧೮೪ ॥

೧೦೩೭

ಇಷ್ಟಲಿಂಗ ಪ್ರಾಣಲಿಂಗವೆಂದೆಂಬಿರಿ,
ಇಷ್ಟಲಿಂಗವಾವುದು ಪ್ರಾಣಲಿಂಗವಾವುದು ಬಲ್ಲರೆ ನೀವು ಹೇಳಿರೆ?
ಇಷ್ಟಲಿಂಗವೆಂಬುದು ದರ್ಪಣ, ಪ್ರಾಣಲಿಂಗವೆಂಬುದು ಪ್ರತಿಬಿಂಬ.
ದರ್ಪಣ ಮಸುಳಿಸಿದಡೆ ಪ್ರತಿಬಿಂಬವ ಕಾಣಬಹುದೆ? ಬಾರದು.
ಇಷ್ಟಲಿಂಗಪೂಜೆ ಮಸುಳಿಸಿದಡೆ, ಪ್ರಾಣಲಿಂಗವ ಕಾಣಬಹುದೆ? [ಬಾರದು].
"ಇಷ್ಟಲಿಂಗಮವಿಶ್ವಸ್ಯ ಪ್ರಾಣಲಿಂಗಂ ನ ಪಶ್ಯತಿ।
ದರ್ಪಣ ಪ್ರತಿಬಿಂಬಸ್ತು ಯಥಾರೂಪಂ ತಥಾ ಭವೇತ್॥"

ಇದು ಕಾರಣ– ಕೂಡಲಚೆನ್ನಸಂಗಮದೇವಾ,
ಇಷ್ಟದಲ್ಲಿ ಪ್ರಾಣತೃಪ್ತಿಯಾದವರ ತೋರಿ ಬದುಕಿಸಯ್ಯಾ. ॥ ೧೮೫ ॥

೧೦೩೮

ಇಷ್ಟಲಿಂಗ ಪೂಜಕರೆಲ್ಲ ದೃಷ್ಟಲಿಂಗವನೆತ್ತ ಬಲ್ಲರೊ?
ಜಂಗಮವೆ ಲಿಂಗವೆಂಬುದನು ಭವಭಾರಿಗಳೆತ್ತ ಬಲ್ಲರೊ?
ಕೂಡಲಚೆನ್ನಸಂಗಯ್ಯನಲ್ಲಿ, ಮಹಾಪ್ರಸಾದಿ ಬಸವಣ್ಣ ಬಲ್ಲ. ॥ ೧೮೬ ॥

೧೦೩೯

ಇಷ್ಟಲಿಂಗಮುಖದಲ್ಲಿ ಶರೀರವರ್ಪಿತ,
ಪ್ರಾಣಲಿಂಗಮುಖದಲ್ಲಿ ಮನವರ್ಪಿತ,
ಭಾವಲಿಂಗಮುಖದಲ್ಲಿ ಪ್ರಾಣವರ್ಪಿತ.–
ಇಂತೀ ತ್ರಿವಿಧಾರ್ಪಣವಾದಡೆ,
ಮಹಾಘನಲಿಂಗದಲ್ಲಿ ಸಮರಸೈಕ್ಯ,
ಕೂಡಲಚೆನ್ನಸಂಗಮದೇವಾ. ॥ ೧೮೭ ॥

೧೦೪೦

ಇಷ್ಟಲಿಂಗ ಸಂಬಂಧವಾದ ಬಳಿಕ ಕಾಯಗುಣ ಕೆಟ್ಟು ಲಿಂಗವಾಯಿತ್ತು.
ಪ್ರಾಣಲಿಂಗ ಸಂಬಂಧವಾದ ಬಳಿಕ ಕರಣಗುಣ ಕೆಟ್ಟು ಲಿಂಗಕರಣಂಗಳಾದುವು.
ಭಾವಲಿಂಗ ಸಂಬಂಧವಾದ ಬಳಿಕ ಇಂದ್ರಿಯಗುಣ ಕೆಟ್ಟು ಲಿಂಗೇಂದ್ರಿಯಗಳಾದುವು.
ಇದು ಕಾರಣ–ಶರಣಂಗೆ ಬೇರೆ ಲಿಂಗವಿಲ್ಲ, ಬೇರೆ ಅಂಗವಿಲ್ಲ.
ಅರ್ಪಿತ ಅನರ್ಪಿತವೆಂಬ ಉಭಯ ಶಂಕೆ ಹಿಂಗಿತ್ತು,
ಕೂಡಲಚೆನ್ನಸಂಗಯ್ಯಾ ನಿನ್ನೊಳಡಗಿದ ನಿಜೈಕ್ಯಂಗೆ. ॥ ೧೮೮ ॥

೧೦೪೧

ಈ ಆರು ಸಹಿತ ಆಚಾರ,
ಆಚಾರಸಹಿತ ಗುರು, ಗುರುಸಹಿತ ಲಿಂಗ, ಲಿಂಗಸಹಿತ ಜಂಗಮ,
ಜಂಗಮಸಹಿತ ಪ್ರಸಾದ, ಪ್ರಸಾದಸಹಿತ ಮಹಾಲಿಂಗ.
ಇಂತೀ ಎಲ್ಲ ಸ್ಥಲಂಗಳು ತಾನಾಗಬಲ್ಲಡೆ,
ಕೂಡಲಚೆನ್ನಸಂಗಾ ಲಿಂಗೈಕ್ಯವು. ॥ ೧೮೯ ॥

೧೦೪೨

ಈರೇಳುಭುವನವನು ಒಡಲೊಳಗೆ ಇಂಬಿಟ್ಟುಕೊಂಡು
ಲಿಂಗರೂಪಾಗಿ ಭಕ್ತನ ಕರಸ್ಥಲಕ್ಕೆ ಬಂದು ಪೂಜೆಗೊಂಡಿತ್ತು ನೋಡಾ!
ಅಂತಹ ಅಗಮ್ಯ ಅಗೋಚರ ಲಿಂಗವೆಂದರಿದು
ಭಕ್ತನು ತಾನು ಹಿಂದೆ ನಡೆದ ಜೂಜು ಬೇಂಟೆ ಚದುರಂಗ
ಲೆತ್ತ ಪೊಗಡೆಯಾಟಂಗಳಂ ಪರಿಹಾಸಕರ ಕೂಡಿಕೊಂಡು
ಕೆಲದಾಡುವದಂ ಬಿಟ್ಟು ಬಂಧುವತೊರೆದು ಮುಂದೆ ಶಿವಪಥದಲ್ಲಿ
ನಡೆಯಬಲ್ಲಾತನೇ ಸದ್ಭಕ್ತನಲ್ಲದೆ,
ಹಣದಾಸೆಗೆ ಹಂಗಿಗನಾಗಿ ಗುಣದಾಸೆಗೆ ಅಮೇಧ್ಯವ ತಿಂದು
ಬಂಧುಗಳ ತಿಂದು ಭಕ್ತಿಯಿಲ್ಲವೇ ಉಂಟೇ ಎಂಬ
ಪಂಚಮಹಾಪಾತಕರ ಮುಖವ ನೋಡಲಾಗದು
ಅವರ ಮಾತ ಕೇಳಲಾಗದು,
ಅದೆಂತೆಂದಡೆ:
ಕತ್ತೆ ಭಕ್ತನಾದರೆ ಕಿಸುಕುಳವ ತಿಂಬುದು ಮಾಂಬುದೆ?
ಬೆಕ್ಕು ಭಕ್ತನಾದರೆ ಇಲಿಯ ತಿಂಬುದು ಮಾಂಬುದೆ?
ಹಂದಿ ಭಕ್ತನಾದರೆ ಹಡಿಕೆಯ ತಿಂಬುದು ಮಾಂಬುದೆ?
ಶುನಕ ಭಕ್ತನಾದರೆ ಮೂಳೆ ಮಾಂಸವ ತಿಂಬುವ ಮಾಂಬುವೆ?
ಕೋಳಿಯ ತಂದು ಪಂಜರವ ಕೂಡಿ
ಅಮೃತಾನ್ನವನಿಕ್ಕಿ ಸಲಹಿದರೆ
ಅದು ತಾನೆ ಮತ್ತೆ ತಿಂಬ ಹಡುವಿಂಗೆ
ಚಿತ್ತವನಿಕ್ಕುದುಂ ಮಾಂಬುದೆ?
ಇಂತೀ ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ
ಅನಾಚಾರವ ಬಿಟ್ಟು ಸದಾಚಾರದಲ್ಲಿ ನಡೆಯಬೇಕು.
ಗುರುವಾದಡೂ ಆಗಲಿ ಭಕ್ತನಾದಡೂ ಆಗಲಿ
ತಾನು ಹಿಂದೆ ಭವಿಯಾಗಿದ್ದಾಗ ಭುಂಜಿಸುತ್ತಿದ್ದ
ಸುರೆ ಮಾಂಸ ಭಂಗಿ ಭವಿಸಂಗ ಭವಿಪಾಕ
ಇಂತಿವ ಬಿಡದಿರ್ದವರುಗಳು
ಆ ಕತ್ತೆ ಬೆಕ್ಕು ಸೂಕರ ಸೊಣಗ
ಕೋಳಿಗಿಂದತ್ತತ್ತ ಕಡೆ ನೋಡಿರೇ.
ಚಿನ್ನದ ಬೆಟ್ಟವನೇರಿದವನು ಕಣ್ಣುಕಾಣದಿಪ್ಪಂತೆ
ಗಣೆಯನೇರಿದ ಡೊಂಬ ಪೈಮರವಿಪ್ಪಂತೆ

ನಡುನೀರಿಗೆ ಹೋದ ಪರಗೋಲು ತಲೆ ಕೆಳಗಾದಂತೆ ಕಾಣಾ
ಕೂಡಲಚೆನ್ನಸಂಗಮದೇವಾ. ॥ ೧೯೦ ॥

೧೦೪೩

ಉಂಟೆಂಬುದ ಬಸವಣ್ಣ ಕೊಂಡ, ಇಲ್ಲೆಂಬುದನಲ್ಲಮ ಕೊಂಡ,
ಇನ್ನಾರಸಹುದೆಂಬೆನು? ಇನ್ನಾರನಲ್ಲೆಂಬೆನು?
ಇವರಿಬ್ಬರು ಛಲಕ್ಕೆ ಸಂಪನ್ನರಲ್ಲದೆ, ಲಿಂಗಸಂಪನ್ನರ ಕಾಣೆ
ಕೂಡಲಚೆನ್ನಸಂಗಮದೇವಾ. ॥ ೧೯೧ ॥

೧೦೪೪

ಉಂಬುದು ಉಡುವುದು ಶಿವಾಚಾರ,
ಕೊಂಬುದು ಕೊಡುವುದು ಕುಲಾಚಾರ ಎಂಬ
ಅನಾಚಾರಿಯ ಮಾತ ಕೇಳಲಾಗದು.
ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರ ಒಂದೆ ಎಂದು
ಕೊಟ್ಟು ಕೊಂಬುದು ಸದಾಚಾರ, ಉಳಿದುವೆಲ್ಲ ಅನಾಚಾರ.
ಅದೆಂತೆಂದಡೆ:
ಸ್ಫಟಿಕದ ಕೊಡದಲ್ಲಿ ಕಾಳಿಕೆಯನರಸುವ ಹಾಗೆ,
ಸಿಹಿಯೊಳಗೆ ಕಹಿಯನರಸುವ ಹಾಗೆ,
ರಜಸ್ಸೂತಕ ಕುಲಸೂತಕ ಜನನಸೂತಕ ಪ್ರೇತಸೂತಕ ಉಚ್ಛಿಷ್ಟಸೂತಕ ಎಂಬವಡೆ,
ಆತಂಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ ತೀರ್ಥಪ್ರಸಾದವಿಲ್ಲ.
ಇಂತೀ ಪಂಚಸೂತಕವ ಕಳೆದಲ್ಲದೆ ಭಕ್ತನಾಗ.
ಇಂತಹ ಭಕ್ತರಲ್ಲಿ ಕೊಟ್ಟು ಕೊಂಬುದು ಸದಾಚಾರ–
ಕೂಡಲಚೆನ್ನಸಂಗಮದೇವಾ. ॥ ೧೯೨ ॥

೧೦೪೫

ಉಚ್ಛಿಷ್ಟದ ಉದಕದೊಳಗೆ ಚಂದ್ರಮನ ನೆಳಲಿದ್ದಡೇನು,
ಅಲ್ಲಿ ಚಂದ್ರಮನಿದ್ದಾತನೆ?
ಸಂಸಾರದ ವ್ಯಾಪ್ತಿಯಲ್ಲಿ ಶರಣನ ಕಾಯವಿರ್ದಡೇನು,
ಅಲ್ಲಿ ಶರಣನಿದ್ದಾತನೆ?
ಕೆಸರೊಳಗಣ ತಾವರೆಯಂತೆ, ಮರದೊಳಗಣ ಬಯಲಿನಂತೆ.
ಮಮ ಸಾಹಿತ್ಯರೂಪೇಣ ತಮೋಮಾಯೇ ವಿವರ್ಜಯೇತ್
ಮೇಘದುರ್ಮಲತೋಯಸ್ಥಂ ಕಮಲ ಪತ್ರಮಿವಾಚರೇತ್॥
ಇಂತೆಂದುದಾಗಿ, ಇದ್ದೂ ಇರನು,

ಇದು ಕಾರಣ ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣನು ಉಂಡುಪವಾಸಿ ಬಳಸಿ ಬ್ರಹ್ಮಚಾರಿ. ॥ ೧೯೩ ॥

೧೦೪೬

ಉಚ್ಚೆಯ ಬಚ್ಚಲ ಶೋಧಿಸುವವರಿಗೆ
ಚಿಲುಮೆಯ ಆಯತವೇಕೊ?
ಸತಿಯರ ನರಮಾಂಸವ ಭುಂಜಿಸುವವರಿಗೆ
ಪರಪಾಕವರ್ಜಿತವೆಂದು ಸ್ವಯಂಪಾಕವೇಕೊ?
ಅಷ್ಟೋತ್ತರಶತ ವೇದವ ಓದುವವರಿಗೆ
ಅಚ್ಚಪ್ರಸಾದವೇಕೊ?
ಇಂತೀ ತ್ರಿವಿಧ ಡಂಬಿನ ಭಕ್ತಿಗೆ ಊರ ಮುಂದಣ ಡೊಂಬನೆ ಸಾಕ್ಷಿ
ಕೂಡಲಚೆನ್ನಸಂಗಮದೇವಾ. ॥ ೧೯೪ ॥

೧೦೪೭

ಉಟ್ಟುದನಳಿದು ಬತ್ತಲೆಯಿದ್ದಡೇನು?
ಆಶನವರತು ವ್ಯಸನ ನಿಂದು ವ್ಯಾಪ್ತಿಗಳು ತಲ್ಲೀಯವಾಗಿದ್ದಡೇನು?
ಮುಟ್ಟಬಾರದ ಠಾವ ಮರೆಗೊಂಡಿಪ್ಪನು,
ಕೂಡಲಚೆನ್ನಸಂಗಮದೇವನು. ॥ ೧೯೫ ॥

೧೦೪೮

ಉದಕದಂತೆ ಕರ್ತೃವಿಲ್ಲಾಗಿ ಕರ್ಮವಿಲ್ಲ, ಕರ್ಮವಿಲ್ಲಾಗಿ ಜನನವಿಲ್ಲ,
ಜನನವಿಲ್ಲಾಗಿ ಭೂತಾದಿ ಚರಿತ್ರ ಕರಣಾದಿ ಗುಣಂಗಳು ಮುನ್ನವೆ ಇಲ್ಲ.
ಹಿಂದಣ ಜನನವಿಲ್ಲ, ಇಂದಿನ ಸ್ಥಿತಿಯಿಲ್ಲ, ಮುಂದಣ ಲಯವಿಲ್ಲ,
ಆದಿ ಮಧ್ಯ ಅವಸಾನವಿಲ್ಲ, ಬಿಚ್ಚಿ ಬೇರಿಲ್ಲ, ಬೆರಸಿ ಒಂದಿಲ್ಲ.
ಉಪಮಾತೀತ ಕೂಡಲಚೆನ್ನಸಂಗಾ ನಿಮ್ಮ ಶರಣನು. ॥ ೧೯೬ ॥

೧೦೪೯

ಉದಕದೊಳಗಣ ವಿಕಾರ ಪವನನಿಂದಲ್ಲದೆ,
ಉದಕ ಸಹಜಬೀಜವೆಂದರಿಯಬಹುದೆ?
ದೇಹ ಪ್ರಪಂಚಂಗಳು ವಾಯುವಿಂದಲ್ಲದೆ,
ದೇಹದಲ್ಲಿ ಬೇರೊಂದು ಗುಣವನರಸುವರೆ?
ಮಂಜಿನ ಗುರಿಯು ಬಿಸಿಲ ಅಂಬಿನಲ್ಲಿ ಎಚ್ಚಡೆ, ಕರ ಹೊಸತಾಯಿತ್ತಲ್ಲಾ!
ಸಹಜದ ನಿಲವು ಜೀವ ಪರಮಾತ್ಮನೆಂಬ ಎರಡನು ನುಡಿಯಬಲ್ಲುದೆ.

ಬೇರೆ ನೆನೆವ ಮನ ತಾನೆಯಾಗಿ ತೆರಹಿಲ್ಲದ ಘನ.
ಗಗನದ ಸೂರ್ಯ ಜಲದಲ್ಲಿ ತೋರುವಂತೆ,
ಹಲವು ರವಿಯೆಂದು ಮತ್ತೆಣಿಸಲುಂಟೆ?
ಒಳಹೊರಗು ಎಂದೆನ್ನದೆ ಮುಟ್ಟಿಯೂ,
ಮುಟ್ಟದಿಪ್ಪ, ಬಯಲೊಳಡಗಿದ ನಿರಾಳವನು
ಕೇಳುವ ಕೀರುತಿಯಲ್ಲ ನೋಡುವ ಮೂರುತಿಯಲ್ಲ
ಪರಿಪೂರ್ಣ ಪರಂಜ್ಯೋತಿ ನಿರ್ಗುಣ ಮಹಿಮ.
ಭಾವವಿಲ್ಲದ ಶಬ್ದವನು ಕೇಳಬಲ್ಲವನೊಬ್ಬನೆ,
ಕೂಡಲಚೆನ್ನಸಂಗಮದೇವರಲ್ಲಿ ಪ್ರಭುವೆ ನೀನೆ ಬಲ್ಲೆ. ॥ ೧೯೭ ॥

೧೦೫೦

ಉದಯ ಮಧ್ಯಾಹ್ನ ಅಸ್ತಮಾನ–ತ್ರಿಕಾಲದಲ್ಲಿ
ಪತ್ರೆ ಪುಷ್ಪ ಅಗ್ಘಣಿಯ ತಂದು ಮಜ್ಜನಕ್ಕೆ ನೀಡೆಹೆನೆಂದಡೆ
ನೆನೆಯದು, ಬಲಿಯದು, ಗರಿಗಟ್ಟದಯ್ಯಾ.
ನೀರ ತೋರಿದಡೆ ಒಂದು ಹನಿಯನೂ ಮುಟ್ಟದು.
ನಿಮ್ಮ ಲಿಂಗದ ಪೂಜೆ ನಮ್ಮ ಜಂಗಮದ ಉದಾಸೀನ–
ಇದ ಕಂಡು ನಾ ಬೆರಗಾದೆ, ಕೂಡಲಚೆನ್ನಸಂಗಮದೇವಾ. ॥ ೧೯೮ ॥

೧೦೫೧

ಉದಯ ಮಧ್ಯಾಹ್ನ ಅಸ್ತಮಾನವೆಂಬ ತ್ರಿಕಾಲದಲ್ಲಿ
ಪ್ರಾಣಲಿಂಗಕ್ಕೆ ಮಜ್ಜನಕ್ಕೆರೆಯಬೇಕೆಂಬರು.
ಉದಯವಾವುದು? ಮಧ್ಯಾಹ್ನವಾವುದು? ಅಸ್ತಮಾನವಾವುದು?
ಬಲ್ಲವರು ನೀವು ಹೇಳಿರೆ.
ಕಾಯದ ಉದಯವೊ? ಕಾಯದ ಮಧ್ಯಾಹ್ನವೊ? ಕಾಯದ ಅಸ್ತಮಾನವೊ?
ಕಾಯದ ಉದಯ ಬಲ್ಲಾತ ಕರ್ಮಿ, ಕಾಯದ ಮಧ್ಯಾಹ್ನವ ಬಲ್ಲಾತ ಪ್ರಪಂಚಿ,
ಕಾಯದ ಅಸ್ತಮಾನವ ಬಲ್ಲಾತ ವಿರಕ್ತ.
ಜೀವದ ಉದಯವೊ? ಜೀವದ ಮಧ್ಯಾಹ್ನವೊ? ಜೀವದ ಅಸ್ತಮಾನವೊ?
ಜೀವದ ಉದಯವ ಬಲ್ಲಾತ ಜ್ಞಾನಿ,
ಜೀವದ ಮಧ್ಯಾಹ್ನವ ಬಲ್ಲಾತ ಜಾತಿಸ್ಮರ,
ಜೀವದ ಅಸ್ತಮಾನ ಬಲ್ಲಾತ ಜೀವನ್ಮುಕ್ತ.
ಲಿಂಗದ ಉದಯ, ಲಿಂಗದ ಮಧ್ಯಾಹ್ನ, ಲಿಂಗದ ಅಸ್ತಮಾನ–
ಇಂತೀ ತ್ರಿಕಾಲದಲ್ಲಿ ಪ್ರಾಣಲಿಂಗಕ್ಕೆ ಮಜ್ಜನಕ್ಕೆರೆಯಬಲ್ಲಡೆ

ಕೂಡಲಚೆನ್ನಸಂಗಮದೇವರಲ್ಲಿ
ಆತನು ಅನವರತ ಲಿಂಗಾರ್ಚನಾಪರನು. ॥ ೧೯೯ ॥

೧೦೫೨

ಉದಯ ಮಧ್ಯಾಹ್ನ ಸಂಧ್ಯಾಕಾಲವ ನೋಡಿ,
ಮಾಡುವ ಕರ್ಮಿ ನೀ ಕೇಳಾ.
ಉದಯವೆಂದೇನೊ ಶರಣಂಗೆ? ಅಸ್ತಮಾನವೆಂದೇನೊ ಶರಣಂಗೆ?
ಮಹಾಮೇರುವಿನ ಮರೆಯಲ್ಲಿರ್ದು
ತಮ್ಮ ನೆಳಲನರಸುವ ಭಾವಭ್ರಮಿತರ ಮೆಚ್ಚ
ನಮ್ಮ ಕೂಡಲಚೆನ್ನಸಂಗಮದೇವ. ॥ ೨೦೦ ॥

೧೦೫೩

ಉದಯಾಸ್ತಮಾನವೆಂಬ ಕೊಳಗದಲ್ಲಿ, ಆಯುಷ್ಯವೆಂಬ ರಾಸಿಯನಳೆವರು
ರಾಸಿ ತೀರದ ಮುನ್ನ ಸಟೆಯ ಸಡಗರ ಬಿಟ್ಟು
ಶಿವಲಿಂಗಾರ್ಚನೆಯ ಮಾಡುವುದು.
ಕೂಡಲಚೆನ್ನಸಂಗಯ್ಯಾ, ಇದ ಮಾಡದಿರ್ದಡೆ
ನಾಯಕನರಕ. ॥ ೨೦೧ ॥

೧೦೫೪

ಉದಾಸೀನವ ಮಾಡಿದ ಭಕ್ತರಮಂದಿರದಲ್ಲಿ ಹೊಕ್ಕು
ಲಿಂಗಾರ್ಚನೆಯ ಮಾಡುವ ಜಂಗಮದ ಪರಿಯಾಯವೆಂತೆಂದಡೆ:
ಆ ಭಕ್ತನಗೃಹದಲ್ಲಿ ಕರ್ತನಾಗಿ ನಿಂದು
ಭಾಂಡಭಾಜನಂಗಳ ಮುಟ್ಟಿಸೇವೆಯ ಮಾಡುವ ಆ ಭಕ್ತನ ಸತಿಸುತಮಾತೆ
ಸಹೋದರ ಬಂಧುಜನ ಭೃತ್ಯ ದಾಸಿಯರು ಮೊದಲಾದ ಸರ್ವರೂ
ಲಿಂಗಾರ್ಚಕ ಶ್ರೇಷ್ಠರು
ಪಾದೋದಕ ಪ್ರಸಾದ ವಿಶ್ವಾಸ ಭಕ್ತಿಯುಕ್ತರೆಂಬುದ ನರಿದು
ಅಂದಂದಿಂಗವರ ಹೊಂದಿ
ಮುಂದುಗೊಂಡಿರ್ಪ ತಾಮಸಗಳನ್ನು ಹಿಂದುಗಳವುತ್ತ
ಸತ್ಯ ಭಕ್ತಿಯನು ಮುಂದುಗೊಳಿಸುತ್ತ
ಆ ಭಕ್ತಿಮುಖದಿ ಬಂದ ಪದಾರ್ಥವ ಪ್ರಸಾದವೆಂದೇ ಕಂಡು ಕೈಕೊಂಡು
ಲಿಂಗಾರ್ಪಿತ ಘನಪ್ರಸಾದಭೋಗಿಯಾಗಿ

ತನ್ನ ಒಕ್ಕುದ ಮಿಕ್ಕುದನಾ ಭಕ್ತಜನಕಿಕ್ಕಿ
ತನ್ನಲ್ಲಿ ಒಡಗೂಡಿಕೊಂಡು ಸಲುಹಬಲ್ಲ ಜಂಗಮವೇ ಜಗತ್‌ಪಾವನ.
ಇನಿತಲ್ಲದೆ ಅವರು ನಡೆದಂತೆ ನಡೆಯಲಿ, ಅವರು ಕೊಂಡ ಕಾರಣ ನಮಗೇಕೆಂದು
ಆ ಭಕ್ತಜನಂಗಳಲ್ಲಿ ಹೊದ್ದಿರ್ದ ತಾಮಸಂಗಳನು ಪರಿಹರಿಸದೆ
ತನ್ನ ಒಡಲುಕಕ್ಕುಲತೆಗೆ ಉಪಾಧಿಯ ನುಡಿದು
ತಮ್ಮ ಒಡಲ ಹೊರೆವ ದರುಶನ ಜಂಗುಳಿಗಳೆಲ್ಲರೂ ಜಂಗಮಸ್ಥಲಕ್ಕೆ ಸಲ್ಲರು.
ಅದೆಂತೆಂದೊಡೆ:
ತಾಮಸಂ ಭಕ್ತಗೇಹಾನಾಂ ಶ್ವಾನಮಾಂಸ ಸಮಂ ಭವೇತ್
ಇತಿ ಸಂಕಲ್ಪಭುಂಜಂತಿ ತೇ ಜಂಗಮಂ ಬಹಿರ್ನರಃ
ಸ್ವಾಪಿಂಡಂ ಕುರುತೇಯೇನ ಲಾಂಗೂಲಜಾಲನಂ ಯಥಾ.
ಉಪಾಧಿಜಗಮಂ ಯಸ್ಯಾ ತಸ್ಯ ಜೀವೇಶ್ಚ ಗಚ್ಛಯೇತ್
ಇಂತೆಂದುದಾಗಿ
ಇದು ಕಾರಣ ತಾಮಸವಿಡಿದು ಮಾಡುವಾತ ಭಕ್ತನಲ್ಲ.
ಆ ತಾಮಸ ಮುಖದಿಂದ ಮಾನೋಚ್ಛಿಷ್ಠವ ಕೊಂಡಾತ ಜಂಗಮವಲ್ಲ
ಅವರೀರ್ವರನ್ನು ಕೂಡಲಚೆನ್ನಸಂಗಯ್ಯ
ಇಪ್ಪತ್ತೆಂಟುಕೋಟಿ ನರಕದಲ್ಲಿಕ್ಕುವ. ॥ ೨೦೨ ॥

೧೦೫೫

ಉನ್ಮನಿಯ ಲೌಕಿಕದನುಸಂಧಾನವ ಪರಿಹರಿಸಲ್ಕೆ,
ತನುವಿನ ಕೊರತೆಯು ಕಳೆಯಲ್ಕೆ
ಸ್ಥಾವರವಾಯಿತ್ತು,
ಮನದ ಕೊರತೆಯು ಕಳೆಯಲ್ಕೆ
ಜಂಗಮವಾಯಿತ್ತು.
'ಸ್ಥಾವರಂ ಜಂಗಮಶ್ಚೈವ ದ್ವಿವಿಧಂ ಲಿಂಗಮುಚ್ಯತೇ'
ಇಂತೆಂಬ ವಚನವು ಕೂಡಲಚೆನ್ನಸಂಗಯ್ಯನಲ್ಲಿ
ಸಮಯಾಚಾರಿಗಲ್ಲವೆ ಎಲ್ಲರಿಗೆಲ್ಲಿಯದೊ? ॥ ೨೦೩ ॥

೧೦೫೬

ಉಪದೇಶವ ಮಾಡುವ ಗುರು ಒಬ್ಬನಲ್ಲವೆ ಇಬ್ಬರು ಸಾಲದು ನೋಡಾ.
ಉಪದೇಶವ ಮಾಡುವ ಗುರು ಒಂದಾದಲ್ಲಿ ಲಿಂಗ ಒಂದು,
ಲಿಂಗ ಒಂದಾದಲ್ಲಿ ದೀಕ್ಷೆ ಒಂದು, ದೀಕ್ಷೆ ಒಂದಾದಲ್ಲಿ ಪ್ರಸಾದ ಒಂದು,
ಪ್ರಸಾದ ಒಂದಾದಲ್ಲಿ ಭಕ್ತಿ ಒಂದು, ಭಕ್ತಿ ಒಂದಾದಲ್ಲಿ ಮುಕ್ತಿ ಒಂದು,

ಅದೆಂತೆಂದಡೆ:
ಗುರುಮೇಕಂ ಲಿಂಗಮೇಕಂ ದೀಕ್ಷಾಮೇಕಂ ಪ್ರಸಾದಕಂ
ಏಕಮುಕ್ತಿಮಿದಂ ದೇವಿ ವಿಶೇಷಂ ಶುದ್ಧಭಕ್ತಿಮಾನ್
ದ್ವಯೋರ್ಗುರು ದ್ವಯೋರ್ಲಿಂಗ ದ್ವಯೋದೀಕ್ಷ ಪ್ರಸಾದಯೋ
ಯಥಾದ್ವಯಮಿದಂ ದೇವಿ ವಿಶೇಷಂ ಪಾತಕಂ ಭವೇತ್
ಎಂದುದಾಗಿ ಗುರುವೆರಡಾದಲ್ಲಿ ಲಿಂಗವೆರಡು
ಲಿಂಗವೆರಡಾದಲ್ಲಿ ದೀಕ್ಷೆ ಎರಡು
ದೀಕ್ಷೆ ಎರಡಾದಲ್ಲಿ ಭಕ್ತಿ ಎರಡು
ಭಕ್ತಿ ಎರಡಾದಲ್ಲಿ ಮುಕ್ತಿದೂರ ನೋಡ.
ಇಂತೀ ಮುಕ್ತಿದೂರರಿಗೆ ಮುಂದೆ ನರಕ ತಪ್ಪದು ನೋಡಾ.
ಇದು ಕಾರಣ ತನ್ನ ಸತಿ–ಸುತ
ಪಿತ ಮಾತೆ ಸಹೋದರ
ಭೃತ್ಯ ದಾಸಿಯರಿಗುಪದೇಶವ ಮಾಡುವ ಗುರು ಒಬ್ಬನಲ್ಲದೆ
ಇಬ್ಬರು ಸಲ್ಲದು ನೋಡಾ. ಅದೆಂತೆಂದಡೆ:
ಪತಿಪತ್ನಿ ಭ್ರಾತೃ ಪುತ್ರಶ್ಚ ದಾಸಿ ಗ್ರಹಚರಾದಿನಾಂ ।
ಏಕದೀಕ್ಷ ಭವೇಸಿದ್ದೇವಿ ವಿಶೇಷಂತು ಶುದ್ಧಭಕ್ತಿಮಾನ್ ॥
ಎಂದುದಾಗಿ, ಒಂದು ಮನೆಗೆ ಗುರುಲಿಂಗವ ಎರಡು ಮಾಡಿಕೊಂಡು ನಡೆದಡೆ
ಕೂಡಲಚೆನ್ನಸಂಗಯ್ಯ ಅಘೋರ ನರಕದಲ್ಲಿಕ್ಕುವನು. ॥ ೨೦೪ ॥

೧೦೫೭

ಉಭಯತನುಗುಣವಳಿದಲ್ಲದೆ ಅರಿವಿನಾಚಾರವಳವಡದು.
ಅರಿವಿನಾಚಾರ ಅಳವಟ್ಟಲ್ಲದೆ ಲಿಂಗದ ಬೆಳಗು ದೊರೆಕೊಳ್ಳದು,
ಲಿಂಗದ ಬೆಳಗು ದೊರೆಕೊಂಡಲ್ಲದೆ
ಕೂಡಲಚೆನ್ನಸಂಗಯ್ಯನಲ್ಲಿ ಪರಿಣಾಮ ದೊರೆಕೊಳ್ಳದು. ॥ ೨೦೫ ॥

೧೦೫೮

ಉಭಯದಳವು ನಡೆದು ಬಂದು ಮುಂದೆ ನಿಂದಿರ್ದು
ಭಾಷೆಯಾಗಿ ಬಿರಿದನುಚ್ಚರಿಸುತ್ತ ಹೊಯಿಕುಟ್ಟಿಯಾಡುವ
ಕಾಳಗದೊಳಗೆ ಕೈದು ಬಿದ್ದಡೆ ಭಂಗವಲ್ಲದೆ
ಶಸ್ತ್ರಸಾಧಕ ಕಲಿತೇನೆಂದು ಅಭ್ಯಾಸಮಾಡುವ ಅಭ್ಯಾಸದೊಳಗೆ
ಕೋಲು ಬಿದ್ದರೆ ಭಂಗವೆ? ಅಲ್ಲ.
ಮತ್ತೆ ಮರಳಿ ಕೋಲ ಕಳೆದುಕೊಂಡು
ಅಭ್ಯಾಸ ಮಾಡುವುದೇ ಉಚಿತವಲ್ಲದೆ;

ನಾನಿನ್ನು ಅಭ್ಯಾಸವ ಮಾಡಲಾಗದು
ಕೋಲು ಬಿದ್ದಿತ್ತೆಂಬ ಗಾವಿಲರ ಮಾತ ಕೇಳಲಾಗದು.
ದೃಷ್ಟವೇ ಕೋಲು ಅದೃಷ್ಟವೆ ಕೈದು.
ಕಾಣಬಾರದ ಲಿಂಗವ ಕಾಬುದು ತನ್ನ ಸತ್ಕ್ರೀ ಕಾಣಾ
ಕೂಡಲಚೆನ್ನಸಂಗಯ್ಯಾ. ॥ ೨೦೬ ॥

೧೦೫೯

ಉಭಯಲಿಂಗಪ್ರಸಾದವನರಿಯದೆ
ಉಭಯ ಅಂತದೊಳಗಾಯಿತಲ್ಲಾ!
ಉಭಯ ನಾಮದ ಮೇಲೆ ನಾಮವಾದುದನು
ದೇಹಪೂಜಕಂಗರಿಯಬಾರದು.
ದೇಹ ಉಭಯವಾದುದನು, ಉಭಯ ತ್ರಿವಿಧವಾದುದನು
ಕೂಡಲಚೆನ್ನಸಂಗಯ್ಯಾ ನಿಮ್ಮ ಪ್ರಸಾದಿಗಲ್ಲದರಿಯಬಾರದು. ॥ ೨೦೭ ॥

೧೦೬೦

ಉರಿತಾಗಿದ ಮೃಗ ಒಂದಡಿಯಿಡುವುದೆ?
ತನುತಾಗಿದ ಸುಖವಗಲುವುದೆ?
ಕೂಡಲಚೆನ್ನಸಂಗನ ಶರಣರನುಭಾವವರಿದ ಬಳಿಕ
ಮತ್ತೆ ಮರಳೆನು. ॥ ೨೦೮ ॥

೧೦೬೧

ಉರಿಯ ಸೀರೆಯನುಟ್ಟು, ಕಡೆಸೆರಗ ಬಿಡುಬೀಸಿ,
ಮಡದಿ ತನ್ನ ಕೆಳದಿಯರನೊಡಗೊಂಡು ಆಡುತ್ತಿರೆ,
ಪತಿ ಬಂದು ಮುಡಿಯ ಹಿಡಿದು ಸೀರೆಯನುಗಿಯೆ,
ಮಡದಿಯೊಡಗೂಡುತ್ತಿರೆ;
ಸಮರಸದಲ್ಲಿ ಸತಿಯಳಿದು ಪತಿಯಾಗಿ, ಪತಿಯಳಿದು ನಿಃಪತಿಯಾಗಿ,
ಸತಿ ಪತಿ ನಿಃಪತಿ-ಎಂಬ ತ್ರಿವಿಧವು ಏಕಾರ್ಥವಾದ
ಕೂಡಲಚೆನ್ನಸಂಗಯ್ಯನಲ್ಲಿ,
ಬಸವಣ್ಣನ ಪಾದಕ್ಕೆ ನಮೋ ನಮೋ ಎನುತಿರ್ದೆನು. ॥ ೨೦೯ ॥

೧೦೬೨

ಉಳ್ಳವರು ದೇವಾಲಯ ಮಾಡಿಸಲು
ನಾನೇನ ಮಾಡುವೆ ಬಡವನಯ್ಯಾ.

ಎನ್ನೆರಡು ಕಾಲೇ ಕಂಭ, ದೇಹವೇ ದೇಗುಲ, ಶಿರಸ್ಸೇ ಹೊನ್ನಕಳಸವಯ್ಯಾ.
ಕೈಗಳೆರಡೇ ಮದನಕೈ, ಎನ್ನ ಮುಖವೇ ದ್ವಾರ, ಎನ್ನ ನಾಲಿಗೆ ಗಂಜೆ,
ಎನ್ನ ಕಿವಿ ಕೀರ್ತಿಮುಖ, ಎನ್ನಧರ ಜವಳಿ ಕದ,
ಎನ್ನ ದಂತವೇ ಮಿಂಚುಳ್ಳ ಮೌಕ್ತಿಕ ಸೂಸಕ,
ಎನ್ನ ನಯನಗಳೆರಡು ಜ್ಯೋತಿ,
ಎನ್ನ ನಾಸಾಪುಟ ಸೌರಭ್ಯವೆರೆದ ಗಾಳಿ ಚೆನ್ನಾಗಿ ಬೀಸುವ
ಹೊನ್ನ ಜಾಲಂಧ್ರವು, ಇನ್ನುಳಿದ ಉಪಕರಣಂಗಳು–
ಎನ್ನ ಸಮತೆ ಜಲವು, ಸದ್ಗುಣ ಗಂಧ, ಎನ್ನ ನಿತ್ಯತ್ವ ಅಕ್ಷತೆ,
ಎನ್ನ ಜ್ಞಾನವೆ ಪುಷ್ಪ, ಎನ್ನ ಭಕ್ತಿಯೆ ಬೋನ, ಎನ್ನ ಮನ ಪೂಜಾರಿ
ಕೂಡಲಚೆನ್ನಸಂಗಮದೇವಯ್ಯಾ ಕೇಳಯ್ಯಾ ಸ್ಥಾವರಕ್ಕಳಿವುಂಟು
ಜಂಗಮಕ್ಕಳಿವಿಲ್ಲ. || ೨೧೦ ||

೧೦೬೩

ಊರ ಮುಂದೆ ಶ್ವಾನನ ಕಾಣಬಹುದಲ್ಲವೆ
ಸಿಂಹವ ಕಾಣಬಾರದು.
ನದಿಯ ಮುಂದೆ ಬಕನ ಕಾಣಬಹುದಲ್ಲವೆ
ಹಂಸನ ಕಾಣಬಾರದು.
ಪಸರ (ಸರ?)ದೊಳಗೆ ಗಾಜಿನ ಮಣಿಯ ಕಾಣಬಹುದಲ್ಲವೆ
ರತ್ನವ ಕಾಣಬಾರದು.
ಧರೆಯ ಮೇಲೆ ವೇಷಧಾರಿಗಳ ಕಾಣಬಹುದಲ್ಲವೆ
(ಶಿವ)ಜ್ಞಾನಿಗಳ ಕಾಣಬಾರದು, ಕೂಡಲಚೆನ್ನಸಂಗಮದೇವಾ. || ೨೧೧ ||

೧೦೬೪

ಊಹಿಸಲರಿಯೆ, ಉತ್ತರವನರಿಯೆ,
ದೇವನನರಿಯೆ, ದೇಹಿಕನನರಿಯೆ,
ನಾನೆನ್ನಲರಿಯೆ, ನೀನೆನ್ನಲರಿಯೆ,
ಕೂಡಲಚೆನ್ನಸಂಗಮದೇವ ಎನ್ನಲರಿಯೆ! || ೨೧೨ ||

೧೦೬೫

ಎಂಟುದಿಕ್ಕು ನಾಲ್ಕು ಬಾಗಿಲೊಳಗೆ,
ಸಕಲ ಪದಾರ್ಥವೆಂಬ ಮಂಟಪವ ಮಾಡಿ, ನಾನಾ ಕೇರಿ ಬಿಲವಾಗಿಲೊಳು
ಅನಂತ ಬಣ್ಣಬಣ್ಣದ ಚೈತನ್ಯಗಳನನುಮಾಡಿ,

ಅನಂತ ವೀರರನು ಅನಂತ ಲಾಳಮೇಳಿಗಳನು
ಅನಂತ ಸೋಹಂ ಘನ ಮುಟ್ಟಿಕೊಂಡಿರ್ಪವರನು ತಂದಿರಿಸಿ
ಆ ಮಂಟಪದೊಳಗೆ ಬಿಜಯ ಮಾಡೆಂದು–
ಭಕ್ತ್ಯಂಗನೆಯ ಕರೆಸಿ ಪರಿಪೂರ್ಣವಾಗಿರಿಸಿ
ಜ್ಞಾನಾಂಗನೆಯ ಕರೆಸಿ ನಾಲ್ಕು ಬಾಗಿಲುಗಳಿಗೆ ಕಾಹ ಕೊಟ್ಟು
ನುಡಿಯುದಂತೆ ಗಂಡನು ಶಿವನಲ್ಲದೆ ಮತ್ತಿಲ್ಲವೆಂದಾತನ ಮಂಟಪದ ವಾರ್ತೆಯು
ಅನ್ಯ ಮಿಶ್ರಂಗಳ ಹೊಗಲೀಸೆನೆಂಬ ಭಾಷೆ!
ಕಾಲ ಕರ್ಮ ಪ್ರಳಯುವಿರಹಿತನೆಂದಾತನ ಹೆಸರು.
ಮಹಾಪ್ರಳಯದಲ್ಲಿ ಅನಂತಮೂರ್ತಿಗಳು ಮಡಿವಲ್ಲಿ
ಮಡಿಯದೆ ಉಳಿದ ನಿತ್ಯಸ್ವರೂಪನು.
ಆತನ ಶ್ರೀಚರಣದೊಳಚ್ಯೋತ್ತಿದಂತಿರ್ಪಾತನೆ
ಅನಾದಿ ಸಿದ್ಧನೆ, ಅನಾದಿ ಕುಳಜ್ಞನೆ, ಅನಾದಿ ಮಡಿವಾಳನೆ, ಶಿವನ ಮದಪಟ್ಟಿಯೆ,
ಹಸ್ತದೊಳು ಮದಂಗಳ ತೃಣವ ಮಾಡಿದ ಚೌದಂತನೆ,
ಭಕ್ತಸಾರಾಯ ಪ್ರಸಾದಪರಿಪೂರ್ಣನೆ
ಕೂಡಲಚೆನ್ನಸಂಗನ ಮಹಾಮನೆಯಲ್ಲಿ,
ಅನಾದಿಗಣೇಶ್ವರನು ಮಡಿವಾಳನು. ॥ ೨೦೦ ॥

೧೨೬೬

ಎಂಟುಲಕ್ಷದ ಮೇಲೆ ಐನೂರು ದೇವರಿಗೆ ಮಾಡಿದ ಬೋನವ
ಒಬ್ಬ ಜಂಗಮನಾರೋಗಣೆಯ ಮಾಡುವನಲ್ಲದೆ,
ಪದಿನಾರು ಲಕ್ಷದ ಮೇಲೆ ಐನೂರು ದೇವರು ಕೂಡಿಕೊಂಡು
ಒಬ್ಬ ಜಂಗಮಕ್ಕೆ ಮಾಡಿದ ಬೋನವನಾರೋಗಿಸಲರಿಯವು.
ಅಂತಪ್ಪ ದೇವರಿಗಿಂತಲೂ ಜಂಗಮವೆ ಘನ.
ಕೃತಯುಗದಲ್ಲಿ ಸುವರ್ಣದ ಲಿಂಗವಾದಲ್ಲಿ ನಿನ್ನ ಹೆಸರೇನು?
ತ್ರೇತಾಯುಗದಲ್ಲಿ ಬೆಳ್ಳಿಯ ಲಿಂಗವಾದಲ್ಲಿ ನಿನ್ನ ತಾಯಿ-ತಂದೆ ಯಾರು?
ದ್ವಾಪರದಲ್ಲಿ ತಾಮ್ರದಲಿಂಗವಾದಲ್ಲಿ
ಹದಿನೆಂಟು ಜಾತಿಯ ಕೈಯ ಕಿಲುಬು ಹೋಯಿತ್ತು.
ಕಲಿಯುಗದಲ್ಲಿ ಕಲ್ಲ ದೇವರಾದರೆ ಇಕ್ಕಿದೋಗರವನುಣ್ಣದೇಕೆ?
ಹಿಂದೊಮ್ಮೆ ನಾಲ್ಕುಯುಗದಲ್ಲಿ ಅಳಿದು ಹೋದುದನರಿಯಾ?
ಇನ್ನೇಕೆ ದೇವತನಕ್ಕೆ ಬೆರತಹೆ?
"ಸ್ಥಾವರಂ ಜಂಗಮಶ್ಚೈವ ದ್ವಿವಿಧಂ ಲಿಂಗಮುಚ್ಯತೇ।
ಜಂಗಮಸ್ಯಾವಮಾನೇನ ಸ್ಥಾವರಂ ನಿಷ್ಫಲಂ ಭವೇತ್"।–ಇದು ಕಾರಣ
ಕೂಡಲಚೆನ್ನಸಂಗಯ್ಯಾ, ತಪ್ಪದೆ ನಾಲ್ಕುಯುಗದಲ್ಲಿ

ಜಂಗಮವೆ ಪ್ರಾಣಲಿಂಗವಾದ ಕಾರಣ
ಸ್ಥಾವರವೆ ಜಂಗಮಪ್ರಸಾದಕ್ಕೆ ಯೋಗ್ಯವಾಯಿತ್ತು. ॥ ೨೧೪ ॥

೧೦೬೭

ಎಂತು ಜೀವಿಸಬಹುದು, ಗುರುಪ್ರಾಣಿಗೆ ಗುರು ಓಸರಿಸಿದಡೆ?
ಎಂತು ಜೀವಿಸಬಹುದು, ಲಿಂಗಪ್ರಾಣಿಗೆ ಲಿಂಗ ಓಸರಿಸಿದಡೆ?
ಎಂತು ಜೀವಿಸಬಹುದು, ಜಂಗಮಪ್ರಾಣಿಗೆ ಜಂಗಮ ಓಸರಿಸಿದಡೆ?
ಎಂತು ಜೀವಿಸಬಹುದು, ಪ್ರಸಾದಪ್ರಾಣಿಗೆ
ಕೂಡಲಚೆನ್ನಸಂಗಯ್ಯಾ ಪ್ರಸಾದ ಓಸರಿಸಿದಡೆ? ॥ ೨೧೫ ॥

೧೦೬೮

ಎನಗಿಲ್ಲದ ಘನವನೇರಿಸಿ ನುಡಿದಡೆ ಅದು ನಿಮ್ಮ ಲೀಲೆ,
ನಾನದನು ಬೇಕೆನ್ನೆ ಬೇಡೆನ್ನೆ ಅದಂತಿರಲಿ.
ನಿಮ್ಮ ಶ್ರೀ ಪಾದದ ಕೃಪೆಯಿಂದ ನಿಮ್ಮ ನಿಲವನರಿದೆನು.
ಕೂಡಲಚೆನ್ನಸಂಗಮದೇವಾ
ಎನಗೊಮ್ಮೆ ಬಸವಣ್ಣನ ಪರಿಯನರುಹಾ ಪ್ರಭುವೆ. ॥ ೨೧೬ ॥

೧೦೬೯

ಎನಗೆನ್ನ ಗುರುಬಸವಣ್ಣ ತೋರಿದ ಘನವ,
ನಿಮಗೆ ಬಿನ್ನೈಸುವೆನು ಕೇಳಾ ಪ್ರಭುವೆ.
ಪ್ರಸಾದದಿಂದ ಪುಟ್ಟಿದ ಕಾಯಕ್ಕೆ ಪ್ರಸಾದದಿಂದೊಗೆವ ಲಿಂಗವ ಕೊಟ್ಟು
ಪ್ರಸಾದಲಿಂಗಮುಖದಲ್ಲಿ ಪ್ರಸಾದಮಯವಾದ,
ಪ್ರಣವಪಂಚಾಕ್ಷರಿಯ ಪ್ರಸಾದಿಸಿ
ತನ್ನಾದಿರೂಪಿನಲ್ಲಿ ಅನಾದಿಲಿಂಗಪ್ರಸಾದವ ಭೋಗವ ಮಾಡಿ
ಆ ಪ್ರಸಾದದಿಂದೊಗೆದ ಪ್ರಸಾದವ ತನ್ನ ಪ್ರಸಾದಜ್ಞಾನವೆಂಬ
ಪರಮಶಿಖಿಯಿಂದ ದಹನ ಮಾಡಿ,
ಎನಗೆ, ಸಮಸ್ತ ಶಿವಭಕ್ತರ್ಗೆ ಇದು ಭಕ್ತಿ ನೀತಿಯೆಂದು ವಿಭೂತಿಯನಿಟ್ಟು
ತ್ರಿಪುರದ ಸಂಚವನಳಿದು ತ್ರಿಜಗವ ರಕ್ಷಿಸಲೆಂದು
ತ್ರಿಲೋಚನದಲ್ಲಿ ಉಗ್ರಶಾಂತಿ ಗಾಂಭೀರ್ಯವೆಂಬ ಜಲಬಿಂದುವೆ ಬೀಜವಾಗಿ ಬೆಳೆದ
ರುದ್ರಾಕ್ಷಿಯ ಧರಿಸಿ, ಶಾಂಭವೀಮುದ್ರೆಯನೊತ್ತಿ
ನಾದ ಬಿಂದು ಕಳೆಯೊಂದಾದಂದಿನ
ಅನಾದಿ ಬೋಧಚೈತನ್ಯಜ್ಞಾನಲಿಂಗ ತಾನೆ ಜಂಗಮವೆಂದು ತಿಳುಹಿ
ಆ ಜಂಗಮದ ಪಾದೋದಕ ಪ್ರಸಾದವೆ ಇಷ್ಟವಾದ

ಷಡ್ವಿಧಲಿಂಗದ ಮೂಲಾಂಗವೆನಿಸುವ ಇಷ್ಟಲಿಂಗಕ್ಕೆ
ಮಜ್ಜನ ನೈವೇದ್ಯವ ಸಜ್ಜನಶುದ್ಧ ಶಿವಭಕ್ತಿಯಿಂದ ಮಾಡೆಂದ ಬಸವಣ್ಣ.
ಅದೆಂತೆಂದಡೆ: ಹಂಸೆಗೆ ಹಾಲನೆರೆವರಲ್ಲದೆ ಹುಳಿಯನೆರೆವರೆ?
ಇಷ್ಟಲಿಂಗಕ್ಕೆ ಪ್ರಸಾದವೆ ಭೋಜನವೆಂದು ಬಸವಣ್ಣ ನಿರೂಪಿಸಲು,
'ನಿರಂತರವೆ?' ಎಂದು ಬಿನ್ನೈಸೆ, ಬೋಧಿಸಿದ ಬಸವಣ್ಣನು.
ಅದೆಂತೆಂದಡೆ: ಪದಾರ್ಥವ ಕೊಟ್ಟಡೆ ಫಲಪದ ತಪ್ಪದು,
ಪ್ರಸಾದವ ಕೊಟ್ಟಡೆ ಫಲಂ ನಾಸ್ತಿ ಪದಂ ನಾಸ್ತಿ ಭವಂ ನಾಸ್ತಿ
ಎಂದನಯ್ಯಾ ಎನ್ನ ಗುರು ಬಸವಣ್ಣನು.
ಅದೆಂತೆಂದಡೆ: ಪದಾರ್ಥವೆ ಕರ್ಮರೂಪು, ಪ್ರಸಾದವೆ ನಿಃಕರ್ಮರೂಪು.
'ದ್ರವ್ಯಂ ಕ್ರಿಯಾಸ್ವರೂಪಂ ಚ ಪ್ರಸಾದೋ ಕರ್ಮ ಬಾಹ್ಯಕಃ।
ಪದಾರ್ಥೋ ಜನ್ಮಹೇತುಃ ಸ್ಯಾತ್ ಪ್ರಸಾದೋ ಭವನಾಶಕಃ॥
ಇಂತೆಂದುದಾಗಿ–ಇದೇ ಶಿವಲಿಂಗಮುಖ, ಇವೇ ಭವಿಸಂಗಮುಖ
ಇಂತೆಂದು ನುಡಿದು, ನಡೆದು ತೋರಿ
ಹೊರೆದನಲಾ ಬಸವಣ್ಣ, ಸಕಲ ಮಾಹೇಶ್ವರರ.
ಇದನರಿದು ಕೊಡುವದು, ಇದನರಿದು ಕೊಂಬುದು
ಇದೇ ಭಕ್ತಿಗೆ ಬೇಹ ಬುದ್ಧಿ, ಇದೇ ಪ್ರಸಾದಕ್ಕೆ ಪರಮಕಾರಣ.
ಇಂತಲ್ಲದವಂಗೆ ಲಿಂಗವಿಲ್ಲ; ಲಿಂಗವಿಲ್ಲಾಗಿ ಪ್ರಸಾದವಿಲ್ಲ.
ಇದನರಿದು, ಗುರುವಿಡಿದು ಲಿಂಗದಿಚ್ಛೆಯನರಿದು ಸುಖಿಸಿಪೆನಯ್ಯಾ
ಕೂಡಲಚೆನ್ನಸಂಗಮದೇವಾ. ॥ ೨೧೭ ॥

೧೦೭೦

ಎನ್ನ ಅನುಭಾವದ ಗಮ್ಯವೆ, ಎನ್ನ ಅರಿವಿನ ವಿಶ್ರಾಮವೆ,
ಎನ್ನ ಭಾವದ ಬಯಕೆಯೆ, ಎನ್ನ ನಿಜದ ನಿಲವೆ,
ಎನ್ನ ಪರಿಣಾಮದ ಮೇರುವೆ, ಎನ್ನ ಮನದ ಮಹಿಮನೆ,
ನಿಮ್ಮ ಸುಳುಹು ಎತ್ತಲಡಗಿತ್ತು, ಎಲೆ ಲಿಂಗವೆ?
ನಿಮ್ಮ ನಾಮವೆತ್ತ ನಿರ್ನಾಮವಾಯಿತ್ತು, ಎಲೆ ಪರಮಗುರುವೆ?
ಕೂಡಲಚೆನ್ನಸಂಗಯ್ಯನಲ್ಲಿ
ಉರಿಯುಂಡ ಕರ್ಪುರದಂತಾದೆಯಲ್ಲಾ ಪ್ರಭುವೆ! ॥ ೨೧೮ ॥

೧೦೭೧

ಎನ್ನ ಅರಿವಿನ ಕಣ್ಣ ಕತ್ತಲೆಯ ಕಳೆವಡೆ,
ಸಂಗನಬಸವಣ್ಣನಲ್ಲದೆ ಮತ್ತಾರನೂ ಕಾಣೆನು.
ಎನ್ನ ಭಾವವ ನಿರ್ಭಾವವಲ್ಲಿ ನಿಶ್ಶೂನ್ಯವವಾಡಿ

ಪರಮಸುಖದೊಳಿರಿಸುವಡೆ, ಅ ಮಪ್ರಭುದೇವರಲ್ಲದೆ ಮತ್ತಾರನೂ ಕಾಣೆನು.
ಇದುಕಾರಣ–ಕೂಡಲಚೆನ್ನ ಸಂಗಯ್ಯನಲ್ಲಿ
ಬಸವ–ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎನುತಿದ್ದೆನು. || ೨೧೯ ||

೧೦೭೫

ಎನ್ನ ಕರಸ್ಥಲದಲ್ಲಿ ಲಿಂಗವ ಸಾಹಿತ್ಯವ ಮಾಡಿದ.
ಎನ್ನ ಮನಸ್ಥಲದಲ್ಲಿ ಜಂಗಮವ ಸಾಹಿತ್ಯವ ಮಾಡಿದ.
ಎನ್ನ ತನುಸ್ಥಲದಲ್ಲಿ ಆಚಾರವ ಸಾಹಿತ್ಯವ ಮಾಡಿದ.
ಇಂತೀ ತನು ಮನ ಪ್ರಾಣವನೇಕವ ಮಾಡಿ
ಕೂಡಲಚೆನ್ನಸಂಗಮದೇವಾ ನಿಮ್ಮನೆನ್ನ ವಶವ ಮಾಡಿದ
ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂದು ಬದುಕಿದೆನು. || ೨೨೦ ||

೧೦೭೬

ಎನ್ನ ಕಾಯಕ್ಕೆ ಸೀಮೆಯ ಮಾಡುವೆನು;
ಎನ್ನ ಕಾಯದೊಳಗಿರ್ದ ಕರಣಾದಿ ಗುಣಂಗಳಿಗೆ ಸೀಮೆಯ ಮಾಡುವೆನು.
ಎನ್ನ ಶ್ರೋತ್ರಕ್ಕೆ ಸೀಮೆಯ ಮಾಡುವೆನು;
ಎನ್ನ ಶ್ರೋತ್ರದೊಳಗಿರ್ದ ಶಬ್ದಕ್ಕೆ ಸೀಮೆಯ ಮಾಡುವೆನು.
ಎನ್ನ ತ್ವಕ್ಕಿಗೆ ಸೀಮೆಯ ಮಾಡುವೆನು;
ಎನ್ನ ತ್ವಕ್ಕಿನೊಳಗಿರ್ದ ಸ್ಪರ್ಶಕ್ಕೆ ಸೀಮೆಯ ಮಾಡುವೆನು.
ಎನ್ನ ನಯನಕ್ಕೆ ಸೀಮೆಯ ಮಾಡುವೆನು;
ಎನ್ನ ನಯನದೊಳಗಿರ್ದ ರೂಪಕ್ಕೆ ಸೀಮೆಯ ಮಾಡುವೆನು.
[ಎನ್ನ ಜಿಹ್ವೆಗೆ ಸೀಮೆಯ ಮಾಡುವೆನು;
ಎನ್ನ ಜಿಹ್ವೆಯೊಳಗಿರ್ದ ರಸಕ್ಕೆ ಸೀಮೆಯ ಮಾಡುವೆನು.]
ಎನ್ನ ಘ್ರಾಣಕ್ಕೆ ಸೀಮೆಯ ಮಾಡುವೆನು;
ಎನ್ನ ಘ್ರಾಣದೊಳಗಿರ್ದ ಗಂಧಕ್ಕೆ ಸೀಮೆಯ ಮಾಡುವೆನು.
ಎನ್ನ ಮನಕ್ಕೆ ಸೀಮೆಯ ಮಾಡುವೆನು;
ಎನ್ನ ಮನದೊಳಗಿರ್ದ ಮರವೆಗೆ ಸೀಮೆಯ ಮಾಡುವೆನು.
ಎನ್ನ ಭಾವಕ್ಕೆ ಸೀಮೆಯ ಮಾಡುವೆನು;
ಎನ್ನ ಭಾವದೊಳಗಿರ್ದ ಭ್ರಾಂತಿಗೆ ಸೀಮೆಯ ಮಾಡುವೆನು.
ಎನ್ನ ಪ್ರಾಣಕ್ಕೆ ಸೀಮೆಯ ಮಾಡುವೆನು;
ಎನ್ನ ಪ್ರಾಣವ ಲಿಂಗದಲ್ಲಿ ಹಿಂಗದಂತೆ ನಿಲಿಸುವೆನು
ಕೂಡಲಚೆನ್ನಸಂಗಮದೇವಾ. || ೨೩೦ ||

೧೦೭೪

ಎನ್ನ ಕಾಯದೊಳಗೆ ನಿನ್ನ ಕಾಯವಿಪ್ಪುದು,
ನಿನ್ನ ಕಾಯದೊಳಗೆ ಎನ್ನ ಕಾಯವಿಪ್ಪುದು.
ಎನ್ನ ಜೀವದೊಳಗೆ ನಿನ್ನ ಜೀವವಿಪ್ಪುದು,
ನಿನ್ನ ಜೀವದೊಳಗೆ ಎನ್ನ ಜೀವವಿಪ್ಪುದು.
ಎನ್ನ ಪ್ರಾಣದೊಳಗೆ ನಿನ್ನ ಪ್ರಾಣವಿಪ್ಪುದು,
ನಿನ್ನ ಪ್ರಾಣದೊಳಗೆ ಎನ್ನ ಪ್ರಾಣವಿಪ್ಪುದು.
ಎನ್ನ ಇಂದ್ರಿಯಂಗಳೊಳಗೆ ನಿನ್ನ ಇಂದ್ರಿಯಂಗಳಿಪ್ಪವು,
ನಿನ್ನ ಇಂದ್ರಿಯಂಗಳೊಳಗೆ ಎನ್ನ ಇಂದ್ರಿಯಂಗಳಿಪ್ಪವು.
ಎನ್ನ ವಿಷಯಂಗಳೊಳಗೆ ನಿನ್ನ ವಿಷಯಂಗಳಿಪ್ಪವು,
ನಿನ್ನ ವಿಷಯಂಗಳೊಳಗೆ ಎನ್ನ ವಿಷಯಂಗಳಿಪ್ಪವು.
ಎನ್ನ ಕರಣಂಗಳೊಳಗೆ ನಿನ್ನ ಕರಣಂಗಳಿಪ್ಪವು.
ನಿನ್ನ ಕರಣಂಗಳೊಳಗೆ ಎನ್ನ ಕರಣಂಗಳಿಪ್ಪವು.
ಇಂತು ನಾನೆ ರೂಪು, ನೀನೆ ನಿರೂಪು.
ರೂಪಿಂಗೆ ಕೇಡುಂಟು, ನಿರೂಪಿಂಗೆ ಕೇಡಿಲ್ಲ. ಆನು ಕರ್ಪೂರ, ನೀನು ಜ್ಯೋತಿ.
ಆನು ನಿಮ್ಮೊಳಡಗಿದೆನು ಕೂಡಲಚೆನ್ನಸಂಗಮದೇವಾ. ೨೨೨ ॥

೧೦೭೫

ಎನ್ನ ಘ್ರಾಣದ ಬಾಗಿಲಲ್ಲಿರ್ದು, ಸುವಾಸನೆಯ ಸುಖಂಗಳ
ಭೋಗಿಸುವಾತ ನೀನಯ್ಯಾ.
ಎನ್ನ ಜಿಹ್ವೆಯ ಬಾಗಿಲಲ್ಲಿರ್ದು, ಸುರುಚಿಯ ಸುಖಂಗಳ
ಭೋಗಿಸುವಾತ ನೀನಯ್ಯಾ.
ಎನ್ನ ನೇತ್ರದ ಬಾಗಿಲಲ್ಲಿರ್ದು, ಸುರೂಪ ಸುಖಂಗಳ
ಭೋಗಿಸುವಾತ ನೀನಯ್ಯಾ.
ಎನ್ನ ತ್ವಕ್ಕಿನ ಬಾಗಿಲಲ್ಲಿರ್ದು, ಸುಸ್ಪರ್ಶವ ಮಾಡಿ
ಆ ಸ್ಪರ್ಶನ ಸುಖವ ಸುಖಿಸುವಾತ ನೀನಯ್ಯಾ.
ಎನ್ನ ಶ್ರೋತದ ಬಾಗಿಲಲ್ಲಿರ್ದು
ಸುಶಬ್ದ ಸುಖಂಗಳ ಭೋಗಿಸುವಾತ ನೀನಯ್ಯಾ.
ಎನ್ನ ಮನದ ಬಾಗಿಲಲ್ಲಿರ್ದು
ಪಂಚೇಂದ್ರಿಯಂಗಳನರಿದು ಸುಖಿಸುವ ಅರಿವಿನಮೂರ್ತಿ ನೀನಯ್ಯ,
ಅದೇನು ಕಾರಣವೆಂದಡೆ:
ನೀನಾಡಿಸುವ ಜಂತ್ರದ ಬೊಂಬೆ ನಾನೆಂದರಿದ ಕಾರಣ.

ನಿಮ್ಮ ಕರಣಂಗಳೆ ಎನ್ನ ಹರಣಂಗಳಾಗಿ,
ಎನ್ನ ಹರಣಂಗಳೆ ನಿಮ್ಮ ಕಿ(ಕ?)ರಣಂಗಳಾಗಿ
ಕೂಡಲಚೆನ್ನಸಂಗಮದೇವಾ ನೀನಾಡಿಸಿದಂತೆ ನಾನಾಡಿದೆನಯ್ಯಾ. || ೨೨೩ ||

೧೦೭೬

ಎನ್ನಂತರಂಗದಲ್ಲಿ ನಿರವಯ ಲಿಂಗವ ತಂದು,
ಸಾವಯಲಿಂಗವ ಮಾಡಿ ಎನ್ನ ಕರಸ್ಥಲಕ್ಕೆ ಕೊಟ್ಟನು ಶ್ರೀಗುರುಸ್ವಾಮಿ.
ಆ ಲಿಂಗವೆನ್ನ ಸರ್ವೇಂದ್ರಿಯಂಗಳನಾವರಿಸಿ, ಕರಣಗಳೆಲ್ಲ ಕಿರಣಂಗಳಾಗಿ
ಬೆಳಗಿ ತೋರುವ ಚಿದಾಕಾಶವೆ ಪ್ರಾಣಲಿಂಗವೆಂದರಿದು,
ವಿಚಾರಿಸಿ ತಿಳಿದ ತಿಳಿವು ಪರಮಾನಂದವನೆಯ್ದಿದ ಮೂಲಚೈತನ್ಯವೆ ಭಾವಲಿಂಗ.
ಇದನರಿದು ನೋಡುವ ಭಾವ ಪರಿಪೂರ್ಣವಾಗಿ
ತಾನಹನಲ್ಲದೆ ಇದಿರಿಟ್ಟು ತೋರುವುದಿಲ್ಲ.
ಅಖಂಡ ಪರಿಪೂರ್ಣವಪ್ಪ ನಿಲವು ತಾನೆ ಕೂಡಲಚೆನ್ನಸಂಗಮದೇವ. || ೨೨೪ ||

೧೦೭೭

ಎನ್ನಂತರಂಗವೆ ಬಸವಣ್ಣ, ಬಹಿರಂಗವೆ ಮಡಿವಾಳಯ್ಯ,
ಈ ಉಭಯದ ಸಂಗವೆ ಪ್ರಭುದೇವರು!
ಇಂತೀ ಮೂವರ ಕರುಣದ ಕಂದನಾಗಿ ಬದುಕಿದೆ ಕಾಣಾ
ಕೂಡಲಚೆನ್ನಸಂಗಮದೇವಾ. || ೨೨೫ ||

೧೦೭೮

ಎನ್ನ ದೃಷ್ಟಿ ನಿಮ್ಮ ರೂಪಿನಲ್ಲಿ ನಿಂದು ಕಾಣದು;
ಎನ್ನ ಮನ ನಿಮ್ಮ ಕಳೆಯಲ್ಲಿ ಬೆರಸಿ ಅರಿಯದು.
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ
ಅನುಪಮಸುಖಿಯಾನು! || ೨೨೬ ||

೧೦೭೯

ಎನ್ನ ಬ್ರಹ್ಮರಂಧ್ರದಲ್ಲಿ ಅಖಂಡಿತನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ;
ಎನ್ನ ಉತ್ತಮಾಂಗದಲ್ಲಿ ಗಂಗಾಧರನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ;
ಎನ್ನ ಲಲಾಟದಲ್ಲಿ ಮಹಾದೇವನೆಂಬ ರುದ್ರನಾಗಿ

ಬಂದು ನಿಂದಾತ ಬಸವಣ್ಣನಯ್ಯಾ;
ಎನ್ನ ಪಶ್ಚಿಮ[ಚಕ್ರ]ದಲ್ಲಿ ಪಂಚಮುಖನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ;
ಎನ್ನ ಬಲಕರ್ಣದಲ್ಲಿ ಶ್ರುತಿಪುರಾಣಪ್ರಿಯನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ;
ಎನ್ನ ಎಡದ ಕರ್ಣದಲ್ಲಿ ಪಾರ್ವತೀಪ್ರಿಯನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ;
ಎನ್ನ ಬಲದ ನಯನದಲ್ಲಿ ತ್ರಿಪುರಸಂಹರನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ;
ಎನ್ನ ಎಡದ ನಯನದಲ್ಲಿ ಕಾಮಸಂಹರನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ.
ಎನ್ನ ನಾಸಿಕದಲ್ಲಿ ನಾಗಭೂಷಣನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ;
ಎನ್ನ ಜಿಹ್ವೆಯಲ್ಲಿ ಭವಹರನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ;
ಎನ್ನ ಕಂಠದಲ್ಲಿ ಲೋಕೇಶ್ವರನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ;
ಎನ್ನ ಬಲದ ಭುಜದಲ್ಲಿ ಸದಾಶಿವನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ;
ಎನ್ನ ಎಡದ ಭುಜದಲ್ಲಿ ಮೃತ್ಯುಂಜಯನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ;
ಎನ್ನ ಬಲದ ತೋಳಿನಲ್ಲಿ ಶೂಲಪಾಣಿಯೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ;
ಎನ್ನ ಎಡದ ತೋಳಿನಲ್ಲಿ ಕೋದಂಡನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ;
ಎನ್ನ ಬಲದ ಮೊಳಕೈಯಲ್ಲಿ ಪರಬ್ರಹ್ಮಸ್ವರೂಪನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ;
ಎನ್ನ ಎಡದ ಮೊಳಕೈಯಲ್ಲಿ ವಿಶ್ವಕುಟುಂಬಿ ಎಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ.
ಎನ್ನ ಬಲದ ಮುಂಗೈಯಲ್ಲಿ ಕರೆಕಂಠನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ;
ಎನ್ನ ಎಡದ ಮುಂಗೈಯಲ್ಲಿ ಶ್ರೀಕಂಠನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ;

ಎನ್ನ ಬಲದ ಅಂಗೈಯಲ್ಲಿ ನಿಧಾಂಕನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ,
ಎನ್ನ ಎಡದ ಅಂಗೈಯಲ್ಲಿ ವೇದಾಂಕನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ.
ಎನ್ನ ಹೃದಯದಲ್ಲಿ ಮಾಹೇಶ್ವರನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ.
ಎನ್ನ ಬಲದ ಪಾರ್ಶ್ವದಲ್ಲಿ ದಕ್ಷಸಂಹರನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ,
ಎನ್ನ ಎಡದ ಪಾರ್ಶ್ವದಲ್ಲಿ ಕಾಲಸಂಹರನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ.
ಎನ್ನ ಬೆನ್ನಿನಲ್ಲಿ ಭೂತೇಶ್ವರನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ,
ಎನ್ನ ನಾಭಿಯಲ್ಲಿ ಶಂಕರನೆಂಬ ರುದ್ರನಾಗಿ, ಬಂದು ನಿಂದಾತ ಬಸವಣ್ಣನಯ್ಯಾ,
ಎನ್ನ ಗುಹ್ಯದಲ್ಲಿ ವಿಷ್ಣುಪ್ರಿಯನೆಂಬ ರುದ್ರನಾಗಿ,
ಬಂದು ನಿಂದಾತ ಬಸವಣ್ಣನಯ್ಯಾ,
ಎನ್ನ ಗುದದಲ್ಲಿ ಬ್ರಹ್ಮಪ್ರಿಯನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ
ಎನ್ನ ಬಲದ ತೊಡೆಯಲ್ಲಿ ಪ್ರಕಾಶನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ,
ಎನ್ನ ಎಡದ ತೊಡೆಯಲ್ಲಿ ಸ್ಫಟಿಕಪ್ರಕಾಶನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ,
ಎನ್ನ ಬಲದ ಮಣಿಪಾದದಲ್ಲಿ ಫಣಿಭೂಷಣನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ,
ಎನ್ನ ಎಡದ ಮಣಿಪಾದದಲ್ಲಿ ರುಂಡಮಾಲಾಧರನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ,
ಎನ್ನ ಬಲದ ಪದಡಿನಲ್ಲಿ ಕಪಾಲಧರನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ,
ಎನ್ನ ಎಡದ ಪದಡಿನಲ್ಲಿ ಭಿಕ್ಷಾಟನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ,
ಎನ್ನ ಬಲದ ಅಂಗುಷ್ಠದಲ್ಲಿ ಭೃಂಗಿಪ್ರಿಯನೆಂಬ ರುದ್ರನಾಗಿ,
ಬಂದು ನಿಂದಾತ ಬಸವಣ್ಣನಯ್ಯಾ,
ಎನ್ನ ಎಡದ ಅಂಗುಷ್ಠದಲ್ಲಿ ನಂದಿಪ್ರಿಯನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ,

ಎನ್ನ ಬಲದ ಅರೆಪಾದದಲ್ಲಿ ಪೃಥ್ವೀಪತಿಯೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ.
ಎನ್ನ ಎಡದ ಅರೆಪಾದದಲ್ಲಿ ಸಚರಾಚರಪತಿಯೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ,
ಎನ್ನ ಸರ್ವಾಂಗದಲ್ಲಿ ಸರ್ವೇಶ್ವರನೆಂಬ ರುದ್ರನಾಗಿ
ಬಂದು ನಿಂದಾತ ಬಸವಣ್ಣನಯ್ಯಾ.
ಇಂತೀ ಮೂವತ್ತೆಂಟು ಸ್ಥಾನಂಗಳಲ್ಲಿ, ಕೂಡಲಚೆನ್ನಸಂಗಯ್ಯಾ
ಬಸವಸಾಹಿತ್ಯವಾಗಿಪ್ಪುದಯ್ಯಾ. ॥ ೩೩೭ ॥

೧೦೮೦

ಎನ್ನ ಮನದಲ್ಲಿ ಇದೇ ಪಥವಯ್ಯಾ ಬೆರಸುವಡೆ:
ಪ್ರಾಣದ ಮಥನಭಾವ ನಟ್ಟು ತನುಸ್ಥಿತಿ ಮರೆದು,
ಭ್ರಾಂತು ಸೂತಕವೆಲ್ಲಾ [ನಿವಾ]ರಿಸಿ ಹೋದವು
ಶೂನ್ಯಸಿಂಹಾಸನದ ಮೇಲೆ
ಕೂಡಲಚೆನ್ನಸಂಗಾ ನಿಮ್ಮ ಶರಣನ ಪ್ರಭೆಯಿಂದ. ॥ ೩೩೮ ॥

೧೦೮೧

'ಎನ್ನ ಮನೆ' ಎಂಬವಂಗೆ ಬ್ರಹ್ಮನಿಕ್ಕಿದ ಕೋಳವಾಯಿತ್ತು,
'ಎನ್ನ ಸ್ತ್ರೀ' ಎಂಬವಂಗೆ ವಿಷ್ಣುವಿಕ್ಕಿದ ಸಂಕಲೆ ಹೂಡಿತ್ತು,
'ಎನ್ನ ಧನ' ಎಂಬವಂಗೆ ರುದ್ರನಿಕ್ಕಿದ ಆಸೆರೋಷದ ಜಂಜಿರಿ ಹೂಡಿತ್ತು,
'ಎನ್ನ ಕುಲ' ಎಂಬವಂಗೆ ಈಶ್ವರನಿಕ್ಕಿದ ಸೆರೆಸಾಲೆ,
ಬಂದೀಕಾನದೊಳಗೆ ಬಿದ್ದ ನೋಡಾ.
ಇಂತು ಕೊರಳುದ್ದಕೆ ಹೂಳಿಸಿಕೊಂಡು ಮುಗಿಲುದ್ದಕೆ ಹಾರಿ
'ನಾನು ಭಕ್ತ' 'ನಾನು ಮಾಹೇಶ್ವರ' ಎಂಬ ನುಡಿಗೆ ನಾಚರು ನೋಡಾ.
ಆ ಭಕ್ತನ ಮಠಕ್ಕೆ ಜಂಗಮ ನಿರಂತರ ಬರುತ್ತಿರಲು ಬ್ರಹ್ಮನಿಕ್ಕಿದ ಕೋಳ ಕಡಿಯಿತ್ತು,
ಆ ಭಕ್ತನ ಸ್ತ್ರೀ ಜಂಗಮದಾಸೋಹವ ನಿರಂತರ ಮಾಡುತ್ತಿರಲು,
ವಿಷ್ಣುವಿಕ್ಕಿದ ಸಂಕಲೆ ಕಡಿಯಿತ್ತು.
ಆ ಭಕ್ತನ ಧನ ಜಂಗಮಕ್ಕೆ ನಿರಂತರ ನಿರುಪಾಧಿಯಲ್ಲಿ ಸಲ್ಲುತ್ತಿರಲು
ಆ ರುದ್ರನಿಕ್ಕಿದ ಆಸೆರೋಷದ ಜಂಜಿರಿ ಕಡಿಯಿತ್ತು.
ಆ ಭಕ್ತನು ಜಾತಿಸೂತಕವಳಿದು ಶಿವಭಕ್ತರ ಕುಲವ ವಿಚಾರಿಸವೆ
ಶಿವಕುಲಪಂಪರಿದು ನಿರಂತರ ಬೆರಸಿಕೊಂಡಿರುತ್ತಿರಲು
ಈಶ್ವರನಿಕ್ಕಿದ ಕುಲದ ಸೆರಸಾಲೆಯು ಬಂದೀಕಾನದಿಂದ ಹೊರಹೊಂಟ ನೋಡಾ.

ಇಂತು ಇದ್ದೂ ಇಲ್ಲದ ಸಹಜರ ತೋರಿ ಬದುಕಿಸಯ್ಯಾ
ಕೂಡಲಚೆನ್ನಸಂಗಮದೇವಾ. ॥ ೨೨೯ ॥

೧೦೮೨

ಎನ್ನ ಶ್ರೋತ್ರದ ಕೊನೆಯಲ್ಲಿರ್ದು ಸುಶಬ್ದವನರಿವಾತನು ನೀನೆ.
ಎನ್ನ ತ್ವಕ್ಕಿನ ಕೊನೆಯಲ್ಲಿರ್ದು ಸುಸ್ಪರ್ಶನವ ಮುಟ್ಟುವಾತನು ನೀನೆ.
ಎನ್ನ ನೇತ್ರದ ಕೊನೆಯಲ್ಲಿರ್ದು ಸುರೂಪವನರಿವಾತನು ನೀನೆ.
ಎನ್ನ ಜಿಹ್ವೆಯ ಕೊನೆಯಲ್ಲಿರ್ದು ಸುರುಚಿಯನರಿವಾತನು ನೀನೆ.
ಎನ್ನ ಘ್ರಾಣದ ಕೊನೆಯಲ್ಲಿರ್ದು ಸುವಾಸನೆಯನರಿವಾತನು ನೀನೆ.
ಎನ್ನ ಸರ್ವಾಂಗದಲ್ಲಿರ್ದು ಸರ್ವಭೋಗೋಪಭೋಗವ
ಭೋಗಿಸುವಾತನೂ ನೀನೆ, ಕೂಡಲಚೆನ್ನಸಂಗಮದೇವಾ. ॥ ೨೩೦ ॥

೧೦೮೩

ಎನ್ನ ಸದ್ಗುರುಸ್ವಾಮಿ ಎನಗೆ ಕರುಣಿಸಿದ ಕಾರುಣ್ಯವ
ನಾನೇನೆಂದುಪಮಿಸುವನಯ್ಯಾ?
ಗುರುಲಿಂಗವು ಸಾಕ್ಷಾತ್ ಪರಶಿವನಿಂದ ವಿಶೇಷವು!
ಜ್ಯೋತಿಯಲೊದಗಿದ ಜ್ಯೋತಿಯಂತಾಯಿತ್ತು,
ದರ್ಪಣದೊಳಗಣ ಪ್ರತಿಬಿಂಬದಂತಾಯಿತ್ತು,
ಪದಕದೊಳಗಿರಿಸಿದ ರತ್ನದಂತಾಯಿತ್ತು;
ರೂಪದ ನೆಳಲಿನ ಅಂತರಂಗದಂತಾಯಿತ್ತು,
ಕೂಡಲಚೆನ್ನಸಂಗಯ್ಯಾ,
ದರ್ಪಣಕ್ಕೆ ದರ್ಪಣವ ತೋರಿದಂತಾಯಿತ್ತು,
ಎನ್ನ ಸದ್ಗುರುವಿನುಪದೇಶವೆನಗಯ್ಯಾ. ॥ ೨೩೧ ॥

೧೦೮೪

ಎನ್ನ ಸಂಸಾರಸೂತಕವ ತೊಡೆದು,
ನಿಜಲಿಂಗದಲ್ಲಿ ನಿರಹಂಕಾರವೆಂಬ ಘನವ ತೋರಿದನಯ್ಯಾ ಒಬ್ಬ ಶರಣನು.
ಎನಗಾರು ಇಲ್ಲೆಂದು ಪ್ರಭುದೇವರೆಂಬ ಒಬ್ಬ ಶರಣನ
ಎನ್ನ ಕಣ್ಣಮುಂದೆ ಕೃತಾರ್ಥನ ಮಾಡಿ ಸುಳಿಸಿದನಯ್ಯಾ ಆ ಶರಣನು.
ಆ ಶರಣನ ಕೃಪೆಯಿಂದ ಪ್ರಭುದೇವರೆಂಬ ಘನವ ಕಂಡು,
ಮನ ಮನ ಲೀಯವಾಗಿ ಘನ ಘನ ಒಂದಾದ ಕಾರಣ,
ಕೂಡಲಚೆನ್ನಸಂಗಯ್ಯನಲ್ಲಿ ಅಲ್ಲಯ್ಯನೆಂಬ ಮಹಿಮಂಗೆ
ನಮೋ ನಮೋ ಎನುತಿರ್ದೆನು. ॥ ೨೩೨ ॥

೧೧೮೫

ಎನ್ನ ಸರ್ವಾಂಗವೆಲ್ಲವೂ ಲಿಂಗವಾದ ಪರಿಕ್ರಮವೆಂತೆಂದಡೆ:
ಶ್ರೀಗುರು ಬಸವಣ್ಣನುಪದೇಶಿಸಿದ ಇಷ್ಟಲಿಂಗವೆನ್ನ ಸರ್ವಾಂಗದಲ್ಲಿ
ಭಿನ್ನ ನಾಮಂಗಳಿಂದ ಪ್ರಕಾಶಿಸುತ್ತಿಹುದು.
ಅದೆಂತೆಂದಡೆ:
ಸ್ಥೂಲಾಂಗದಲ್ಲಿ ಇಷ್ಟಲಿಂಗವೆಂದು,
ಸೂಕ್ಷ್ಮಾಂಗದಲ್ಲಿ ಪ್ರಾಣಲಿಂಗವೆಂದು
ಕಾರಣಾಂಗದಲ್ಲಿ ಭಾವಲಿಂಗವೆಂದು ತ್ರಿಭೇದವಾಗಿಹುದು.
ಇಂತು ಅಂಗವ ಕುರಿತು ಮೂರು ತೆರನಾಯಿತ್ತು.
ಇನ್ನು ಇಂದ್ರಿಯಂಗಳ ಕುರಿತು ಆರು ತೆರನಾಗಿರ್ಪುದು.
ಅದು ಹೇಗೆಂದಡೆ:
ಹೃದಯದಲ್ಲಿ ಮಹಾಲಿಂಗವೆಂದು, ಶ್ರೋತ್ರದಲ್ಲಿ ಪ್ರಸಾದಲಿಂಗವೆಂದು,
ತ್ವಕ್ಕಿನಲ್ಲಿ ಜಂಗಮಲಿಂಗವೆಂದು, ನೇತ್ರದಲ್ಲಿ ಶಿವಲಿಂಗವೆಂದು,
ಜಿಹ್ವೆಯಲ್ಲಿ ಗುರುಲಿಂಗವೆಂದು, ಘ್ರಾಣದಲ್ಲಿ ಆಚಾರಲಿಂಗವೆಂದು,
ಇಂತು ಷಡಿಂದ್ರಿಯಂಗಳಲ್ಲಿ ಷಡ್ವಿಧಲಿಂಗವಾಗಿ ತೋರಿತ್ತು.
ಇಂತೀ ಮರ್ಯಾದೆಯಲ್ಲಿ ಜ್ಞಾನ-ಕರ್ಮೇಂದ್ರಿಯಂಗಳಲ್ಲಿಯೂ
ಲಿಂಗವೆ ಪ್ರಕಾಶಿಸುತ್ತಿಹುದು.
ಅದು ಹೇಗಂದಡೆ:
ಜ್ಞಾನೇಂದ್ರಿಯಂಗಳಿಗೆಯೂ ಕರ್ಮೇಂದ್ರಿಯಂಗಳಿಗೆಯೂ ಭೇದವಿಲ್ಲ.
ಅದೆಂತೆಂದಡೆ:
ಶ್ರೋತ್ರಕ್ಕೂ ವಾಕ್ಕಿಗೂ ಭೇದವಿಲ್ಲ, ಶಬ್ದಕ್ಕೂ ವಚನಕ್ಕೂ ಭೇದವಿಲ್ಲ;
ತ್ವಕ್ಕಿಗೂ ಪಾಣಿಗೂ ಭೇದವಿಲ್ಲ, ಸ್ಪರ್ಶಕ್ಕೂ ಆದಾನಕ್ಕೂ ಭೇದವಿಲ್ಲ;
ನೇತ್ರಕ್ಕೂ ಪಾದಕ್ಕೂ ಭೇದವಿಲ್ಲ, ರೂಪಿಗೂ ಗಮನಕ್ಕೂ ಭೇದವಿಲ್ಲ;
ಜಿಹ್ವೆಗೂ ಗುಹ್ಯಕ್ಕೂ ಭೇದವಿಲ್ಲ, ರಸಕ್ಕೂ ಆನಂದಕ್ಕೂ ಭೇದವಿಲ್ಲ;
ಘ್ರಾಣಕ್ಕೂ ಗುದಕ್ಕೂ ಭೇದವಿಲ್ಲ, ಗಂಧಕ್ಕೂ ವಿಸರ್ಜನಕ್ಕೂ ಭೇದವಿಲ್ಲ,
ಇನ್ನು ಶ್ರೋತ್ರವೆಂಬ ಜ್ಞಾನೇಂದ್ರಿಯಕ್ಕೂ ವಾಕ್ಕೆಂಬ ಕರ್ಮೇಂದ್ರಿಯಕ್ಕೂ
ಶಬ್ದ ವಿಷಯ, ಮೂಲಭೂತ ಆಕಾಶ, ಈಶಾನಮೂರ್ತಿ ಅಧಿದೇವತೆ.
ತ್ವಕ್ಕೆಂಬ ಜ್ಞಾನೇಂದ್ರಿಯಕ್ಕೂ ಪಾಣಿಯೆಂಬ ಕರ್ಮೇಂದ್ರಿಯಕ್ಕೂ
ಸ್ಪರ್ಶನ ವಿಷಯ, ಮೂಲಭೂತ ವಾಯು, ತತ್ಪುರುಷಮೂರ್ತಿ ಅಧಿದೇವತೆ.
ದೃಕ್ಕೆಂಬ ಜ್ಞಾನೇಂದ್ರಿಯಕ್ಕೂ ಪಾದವೆಂಬ ಕರ್ಮೇಂದ್ರಿಯಕ್ಕೂ
ರೂಪು ವಿಷಯ, ಮೂಲಭೂತ ಅಗ್ನಿ, ಅಘೋರಮೂರ್ತಿ ಅಧಿದೇವತೆ.

ಜಿಹ್ವೆಯೆಂಬ ಜ್ಞಾನೇಂದ್ರಿಯಕ್ಕೂ ಗುಹ್ಯವೆಂಬ ಕರ್ಮೇಂದ್ರಿಯಕ್ಕೂ
ರಸ ವಿಷಯ, ಮೂಲಭೂತ ಅಪ್ಪು, ವಾಮದೇವಮೂರ್ತಿ ಅಧಿದೇವತೆ,
ಘ್ರಾಣವೆಂಬ ಜ್ಞಾನೇಂದ್ರಿಯಕ್ಕೂ ಪಾಯುವೆಂಬ ಕರ್ಮೇಂದ್ರಿಯಕ್ಕೂ
ಗಂಧ ವಿಷಯ, ಮೂಲಭೂತ ಪೃಥ್ವಿ, ಸದ್ಯೋಜಾತಮೂರ್ತಿ ಅಧಿದೇವತೆ.
ಇಂತೀ ಜ್ಞಾನೇಂದ್ರಿಯಂಗಳಿಗೆಯೂ ಕರ್ಮೇಂದ್ರಿಯಂಗಳಿಗೆಯೂ
ಹೃದಯವೆ ಆಶ್ರಯಸ್ಥಾನವಾದ ಕಾರಣ, ಹೃದಯ ಆಕಾಶವೆನಿಸಿತ್ತು.
ಅಲ್ಲಿ ಸ್ಥೂಲ ಸೂಕ್ಷ್ಮ ಕಾರಣ ರೂಪಿಂದೆಲ್ಲಾ ಇಂದ್ರಿಯಂಗಳಿರುತ್ತಿಹವು.
ಗುರೂಪದೇಶದಿಂದ ಎಲ್ಲಾ ಇಂದ್ರಿಯಂಗಳಲ್ಲಿಯೂ ಲಿಂಗವೆ ಪ್ರಕಾಶಿಸುತ್ತಿಪ್ಪುದು.
ಅದು ಹೇಗೆಂದಡೆ:
ಘ್ರಾಣದ ಘ್ರಾಣವೆ ಆಚಾರಲಿಂಗ; ಜಿಹ್ವೆಯ ಜಿಹ್ವೆಯೆ ಗುರುಲಿಂಗ;
ನೇತ್ರದ ನೇತ್ರವೆ ಶಿವಲಿಂಗ; ತ್ವಕ್ಕಿನ ತ್ವಕ್ಕೆ ಜಂಗಮಲಿಂಗ;
ಶ್ರೋತ್ರದ ಶ್ರೋತ್ರವೆ ಪ್ರಸಾದಲಿಂಗ; ಹೃದಯದ ಹೃದಯವೆ ಮಹಾಲಿಂಗ.
ಈ ಆರು ಲಿಂಗಕ್ಕೆ ಅಂಗಸ್ಥಲ ಆರು;
ಅವಾವುವೆಂದಡೆ:
ಐಕ್ಯ ಶರಣ ಪ್ರಾಣಲಿಂಗಿ ಪ್ರಸಾದಿ ಮಹೇಶ್ವರ ಭಕ್ತ
ಎಂದೀ ಆರು ಅಂಗಸ್ಥಲಗಳು.
ಇವಕ್ಕೆ ವಿವರ:
ಆತ್ಮಾಂಗದಲ್ಲಿ ಸದ್ಭಾವ ಹಸ್ತದಿಂದ ಎಲ್ಲಾ ಇಂದ್ರಿಯಂಗಳ ಪರಿಣಾಮವನು
ಸಮರಸಭಕ್ತಿಯಿಂದ ಮಹಾಲಿಂಗಕ್ಕರ್ಪಿಸುವಾತನೆ ಐಕ್ಯ.
ವ್ಯೋಮಾಂಗದಲ್ಲಿ ಸುಜ್ಞಾನಹಸ್ತದಿಂದ ಸುಶಬ್ದದ್ರವ್ಯವನು
ಆನಂದಭಕ್ತಿಯಿಂದ ಪ್ರಸಾದಲಿಂಗಕ್ಕರ್ಪಿಸುವಾತನೆ ಶರಣ.
ಅನಿಲಾಂಗದಲ್ಲಿ ಮನೋಹಸ್ತದಿಂದ ಸುಸ್ಪರ್ಶನದ್ರವ್ಯವನು
ಅನುಭಾವಭಕ್ತಿಯಿಂದ ಜಂಗಮಲಿಂಗಕ್ಕರ್ಪಿಸುವಾತನೆ ಪ್ರಾಣಲಿಂಗಿ.
ಅನಲಾಂಗದಲ್ಲಿ ನಿರಹಂಕಾರಹಸ್ತದಿಂದ ಸುರೂಪುದ್ರವ್ಯವನು
ಅವಧಾನಭಕ್ತಿಯಿಂದ ಶಿವಲಿಂಗಕ್ಕರ್ಪಿಸುವಾತನೆ ಪ್ರಸಾದಿ,
ಜಲಾಂಗದಲ್ಲಿ ಸುಬುದ್ಧಿ ಹಸ್ತದಿಂದ ಸುರಸದ್ರವ್ಯವನು
ನೈಷ್ಠಿಕಾಭಕ್ತಿಯಿಂದ ಗುರುಲಿಂಗಕ್ಕರ್ಪಿಸುವಾತನೆ ಮಾಹೇಶ್ವರ.
ಭೂಮ್ಯಂಗದಲ್ಲಿ ಸುಚಿತ್ತಹಸ್ತದಿಂದ ಸುಗಂಧದ್ರವ್ಯವನು
ಸದ್ಭಕ್ತಿಯಿಂದ ಆಚಾರಲಿಂಗಕ್ಕರ್ಪಿಸುವಾತನೆ ಭಕ್ತ.
ಇನ್ನು ಷಡಾಧಾರಂಗಳಲ್ಲಿ ಷಡಕ್ಷರರೂಪದಿಂದ ಷಡ್ಲಿಂಗ ಸ್ಥಾಪ್ಯವಾಗಿಪ್ಪವು.
ಅದು ಹೇಗೆಂದಡೆ,
ನಕಾರವೆ ಆಚಾರಲಿಂಗ, ಮಕಾರವೆ ಗುರುಲಿಂಗ,

ಶಿಕಾರವೆ ಶಿವಲಿಂಗ, ವಾಕಾರವೆ ಜಂಗಮಲಿಂಗ,
ಯಾಕಾರವೆ ಪ್ರಸಾದಲಿಂಗ, ಓಂಕಾರವೆ ಮಹಾಲಿಂಗ,
ಎಂದು ಆರು ತೆರನಾಗಿಹವು.
ಅದೆಂತೆಂದಡೆ:
ಆಧಾರದಲ್ಲಿ ನಕಾರ, ಸ್ವಾಧಿಷ್ಠಾನದಲ್ಲಿ ಮಕಾರ,
ಮಣಿಪೂರಕದಲ್ಲಿ ಶಿಕಾರ, ಅನಾಹತದಲ್ಲಿ ವಾಕಾರ,
ವಿಶುದ್ಧಿಯಲ್ಲಿ ಯಕಾರ, ಆಜ್ಞೆಯಲ್ಲಿ ಓಂಕಾರ,
ಇಂತೀ ಮರ್ಯಾದೆಯಲ್ಲಿ ಷಡ್ಧಾತುವಿನಲ್ಲಿ
ಷಡಕ್ಷರರೂಪಿಂದ ಷಡ್ಲಿಂಗ ಸ್ಥಾಪ್ಯವಾಗಿಹವು.
ಅದು ಹೇಗೆಂದಡೆ:
ತ್ವಙ್ಮಯವಾಗಿಹುದು ಓಂಕಾರ, ರುಧಿರಮಯವಾಗಿಹುದು ನಕಾರ,
ಮಾಂಸಮಯವಾಗಿಹುದು ಮಕಾರ, ಮೇಧೋಮಯವಾಗಿಹುದು ಶಿಕಾರ,
ಅಸ್ಥಿಮಯವಾಗಿಹುದು ವಾಕಾರ, ಮಜ್ಜಾಮಯವಾಗಿಹುದು ಯಕಾರ.
ಇಂತೀ ಷಡ್ಧಾತುವೆ ಷಡಕ್ಷರಮಯವಾಗಿ, ಅವೆ ಲಿಂಗಂಗಳಾಗಿ,
ಒಳಹೊರಗೆ ತೆರಹಿಲ್ಲದೆ ಸರ್ವಾಂಗವೆಲ್ಲವೂ ಲಿಂಗಮಯವಾದ ಇರವು.
ಅದು ತಾನೆ ಶಿವನಿರವು, ಅದು ತಾನೆ ಶಿವನ ಭವನ.
ಅದು ತಾನೆ ಶಿವನ ವಿಶ್ರಾಮಸ್ಥಾನ.
ಇಂತೀ ಷಟ್ಸ್ಥಲಬ್ರಹ್ಮವನರಿದಾತನೆ ಶರಣ, ಆತನೆ ಲಿಂಗೈಕ್ಯ.
ಇಂತೀ ಷಟ್ಸ್ಥಲಬ್ರಹ್ಮವೆಂಬುದು
ಅಪ್ರಮಾಣ ಅಗೋಚರ ಅನಿರ್ವಾಚ್ಯವಾದ ಕಾರಣ,
ವಚಿಸುತ್ತ ವಚಿಸುತ್ತ ವಚಿಸುತ್ತ ವಚನಗೆಟ್ಟಿತ್ತು.
ಉಪ್ಪು ನೀರೊಳು ಕೂಡಿದಂತೆ, ವಾರಿಕಲ್ಲು ಅಂಬುಧಿಯೊಳು ಬಿದ್ದಂತೆ,
ಶಿಖಿಕರ್ಪೂರ ಯೋಗದಂತೆ ಆದೆನಯ್ಯಾ ಕೂಡಲಚೆನ್ನಸಂಗಯ್ಯನಲ್ಲಿ,
ಬಸವಣ್ಣನ ಭಾವಹಸ್ತ ಮುಟ್ಟಿದ ಕಾರಣ. || ೨೩೩ ||

೧೦೮೬

ಎನ್ನ ಹೊಗಳಲಿಕ್ಕೆ ನಿಮಗೆ ತೆರಹಿಲ್ಲ:
ನಿಮ್ಮ ಹೊಗಳಲಿಕ್ಕೆ ಎನಗೆ ಹೊಲಬಿಲ್ಲ.
ಒಬ್ಬರನ್ನೊಬ್ಬರು ಹೊಗಳಲಿಕ್ಕೆ ಹೊತ್ತು ಹೋಯಿತ್ತಲ್ಲದೆ
ಸಂಗಮನಾಥನ ಆಪ್ಯಾಯನಕ್ಕೆ ಪದಾರ್ಥವ ನೀಡಲಿಲ್ಲ.
ಕೂಡಲಚೆನ್ನಸಂಗಯ್ಯಂಗೆ
ಪದಾರ್ಥವನಳವಡಿಸ ನಡೆಯಿರೆ ಸಂಗನಬಸವಣ್ಣಾ. || ೨೩೪ ||

೧೦೮೭

ಎನ್ನಾಧಾರಚಕ್ರಕ್ಕೆ 'ನ' ಕಾರವಾದಾತ ಬಸವಣ್ಣ;
ಎನ್ನ ಸ್ವಾಧಿಷ್ಠಾನಚಕ್ರಕ್ಕೆ 'ಮ'ಕಾರವಾದಾತ ಬಸವಣ್ಣ;
ಎನ್ನ ಮಣಿಪೂರಕಚಕ್ರಕ್ಕೆ 'ಶಿ'ಕಾರವಾದಾತ ಬಸವಣ್ಣ;
ಎನ್ನ ಅನಾಹತಚಕ್ರಕ್ಕೆ 'ವಾ'ಕಾರವಾದಾತ ಬಸವಣ್ಣ;
ಎನ್ನ ವಿಶುದ್ಧಿಚಕ್ರಕ್ಕೆ 'ಯ'ಕಾರವಾದಾತ ಬಸವಣ್ಣ;
ಎನ್ನ ಆಜ್ಞಾಚಕ್ರಕ್ಕೆ 'ಓಂ'ಕಾರವಾದಾತ ಬಸವಣ್ಣ;
ಎನ್ನ ಬ್ರಹ್ಮರಂಧ್ರಕ್ಕೆ ಸಾವಿರದೈವತ್ತೆರಡಕ್ಷರವಾದಾತ ಬಸವಣ್ಣ;
ಎನ್ನ ಶಿಖಾಚಕ್ರಕ್ಕೆ 'ಕ್ಷ'ಕಾರವಾದಾತ ಬಸವಣ್ಣ;
ಎನ್ನ ಪಶ್ಚಿಮಚಕ್ರಕ್ಕೆ 'ಹ'ಕಾರವಾದಾತ ಬಸವಣ್ಣ;
ಇಂತೀ ಎನ್ನ ನವಚಕ್ರಂಗಳಲ್ಲಿಯೂ, ನವನಾಳಗಳಲ್ಲಿಯೂ
ನವವಿಧಲಿಂಗಸ್ವರೂಪವಾದಾತ ಬಸವಣ್ಣ.
ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ ನಿಮ್ಮ ತೋರಿ
ಎನ್ನ ಸಲಹಿದ ವರಗುರು ಸಂಗನಬಸವಣ್ಣನ ಶ್ರೀಪಾದಕ್ಕೆ
ಶರಣೆಂದು ಬದುಕಿದೆನು ಕಾಣಾ ಪ್ರಭುವೆ. || ೨೩೬ ||

೧೦೮೮

ಎಲ್ಲರ ದೀಕ್ಷೆಯ ಪರಿಯಂತಲ್ಲ ಎಮ್ಮಯ್ಯನ ದೀಕ್ಷೆ.
ನಡೆ ನುಡಿ ಶುದ್ಧವಾದವರಿಗಲ್ಲದೆ ಅನುಗ್ರಹಿಸ ನೋಡಾ.
ಪರಮಾರ್ಥಕಲ್ಲದ ಜಡ ನರರನೊಲ್ಲನೊಲ್ಲ, ದೀಕ್ಷೆಯ ಕೊಡ,
ಭವಭಾರಿಗಳ ಮುಖದತ್ತ ನೋಡನಯ್ಯಾ
ಕೂಡಲಚೆನ್ನಸಂಗಯ್ಯನೆಂಬ ಜ್ಞಾನಗುರು. || ೨೩೭ ||

೧೦೮೯

ಎಲೆ ಅಯ್ಯಾ,
ಸಜ್ಜನಸದ್ಭಾವಿಗಳ ಸಂಭಾಷಣೆಯಿಂದ, ಮಹಾನುಭಾವಿಗಳ ಕಾಣಬಹುದು.
ಮಹಾನುಭಾವಿಗಳ ಸಂಭಾಷಣೆಯಿಂದ ಶ್ರೀಗುರುವ ಕಾಣಬಹುದು.
ಶ್ರೀಗುರುವಿನ ಸಂಭಾಷಣೆಯಿಂದ ಲಿಂಗವ ಕಾಣಬಹುದು.
ಲಿಂಗದ ಸಂಭಾಷಣೆಯಿಂದ ಜಂಗಮವ ಕಾಣಬಹುದು.
ಜಂಗಮದ ಸಂಭಾಷಣೆಯಿಂದ ಆಚಾರವ ಕಾಣಬಹುದು.
ಆಚಾರದ ಸಂಭಾಷಣೆಯಿಂದ ಪ್ರಸಾದವ ಕಾಣಬಹುದು
ಪ್ರಸಾದದ ಸಂಭಾಷಣೆಯಿಂದ ತನ್ನ ತಾ ಕಾಣಬಹುದು

ನನಗೇನೂ ಬೇಡ, ನಿಮ್ಮ ಸಜ್ಜನಸದ್ಭಾವಿಗಳ ಸಂಭಾಷಣೆಯನೆ
ಎನಗೆ ಕರುಣಿಸೂದು–ಕೂಡಲಚೆನ್ನಸಂಗಮದೇವಾ. || ೨೩೭ ||

೧೦೯೦

ಎಲೆ ನಿರೀಶ್ವರವಾದಿಗಳಿರಾ ನೀವು ಕೇಳಿರೆ, ನೀವು ಕೇಳಿರೆ, ನೀವು ಕೇಳಿರೆ,
ನಿಮ್ಮ ನಿಟಿಲದಲ್ಲಿ ಸಂಚಿತ ಪ್ರಾರಬ್ಧ ಆಗಾಮಿ ಎಂಬ
ಲಿಖಿತವ ಬರೆದವರಾರು ಹೇಳಿರೆ?
ನೀವೆ ಬ್ರಹ್ಮ, ಬೇರೆ ಈಶ್ವರನಿಲ್ಲೆಂದು ನುಡಿವಿರಿ,
ತಪಸ್ಸು ತನ್ನಂತೆ, ಊಟ ಮನದಿಚ್ಛೆಯೆಂಬ
ಲೋಕಗಾದೆಯ ಮಾತು ನಿಮಗಾಯಿತ್ತು.
ಅಶನವನುಂಡು ವ್ಯಸನಕ್ಕೆ ಹರಿದು ವಿಷಯಂಗಳೆಂಬ ಹಿಡಿಮೊಲಕ್ಕೆ ಸಿಲ್ಕಿ
ಪಂಚೇಂದ್ರಿಯಂಗಳೆಂಬ ನಾಯಿಗಳಿಚ್ಛೆಗೆ ಹರಿದು,
ನಾಯಾಗಿ ಬಗುಳಿ ನಾಯ ಡೋಣಿಯಲ್ಲಿ ಉಂಡು
ನಾಯ ಸಾವ ಸಾವ ಅದ್ವೈತಿಗಳಿರಾ, ನಿಮಗೇಕೋ ಬೊಮ್ಮದ ಮಾತು?
ಬ್ರಹ್ಮ ವಿಷ್ಣ್ವಾದಿಗಳು 'ಬ್ರಹ್ಮೋಹಂ' ಎಂದು ಕೆಮ್ಮನೆ ಕೆಟ್ಟು
ಹದ್ದು ಹೆಬ್ಬಂದಿಗಳನಾದುದನರಿಯಿರೆ?
ಹಮ್ಮಿಂದ ಸನತ್ಕುಮಾರ ಒಂಟೆಯಾದುದನರಿಯಿರೆ?
ಕರ್ತನು ಭರ್ತನು ಹರ್ತನು ಶಿವನಲ್ಲದೆ
ಬೇರೆ ಮತ್ತೊಬ್ಬ ಕಾವರಿಲ್ಲ ಕೊಲುವರಿಲ್ಲ, ಮತ್ತೊಬ್ಬರುಳ್ಳಡೆ ಹೇಳಿರೆ,
ತ್ವಂ ವಿಶ್ವಕರ್ತಾ ತವ ನಾಸ್ತಿ ಕರ್ತಾ|
ತ್ವಂ ವಿಶ್ವಭರ್ತಾ ತವ ನಾಸ್ತಿ ಭರ್ತಾ||
ತ್ವಂ ವಿಶ್ವಹರ್ತಾ ತವ ನಾಸ್ತಿ ಹರ್ತಾ|
ತ್ವಂ ವಿಶ್ವನಾಥಸ್ತವ ನಾಸ್ತಿ ನಾಥಃ||
ಅಸತ್ಯಮಪ್ರತಿಷ್ಠಂ ಚ ಜಗದಾಹುರನೀಶ್ವರಮ್|| ಎಂದುದಾಗಿ
ಶಿವನೆ, ನಿಮ್ಮ ನಿಲ್ಲೆಂದು, ಬೊಮ್ಮವಾವೆಂಬ
ಹಮ್ಮಿನ ಅದ್ವೈತಿಗಳ ಹಿಡಿದು, ಕಾಲನ ಕೈಯಲ್ಲಿ ಕೆಡಹಿ
ಬಾಯಲ್ಲಿ ಹುಡಿಯ ಹೊಯ್ಸಿ,
ನರಕಾಗ್ನಿಯಲ್ಲಿ ಅನೇಕಕಾಲ ಇರಿಸದೆ ಮಾಣ್ಬನೆ
ನಮ್ಮ ಕೂಡಲಚೆನ್ನಸಂಗಮದೇವರು? || ೨೩೮ ||

೧೦೯೧

ಎಲೆ ಶಿವನೆ ನಿಮ್ಮಲ್ಲಿ ಸಾಲವ ಕೊಂಡು, ನಿಮ್ಮ ಶಿವಪುರವ ಹೊಗುವನಲ್ಲ.
ಪೃಥ್ವಿಯ ಸಾಲಕ್ಕೆ ಪೃಥ್ವಿಯನೇ ಕೊಟ್ಟು,

ಅಪ್ಪುವಿನ ಸಾಲಕ್ಕೆ ಅಪ್ಪುವನೆ ಕೊಟ್ಟು,
ತೇಜದ ಸಾಲಕ್ಕೆ ತೇಜವನೆ ಕೊಟ್ಟು,
ವಾಯುವಿನ ಸಾಲಕ್ಕೆ ವಾಯುವನೆ ಕೊಟ್ಟು,
ಆಕಾಶದ ಸಾಲಕ್ಕೆ ಆಕಾಶವನೆ ಕೊಟ್ಟು,
ಇನ್ನಾರಿಗೂ ಪ್ರಸಾದವ ಕೊಡಲಿಲ್ಲವೆಂದು
ಕೂಡಲಚೆನ್ನಸಂಗಮದೇವರಲ್ಲಿ
ಹೂಳಿ ಹೊಕ್ಕ ಶರಣಂಗೆ ನಮೋ ನಮೋ ಎಂಬೆ. || ೨೩೯ ||

೧೯೨

ಏಕಭಾಜನ ಏಕಭಾಜನವೆ[illegible]ರು; ನಾವಿದನರಿಯೆವಯ್ಯಾ.
ಅಂಗದ ಮೇಲೆ ಪ್ರಾಣಲಿಂಗಪ್ರತಿಷ್ಠೆಯಾದ ಬಳಿಕ,
ಲಿಂಗಕ್ಕೆಯೂ ತನಗೆಯೂ ಏಕಭಾಜನವಲ್ಲದೆ ಭಿನ್ನಭಾಜನವುಂಟೆ?
ಲಿಂಗಕ್ಕೆಯೂ ತನಗೆಯೂ ಏಕಭಾಜನವಾಗದನ್ನಕ್ಕರ
ಅಂಗದ ಕಳೆಯಲ್ಲಿ ಲಿಂಗವ ಧರಿಸಿಕೊಳಬಹುದೆ?
ಇದನರಿದು ಏಕಭಾಜನವಾಗದಿರ್ದಡೆ ಅಂತು ದೋಷ.
ಅರಿಯದೆ ಏಕಭಾಜನವಾದಡೆ ಇಂತು ದೋಷ.
ಈ ಕುಳಸ್ಥಳದ ಭೇದವ ಭೇದಿಸಬಲ್ಲ
ಕೂಡಲಚೆನ್ನಸಂಗಾ, ನಿಮ್ಮ ಶರಣ. || ೨೪೦ ||

೧೯೩

'ಏಕಮೂರ್ತಿಸ್ತ್ರಯೋ ಭಾಗಾ ಗುರುರ್ಲಿಂಗಂತು ಜಂಗಮಃ'–ಎಂದುದಾಗಿ
ಪರತರಪರಂಜ್ಯೋತಿಯಪ್ಪ ಮಹಾಲಿಂಗವೆ ಲೋಕಾನುಗ್ರಹಕ್ಕಾಗಿ–
ಅಗ್ಗಣಿಯೆ ಆಣೆಕಲ್ಲಾದಂತೆ, ಕರಗಿದ ತುಪ್ಪವೆ ಹೆಪ್ಪುಪ್ಪವಾದಂತೆ.
ಗುರು ಲಿಂಗ ಜಂಗಮವಾಗಿ ಪರಿಣಮಿಸಿರ್ಪುದು ಕಾಣಾ!
ಆ ಗುರುತತ್ವದಿರವನರಿದು ಗುರುವಾಗಿ ಗುರುಲಿಂಗವ ಪೂಜಿಸಬೇಕು.
ಲಿಂಗತತ್ವದಂಗವನರಿದು ಲಿಂಗವಾಗಿ ಶಿವಲಿಂಗವ ಪೂಜಿಸಬೇಕು.
ಜಂಗಮತತ್ವದಿಂಗಿತವನರಿದು ಜಂಗಮವಾಗಿ ಜಂಗಮವ ಪೂಜಿಸಬೇಕು.
ಇಂತೀ ತ್ರಿವಿಧಲಿಂಗವ ಪೂಜಿಸಿ ತ್ರಿವಿಧ ಪಾದೋದಕವ ಪಡೆಯಬೇಕು.
ಇದೇ ಅಂತರಂಗದ ಆತ್ಮತೀರ್ಥ, ಕಾಣಾ!
"ಅಂತಸ್ಥಂ ಮಾಂ ಪರಿತ್ಯಜ್ಯ ಬಹಿಃಸ್ಥಂ ಯಸ್ತುಸೇವತೇ |
ಹಸ್ತಸ್ಥಪಿಂಡಮುತ್ಸೃಜ್ಯ ಲಿಹೇತ್ಕೂರ್ಪರಮಾತ್ಮನಃ ||–ಎಂದುದಾಗಿ,
ಪರಿಶುದ್ಧವಾದ ಅಂತರಂಗದ ಆತ್ಮತೀರ್ಥವನುಳಿದು,

ಬಹಿರಂಗದ ಜಡತೀರ್ಥವ ಸೇವಿಸಿದಡೆ
ಷಡ್ರಸದಿಂದೊಡಗೂಡಿದ ಪರಮಾನ್ನದ ಪಿಂಡವನುಳಿದು
ಮೊಳಕೈಯ ನೆಕ್ಕಿದಂತಕ್ಕು ಕಾಣಾ–ಕೂಡಲಚೆನ್ನ ಸಂಗಮದೇವಾ. ॥ ೨೪೧ ॥

೧೧೯೪

'ಏಕೋ ದೇವೋ ನ ದ್ವಿತೀಯಃ' ಎಂದೆನಿಸುವ ಶಿವನೊಬ್ಬನೆ,
ಜಗಕೆ ಗುರುವೆಂಬುದನರಿಯದೆ,
ವಿಶ್ವಕರ್ಮ ಜಗದ ಗುರುವೆಂದು ನುಡಿವ
ದುರಾಚಾರಿಯ ಮುಖವ ನೋಡಲಾಗದು.
ಪ್ರಥಮದಲ್ಲಿ ಹುಟ್ಟಿದಾಗ ವಿಶ್ವಕರ್ಮಂಗೆ ತಾಯಿತಂದೆಗಳಾರು?
ಅವನು ಹುಟ್ಟಿದಾಗ ಹೊಕ್ಕಳನಾಳವ ಕೊಯ್ವ ಕತ್ತಿಯ ಮಾಡಿದರಾರು?
ಅವಂಗೆ ತೊಟ್ಟಿಲವ ಕಟ್ಟಿದರಾರು?
ಅವಂಗೆ ಹಾಲು ಬೆಣ್ಣೆ ಬಿಸಿನೀರ ಇಡುವುದಕೆ ಮಡಕೆಯ ಮಾಡಿದರಾರು?
ಅವಂಗೆ ವಿದ್ಯಾಬುದ್ಧಿಯ ಕಲಿಸಿದರಾರು?
ಅವಂಗೆ ಅರುಹು ಮರಹು ಹುಟ್ಟಿಸಿದರಾರು?
ಅವಂಗೆ ಇಕ್ಕುಳ, ಅಡಿಗಲ್ಲು, ಚಿಮ್ಮಟಿಗೆ,
ಮೊದಲಾದ ಸಂಪಾದನೆಗಳ ಕೊಟ್ಟವರಾರು?
ಇನಿತನು ವಿಚಾರಿಸದೆ ತಾನು ಹೆಗ್ಗಳವೆಂದು ಗಳಹುವನ
ದುರಾಚಾರಿಯೆಂದು ಭಾವಿಸುವುದು.
ಸರ್ವಜಗದ ಜೀವದ ಪ್ರವರ್ತನೆಯು ಚಾರಿತ್ರಂಗಳ
ನೆನಹು ಮಾತ್ರದಿಂದ ಶಿವನು ಒಂದೇ ವೇಳೆಯಲ್ಲಿ ನಿರ್ಮಿಸಿದನು.
ಅದೆಂತೆಂದಡೆ:
ಅರಣ್ಯಗಿರಿಯ ಕನ್ನಡಿಯೊಳು ನೋಡಿದಂತೆ,
ಗಿಡವೃಕ್ಷಂಗಳು ಎಳೆಯದು ಹಳೆಯದು ಒಂದೆ ವೇಳೆ ಕಾಣಿಸಿದಂತೆ,
ಒಂದೆ ವೇಳೆಯಲಿ ಬೀಜವೃಕ್ಷನ್ಯಾಯದಲ್ಲಿ, ದಿವಾರಾತ್ರಿನ್ಯಾಯದಲ್ಲಿ
ಹಿಂಚು ಮುಂಚು ಕಾಣಲೀಯದೆ,
ಸರ್ವಜೀವವ ಹುಟ್ಟಿಸಿ, ರಕ್ಷಿಸಿ, ಸಂಹರಿಸಿ, ಲೀಲಾವಿನೋದದಿಂದಿಪ್ಪ
ಶಿವನೊಬ್ಬನೆ ಸಕಲ ಜಗಕ್ಕೆ ಗುರುಸ್ವಾಮಿ.
"ಮನ್ನಾಥಸ್ತ್ರಿಜಗನ್ನಾಥೋ ಮದ್ಗುರುಸ್ತ್ರಿಜಗದ್ಗುರುಃ ।
ಸರ್ವಾತ್ಮ ಸ್ವಹಂ ಭೂತಾತ್ಮಾ ತಸ್ಮೈಶ್ರೀಗುರುವೇ ನಮಃ ॥ ಎಂದುದಾಗಿ
ಅರಿತರಿತು ಅನಾಚಾರವ ಗಳಹಿ,
ಗುರುಲಿಂಗಜಂಗಮವೆ ಘನವೆಂದು ಅರಿಯದ

ಶಿವಭಕ್ತಿಶೂನ್ಯ ಪಾತಕನ ಹಿರಿಯನೆಂದು ಸಂಭಾಷಣೆಯ ಮಾಡಿ
ಅವನ ಚಾಂಡಾಲ ಬೋಧೆಯ ಕೇಳ್ವ ಪಂಚಮಹಾಪಾತಕನ
ರೌರವನರಕದಲ್ಲಿ ಹಾಕಿ ಮೆಟ್ಟಿಸುತಿಪ್ಪ, ಕೂಡಲಚೆನ್ನಸಂಗಮದೇವ. ॥ ೨೪೨ ॥

೧೧೯೫

ಐಕ್ಯಂಗೆ ಆತ್ಮನೆ ಅಂಗ, ಆ ಅಂಗಕ್ಕೆ ಸದ್ಭಾವವೇ ಹಸ್ತ;
ಆ ಹಸ್ತಕ್ಕೆ ಮಹಾಸಾದಾಖ್ಯ, ಆ ಸಾದಾಖ್ಯಕ್ಕೆ ಚಿಚ್ಛಕ್ತಿ.
ಆ ಶಕ್ತಿಗೆ ಮಹಾಲಿಂಗ, ಆ ಲಿಂಗಕ್ಕೆ ಶಾಂತತೀತೋತ್ತರವೆ ಕಲೆ;
ಆ ಕಲೆಗೆ ಹೃದಯೇಂದ್ರಿಯವೆ ಮುಖ,
ಆ ಮುಖಕ್ಕೆ ಸುಪರಿಣಾಮದ್ರವ್ಯಂಗಳನು
ರೂಪು ರುಚಿ ತೃಪ್ತಿಯನರಿದು ಸಮರಸಭಕ್ತಿಯಿಂದರ್ಪಿಸಿ,
ಆ ಸುಪರಿಣಾಮಪ್ರಸಾದವ ಭೋಗಿಸಿ ಸುಖಿಸುತ್ತಿಹನು,
ಕೂಡಲಚೆನ್ನಸಂಗಾ, ನಿಮ್ಮ ಲಿಂಗೈಕ್ಯನು. ॥ ೨೪೩ ॥

೧೧೯೬

ಐಕ್ಯಪದವ ಹಡೆವಡೆ ನಿಕ್ಷೇಪಧಾರಿಣಿಯಾಗಿರಬೇಕು.
ಗುರುವೆಂಬ ಅಂಜನ, ಶಿಷ್ಯನೆಂಬ ಪಾಯಾಳು, ಲಿಂಗವೆ ಕಡವರ,
ಆಚಾರವೆ ದಿಗ್ಬಂಧನ,
'ಭಕ್ತಕಾಯ ಮಮಕಾಯ'ವೆಂದುದು
ಕೂಡಲಚೆನ್ನಸಂಗಯ್ಯನ ವಚನ. ॥ ೨೪೪ ॥

೧೧೯೭

ಒಂದನೆಯ ಬಾಗಿಲಲ್ಲಿ ನೇಹವಿಪ್ಪುದು,
ಎರಡನೆಯ ಬಾಗಿಲಲ್ಲಿ ಗುಣವಿಪ್ಪುದು,
ಮೂರನೆಯ ಬಾಗಿಲಲ್ಲಿ ಧ್ಯಾನವಿಪ್ಪುದು,
ನಾಲ್ಕನೆಯ ಬಾಗಿಲಲ್ಲಿ ಯೋಗವಿಪ್ಪುದು,
ಐದನೆಯ ಬಾಗಿಲಲ್ಲಿ ಪಂಚೇಂದ್ರಿಯ ಗುಣವಿಪ್ಪುದು,
ಆರನೆಯ ಬಾಗಿಲಲ್ಲಿ ಷಡುಸ್ಥಲಂಗಳಿಪ್ಪವು,
ಏಳನೆಯ ಬಾಗಿಲಲ್ಲಿ ಸಪ್ತವ್ಯಸನಂಗಳಿಪ್ಪವು,
ಎಂಟನೆಯ ಬಾಗಿಲಲ್ಲಿ ಅಷ್ಟಮದಂಗಳಿಪ್ಪವು,
ಒಂಬತ್ತನೆಯ ಬಾಗಿಲಲ್ಲಿ ನಾದಬಿಂದುಗಳಿಪ್ಪವು,
ಪತ್ತನೆಯ ಬಾಗಿಲಲ್ಲಿ ಸುಜ್ಞಾನವಿಪ್ಪುದು,–

ಇಂತೀ ಒಂಬತ್ತು ಬಾಗಿಲಂ ಕಳೆದು
ದಶಮಬಾಗಿಲಂ ತೆಗೆದು ಹೊಕ್ಕು
ಮಹಾಸುಖಿಯಾಗಿದ್ದ ಕೂಡಲಚೆನ್ನಸಂಗಾ ನಿಮ್ಮ ಶರಣ. || ೨೪೫ ||

೧೦೯೮

ಒಂದೊಂದರ ಸಂಬಂಧ ಮತ್ತೊಂದಕ್ಕಳವಡದು.
ಕಂದನೊಳಗಣ ಸ್ವಪ್ನ ಮುಂದುದೋರುವುದೇ?
ಚಂದ್ರಕಾಂತಶಿಲೆಯಲ್ಲಿ ರತ್ನವ ಕಂಡೆನೆಂಬ ಅಹಂಕಾರ ನಿನಗೇಕೆ ಶರಣಾ?
ಕೈಯ ಕುರುಹಳಿಯದು, ಬಾಯ ಮೊರೆ ಮಿಗೆವರಿಯುತ್ತಿದೆ,
ಕೂಡಲಚೆನ್ನಸಂಗಯ್ಯನಲ್ಲಿ ಬಸವನೂ ಪ್ರಭುವೂ
ಇಬ್ಬರೂ ಮರುಳಾದರು. || ೨೪೬ ||

೧೦೯೯

ಒಕ್ಕುದ ಪ್ರಸಾದವೆಂದಿಕ್ಕುವಾತನನಾಚಾರಿ;
ಕೊಂಬಾತ ನೆಟ್ಟನೆ ವ್ರತಗೇಡಿ.
ಪ್ರಸಾದವೆಂಬುದು ಹೆಸರಿಲ್ಲದ ಘನವು!
ಪ್ರಸಾದಿಯಾದಾತ ಶೂನ್ಯಶರಣ,
ಇರವೆ ಲಿಂಗೈಕ್ಯ, ಪರವೆ ಪ್ರಸಾದ!
ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ
ಗುರುವೆಂಬ ಓಗರಕ್ಕೆ ಶಿಷ್ಯನೆಂಬ ಪ್ರಸಾದ. || ೨೪೭ ||

೧೧೦೦

ಒಕ್ಕುದ ಮಿಕ್ಕುದ ಕೊಂಬೆನೆಂಬ ನಿಚ್ಚಳ ಶರಣನ ತೋರಾ,
ಒಕ್ಕುದ ಮಿಕ್ಕುದ ಕೊಂಬೆನೆಂಬ ವಿವರವ ಬಲ್ಲಡೆ ಹೇಳಿರೆ?
ಒಕ್ಕುದೆಂಬುದೆ ಕಾಯ, ಮಿಕ್ಕುದೆಂಬುದೆ ಪ್ರಾಣ.
ಈ ಉಭಯವೆ ತಕ್ಕುದೆಂದರಿತುಕೊಳ್ಳ ಬಲ್ಲಡೆ
ಸಿಕ್ಕುವ ಕಾಣಾ ಕೂಡಲಚೆನ್ನಸಂಗಮದೇವ. || ೨೪೮ ||

೧೧೦೧

ಒಡಲಿಲ್ಲದಾತ ಜಂಗಮ, ಪ್ರಾಣವಿಲ್ಲದಾತ ಭಕ್ತನಯ್ಯಾ.
ಆಚಾರವೆ ಜಂಗಮ, ವಿಚಾರವೆ ಭಕ್ತನಯ್ಯಾ.
ಆಚಾರ-ವಿಚಾರವೆಂಬುದು ಸ್ವಾನುಭಾವ ಸಂಭಾಷಣೆ
ಕೂಡಲಚೆನ್ನಸಂಗಮದೇವಾ. || ೨೪೯ ||

೧೧೦೨

ಒಡಲೆಂಬಾರಣ್ಯದ ಪಡುವಣ ಕಾಳುಗಟ್ಟದ
ಗಹ್ವರದ ನವದ್ವಾರದೊಳಗೆ ಅಡಗಿಪ್ಪ ಐವರ ಕಳ್ಳರ ತಿಳಿದು ನೋಡಿರಯ್ಯಾ.
ಆ ಕಳ್ಳರು ಇಹನ್ನಕ್ಕರ ಊರಿಗುಪಟಳ ಮನೆಗೆ ಮಾರಿ,
ಚೌಕ ಗ್ರಾಮದ ಮಧ್ಯದವರಿಗುಳುಹಿಲ್ಲ.
ತನುಪ್ರಪಂಚಿಗಳು ಮನಪ್ರಪಂಚಿಗಳು ಧನಪ್ರಪಂಚಿಗಳು
ವಾದಿಗಳು ತರ್ಕಿಗಳು ನಾನಾ ಕುಟಿಲ ಕುಹಕ ಬಹುಪಾಪಿಗಳೆಲ್ಲ ನೆರೆದು,
ಆ ಕಳ್ಳರ ಹಿಡಿದಿಹೆವೆನುತ್ತಿಹರಯ್ಯಾ.
ಅದಕ್ಕೆಂಟು ಬೀದಿ ಒಂಬತ್ತು ಓಡುಗಂಡಿ ಕಾಣಬಾರದ ಕತ್ತಲೆ,
ಹೆಜ್ಜೆಯ ಹೊಲಬ ಕಂಡೆಹೆನೆಂಬನು ಭ್ರಾಂತ ನೋಡಾ!
ಓಂ ಬ್ರಹ್ಮಸ್ನಾನಂ ಪವನಜ್ಞಾನಂ ಲಿಂಗಧ್ಯಾನಂ।
ಸುಜ್ಞಾನದರ್ಶನಂ ಪ್ರಭಾಕರಂ ದಿವಾಕರಂ॥
ಇಂತೀ ಶ್ರುತಿಮತದಲ್ಲಿ ತಿಳಿದು ನೋಡಲಿಕೆಯಾಗಿ ಆ ಹೆಜ್ಜೆ ಹೋಯಿತು!
ಅಂಗಸಂಗನ ಹಳ್ಳಿಯ ಒಳಗೆರೆಯ ಒಸರುಬಾವಿಯ
ಲಿಂಗಗೂಡಿನ ಶಿವಪುರದ ಸೀಮೆಯ,
ನಿಟಿಲಪುರದ ತಲೆವಲದಲ್ಲಿ ಸಿಕ್ಕಿದ ಕಳ್ಳರ ಅಂಗವ ಮೇಲೆ ಕಟ್ಟಿತಂದು
ಎನ್ನೊಡೆಯ ಪ್ರಭುರಾಯಂಗೊಪ್ಪಿಸಲು
ಆ ಪ್ರಭುರಾಯ ತನ್ನವರೆಂದು ಒಕ್ಕುದ ಮಿಕ್ಕುದನಿಕ್ಕಿ ರಕ್ಷಿಸುವ ಕಾಣಿರೆ!
ಇಂತಪ್ಪ ಘಟ ಪಂಚಭೂತಂಗಳ ಕಟ್ಟಿ ನಿಲಿಸಿ,
ಆತ್ಮಜ್ಞಾನ ಭಕ್ತಿರಸಾಮೃತಸಾರಾಯವನುಣಬಲ್ಲವರಾರೆಂಪಡೆ
ಪ್ರಭುವಿನ ಬಳಿಯ ಬಸವಸಂತತಿಗಲ್ಲದೆ ಅಳವಡದು
ಮಿಕ್ಕಿನ ಪ್ರಪಂಚಿಗಳಿಗೆ ಅಸಾಧ್ಯ ಕಾಣಾ
ಕೂಡಲಚೆನ್ನಸಂಗಮದೇವಯ್ಯಾ. || ೨೫೦ ||

೧೧೦೩

ಒಬ್ಬರಿಗೊಬ್ಬರು ಮಚ್ಚರಿಸಿ
ನರಕಕ್ಕೆ ಇಳಿಯ ಹೇಳಿಕೊಟ್ಟನೆ ಶ್ರೀಗುರು ಲಿಂಗವನು?
ಶಿವಭಕ್ತರು ಮದ ಮಚ್ಚರವ ಬಿಟ್ಟು
ಗುರುಲಿಂಗಜಂಗಮಕ್ಕೆ ಮಾಡುವ ಸದ್ಭಕ್ತನ ಶಿವನೆಂದು ಕಾಣದಿದ್ದರೆ
ಅಘೋರ ನರಕದಲ್ಲಿಕ್ಕುವ ಕೂಡಲಚೆನ್ನಸಂಗಮದೇವ. || ೨೫೧ ||

೧೧೦೪

ಒಮ್ಮೆ ನೆಲದಲ್ಲಿ ಬಿತ್ತಿದ ಬಿತ್ತುವ ಕಿತ್ತಿ ಕಿತ್ತಿ ಮತ್ತೆ ಬಿತ್ತುತ್ತ ಹೋದಡೆ,
ಆ ಬಿತ್ತು ಮೊಳೆತು ಕಳೆಯೇರಿ ಬೆಳೆದು
ಬೆಳಸನೀವ ಪರಿಯಿನ್ನೆಂತೊ, ಮರುಳು ಮಾನವಾ?
ಗುರುವಿತ್ತ ಲಿಂಗವ ತೊರೆ ತೊರೆದು ಮರಳಿ ಮರಳಿ ಧರಿಸಿದಡೆ
ಆ ಇಷ್ಟಲಿಂಗವು ಅನಿಷ್ಟವ ಕಳೆದು ಇಷ್ಟಾರ್ಥವನೀವ ಪರಿಯಿನ್ನೆಂತೊ?
ಇದು ಕಾರಣ-ಕೂಡಲಚೆನ್ನಸಂಗಯ್ಯನಲ್ಲಿ ಮುಕ್ತಿಯನರಸುವಡೆ
ಅಂಗನಲ್ಲಿ ಹೆರೆಹಿಂಗದೆ ಲಿಂಗವ ಧರಿಸಬೇಕು. ॥ ೨೫೨ ॥

೧೧೦೫

ಒಮ್ಮೆಯಲ್ಲದಿಮ್ಮೆಯುಂಟೆ ಪೂಜೆ?
ಒಮ್ಮೆಯಲ್ಲದಿಮ್ಮೆಯುಂಟೆ ಅರ್ಪಿತ?
ಒಮ್ಮೆಯಲ್ಲದಿಮ್ಮೆಯುಂಟೆ ಪ್ರಸಾದ?
ತಾನರ್ಪಿತವಾದ ಬಳಿಕ ಮರಳಿ ಮರಳಿ ಅರ್ಪಿತವುಂಟೆ
ಕೂಡಲಚೆನ್ನಸಂಗಮದೇವಾ? ॥ ೨೫೩ ॥

೧೧೦೬

ಒಲ್ಲೆನೆಂದಡೆ ಅದೆ ಭಂಗ, ಒಲಿವೆನೆಂದಡೆ ಅದೇ ಭಂಗ.
ಒಲ್ಲೆ ಒಲಿವೆನೆಂಬೆರಡನು ಅಳಿದು,
ತೃಪ್ತನಾದೆನೆಂದಡೆ ಅದೇ ಕೊರತೆ.
ಕೂಡಲಚೆನ್ನಸಂಗಯ್ಯ ಭಕ್ತಾಧೀನನಾಗಿ,
ಇಲ್ಲಿಗೆ ನಡೆದು ಬಂದ ಬಳಿಕ ಉಪಚಾರ ಉಂಟೆ ಅಯ್ಯಾ? ॥ ೨೫೪ ॥

೧೧೦೭

ಒಳಗೆ ಪ್ರಾಣಲಿಂಗ, ಹೊರಗೆ ಅಂಗಲಿಂಗ ಇದೇನಯ್ಯಾ?
ಮನಕೆ ಮನ ನಾಚದು ನಾಚದು.
ಎರಡರ ಬಳಿವಿಡಿದು ಮರೆಗೊಂಡಾಡುವುದೇನಯ್ಯಾ?
ಈ ಎರಡರ ನಿರ್ಣಯಕ್ಕೆ ಅದು ಒಂದೆ ಎಂದು ಅರಿದರೆ
ಅದೇ ಪದ-ಕೂಡಲಚೆನ್ನಸಂಗಮದೇವಾ. ॥ ೨೫೫ ॥

೧೧೦೮

ಒಳಗೊಂದು ಬೆಳಗುವ ಜ್ಯೋತಿಯುಂತಪ್ಪ ವಿಚಾರವಿದೇನೊ!
ಅತ್ತ ಹೊದ್ದದು ತನ್ನ ತಾನು, ಇತ್ತ ಹೊದ್ದದು ಬಾಹ್ಯವಿಚಾರವ.
ವಿಚಾರಿಸುವ ವಿಚಾರ ತಾನಾಗಿದ್ದುದನರಿಯದು.
ಹೊದ್ದುವ ಕಾಳಿಕೆ ಇಲ್ಲಿ ಹೊದ್ದದು, ನಿಸ್ಸಂದೇಹ.
ಇಲ್ಲಿ ಹೊದ್ದಿಯೂ ಹೊದ್ದದೆ ಇದ್ದಿತ್ತು, ತುದಿಯಿಲ್ಲ ಮೊದಲಿಲ್ಲ–
ತುದಿ ಮೊದಲೆರಡನೂ ಕೂಡಿಕೊಂಡು ನಡುವೆ ಅಂತರಾತ್ಮವಾಗಿದ್ದಿತ್ತು.
ಜೀವಗುಣವಳಿದು, ಪರಮಾತ್ಮನ ಮುಂದೆ ಪ್ರತಿಬಿಂಬವಾಗಿದ್ದಲ್ಲಿ
ಸಂಧಾನವನರಸುತ್ತಿದ್ದೆ ಕಾಣಾ, ಕೂಡಲಚೆನ್ನಸಂಗಮದೇವಾ. || ೨೫೬ ||

೧೧೦೯

'ಓಂ' ಎಂಬಕ್ಷರವೆ ರಸ, 'ನ' ಎಂಬಕ್ಷರವೆ ರುಧಿರ,
'ಮ' ಎಂಬಕ್ಷರವೆ ಮಾಂಸ, 'ಶಿ' ಎಂಬಕ್ಷರವೆ ಮೇಧಸ್ಸು,
'ವಾ' ಎಂಬಕ್ಷರವೆ ಅಸ್ಥಿ, 'ಯ' ಎಂಬಕ್ಷರವೆ ಮಜ್ಜೆ.
ಷಡಕ್ಷರದಿಂದ ಶುಕ್ಲ ಶೋಣಿತ–
ಇಂತೀ ಸರ್ವೇಂದ್ರಿಯಂಗಳುತ್ಪತ್ತಿ,
ಕೂಡಲಚೆನ್ನಸಂಗಮದೇವಾ. || ೨೫೭ ||

೧೧೧೦

'ಓಂ' ಕಾರವೆ ಬಸವಣ್ಣನ ಶಿರಸ್ಸು, 'ನ' ಕಾರವೆ ಬಸವಣ್ಣನ ನಾಸಿಕ,
'ಮ' ಕಾರವೆ ಬಸವಣ್ಣನ ಜಿಹ್ವೆ, 'ಶಿ' ಕಾರವೆ ಬಸವಣ್ಣನ ನೇತ್ರ,
'ವ' ಕಾರವೆ ಬಸವಣ್ಣನ ತ್ವಕ್ಕು, 'ಯ' ಕಾರವೆ ಬಸವಣ್ಣನ ಶ್ರೋತ್ರ.
ಮತ್ತೆ:
'ಓಂ' ಕಾರವೆ ಬಸವಣ್ಣನ ವದನ, 'ನ' ಕಾರವೆ ಬಸವಣ್ಣನ ಬಲದ ಭುಜ,
'ಮ' ಕಾರವೆ ಬಸವಣ್ಣನ ಎಡದ ಭುಜ, 'ಶಿ' ಕಾರವೆ ಬಸವಣ್ಣನ ನಾಭಿ,
'ವ' ಕಾರವೆ ಬಸವಣ್ಣನ ಬಲದ ಪಾದ, 'ಯ' ಕಾರವೆ ಬಸವಣ್ಣನ ಎಡದ ಪಾದ.
ಅದೆಂತೆಂದಡೆ:
"ಓಂ ಕಾರಂ ವದನಂ ದೇವಿ ನಮಃಕಾರಂ ಭುಜದ್ವಯಂ।
ಶಿಕಾರಂ ದೇಹ ಮಧ್ಯಸ್ತು ವಯಕಾರಂ ಪದದ್ವಯಂ।
ಇತಿ ಷಡ್ವರ್ಗರೂಪಂ ಚ ಭಕ್ತರೂಪಂ ಮಹೋದಿತಂ॥"
ಇಂತೆಂದುದಾಗಿ, ಕೂಡಲಚೆನ್ನಸಂಗಯ್ಯನಲ್ಲಿ
ಸಂಗನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು. || ೨೫೮ ||

೧೧೧೧

ಓಂ ವಿಶ್ವನಿರಾಕಾರ ನಿರವಯನಿರ್ವಿಕಾರ ಅವಗತವಾಗ್ಮನವಾಗತ
ಆಕಾಶ ಸಭಾಮೂರ್ತಿ ನಿರಾಕಾರವೆಂಬ ನಿಜಲಿಂಗವಪ್ಪ
ಪರಶಿವಾನಂದ ಮೂರ್ತಿ ತನ್ನೊಳು ತ್ರಿಗುಣಾತ್ಮಕನಾಗಿಹ.
ಅದೆಂತೆಂದಡೆ:
ಶಿವ ಸದಾಶಿವ ಮಹೇಶ್ವರನೆಂದು ಪರಶಿವನ ತ್ರಿಗುಣಾತ್ಮಕ
ಭೇದಂಗಳು, ಇಂತಪ್ಪ ಪರಶಿವನು ವಿಶ್ವದುತ್ಪತ್ಯಕಾರಣನಾಗಿ
ಪಂಚಸಾದಾಖ್ಯ ರೂಪಗಳಂ ಪ್ರತ್ಯೇಕ ತ್ರಿಗುಣಾತ್ಮಕರಾಗಿ
ಜ್ಯೋತಿಯಿಂ ಪುತ್ತಿಸಲಾಪುದು.
ಘನವಾವುದು ಕೀರ್ತಿದೆಂದು ಉಪಮಿಸಬಾರದ ಮಹಾಘನದಂತೆ
ಆ ಮಹಾಬೆಳಗು ತನ್ನೊಳೈದು ರೂಪಾಯಿತ್ತು.
ಅದೆಂತೆಂದಡೆ:
ಶಿವ ಅಮೂರ್ತಿ ಮೂರ್ತಿ ಕರ್ತೃ ಕರ್ಮರೆಂಬ
ಪಂಚಬ್ರಹ್ಮ ಹುಟ್ಟಿದವು; ಅದಕ್ಕೈವರು ಶಕ್ತಿಯರುದಯಿಸಿದರು.
ಅವರ ನಾಮಂಗಳು: ಪರಾಶಕ್ತಿ ಆದಿಶಕ್ತಿ ಇಚ್ಛಾಶಕ್ತಿ ಜ್ಞಾನಶಕ್ತಿ ಕ್ರಿಯಾಶಕ್ತಿ.
ಇಂತಿಂತು ಐವರನು ಪಂಚಬ್ರಹ್ಮರಿಗೆ ವಿವಾಹಂ ಮಾಡಿದೊಡಾ
ಶಿವಶಕ್ತಿ ಪಂಚಕದಿಂದೊಂದು ಓಂಕಾರವೆಂಬ ಬೀಜವಂ
ನಿರ್ಮಿಸಿದಡಾ, ಓಂಕಾರ ಬೀಜದಿಂದೊಂದು ವಿರಾಟಸ್ವರೂಪಮಪ್ಪ
ಮಹಾಘನ ತೇಜೋಮಯವಪ್ಪ ಅನಾದಿರುದ್ರಸಹಸ್ರಾಂಶುವಿಂಗೆ
ಸಾವಿರ ಶಿರ ಸಾವಿರ ನಯನ ಸಾವಿರ ದೇಹ ಸಾವಿರಪಾದವುಳ್ಳ
ಸ್ವಯಂಭುಮೂರ್ತಿ ಪುಟ್ಟಿದ
ಆ ಸ್ವಯಂಭುಮೂರ್ತಿಯ ಮುಖದಲ್ಲಿ ಈಶ್ವರಪುಟ್ಟಿದ,
ಈಶ್ವರನ ವಾಮಭಾಗದಲ್ಲಿ ವಿಷ್ಣು ಪುಟ್ಟಿದ.
ದಕ್ಷಿಣಭಾಗದಲ್ಲಿ ಬ್ರಹ್ಮಪುಟ್ಟಿದ.
ಇಂತು ತ್ರಿದೇವತೆಯರೊಳಗಗ್ರಜನಪ್ಪ ಮಹಾಮಹಿಮ
ಈಶ್ವರನ ಪಂಚಮುಖದಲ್ಲಿ ಪಂಚಬ್ರಹ್ಮ ತೇಜೋಮಯ ರುದ್ರರು ಪುಟ್ಟಿದರು.
ಅವರ ನಾಮಂಗಳು:
ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನ್ಯರೆಂದಿಂತು.
ಅವರೊಳ್ಸದ್ಯೋಜಾತನೆಂಬ ಅಗ್ರಜರುದ್ರ ಪುಟ್ಟಿದನು.
ಆ ಸದ್ಯೋಜಾತಂಗೆ ಮಹಾರುದ್ರ ಪುಟ್ಟಿದನು.
ಆ ಮಹಾರುದ್ರಂಗೆ ಶ್ರೀರುದ್ರ ಪುಟ್ಟಿದನು.
ಆ ಶ್ರೀರುದ್ರಂಗೆ ರುದ್ರ ಪುಟ್ಟಿದನು.
ಆ ರುದ್ರಂಗೆ ಅಗ್ನಿಯು ಅವಗತ ಪುಟ್ಟಿದವು.

ಆ ಅಗ್ನಿಗೆ ಕಾಶ್ಯಪಬ್ರಹ್ಮ ಪುಟ್ಟಿದನು.
ಅವಗತಕ್ಕೆ ಮಾಯಾಸ್ವಪ್ನಬ್ರಹ್ಮ ಪುಟ್ಟಿದನು.
ಅದೆಂತೆಂದಡೆ:
ಮಾಯವೆ ಮೃತ್ಯು, ಬ್ರಹ್ಮವೆ ಸತ್ಯ.
ಇಂತಪ್ಪ ಬ್ರಹ್ಮವು ಮಾಯಾ ಅವಲಂಬಿಸಿಹುದಾಗಿ
ಅದು ಮಾಯಾಸ್ವಪ್ನಬ್ರಹ್ಮವೆನಿಸಿತ್ತು.
ಇಂತಪ್ಪ ಮಾಯಾ ಸ್ವಪ್ನಬ್ರಹ್ಮಂಗೆ ತ್ರಯೋದಶಕುಮಾರಿಯರು ಪುಟ್ಟಿದರು.
ಅವರ ನಾಮಂಗಳು:
ಬೃಹತಿ, ಅದಿತಿ, ದಿತಿ, ವಿನುತಾದೇವಿ, ಕದ್ರು,
ಸುವರ್ಣಪ್ರಭೆ, ಕುಮುದಿನಿ, ಪ್ರಭಾದೇವಿ, ಕಾಳಿದಂಡಿ,
ಮೇಘದಂಡಿ, ದಾತೃಪ್ರಭೆ, ಕುಸುಮಾವತಿ, ಪಾರ್ವಂದಿನಿ
ಎಂದಿಂತು ತ್ರಯೋದಶಕುಮಾರಿಯರು ಪುಟ್ಟಿದರು.
ಇದಕ್ಕೆ ಆದಿ ಪರಮೇಶ್ವರನು ಸೃಷ್ಟಿ ನಿರ್ಮಿತ ಜಗದುತ್ಪತ್ಯ ಸ್ಥಿತಿ
ಲಯಗಳಾಗಬೇಕೆಂದು, ಆ ಕಾಶ್ಯಪಬ್ರಹ್ಮಗು ತ್ರಯೋದಶ
ಸ್ತ್ರೀಯರಿಗೆಯು ವಿವಾಹವ ಮಾಡಿದನು.
ಆ ಕಾಶ್ಯಪಬ್ರಹ್ಮನ ಮೊದಲ ಸ್ತ್ರೀಯ ಪೆಸರು ಬೃಹತಿ.
ಆ ಬೃಹತಿಗೆ ಪುಟ್ಟಿದ ಮಕ್ಕಳ ಪೆಸರು ಹಿರಣ್ಯಕಾಂಕ್ಷ.
ಹಿರಣ್ಯಕಾಂಕ್ಷನ ಮಗ ಪ್ರಹರಾಜ, ಪ್ರಹರಾಜನ ಮಗ ಕುಂಭಿ,
ಆ ಕುಂಭಿಯ ಮಗ ನಿಃಕುಂಭಿ, ನಿಃಕುಂಬಿಯ ಮಗ ದುಂದುಭಿ,
ಆ ದುಂದುಭಿಯ ಮಗ ಬಲಿ, ಬಲಿಯ ಮಗ ಬಾಣಾಸುರ.
ಇಂತಿವರು ಮೊದಲಾದ ಛಪ್ಪನ್ನಕೋಟಿ ರಾಕ್ಷಸರು ಪುಟ್ಟಿದರು.
ಎರಡನೆಯ ಸ್ತ್ರೀಯ ಪೆಸರು ಅದಿತಿ.
ಆ ಅದಿತಿಗೆ ಸೂರ್ಯ ಮೊದಲಾದ ಮೂವತ್ತುಕೋಟಿ
ದೇವರ್ಕಳು ದೇವಗಣ ಪುಟ್ಟಿದವು.
ಮೂರನೆಯ ಸ್ತ್ರೀಯ ಪೆಸರು ದಿತಿದೇವಿ.
ಆ ದಿತಿದೇವಿಗ ಕೂರ್ಮ ಮೊದಲಾದ ಜಲಚರಂಗಳು ಪುಟ್ಟಿದವು.
ನಾಲ್ಕನೆಯ ಸ್ತ್ರೀಯ ಪೆಸರು ವಿನುತಾದೇವಿ.
ಆ ವಿನುತಾದೇವಿಗೆ ಸಿಡಿಲು, ಮಿಂಚು, ವರುಣ, ಗರುಡ
ಮೊದಲಾದ ಖಗಜಾತಿಗಳು ಪುಟ್ಟಿದವು.
ಐದನೆಯ ಸ್ತ್ರೀಯ ಪೆಸರು ಕದ್ರುದೇವಿ.
ಆ ಕದ್ರುವಿಗೆ ಶೇಷ, ಅನಂತ, ವಾಸುಗಿ, ಶಂಬಪಾಳ, ಕಕ್ಷರ ಕರ್ಕೋಟಕ,
ಕರಾಂಡ, ಭುಜಂಗ, ಕುಳ್ಳಿಕ, ಅಲ್ಲಮಾಚಾರ್ಯ
ಇಂತಿವು ಮೊದಲಾದ ನವಕುಲನಾಗಂಗಳು ಪುಟ್ಟಿದವು.

ಆರನೆಯ ಸ್ತ್ರೀಯ ಪೆಸರು ಸುವರ್ಣಪ್ರಭೆ.
ಆ ಸುವರ್ಣಪ್ರಭೆಗೆ ಚಂದ್ರ, ತಾರಾಗಣ, ನಕ್ಷತ್ರಂಗಳು ಪುಟ್ಟಿದವು.
ಏಳನೆಯ ಸ್ತ್ರೀಯ ಪೆಸರು ಕುಮುದಿನಿ.
ಆ ಕುಮುದಿನಿಗೆ ಐರಾವತ, ಪುಂಡರೀಕ, ಪುಷ್ಪದಂತ, ವಾಮನ,
ಸುಪ್ರದೀಪ, ಅಂಜನ, ಸಾರ್ವಭೌಮ, ಕುಮುದ, ಭಗದತ್ತ
ಇಂತಿವು ಮೊದಲಾದ ಮೃಗಕುಲಾದಿ
ವ್ಯಾಘ್ರ ಶರಭ ಶಾರ್ದೂಲಂಗಳು ಪುಟ್ಟಿದವು.
ಎಂಟನೆಯ ಸ್ತ್ರೀಯ ಪೆಸರು ಪ್ರಭಾದೇವಿ.
ಆ ಪ್ರಭಾದೇವಿಗೆ ಕನಕಗಿರಿ, ರಜತಗಿರಿ, ಸೇನಗಿರಿ, ನೀಲಗಿರಿ,
ನಿಷಧಗಿರಿ, ಮೇರುಗಿರಿ, ಮಾನಸಗಿರಿ
ಇಂತಿವು ಮೊದಲಾದ ಪರ್ವತಂಗಳು ಪುಟ್ಟಿದವು.
ಒಂಬತ್ತನೆಯ ಸ್ತ್ರೀಯ ಪೆಸರು ಕಾಳಿದಂಡಿ.
ಆ ಕಾಳಿದಂಡಿಗೆ ಸಪ್ತಋಷಿಯರು ಮೊದಲಾದ ಅಷ್ಟಾಸೀತಿ
ಸಹಸ್ರ ಋಷಿಯರು ಪುಟ್ಟಿದರು.
ಹತ್ತನೆಯ ಸ್ತ್ರೀಯ ಪೆಸರು ಮೇಘದಂಡಿ.
ಆ ಮೇಘದಂಡಿಗೆ ನೀಲಮೇಘ, ಕುಂಭಮೇಘ, ದ್ರೋಣಮೇಘ,
ಧೂಮಮೇಘ, ಕಾರ್ಮೇಘ ಇಂತಿವು ಮೊದಲಾದ ಮೇಘಂಗಳು ಪುಟ್ಟಿದವು.
ಹನ್ನೊಂದನೆಯ ಸ್ತ್ರೀಯ ಪೆಸರು ದಾತೃಪ್ರಭೆ.
ಆ ದಾತೃಪ್ರಭೆಗೆ ಚಿಂತಾಮಣಿ ಮೊದಲಾದ ನವರತ್ನಂಗಳು ಪುಟ್ಟಿದವು.
ಹನ್ನೆರಡನೆಯ ಸ್ತ್ರೀಯ ಪೆಸರು ಕುಸುಮಾವತಿ.
ಆ ಕುಸುಮಾವತಿಗೆ ಕಾಮಧೇನು, ಕಲ್ಪವೃಕ್ಷಂಗಳು ಪುಟ್ಟಿದವು.
ಪದಿಮೂರನೆಯ ಸ್ತ್ರೀಯ ಪೆಸರು ಪಾರ್ವಂದಿನಿ.
ಆ ಪಾರ್ವಂದಿನಿಗೆ ಅಷ್ಟದಿಕ್ಪಾಲಕರು ಪುಟ್ಟಿದರು.
ಇಂತಿವರುಗಳ ರಜಸ್ಸೀಲಾಶೋಣಿತದಿಂದ ಸಹಸ್ರವೇದಿ
ಮೊದಲಾದ ಅಷ್ಟ ಪಾಷಾಣಂಗಳು ಪುಟ್ಟಿದವು.
ಇವರುಗಳ ಮಲಮೂತ್ರದಿಂದ ಪರುಷರಸ ಸಿದ್ಧರಸ
ನಿರ್ಜರೋದಕ ಪುಟ್ಟಿದವು.
ಇಂತಿವರುಗಳ ಬೆಚ್ಚು ಬೆದರಿಂದ ದೇವಗ್ರಹ, ಯಕ್ಷಗ್ರಹ,
ನಾಗಗ್ರಹ, ಗಾಂಧರ್ವಗ್ರಹ, ಪಿಶಾಚಗ್ರಹ, ಪೆಂತರಗ್ರಹ, ಬ್ರಹ್ಮರಾಕ್ಷಸ ಗ್ರಹ,
ಶತಕೋಟಿ ದೇವಗ್ರಹ, ಸರ್ವದರ್ಪಗ್ರಹ, ಶಾಕಿನಿ, ಡಾಕಿನಿ
ಮೊದಲಾದ ಗ್ರಹಭೂತ ಪ್ರೇತರಪ್ರೇತ ಪಿಶಾಚಂಗಳು ಪುಟ್ಟಿದವು.
ಇವರುಗಳ ಪ್ರಸೂತಕಾಲ ಮಾಸಿನಿಂದ

ಅಷ್ಟಲೋಹ ಪಾಷಾಣಂಗಳು ಪುಟ್ಟಿದವು.
ಕಾಲರಾಶಿ, ಕರಣರಾಶಿ, ಭೂತರಾಶಿ, ಮೂಲರಾಶಿ, ಪ್ರಾಣರಾಶಿಗಳು
ಮೊದಲಾದ ಕೀಟಕ ಜಾತಿಗಳು ಪುಟ್ಟಿದವು.
ಇವರುಗಳು ಇಂತು ಚತುರ್ದಶ ಭುವನಂಗಳು, ಐವತ್ತಾರುಕೋಟಿ ರಾಕ್ಷಸರು,
ದ್ವಾದಶಾದಿತ್ಯರು, ಮೂವತ್ತುಮೂರುಕೋಟಿದೇವರ್ಕಗಳು, ದೇವಗಣ
ಸುರಪತಿ, ಖಗಪತಿ, ಸಿಡಿಲು, ಮಿಂಚು, ವರುಣ, ಗರುಡ, ನವಕುಲ
ನಾಗಂಗಳು, ಚಿಂತಾಮಣಿನವರತ್ನಂಗಳು, ಕಾಮಧೇನು, ಕಲ್ಪವೃಕ್ಷ
ಪರುಷರಸ, ಸಿದ್ಧರಸ ನಿರ್ಜರೋದಕ, ದಿಕ್ಕರಿಗಳು, ಕೂರ್ಮ ಮೊದಲಾದ
ಜಲಚರಂಗಳು, ಚಂದ್ರತಾರಾಗಣ ನಕ್ಷತ್ರಂಗಳು ಪುಟ್ಟಿದವು.
ಇದಕ್ಕೆ ಶ್ರುತಿ:
ಓಂ ವಿಶ್ವಕರ್ಮಹೃದಯೇ ಬ್ರಹ್ಮಚಂದ್ರಮಾ ಮನಸೋಜಾತಃ
ಚಕ್ಷೋಸ್ಸೂರ್ಯದಯಾಭ್ಯೋ ಸರ್ವಾಂಗ ಭೂಷಿಣೆ
ದೇವಸ್ಯ ಬಾಹುದ್ವಯಾಂಶಕಃ
ಪ್ರತಿಬಾಹು ವಿಷ್ಣುಮೇವಚ ಮಣಿಬಂಧ ಪಿತಾಮಹಃ
ಜೇಷ್ಟಾಂಗುಲೇದೇವೇಂದ್ರ ತರ್ಜಂನ್ಯಂಗುಲೇಶಾನ್ಯ ಪ್ರೋಕ್ತಃ
ಮಧ್ಯಮಾದಾಂಗುಲೇಮಾಧವಾ ಅನಿಮಿಷಾಂಗುಲೇ ಅಗ್ನಿದೇವಸ್ಯ
ಕನಿಷ್ಟಾಂಗುಲೇ ಭಾಸ್ಕರಾ ಅಚಲಕುಚಿತಮಧ್ಯೇ ವನರ್ಚಪಾದ
ಆಹ್ವಾನಾಂತು ಜಗತ್ ನಿರ್ಮಿತ ವಿಶ್ವಕರ್ಮಣಾಂ
ಇಂತು ಕಾಶ್ಯಪಬ್ರಹ್ಮನ ಹದಿಮೂರು ಸ್ತ್ರೀಯರುಗಳಿಗೆ ಸಚರಾಚರಂಗಳು
ಪುಟ್ಟಿದವಾಗಿ, ಇವರ ಪರಿಪ್ರಮಾಣ ನಮ್ಮ ಶರಣಸ್ಥಲದಲ್ಲಿದ್ದವರು ಬಲ್ಲರು.
ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ್ಯ,
ಪಂಚವಕ್ತ್ರ, ಆದಿಲಿಂಗ, ಅನಾದಿಶರಣ ಇವರೆಲ್ಲರು ಸಾಕ್ಷಿಯಾಗಿ
ಕೂಡಲಚೆನ್ನಸಂಗಯ್ಯನೆ ವಿಶ್ವಕರ್ಮ ಜಗದ್ಗುರು. || ೨೫೯

೧೧೧೨

ಓದನಾದರಿಸಿ, ಗಿಳಿಯ ತಂದು ಸಲಹಿ ಓದಿಸಿನಳಯ್ಯಾ;
ಆಲದ ಮರದ ಗಿಳಿ ಓಜೆಗೊಂಡಿತ್ತಯ್ಯಾ!
ಗಿಳಿ ಓದಿತ್ತು, ತನ್ನ ಪರಬ್ರಹ್ಮವ ಬೇಡಿತ್ತು;
ತನ್ನ ಪೂರ್ವಾಶ್ರಯದ ಕೊರೆಯ ಕೂಳನುಂಡ ಗಿಳಿ,
ಮರೆಯಿತ್ತು ತನ್ನ ತಾನು!
ಅರಿವೆಂಬ ಜ್ಞಾನ ಮುಟ್ಟಿತ್ತಯ್ಯಾ; ಅರಿವೆಂಬ ಜ್ಞಾನ ಮುಟ್ಟಲಿಕೆ
ಜಂಪಿನ ಕಡ್ಡಿಯ ಮೇಲೆ ಕುಳಿತಿರ್ದಿತ್ತಯ್ಯಾ!
ಜಂಪಿನ ಕಡ್ಡಿಯ ಮೇಲೆ ಕುಳಿತ ಗಿಳಿ, ಜಂಪಳಿಸುತ್ತಿರ್ದಿತ್ತು ತನ್ನ ತಾನು.

'ಅಕ್ಕಟಾ ಅಕ್ಕಟಾ' ಎಂದು,
ತನ್ನ ಪೂರ್ವಾಶ್ರಯದ ಅಕ್ಕನೆಂಬಾ ಅಕ್ಕನ ಕರೆಯಿತ್ತು.
ಚಕ್ಕನೆ ಲಿಂಗವೆಂಬ ಗೊಂಚಲ ಹಿಡಿಯಲು ಮಿಕ್ಕು ಪಲ್ಲವಿಸಿತ್ತು,
ಕೂಡಲಚೆನ್ನಸಂಗಯ್ಯನಲ್ಲಿ ಪ್ರಭುವೆಂಬ ಲಿಂಗವು. || ೨೬೦ ||

೧೧೧೩

ಓದಿದರೇನು? ಕೇಳಿದರೇನು? ಆಸೆ ಅಳಿಯದು ರೋಷ ಬಿಡದು,
ಮಜ್ಜನಕ್ಕೆ ನೀಡಿ ಫಲವೇನು?
(ವಚನಾರಂಭದ ನುಡಿಯು ಕಲಿತವರೆಲ್ಲ ಅನುಭಾವಿಗಳಪ್ಪರೆ?
ಅಷ್ಟಾಷಷ್ಟಿ ತೀರ್ಥಂಗಳ ಮೆಟ್ಟಿದವರೆಲ್ಲ ತೀರ್ಥವಾಸಿಗಳಪ್ಪರೆ?
ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ಮಾಡಿದವರೆಲ್ಲ
ಲಿಂಗಾರ್ಚಕರಪ್ಪರೆ? ಅಲ್ಲ.)
ಲಾಂಛನವ ಹೊತ್ತು ಕಾಂಚನಕ್ಕೆ ಕೈಯ ನೀಡುವ
ಜಗಭಂಡರ ಮೆಚ್ಚುವನೆ ಕೂಡಲಚೆನ್ನಸಂಗಮದೇವ? || ೨೬೧ ||

೧೧೧೪

ಕಂಗಳ ತುರೀಯವ ಕರಸ್ಥಲ ನುಂಗಿ, ಕರಸ್ಥಲದ ದೃಷ್ಟವ ಕಂಗಳು ನುಂಗಿ,
ಇಂತೀ ಉಭಯಕುಳವಳಿದು ಅದ್ವೈತವಾದ ಶರಣಂಗೆ
ಆಹ್ವಾನವಿಲ್ಲ ವಿಸರ್ಜನವಿಲ್ಲ ಹಿಂದೆಂಬುದಿಲ್ಲ ಮುಂದೆಂಬುದಿಲ್ಲ;
ಒಳಗೆಂಬುದಿಲ್ಲ, ಹೊರಗೆಂಬುದಿಲ್ಲ, ಕೀಳೆಂಬುದಿಲ್ಲ, ಮೇಲೆಂಬುದಿಲ್ಲ.
ಕೂಡಲಚೆನ್ನಸಂಗಮದೇವಾ,
ನಿಮ್ಮ ಶರಣನೆತ್ತತ್ತ ನೋಡಿದಡತ್ತತ್ತ ನೀವೆ ಕಂಡಯ್ಯಾ! || ೨೬೨ ||

೧೧೧೫

ಕಂಗಳ ನೋಟ ಕರಸ್ಥಳದ ಪ್ರಾಣ,
ಮನದೊಳಗೆ ಪರಿಣಾಮವ ತೋರುತ್ತಿದೆ ನೋಡಾ!
ನಡೆದಡೆ ಹೆಜ್ಜೆಯಿಲ್ಲ, ನಿಂದಡೆ ನೆಳಲಿಲ್ಲ,
ಸುಳುಹಿನೊಳಗೊಂದು ಅತಿಶಯದ ಸುಳುಹು ನೋಡಾ!
ತೆರೆಯ ಮರೆಯ ಪರಶಿವನು
ನಡೆಗಲಿತು ಬಪ್ಪ ಕರುಣವ ನೋಡಾ!
ಸಂಗನಬಸವಣ್ಣಾ, ಕೂಡಲಚೆನ್ನಸಂಗಮದೇವರು ಸಾಕ್ಷಿಯಾಗಿ
ಪ್ರಭುದೇವರ ಬರವು ತಪ್ಪದು. || ೨೬೩ ||

೧೧೧೬

ಕಂಗಳ ನೋಟ ಮನದ ಕೂಟದಲ್ಲಿಯೆ
ಏಕತ್ವಭಾವದ ಲಿಂಗೈಕ್ಯದ ನಿಲವು
ತನ್ನಿಂದ ತಾನೆಯಾದ ಬಗೆಯ ನೋಡಾ!
ಅರಿಯಲಿಲ್ಲದ ಅರಿವಿನ ತೆರನು ಸಯವಾಯಿತ್ತು.
ಕೂಡಲಚೆನ್ನಸಂಗಯ್ಯನಲ್ಲಿ ಸಿದ್ಧರಾಮಯ್ಯಂಗೆ. || ೨೬೪ ||

೧೧೧೭

ಕಂಗಳ ನೋಟ ಹೃದಯದ ಜ್ಞಾನ,
ಮನದೊಳಗೆ ಮಾತನಾಡುತಿರ್ದೆನಯ್ಯಾ!
ಜೇನ ಮಳೆಗಳು ಕರೆದವು ಅಮೃತದ ಬಿಂದುಗಳು ಸುರಿದವು,
ಕೂಡಲಚೆನ್ನಸಂಗನೆಂಬ ರಸಸಾಗರದೊಳಗೋಲಾಡುತಿರ್ದೆನಯ್ಯಾ! || ೨೬೫ ||

೧೧೧೮

ಕಂಡ ಚಿತ್ತ ವಸ್ತುವಿನಲ್ಲಿ ಮಗ್ನವಾದ ಮತ್ತೆ
ಸಂಸಾರ ವಿಷಯಕ್ಕೆ ಮತ್ತನಪ್ಪುದೆ?
ಮತ್ತೆ ಭಕ್ತರ ಗೃಹ, ರಾಜದ್ವಾರದ ತಪ್ಪಲ ಕಾಯ್ವುದೆ?
ಆ ಚಿತ್ತ ತೊಟ್ಟುಬಿಟ್ಟ ಹಣ್ಣು, ಕೆಟ್ಟುಸತ್ತ ಬಿದಿರು
ದೃಷ್ಟನಷ್ಟವಾದ ಅಂಗಕ್ಕೆ ಮತ್ತೆ ಬಪ್ಪುದೆ, ಪುನರಪಿಯಾಗಿ?
ಇದು ನಿಶ್ಚಯ ನಿಜಲಿಂಗಾಂಗ ನಿರ್ಲೇಪನ ಹೊಲಬು.
ಜಗದ ಪೊತ್ತದವನಲ್ಲ ನಿಷ್ಕಳಂಕ,
ಕೂಡಲಚೆನ್ನಸಂಗಮದೇವ ತಾನಾದ ಶರಣ. || ೨೬೬ ||

೧೧೧೯

ಕಂಡಂತೆ ಕಂಡಂತೆ ಆಯಿತ್ತು ಭಕ್ತಿ, ಕಂಡಂತೆ ಕಂಡಂತೆ ಆಯಿತ್ತಯ್ಯಾ!
ಉಪಚಾರಕ್ಕೆ ಬಂದುದು ಉಪಚಾರಕ್ಕೆ ನಿಂದಿತ್ತಲ್ಲಾ!
ಭೃತ್ಯಾಚಾರ, ಸಮಯಭಕ್ತಿ ಸಂಗನಬಸವಣ್ಣನೊಡನೆ ಹೋಯಿತ್ತು,
ಕೂಡಲಚೆನ್ನಸಂಗಯ್ಯ ಬಸವಣ್ಣನು ಒಯ್ಯಲಾಗಿ. || ೨೬೭ ||

೧೧೨೦

ಕಂಥೆಯೊಳಗಣ ಕಪಟವ ಹರಿದಲ್ಲದೆ ಕಾಯ [ನಿರ್ವಂಚಕ]ನಲ್ಲ.
ಕಪ್ಪರದೊಳಗಣ ಆಪ್ಯಾಯನವ ಹರಿದಲ್ಲದೆ ಜೀವ [ನಿರ್ಭಾವಕ]ನಲ್ಲ.
ಕಣ್ಣಿನೊಳಗಣ ಕಾಳಿಕೆ ಹಿಂಗಿದಲ್ಲದೆ ಜ್ಞಾನಾನುಭಾವಿಯಲ್ಲ.
ಕಾಯದೊಳಗಣ ಕಟ್ಟಿಗೆ ಮುರಿದು, ಮಾಯದೊಳಗಣ ಕಂಥೆಯ ಹರಿದು,
ಮನದೊಳಗಣ ಕಪ್ಪರವನೊಡೆದು, ಸುಳಿದಾಡುವ ಕಣ್ಣ ಕಿತ್ತು,
ನಿಶ್ಚಯ ನಿಜದಲ್ಲಿ ಚರಿಸುವ ಜ್ಞಾನಜಂಗಮಕ್ಕೆ
'ನಮೋ ನಮೋ' ಎಂಬೆ ಕೂಡಲಚೆನ್ನಸಂಗಮದೇವಾ. ॥ ೨೬೮ ॥

೧೧೨೧

ಕಂದದ ಹೂವನೆ ಕೊಯ್ದು, ನಂದದಾರತಿಯನ ಬೆಳಗಿ,
ಅಂದವಳಿಯದೆ, ಬಿಂದು ತುಳುಕದೆ, ನಂದಿ ಮುಂದುಗೆಡದೆ,
ಅಂದಂದಿನ ಹೊಸ ಪೂಜೆಯ ಮಾಡಿ
ಆ ಲಿಂಗಮಧ್ಯವನೆ ತಿಳಿದು ನೋಡಿ
ಮೇರುಗಿರಿಯಾಕಳನೆ ಕರೆದು, ಕ್ಷೀರದಲ್ಲಿ ಅಡಿಗೆಯ ಮಾಡಿ,
ಕೂಡಲಚೆನ್ನಸಂಗಯ್ಯನೆಂಬ ಲಿಂಗಕ್ಕೆ
ಆರೋಗಣೆಯ ಸಮಯ. ॥ ೨೬೯ ॥

೧೧೨೨

ಕಕ್ಷೆಯಲ್ಲಿ ಲಿಂಗವ ಧರಿಸಿಕೊಂಡಾತ ಬ್ರಹ್ಮ.
ಕರಸ್ಥಲದಲ್ಲಿ ಲಿಂಗವ ಧರಿಸಿಕೊಂಡಾತ ವಿಷ್ಣು.
ಕಂಠದಲ್ಲಿ ಲಿಂಗವ ಧರಿಸಿಕೊಂಡಾತ ರುದ್ರ.
ಉರಸೆಜ್ಜೆಯಲ್ಲಿ ಲಿಂಗವ ಧರಿಸಿಕೊಂಡಾತ ಈಶ್ವರ.
ಉತ್ತಮಾಂಗದಲ್ಲಿ ಲಿಂಗವ ಧರಿಸಿಕೊಂಡಾತ ಸದಾಶಿವ.
ಅಮಳೋಕ್ಯದಲ್ಲಿ ಲಿಂಗವ ಧರಿಸಿಕೊಂಡಾತ ಪರಮೇಶ್ವರ.
ಬ್ರಹ್ಮಂಗೆ ಪೀತವರ್ಣದ ಲಿಂಗ, ವಿಷ್ಣುವಿಂಗೆ ನೀಲವರ್ಣದ ಲಿಂಗ,
ರುದ್ರಂಗೆ ಕಪಿಲವರ್ಣದ ಲಿಂಗ, ಈಶ್ವರಂಗೆ ಮಾಂಜಿಷ್ಟವರ್ಣದ ಲಿಂಗ,
ಸದಾಶಿವಂಗೆ ಮಾಣಿಕ್ಯವರ್ಣದ ಲಿಂಗ, ಪರಮೇಶ್ವರಂಗೆ ಸ್ಫಟಿಕವರ್ಣದ ಲಿಂಗ.
ಬ್ರಹ್ಮ ಪಾಶುಪತಿಯಾಗಿ ಸುಳಿದ, ವಿಷ್ಣು ಜೋಗಿಯಾಗಿ ಸುಳಿದ,
ರುದ್ರ ಶ್ರವಣನಾಗಿ ಸುಳಿದ, ಈಶ್ವರ ಸನ್ಯಾಸಿಯಾಗಿ ಸುಳಿದ,
ಸದಾಶಿವ ಯೋಗಿಯಾಗಿ ಸುಳಿದ, ಪರಮೇಶ್ವರ ಕಾಳಾಮುಖಿಯಾಗಿ ಸುಳಿದ.
ಬ್ರಹ್ಮಂಗೆ ಕಾವಿ ಬಳಿದು, ವಿಷ್ಣುವಿಂಗೆ ಪೀತಸಕಲಾತ್ರಿ,

ರುದ್ರಂಗೆ ಕಾಗು ಕಂಬಳಿ, ಈಶ್ವರಂಗೆ ಮೃಗಾಜಿನ ಕಾವಿಕಪ್ಪಡ,
ಸದಾಶಿವಂಗೆ ವ್ಯಾಘ್ರಚರ್ಮ ರತ್ನಗಂಬಳಿ,
ಪರಮೇಶ್ವರಂಗೆ ಮೇಕೆಚರ್ಮ ಸಿತಕಪ್ಪಡ.
ಬ್ರಹ್ಮ ಸ್ಥೂಲನೆಂದು, ವಿಷ್ಣು ಸೂಕ್ಷ್ಮನೆಂದು, ರುದ್ರ ಕಾರಣನೆಂದು,
ಈಶ್ವರ ಸಕಲನೆಂದು, ಸದಾಶಿವ ನಿಃಕಲನೆಂದು, ಪರಮೇಶ್ವರ ಶೂನ್ಯನೆಂದು.
ಬ್ರಹ್ಮಂಗೆ 'ನ'ಕಾರ, ವಿಷ್ಣುವಿಂಗೆ 'ಮ'ಕಾರ, ರುದ್ರಂಗೆ 'ಶಿ'ಕಾರ,
ಈಶ್ವರಂಗೆ 'ವ'ಕಾರ, ಸದಾಶಿವಂಗೆ 'ಯ'ಕಾರ, ಪರಮೇಶ್ವರಂಗೆ 'ಓಂ'ಕಾರ.
ಬ್ರಹ್ಮಂಗೆ ಭಕ್ತಸ್ಥಲ, ವಿಷ್ಣುವಿಂಗೆ ಮಹೇಶ್ವರಸ್ಥಲ, ರುದ್ರಂಗೆ ಪ್ರಸಾದಿಸ್ಥಲ,
ಈಶ್ವರಂಗೆ ಪ್ರಾಣಲಿಂಗಿಸ್ಥಲ, ಸದಾಶಿವಂಗೆ ಶರಣಸ್ಥಲ,
ಪರಮೇಶ್ವರಂಗೆ ಐಕ್ಯಸ್ಥಲ.
ಇಂತಪ್ಪ ಶೈವಲಿಂಗದ ಭಕ್ತಿಯು, ಷಡುಸ್ಥಲದ ಸುಳುಹಿನೊಳಗಲ್ಲ.
ರೇವಣಸಿದ್ಧಯ್ಯದೇವರು ಸಾಕ್ಷಿಯಾಗಿ
ಪ್ರಭುದೇವರ ವೀರಶೈವ ಲಿಂಗ ಜಂಗಮದ ಷಡುಸ್ಥಲ ಸುಳುಹು.
ಆ ಭೇದವ ಕೂಡಲಚೆನ್ನಸಂಗಯ್ಯನಲ್ಲಿ ಕಾಣಾ, ಸಿದ್ಧರಾಮಯ್ಯಾ. ॥ ೨೭೮ ॥

೧೧೨೩

ಕತ್ತಲಮನೆಯಲ್ಲಿರ್ದ ಮನುಜನು,
ಜ್ಯೋತಿಯನೆನಿತು ಹೊತ್ತು ನೆನೆದಡೆಯೂ ಬೆಳಕಾಗಬಲ್ಲುದೆ
ಬೆಂಕಿಯ ಹೊತ್ತಿಸದನ್ನಕ್ಕ?
ಮರದುದಿಯ ಫಲವು ನೋಟಮಾತ್ರಕ್ಕುದುರುವುದೆ
ಹತ್ತಿ ಹರಿಯದನ್ನಕ್ಕ?
ಹುಟ್ಟುಗುರುಡನು ಕಷ್ಟಪಟ್ಟು, ಎಷ್ಟುಹೊತ್ತು ನಡೆದಡೆಯೂ
ಇಚ್ಛಿತ ಪಟ್ಟಣವ ಮುಟ್ಟುವನೆ ಕಣ್ಣುಳ್ಳವನ ಕೈವಿಡಿಯದನ್ನಕ್ಕ?
ಹಾಂಗೆ, ಸಮ್ಯಗ್‌ಜ್ಞಾನಾತ್ಮಕವಾದ
ಲಿಂಗಾರ್ಚನ, ಲಿಂಗನಿರೀಕ್ಷಣ, ಲಿಂಗಧ್ಯಾನಗಳಿಲ್ಲದೆ,
ಆ ನೆನಹು, ನಿರೀಕ್ಷಣೆ, ಪೂಜೆ ಇವುಗಳೊಂದೊಂದೆ
ಮುಕ್ತಿಯನೀವವೆಂಬ ಯುಕ್ತಿಗೆಟ್ಟ ಮಂದಮತಿಗಳ ಮೆಚ್ಚುವನೆ
ಕೂಡಲಚೆನ್ನಸಂಗಮದೇವನು? ॥ ೨೭೯ ॥

೧೧೨೪

ಕಪಿಲವರ್ಣ ನೀಲವರ್ಣ ಮಾಂಜಿಷ್ಟವರ್ಣ ಪೀತವರ್ಣ
ಕಪ್ಪುವರ್ಣ ಶ್ವೇತವರ್ಣ ಗೌರವವರ್ಣವೆಂಬ ಸಪ್ತಧಾತುಗಳು.
ಇವಕ್ಕೆ ವಿವರ:

ಕಪಿಲವರ್ಣದ ಧಾತು ಪೃಥ್ವಿ ಅಂಶ, ದೇಹ ಅಳುಕುತಿಹುದು.
ನೀಲವರ್ಣದ ಧಾತು ಅಪ್ಪುವಿನ ಅಂಶ ದೇಹವ [ನಡುಗುತ್ತಿಹುದು].
ಮಾಂಜಿಷ್ಟವರ್ಣದ ಧಾತು ಅಗ್ನಿ ಅಂಶ, ದೇಹ ಕನಸ ಕಾಣುತಿಹುದು.
ಪೀತವರ್ಣದ ಧಾತು ವಾಯು ಅಂಶ, ದೇಹವತ್ತರ ಒತ್ತುತ್ತಿಹುದು.
ಕಪ್ಪುವರ್ಣದ ಧಾತು ಆಕಾಶದ ಅಂಶ, ಎತ್ತರ ತತ್ತರಗೆಡಹುತಿಹುದು.
ಶ್ವೇತವರ್ಣದ ಧಾತು ಚಂದ್ರನ ಅಂಶ, ದೇಹ ಕಳವಳಿಸುತಿಹುದು.
ಗೌರವರ್ಣದ ಧಾತು ಸೂರ್ಯನ ಅಂಶ, ಶರೀರ ಸಂಚಲಿಸುತಿಹುದು.
ಇಂತೀ ಸಪ್ತಧಾತುಗಳ ಸ್ವಸ್ಥಾನವಂ ಮಾಡಿ ಲಿಂಗಾರ್ಚನೆಯ ಮಾಡಬಲ್ಲಡೆ
ಕೂಡಲಚೆನ್ನಸಂಗಯ್ಯನಲ್ಲಿ ಶರಣನೆನಿಸುತಿಹನು. || ೨೭೨ ||

೧೧೨೫

ಕಬ್ಬುನಗಿದ ಗಾಣ ಬಲ್ಲುದೆ ಹಾಲ ಸವಿಯ?
ಗಗನದಲಾಡುವ ಪಕ್ಷಿ ಬಲ್ಲುದೆ ರವಿಯ ನಿಲವ?
ಹಗರಣಕ್ಕೆ ಪೂಜಿಸುವರು ಬಲ್ಲರೆ ನಮ್ಮ ಶರಣರ ಸುಳುಹ?
ನಡುಮುರಿದು ಗುಡುಗೂರಿದಡೇನು
ಲಿಂಗದ ನಿಜವನರಿಯದನ್ನಕ್ಕ?
ಸಾವನ್ನಕ್ಕ ಜಪವ ಮಾಡಿದಡೇನು
ಲಿಂಗದ ಪ್ರಾಣ ತನ್ನ ಪ್ರಾಣ ಒಡಗೂಡದನ್ನಕ್ಕ?
ಇಂತಿವರೆಲ್ಲರು ಅಭ್ಯಾಸಶಕ್ತಿಗರುಹಿಗರು!
ನಮ್ಮ ಕೂಡಲಚೆನ್ನಸಂಗಯ್ಯನಲ್ಲಿ
ಮಾಯಾಕೋಳಾಹಳ ಸಿದ್ಧರಾಮಯ್ಯದೇವರಿಗೆ
ಅಹೋರಾತ್ರಿಯಲ್ಲಿ ನಮೋ ನಮೋ ಎಂದು
ಬದುಕಿದೆನು ಕಾಣಾ ಪ್ರಭುವೆ. || ೨೭೩ ||

೧೧೨೬

ಕರಸ್ಥಲದಲ್ಲಿ ಲಿಂಗವಧರಿಸಿ
ಅನ್ಯದೈವಕ್ಕೆ ತಲೆವಾಗದಾತ ಲಿಂಗವಂತನೆಂಬೆನಯ್ಯಾ.
ಕರಸ್ಥಲದಲ್ಲಿ ಲಿಂಗವಧರಿಸಿ ಭವಿಸಂಗವ ಮಾಡದಾತ ಲಿಂಗವಂತನೆಂಬೆನಯ್ಯಾ.
ಕರಸ್ಥಲದಲ್ಲಿ ಲಿಂಗವಧರಿಸಿದಾತ ಜಡಶೈವರ ಹೊದ್ದಲಾಗದು,
ಶೈವರು ಹೇಳಿದಶಾಸ್ತ್ರವ ಓದಲಾಗದು,
ಅನ್ಯಮಂತ್ರ ಅನ್ಯಜಪಮಾಲಿಕೆಯ ಮಾಡಲಾಗದು,
ಲಿಂಗಬಾಹ್ಯ ಸತಿಸುತರ ಸೋಂಕಲಾಗದು.
ಕರಸ್ಥಲದಲ್ಲಿ ಲಿಂಗವಧರಿಸಿದಾತ ಉದಯಾಸ್ತಮಾನವೆನ್ನದೆ

ಶಿವಪೂಜೆ ಶಿವಮಂತ್ರ ಶಿವಾರ್ಪಣ ಶಿವಶಾಸ್ತ್ರ
ಶಿವಯೋಗದಲ್ಲಿರುವಾತನೆ ಲಿಂಗವಂತನೆಂಬೆನಯ್ಯಾ.
ಇದಮೀರಿ: ಕರಸ್ಥಲದಲ್ಲಿ ಲಿಂಗವ ಧರಿಸಿ
ತನ್ನ ಮನೆಯಲ್ಲಿ ಅನ್ಯದೈವ ಭವಿಮಿಶ್ರ ಅನ್ಯಬೋಧೆ
ಭವಿಶಾಸ್ತ್ರವುಳ್ಳಾತನ ಶುದ್ಧಭವಿಯೆಂಬೆನಯ್ಯಾ.
ಅದೆಂತೆಂದಡೆ:
"ಅಭಕ್ತಜನಸಂಗಶ್ಚ ಅಮಂತ್ರಂಚ ಅನಾಗಮಃ।
ಅನ್ಯದೈವ ಪರಿತ್ಯಾಗೋ ಲಿಂಗಭಕ್ತಸ್ಯ ಲಕ್ಷಣಂ॥
ಶಿವಸ್ಯ ಶಿವಮಂತ್ರಸ್ಯ ಶಿವಾಗಮಸ್ಯ ಪೂಜನಂ।
ಶಿವಶೇಷಶೀಲಸಂಬಂಧೋ ಲಿಂಗಭಕ್ತಸ್ಯ ಲಕ್ಷಣಂ॥
ಲಿಂಗಧಾರೀ ಸುಭಕ್ತಶ್ಚ ಲಿಂಗಬಾಹ್ಯಸತೀಸುತಃ।
ಅಲಿಂಗಿನೀ ಚುಂಬಕಶ್ಚ ರೌರವಂ ನರಕಂ ವ್ರಜೇತ್॥" ಎಂದುದಾಗಿ
ಗುರುವಾಕ್ಯವ ಮೀರಿ ನಡೆವ ಮಹಾಪಾತಕರ ಮುಖವ ತೋರದಿರಾ,
ಸೆರೆಗೊಡ್ಡಿ ಬೇಡಿಕೊಂಬೆ, ದಯದಿಂದ ನೋಡಿ ರಕ್ಷಿಸು
ಕೂಡಲಚೆನ್ನಸಂಗಮದೇವಾ. ॥ ೨೮೪ ॥

೧೧೨೭

ಕರಸ್ಥಲದಲ್ಲಿ ಲಿಂಗವ ಧರಿಸಿಕೊಂಡು,
ಶಿವನೆ ಆರೋಗಣೆಯ ಮಾಡಿಹನೆಂದು ಮಾಡಲಾಗದು.
ಲಿಂಗಭಾಜನದಲ್ಲಿ ಸಹಭೋಜನವ ಮಾಡುವ ಉದ್ದೇಶಿಗಳನೇನೆಂಬೆಯ್ಯಾ?
ಮಾಡಲಾಗದು, ಮಾಡಲಾಗದು! ಏನು ಕಾರಣ?
–ಇಂದ್ರಿಯವಿಕಾರ ಬಿಡದನ್ನಕ್ಕ, ತಮವಿಕಾರ ಬಿಡದನ್ನಕ್ಕ,
"ಸಂಕಲ್ಪಂ ಚ ವಿಕಲ್ಪಂ ಚ ಭಾವಾಭಾವ ವಿವರ್ಜಿತಃ।
ಯಸ್ಯ ಅಂತಃಕರೇ ಲಿಂಗಂ ನೈವೇದ್ಯಂ ಸಹಭೋಜನಂ॥" ಎಂದುದಾಗಿ
ಇದು ಕಾರಣ ಕೂಡಲಚೆನ್ನಸಂಗಯ್ಯಾ
ಸಹಭೋಜನ ನಾಯಕನರಕ. ॥ ೨೮೫ ॥

೧೧೨೮

ಕರುಣಜಲ ವಿನಯಜಲ ಸಮತಾಜಲ:
ಕರುಣಜಲವೆ ಗುರುಪಾದೋದಕ;
ವಿನಯಜಲವೆ ಲಿಂಗಪಾದೋದಕ;
ಸಮತಾಜಲವೆ ಜಂಗಮಪಾದೋದಕ.

ಗುರುಪಾದೋದಕದಿಂದ ಸಂಚಿತಕರ್ಮನಾಸ್ತಿ.
ಲಿಂಗಪಾದೋದಕದಿಂದ ಪ್ರಾರಬ್ಧಕರ್ಮನಾಸ್ತಿ.
ಜಂಗಮಪಾದೋದಕದಿಂದ ಆಗಾಮಿಕರ್ಮನಾಸ್ತಿ.
ಇಂತೀ ತ್ರಿವಿಧೋದಕದಲ್ಲಿ ತ್ರಿವಿಧಕರ್ಮನಾಸ್ತಿ.
ಇದುಕಾರಣ– ಕೂಡಲಚೆನ್ನಸಂಗಮದೇವಾ
ತ್ರಿವಿಧೋದಕವ ನಿಮ್ಮ ಶರಣನೆ ಬಲ್ಲ. || ೨೭೬ ||

೧೧೨೯

ಕಲ್ಲದೇವರ ಪೂಜೆಯ ಮಾಡಿ
ಕಲಿಯುಗದ ಕತ್ತೆಗಳಾಗಿ ಹುಟ್ಟಿದರಯ್ಯಾ.
ಮಣ್ಣದೇವರ ಪೂಜೆಯ ಮಾಡಿ
ಮಣ್ಣಾಗಿ ಹುಟ್ಟಿದರಯ್ಯಾ.
ಮರನದೇವರ ಪೂಜೆಯ ಮಾಡಿ
(ಎಗ್ಗ)ಗಳಾದರಯ್ಯ.
ಜಂಗಮದೇವರ ಪೂಜೆಯ ಮಾಡಿ
ಪ್ರಾಣಲಿಂಗಿ ಪ್ರಸಾದಿಗಳಾದರಯ್ಯಾ.
ಅದೆಂತೆಂದಡೆ:
ಜಂಗಮದೇವರು ನಡೆಸಿದರೆ ನಡೆವರು,
ನುಡಿಸಿದರೆ ನುಡಿವರು,
ಒಡನೆ ಮಾತಾಡುವರು,
ತಪ್ಪಿದರೆ ಬುದ್ಧಿಯ ಹೇಳುವರು.
ಜಂಗಮದೇವರ ಪೂಜೆಯ ಮಾಡಿ
ಕೈಲಾಸಕ್ಕೆ ಯೋಗ್ಯರಾದರಯ್ಯಾ.
ಕೂಡಲಚೆನ್ನಸಂಗಮದೇವಯ್ಯಾ. || ೨೭೭ ||

೧೧೩೦

ಕಲ್ಪಿಸಿ ಅರ್ಪಿಸಲಿಲ್ಲ, ಭೋಗಿಸಲಿಲ್ಲ,
ಅರ್ಪಿತ ಅನರ್ಪಿತವೆಂಬೆರಡನಳಿದನಾಗಿ.
ಕಾಯದ ಕೈಗಳ ಕೈಯೆ, ಭಾವದ ಕೈಗಳ ಕೈಯೆ ಅರ್ಪಿಸುವನಲ್ಲ!
ಆತ ಅರ್ಪಿತ ತಾನಾಗಿ.
ಅರ್ಪಿತ ಅನರ್ಪಿತವೆಂಬ ಸಂದೇಹವನಳಿದುಳಿದನು.
ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣಂಗೆ ಪ್ರಸಾದವೆ ಪ್ರಕೃತಿಯಾಯಿತ್ತು! || ೨೭೮

೧೧೩೧

ಕವಿತ್ವಸಾಧಕರೆಲ್ಲರೂ ಕಳವಳಿಸಿ ಹೋದರು,
ವಿದ್ಯಾಸಾಧಕರೆಲ್ಲರೂ ಬುದ್ಧಿಗೆಟ್ಟರು,
ತತ್ವಸಾಧಕರೆಲ್ಲರೂ ಭಕ್ತಿಹೀನರಾದರು,
ಲಿಂಗಸಾಧಕರೆಲ್ಲರೂ ಭೂಭಾರಕರಾದರು,
ಕೂಡಲಚೆನ್ನಸಂಗಮದೇವಯ್ಯಾ
ನಿಮ್ಮ ಬಸವಣ್ಣ ಜಂಗಮಸಾಧಕನಾಗಿ ಸ್ವಯಂ ಲಿಂಗವಾದನು! ॥ ೨೭೯ ॥

೧೧೩೨

ಕ(ಕಾ?)ಳಾಮುಖಿ ಬಿಂದುವನೊಗೆದನು,
ಅಣುವಿನಾಧಾರವನೊಗೆದನು,
ಪ್ರಣವದಾಧಾರದಲ್ಲಿ ಮಹೀತಳವನೊಗೆದನು,
ಮಧ್ಯನಾದದಲ್ಲಿ ಮರೀಚಕನನೊಗೆದನು.
ನನ್ನನೇಕೆ ಬಿಳಿದು ಮಾಡನಯ್ಯಾ ತನ್ನ ಬಿಳಿದಿನೊಳಯಿಂಕೆ?
ಎನ್ನ ಕರೆದುಕೊಂಡು ತನ್ನಂತೆ ಮಾಡನು.
ನಾನು ಪ್ರಸಾದಿಬಸವಣ್ಣನ ಪದಾರ್ಥ.
ಪ್ರಸಾದ–ಪದಾರ್ಥವೆಂಬೆರಡರ ಸಂದಿನಲ್ಲಿ
ಕೂಡಲಚೆನ್ನಸಂಗನ ಶರಣನು ಮಡಿವಾಳಮಾಚಯ್ಯ. ॥ ೨೮೦ ॥

೧೧೩೩

ಕಾಂಚನಕ್ಕೆ ಕೈಯಾನದಿರ್ದಡೆ
ಕರಸ್ಥಲದಲ್ಲಿ ಧರಿಸುವುದಯ್ಯಾ ಶಿವಲಿಂಗವ.
ಕಾಂಕ್ಷೆಯಿಲ್ಲದಿರ್ದಡೆ ಕಕ್ಷೆಯಲ್ಲಿ ಧರಿಸುವುದಯ್ಯಾ ಶಿವಲಿಂಗವ.
ಅಪ್ಪಿಲ್ಲದಿರ್ದಡೆ ಉರಸೆಜ್ಜೆಯಲ್ಲಿ ಧರಿಸುವುದಯ್ಯಾ ಶಿವಲಿಂಗವ.
ಅನ್ನಪಾನಾದಿಗಳಿಗೆ ಬಾಯ್ದೆರೆಯದಿರ್ದಡೆ,
ಅಮಳೋಕ್ಯದಲ್ಲಿ ಧರಿಸುವುದಯ್ಯಾ ಶಿವಲಿಂಗವ.
ಭಿನ್ನಶಬ್ದವಿಲ್ಲದಿರ್ದಡೆ ಮುಖಸೆಜ್ಜೆಯಲ್ಲಿ ಧರಿಸುವುದಯ್ಯಾ ಶಿವಲಿಂಗವ.
ಲೋಕಕ್ಕೆರಗದಿರ್ದಡೆ ಉತ್ತಮಾಂಗದಲ್ಲಿ ಧರಿಸುವುದಯ್ಯಾ ಶಿವಲಿಂಗವ.
ನಾಭಿಯಿಂದ ಕೆಳಯಿಕ್ಕೆ ಧರಿಸಲಾಗದು.
ಅದೇನು ಕಾರಣವೆಂದಡೆ:
ಅದು ಹೇಯಸ್ಥಾನವಾದುದಾಗಿ.
ಜಿಹ್ವೆಗೆ ತಾಗಿದ ಸಕಲರುಚಿಯೂ ಗಳಂದಿಳಿಸುವುದಾಗಿ

ಗಳವೇ ವಿಶೇಷಸ್ಥಳವೆಂದು ಗಳದಲ್ಲಿ ಧರಿಸಿದೆನಯ್ಯಾ
ಕೂಡಲಚೆನ್ನಸಂಗಮದೇವಾ. || ೨೬೧ ||

೧೧೩೪

ಕಾಣಬಾರದ ಘನವ ಕರದಲ್ಲಿ ಧರಿಸಿದ,
ಹೇಳಬಾರದ ಘನವ ಮನದಲ್ಲಿ ತೋರಿದ,
ಉಪಮಿಸಬಾರದ ಘನವ ನಿಮ್ಮ ಶ್ರೀಪಾದದಲ್ಲಿ ತೋರಿದ,
ಇಂತೀ ತ್ರಿವಿಧವು ಏಕಾರ್ಥವಾಗಿಹ ಭೇದವ
ಬಸವಣ್ಣ ತೋರಿಕೊಟ್ಟನಾಗಿ
ನಾನು ಬದುಕಿದೆನು ಕಾಣಾ,
ಕೂಡಲಚೆನ್ನಸಂಗಮದೇವಾ. || ೨೬೨ ||

೧೧೩೫

ಕಾದನಂತೆ, ಕಣನೇರಲೇಕೊ?
ನಪುಂಸಕನಂತೆ, ಗಣಿಕಾಸ್ತ್ರೀಯೇಕೊ?
ನಡೆಯ ಹೆಣನಂತೆ, ನುಡಿಯಲೇಕೊ?
ಪುರಾತರು ನುಡಿದಂತೆ ನಡೆಯಲರಿಯದವರೆಲ್ಲ,
ಹಾಳೂರೊಳಗೆ ನರಿ ಗುಳ್ಳೆಯ ತಿಂದು ಬಗುಳಿದಂತೆ ಕಾಣಾ,
ಕೂಡಲಚೆನ್ನಸಂಗಮದೇವಾ. || ೨೬೩ ||

೧೧೩೬

ಕಾಮಿ ಮಜ್ಜನಕ್ಕೆ ನೀಡಿದರೆ ರಕ್ತದ ಧಾರೆ.
ಕ್ರೋಧಿ ಪುಷ್ಪವನರ್ಪಿಸಿದರೆ ಕತ್ತಿಯ ಮೊನೆ.
ಲೋಭಿ ರುದ್ರಾಕ್ಷಿಯ ಧರಿಸಿದರೆ ಗಿರಿಕೆ.
ಮೋಹಿ ವಿಭೂತಿಯ ಧರಿಸಿದರೆ ಸುಣ್ಣದ ಗರ್ತ
ಮದಿ ಲಿಂಗವ ಕಟ್ಟಿದರೆ ಎತ್ತುಗಲ್ಲು.
ಮತ್ಸರಿ ಪಾದೋದಕ ಪ್ರಸಾದವ ಕೊಂಡರೆ ಕಾಳಕೂಟದ ವಿಷ.
ಕೂಡಲಚೆನ್ನಸಂಗಮದೇವರಲ್ಲಿ
ಮದಮತ್ಸರವ ಬಿಟ್ಟವರು ಅಪೂರ್ವ. || ೨೬೪ ||

೧೧೩೭

ಕಾಯ ಒಂದು, ಪ್ರಾಣ ಒಂದು, ಭಾವ ಒಂದು,
ನಿರ್ಭಾವ ಒಂದು,
ಒಂದಲ್ಲದೆ ಎರಡುಂಟೆ?
ಗುರು ಒಂದು, ಲಿಂಗ ಒಂದು, ಉಪದೇಶ ಒಂದು.
ಕೂಡಲಚೆನ್ನಸಂಗಯ್ಯನ ಶರಣ ಬಸವಣ್ಣನ ಗರುಡಿಯಲ್ಲಿ
ಇಬ್ಬರಿಗೆಯೂ ಅಭ್ಯಾಸ ಒಂದೆ ಕಾಣಾ ಪ್ರಭುವೆ. ॥ ೨೮೫ ॥

೧೧೩೮

ಕಾಯ–ಕರಣ–ಭಾವಾರ್ಪಿತ ಭೇದದಿಂದ
ಪ್ರಸಾದಿಯ ನಿಜಸ್ಥಲ.
ತನ್ನ ಲಿಂಗಕ್ಕೆಂದು ಬಂದ ಪದಾರ್ಥದ ರೂಪ ಕಂಡು
ಸಂತೋಷಿಸುವಾತನೆ ಪ್ರಸಾದಿ.
ಬಂದುದು ಪದಾರ್ಥ, ಸಂದುದು ಪ್ರಸಾದ, ನಿಂದುದು ಕಿಲ್ಬಿಷ,
ಕೂಡಲಚೆನ್ನಸಂಗಮದೇವಾ. ॥ ೨೮೬ ॥

೧೧೩೯

ಕಾಯಕಲ್ಪಿತದಿಂದ ಭೋಗಾದಿ ಭೋಗಂಗಳ ಭೋಗಿಸಬಲ್ಲಡೆ
ದೇವಲೋಕವೆ ಸರ್ವತಃ
ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ಇಂತೀ ಚತುರ್ವಿಧವನೆ ಮೀರಿ
ಶಿವನ ಶ್ರೀಪಾದದಲ್ಲಿ ಇರಬಲ್ಲಡೆ ಕೈಲಾಸವೆ ಕಲ್ಯಾಣ.
ಲಿಂಗವೆ ತಾನು, ತಾನೆ ಲಿಂಗವಾಗಿರಬಲ್ಲ ಅಸಮಯೋಗಿ
ಸಿದ್ಧರಾಮಯ್ಯದೇವರ ಶ್ರೀಪಾದದಲ್ಲಿ ಎಂದಿಪ್ಪೆ ಹೇಳಾ ಪ್ರಭುವೆ?
ಕೂಡಲಚೆನ್ನಸಂಗಮದೇವಾ. ॥ ೨೮೭ ॥

೧೧೪೦

ಕಾಯಕ್ಲೇಶದಿಂದ ತನುಮನ ಬಳಲಿ ಧನವಗಳಿಸಿ
ಗುರುಲಿಂಗಜಂಗಮಕ್ಕೆ ವೆಚ್ಚಿಸಿ
ದಾಸೋಹವ ಮಾಡುವ ಭಕ್ತನ ಪಾದವ ತೋರಯ್ಯಾ, ನಿಮ್ಮ ಧರ್ಮ.
ಅದೇಕೆಂದಡೆ; ಆತನ ತನು ಶುದ್ಧ ಆತನ ಮನ ಶುದ್ಧ.

ಆತನ ನಡೆ ನುಡಿ ಪಾವನ.
ಆತಂಗೆ ಉಪದೇಶವ ಮಾಡಿದ ಗುರು ನಿರಂಜನ ನಿರಾಮಯ.
ಅಂತಪ್ಪ ಭಕ್ತನ ಕಾಯವೆ ಕೈಲಾಸವೆಂದು ಹೊಕ್ಕು
ಲಿಂಗಾರ್ಚನೆಯ ಮಾಡುವ ಜಂಗಮ ಜಗತ್ಪಾವನ.
ಇಂತಿವರಿಗೆ ನಮೋ ನಮೋ ಎಂಬೆ ಕೂಡಲಚೆನ್ನಸಂಗಯ್ಯ. ॥ ೨೬೮ ॥

೧೧೪೧

ಕಾಯದಿಂದ ಲಿಂಗೈಕ್ಯವಾದೆವೆಂಬರು,
ಜೀವದಿಂದ ಲಿಂಗೈಕ್ಯವಾದೆವೆಂಬರು,
ಸುಷುಮ್ನನಾಳದ ಭೇದವನರಿಯರು,
ವಿಷಯದಲ್ಲಿ ಗಸಣಿಗೊಂಬರು,
ಅಂತರಂಗಶುದ್ಧಿಯನವರೆತ್ತಬಲ್ಲರು ಕೂಡಲಚೆನ್ನಸಂಗಮದೇವಾ? ॥ ೨೬೯ ॥

೧೧೪೨

ಕಾಯಪಲ್ಲಟದ ಹೆಸರಲ್ಲದೆ ಅನುಮಿಷನಲ್ಲಮನಾಗಿ
ತನ್ನ ಲಿಂಗವ ತಾನೆ ಮರ್ತ್ಯಕ್ಕೆ ತಂದ.
ಕಾಯಪಲ್ಲಟದ ಹೆಸರಲ್ಲದೆ ಪೌಲಸ್ತ್ಯನು
ಸಕಳೇಶ್ವರ ಮಾದಿರಾಜನಾಗಿ
ತನ್ನ ಲಿಂಗವ ತಾನೆ ಮರ್ತ್ಯಕ್ಕೆ ತಂದ.
ಕಾಯ ಪಲ್ಲಟದ ಹೆಸರಲ್ಲದೆ ವಿಷ್ಣು ದಶಾವತಾರಕ್ಕೆ ಬಂದು ಸಿಕ್ಕಿದ
ಸಿದ್ಧರಾಮಯ್ಯನಾಗಿ
ತನ್ನ ದಿವ್ಯದೇಹವ ತಾನೆ ಮರ್ತ್ಯಕ್ಕೆ ತಂದ.
ಇದು ಕಾರಣ– ಕೂಡಲಚೆನ್ನಸಂಗಯ್ಯನಲ್ಲಿ
ಶರಣನ ಉಪಮಿಸಬಾರದು, ಉಪಮಾತೀತನು. ॥ ೨೭೦ ॥

೧೧೪೩

ಕಾಯಪುರವೆಂಬ ಪಟ್ಟಣದೊಳಗೆ:
ಮನವೆಂಬ ಅರಸು, ತ್ರಿಗುಣವೆಂಬ ಪ್ರಧಾನರು,
ವಶೀಕರಣವೆಂಬ ಸೇನಬೋವ
ಸಂಚಲವೆಂಬ ತೇಜಿ, ಅಷ್ಟಮದವೆಂಬ ಆನೆ,
ಈರೈದು (ಮನ್ನೆಯ) ನಾಯಕರು, ಇಪ್ಪತ್ತೈದು ಪ್ರಜೆ,
ನೂರನಾಲ್ವತ್ತೆಂಟು ದೇಹವಿಕಾರವೆಂಬ ಪರಿವಾರ,

ಈ ಸಂಭ್ರಮದಲ್ಲಿ ಮನೋರಾಜ್ಯಂಗೆಯ್ಯುತ್ತಿರಲು–
ಇತ್ತ ಶೂನ್ಯವೆಂಬ ಪಟ್ಟಣದೊಳಗೆ ಅನಾಮಿಕನೆಂಬ ಲಿಂಗದರಸು,
ಅಜಾತನೆಂಬ ಶರಣ ಪ್ರಧಾನಿ
ಪ್ರಪಂಚವೆಂಬ ದಳ ಮುರಿದು ಮೂವರಾಟ ಕೆಟ್ಟಿತ್ತು,
ಅರಸು ಕೂಡಲಚೆನ್ನಸಂಗಯ್ಯನು, ಒಲಿದ ಕಾರಣ. || ೨೯೧ ||

೧೧೪೪

ಕಾಯ ಬ್ರಹ್ಮಚಾರಿಯಾದಡೇನಯ್ಯಾ,
ಆಸೆ ಬ್ರಹ್ಮಚಾರಿಯಾಗದನ್ನಕ್ಕರ?
ಶಬ್ದ ಮೌನಿಯಾದಡೇನಯ್ಯಾ,
ನೆನಪು ಮೌನಿಯಾಗದನ್ನಕ್ಕರ?
ತನು ಬೋಳಾದಡೇನಯ್ಯಾ, ಮನ ಬೋಳಾಗದನ್ನಕ್ಕರ?
ಇದು ಕಾರಣ–ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣಸ್ಥಲವಾರಿಗೆಯೂ ಅಳವಡದು. || ೨೯೨ ||

೧೧೪೫

ಕಾಯವರ್ಜಿತರ ಕಂಡೆನಯ್ಯಾ,
ಜೀವವರ್ಜಿತರ ಕಂಡೆನಯ್ಯಾ,
ಈ ಉಭಯ ವರ್ಜಿತರ ಕಂಡೆನಯ್ಯಾ
ಕೂಡಲಚೆನ್ನಸಂಗಮದೇವಯ್ಯಾ
ಅಲ್ಲಮನಂತಪ್ಪವರನಾರನೂ ಕಾಣೆನಯ್ಯಾ! || ೨೯೩ ||

೧೧೪೬

ಕಾಯವಳಿದಡೇನು? ಕಾಯ ಉಳಿದಡೇನು?
ಕಾಯ ಬಯಲಾದಡೇನು?
ಮನ ಮನ ಲಯವಾಗಿ ಘನಕ್ಕೆ ಘನವಾದ ಶರಣರ ಕಂಡಡೆ,
ಕೂಡಲಚೆನ್ನಸಂಗಮನೆಂದು ಶಬುದ ಮುಗದವಾಗಿರಬೇಕಲ್ಲದೆ,
ಚೋದ್ಯಕ್ಕೆ ಕಾರಣವೇನು ಹೇಳಾ ಸಂಗನಬಸವಣ್ಣಾ? || ೨೯೪ ||

೧೧೪೭

ಕಾಯ ವಿಕಾರವಳಿದಲ್ಲದೆ ಮಾಯವಿಕಾರವಳಿಯದು
ಮಾಯವಿಕಾರವಳಿದಲ್ಲದೆ ಭವನಾಶವಾಗದು.

ಭವನಾಶವಾದಲ್ಲದೆ ಲಿಂಗಸಂಬಂಧವಳವಡದು
ಲಿಂಗಸಂಬಂಧವಳವಟ್ಟಲ್ಲದೆ ಸುಖವು ಸಾಧ್ಯವಾಗದು.
ಪರಮಸುಖಪರಿಣಾಮಕ್ಕೆ ಮಹಾನುಭಾವಿ[ಗಳ ಸಂಗವೆ ಬೇಕು.
ಮಹಾನುಭಾವಿಗಳ ಸಂಗದಿಂದಲ್ಲದೆ ವಿಶ್ರಾಮವಿಲ್ಲ]
ಮಹಾನುಭಾವಸ್ವಾಯತವಿಲ್ಲದ ಸಮಾಧಾನ ಸಂಬಂಧವನೆನ್ನದೆನ್ನಬಹುದೆ?
ಘನಮನವೇಧಿಸಿ ಆದಿಯನಾದಿಯನೊಳಕೊಂಡು ಆಧಾರವಿಲ್ಲದ
ನಿಲವು ಸಾಧ್ಯವಾಯಿತ್ತು ನೋಡಾ.
ಕೂಡಲಚೆನ್ನಸಂಗನಶರಣ ಪ್ರಭುದೇವರು ಅಜಾತನೆಂಬ ಭೇದವೆನಗಿಂದು
ಕಾಣಬಂದಿತ್ತು. ॥ ೨೯೫ ॥

೧೧೪೮

ಕಾಯವೆಂಬ ಕಣ್ಣಡವಿಲ್ಲ ಪ್ರಾಣವಿಲ್ಲಾಗಿ;
ಮನವೆಂಬ ನೆನಹಿಲ್ಲ ಅನುಭಾವವಿಲ್ಲವಾಗಿ;
ಅರುಹೆಂಬ ಕುರುಹಿಲ್ಲ ಪ್ರತಿಯಿಲ್ಲವಾಗಿ,
ಕೂಡಲಚೆನ್ನಸಂಗಮದೇವರಲ್ಲಿ ಪ್ರಭುದೇವರ ಶ್ರೀಪಾದಕ್ಕೆ
ನಮೋ ನಮೋ ಎಂದು ಬದುಕಿದೆನು ಕಾಣಾ, ಸಿದ್ಧರಾಮಯ್ಯಾ. ॥ ೨೯೬ ॥

೧೧೪೯

ಕಾಲ ಕಲ್ಪಿತಂಗಳಿಲ್ಲದೆ ನಿಮ್ಮಿಂದ ನೀವೇ ಸ್ವಯಂಭುವಾಗಿರ್ದಿರಯ್ಯಾ.
ನಿಮ್ಮ ಪರಮಾನಂದ ಪ್ರಭಾವದ ಪರಿಣಾಮದಲ್ಲಿ ಅನಂತಕಾಲವಿರ್ದಿರಲ್ಲಾ!
ನಿಮ್ಮ ಆದ್ಯಂತವ ನೀವೇ ಅರಿವುತಿದ್ದಿರಲ್ಲಾ,
ನಿಮ್ಮ ನಿಜದುದಯವ ನೀವೇ ಬಲ್ಲಿರಿ
ಕೂಡಲಚೆನ್ನಸಂಗಮದೇವಾ. ॥ ೨೯೭ ॥

೧೧೫೦

ಕಾಲ ಕಲ್ಪಿತನಲ್ಲ ಕರ್ಮವಿರಹಿತ ಶರಣ.
ವಿಧಿ ನಿಷೇಧ ಪುಣ್ಯ ಪಾಪ ಕರ್ಮ ಕಾಯನು ಅಲ್ಲ ಆ ಶರಣನು.
ಅವರಿವರ ಬೆರಸಿಪ್ಪನು, ತನ್ನ ಪರಿ ಬೇರೆ!
ನಿರಂತರ ಸುಖಿ, ಕೂಡಲಚೆನ್ನಸಂಗಯ್ಯಾ,
ನಿಮ್ಮ ಶರಣರು ಪ್ರಪಂಚನೊಳಗಿದ್ದೂ, ತನ್ನ ಪರಿ ಬೇರೆ. ॥ ೨೯೮ ॥

೧೧೫೧

ಕಾಲಚಕ್ರ ಕರ್ಮಚಕ್ರ ನಾದಚಕ್ರ ಬಿಂದುಚಕ್ರದೊಳಗೆ
ಹುಟ್ಟದ ಯೋನಿಯಿಲ್ಲ, ಮೆಟ್ಟದ ನೆಲವಿಲ್ಲ
ಉಣ್ಣದಾಹಾರವಿಲ್ಲ, ಕಾಣದ ದುಃಖವಿಲ್ಲ.
ಇಂತು ನಾನಾ ಜನ್ಮದಲ್ಲಿ ನುಗ್ಗುನುರಿಯಾಗಿ ಬಂದವಂಗೆ
ಗುರುವ ಮುಟ್ಟಬಹುದೆ? ಲಿಂಗವನರ್ಚಿಸಬಹುದೆ?
ಪ್ರಸಾದವ ಕೊಳ್ಳಬಹುದೆ?
ಕೂಡಲಚೆನ್ನಸಂಗಯ್ಯಾ, ತ್ರಿಕರಣಶುದ್ಧವಿಲ್ಲದವಂಗೆ
ಉಪದೇಶವ ಕೊಟ್ಟಡೆ ನಾಯಕನರಕ. || ೨೯೯ ||

೧೧೫೨

ಕಾಲವನಾದಿ ಕರ್ಮವನಾದಿ ಜೀವವನಾದಿಯಾದಡೆಯೂ ಆಗಲಿ,
ಘನಸಿಧಿ ಶಕ್ತಿಯನರಿದಲ್ಲದೆ, ಘನನಿಲಯಶಕ್ತಿಯನರಿಯಬಾರದು.
ಘನನಿಲಯಶಕ್ತಿಯನರಿದಲ್ಲದೆ, ತನೂದ್ವಪನಶಕ್ತಿಯನರಿಯಬಾರದು.
ತನೂದ್ವಪನಶಕ್ತಿಯನರಿದಲ್ಲದೆ, ಆದಿಮಧ್ಯಾವಸಾನವನರಿಯಬಾರದು.
ಆದಿಮಧ್ಯಾವಸಾನವನರಿದಲ್ಲದೆ, ಪಿಂಡಬ್ರಹ್ಮಾಂಡವನರಿಯಬಾರದು.
ಪಿಂಡಬ್ರಹ್ಮಾಂಡವನರಿದಲ್ಲದೆ, ಉನ್ಮನಿಯ ಮುಖವ ಕಾಣಬಾರದು.
ಉನ್ಮನಿಯ ಮುಖವ ಕಂಡಲ್ಲದೆ, ಲಿಂಗವ ಕಾಣಬಾರದು.
ಲಿಂಗವ ಕಂಡು ಗಪಗಹಿಸಿ ಕೂಡಿದಲ್ಲದೆ, ಮರ್ತ್ಯದ ಹಂಗು ಹರಿಯದು.
ಮರ್ತ್ಯದ ಹಂಗು ಹರಿದಲ್ಲದೆ, ಭವಂ ನಾಸ್ತಿಯಾಗದು ಕಾಣಾ
ಕೂಡಲಚೆನ್ನಸಂಗಮದೇವಾ. || ೩೦೦ ||

೧೧೫೩

ಕಾಲಿಲ್ಲವೆಂಬರಯ್ಯಾ ಪ್ರಭುದೇವರ, ಸಂಸಾರಸೂತಕವ ಮೆಟ್ಟನಾಗಿ.
ಕೈಯಿಲ್ಲವೆಂಬರಯ್ಯಾ ಪ್ರಭುದೇವರ ಪರಧನವ ಕೊಳ್ಳನಾಗಿ.
ಕಿವಿಯಿಲ್ಲವೆಂಬರಯ್ಯಾ ಪ್ರಭುದೇವರ ಅನ್ಯವ ಕೇಳನಾಗಿ.
ಮೂಗಿಲ್ಲವೆಂಬರಯ್ಯಾ ಪ್ರಭುದೇವರ ದುರ್ಗಂಧಕ್ಕೆಳಸನಾಗಿ.
ಎದೆಯಿಲ್ಲವೆಂಬರಯ್ಯಾ ಪ್ರಭುದೇವರ ಪರಸ್ತ್ರೀಯನಪ್ಪನಾಗಿ.
ಇದು ಕಾರಣ--ಕೂಡಲಚೆನ್ನಸಂಗಮದೇವಾ
ಪ್ರಭುದೇವರ ಒಕ್ಕುಮಿಕ್ಕ ಪ್ರಸಾದವ ಕೊಂಡು
ನಾನು ಧನ್ಯನಾದೆನು ಕಾಣಾ ಸಂಗನಬಸವಣ್ಣಾ. || ೩೦೧ ||

೧೧೫೪

ಕಾವಿ ಕಾಷಾಯಾಂಬರ ಜಡೆಮಾಲೆಯ ಧರಿಸಿದರೇನು,
ಜಂಗಮವಾಗಬಲ್ಲನೆ?
ಸಾಕಾರದಲ್ಲಿ ಸನುಮತರಲ್ಲ, ನಿರಾಕಾರದಲ್ಲಿ ನಿರುತರಲ್ಲ.
ತುರುಬು ಜಡೆ ಬೋಳೆನ್ನದೆ ಅರಿವುಳ್ಳಾತನೆ ಜಂಗಮ.
ಅರಿವಿಲ್ಲದೆಲ್ಲ ವೇಷ ಕಾಣಾ, ಕೂಡಲಚೆನ್ನಸಂಗಮದೇವಾ. ॥ ೩೦೨ ॥

೧೧೫೫

ಕಿನ್ನರರು ಕಿಂಪುರುಷರು ಸಿದ್ಧ ವಿದ್ಯಾಧರರೆಂಬ ಮೂರುತಲೆಯವರು ಬಂದು
ಮೂರಲಗಿನ ನಡುವಣ ಕೀಲ ಕಳಚಿದರೆ
ಕೂಡಲಚೆನ್ನಸಂಗಯ್ಯನೆಂಬೆ, ಆ ಮಹಾತ್ಮನ. ॥ ೩೦೩ ॥

೧೧೫೬

ಕಿರಿದಾದ ಬೀಜವಲ್ಲ ಹಿರಿಯ ತರುವಡಗಿದ ಪರಿಯಂತೆ,
ಕರಗತವಾದ ಕನ್ನಡಿಯಲ್ಲಿ ಕರಿಗಿರಿಗಳು ತೋರುವ ಪರಿಯಂತೆ
ಜಗದ್ವ್ಯಾಪಕವಾದ ಪರವಸ್ತುವು ಖಂಡಿತಾಕಾರವಾದ ಶರೀರದಲ್ಲಿ
ಅತಿ ಸೂಕ್ಷ್ಮ ಪ್ರಮಾಣದಲ್ಲಿರ್ಪಂತೆ,
ಪರತರಶಿವಲಿಂಗವು ಸದ್ಭಕ್ತರನುದ್ಧರಿಪ ಸದಿಚ್ಛೆಯಿಂದ
ಲಿಂಗಾಕಾರವಾಗಿ ನೆಲೆಗೊಂಡಿರ್ಪುದು.
'ಅಣೋರಣೀಯಾನ್ ಮಹತೋ ಮಹೀಯಾನ್' ಎಂದುದಾಗಿ,
ಪರಬ್ರಹ್ಮರೂಪವಾದ ಲಿಂಗವು, ಮಹದ್ರೂಪದಿಂದ ಅಖಂಡವಾಗಿಯೂ
ಅಣುರೂಪದಿಂದ ಖಂಡಿತವಾಗಿಯೂ ತೋರುವುದು.
ಕೂಡಲಚೆನ್ನಸಂಗಮದೇವಾ ಇದು ನಿಮ್ಮ ದಿವ್ಯಲೀಲೆಯಯ್ಯಾ! ॥ ೩೦೪ ॥

೧೧೫೭

ಕುಲ ಛಲ ಮೊದಲಾದ ಅಷ್ಟಮದಂಗಳನರಿತು
ದಾಸೋಹಕ್ಕೊಡೆಯಾಗಿರಬೇಕು.
ಪೃಥುವ್ಯಾದಿ ಅಷ್ಟತನುಮದವೆಂಬ ಮಹಿಮೆಯೊಳಗಿರ್ಪ
ಲಿಂಗಾವಧಾನಿಯಾಗಿರಬೇಕು.
ತೈಲಾಭ್ಯಂಜನ ವಸ್ತ್ರ ಆಭರಣ ಸುಗಂಧದ್ರವ್ಯ ಷಡುರಸಾನ್ನಾದಿ
ಸತಿಸಂಗ ಸುಖ ದುಃಖಗಳ ಲಿಂಗಮುಖ ಮುಂತಾಗಿ

ಪ್ರಸಾದಭೋಗಿಯಾಗಿರ್ಪುದು.
ಯಮ ನಿಯಮಾದಿ ಅಷ್ಟಾಂಗ ಯೋಗದಲ್ಲಿ ನಿರತನಾದಡೇನು?
ದಾಸೋಹಕ್ಕೆ ಸ್ವಯವಾಗಿರಬೇಕು.
ಗೃಹ ಅರಮನೆ ತೋಟ ಗೋಕುಲ ವಾಹನ ಪರಿಜನ
ಕೀರ್ತಿಜನದೊಳಗಿರ್ದು ಶರಣರ ಮರೆದಿರಲಾಗದು.
ಇಂದ್ರಾದಿ ದೇವತೆಗಳು ಅಷ್ಟದಿಕ್ಕಿನಲ್ಲಿ ಕರ್ತರಾಗಿ
ನಿಮ್ಮ ನಿಜ ಭೃತ್ಯರಾಗಿರ್ದರು.
ಇಂತೀ ಅಷ್ಟಸಂಪಾದನೆ ನಾಲ್ವತ್ತೆಂಟರಿಂದ
ಕೂಡಲಚೆನ್ನಸಂಗಯ್ಯನ ಶರಣರು ಲೋಕಾಧಿಪತಿಗಳು. || ೩೦೫ ||

೧೧೫೮

ಕುಲಹೀನ ಶಿಷ್ಯಂಗೆ ಅನುಗ್ರಹವ ಕೊಟ್ಟು
ತನ್ನ ಪ್ರಾಣಲಿಂಗವ ನಿಕ್ಷೇಪಿಸಿ, ಕರ್ಣಮಂತ್ರವ ಹೇಳಿ,
ಆ ಗುರು ಬಂದು ಆ ಶಿಷ್ಯನ ಮನೆಯು ಹೊಗಲೊಲ್ಲದೆ
ಅಕ್ಕಿ ತುಪ್ಪವನೀಸಿಕೊಂಬವನ ಕೇಡಿಂಗೆ ಇನ್ನೇವೆನಯ್ಯಾ?
ತನ್ನ ಪ್ರಾಣಲಿಂಗವನವನಿಗೆ ಕೊಟ್ಟು ತಾ ಹೊಗೆನೆಂಬ
ವ್ರತಗೇಡಿಯ ಇನ್ನೇನೆನಬಹುದಯ್ಯಾ?
ಅವನ ಧನಕ್ಕೆ ತಂದೆಯಾದನಲ್ಲದೆ ಅವನಿಗೆ ತಂದೆಯಾದುದಿಲ್ಲ.
ಇದು ಕಾರಣ–ಕೂಡಲಚೆನ್ನಸಂಗಯ್ಯಾ
ಆ ಲಿಂಗವ ಮಾರಿಕೊಂಡುಂಬ ಭಂಗಕಾರರು
ಕೆಟ್ಟಕೇಡನೇನೆಂಬೆನಯ್ಯಾ! || ೩೦೬ ||

೧೧೫೯

ಕುಳಿತಲ್ಲಿ ಎರಡು, ನಿಂದಲ್ಲಿ ನಾಲ್ಕು,
ನಡೆನುಡಿಯಲ್ಲಿ ಎಂಟು, ಅರೆನಿದ್ದೆಯಲ್ಲಿ ಪದಿನಾರು,
ರತಿಸಂಗದಲ್ಲಿ ಮೂವತ್ತೆರಡಂಗುಲ ರೇಚಕ,
ತದರ್ಧ ಪೂರಕ, ಪೊರಗು ಒಳಗಾದಡೆ
ಕೂಡಲಚೆನ್ನಸಂಗಯ್ಯನಲ್ಲಿ ಸಂಯೋಗ. || ೩೦೭ ||

೧೧೬೦

ಕೊಟಕಿಕ್ಕಿ ಮಾಡುವರೆಲ್ಲಾ ಕುಂಟಣಗಿತ್ತಿಯ ಮಕ್ಕಳು,
ಪರಸಿಕೊಂಡು ಮಾಡುವರೆಲ್ಲಾ ಹಾದರಗಿತ್ತಿಯ ಮಕ್ಕಳು,
ವರ್ಷಕ್ಕೊಂದು ತಿಥಿಯೆಂದು ಮಾಡುವರೆಲ್ಲಾ ವೇಸಿಯ ಮಕ್ಕಳು,

ಆ ಕೂಟಕ್ಕೆ ಮಾಡದೆ, ಹರಸಿಕೊಂಡು ಮಾಡದೆ,
ವರ್ಷಕ್ಕೊಂದು ತಿಥಿಯೆಂದು ಮಾಡದೆ,
ಸಹಜದಲ್ಲಿ ಮಾಡುವರೆಲ್ಲಾ ಸಜ್ಜನ ಪತಿವ್ರತೆಯ ಮಕ್ಕಳು ಕಾಣಾ,
ಕೂಡಲಚೆನ್ನಸಂಗಮದೇವಾ. || ೩೦೮ ||

೧೧೬೧

ಕೃತಯುಗದಲ್ಲಿ ಓಂಕಾರಸತ್ಯರೂಪದೇವಾಂಗನೆಂಬ ಭಕ್ತನ ಮಾಡುವಲ್ಲಿ
ಸ್ಥೂಲಕಾಯನೆಂಬ ಜಂಗಮ, ಅಂದಿಗೆ ಪ್ರಥಮ ಮೂಲಸ್ಥಾನ ಕೇತಾರೇಶ್ವರ.
ತ್ರೇತಾಯುಗದಲ್ಲಿ ಘಂಟಾಕರ್ಣನೆಂಬ ಭಕ್ತನ ಮಾಡುವಲ್ಲಿ,
ಶೂನ್ಯಕಾಯನೆಂಬ ಜಂಗಮ, ಅಂದಿಗೆ ಪ್ರಥಮಮೂಲಸ್ಥಾನ ರಾಮೇಶ್ವರ.
ದ್ವಾಪರದಲ್ಲಿ ವೃಷಭನೆಂಬ ಭಕ್ತನ ಮಾಡುವಲ್ಲಿ,
ಅನಿಮಿಷನೆಂಬ ಜಂಗಮ, ಅಂದಿಗೆ ಪ್ರಥಮಮೂಲಸ್ಥಾನ ಸೌರಾಷ್ಟ್ರ.
ಕಲಿಯುಗದಲ್ಲಿ ಬಸವನೆಂಬ ಭಕ್ತನ ಮಾಡುವಲ್ಲಿ
ಪ್ರಭುವೆಂಬ ಜಂಗಮ, ಅಂದಿಗೆ ಪ್ರಥಮ ಮೂಲಸ್ಥಾನ ಶ್ರೀಶೈಲ.
ಇಂತೀ ನಾಲ್ಕು ಯುಗಕ್ಕೆ ನಾಲ್ಕು ಜಂಗಮಸ್ಥಲ,
ನಾಲ್ಕು ಯುಗಕ್ಕೆ ನಾಲ್ಕು ಲಿಂಗ (ಭಕ್ತ?) ಸ್ಥಲ
ಕೂಡಲಚೆನ್ನಸಂಗಮದೇವಾ. || ೩೦೯ ||

೧೧೬೨

ಕೃತಯುಗದಲ್ಲಿ ದೇವರು ದೇವಾಸುರನ ಕೊಲುವಲ್ಲಿ,
ಪ್ರಮಥನೆಂಬ ಗಣೇಶ್ವರನಾಗಿರ್ದನು.
ಗಜಾಸುರನ ಚರ್ಮವ ಬಿಚ್ಚಿ ಅಜಾರಿ ಹೊದವಲ್ಲಿ
ಉಗ್ರನೆಂಬ ಗಣೇಶ್ವರನಾಗಿರ್ದನು.
ಅಸುರರ ಶಿರೋಮಾಲೆಯ ಕೊರಳಲ್ಲಿ ಒರದಲ್ಲಿ
ಹಾರವಾಗಿ ಧರಿಸಿ ಜಗಕ್ಕೆ ಜೂಬಾಗಿಪ್ಪಲ್ಲಿ,
ಶಂಕೆಯಿಲ್ಲದೆ ನಿಶ್ಶಂಕನೆಂಬ ಗಣೇಶ್ವರನಾಗಿರ್ದನು.
ಸಮಸ್ತ ದೇವರಿಗೆ ಕರುಣಾಮೃತವ ಸುರಿದು ಸುಖವನಿತ್ತು ರಕ್ಷಿಸುವಲ್ಲಿ
ಶಂಕರನೆಂಬ ಗಣೇಶ್ವರನಾಗಿರ್ದನು.
ಜಾಳಂಧರನೆಂಬ ಅಸುರನ ಕೊಲುವಲ್ಲಿ
ಜಾಣರಿಗೆ ಜಾಣನಾಗಿ ವಿಚಿತ್ರನೆಂಬ ಗಣೇಶ್ವರನಾಗಿರ್ದನು.
ತ್ರೇತಾಯುಗದಲ್ಲಿ ಕಾಳಂಧರದೊಳಗೆ ಶಿವನು ನಿಜಮುಂಚಿರದಾಗಿಪ್ಪಲ್ಲಿ,
ಕಾಲಾಗ್ನಿರುದ್ರನೆಂಬ ಗಣೇಶ್ವರನಾಗಿರ್ದನು.

ಪಿತಾಸುರನೆಂಬ ದೈತ್ಯನಕೊಂದು ಜಗವರಕ್ಷಿಸುವಲ್ಲಿ,
ಮಾತಾಪಿತನೆಂಬ ಗಣೇಶ್ವರನಾಗಿರ್ದನು.
ತಾಳಾಸುರನೆಂಬ ದೈತ್ಯನ ಕೊಂದು ಜಗವರಕ್ಷಿಸಿ
ಸೃಷ್ಟಿಯ ಕಲ್ಪಿಸಿ ಬ್ರಹ್ಮಾಂಡ ಭಾರಮಂ ಧರಿಸುವಲ್ಲಿ,
ತಾಳಸಮ್ಮೇಳನೆಂಬ ಗಣೇಶ್ವರನಾಗಿರ್ದನು.
ಜಲಪ್ರಳಯದಲ್ಲಿ ಜಗನ್ನಾಥನು ಅಳಿಯದೆ ಇಪ್ಪಲ್ಲಿ
ಜನನಮರಣವರ್ಜಿತನೆಂಬ ಗಣೇಶ್ವರನಾಗಿರ್ದನು.
ಜಗವೆಲ್ಲಾ ಶೂನ್ಯವೆಂದಡೆ ನಾನೆ ಹುಟ್ಟಿಸಿದೆನೆಂದು,
ಆದಿಗಣನಾಥನೆಂಬ ಗಣೇಶ್ವರನಾಗಿರ್ದನು.
ಸುರಾಸುರರು ಅಹಂಕಾರದಲ್ಲಿ ಹೆಚ್ಚಿ ಮೇರೆದಪ್ಪಿದಲ್ಲಿ
ಗೂಳಿಯಾಗಿ ಹೋರಿ ಎಲ್ಲರ ತೊತ್ತಳದುಳಿದು,
ಒಕ್ಕಲಿಕ್ಕಿ ಮಿಕ್ಕು ಮೀರಿ
ನಂದಿಮಹಾಕಾಳನೆಂಬ ಗಣೇಶ್ವರನಾಗಿರ್ದನು.
ಉರಿಗಣ್ಣ ತೆರೆದಡೆ ಉರಿದಹವು ಲೋಕಂಗಳೆಂದು
ಜಗವ ಹಿಂದಿಕ್ಕಿಕೊಂಡು ವಂದ್ಯನೆಂಬ ಗಣೇಶ್ವರನಾಗಿರ್ದನು.
ಉಮೆಯ ಕಲ್ಯಾಣದಲ್ಲಿ ಕಾಲಲೋಚನನೆಂಬ ಗಣೇಶ್ವರನಾಗಿರ್ದನು.
ಅಂಧಕಾಸುರನ ಕೊಲುವಲ್ಲಿ ನೀಲಲೋಹಿತನೆಂಬ ಗಣೇಶ್ವರನಾಗಿರ್ದನು.
ತ್ರಿಪುರದಹನವ ಮಾಡುವಲ್ಲಿ ಸ್ಕಂದನೆಂಬ ಗಣೇಶ್ವರನಾಗಿರ್ದನು.
ಬ್ರಹ್ಮಕಪಾಲ ವಿಷ್ಣುಕಂಕಾಳವನಿಕ್ಕುವಲ್ಲಿ ನೀಲಕಂಠನೆಂಬ ಗಣೇಶ್ವರನಾಗಿರ್ದನು.
ದ್ವಾಪರದಲ್ಲಿ ಲಿಂಗಪ್ರಾಣಸಂಯೋಗವಾಗಿ
ವೃಷಭನೆಂಬ ಗಣೇಶ್ವರನಾಗಿರ್ದನು.
ಇಂತು ನಾಲ್ಕು ಯುಗ, ಹದಿನಾಲ್ಕು ಭುವನಂಗಳು ಮಡಿವಲ್ಲಿ, ಹುಟ್ಟುವಲ್ಲಿ
ನಂದೀಕೇಶ್ವರನೆಂಬ ಗಣೇಶ್ವರನಾಗಿರ್ದನು.
ಕಲಿಯುಗದಲ್ಲಿ ಗುರು ಲಿಂಗ ಜಂಗಮ ಪಾದೋದಕ ಪ್ರಸಾದ [ದ]
ಪೂರ್ವಾಶ್ರಯವ ಕಳೆದು ಲಿಂಗವಾಗಿ ಕುಳಸ್ಥಳವನರಿತು
ಮಹಾಂತ ಕೂಡಲಚೆನ್ನಸಂಗನ ಮಹಾಮನೆಯಲ್ಲಿ,
ಸರ್ವಾಚಾರಸಂಪನ್ನ ಬಸವಣ್ಣನೆಂಬ ಗಣೇಶ್ವರನಾಗಿರ್ದನು
ಕೇಳಾ ಪ್ರಭುವೆ! || ೩೧೦ ||

೧೧೬೩

ಕೃತಯುಗದಲ್ಲಿ ದೇವಾದಿ ದೇವರ್ಕಳಿಗೆ ಯುದ್ಧವಾಯಿತ್ತು.
ತ್ರೇತಾಯುಗದಲ್ಲಿ ರಾಮರಾವಣರಿಗೆ ಯುದ್ಧವಾಯಿತ್ತು.

ದ್ವಾಪರದಲ್ಲಿ ಕೌರವ ಪಾಂಡವರಿಗೆ ಯುದ್ಧವಾಯಿತ್ತು.
ಕಲಿಯುಗದಲ್ಲಿ ಮೌರ್ಯ ಕದಂಬರಿಗೆ ಯುದ್ಧವಾಯಿತ್ತು.
ಇಂತು ಅನಂತ ಯುಗಂಗಳಲ್ಲಿ ಅನಂತರಿಗೆ ಯಬುದ್ಧವಾಗುತ್ತಿಹ ಕಾರಣ
ಕೂಡಲಚೆನ್ನಸಂಗಯ್ಯಾ, ನಿಮ್ಮ ಶರಣರಿಗೆಯೂ ನಮಗೆಯೂ
ಅಂದು ಇಂದು ಮುಂದು ಯುದ್ಧವಿಲ್ಲಾ. || ೩.೧೧ ||

೧೧೬೪

ಕೃತಯುಗದಲ್ಲಿ ನೀನು ದೇವಾಂಗನೆಂಬ ಗಣೇಶ್ವರನಾಗಿ ಬಂದು ಉರಾಧಿಸುವಲ್ಲಿ,
ಸ್ಥೂಲಕಾಯನೆಂಬ ಜಂಗಮವಾಗಿ ಬಂದು ಲಿಂಗಾರ್ಚನೆಯ ಮಾಡಿಹೋದ:
ಆದರ ಕ್ರಿಯಾಂಗವನು ಮರೆದೆಯಲ್ಲಾ ಬಸವಣ್ಣಾ.
ತ್ರೇತಾಯುಗದಲ್ಲಿ ನೀನು ಘಂಟಾಕರ್ಣನೆಂಬ
ಗಣೇಶ್ವರನಾಗಿ ಬಂದು ಆರಾಧಿಸುವಲ್ಲಿ,
ಶೂನ್ಯಕಾಯನೆಂಬ ಜಂಗಮವಾಗಿ ಬಂದು ಲಿಂಗಾರ್ಚನೆಯ ಮಾಡಿಹೋಲದ:
ಆದರ ಕ್ರಿಯಾಂಗವನು ಮರೆದೆಯಲ್ಲಾ ಬಸವಣ್ಣಾ.
ದ್ವಾಪರಯುಗದಲ್ಲಿ ನೀನು ವೃಷಭನೆಂಬ ಗಣೇಶ್ವರನಾಗಿ ಬಂದು ಆರಾಧಿಸುವಲ್ಲಿ,
ಅನಿಮಿಷನೆಂಬ ಜಂಗಮನಾಗಿ ಬಂದು ಲಿಂಗಾರ್ಚನೆಯ ಮಾಡಿಹೋದ:
ಆದರ ಕ್ರಿಯಾಂಗವ ಮರೆದೆಯಲ್ಲಾ ಬಸವಣ್ಣಾ.
ಕಲಿಯುಗದಲ್ಲಿ ನೀನು ಬಸವನೆಂಬ ಗಣೇಶ್ವರನಾಗಿ ಬಂದು ಆರಾಧಿಸುವಲ್ಲಿ,
ಪ್ರಭುದೇವರೆಂಬ ಜಂಗಮವಾಗಿ ಲಿಂಗಾರ್ಚನೆಯ ಮಾಡಬಂದ
ಕಾಣಾ ಬಸವಣ್ಣಾ.
ಇಂತೀ ದೇವ ಭಕ್ತನೆಂಬ ನಾಮನಾಟಕ ಬಿನ್ನಾಣವಲ್ಲದೆ,
ಬೇರೆಂದು ಕಂಡವರಿಗೆ ನಾಯಕನರಕ ತಪ್ಪದು,
ಕೂಡಲಚೆನ್ನಸಂಗಮದೇವಾ. || ೩.೧೨ ||

೧೧೬೫

ಕೃತಯುಗವೊಳು ಸುವರ್ಣದ ಲಿಂಗವಾದಲ್ಲಿ
ನಿನ್ನ ಹೆಸರೇನು?
ತ್ರೇತಾಯುಗದಲ್ಲಿ ಬೆಳ್ಳಿಯ ಲಿಂಗವಾದಲ್ಲಿ
ನಿನ್ನ ತಂದೆ ತಾಯಿ ಯಾರು?
ದ್ವಾಪರದೊಳು ತಾಮ್ರದ ಲಿಂಗವಾದಲ್ಲಿ
ಹದಿನೆಂಟು ಜಾತಿಯ ಕೈಲಿ ಕಿಲುಬುಹೊಯಿತ್ತು.
ಕಲಿಯುಗದೊಳು ಕಲ್ಲ ಲಿಂಗವಾದಡೆ
ಇಕ್ಕಿದ ಓಗರವನುಣ್ಣದೇಕೋ?

ಹಿಂದೊಮ್ಮೆ ನಾಲ್ಕು ಯುಗವೊಳು ಅಳಿದುಹೋದುದನರಿಯಾ?
ಇನ್ನೇಕೆ ದೇವತನಕ್ಕೆ ಬೆರೆವುತ್ತಿಹೆ?
ಸಾಕ್ಷಿ:
ಸ್ಥಾವರಂ ಜಂಗಮಶ್ಚೈವ ದ್ವಿವಿಧಂ ಲಿಂಗಮುಚ್ಯತೇ।
ಜಂಗಮಸ್ಯಾವಮಾನೇನ ಸ್ಥಾವರಂ ನಿಷ್ಫಲಂ ಭವೇತ್॥
ಇದು ಕಾರಣ ಕೂಡಲಚೆನ್ನಸಂಗಯ್ಯ ತಪ್ಪದೆ
ಅನಂತ ದೇವರೆ ಜಂಗಮ ದೇವರ ಪ್ರಸಾದಕ್ಕೆ ಯೋಗ್ಯವಾಯಿತ್ತು.
ಯುಗಂಗಳೊಳಗೆ ಜಂಗಮ ದೇವರೆ ಪ್ರಾಣವಾದರಾಗಿ ಸ್ಥಾವರ. ॥ ೩೧೩ ॥

೧೧೬೬

ಕೃತಯುಗ ಹದಿನೇಳು ಲಕ್ಷದ ಮೇಲೆ ಇಪ್ಪತ್ತೆಂಟುಸಾವಿರ ವರುಷದಲ್ಲಿ
ಕೇತಾರದೇವರು ಮೂಲಸ್ಥಾನ.
ತ್ರೇತಾಯುಗ ಹನ್ನೆರಡು ಲಕ್ಷದ ಮೇಲೆ ತೊಂಬತ್ತಾರುಸಾವಿರ ವರುಷದಲ್ಲಿ
ಸೇತುಬಂಧ ರಾಮೇಶ್ವರದೇವರು ಮೂಲಸ್ಥಾನ.
ದ್ವಾಪರಯುಗ ಎಂಟುಲಕ್ಷದ ಮೇಲೆ ಆರುವತ್ತುನಾಲ್ಕು ಸಾವಿರ ವರುಷದಲ್ಲಿ
ಸೌರಾಷ್ಟ್ರ ಸೋಮಯ್ಯದೇವರು ಮೂಲಸ್ಥಾನ.
ಕಲಿಯುಗ ನಾಲ್ಕುಲಕ್ಷದ ಮೇಲೆ ಮೂವತ್ತೆರಡುಸಾವಿರ ವರುಷದಲ್ಲಿ
ಶ್ರೀಶೈಲ ಚೆನ್ನಮಲ್ಲಿಕಾರ್ಜುನದೇವರು ಮೂಲಸ್ಥಾನ.
ಇದು ಕಾರಣ ಕೂಡಲಚೆನ್ನಸಂಗಯ್ಯ ಸಾಕ್ಷಿಯಾಗಿ
ಭಕ್ತರಿಗೆ ಜಂಗಮವೆ ಮೂಲಸ್ಥಾನ. ॥ ೩೧೪ ॥

೧೧೬೭

ಕೃತ್ಯಕ್ಕೆ ಬಾರದ ಲಿಂಗವ ಕೃತ್ಯಕ್ಕೆ ತಂದವರಾರೊ?
ಅವಾಙ್ಮನಸಗೋಚರ ಲಿಂಗವ,
ಬೊಬ್ಬಿಡಲು ಎಡೆವೆರೆಯಿಲ್ಲದ ಪರಿಪೂರ್ಣಲಿಂಗವ, ಪರಾಪರಲಿಂಗವ,
ಈ ಗುರು ಕೊಟ್ಟ, ಶಿಷ್ಯ ಕೊಂಡನೆಂಬ
ರಚ್ಚೆಯ ಭಂಡರ ನೋಡಾ ಕೂಡಲಚೆನ್ನಸಂಗಮದೇವಾ. ॥ ೩೧೫ ॥

೧೧೬೮

ಕೆಸರಲ್ಲಿ ತಾವರೆ ಹುಟ್ಟಿ ದೇವರ ಮಂಡೆಯಲ್ಲಿರದೆ?
ಉಚ್ಛಿಷ್ಟದಲ್ಲಿ, ಜಲಮಲಾದಿಗಳಲ್ಲಿ, ಸಮಸ್ತಜಗದಲ್ಲಿ,
ಸೂರ್ಯನ ಪ್ರಭೆ ಇದ್ದಡೇನು ಅಲ್ಲಿ ಅದು ಸಿಕ್ಕುವದೆ?
ಹೊಲೆಹದಿನೆಂಟು ಜಾತಿ ನೂರೊಂದು ಕುಲದಲ್ಲಿ ಶರಣನು ಹುಟ್ಟಿದಡೆ,

ಆ ಜಾತಿ–ಕುಲದಂತಿರಬಲ್ಲನೆ?
ಸಾಕ್ಷಾತ್ ಪರಬ್ರಹ್ಮವೆ ಇಹ [ಲೋಕದಲ್ಲಿ] ಸಂಸಾರಿಯಾಗಿ ಬಂದನೆಂದರಿವುದು.
ಬಹಿರಂಗದಲ್ಲಿ ಕ್ರಿಯಾರಚನೆ,
ಅಂತರಂಗದಲ್ಲಿ ಅರುಹಿನ ಸ್ವಾನುಭಾವಸಿದ್ಧಾಂತ ಪರಿಪೂರ್ಣ ಶರಣನ,
ಈ ಮರ್ತ್ಯದ ನರಕಿ ಪ್ರಾಣಿಗಳು ಜರಿವರು.
ಕ್ರಿಯಾಚಾರವಿಲ್ಲದೆ, ಅರುಹಿನ ನೆಲೆಯನರಿಯದೆ,
ನಾನೇ ದೇವರೆಂದು ಅಹಂಕರಿಸಿಕೊಂಡಿಪ್ಪ ಅನಾಚಾರಿ ಹೊಲೆಯರಿಗೆ
ಅಘೋರನರಕ ತಪ್ಪದು ಕಾಣಾ,
ಕೂಡಲಚೆನ್ನಸಂಗಮದೇವರಲ್ಲಿ ಬಸವೇಶ್ವರದೇವರು ಸಾಕ್ಷಿಯಾಗಿ. ॥ ೩೧೬ ॥

೧೧೬೯

ಕೇಶ ಕಾಷಾಯಾಂಬರ ವೇಷ ಲಾಂಛನವಾದಡೇನೊ?
ಗ್ರಾಸಕ್ಕೆ ಭಾಜನರಲ್ಲದೆ ಲಿಂಗಕ್ಕೆ ಭಾಜನರಲ್ಲ.
ಈ ಆಸೆಯ ವೇಷವ ಕಂಡಡೆ ಕಾರಹುಣ್ಣಿಮೆಯ ಹಗರಣವೆಂಬೆ ಕಾಣಾ
ಕೂಡಲಚೆನ್ನಸಂಗಮದೇವಾ. ॥ ೩೧೭ ॥

೧೧೭೦

ಕೊಂಡಡಗಿದನೊಬ್ಬ, ಕೊಟ್ಟರಸಿದನೊಬ್ಬನು.
ಈರೇಳು ಭುವನವರಿಯಲು ವೃಷಭನು ವಿಸ್ಮಯಗೊಂಡನು!
ಭೂಮಿಯ ಜಲಗುಗರ್ಚಿ ಹೇಮರಸವನರಸುವಂತೆ
ಅರಸುತ್ತಿದ್ದನಯ್ಯಾ ಜಂಗಮದೊಳಗೆ ಲಿಂಗವನು,
ಏಕೋನಿಷ್ಠೆಯ ಕಂಡಡೆ ಎತ್ತಿಕೊಂಡನಯ್ಯಾ ಶಿವನು!
ಜಪಸಮಾಧಿಯೊಳಗೆ ಅಡಗಿದ್ದಡೆ, ಲಿಂಗವಾಗಿ ಬಂದರೀ ಪ್ರಭುದೇವರು.
ನಿಮ್ಮಡಿಗಳು ಅಸಂಖ್ಯಾತರಿಗೆ ಮಾಡಿದ ಸಯಧಾನವ
ನೀನೊಬ್ಬನೆ ಆರಿಸಿಕೊಟ್ಟಂದು
ಕೂಡಲಚೆನ್ನಸಂಗಯ್ಯನಲ್ಲಿ ಲಿಂಗವಂದರಿದನಯ್ಯಾ ನಿಮ್ಮನು
ನಮ್ಮ ಸಂಗನಬಸವಣ್ಣನು. ॥ ೩೧೮ ॥

೧೧೭೧

ಕೋಡುಗಲ್ಲಿನ ಮೇಲೆ ಮಾಡುವ ತಪವು
ಒಂದು ದಿನದ ಗುರುಸೇವೆಗೆ ಸರಿಯಲ್ಲ.
ಅನಂತಕಾಲ ಮಾಡುವ ಗುರುಸೇವೆಯು
ಒಂದು ದಿನದ ಲಿಂಗಪೂಜೆಗೆ ಸರಿಯಲ್ಲ.

ಅನಂತಕಾಲ ಮಾಡುವ ಲಿಂಗಪೂಜೆಯು
ಒಂದು ದಿನ ಬಡಿಸಿದ ಜಂಗಮತೃಪ್ತಿಗೆ ಸರಿಯಲ್ಲ.
ಅನಂತಕಾಲ ಬಡಿಸಿದ ಜಂಗಮತೃಪ್ತಿಯು
ಒಂದು ಕ್ಷಣದ ನಿಮ್ಮ ಶರಣರ ಅನುಭಾವಕ್ಕೆ ಸರಿಯಲ್ಲ ಕಾಣಾ
ಕೂಡಲಚೆನ್ನಸಂಗಮದೇವಾ. ॥ ೩೧೯ ॥

೧೧೭೨

ಕ್ರಿಯಾದೀಕ್ಷೆಹೀನರಿಗೆ
ಮಂತ್ರೋಪದೇಶವ ಹೇಳುವನೊಬ್ಬ ಲಿಂಗದ್ರೋಹಿ ನೋಡ!
ಕೂಡಲಚೆನ್ನಸಂಗಮದೇವ. ॥ ೩೨೦ ॥

೧೧೭೩

ಕ್ರಿಯೆ ಜಡವೆಂಬರು, ಜ್ಞಾನ ಅಜಡವೆಂಬರು ಅದೆಂತಯ್ಯಾ?
ನೀತಿಯ ಹೇಳಿದುದು ಜಡವೆ?
ಕಷ್ಟವಿಲ್ಲದೆ ಬಂದಂತೆ ಬೊಗಳಿ ಭೋಗಿಸಿ
ಭವಕ್ಕೆ ಹೋಗುವುದು ಅಜಡವೆ?
ಕ್ರಿಯಾ–ಜ್ಞಾನವೆಂಬ ಉಭಯ ಶಬ್ದಾರ್ಥವನರಿಯದೆ
ಕಂಡ ಕಂಡ ಹಾಗೆ ಬೊಗಳುವ ಹೊಲೆಮಾದಿಗರನು ಏನೆಂಬೆ
ಕೂಡಲಚೆನ್ನಸಂಗಮದೇವಾ? ॥ ೩೨೧ ॥

೧೧೭೪

ಕ್ರಿಯೆಯಿಲ್ಲದ ಭಕ್ತ ಮನುಜ, ಕ್ರಿಯೆಯಿಲ್ಲದ ಮಹೇಶ ರಾಕ್ಷಸ,
ಕ್ರಿಯೆಯಿಲ್ಲದ ಪ್ರಸಾದಿ ಯವನ, ಕ್ರಿಯೆಯಿಲ್ಲದ ಪ್ರಾಣಲಿಂಗಿ ಭವಿ,
ಕ್ರಿಯೆಯಿಲ್ಲದ ಶರಣ ಅಜ್ಞಾನಿ,
ಕ್ರಿಯೆಯಿಲ್ಲದ ಲಿಂಗೈಕ್ಯ ಜನನಕ್ಕೊಳಗು ನೋಡಾ,
ಕೂಡಲಚೆನ್ನಸಂಗಮದೇವಾ. ॥ ೩೨೨ ॥

೧೧೭೫

ಕ್ರಿಯೆಯೆ ಜ್ಞಾನ, ಆ ಜ್ಞಾನವೆ ಕ್ರಿಯೆ.
ಜ್ಞಾನವೆಂದಡೆ ತಿಳಿಯುವುದು,
ಕ್ರಿಯೆಯೆಂದಡೆ ತಿಳಿದಂತೆ ಮಾಡುವುದು
ಪರಸ್ತ್ರೀಯ ಭೋಗಿಸಬಾರದೆಂಬುವೆ ಜ್ಞಾನ:

ಆದರಂತೆ ಆಚರಿಸುವುದೆ ಕ್ರಿಯೆ.
ಅಂತು ಆಚರಿಸದಿದ್ದಡೆ ಅದೆ ಅಜ್ಞಾನ ನೋಡಾ,
ಕೂಡಲಚೆನ್ನಸಂಗಮದೇವಾ. || ೩೨೩ ||

೧೧೭೬

ಕ್ರೀಯೆಂಬುದನಾರು ಬಲ್ಲರು?
ಅಂಗಲಿಂಗವೆಂಬ ಸಂದಳಿಯದುದು ಕ್ರೀಯಲ್ಲ,
ಲಿಂಗಜಂಗಮವೆಂಬ ಸಂದಳಿಯದುದು ಕ್ರೀಯಲ್ಲ,
ಅರ್ಪಿತ ಅನರ್ಪಿತವೆಂಬ ಸಂದಳಿಯದುದು ಕ್ರೀಯಲ್ಲ.
ಅಲ್ಲ ಎನಲಿಲ್ಲ.
ಇಂತೀ ಕ್ರೀಯೊಳಗಿದ್ದ ನಿಷ್ಕ್ರೀವಂತರ ತೋರಾ.
ನಿಷ್ಕ್ರೀಯೆಂಬುದಾವುದು?
ಕ್ರೀತನು, ನಿಷ್ಕ್ರೀ ಪ್ರಾಣ, ತನುವೆ ಲಿಂಗ, ಪ್ರಾಣವೆ ಜಂಗಮ.
ತನುವ ಸಯುವ ಮಾಡಿ, ಆ ಪ್ರಾಣಲಿಂಗಜಂಗಮಕ್ಕೆ
ಮನವನರ್ಪಿಸುವ ನಿಷ್ಕ್ರೀಪ್ರಸಾದಿಗಳ ತೋರಾ.
ಕೂಡಲಚೆನ್ನಸಂಗಮದೇವಾ ನಿಮ್ಮ ಧರ್ಮ, ನಿಮ್ಮ ಧರ್ಮ. || ೩೨೪ ||

೧೧೭೭

ಕ್ಷೀರಸಾಗರದೊಳಗೆ ಓಲಾಡುತಿರ್ಪ ಸುಖಿ, ನೀರವಟ್ಟೆಯಕಟ್ಟೆ ನೆಳಲ ಕಡಿದು,
ಏಳುಬಾವಿಯಲ್ಲಿ ನೆಗೆಯ, ಎರಡುಬಾವಿಯಲ್ಲಿ ಉಣ್ಣ!
ಬೇರೆ ಹೇಳುವಡೆ:
ಇಂತು ಅನುಭಾವವೆ ಪಂಚರಸವೆಂಬವನು ಪಂಚಮುಖದಲ್ಲಿ ಕಟ್ಟಿ
ಪಂಚಪಂಚೈವರವೊಂದು ಮಾಡಿ
ಅಂಚಟೆಯ ರೂಹಿಂಗೆ ಅರುವೆಯೊಂದನೆ ಹಾಸಿ
ಇಂತು ಸಂಸಾರದ ನಿಲವು ನೋಡಾ.
ಹಲ್ಲಿ ಉತ್ತರ ಬಾಗಿಲಲ್ಲಿ ಸರಗೆಯ್ಯಲು
ಅಲ್ಲಿ ತೆಂಕಣ ಶಕುನವೊಂದಾಗಲು
ಬಲ್ಲಸಂತರು ಬಂದು ಮುಂದೆ ನಿಜ ನಿಂದಿರಲು
ಎಲ್ಲರು ಪೈಸಾಗಿಸಲು ಪಾದವ ಹಿಡಿಯೆ
ತಲೆಗಳ ಹಿಡಿದು ಕೈಗಳಲ್ಲಿ ನೆಗಹುತ್ತಿರಲು
ಎಲ್ಲರು ಹಾಡುತ್ತ ಹರಸುವ ಹರಕೆಯಿಂದ ಪೈಪ ದಳವೇರಿ
ಕೂಡಲಚೆನ್ನಸಂಗಯ್ಯನೊಳಗೆ 'ಬಸವಣ್ಣ ಶರಣೆ'ನುತ
ತಾನು ಹೊಕ್ಕು ಶರಣನು. || ೩೨೫ ||

೧೧೭೮

ಕ್ಷುತ್ತು ಪಿಪಾಸೆ ಶೋಕ ಮೋಹ ಜರೆ ಮರಣವೆಂಬ
ಆರರ ರಾಶಿಯುಂ ಕೆಡಿಸಿದಾತನೆ ಸದ್ಗುರು.
ಚತುಃ ಷಡು ದಶ ದ್ವಾದಶ ಷೋಡಶ ದ್ವಿಪತ್ರವೆಂಬ
ಷಡುಸ್ಥಾನದ ಮೇಲಣ ಶ್ವೇತದಳದೊಳಗಣ
ಶಶಿ ಸ್ಥಾನವ ತೋರದೆ, ನಿಜಸ್ಥಾನ ಹೃದಯಕಮಲ ಕರ್ಣಿಕಾ ಮಧ್ಯದ
ಆತ್ಮಲಿಂಗಜ್ಯೋತಿಯ ತೋರಬಲ್ಲಡೆ ಆತನೇ ಚರಲಿಂಗ,
ಶೈವ, ಭಾಟ್ಟ, ವೈಶೇಷಿಕ, ಜೈನ, ಬೌದ್ಧ ಚಾರ್ವಾಕವೆಂಬ
ಷಡುದರುಶನದ ಹಂಬಲವನಡಗಿಸಿದಾತನಾಗಿ,
ವಾದವಶ್ಯ ಯಂತ್ರ ಮಾಹೇಂದ್ರಜಾಲ ಆಕರ್ಷಣ
ಉಚ್ಚಾಟನವೆಂಬ ಆರು ಭ್ರಮೆಯನಡಗಿಸಿದಾತನಾಗಿ
ಪ್ರಣವಪಂಚಾಕ್ಷರ ಪದಸ್ಥನಾಗಿ ಇಂತೀ ಷಷ್ಠಸಂಪಾದನೆ
ಮೂವತ್ತಾರರಿಂದ ಕೂಡಲಚೆನ್ನಸಂಗಯ್ಯಾ
ಶರಣ ಬಸವಣ್ಣ ಬರಿಯ ಬಯಲು. || ೩೨೬ ||

೧೧೭೯

ಖಂಡಿತವಿಲ್ಲಾಗಿ ಸರ್ವಾಂಗವೂ ನಾಸಿಕವಾಯಿತ್ತು.
ತಾನಲ್ಲದೆ ಅನ್ಯವಾಸನೆಯಿಲ್ಲಾಗಿ, ಅಲ್ಲಿಯೆ ಮಹತ್ತಪ್ಪ ಪೃಥ್ವಿಯಡಗಿತ್ತು.
ಖಂಡಿತವಿಲ್ಲಾಗಿ ಸರ್ವಾಂಗವೂ ಜಿಹ್ವೆಯಾಯಿತ್ತು.
ತಾನಲ್ಲದೆ ಅನ್ಯ ರುಚಿಯಿಲ್ಲಾಗಿ, ಅಲ್ಲಿಯೆ ಮಹತ್ತಪ್ಪ ಅಪ್ಪುವಡಗಿತ್ತು.
ಖಂಡಿತವಿಲ್ಲಾಗಿ ಸರ್ವಾಂಗವೂ ನೇತ್ರವಾಯಿತ್ತು.
ತಾನಲ್ಲದೆ ಅನ್ಯ ರೂಪಿಲ್ಲಾಗಿ, ಅಲ್ಲಿಯೆ ಮಹತ್ತಪ್ಪ ಅಗ್ನಿಯಡಗಿತ್ತು.
ಖಂಡಿತವಿಲ್ಲಾಗಿ ಸರ್ವಾಂಗವೂ ಮಹಾತ್ವಕ್ಕಾಯಿತ್ತು.
ತಾನಲ್ಲದೆ ಅನ್ಯಸ್ಪರ್ಶವಿಲ್ಲಾಗಿ, ಅಲ್ಲಿಯೆ ಮಹತ್ತಪ್ಪ ವಾಯುವಡಗಿತ್ತು.
ಖಂಡಿತವಿಲ್ಲಾಗಿ ಸರ್ವಾಂಗವೂ ಶ್ರೋತ್ರವಾಯಿತ್ತು.
ತಾನಲ್ಲದೆ ಅನ್ಯ ಶಬ್ದ ಇಲ್ಲಾಗಿ, ಅಲ್ಲಿಯೆ ಮಹತ್ತಪ್ಪ ಆಕಾಶವಡಗಿತ್ತು.
ಇಂತು ಬ್ರಹ್ಮಾಂಡವೆ ಪಂಚಭೂತಮಯವಾದಡೆ,
ಶರಣನ ಸರ್ವಾಂಗದಲ್ಲಿ ಪಂಚಬ್ರಹ್ಮಮಯವಡಗಿತ್ತು.
ಅದೆ ಪಂಚವರ್ಣಾತೀತವಾದ ಮಹಾಬಯಲೊಳಗೆ ನಿಂದ ಭೇದವು.
ಅದರಲ್ಲಿ ಜಗತ್ತು ಅಡಗಿದ ಭೇದವ, ಮಹತ್ತು ಮಹತ್ತನೊಳಕೊಂಡ ಭೇದವ
ಏನೆಂದುಪಮಿಸುವೆನಯ್ಯಾ, ಕೂಡಲಚೆನ್ನಸಂಗಯ್ಯಾ! || ೩೨೭ ||

೧೧೮೦

ಖಂಡಿತವೆನ್ನದೆ, ಸಹಜವೆನ್ನದೆ, ನಿಜವೆನ್ನದೆ
ಪರಿಪೂರ್ಣವೆನ್ನದೆ, ಏನೂ ಎನ್ನದೆ
ಕೂಡಲಚೆನ್ನಸಂಗಯ್ಯನನೇನೆನ್ನದಿಪ್ಪುದು ನಿಜೈಕ್ಯವು. ॥ ೩೨೮ ॥

೧೧೮೧

ಗಂಡಭೇರುಂಡನೆಂಬ ಪಕ್ಷಿಗೆ
ತಲೆ ಎರಡು, ದೇಹವೊಂದು.
ಒಂದು ತಲೆಯಲ್ಲಿ ಹಾಲನೆರೆದು,
ಒಂದು ತಲೆಯಲ್ಲಿ ವಿಷವನೆರೆದಡೆ,
ಆ ಪಕ್ಷಿಗೆ ಮರಣವಲ್ಲದೆ
ಜಯವಪ್ಪುದೇ ಅಯ್ಯಾ?
ಲಿಂಗವ ಪೂಜಿಸಿ ಜಂಗಮವ ಮರೆದಡೆ
ಕುಂಭಿನೀನರಕ ತಪ್ಪದು ಕಾಣಾ
ಕೂಡಲಚೆನ್ನಸಂಗಮದೇವಯ್ಯಾ. ॥ ೩೨೯ ॥

೧೧೮೨

ಗಂಧ–ದುರ್ಗಂಧ, ರಸ–ನೀರಸ, ರೂಪು–ಕುರೂಪು
ಸ್ಪರ್ಶನ–ಅಸ್ಪರ್ಶನ, ಶಬ್ದ–ನಿಶ್ಶಬ್ದ,
ಲಿಂಗಮುಖಕ್ಕೆ ಬಾರದುದು ಕೃತಕಿಲ್ಬಿಷವಯ್ಯಾ,
ಕೂಡಲಚೆನ್ನಸಂಗಯ್ಯಾ,
ನಿಮ್ಮತ್ತ ಮುಂದಾಗದುದೆಲ್ಲ, ಎನ್ನತ್ತ ಮುಂದಾಗದು. ॥ ೩೩೦ ॥

೧೧೮೩

"ಗಚ್ಛನ್ ತಿಷ್ಠನ್, ಸ್ವಪನ್ ಜಾಗ್ರನ್ನುನ್ಮಿಷನ್ನಿಮಿಷನ್ನಪಿ।
ಶುಚಿರ್ವಾಽಪ್ಯಶುಚಿರ್ವಾಪಿ ಲಿಂಗಂ ಸರ್ವತ್ರ ಧಾರಯೇತ್॥"
ಇಂತೆಂದುದಾಗಿ,
ಕಂಗಳ ಮುಂದಣಿಂದ ಗುರುಲಿಂಗ ಹಿಂಗಿದಡೆ,
ವ್ರತಕ್ಕೆ ಭಂಗವಾಗುವುದೆಂದು (ಶ್ರೀಗುರು) ತಂದುಕೊಟ್ಟನು
ಕರಸ್ಥಲದಲ್ಲಿ ಇಷ್ಟಲಿಂಗವನು.
ಆ ಲಿಂಗ ಮುಟ್ಟಲೊಡನೆ

ತನು ಪ್ರಸಾದವಾಯಿತ್ತು ಮನ ಪ್ರಸಾದವಾಯಿತ್ತು.
ಇಂತು ಸರ್ವಾಂಗ ಪ್ರಸಾದವಾಯಿತ್ತು ಕೂಡಲಚೆನ್ನಸಂಗಮದೇವಾ. || ೩೩೭ ||

೧೧೮೪

ಗುದ ಲಿಂಗ ನಾಭಿಮಂಡಲದಿಂದ ಮೇಲೆ ಷಡಂಗುಲವ ಹತ್ತಿ,
ಅಧೋಮುಖಕಮಲವನು ಊರ್ಧ್ವಮುಖಕ್ಕೆ ತಂದು,
'ನಾಭ್ಯಾ ಆಸೀದಂತರಿಕ್ಷಂ' ಎಂಬ ಅಂತರಿಕ್ಷದೊಳಗಿಪ್ಪ
ಚಿದಾತ್ಮನಪ್ಪಂತಹ ಆದಿತ್ಯನ ಕಿರಣಂಗಳು ಹೋಗಿ ತಾಗಲ್ಕೆ,
ಆ ಪದ್ಮ ವಿಕಸಿತವಾಗಿ,
ಅನೇಕ ರತ್ನಸಂಕೀರ್ಣವಪ್ಪಂತಹ ಹೃದಯದೀಪ್ತಿಯ ಆಕಾಶವ ಕಂಡು
ಶಿವಜ್ಞಾನದೊಳಿಡಿದು,
ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ
ಧ್ಯಾನ ಧಾರಣ ಸಮಾಧಿ ಎಂಬೀ
ಅಷ್ಟಾಂಗಯೋಗದೊಳ್ವಿಡಿದು
ನಿಟಿಲತಟ ಭ್ರೂಮಧ್ಯದ ಮೇಲಣ ಉಭಯದಳಕಮಲದ ಮೇಲೆ ಇಪ್ಪ
ಜೀವ ಪರಮನ ಭೇದವೆಂತಿರ್ದುದೆಂದಡೆ:
ಜೀವಾತ್ಮ ಪರಮಾತ್ಮೇತಿ ಭೇದಂ ತ್ಯಕ್ತ್ವಾ ಪರಾಂ ಗತಿಂ।
ಅಭ್ಯೇತಿ ಪುರುಷಃ ಸಾಕ್ಷಿ ಕ್ಷೇತ್ರಜ್ಞೋಽಕ್ಷಯಮಶ್ನುತೆ॥ ಎಂದುದಾಗಿ
ಜೀವಪರಮರಿಬ್ಬರನು ಏಕಾರ್ಥವ ಮಾಡಲ್ಕೆ,
ದ್ವಾಸುಪರ್ಣಾ ಸಯುಜಾ ಸಾಖಾಯಾ ಸಮಾನಂ ವೃಕ್ಷಂ ಪರಿಷ ಸ್ವಜಾತೇ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋಽಭಿಜಾಕಶೀತಿ॥ ಎಂದುದಾಗಿ
ಬ್ರಹ್ಮನಾಳದ ಮೇಲೆ ಪ್ರಯೋಗಿಸಿ ಕವಾಟದ್ವಾರವ ತೆಗೆದು
ತೆರಹಿಲ್ಲದ ಬಯಲು-ಕೂಡಲಚೆನ್ನಸಂಗಾ ನಿಮ್ಮ ಶರಣ. || ೩೩೨ ||

೧೧೮೫

ಗುದಸ್ಥಾನದಲ್ಲಿ ಆಧಾರಚಕ್ರ, ಅಲ್ಲಿಗೆ ಪೃಥ್ವಿಯೆಂಬ ಮಹಾಭೂತ,
ಸದ್ಯೋಜಾತವಕ್ತ್ರ,
ಬ್ರಹ್ಮ ಪೂಜಾರಿ, ಸುವರ್ಣದ ತೇಜ, ಬಾಲರವಿಕೋಟಿ ಪ್ರಕಾಶ,
ನಾಲ್ಕೆಸಳಿನ ತಾವರೆಯ ಮಧ್ಯದಲ್ಲಿ
ಸುವರ್ಣಮಯಲಿಂಗ-ಅದು ಆಚಾರಲಿಂಗ, ಅದಕ್ಕೆ ಬೀಜಾಕ್ಷರ
ಓಂ ನಾಂ ನಾಂ ನಾಂ ಎಂಬ ನಾದಘೋಷ. ಎಸಳು ನಾಲ್ಕರಲ್ಲಿ

ವ, ಶ, ಷ, ಸ ಎಂಬ ನಾಲ್ಕಕ್ಷರ.
ಅದು ದೇವರಿಗೂ ತಮಗೂ ಪಶ್ಚಿಮಮುಖ– ಸದ್ಯೋಜಾತ ವಕ್ತ್ರ, ಆಧಾರಚಕ್ರ.
ಲಿಂಗಸ್ಥಾನದಲ್ಲಿ ಸ್ವಾದಿಷ್ಠಾನಚಕ್ರ, ಅಲ್ಲಿಗೆ ಅಪ್ಪುವೆಂಬ
ಮಹಾಭೂತ, ವಾಮದೇವವಕ್ತ್ರ,
ವಿಷ್ಣು ಪೂಜಾರಿ, ನೀಲದ ತೇಜ, ಬಾಲದ್ವಿಕೋಟಿ ಸೂರ್ಯಪ್ರಕಾಶ,
ಆರೆಸಳಿನ ತಾವರೆಯ ಮಧ್ಯದಲ್ಲಿ
ಗೋಕ್ಷೀರದ ಹಾಗೆ ಧವಳ ವರ್ಣದಲಿಂಗ–ಅದು ಗುರುಲಿಂಗ: ಅದಕ್ಕೆ ಬೀಜಾಕ್ಷರ
ಓಂ ಮಾಂ ಮಾಂ ಮಾಂ ಎಂಬ ನಾದಘೋಷ.
ಎಸಳು ಆರರಲ್ಲಿ ಬ ಭ ಮ ಯ ರ ಲ ಎಂಬ ಷಡಕ್ಷರ
ಅದು ದೇವರಿಗೂ ತಮಗೂ ಉತ್ತರಮುಖ–ವಾಮದೇವವಕ್ತ್ರ, ಸ್ವಾದಿಷ್ಠಾನಚಕ್ರ.
ನಾಭಿಸ್ಥಾನದಲ್ಲಿ ಮಣಿಪೂರಕಚಕ್ರ,
ಅಲ್ಲಿಗೆ ಅಗ್ನಿಯೆಂಬ ಮಹಾಭೂತ, ಅಘೋರವಕ್ತ್ರ
ರುದ್ರ ಪೂಜಾರಿ, ಮಾಣಿಕ್ಯತೇಜ, ಬಾಲತ್ರಿಕೋಟಿಸೂರ್ಯಪ್ರಕಾಶ,
ಹತ್ತೆಸಳಿನ ತಾವರೆಯ ಮಧ್ಯದಲ್ಲಿ
ಮಾಣಿಕ್ಯವರ್ಣದ ಲಿಂಗ–ಅದು ಶಿವಲಿಂಗ, ಅದಕ್ಕೆ ಬೀಜಾಕ್ಷರ
ಓಂ ಶಿಂ ಶಿಂ ಶಿಂ ಎಂಬ ನಾದಘೋಷ.
ಎಸಳು ಹತ್ತರಲ್ಲಿ ಡ, ಢ, ಣ, ತ, ಥ, ದ, ಧ, ನ, ಪ, ಫ ಎಂಬ ದಶಾಕ್ಷರ.
ಅದು ದೇವರಿಗೂ ತಮಗೂ ದಕ್ಷಿಣಮುಖ–ಅಘೋರವಕ್ತ್ರ, ಮಣಿಪೂರಕಚಕ್ರ.
ಹೃದಯ ಸ್ಥಾನದಲ್ಲಿ ಅನಾಹತಚಕ್ರ,
ಅಲ್ಲಿಗೆ ವಾಯುವೆಂಬ ಮಹಾಭೂತ, ತತ್ಪುರುಷವಕ್ತ್ರ,
ಈಶ್ವರ ಪೂಜಾರಿ ಕಪೋತವರ್ಣದ ತೇಜ,
ಬಾಲಚತುಷ್ಕೋಟಿ ಸೂರ್ಯಪ್ರಕಾಶ, ಹನ್ನೆರಡೆಸಳಿನ ತಾವರೆಯ
ಮಧ್ಯದಲ್ಲಿ ಶುದ್ಧ ಪಚ್ಚವರ್ಣದಲಿಂಗ–ಅದು ಜಂಗಮಲಿಂಗ, ಅದಕ್ಕೆ ಬೀಜಾಕ್ಷರ
ಓಂ ವಾಂ ವಾಂ ವಾಂ ಎಂಬ ನಾದಘೋಷ.
ಎಸಳು ಹನ್ನೆರಡರಲ್ಲಿ ಕ ಖ ಗ ಘ ಚ ಙ ಛ ಜ ಝ ಞ ಟ ಠ
ಎಂಬ ದ್ವಾದಶಾಕ್ಷರ
ಅದು ದೇವರಿಗೂ ತಮಗೂ ಪೂರ್ವಮುಖ–ತತ್ಪುರುಷ ವಕ್ತ್ರ, ಅನಾಹತ ಚಕ್ರ.
ಕಂಠಸ್ಥಾನದಲ್ಲಿ ವಿಶುದ್ಧಿಚಕ್ರ, ಅಲ್ಲಿಗೆ ಆಕಾಶವೆಂಬ ಮಹಾಭೂತ, ಈಶಾನವಕ್ತ್ರ,
ಸದಾಶಿವ ಪೂಜಾರಿ, ವಿದ್ಯುಲ್ಲತೆಯ ತೇಜ,
ಬಾಲಪಂಚಕೋಟಿ ಸೂರ್ಯಪ್ರಕಾಶ, ಹದಿನಾರೆಸಳಿನ ತಾವರೆಯ
ಮಧ್ಯದಲ್ಲಿ ಅನಂತಕೋಟಿ ಮಿಂಚುಗಳ ವರ್ಣದ ಲಿಂಗ–
ಅದು ಪ್ರಸಾದಲಿಂಗ, [ಓಂ ಯಾಂ ಯಾಂ ಯಾಂ ಎಂಬ
ನಾದಘೋಷ]. ಎಸಳು ಹದಿನಾರರಲ್ಲಿ

ಅ ಆ ಇ ಈ ಉ ಊ ಋ ೠ ಌ ೡ ಏ ಐ ಓ ಔ ಅಂ ಅಃ ಎಂಬ
ಷೋಡಶಾಕ್ಷರ. ಅದು ದೇವರಿಗೂ ತಮಗೂ ಊರ್ಧ್ವಮುಖ-
ಈಶಾನವಕ್ತ್ರ, ವಿಶುದ್ಧಿಚಕ್ರ.
ಭ್ರೂಮಧ್ಯದಲ್ಲಿ ಆಜ್ಞಾಚಕ್ರ, ಅಲ್ಲಿಗೆ ಮನವೆಂಬ ಮಹಾಭೂತ, ಶ್ರೀಗುರುವೆ ವಕ್ತ್ರ
ಮಾಹೇಶ್ವರ ಪೂಜಾರಿ, ಜ್ಯೋತಿರ್ವರ್ಣದ ತೇಜ.
ಬಾಲಪಟ್ಕೋಟಿ ಸೂರ್ಯಪ್ರಕಾಶ
ಎರಡೆಸಳಿನ ತಾವರೆಯ ಮಧ್ಯದಲ್ಲಿ ಶ್ರೀಗುರುವಿನ ಶ್ರೀಪಾದದ ವರ್ಣದ ಲಿಂಗ
ಎಡಗಡೆಯ ಪಾದ ಕೆಂಪು ವರ್ಣ,
ಬಲಗಡೆಯ ಪಾದ ಶ್ವೇತವರ್ಣ-ಅದು ಮಹಾಲಿಂಗ.
ಅದಕ್ಕೆ ಬೀಜಾಕ್ಷರ 'ಓಂ'ಕಾರನಾದ ಘೋಷ.
ಎಸಳೆರಡರಲ್ಲಿ ಅಕ್ಷರ ಹಂ ಸಂ ಎಂಬ [ಎರಡಕ್ಷರ]
ಅದು ದೇವರಿಗೂ ತನಗೂ ಗಂಭೀರ ಮುಖ-ಶ್ರೀಗುರುವಕ್ತ್ರ, ಆಜ್ಞಾಚಕ್ರ.
ಅಲ್ಲಿಂದತ್ತ ಬ್ರಹ್ಮರಂಧ್ರದಲ್ಲಿ ಬ್ರಹ್ಮಚಕ್ರ ಅಲ್ಲಿಗೆ
ಚಂದ್ರನೆಂಬ ಮಹಾಭೂತ, ಲಿಂಗವಕ್ತ್ರ
ಪರಮೇಶ್ವರ ಪೂಜಾರಿ, ಮಹಾಜ್ಯೋತಿರ್ವರ್ಣದ ತೇಜ,
ಬಾಲಅನಂತಕೋಟಿ ಸೂರ್ಯಪ್ರಕಾಶ
ಒಂದುನೂರ ಎಂಟು ಸಾವಿರೆಸಳಿನ ತಾವರೆಯ ಮಧ್ಯದಲ್ಲಿ
ಮಹಾಜ್ಯೋತಿರ್ವರ್ಣದ ಲಿಂಗ.
ಅದು ನಿರಾಮಯ ಲಿಂಗ, ಅದಕ್ಕೆ ಬೀಜಾಕ್ಷರ ಪ್ರಣವ ನಾದ ಘೋಷ,
ಎಸಳೊಂದುನೂರ ಎಂಟು ಸಾವಿರದಲ್ಲಿ, ಒಂದನೂರ ಎಂಟು ಸಾವಿರ ಅಕ್ಷರ-
ಪ್ರೇತಾಸನ ವಿಶ್ವತೋಮುಖ ಬ್ರಹ್ಮಚಕ್ರ.
ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ
ವಿಶ್ವತೋ ಬಾಹುರುತ ವಿಶ್ವತಃ ಪಾದ್।
ಸ ಬಾಹುಭ್ಯಾಂ ಧಮತಿ ಸ ಪತತ್ರೈ
ದ್ಯಾ ವಾ ಭೂಮೀ ಜನಯನ್ ದೇವ ಏಕಃ॥
ಇಂತೀ ಗುರುವಿನ ಬೆಳಗು ವಿಶ್ವವನ್ನಪಸರಿಸಿ, ತಾನು ತಾನೆ ಸೋಹಂ ಪ್ರಕಾಶ
ಕೂಡಲಚೆನ್ನ ಸಂಗಮದೇವಾ! ॥ ೩೩೩ ॥

೧೧೮೩

ಗುಬ್ಬಿ ಪೆರರ ಮನೆಯು ತನ್ನ ಮನೆ ಎಂಬಂತೆ
ಧರೆ ಧನ ವನಿತೆಯರು ಎನ್ನವರು ತನ್ನವರೆಂದು
ಹೋರಿ ಹೋರಿ ಸಾಯುತ್ತದೆ ಜೀವ,
ಸರ್ವಕರ್ತೃ ಕೂಡಲಚೆನ್ನಸಂಗಯ್ಯನೇವರಿಯದೆ. ॥ ೩೩೪ ॥

೧೧೮೭

ಗುರು ಕರುಣಿಸೆ ಬಿಟ್ಟಿತ್ತು ಮಾಯೆ,
ಗುರು ಕರುಣಿಸೆ ಬಿಟ್ಟಿತ್ತು ಮರವೆ,
ಗುರು ಕರುಣಿಸೆ ಬಿಟ್ಟಿತ್ತು ಪ್ರಪಂಚ,
ಕೂಡಲಚೆನ್ನಸಂಗಮದೇವಾ
ಗುರು ಕರುಣಿಸೆ ಬಿಟ್ಟಿತ್ತು ಎನ್ನ ಕರ್ಮಪಾಶ. || ೩೩೫ ||

೧೧೮೮

ಗುರುಕಾರುಣ್ಯವ ಪಡೆದೆವೆಂಬರು:
ಒಬ್ಬನಾಗಾದೆಹೆನೆಂಬ, ಒಬ್ಬ ಚೇಗೆಯಾದೆಹೆನೆಂಬ
ಇವರಿಬ್ಬರು ಪಿಂಡಭೋಗಿಗಳು,
ಭಕ್ತಂಗೆ ಈ ಆಗೂ ಇಲ್ಲ, ಈ ಚೇಗೆಯೂ ಇಲ್ಲ.
ಗುರುದ್ರವ್ಯವನೊಪ್ಪಿಸಿದನಾಗಿ.
"ಗುರುದ್ರವ್ಯಾಭಿಲಾಷೇಣ ಗುರುದ್ರವ್ಯಸ್ಯ ವಂಚನಂ|
ಯಃ ಕುರ್ಯಾದ್ಗುರುಭಕ್ತಸ್ಸೋ ಭವತಿ ಬ್ರಹ್ಮರಾಕ್ಷಸಃ||-ಎಂದುದಾಗಿ,
ಗುರುದ್ರವ್ಯವಾವುದೆಂದಡೆ:
ದೈಹಿಕದ್ರವ್ಯ, ಭೌತಿಕದ್ರವ್ಯ, ಆತ್ಮದ್ರವ್ಯ, ಇಂದ್ರಿಯದ್ರವ್ಯ, ಜ್ಞಾನದ್ರವ್ಯ-
ಈ ಪಂಚದ್ರವ್ಯವನು ಉಭಯವಳಿದು
ಷೋಡಶೋಪಚಾರದಲ್ಲಿ ಅರ್ಪಿಸಬಲ್ಲರೆ
ಕೂಡಲಚೆನ್ನಸಂಗಯ್ಯನಲ್ಲಿ ಆತನೆ ಗುರುಭಕ್ತ. || ೩೩೬ ||

೧೧೮೯

ಗುರುಕಾರುಣ್ಯವಂ ಪಡೆದು ಅಂಗದ ಮೇಲೆ ಲಿಂಗಸಾಹಿತ್ಯವಾದ ಬಳಿಕ
ಕುಲದೈವ ತನ್ನಂಗದ ಮೇಲಿಪ್ಪ ಲಿಂಗವೆಂದರಿಯದೆ
ಮನೆ ದೈವ ತನ್ನ ಮನೆಗೆ ಬಂದ ಜಂಗಮವೆಂದರಿಯದೆ
ಮತ್ತೆ ಬೇರೆ ಕುಲದೈವ ಮನೆದೈವವೆಂದು
ಧರೆಯಮೇಲಣ ಸುರೆಗುಡಿ ಹೊಲೆದೈವ ಭವಶೈವದೈವಂಗಳ ಹೆಸರಿನಲ್ಲಿ
ಕಂಗಳ ಪಟ್ಟ ಕಾಲ ಪೆಂಡೆಯ ಕಡೆಯ ತಾಳಿ ಬಂಗಾರಂಗಳ ಮೇಲೆ
ಆ ಪರದೈವಂಗಳ ಪಾದ ಮುದ್ರೆಗಳನೊತ್ತಿಸಿ
ಅವನಿದಿರಿಟ್ಟು ಆರಾಧಿಸಿ, ಅವರೆಂಜಲ ಭುಂಜಿಸಿ
ತಮ್ಮ ಲಿಂಗಶರೀರಂಗಳ ಮೇಲೆ ಅವನು ಕಟ್ಟಿಟ್ಟುಕೊಂಡು
ಮತ್ತೆ ತಾವು ಭಕ್ತರೆಂದು ಬಗಳುವ

ಪರ(ಶಿವ?)ಸಮಯದ್ರೋಹಿಗಳನಿರಿದಿರಿದು ಕಿರಿಕಿರಿದಾಗಿ ಕೊಯಿದು
ಕೆನ್ನಾಯಿಗಿಕ್ಕದೆ ಮಾಣ್ಬರೆ?
ಇಂತಪ್ಪ ನರಕಜೀವಿಗಳನು ಕೂಡಲಚೆನ್ನಸಂಗಯ್ಯ
ರವಿಸೋಮರುಳ್ಳನ್ನಕ್ಕ ನಾಯಕ ನರಕದಲ್ಲಿಕ್ಕುವ. ॥ ೩೩೭ ॥

೧೧೯೦

ಗುರುಕಾರುಣ್ಯವಂ ಪಡೆದು ಅಂಗದ ಮೇಲೆ ಲಿಂಗಸಾಹಿತ್ಯವಾದ ಬಳಿಕ
ಭಕ್ತನಾಗಲಿ ಜಂಗಮನಾಗಲಿ ಭಕ್ತಿ ಭೃತ್ಯಾಚಾರ ಸಂಪನ್ನರಾಗಿ
ಗುರುಲಿಂಗ ಜಂಗಮವನಾರಾಧಿಸಿ, ಪ್ರಸಾದವಕೊಂಡು ನಿಜಮುಕ್ತರಾಗಲರಿಯದೆ
ಪರಮಪಾವನಪ್ಪ ಗುರುರೂಪ ಹೊತ್ತು
ಮತ್ತೆ ತಾವು ಪರಸಮಯದಂತೆ
ದೂಷಕ ನಿಂದಕ ಪರವಾದಿಗಳಾಗಿ
ಭಕ್ತ ಜಂಗಮ ಪ್ರಸಾದವನೆಂಜಲೆಂದು ಅತಿಗಳೆದು
ತೊತ್ತು ಸೂಳೆಯರೆಂಜಲ ತಿಂದು
ಮತ್ತೆ ನಾ ಘನ ತಾ ಘನವೆಂದು
ಸತ್ಯ ಸದ್ಭಕ್ತಿಯುಕ್ತರಾದ ಭಕ್ತಜಂಗಮವ ಜರೆದು,
ಅವರ ಕುಲಪೆತ್ತಿ ಕೆಡೆನುಡಿದು ಹೊಲತಿ ಮಾದಿಗಿತ್ತಿಯರಿಗುರುಳಿ
ಪಲವು ದೈವದೆಂಜಲತಿಂದು
ಮತ್ತೆ ತಾವು ಕುಲಜರೆಂದು ಬಗುಳುವ ಹೊಲೆ ಜಂಗುಳಿಗಳೆಲ್ಲರು
ಈ ಗುರು ಕೊಟ್ಟಲಿಂಗವಿರಲು ಅದನರಿಯದೆ
ಶ್ರೀಶೈಲ, ಹಂಪಿ, ಕಾಶಿ, ಕೇತಾರ ಗಯಾ ಪ್ರಯಾಗ ರಾಮೇಶ್ವರ ಆದಿಯಾದ
ಹೊಲೆಕ್ಷೇತ್ರಂಗಳಲ್ಲಿ ಆಸಕ್ತರಾಗಿ ಹೋಗಿ
ಅಲ್ಲಲ್ಲಿಯ ಭವಿಶೈವದೈವಂಗಳ ದರ್ಶನ ಸ್ಪರುಶನ ಆರಾಧನೆಗಳ ಮಾಡಿ
ಅವಕ್ಕೆ ಶರಣೆಂದು ಅವರೆಂಜಲ ತಿಂದು
ಆ ಕ್ಷೇತ್ರಂಗಳಲ್ಲಿ ಆಶ್ರಮಸ್ಥರಾಗಿರ್ದು
ಗತಿಪದ ಮುಕ್ತಿಯ ಪಡೆವೆನೆಂಬ ವೇಷಧಾರಿಗಳೆಲ್ಲರು
ಶ್ವಪಚಗೃಹದ ಶ್ವಾನಯೋನಿಗಳಲ್ಲಿ ಶತಸಹಸ್ರವೇಳೆ ಬಪ್ಪುದು ತಪ್ಪದು.
ಅದೆಂತೆಂದೊಡೆ:
ಇದಂ ತೀರ್ಥಮಿದಂ ತೀರ್ಥಂ ಭ್ರಮಂತಿ ತಾಮಸಾ ನರಃ ಶಿವಜ್ಞಾನೇನ ಜಾನಾತಿ.
ಸರ್ವತೀರ್ಥ ನಿರರ್ಥಕಂ ಪ್ರಾಣಲಿಂಗಮವಿಶ್ವಾಸಂ
ತೀರ್ಥಲಿಂಗಂತು ವಿಶೇಷತಾ ಶ್ವಾನಯೋನಿ ಶತಂ ಗತ್ವಾ
ಶ್ಚಾಂಡಾಲಂ ಗೃಹಮಾಚರೇತ್ ಚರಶೇಷಂ ಪರಿತ್ಯಾಗಿ
ದ್ಯೋಜನಾದ್ಭಕ್ತ ನಿಂದಕಾಃ ಅನ್ಯಪಣ್ಯಾಂಗನೋಚ್ಛಿಷ್ಟಂ

ಭುಂಜಿಯುಂತಿ ರೌರವಂ-ಇಂತೆಂದುದಾಗಿ,
ಇದು ಕಾರಣ, ಇಂತಪ್ಪ ಅನಾಚಾರಿಗಳು ಭಕ್ತ ಜಂಗಮ ಸ್ಥಲಕ್ಕೆ ಸಲ್ಲರು.
ಅವರಿರ್ವನು ಕೂಡಲಚೆನ್ನಸಂಗಯ್ಯ
ಸೂರ್ಯ-ಚಂದ್ರರುಳ್ಳನ್ನಕ್ಕ ನಾಯಕನರಕದಲ್ಲಿಕ್ಕುವ. || ೩೩೮ ||

೧೧೯೧

ಗುರುಕಾರುಣ್ಯವಿಡಿದು ಅಂಗದ ಮೇಲೆ ಲಿಂಗವನುಳ್ಳ
ನಿಜವೀರಶೈವ ಸಂಪನ್ನರಾದ ಗುರುಚರ ಭಕ್ತಿ ವಿವಾಹದ ಪರಿಯೆಂತೆಂದಡೆ
ದಾಸಿ, ವೇಸಿ, ವಿಧವೆ, ಪರಸ್ತ್ರೀ, ಬಿಡಸ್ತ್ರೀ ಮೊದಲಾದ
ಹಲವು ಪ್ರಕಾರದ ರಾಸಿಕೂಟದ ಸ್ತ್ರೀಯರ ಬಿಟ್ಟು
ಸತ್ಯಸದಾಚಾರವನುಳ್ಳ ಭಕ್ತಸ್ತ್ರೀಯರ, ಮುತ್ತೈದೆಯ ಮಗಳಪ್ಪ ಶುದ್ಧ ಕನ್ನಿಕೆಯ,
ವಿವಾಹವಾಗುವ ಕಾಲದಲ್ಲಿ,
ಭಕ್ತಗೃಹವಂ ಶೃಂಗರಿಸಿ ಭಕ್ತಿಪದಾರ್ಥಂಗಳ ಕೂಡಿಸಿ
ಭಕ್ತಿ ಸಂಭ್ರಮದಿಂದ ಗುಡಿಕಟ್ಟಿ
ವಿವಾಹೋತ್ಸವಕ್ಕೆ ನೆರೆದ ಭಕ್ತಜಂಗಮಕ್ಕೆ ನಮಸ್ಕರಿಸಿ ಮೂರ್ತಿಗೊಳಿಸುತ್ತ
ವಿಭೂತಿ ವಿಳಯವಂ ತಂದಿರಿಸಿ ಬಿನ್ನೈಸಿ ಅವರಾಜ್ಞೆಯಂ ಕೈಕೊಂಡು
ಶೋಭನವೇಳುತ್ತ, ಮಂಗಳ ಮಜ್ಜನವಂ ಮಾಡಿ
ಅಂಗವಸ್ತ್ರ ಲಿಂಗವಸ್ತ್ರಂಗಳಿಂ ಶೃಂಗರಿಸಿ
ವಿಭೂತಿಯಂ ಧರಿಸಿ, ರುದ್ರಾಕ್ಷೆಯಂ ತೊಟ್ಟು
ದಿವ್ಯಾಭರಣವನ್ನಿಟ್ಟು ಆಸನವಿತ್ತು ಕುಳ್ಳಿರಿಸಿ
ಭಕ್ತಾಂಗನೆಯರೆಲ್ಲ ನೆರೆದು ಶೋಭನವಂ ಪಾಡುತ್ತ
ಭವಿಶೈವಕೃತಕಶಾಸ್ತ್ರವಿಡಿದು ಮಾಡುವ
ಪಂಚಸೂತಕ ಪಾತಕಯುಕ್ತವಾದ ಪಂಚಾಂಗ ಕರ್ಮ ಸಂಕಲ್ಪಗಳಂ ಅತಿಗಳದು
ಅಂಗಲಿಂಗಸಂಬಂಧವನುಳ್ಳ ಪಂಚಾಚಾರಯುಕ್ತವಾದ
ನಿಜವೀರಶೈವಸಂಪನ್ನರಾದ ಭಕ್ತಿವಿವಾಹಕ್ಕೆ ಮೊದಲಾದ ಗುರುವಾಜ್ಞೆವಿಡಿದು
ಉಭಯವಂ ಕೈಗೂಡಿ ಸತಿಪತಿ ಭಾವವನುಳ್ಳ ಸತ್ಯವ್ರತವ ತಪ್ಪದಿರಿ ಎಂದು.
ಭಕ್ತಾಜ್ಞೆಯಲ್ಲಿ ಭಸಿತವನಿಡಿಸಿ
ಗುರುಲಿಂಗ ಜಂಗಮವೆಂಬ ಏಕ ಪ್ರಸಾದವನೂಡಿ
ಇಂತು ಗುರುಚರ ಪರ ಮೊದಲಾದ ಭಕ್ತಗಣ ಸಾಕ್ಷಿಯಾಗಿ
ಭಕ್ತಿವಿವಾಹದ ಭಕ್ತಾರಾಧ್ಯರುಗಳ ನಿಷೇಧವಮಾಡಿ
ನಿಂದಿಸಿದವಂಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ
ಪಾದೋದಕವಿಲ್ಲ, ಪ್ರಸಾದವಿಲ್ಲ; ಅವ ಭಕ್ತಾಚಾರಕ್ಕೆ ಸಲ್ಲನು.

ಇಂತಪ್ಪ ಭಕ್ತಿ ಕಲ್ಯಾಣಯುಕ್ತವಾದ ಭಕ್ತರಾಧ್ಯರ ನಿಷೇಧವಮಾಡಿ
ನಿಂದಿಸಿದವಂಗೆ ಇಪ್ಪತ್ತೆಂಟು ಕೋಟಿ ನರಕತಪ್ಪದು ಕಾಣಾ
ಕೂಡಲಚೆನ್ನಸಂಗಯ್ಯ. || ೩೩೯ ||

೧೧೯೨

ಗುರು ಗುರುವೆಂದೇನೊ, ಪರಕ್ಕೆ ಹೆಸರ ಹೇಳುವನ್ನಕ್ಕವೆ?
ಲಿಂಗ ಲಿಂಗವೆಂದೇನೊ, ಅಂಗ ಬೀಳುವನ್ನಕ್ಕವೆ?
ಜಂಗಮ ಜಂಗಮವೆಂದೇನೊ, ಧನವ ಸವೆವನ್ನಕ್ಕವೆ?
ಪ್ರಸಾದ ಪ್ರಸಾದವೆಂದೇನೊ, ಉಂಡು ಕಳಚಿ ಪ್ರಳಯಕ್ಕೊಳಗಾಗುವನ್ನಕ್ಕವೆ?
ಪಾದತೀರ್ಥ ಪಾದತೀರ್ಥವೆಂದೇನೊ, ಕೊಂಡು ಕೊಂಡು
ಮುಂದೆ ಜಲವ ಮಾಡುವನ್ನಕ್ಕವೆ?
ಅಲ್ಲಿ ನಿಂದಿರದಿರಾ ಮನವೆ! ನಿಂದಡೆ ನೀನು ಕೆಡುವೆ ಬಂದಡೆ ನಾನು ಕೆಡುವೆ.
ಎನ್ನ ತಂದೆ ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣಂಗೆ
ಪ್ರಭುದೇವರು ತೋರಿದರೀಯನುವ! || ೩೪೦ ||

೧೧೯೩

ಗುರುಜಂಗಮದ ಪಾದತೀರ್ಥವು ಲಿಂಗಾಭಿಷೇಕಕ್ಕೆ ಸಲ್ಲದೆಂಬ
ಮಂದಮತಿಗಳು ನೀವು ಕೇಳಿರೊ.
ಮಂತ್ರಸಂಸ್ಕಾರದಿಂದ ಜಡಶಿಲೆ ಲಿಂಗವಾಗುತ್ತಿರ್ಪದೆಂಬಿರಿ,
ಆ ಮಂತ್ರಸಂಸ್ಕಾರದಿಂದ ಶಿವಾಂಶಿಕನಾದ ಮನುಷ್ಯನು
ಶಿವಜ್ಞಾನಸಂಪನ್ನನಾಗಿ ಗುರುವಾಗನೆ?
ಮತ್ತೆ ಜಂಗಮವಾಗನೆ? ಹೇಳಿರೆ.
ಸಂಸ್ಕಾರದಿಂದಾದ ಲಿಂಗಕ್ಕೆ ಸಂಸ್ಕಾರವಿಲ್ಲದ ಮನುಷ್ಯನ ಪಾದಜಲವು
ಸಲ್ಲದೆಂದಡೆ ಅದು ಸಹಜವೆಂಬೆನು.
ಸಂಸ್ಕಾರ ವಿಶಿಷ್ಟವಾದ ಲಿಂಗಕ್ಕೆಯೂ, ಜಂಗಮಕ್ಕೆಯೂ
ಅಭೇದವೆಂಬುದನು ಆಗಮೋಕ್ತಿ 'ಪದೋದಾದಭಿಷೇಚನಂ'
ಎಂದು ಸಾರುತ್ತಿಹುದು ಕಾಣಿರೊ!
ಇದುಕಾರಣ– ಅಂತಪ್ಪ ಗುರುಜಂಗಮದ ಪಾದತೀರ್ಥವು ಅಯೋಗ್ಯವೆಂದಡೆ
ನಮ್ಮ ಕೂಡಲಚೆನ್ನಸಂಗಯ್ಯನ
ವಚನವ ನಿರಾಕರಿಸಿದಂತಕ್ಕು ಕಾಣಿರೊ! || ೩೪೧ ||

೧೧೯೪

ಗುರುಜಂಗಮದ ಪಾದತೀರ್ಥವೆ ಪವಿತ್ರವೆಂದು ತಿಳಿದು
ಲಿಂಗಾಭಿಷೇಕಂಗೆಯ್ವುದಯ್ಯಾ.
ಆ ಗುರುಲಿಂಗ ಜಂಗಮದಲ್ಲಿ ಭೇದವ ಕಲ್ಪಿಸಿದಡೆ
ಪಾಪವು ಸಂಘಟಿಸುವುದಯ್ಯಾ.
ಮನುಷ್ಯನ ಕಾಲ್ದೊಳೆದ ನೀರು ಪರಮತೀರ್ಥವೆಂದು ಭಾವಿಸಿ
ಲಿಂಗಕ್ಕೆರೆವುದು ಶಾಸ್ತ್ರಾಚಾರಕ್ಕೆ ವಿರೋಧ- ಎಂಬ
ಕುಹಕಿಗಳ ಕೀಳ್ನುಡಿಯ ಕೇಳಲಾಗದಯ್ಯಾ.
ಗುರುರ್ಲಿಂಗ ಜಂಗಮಶ್ಚ ತ್ರಿತಯಂ ಚೈಕಮೇವ ಹಿ।
ಅತ ಏವ ಪದೋದಾಭಿಷೇಚನಂ ಶಿವಲಿಂಗಕೇ।
ಕುರ್ವಂತ್ಯಭೇದದೃಷ್ಟ್ಯಾ ಚ ಭೇದಕೃತ್ಪಾಪಮಶ್ನುತೇ॥ ಎಂದುದಾಗಿ
ಇಂತಿಪ್ಪುದನಾರಯ್ಯದ ಗಳಹುವ ಮಂದಮತಿಗಳ
ಎನ್ನತ್ತ ತೋರದಿರಯ್ಯಾ ಕೂಡಲಚೆನ್ನಸಂಗಮದೇವಾ. ॥ ೩೪೨ ॥

೧೧೯೫

ಗುರುಜಂಗಮ ಪಾದೋದಕ ಪ್ರಸಾದವ ಭಕ್ತಿಯಿಂದ ಪಡೆದು
ನಿಚ್ಚ ನಿಚ್ಚ ಸೇವಿಸಬಲ್ಲಡೆ
ಆ ಭಕ್ತನ ಕಾಯಕರಣಾದಿಗಳ ಸೋಂಕಲಮ್ಮದೆ ದುರಿತವು ದೂರಾಗಿಪ್ಪುದು.
ಆ ಸದ್ಭಕ್ತನೆ ಸದ್ಬ್ರಾಹ್ಮಣನೆಂದು ಶಾಸ್ತ್ರವು ಹೊಗಳುತ್ತಿಪ್ಪುದು.
"ಪಾದೋದಕಂ ಚ ನಿರ್ಮಾಲ್ಯಂ ಭಕ್ತ್ಯಾಧಾರ್ಯಂ ಪ್ರಯತ್ನತಃ।
ನ ತಾನ್ ಸ್ಪೃಶಂತಿ ಪಾಪಾನಿ ಮನೋವಾಕ್ಕಾಯಜಾನ್ಯಪಿ॥
ಭಕ್ಷಯೇದ್ಯೋಗಿನಾ ಭಕ್ತ್ಯಾ ಪವಿತ್ರಮಿತಿ ಶಂಸಿತಂ।
ಶುದ್ಧಾತ್ಮಾ ಬ್ರಾಹ್ಮಣಸ್ತಸ್ಯ ಪಾಪಂ ಕ್ಷಿಪ್ರಂ ವಿನಶ್ಯತಿ॥ ಎಂದುದಾಗಿ.
ಇಂತೀ ಪವಿತ್ರವಾದ ಪಾದೋದಕವ ಪಡೆದು
ಕೂಡಲಚೆನ್ನಸಂಗಯ್ಯನ ಶರಣರು ಪರಿಶುದ್ಧರಾದರು. ॥ ೩೪೩ ॥

೧೧೯೬

ಗುರು ತನ್ನ ವಿನೋದಕ್ಕೆ ಸ್ಥಾವರವಾದ;
ಗುರು ತನ್ನ ವಿನೋದಕ್ಕೆ ಜಂಗಮವಾದ;
ಗುರು ತನ್ನ ವಿನೋದಕ್ಕೆ ಪ್ರಸಾದವಾದ;
ಗುರು ತನ್ನ ವಿನೋದಕ್ಕೆ ಗುರುವಾದ;
ಕೂಡಲಚೆನ್ನಸಂಗಯ್ಯನಲ್ಲಿ ಏಕಾರ್ಥವಾದ. ॥ ೩೪೪ ॥

೧೧೯೭

‘ಗುರುದೇವೋ ಮಹಾದೇವೋ’ ಎಂದುದಾಗಿ, ಗುರುದೇವನೇ ಮಹಾದೇವನು.
‘ಯೋ ಗುರುಃ ಸ ಶಿವಃ ಪ್ರೋಕ್ತೋ ಯಃ ಶಿವಃ ಸ ಗುರುಃ ಸ್ಮೃತಃ।’
ಎಂದುದಾಗಿ–ಗುರುವೆ ಶಿವನು, ಶಿವನೆ ಶ್ರೀಗುರು ನೋಡಾ.
‘ಗುರು ದೈವಾತ್ ಪರಂ ನಾಸ್ತಿ’ ಎಂದುದಾಗಿ–ಗುರುವಿನಿಂದಧಿಕವಿಲ್ಲ.
‘ಶಿಷ್ಯದೀಕ್ಷಾದಿಕಾರಣಾತ್’ ಎಂದುದಾಗಿ,
ಎನ್ನ ನಿಮಿತ್ತ ಗುರುಮೂರ್ತಿಯಾದೆ, ಕೂಡಲಚೆನ್ನಸಂಗಮದೇವಾ. || ೩೪೫ ||

೧೧೯೮

ಗುರುದ್ರೋಹಿಯಾದವನ ಮುಖವ ನೋಡಲಾಗದು,
ಮತ್ತೆ ನೋಡಬಹುದು, ಏಕೆ? ಮುಂದೆ ಲಿಂಗವಿಪ್ಪುದಾಗಿ.
ಲಿಂಗದ್ರೋಹಿಯಾದವನ ಮುಖವ ನೋಡಲಾಗದು,
ಮತ್ತೆ ನೋಡಬಹುದು, ಏಕೆ? ಮುಂದೆ ಜಂಗಮವಿಪ್ಪುದಾಗಿ.
ಜಂಗಮದ್ರೋಹಿಯಾದವನ ಮುಖವ ನೋಡಲಾಗದು,
ಮತ್ತೆ ನೋಡಬಹುದು, ಏಕೆ? ಮುಂದೆ ಪ್ರಸಾದವಿಪ್ಪುದಾಗಿ.
ಪ್ರಸಾದದ್ರೋಹಿಯಾದವನ ಮುಖವ ನೋಡಲಾಗದು, ಏಕೆ?
ಕೂಡಲಚೆನ್ನಸಂಗಯ್ಯನ ಪ್ರಸಾದವಿರಹಿತವಾಗಿ ಪರವಿಲ್ಲದ ಕಾರಣ. || ೩೪೬ ||

೧೧೯೯

ಗುರು ನಷ್ಟವಾದಡೆ ಜಂಗಮವೇ ಗುರು.
ಭಕ್ತ ಗುರುವಾದಡೆ ಆ ಗುರು ಶಿಷ್ಯರಿಬ್ಬರೂ ಅನಾಚಾರಿಗಳು.
ಗುರು ನಷ್ಟವಾದಡೆ ಜಂಗಮ ಗುರುವಾಗಬಹುದಲ್ಲದೆ,
ಭಕ್ತ ಗುರುವಾಗಬಲ್ಲನೆ? ಬಾರದು.
ಅದೇಕೆಂದಡೆ:
ಭೃತ್ಯಂಗೆ ಕರ್ತೃತ್ವವುಂಟೇ?
ಇಲ್ಲವಾಗಿ,
ಆವಿಗೆ ತನೆಯುಹುವೆ, ಬಸವಗಲ್ಲದೆ?
ಇದು ಕಾರಣ, ಕೂಡಲಚೆನ್ನಸಂಗಮದೇವಾ
ಗುರುವಿನಗುರು, ಪರಮಗುರು, ಜಂಗಮ. || ೩೪೭ ||

೧೨೦೦

ಗುರುಪದ ಮಹತ್ತುಪದವೆಂದು ನುಡಿದು,
ನಡೆಯಲರಿಯದ ತುಡುಗುಣಿಗಳು ನೀವು ಕೇಳಿರೊ;
ಗುರುಪದವಾವುದೆಂದರಿಯಿರಿ,
ಮಹತ್ತುಪದವಾವುದೆಂಬುದ ಮುನ್ನವೆ ಅರಿಯಿರಿ.
ಆಚಾರಂ ಗುರುಪದ-ಎಂಬುದನರಿದು,
ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳನತಿಗಳೆದು,
ಈಷಣತ್ರಯುವೆಂಬ ವಾಸನೆಯ ಹೊದ್ದದೆ,
ದಾಸಿ, ವೇಸಿ, ಪರಸ್ತ್ರೀಯರ ಸಂಗವೆಂಬ ಹೇಸಿಕೆಯ ಮನದಲ್ಲಿ ನೆನೆಯದೆ,
ಪತಿತಾಶ್ರಮಾಶ್ರಿತನಾಗದೆ, ಭವಭಾರಿ ಶೈವಕ್ಷೇತ್ರಂಗಳಂ ಹೊಪ್ಪದೆ,
ಭವಿಶೈವದೈವಂಗಳನಾರಾಧಿಸದೆ, ಭವಿಯನಾಶ್ರಯಿಸದೆ
ಭವಿಸಂಗ, ಭವಿಪಜ್ತಿ, ಭವಿದೃಷ್ಟಿ, ಭವಿಗೇಹಾನ್ನ,
ಭವಿತತ್ಸಂಭಾಷಣೆಯಂ ಬಿಟ್ಟು
ಭಕ್ತಾಚಾರ ಸದಾಚಾರವಾಗಿಪ್ಪುದೆ ಗುರುಪದ.
ಇನ್ನು ಮಹತ್ತುಪದವಾವುದೆಂದಡೆ:
ಷಡುಸ್ಥಲಾಚಾರ ಉದ್ಧಾರಂ ಯೋ ಮಹತ್ತಂತು ಕಥ್ಯತೇ'-ಎಂದುದಾಗಿ,
ಗುರು ಲಿಂಗ ಜಂಗಮ ಪಾದೋದಕ ಪ್ರಸಾದ ಭಕ್ತಾಚಾರಂಗಳನುದ್ಧರಿಸುತ್ತ,
ಎಲ್ಲಿ ಗುರು ಎಲ್ಲಿ ಲಿಂಗ ಎಲ್ಲಿ ಜಂಗಮ ಎಲ್ಲಿ ಪಾದೋದಕ ಎಲ್ಲಿ ಪ್ರಸಾದ
ಎಲ್ಲಿ ಭಕ್ತಾಚಾರವಿದ್ದಲ್ಲಿಯೇ ಹೊಕ್ಕು,
ಅವರೊಕ್ಕುದ ಕೊಂಡು ನಡೆಯಬಲ್ಲಡೆ ಮಹತ್ತುಪದ,
ಇನಿತಿಲ್ಲದೆ ಗುರುವನತಿಗಳದು ಗುರುದ್ರೋಹಿಗಳಾಗಿ,
ಲಿಂಗವನತಿಗಳದು ಲಿಂಗದ್ರೋಹಿಗಳಾಗಿ,
ಜಂಗಮವನತಿಗಳದು ಜಂಗಮದ್ರೋಹಿಗಳಾಗಿ,
ಆಚಾರವನತಿಗಳದು ಭಕ್ತಾಚಾರದ್ರೋಹಿಗಳಾಗಿ,
ಹೊನ್ನು ಹೆಣ್ಣು ಮಣ್ಣಿಗಾಗಿ ಹೊರವೇಷವ ತೊಟ್ಟು,
ಭಕ್ತಜಂಗಮದ ಅರ್ಥಪ್ರಾಣಂಗಳಿಗಳುಪಿ,
ತೊತ್ತು ಸೂಳೆಯರೆಂಜಲ ತಿಂದು,
ಮತ್ತೆ ಗುರುಪದ ಮಹತ್ತುಪದವೆಂದು
ತಪ್ಪಿ ಬಗಳುವ ಶ್ವಾನಜಂಗುಳಿಗಳ
ಜಂಗಮೆಂದಾರಾಧಿಸಿ,
ಪ್ರಸಾದವ ಕೊಳ್ಳ ಸಲ್ಲದು ಕಾಣಾ, ಕೂಡಲಚೆನ್ನಸಂಗಮದೇವಾ. ॥ ೩೪೮ ॥

೧೨೦೧

ಗುರುಪ್ರಸಾದವೆಂಬಿರಿ, ಲಿಂಗಪ್ರಸಾದವೆಂಬಿರಿ,
ಅಚ್ಚಪ್ರಸಾದವೆಂಬಿರಿ, ಭರಿತಬೋನವೆಂದೆಂಬಿರಿ.
ಗುರುಪ್ರಸಾದವೆಂಬುದನು ಲಿಂಗಪ್ರಸಾದವೆಂಬುದನು
ಅಚ್ಚಪ್ರಸಾದವೆಂಬುದನು ಭರಿತಬೋನವೆಂಬುದನು
ಅರಿವವರು ನೀವು ಕೇಳಿರೆ:
ಶ್ರೀಗುರುಕಾರುಣ್ಯವುಳ್ಳ ಶಿವಭಕ್ತರು
ಆ ಶ್ರೀಗುರುಲಿಂಗಕ್ಕೆ ತನುಕ್ರೀಯಿಂದ ಪಾದಾರ್ಚನೆಯ ಮಾಡಿ
ಪಾದತೀರ್ಥಮಂ ಕೊಂಡು, ಪಡುಸಮ್ಮಾರ್ಜನೆಯ ಮಾಡಿ
ರಂಗವಾಲಿಯನಿಕ್ಕಿ, ಶ್ರೀಗುರುವ ಲಿಂಗಾರ್ಚನೆಗೆ ಕುಳ್ಳಿರಿಸಿ
ಅಷ್ಟವಿಧಾರ್ಚನೆ ಷೋಡಶೋಪಚಾರವಂ ಮಾಡಿ
ಪುರುಷಾಹಾರ ಪ್ರಮಾಣನಿಂದ ನೀಡಿ, ತೆರಹು ಮರಹಿಲ್ಲದೆ
ಆ ಶ್ರೀಗುರುವಾರೋಗಣೆಯಂ ಮಾಡಿದ ಬಳಿಕ
ಹಸ್ತಮಜ್ಜನಕ್ಕೆರೆದು, ಒಕ್ಕುಮಿಕ್ಕುದ ಕೊಂಡುಂಬುದು ಗುರುಪ್ರಸಾದ.
ಇಂತಲ್ಲದೆ ಕೈಯೊಡ್ಡಿ ಬೇಡುವಾತ ಗುರುದ್ರೋಹಿ,
ಕೈ ನೀಡಿದಡೆ ಇಕ್ಕುವಾತ ಶಿವದ್ರೋಹಿ.
ಇನ್ನು ಲಿಂಗಪ್ರಸಾದವನರಿವ ಪರಿ:
ಹಿಂದಣ ಪರಿಯಲಿ ಪುರುಷಾಹಾರ[ವ] ಪ್ರಮಾಣನಿಂದ
ತೆರಹು ಮರಹಿಲ್ಲದೆ ಭರಿತಬೋನವಾಗಿ ಗಡಣಿಸಿ,
ತಟ್ಟುವ ಮುಟ್ಟುವ ಮರ್ಮವನರಿತು, ಸಂಕಲ್ಪ ವಿಕಲ್ಪವಿಲ್ಲದೆ
ಭಾವಶುದ್ಧನಾಗಿ, ಏಕಚಿತ್ತದಿಂದ ಮನಮುಟ್ಟಿ ಲಿಂಗಕ್ಕೆ ನೈವೇದ್ಯಮಂ ತೋರಿ,
ಶೀತಾಳಮಂ ಕೊಟ್ಟು, ಸಜ್ಜೆಯರಮನೆಗೆ ಬಿಜಯಂಗೈಸಿಕೊಂಡು
ಪಂಚೇಂದ್ರಿಯ ಸಪ್ತಧಾತು ತೃಪ್ತರಾಗಲ್ಕೆ,
ಪ್ರಸಾದಭೋಗವಂ ಮಾಡುವುದು ಲಿಂಗಪ್ರಸಾದ.
ಅಖಂಡಿತವಾದಡೆ ಇರಿಸಿ ಲಿಂಗಪ್ರಸಾದಿಗಳಿಗೆ ಕೊಡುವುದು.
ಕೊಡದೆ ಫಲಗ್ರಾಹಕತನದಲ್ಲಿ ಕೊಂಡು
ಒಡಲ ಕೆಡಿಸಿಕೊಂಡಡೆ ಪಂಚಮಹಾಪಾತಕ.
ಅವನ ಮುಖವ ನೋಡಲಾಗದು ಕೂಡಲಸಂಗಯ್ಯ. || ೨೪೯ ||

೧೨೦೨

ಗುರು ಪಾದವ ತನ್ನ ಕರವಲ್ಲಿ ಧರಿಸಿ,
ಗುರು ಮುದ್ರೆಗಳ ತನ್ನಂತರಂಗ ಬಹಿರಂಗವಲ್ಲಿರಿಸಿ,

ಗುರುಲಿಂಗಜಂಗಮದ ಪಾದತೀರ್ಥ ಪ್ರಸಾದವ
ನಿರಂತರ ಸಾವಧಾನಿಯಾಗಿ ಕೊಂಡು ಕೃತಾರ್ಥರಾಗಲರಿಯದೆ,
ಮತ್ತೆ ಬೇರೆ ಗುರುಚರ ಪರದೈವಂಗಳ
ದಂಡ ಕಮಂಡಲ ಕಂಥೆ ಕಕ್ಷದಾರ ಭಿಕ್ಷಾಪಾತ್ರೆ ಹಾವುಗೆ ತೀರ್ಥಕುಂಭ ಭಸ್ಮದುಂಡೆ
ಎಂಬಿವು ಆದಿಯಾದ ಮುದ್ರೆ ಧಾರಣ ದ್ರವ್ಯ ಪಾದೋದಕಂಗಳ
ಗದ್ದುಗೆಯ ಪೂಜೆಯ ಬೋಳುಕರಂತೆ ಇದಿರಿಟ್ಟು
ಆರಾಧಿಸುವ ಅನಾಚಾರಿಗಳಿಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ,
ಪಾದೋದಕವಿಲ್ಲ, ಪ್ರಸಾದವಿಲ್ಲ.
ಇಂತೀ ಪಂಚಾಚಾರಕ್ಕೆ ಹೊರಗಾದ ಪಾತಕರನು
ಕೂಡಲಚೆನ್ನಸಂಗಯ್ಯ ಅಘೋರನರಕದಲ್ಲಿಕ್ಕುವ. ॥ ೩೫೦ ॥

೧೨೦೩

ಗುರು ಮುಟ್ಟದ ಮುನ್ನ ಪ್ರಸಾದವಾಗಬೇಕು,
ಲಿಂಗ ಮುಟ್ಟದ ಮುನ್ನ ಪ್ರಸಾದವಾಗಬೇಕು,
ಜಂಗಮ ಮುಟ್ಟದ ಮುನ್ನ ಪ್ರಸಾದವಾಗಬೇಕು,–
ಇಂತೀ ತ್ರಿವಿಧಸಾಹಿತ್ಯ ಮುಟ್ಟದ ಮುನ್ನ
ಪ್ರಸಾದವ ಕೊಂಬವರ ತೋರಿಸಯ್ಯಾ
ಕೂಡಲಚೆನ್ನಸಂಗಮದೇವಾ, ನಿಮ್ಮ ಧರ್ಮ, ನಿಮ್ಮ ಧರ್ಮ. ॥ ೩೫೧ ॥

೧೨೦೪

ಗುರು ಮುಟ್ಟಿ ಲಿಂಗವಾಯಿತ್ತೆಂಬೆ,
ಅದು ಬಿದ್ದಿತ್ತು, ಹೋಯಿತ್ತೆಂಬ ಅಜ್ಞಾನವ ನೋಡಾ,
ಕಟ್ಟುವ ಠಾವನು, ಮುಟ್ಟುವ ಭೇದವನು
ಕೂಡಲಚೆನ್ನಸಂಗಾ ನಿಮ್ಮ ಶರಣ ಬಲ್ಲ. ॥ ೩೫೨ ॥

೧೨೦೫

ಗುರುಲಿಂಗಜಂಗಮದ ಏಕಾರ್ಥವನೇನೆಂದುಪಮಿಸಬಹುದು?
ಗುರುಪ್ರಾಣ, ಲಿಂಗದೇಹ, ಜಂಗಮ ಆಪ್ಯಾಯನ ಎಂದುದಾಗಿ.
ಪ್ರಾಣ ಮುಟ್ಟಿ ಬಂದಡೇನು? ಕಾಯ ಮುಟ್ಟಿ ಬಂದಡೇನು?
ಜಿಹ್ವೆ ಮುಟ್ಟಿ ಬಂದಡೇನು? ಜಂಗಮಮುಖ ಆಪ್ಯಾಯನ!
ಕೂಡಲಚೆನ್ನಸಂಗಮದೇವಾ, ಜಂಗಮಪ್ರಸಾದ ಸರ್ವಸಿದ್ಧಿ. ॥ ೩೫೩ ॥

೧೨೦೬

ಗುರುಲಿಂಗಜಂಗಮದ ಪಾದೋದಕ ಪ್ರಸಾದ,
ಪ್ರಾಣಪ್ರಸಾದ(ಪ್ರಾಣಪ್ರವೇಶ?)ವಾದುದಾಗಿ
ಲಿಂಗಪ್ರಾಣದೊಳಗೆ ಪ್ರಾಣಲಿಂಗ ನೋಡಾ,
ಭಕ್ತಕಾಯದೊಳಗೆ ಪ್ರಸಾದಕಾಯ ನೋಡಾ,
ವಿಶ್ವತಶ್ಚಕ್ಷುವಿನೊಳಗೆ ಜ್ಞಾನಚಕ್ಷು ನೋಡಾ,
ವಿಶ್ವತೋಮುಖನೊಳಗೆ ಸುಮುಖ ನೋಡಾ,
ವಿಶ್ವತೋಬಾಹುವಿನೊಳಗೆ ನಮಸ್ಕಾರಬಾಹು ನೋಡಾ.
ವಿಶ್ವತೋಪಾದದೊಳಗೆ ಮಹಾಪಾದ ನೋಡಾ.
ಇಂತಾದುದಾಗಿ,
ಲಿಂಗವ ಮನದಲ್ಲಿ ನೆನೆದು ಲಿಂಗಕ್ಕೆ ನೆನೆಯಲಿತ್ತು,
ಜಂಗಮವ ಮನದಲ್ಲಿ ನೆನೆದು ಜಂಗಮಕ್ಕೆ ನೆನೆಯಲಿತ್ತು,
ಪ್ರಸಾದವ ಮನದಲ್ಲಿ ನೆನೆದು ಪ್ರಸಾದಕ್ಕೆ ನೆನೆಯಲಿತ್ತು,
ಲಿಂಗದೃಷ್ಟಿಯಲ್ಲಿ ನೋಡಿ ಲಿಂಗಕ್ಕೆ ನೋಡಲಿತ್ತು,
ಪ್ರಸಾದನಯನದಿಂ ನೋಡಿ ರೂಪಪ್ರಸಾದವನು ಪರಿಣಾಮಿಸುವ.
ಲಿಂಗಶ್ರೋತ್ರದಿಂ ಕೇಳಿ, ಲಿಂಗಕ್ಕೆ ಕೇಳಲಿತ್ತು
ಪ್ರಸಾದಶ್ರೋತ್ರದಿಂ ಶಬ್ದಪ್ರಸಾದವನು ಕೇಳಿ ಪರಿಣಾಮಿಸುವ.
ಲಿಂಗತ್ವಕ್ಕಿನಿಂ ಸ್ಪರ್ಶಿಸಿ, ಲಿಂಗಕ್ಕೆ ಸ್ಪರ್ಶಿಸಲಿತ್ತು
ಪ್ರಸಾದತ್ವಕ್ಕಿನಿಂ ಸ್ಪರ್ಶಪ್ರಸಾದವನು ಭೋಗಿಸಿ ಪರಿಣಾಮಿಸುವ.
ಲಿಂಗಜಿಹ್ವೆಯಿಂದ ರುಚಿಸಿ, ಲಿಂಗಕ್ಕೆ ರುಚಿಸಲಿತ್ತು
ಪ್ರಸಾದಜಿಹ್ವೆಯಿಂ ರುಚಿಪ್ರಸಾದವನು ಪ್ರಸಾದಿಸಿ ಪರಿಣಾಮಿಸುವ.
ಲಿಂಗಘ್ರಾಣದಿಂ ವಾಸಿಸಿ, ಲಿಂಗಕ್ಕೆ ವಾಸಿಸಲಿತ್ತು
ಪ್ರಸಾದಘ್ರಾಣದಿಂ ಪರಿಮಳಪ್ರಸಾದವನು ವಾಸಿಸಿ ಪರಿಣಾಮಿಸುವ.
ಇಂತಪ್ಪ ಸರ್ವಭೋಗದ್ರವ್ಯವ
ಲಿಂಗಕಾಯದಿಂ ಭೋಗಿಸಿ, ಲಿಂಗಕ್ಕೆ ಭೋಗಿಸಲಿತ್ತು
ಪ್ರಸಾದಕಾಯದಿಂದ ಸರ್ವಭೋಗವನು ಭೋಗಿಸುವ ಪ್ರಸಾದಿ.
ಇದು ಕಾರಣ ಭಕ್ತದೇಹಿಕದೇವ ಕೂಡಲಚೆನ್ನಸಂಗಯ್ಯನೆಂದೆಂದು
ಪ್ರಸಾದಿಯ ಪ್ರಸಾದಿಯಾದೆನಯ್ಯಾ. || ೩೫೪ ||

೧೨೦೭

ಗುರು ಲಿಂಗ ಜಂಗಮವೇಕವಾದುದೆ ಗುರುವಲ್ಲದೆ,
ಪಿತ-ಮಾತೆ, ಸತಿ-ಸುತ, ಅತ್ತೆ-ಮಾವ ಇದಲ್ಲದೆ

ಯೋಗಿ-ಜೋಗಿ, ಶ್ರವಣ-ಸನ್ಯಾಸಿ, ಕಾಳಾಮುಖಿ-ಪಾಶುಪತಿ ಎಂಬ
ಷಡುದರ್ಶನದ ಶೈವಕರ್ಮಿಗಳ
'ಗುರುವು ಗುರುವು' ಎಂಬುದಕ್ಕೆ ನಾಚದವರನೇನೆಂಬೆನಯ್ಯಾ?
ಆ ಮಹಾಘನಗುರುವಿಂಗೆ, ಇಂತಿವರನೆಲ್ಲರ ಸರಿಗಂಡಡೆ
ಒಂದೆ ಎಂದು ನುಡಿದಡೆ, ಅಘೋರನರಕ ತಪ್ಪದಯ್ಯಾ
ಕೂಡಲಚೆನ್ನಸಂಗಮದೇವಾ. || ೩೫೫ ||

೧೨೦೮

ಗುರುಲಿಂಗದಲ್ಲಿ ಆಗಾಗಿ ಆಚಾರಲಿಂಗಪ್ರಸಾದಿಯಾದ.
ಆಚಾರಲಿಂಗದಲ್ಲಿ ಅವಧಾನಿಯಾಗಿ ಸರ್ವಾಚಾರಸಂಪನ್ನನಾದ.
ಸರ್ವಾಚಾರಸಂಪತ್ತಿನಲ್ಲಿ ಲಿಂಗೈಕ್ಯನಾಗಿಪ್ಪನು.
ಕೂಡಲಚೆನ್ನಸಂಗಯ್ಯನಲ್ಲಿ ಸಂಗನಬಸವಣ್ಣನು
ಆಚಾರವ ಬಲ್ಲನಲ್ಲದೆ ನಾನೆತ್ತ ಬಲ್ಲೆನಯ್ಯಾ? || ೩೫೬ ||

೧೨೦೯

ಗುರುಲಿಂಗದಲ್ಲಿ ಪೂಜೆಯ ಮಾಡಿ,
ಜಂಗಮಲಿಂಗದಲ್ಲಿ ಉದಾಸೀನವ ಮಾಡಿದಡೆ
ಗುರುಲಿಂಗದ ಪೂಜಕರಿಗೆ ಶಿವದೂತರ
ದಂಡನೆ ಎಂಬುದ ಮಾಡಿದೆಯಯ್ಯಾ.
ಲೋಕದ ಕರ್ಮಿಗಳಿಗೆ ಯಮದೂತರ ದಂಡನೆ
ಎಂಬುವ ಮಾಡಿದೆಯಯ್ಯಾ.
ಭಕ್ತಿಯನರಿಯರು, ಯುಕ್ತಿಯನರಿಯರು
ಕೂಡಲಚೆನ್ನಸಂಗಮದೇವಾ. || ೩೫೭ ||

೧೨೧೦

ಗುರುಲಿಂಗಮೋಹಿತನಾದಡೆ ಮಾತಾಪಿತರ ಮೋಹವ ಮರೆಯಬೇಕು.
ಗುರುಲಿಂಗಭಕ್ತನಾದಡೆ ಪೂರ್ವಬಂಧುಪ್ರೇಮವ ಮಾಡಲಾಗದು.
ಗುರುಲಿಂಗಪೂಜಕನಾದಡೆ ಅನ್ಯಪೂಜೆಯ ಮಾಡಲಾಗದು.
ಗುರುಲಿಂಗವೀರನಾದಡೆ ಗುರುಲಿಂಗಾಚಾರದಲ್ಲಿ ನಡೆಯಬೇಕು.
ಗುರುಲಿಂಗಪ್ರಸಾದಿಯಾದಡೆ ಗುರ್ವಾಜ್ಞೆಯ ಮೀರಲಾಗದು.
ಗುರುಲಿಂಗಪ್ರಾಣಿಯಾದಡೆ ಮಾನವರ ಸೇವೆ ಮಾಡಲಾಗದು.

ಇದು ಕಾರಣ–ಕೂಡಲಚೆನ್ನಸಂಗಯ್ಯನಲ್ಲಿ
ಈ ಆರು ಸಹಿತ ಗುರುಲಿಂಗಭಕ್ತಿ. ॥ ೩೫೮ ॥

೧೨೧೧

ಗುರುಲಿಂಗವು ಬಂದು ಶಿಷ್ಯನ ಕರೆದು
ಪಾದದ ಮೇಲಿಕ್ಕಿ ಕೊಂಡಡೆ ನಾಯಕನರಕ.
ಪ್ರಸಾದವೆಂದು ಇಕ್ಕಿಸಿಕೊಂಡಡೆ ಅದು ಕಿಲ್ಬಿಷ.
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ
ಬಲ್ಲ ಮಹಾತ್ಮರು ಕೊಳ್ಳರು. ॥ ೩೫೯ ॥

೧೨೧೨

ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗವೆಂಬ
ಅಪಸ್ಮಾರಿಗಳ ಮಾತ ಕೇಳಲಾಗದು.
ಅದೆಂತೆಂದಡೆ:
ಅಂಗದ ಮೇಲೆ ಒಬ್ಬ ಗಂಡ, ಮನೆಯೊಳಗೆ ಒಬ್ಬ ಗಂಡ
ಹಿತ್ತಲೊಳಗೊಬ್ಬ ಗಂಡ, ಮುಂಚೆಯಲೊಬ್ಬ ಗಂಡ–
ಇಂತೀ ಚತುರ್ವಿಧ ಗಂಡರು ಎಂಬ ಸತಿಯರ
ಲೋಕದವರು ಮೆಚ್ಚಿ ಮೂಗಕೊಯ್ಯದೆ ಮಾಬರೆ?
ಕೂಡಲಚೆನ್ನಸಂಗಮದೇವಾ
ಪ್ರಾಣಲಿಂಗವಿರ್ದುದ ಎತ್ತಲೆಂದರಿಯರು. ॥ ೩೬೦ ॥

೧೨೧೩

ಗುರುವನುಳಿದು ಲಿಂಗವುಂಟೆ? ಲಿಂಗವನುಳಿದು ಜಂಗಮವುಂಟೆ?
ಜಂಗಮವನುಳಿದು ಪ್ರಸಾದವುಂಟೆ? ಪ್ರಸಾದವನುಳಿದು ಸದ್ಭಕ್ತಿಯುಂಟೆ?
ಭಕ್ತಿಯನುಳಿದು ಮುಕ್ತಿಯುಂಟೆ? ಕೂಡಲಚೆನ್ನಸಂಗಯ್ಯ. ॥ ೩೬೧

೧೨೧೪

ಗುರುವಪ್ಪುದರಿದು, ಶಿಷ್ಯನಪ್ಪುದರಿದು,
ಗುರುಶಿಷ್ಯಸಂಬಂಧವಾರಿಗೆಯೂ ಅಳವಡದಾಗಿ.
ಗುರುವಾದಾತ ಸೊನ್ನಗಾರನಾಗಬೇಕು.
ಶಿಷ್ಯನಾದಾತ ಬೆವಹಾರಿಯಾಗಬೇಕು.

ಇದು ಕಾರಣ–ಕೂಡಲಚೆನ್ನಸಂಗಯ್ಯಾ
ಇಂತಹ ಗುರುಶಿಷ್ಯಸಂಬಂಧವಪೂರ್ವ. ॥ ೩೬೨ ॥

೧೨೧೫

ಗುರುವ ಬಿಟ್ಟವಂಗೆ ಲಿಂಗವಿಲ್ಲ, ತನುವಿರಹಿತವಾಗಿ ಪ್ರಾಣವಿಲ್ಲ,
ಕಂಗಳುವಿರಹಿತವಾಗಿ ನೋಡಲಿಲ್ಲ, ಸತ್ಯವಿರಹಿತವಾಗಿ ಭಕ್ತಿಯಿಲ್ಲ.
ಈ ಭೇದಕಸ್ಥಲವನರಿಯದಿದ್ದಡೆ ಭಕ್ತಜಂಗಮವನಲ್ಲ ಕಾಣಾ
ಕೂಡಲಚೆನ್ನಸಂಗಮದೇವಾ. ॥ ೩೬೩ ॥

೧೨೧೬

ಗುರುವ ಭವಿಯೆಂಬೆ, ಲಿಂಗವ ಭವಿಯೆಂಬೆ,
ಜಂಗಮುವ ಭವಿಯೆಂಬೆ, ಪ್ರಸಾದವ ಭವಿಯೆಂಬೆ.
ಅದೇನು ಕಾರಣವೆಂದರೆ:
ಇವಕ್ಕೆ ಉಪದೇಶವ ಕೊಟ್ಟವರಿಲ್ಲವಾಗಿ,
ಇವಕ್ಕೆ ಸಾಮಿಪ್ಯ ಸಂಬಂಧವಿಲ್ಲವಾಗಿ.
ಅದೆಂತೆಂದಡೆ:
'ನಾಸ್ತಿ ತತ್ವಂ ಗುರೋಃ ಪರಂ' ಎಂಬುದಾಗಿ.
ಅದಕ್ಕೆ ಮತ್ತೆಯೂ:
ತ್ವಂ ವಿಶ್ವಕರ್ತಾ ತವ ನಾಸ್ತಿ ಕರ್ತಾ
ತ್ವಂ ವಿಶ್ವಭರ್ತಾ ತವ ನಾಸ್ತಿ ಭರ್ತಾ
ತ್ವಂ ವಿಶ್ವಹರ್ತಾ ತವ ನಾಸ್ತಿ ಹರ್ತಾ
ತ್ವಂ ವಿಶ್ವನಾಥಸ್ತವ ನಾಸ್ತಿ ನಾಥಃ ಎಂಬುದಾಗಿ.
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ ಭವಿಯಾಗಿ ಭವಿಯು
ಬೆರಸಬೇಕು. ॥ ೩೬೪ ॥

೧೨೧೭

ಗುರುವಾದಡೂ ತನ್ನ ಶಿಷ್ಯನ ಕೈಯ ಜಂಗಮಕ್ಕೆ ಸೇವೆಯ ಮಾಡಿಸದೆ,
ತಾ ಮಾಡಿಸಿಕೊಂಡನಾದಡೆ ಶ್ವಾನನೊಡಲ ಹೊರಕಿದಂತೆ.
ಅದು ಹೇಗೆಂದಡೆ:
ತನ್ನ ಲಿಂಗವನಾ ಶಿಷ್ಯಂಗೆ ಕೊಟ್ಟು, ತಾನು ವ್ರತಗೇಡಿಯಾಗಿ ಹೋಹಲ್ಲಿ,
ಆ ಜಂಗಮವೆ ಸಾಕ್ಷಿಯಾಗಿರ್ದು ವಿಭೂತಿವೀಳೆಯವ ತೆಗೆದುಕೊಂಡು
ಗುರು ಶಿಷ್ಯರಿಬ್ಬರ ಪೂರ್ವಾಶ್ರಯವ ಕಳೆವರಾಗಿ, ಆ ಜಂಗಮಕ್ಕೆ ಮಾಡಿಸುವುದು.

ಗುರುವಾದಡಾಗಲಿ ಲಿಂಗವಾದಡಾಗಲಿ ಜಂಗಮ ತಾನಾದಡೂ ಆಗಲಿ
ಜಂಗಮ ಪಾದೋದಕ ಪ್ರಸಾದವಿಲ್ಲದವರನೊಲ್ಲೆನೊಲ್ಲೆ.
ಅವರು ಬರುಕಾಯರೆಂಬೆ, ಬರುಮುಖಿಗಳೆಂಬೆ,
ಅಂಗಹೀನರೆಂಬೆ ಲಿಂಗಹೀನರೆಂಬೆ.
ಜಂಗಮದಲ್ಲಿ ಗುಣವ ನೋಡದೆ, ಅವಗುಣವ ನೋಡದೆ
ರೂಪ ನೋಡದೆ, ನಿರೂಪ ನೋಡದೆ, ಕೋಪವ ನೋಡದೆ, ಶಾಂತವ ನೋಡದೆ,
ವಿವೇಕವ ನೋಡದೆ, ಅವಿವೇಕವ ನೋಡದೆ,
ಮಲಿನವ ನೋಡದೆ, ಅಮಲಿನವ ನೋಡದೆ,
ರೋಗವ ನೋಡದೆ, ನಿರೋಗವ ನೋಡದೆ,
ಕುಲವ ನೋಡದೆ, ಛಲವ ನೋಡದೆ, ಆಶೆಯ ನೋಡದೆ, ನಿರಾಶೆಯ ನೋಡದೆ,
ಅಂಗದ ಮೇಲಣ ಲಿಂಗವನೆ ನೋಡಿ, ಜಂಗಮಕ್ಕೆ ಮಾಡಿ ನೀಡಿ,
ಪಾದೋದಕ ಪ್ರಸಾದವ ಕೊಂಬ ಶರಣನ ಬಸವಣ್ಣನೆಂಬೆ ಕಾಣಾ
ಕೂಡಲಚೆನ್ನಸಂಗಮದೇವಾ. ॥ ೩೬೫ ॥

೧೨೮

ಗುರುವಾದುದು ತಪ್ಪು, ಲಿಂಗವಾದುದು ತಪ್ಪು,
ಜಂಗಮವಾದುದು ತಪ್ಪು.
ಈ ತ್ರಿವಿಧ ಭೇದದ ಸಂಬಂಧದ ಸಕೀಲವ,
ಸಂಚದ ನಿಕ್ಷೇಪವ ಅರಿತರೆ
ಈ ಲೋಕವೇನು? ಆ ಲೋಕವೇನು?
ಈರೇಳುಭುವನ ಹದಿನಾಲ್ಕುಲೋಕದ ನಿಸ್ಸಾರಾಯವ ಬಿಟ್ಟು,
ತನ್ನೊಳಗೆ ಇದ್ದ ಲಿಂಗಸಾರಾಯದ ಯೋಗಿಯಾದರೆ
ಸರ್ವಾಂಗವೆಲ್ಲವೂ ಲಿಂಗ, ಇದ್ದುದೆ ಕೈಲಾಸ,
ಕೂಡಲಚೆನ್ನಸಂಗಮದೇವ. ॥ ೩೬೬ ॥

೧೨೯

ಗುರುವಿನ ಗುಣಸಂಪಾದನೆಯ ಮಾಡುವನ್ನಕ್ಕ
ಗುರುಸಂಬಂಧಿಯಲ್ಲ.
ಲಿಂಗದಲ್ಲಿ ಸ್ಥಲಸಂಪಾದನೆಯ ಮಾಡುವನ್ನಕ್ಕ
ಲಿಂಗಸಂಬಂಧಿಯಲ್ಲ.
ಜಂಗಮದಲ್ಲಿ ಜಾತಿಸಂಪಾದನೆಯ ಮಾಡುವನ್ನಕ್ಕ
ಜಂಗಮಸಂಬಂಧಿಯಲ್ಲ.

ಪ್ರಸಾದದಲ್ಲಿ ರುಚಿಸಂಪಾದನೆಯ ಮಾಡುವನ್ನಕ್ಕ
ಪ್ರಸಾದಸಂಬಂಧಿಯಲ್ಲ.
ಇದು ಕಾರಣ– ಕೂಡಲಚೆನ್ನಸಂಗಯ್ಯಾ
ಮಜ್ಜನಕ್ಕೆರೆವ ಭವಿಗಳನೇನೆಂಬೆ? || ೩೬೭ ||

೧೧೧೦

ಗುರುವಿನ ಗುರುವಿನ ಕೈಯ ಶಿಷ್ಯರ ಶಿಷ್ಯ
ಪಾದಾರ್ಚನೆಯ ಮಾಡಿಕೊಂಬುದ ಕಂಡು
ಎನ್ನ ಮನ ಬೆರಗಾಯಿತ್ತು!
ಮುಂದು ಹಿಂಧಾಯಿತ್ತು, ಹಿಂದು ಮುಂದಾಯಿತ್ತು!
ಕೂಡಲಚೆನ್ನಸಂಗಮದೇವಾ,
ನಿಮ್ಮ ಗುರುಶಿಷ್ಯರ ಸಂಬಂಧ ಎನಗೆ ವಿಪರೀತವಾಯಿತ್ತು. || ೩೬೮ ||

೧೧೧೧

ಗುರುವಿನ ಭಾವದಂತೆ ಶಿಷ್ಯನಿರಬಲ್ಲಡೆ
ಅದು ಗುರುಶಿಷ್ಯಭಾವ.
ಅವರಂದವಿಲ್ಲದಲ್ಲಿ ನಮ್ಮಂದವಿಲ್ಲ.
ಅದು ಕಾರಣ– ನಮ್ಮ ಕೂಡಲಚೆನ್ನಸಂಗನ ಶರಣ
ಮರುಳಶಂಕರನ ಯಾಚಿಸಯ್ಯಾ ಸಿದ್ಧರಾಮಯ್ಯಾ. || ೩೬೯ ||

೧೧೧೨

ಗುರುವಿನಿಂದಾಯಿತ್ತೆನ್ನ ಗುರುಸಂಬಂಧ;
ಲಿಂಗದಿಂದಾಯಿತ್ತೆನ್ನ ಲಿಂಗಸಂಬಂಧ;
ಜಂಗಮದಿಂದಾಯಿತ್ತೆನ್ನ ಜಂಗಮಸಂಬಂಧ.
ಅದೆಂತೆಂದಡೆ:
ತನುವಿಕಾರವಳಿದೆನಾಗಿ ಗುರುಸಂಬಂಧ;
ಮನವಿಕಾರವಳಿದೆನಾಗಿ ಲಿಂಗಸಂಬಂಧ;
ಧನವಿಕಾರವಳಿದೆನಾಗಿ ಜಂಗಮಸಂಬಂಧ.
ಇಂತೀ ತ್ರಿವಿಧವಿಕಾರವಳಿದೆನಾಗಿ,
ಗುರುವಾಗಿ ಗುರುಭಕ್ತಿಸಂಪನ್ನ;
ಲಿಂಗವಾಗಿ ಲಿಂಗಭಕ್ತಿಸಂಪನ್ನ;
ಜಂಗಮವಾಗಿ ಜಂಗಮಭಕ್ತಿಸಂಪನ್ನ.
ಇದು ಕಾರಣ, ಅರಿವೆ ಗುರು, ಅನುಭಾವವೆ ಲಿಂಗ, ಆನಂದವೆ ಜಂಗಮ.

ಅದು ಹೇಗೆಂದಡೆ:
ಅರಿವೆಂಬ ಗುರುವಿನಿಂದ ಇಷ್ಟಲಿಂಗಸಾಹಿತ್ಯ;
ಅನುಭಾವವೆಂಬ ಲಿಂಗದಿಂದ ಪ್ರಾಣಲಿಂಗಸಾಹಿತ್ಯ;
ಆನಂದವೆಂಬ ಜಂಗಮದಿಂದ ತೃಪ್ತಿಲಿಂಗಸಾಹಿತ್ಯ.
ಅರಿವಿನಿಂದ ಅನುಭವ; ಅನುಭವದಿಂದ ಅರಿವು.
ಅರಿವು ಅನುಭವ ಸಮರಸವಾದುದೆ ಆನಂದ.
ಆನಂದಕ್ಕೆ ಅರಿವೆ ಸಾಧನ.
ಇಷ್ಟದಿಂದ ಪ್ರಾಣ, ಪ್ರಾಣದಿಂದ ಇಷ್ಟ;
ಇಷ್ಟಪ್ರಾಣಸಂಯೋಗವಾದುದೆ ತೃಪ್ತಿ.
ಆ ತೃಪ್ತಿಗೆ ಇಷ್ಟಲಿಂಗದರಿವೆ ಸಾಧನ.
ಅದೆಂತೆಂದಡೆ:
ಆ ಇಷ್ಟಲಿಂಗದಲ್ಲಿ ವಿನಯ ಮೋಹ ಭಯ ಭಕ್ತಿ ಕರುಣ ಕಿಂಕುರ್ವಾಣ
ಸಮರಸವಾದುದೆ ಆಚಾರಲಿಂಗ.
ಮತ್ತಾ ಇಷ್ಟಲಿಂಗದಲ್ಲಿ ದೃಢಸ್ನೇಹ ನಿಶ್ಚಯ ನಿಶ್ಚಲವಿಶ್ವಾಸ
ಸಮರಸವಾದುದೆ ಗುರುಲಿಂಗ.
ಮತ್ತಾ ಇಷ್ಟಲಿಂಗದಲ್ಲಿ ಎಚ್ಚರಿಕೆ ಸುಜನತ್ವ ಸಾವಧಾನ ಸನ್ನಹಿತ ಪ್ರಸನ್ನತ್ವ
ಸಮರಸವಾದುದೆ ಶಿವಲಿಂಗ.
ಮತ್ತಾ ಇಷ್ಟಲಿಂಗದಲ್ಲಿ ನಿಸ್ತರಂಗ ದೃಕ್ಕಿರಣೋದಯ ಹೃದಯಕುಹರ
ಸ್ವಯಾನುಭಾವಾಂತರ್ಮುಖ ಸಮರಸವಾದುದೆ ಜಂಗಮಲಿಂಗ.
ಮತ್ತಾ ಇಷ್ಟಲಿಂಗದಲ್ಲಿ ಪರವಶಗೂಢ ಏಕಾಗ್ರಚಿತ್ತ ಉತ್ತರಯೋಗ
ಪರಿಪೂರ್ಣಭಾವ ಸಚ್ಚಿದಾನಂದ ಸಮರಸವಾದುದೆ ಪ್ರಸಾದಲಿಂಗ.
ಮತ್ತಾ ಇಷ್ಟಲಿಂಗದಲ್ಲಿ ಮನೋಲಯ ಭಾವಾದ್ವೈತ ಅನುಪಮ ಚಿತ್ತಾತ್ಮಿಕದೃಷ್ಟಿ
ಸುನಾದ ಭೋಜ್ಯ ಸಮರಸವಾದುದೆ ಮಹಾಲಿಂಗ.
ಇಂತಪ್ಪ ಮಹಾಲಿಂಗದಿಂದ ಪ್ರಸಾದಲಿಂಗ, ಪ್ರಸಾದಲಿಂಗದಿಂದ ಜಂಗಮಲಿಂಗ,
ಜಂಗಮಲಿಂಗದಿಂದ ಶಿವಲಿಂಗ, ಶಿವಲಿಂಗದಿಂದ ಗುರುಲಿಂಗ,
ಗುರುಲಿಂಗದಿಂದ ಆಚಾರಲಿಂಗ.
ಆಚಾರಲಿಂಗದಲ್ಲಿ ಅನುಭಾವಿಯಾದಡೆ,
ಇಪ್ಪತ್ತೈದು ಕರಣಂಗಳನರಿದಾಚರಿಸಬೇಕು.
ಗುರುಲಿಂಗದಲ್ಲಿ ಅನುಭಾವಿಯಾದಡೆ,
ಇಪ್ಪತ್ತು ಕರಣಂಗಳನರಿದಾಚರಿಸಬೇಕು.
ಶಿವಲಿಂಗದಲ್ಲಿ ಅನುಭಾವಿಯಾದಡೆ,
ಹದಿನೈದು ಕರಣಂಗಳನರಿದಾಚರಿಸಬೇಕು.
ಜಂಗಮದಲ್ಲಿ ಅನುಭಾವಿಯಾದಡೆ,

ಹತ್ತು ಕರಣಂಗಳನರಿದಾಚರಿಸಬೇಕು.
ಪ್ರಸಾದಲಿಂಗದಲ್ಲಿ ಅನುಭಾವಿಯಾದಡೆ,
ಐದು ಕರಣಂಗಳನರಿದಾಚರಿಸಬೇಕು.
ಮಹಾಲಿಂಗದಲ್ಲಿ ಅನುಭಾವಿಯಾದಡೆ,
ಎಲ್ಲಾ ಕರಣಂಗಳನರಿದಾಚರಿಸಬೇಕು.
ಇಂತಪ್ಪ ಮಹಾಲಿಂಗವೆ ಇಷ್ಟಲಿಂಗವಾಗಿ,
ಆ ಇಷ್ಟಲಿಂಗದ ಗಂಧಂಗಳಾರು ಮುಖಂಗಳಾಗಿ,
ಆ ಮುಖಂಗಳ ತತ್ತತ್ಸ್ಥಾನದ್ರವ್ಯಂಗಳನರಿದರ್ಪಿಸಿಕೊಳಬಲ್ಲನಾಗಿ
ಆಚಾರಲಿಂಗಭೋಗಿ.
ಮತ್ತಾ ಇಷ್ಟಲಿಂಗದ ರಸಂಗಳಾರು ಮುಖಂಗಳಾಗಿ,
ಆ ಮುಖಂಗಳ ತತ್ತತ್ಸ್ಥಾನದ್ರವ್ಯಂಗಳನರಿದರ್ಪಿಸಿಕೊಳಬಲ್ಲನಾಗಿ
ಗುರುಲಿಂಗಭೋಗಿ.
ಮತ್ತಾ ಇಷ್ಟಲಿಂಗದ ರೂಪುಗಳಾರು ಮುಖಂಗಳಾಗಿ,
ಆ ಮುಖಂಗಳ ತತ್ತತ್ಸ್ಥಾನದ್ರವ್ಯಂಗಳನರಿದರ್ಪಿಸಿಕೊಳಬಲ್ಲನಾಗಿ
ಶಿವಲಿಂಗಭೋಗಿ.
ಮತ್ತಾ ಇಷ್ಟಲಿಂಗದ ಸ್ಪರ್ಶನಂಗಳಾರು ಮುಖಂಗಳಾಗಿ,
ಆ ಮುಖಂಗಳ ತತ್ತತ್ಸ್ಥಾನದ್ರವ್ಯಂಗಳನರಿದರ್ಪಿಸಿಕೊಳಬಲ್ಲನಾಗಿ
ಜಂಗಮಲಿಂಗಭೋಗಿ.
ಮತ್ತಾ ಇಷ್ಟಲಿಂಗದ ಶಬ್ದಂಗಳಾರು ಮುಖಂಗಳಾಗಿ,
ಆ ಮುಖಂಗಳ ತತ್ತತ್ಸ್ಥಾನದ್ರವ್ಯಂಗಳನರಿದರ್ಪಿಸಿಕೊಳಬಲ್ಲನಾಗಿ
ಪ್ರಸಾದಲಿಂಗಭೋಗಿ.
ಮತ್ತಾ ಇಷ್ಟಲಿಂಗದ ಪರಿಣಾಮಂಗಳಾರು ಮುಖಂಗಳಾಗಿ,
ಆ ಮುಖಂಗಳ ತತ್ತತ್ಸ್ಥಾನದ್ರವ್ಯಂಗಳನರಿದರ್ಪಿಸಿಕೊಳಬಲ್ಲನಾಗಿ
ಮಹಾಲಿಂಗಭೋಗಿ.
ಇಂತಪ್ಪ ಮಹಾಲಿಂಗವೆ ಇಷ್ಟಲಿಂಗವಾಗಿ,
ಆ ಇಷ್ಟಲಿಂಗದ ಸದ್ಯೋಜಾತಮುಖವಪ್ಪ ಪ್ರಾಣಂಗಳಾರು ದ್ರವ್ಯಂಗಳಲ್ಲಿ
ಷಟ್‌ತ್ರಿಂಶಲ್ಲಿಂಗಾವಧಾನಿಯಾಗಿ,
ಮತ್ತಾ ಇಷ್ಟಲಿಂಗದ ವಾಮದೇವಮುಖವಪ್ಪ ಜಿಹ್ವೆಗಳಾರು ದ್ರವ್ಯಂಗಳಲ್ಲಿ
ಷಟ್‌ತ್ರಿಂಶಲ್ಲಿಂಗಾವಧಾನಿಯಾಗಿ,
ಮತ್ತಾ ಇಷ್ಟಲಿಂಗದ ಅಘೋರಮುಖವಪ್ಪ ನೇತ್ರಂಗಳಾರು ದ್ರವ್ಯಂಗಳಲ್ಲಿ
ಷಟ್‌ತ್ರಿಂಶಲ್ಲಿಂಗಾವಧಾನಿಯಾಗಿ,
ಮತ್ತಾ ಇಷ್ಟಲಿಂಗದ ತತ್ಪುರುಷಮುಖವಪ್ಪ ತ್ವಕ್ಕುಗಳಾರು ದ್ರವ್ಯಂಗಳಲ್ಲಿ
ಷಟ್‌ತ್ರಿಂಶಲ್ಲಿಂಗಾವಧಾನಿಯಾಗಿ,

ಮತ್ತಾ ಇಷ್ಟಲಿಂಗದ ಈಶಾನಮುಖವಪ್ಪ ಶ್ರೋತ್ರಂಗಳಾರು ದ್ರವ್ಯಂಗಳಲ್ಲಿ
ಷಟ್‌ತ್ರಿಂಶಲ್ಲಿಂಗಾವಧಾನಿಯಾಗಿ,
ಮತ್ತಾ ಇಷ್ಟಲಿಂಗದ ಗೋಪ್ಯಮುಖವಪ್ಪ ಹೃದಯಂಗಳಾರು ದ್ರವ್ಯಂಗಳಲ್ಲಿ
ಷಟ್‌ತ್ರಿಂಶಲ್ಲಿಂಗಾವಧಾನಿಯಾಗಿ.
ಇಂತಪ್ಪ ತೃಪ್ತಿಪದಾರ್ಥಂಗಳಾರು, ಶಬ್ದಪದಾರ್ಥಂಗಳಾರು,
ಸ್ಪರ್ಶನಪದಾರ್ಥಂಗಳಾರು, ರೂಪುಪದಾರ್ಥಂಗಳಾರು,
ರಸಪದಾರ್ಥಂಗಳಾರು, ಗಂಧಪದಾರ್ಥಂಗಳಾರು.
ಇಂತೀ ಗಂಧಪದಾರ್ಥಂಗಳಾರನು ಘ್ರಾಣಿಸುವಲ್ಲಿ ಅಷ್ಟಾದಶಲಿಂಗಶೇಷಭುಕ್ತನಾಗಿ,
ರಸಪದಾರ್ಥಂಗಳಾರನು ರುಚಿಸುವಲ್ಲಿ ಅಷ್ಟಾದಶಲಿಂಗಶೇಷಭುಕ್ತನಾಗಿ,
ರೂಪುಪದಾರ್ಥಂಗಳಾರನು ನಿರೀಕ್ಷಿಸುವಲ್ಲಿ ಅಷ್ಟಾದಶಲಿಂಗಶೇಷಭುಕ್ತನಾಗಿ,
ಸ್ಪರ್ಶನ ಪದಾರ್ಥಂಗಳಾರನು ಸೋಂಕುವಲ್ಲಿ ಅಷ್ಟಾದಶಲಿಂಗಶೇಷಭುಕ್ತನಾಗಿ,
ಶಬ್ದಪದಾರ್ಥಂಗಳಾರನು ಲಾಲಿಸುವಲ್ಲಿ ಅಷ್ಟಾದಶಲಿಂಗಶೇಷಭುಕ್ತನಾಗಿ
ತೃಪ್ತಿಪದಾರ್ಥಂಗಳಾರನು ಪರಿಣಾಮಿಸುವಲ್ಲಿ ಅಷ್ಟಾದಶಲಿಂಗಶೇಷಭುಕ್ತನಾಗಿ,
ಅರ್ಪಿತ ಪ್ರಸಾದ ಅವಧಾನ ಸ್ಥಳಕುಳ ಅನುಭಾವ ಆಚರಣೆ
ಇಂತಿವೆಲ್ಲವನು ಇಷ್ಟಲಿಂಗದಲ್ಲಿಯೆ ಕಂಡು ಸುಖಿಸುತ್ತಿರ್ಪ
ಮಹಾಮಹಿಮನ ನಾನೇನೆಂಬೆನಯ್ಯಾ!
ಇಂತಪ್ಪ ಮಹಾಮಹಿಮನೊಳಕೊಂಡಿಪ್ಪ ಇಷ್ಟಬ್ರಹ್ಮವ ನಾನೇನೆಂಬೆನಯ್ಯಾ!
ಫಲ ಪತ್ರ ಕುಸುಮ ರಸ ಗಂಧ ಕಾರ ಒಗರು ಹುಳಿ ಮಧುರ ಇಂತಿವೆಲ್ಲಕ್ಕೂ
ಜಲವೊಂದೆ ಹಲವು ತೆರನಾದಂತೆ,
ಮಸೆದ ಕೂರಲಗು ಮೊನೆ ಮೊನೆಗೆ ಬಂದಾನುವಂತೆ,
ರಸಘುಟಿಕೆಯೊಂದೆ ಸಹಸ್ರ ವೇಧಿಸುವಂತೆ,
ಬಂಗಾರವೊಂದೆ ಹಲವಾಭರಣವಾದಂತೆ,
ಹತ್ತೆಂಟುಬಾಯ ಹುತ್ತದೊಳಗೆ ಸರ್ಪನೊಂದೆ ತಲೆದೋರುವಂತೆ
ಪಲವು ಕರಣಂಗಳ ಕೊನೆಯ ಮೊನೆಯ ಮೇಲೆ
ತೊಳಗಿ ಬೆಳಗುವ ಪರಂಜ್ಯೋತಿರ್ಲಿಂಗವು!
ಅನುಪಮ ಅದ್ವಯ ವಾಙ್ಮನೋತೀತ ಅವಿರಳ ಅಪ್ರಮೇಯ
ಚಿನ್ಮಯ ನಿರಾವರಣ ನಿರುತ ನಿರ್ಗುಣ ನಿರ್ಭೇದ್ಯ,
ಕೂಡಲಚೆನ್ನಸಂಗಮದೇವಾ, ನಿಮ್ಮ ಶರಣ ಸರ್ವಾಂಗಲಿಂಗಿ. ॥ ೩೭೦ ॥

೧೨೨೩

ಗುರುವಿಂದಾಯಿತ್ತೆಂಬೆನೆ? ಗುರುವಿಂದಾಗದು.
ಲಿಂಗದಿಂದಾಯಿತ್ತೆಂಬೆನೆ? ಲಿಂಗದಿಂದಾಗದು.

ಜಂಗಮದಿಂದಾಯಿತ್ತೆಂಬೆನೆ? ಜಂಗಮದಿಂದಾಗದು.
ಪಾದೋದಕದಿಂದಾಯಿತ್ತೆಂಬೆನೆ? ಪಾದೋದಕದಿಂದಾಗದು.
ಪ್ರಸಾದದಿಂದಾಯಿತ್ತೆಂಬೆನೆ? ಪ್ರಸಾದದಿಂದಾಗದು.
ತನ್ನಿಂದ ಅಹುದು, ತನ್ನಿಂದ ಹೋಹುದು ಕಾಣಾ
ಕೂಡಲಚೆನ್ನಸಂಗಮದೇವಾ. || ೩೭೧ ||

೧೨೨೪

ಗುರುವಿಲ್ಲದ ಕೂಟ ಲಿಂಗವಿಲ್ಲದ ನೋಟ,
ಜಂಗಮವಿಲ್ಲದ ಮಾಟ, ಪ್ರಸಾದವಿಲ್ಲದ ಊಟ,
ಈ ನಾಲ್ಕರ ಬೇಟವಿಲ್ಲದ ಕೂಟ,
ಕೂಡಲಚೆನ್ನಸಂಗಯ್ಯನೆನಲಿಲ್ಲದ ಆಟ || ೩೭೨ ||

೧೨೨೫

ಗುರುವಿಲ್ಲದ ಲಿಂಗ, ಲಿಂಗವಿಲ್ಲವ ಗುರು,
ಗುರು–ಲಿಂಗವಿಲ್ಲದ ಶಿಷ್ಯ.
ಶಿಷ್ಯನಿಲ್ಲದ ಸೀಮೆ, ಸೀಮೆಯಿಲ್ಲದ ನಿಸ್ಸೀಮ
ಕೂಡಲಚೆನ್ನಸಂಗಾ ನಿಮ್ಮ ಶರಣ. || ೩೭೩ ||

೧೨೨೬

ಗುರುವಿಲ್ಲದೆ, ಲಿಂಗ ನಿನಗೆಲ್ಲಿಯದಯ್ಯಾ?
ಕೊಂದೆ ನಿಮ್ಮಯ್ಯನ, ಕೊಂಡೆ ಲಿಂಗವನು!
ಅಂದು ಅನುಮಿಷ ನಿನಗೆ ಗುರುವಾದುದನರಿಯಾ?
ಕೂಡಚೆನ್ನಸಂಗಯ್ಯನಲ್ಲಿ
ಮೂರುಲೋಕವರಿಯೆ ಅಲ್ಲಮ ವ್ರತಗೇಡಿ! || ೩೭೪ ||

೧೨೨೭

ಗುರುವೆಂದಲ್ಲಿಯೆ ತಪ್ಪಿತ್ತು, ಲಿಂಗವೆಂದಲ್ಲಿಯೆ ತಪ್ಪಿತ್ತು,
ಜಂಗಮವೆಂದಲ್ಲಿಯೆ ತಪ್ಪಿತ್ತು, ಪ್ರಸಾದವೆಂದಲ್ಲಿಯೆ ತಪ್ಪಿತ್ತು.
ಈ ಚತುರ್ವಿಧ ಸಂಚ ನಿಕ್ಷೇಪವ ಬಲ್ಲಡೆ
ಈ ಲೋಕದಲ್ಲಿದ್ದಡೇನು? ಆ ಲೋಕದಲ್ಲಿದ್ದಡೇನು?
ಮತ್ತಾವಲೋಕದಿಂದ ಮರ್ತ್ಯಕ್ಕೆ ಬಂದಡೇನು?
ಪದಿನಾಲ್ಕುಲೋಕದೊಳಗಿರ್ದ ನಿಸ್ಸಾರಾಯುಮಂ ಬಿಟ್ಟು

ಲಿಂಗಸಾರಾಯ ಮೌನಿಯಾಗು,
ಕೂಡಲಚೆನ್ನಸಂಗ ನಿಮ್ಮಲ್ಲಿ ಸರ್ವಾಂಗಲಿಂಗವಾದ ಕಾರಣ. || ೩೭೫ ||

೧೨೨೮

ಗುರುವೆಂಬ ಗೂಳಿ ಮುಟ್ಟಲು, ಶಿಷ್ಯನೆಂಬ ಮಣಿಕ ತನೆಯಾಯಿತ್ತು.
ಲಿಂಗವೆಂಬ ಕಿಳುಗರು, ತನುವೆ ಕೆಚ್ಚಲು, ಮನವೆ ಮೊಲೆವಾಲು.
ಅರಿದಲ್ಲಿ ಐಕ್ಯ, ಮರೆದಲ್ಲಿ ಸಾಹಿತ್ಯ.
ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ
ಅನಾಚಾರಿಗಲ್ಲದೆ ಪ್ರಸಾದವಿಲ್ಲ. || ೩೭೬ ||

೧೨೨೯

ಗುರುವೆಂಬ ಪ್ರತಿಭಾವವಿಲ್ಲದ ಶಿಷ್ಯ;
ಶಿಷ್ಯನೆಂಬ ಪ್ರತಿಭಾವವಿಲ್ಲದ ಗುರು;
ಏನೆಂಬೆನೇನೆಂಬೆ ಎರಡಿಲ್ಲದ ಘನವನೇನೆಂಬೆನೇನೆಂಬೆ!
ಉಭಯವಳಿದು ಒಂದಾದುದನೇನೆಂಬೆನೇನೆಂಬೆ:
ಕೂಡಲಚೆನ್ನಸಂಗಯ್ಯನಲ್ಲಿ
ಗುರುಶಿಷ್ಯಸಂಬಂಧವಪೂರ್ವ. || ೩೭೭ ||

೧೨೩೦

ಗುರುವೆ ಬೋನ, ಶಿಷ್ಯನೆ ಮೇಲೋಗರ.
ಲಿಂಗಕ್ಕೆ ಪದಾರ್ಥವರ್ಪಿತವಯ್ಯಾ!
ಘನಕ್ಕೆ ಮನವೆ ಅರ್ಪಿತ, ಮನಕ್ಕೆ ಮಹವೆ ಅರ್ಪಿತ!
ಘನದೊಳಗೆ ಮನವು ತಲ್ಲೀಯವಾದ ಬಳಿಕ
ಅರ್ಪಿಸುವ ಭಕ್ತನಾರು? ಆರೋಗಿಸುವ ದೇವನಾರು?
ನಿತ್ಯತೃಪ್ತ ಉಣಕಲಿತನೆಂದಡೆ
ಅರ್ಪಿಸಲುಂಟೆ ದೇವಾ ಮತ್ತೊಂದನು?
ಕೂಡಲಚೆನ್ನಸಂಗಮದೇವಾ,
ಬಸವಣ್ಣನೆ ಬೋನ, ನಾನೆ ಪದಾರ್ಥ;
ಸುಚಿತ್ತದಿಂದ ಆರೋಗಿಸಯ್ಯಾ ಪ್ರಭುವೆ. || ೩೭೮ ||

೧೨೩೧

ಗುರುವೆ ಸದಾಶಿವ, ಗುರುವೆ ಮಹಾಮಹಿಮ,
ಗುರುವೆ ಅಕಲ್ಪಿತ ನಿತ್ಯ ನಿರವಯ.

ಸಾಕಾರವಿಡಿದು ಗುರುಲಿಂಗವಾದ;
ನಿರಾಕಾರವಿಡಿದು ಪ್ರಾಣಲಿಂಗವಾದ;
ಉಭಯಸ್ಥಲ ಏಕವಾದದಲ್ಲಿ ಭವವಿರಹಿತಭಕ್ತ ಜೀವನ್ಮುಕ್ತನಾದ.
ಅಂತು ಗುರು ನಿಂದ ಸ್ಥಾನ, ಕಾಶೀಕ್ಷೇತ್ರ.
ಗುರುಚರಣ ಪ್ರಕ್ಷಾಲನೋದಕವೆ ಗಂಗಾತೀರ್ಥ.
ಗುರುಲಿಂಗ ಸಾಕ್ಷಾತ್ ಪರಶಿವನಿಂದ ವಿಶೇಷ.
ಗುರುದರ್ಶನ ಪರಮಪೂಜೆ, ಗುರುಪಾದ ರುದ್ರಗಾಯತ್ರಿ;
ಗುರುವಿನಿಂದತಿಶಯ ಫಲವೇನೂ ಇಲ್ಲ.
ಕೂಡಲಚೆನ್ನಸಂಗಯ್ಯಾ, ಎನ್ನ ಪರಮಗುರು ಬಸವಣ್ಣನ ಶ್ರೀಪಾದಕ್ಕೆ
ನಮೋ ನಮೋ ಎಂಬೆನು. || ೩೭೯ ||

೧೨೩೨

ಗುರುವೆ ಹೆಂಡತಿಯಾಗಿ, ಹೆಂಡತಿಯೆ ತಾಯಾಗಿ;
ತಾಯೆ ಹೆಂಡತಿಯಾಗಿ; ಶಿಷ್ಯನೆ ಗಂಡನಾಗಿ–
ಏನೆಂದು ಹೇಳುವೆ, ಏನೆಂದುಪಮಿಸುವೆ,
ಕೂಡಲಚೆನ್ನಸಂಗಯ್ಯಾ ಇಹಪರವಿಲ್ಲವಾಗಿ. || ೩೮೦ ||

೧೨೩೩

ಗುರುಶಿಷ್ಯರಲ್ಲಿ ಭೇದವಿಲ್ಲದ ಕಾರಣ ಗಮಿಸುವುದಯ್ಯಾ
ದ್ವಾರದ ಮುಂದಿಪ್ಪ ಪಲ್ಲಕ್ಕಿಯಲ್ಲಿ.
ಮರುಳಶಂಕರನೇರುವ ಗಜಮುಹಾಪೀಠವ,
ಕೂಡಲಚೆನ್ನಸಂಗನ ಶರಣ ಸಿದ್ಧರಾಮನ
ಭಕ್ತಿ ನಿಮಿತ್ತಕ್ಕೇರುವೆನಾಂದೋಲನವ,
ಮತ್ತೊಂದಕ್ಕಲ್ಲ ಪ್ರಭುವೆ. || ೩೮೧ ||

೧೨೩೪

ಗುರುಶಿಷ್ಯಸಂಬಂಧವನೇನೆಂದುಪಮಿಸುವೆ?
ಜ್ಯೋತಿಯಲೊದಗಿದ ಜ್ಯೋತಿಯಂತಿರಬೇಕು,
ದರ್ಪಣದೊಳಡಗಿದ ಪ್ರತಿಬಿಂಬದಂತಿರಬೇಕು,
ಸ್ಫಟಿಕದೊಳಗಿರಿಸಿದ ರತ್ನದಂತಿರಬೇಕು,
ರೂಪಿನ ನೆಳಲಿನ ಅಂತರಂಗದಂತಿರಬೇಕು.

ಇದು ಕಾರಣ, ಕೂಡಲಚೆನ್ನಸಂಗಯ್ಯಾ
ದರ್ಪಣವ ದರ್ಪಣಕ್ಕೆ ತೋರಿದಂತಿರಬೇಕು. || ೩೮೨ ||

೧೨೩೫

ಗುರುಸತ್ತಡೆ ಸಮಾಧಿಯ ಹೊಗಲೊಲ್ಲರಯ್ಯಾ;
ಲಿಂಗಬಿದ್ದಡೆ ಸಮಾಧಿಯ ಹೊಕ್ಕಹೆವೆಂಬರು.
ಗುರುವಿಂದ ಲಿಂಗವಾಯಿತ್ತೆ? ಲಿಂಗದಿಂದ ಗುರುವಾದನೊ?
ಅದೆಂತೆಂದಡೆ:
ಪೃಥ್ವಿಯಲ್ಲಿ ಹುಟ್ಟಿತ್ತು, ಕಲ್ಲುಕುಟಿಗನಿಂದ ರೂಪಾಯಿತ್ತು,
ಗುರುವಿನ ಹಸ್ತದಿಂದ ಲಿಂಗವಾಯಿತ್ತು.
ಇಂತೀ ಮೂವರಿಗೆ ಹುಟ್ಟಿದ ಲಿಂಗವ ಕಟ್ಟಿ
ಜಗವೆಲ್ಲ ಭಂಡಾಯಿತ್ತು ನೋಡಿರೊ!
ಅಣ್ಣಾ, ಲಿಂಗ ಬಿದ್ದಿತ್ತು ಬಿದ್ದಿತ್ತೆಂದು ನೋಯಲೇಕೆ?
ಬಿದ್ದ ಲಿಂಗವನೆತ್ತಿಕೊಂಡು ಷೋಡಶೋಪಚಾರವ ಮಾಡುವುದು.
ಹೀಗಲ್ಲದೆ ಶಸ್ತ್ರ ಸಮಾಧಿ ದುರ್ಮರಣವ ಮಾಡಿಕೊಂಡಿಹನೆಂಬ
ಪಂಚಮಹಾಪಾತಕಂಗೆ ನಾಯಕನರಕ.
ಲಿಂಗವು ಬೀಳಬಹುದೆ? ಭೂಮಿಯು ಆನ ಬಲ್ಲುದೆ?
ಸದ್ಗುರುನಾಥನಿಲ್ಲವೆ?
ಇಂತೀ ಕಟ್ಟುವ ತೆರನ, ಮುಟ್ಟುವ ಭೇದವ ಆರು ಬಲ್ಲರೆಂದಡೆ:
ಈರೇಳು ಭುವನ, ಹದಿನಾಲ್ಕುಲೋಕದೊಡೆಯ
ಪೂರ್ವಾಚಾರಿ ಕೂಡಲಚೆನ್ನಸಂಗಯ್ಯನಲ್ಲದೆ
ಮಿಕ್ಕಿನ ಮಾತಿನ ಜ್ಞಾನಿಗಳೆತ್ತ ಬಲ್ಲರು? || ೩೮೩ ||

೧೨೩೬

ಗುರುಸ್ಥಲ ಘನವೆಂಬೆನೆ? ಗುರುವಿಂಗೆ ಲಿಂಗವುಂಟು.
ಲಿಂಗಸ್ಥಲ ಘನವೆಂಬೆನೆ? ಲಿಂಗಕ್ಕೆ ಜಂಗಮವುಂಟು.
ಆ ಜಂಗಮ ಎಲ್ಲಿ ಇದ್ದಡೆ ಅಲ್ಲಿ,
ಗುರು ಲಿಂಗ ಜಂಗಮ ಪಾದೋದಕ ಪ್ರಸಾದ ಭಕ್ತಿ ಅನುಭಾವ
ಸನ್ನಹಿತ ಕಾಣಾ–ಕೂಡಲಚೆನ್ನಸಂಗಮದೇವಾ. || ೩೮೪ ||

೧೨೩೭

ಗುರುಸ್ಥಲ ನಾಸ್ತಿಯಾದಲ್ಲದೆ ಶಿಷ್ಯನಲ್ಲ;
ಲಿಂಗಸ್ಥಲ ನಾಸ್ತಿಯಾದಲ್ಲದೆ ಭಕ್ತನಲ್ಲ,
ಜಂಗಮಸ್ಥಲ ನಾಸ್ತಿಯಾದಲ್ಲದೆ ಶರಣನಲ್ಲ.
ಇದುಕಾರಣ, ಕೂಡಲಚೆನ್ನಸಂಗಮದೇವಾ
ಈ ತ್ರಿವಿಧವು ನಾಸ್ತಿಯಾಗಿ
ಭಕ್ತ ಕೆಟ್ಟು ಭವಿಯಾದಲ್ಲದೆ ಲಿಂಗೈಕ್ಯನಲ್ಲ. || ೩೮೫ ||

೧೨೩೮

ಗುರುಹಸ್ತದಲ್ಲಿ ಉತ್ಪತ್ಯವಾಗಿ,
ಜಂಗಮಾನುಭವ ಶರಣರ ಸಂಗದಲ್ಲಿ ಬೆಳೆದು,
ನಿಜಲಿಂಗದಲ್ಲಿ ಲೀಯವಾದ ಗುರುಚರ ಭಕ್ತರು
ತಮ್ಮ ಸ್ಥೂಲಕಾಯವೆಂಬ ನರಕಂಥೆಯ ಕಳೆದರೆ,
ಭಕ್ತ ಬಂಧುಗಳಾದ ಆಪ್ತ ಗಣಂಗಳು ಬಂದು
ಸಮಾಧಿಯುಂ ತೆಗೆದು, ಆ ಕಾಯವೆಂಬ ಕಂಥೆಯ
ನಿಕ್ಷೇಪವಂ ಮಾಡುವುದೆ ಸದಾಚಾರ.
ಇಂತಲ್ಲದೆ ಮೃತವಾದನೆಂದು ಗೂಟವಂ ಬಲಿದು,
ಗುಂಟಿಕೆಯನಿಕ್ಕಿ, ಶೋಕಂಗೆಯ್ದು,
ಪ್ರೇತಸೂತಕ ಕರ್ಮವಿಡಿದು,
ತದ್ದಿನವಂ ಮಾಡುವದನಾಚಾರ, ಪಂಚಮಹಾಪಾತಕ.
ಅವಂಗೆ ಗುರು ಲಿಂಗ ಜಂಗಮ ಪ್ರಸಾದವಿಲ್ಲ ಅದೆಂತೆಂದೊಡೆ:
"ಯೋ ಗುರುಂ ಮೃತ ಭಾವೇನ ತದ್ದಿನಂ ಯಸ್ಯ ಶೋಚ್ಯತೆ
ಗುರುಲಿಂಗ ಪ್ರಸಾದಂ ಚ ನಾಸ್ತಿ ನಾಸ್ತಿ ವರಾನನೇ||" ಎಂದುದಾಗಿ,
ಪ್ರೇತಸೂತಕದ ಪಾತಕರಿಗೆ ಅಘೋರನರಕ ತಪ್ಪದು.
ಇಂತಪ್ಪ ಅಘೋರನರಕಿಗಳ ಮುಖವ ನೋಡಲಾಗದು ಕಾಣಾ
ಕೂಡಲಚೆನ್ನಸಂಗಯ್ಯ. || ೩೮೬ ||

೧೨೩೯

ಗುರುಹಸ್ತದೊಳು ಪುನರ್ಜಾತನಾದ ಭಕ್ತನಲ್ಲಿ
ಆವ ಜನ್ಮಜಾತಿಯ ಬೆದಕಲಪ್ಪುದು?
ಅವೆಲ್ಲ ಪ್ರಾಕೃತರಿಗಲ್ಲದೆ ಅಪ್ರಾಕೃತರಿಗುಂಟೆ ಹೇಳಾ?
"ಅಪ್ರಾಕೃತಸ್ಯ ಭಕ್ತಸ್ಯ ಗುರುಹಸ್ತಾಮಲಾಂಬುಜಾತ್|

ಪುನರ್ಜಾತಸ್ಯಾತ್ಮ ಜನ್ಮ ಜಾತ್ಯಾದೀನ್ನ ಚ ಕಲ್ಪಯೇತ್॥"
ಎಂಬ ಆಗಮವನರಿಯದೆ,
ನಿಮ್ಮ ಶರಣರಲ್ಲಿ ಜಾತಿಯ ಹುಡುಕುವ
ಕಡುಪಾತಕಿಗಳ ಎನ್ನತ್ತ ತೋರದಿರಯ್ಯಾ
ಕೂಡಲಚೆನ್ನಸಂಗಮದೇವಾ. ॥ ೩೮೭ ॥

೧೨೪೦

ಗೋವಿನ ಹೊಟ್ಟೆಯಲ್ಲಿ ಘೃತವಿದ್ದಡೇನೊ
ಆ ಗೋವು ದಿನದಿನಕ್ಕೆ ಪುಷ್ಟವಾಗಬಲ್ಲುದೆ?
ಅದು ಕಾರಣ–ಆ ಗೋವ ಪೋಷಿಸಿ ಕರೆದು ಕಾಸಿ,
ಘೃತವ ಮಾಡಿ ಆ ಗೋವಿಂಗೆ ಕುಡಿಯಲೆರೆದಡೆ
ಆ ಗೋವು ದಿನದಿನಕ್ಕೆ ಪುಷ್ಟವಹುದು.
ಹಾಂಗೆ, ತನ್ನಲ್ಲಿ ವಸ್ತುವಿದ್ದಡೇನೊ?
ವಸ್ತುವ ಗುರುಮುಖದಿಂದ ಕರಸ್ಥಲಕ್ಕೆ ಪಡೆದು,
ಸತ್ಕ್ರಿಯೆಯಿಂದ ಪ್ರಾಣಕ್ಕೆ ವೇಧಿಸಿದಲ್ಲದೆ ಪ್ರಾಣಲಿಂಗವಾಗದು.
ಕೂಡಲಚೆನ್ನಸಂಗಯ್ಯನಲ್ಲಿ,
ಇಷ್ಟಲಿಂಗವ ಸತ್ಕ್ರಿಯೆಯಿಂದ ಪ್ರಾಣಕ್ಕೆ ವೇಧಿಸಿ,
ತಾನೆಂಬ ಅನಿಷ್ಟವ ತೊಲಗಿಸಿದಲ್ಲದೆ
ಪ್ರಾಣಲಿಂಗಸಂಬಂಧವಾಗಬಾರದು. ॥ ೩೮೮ ॥

೧೨೪೧

ಘಟದೊಳಗಿದ್ದ ಪದಾರ್ಥವು,
ಆ ಘಟವ ಹೊರಗೆ ಉರಿಯು ಪತ್ತಿಸಿದಲ್ಲದೆ ಪರಿಪಕ್ವವಾಗದು.
ಹಾಗೆ–ಅಂತರಂಗದಲಿರ್ದ ಚಿದ್ವಸ್ತು ಸಂಸ್ಕಾರಬಲದಿಂದ ಹೊರಹೊರಟಲ್ಲದೆ,
ಅಂತರಂಗದಲಿರ್ದ ಭವರೋಗ ಮಾಣದು.
ಇದುಕಾರಣ, ಕೂಡಲಚೆನ್ನಸಂಗಮದೇವಾ
ಅರ್ಚನ ಅರ್ಪಣ ಅನುಭಾವಾದಿಗಳಿಂದ ನೀವು ಪ್ರಕಟಗೊಳ್ಳುವಿರಾಗಿ. ॥ ೩೮೯ ॥

೧೨೪೨

ಘಟನಾಘಟನಸಮರ್ಥನಪ್ಪ ಶ್ರೀಗುರುವಿನ ಪ್ರಸಾದದಿಂದಲ್ಲದೆ,
ಮಾಯೆಗೆ ಮರುಳಾದ ನರಜೀವಿಗಳ
ಬಹಿರಂಗದ ಬರಿಯಸಂಸ್ಕಾರ ಮಾತ್ರದಿಂದ ಭವಿ ಭಕ್ತನಪ್ಪನೆ?
ಸೊಡ್ಡಳದೇವನ ಶುಭವಪ್ಪ ನೋಟದಿಂದ

ಇಟ್ಟಿಯ ಪಣ್ಣುಗಳು ಸಿಹಿಯಾದುವಲ್ಲದೆ,
ಲೋಕದ ಕಾಕುಮಾನವರ ನೋಟಮಾಟದಿಂದ ಸಿಹಿಯಾದುವೆ?
ಅದು ಕಾರಣ– ಅಂತಪ್ಪ ಸಾಮರ್ಥ್ಯವಿಲ್ಲದೆ
ಕಡುಪಾತಕಿಗಳ ಹಿಡಿದು ತಂದು, ಲಿಂಗವ ಕೊಡಲು
ಕಡೆತನಕ ಭವಿಗಳಾಗಿರ್ಪರಲ್ಲದೆ ಭಕ್ತರಾಗಲರಿಯರಯ್ಯಾ
ಕೂಡಲಚೆನ್ನಸಂಗಯ್ಯಾ. || ೩೯೦ ||

೧೨೪೩

ಘಟಾಕಾಶ ಮಠಾಕಾಶ ದಿಗಾಕಾಶ ಬಿಂದ್ವಾಕಾಶ
ಭಿನ್ನಾಕಾಶ ಮಹದಾಕಾಶವೆಂಬ
ಆಕಾಶಕೊಂಬತ್ತು ಬಾಗಿಲು.
ಹೊಗಲಿಕಸಾಧ್ಯ ಹೊರಹೊಂಡಲಿಕಸಾಧ್ಯ.
ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ ಸಾಧ್ಯವಲ್ಲದೆ
ಉಳಿದವರಿಗಸಾಧ್ಯವು. || ೩೯೧ ||

೧೨೪೪

ಚಂದ್ರಶಿಲೆಯಲ್ಲಿ ಪಾವಕ ಹುಟ್ಟಿ, ಈಡಾ ಪಿಂಗಳ ಮಧ್ಯದಲ್ಲಿ ಅನಿಲ ತುಂಬಿ,
ಅರಿವರಿದು! ನಿಮ್ಮ ನೆನೆವ ಪರಿಕರ ಹೊಸತು!
ಅರಿವಡೆ ತಲೆಯಿಲ್ಲ, ಹಿಡಿವಡೆ ಮುಡಿಯಿಲ್ಲ!
ಕೂಡಲಚೆನ್ನಸಂಗಮದೇವಾ
ನಿಮ್ಮ ಶರಣನ ಪರಿಯಿಂತುಟು: ಅರಿದರಿದು! || ೩೯೨ ||

೧೨೪೫

ಚಾಂಡಾಲಭಾಂಡದಲ್ಲಿ ಭಾಗೀರಥೀಯುದಕವ ತುಂಬಿದಡೇನೊ
ಶುದ್ಧವಾಗಬಲ್ಲುದೆ?
ಪಾಪಿ ಗುರುಮುಖವಾದಡೇನೊ
ಲಿಂಗವನರಿಯಬಲ್ಲನೆ?
ಇದು ಕಾರಣ– ಕೂಡಲಚೆನ್ನಸಂಗಮದೇವಾ
ಕೂಡೆ ಮಜ್ಜನಕ್ಕೆರೆವರೆಲ್ಲ ಭಕ್ತರಾಗಬಲ್ಲರೆ? || ೩೯೩ ||

೧೨೪೬

ಚಿದ್ಘನ ಚಿತ್ಪ್ರಕಾಶ ಚಿದಾನಂದ ಲಿಂಗವೆ,
ಎನ್ನ ಹೃದಯಕಮಲವ ಬೆಳಗುವ ಪರಂಜ್ಯೋತಿ ಲಿಂಗವೆ,
ಎನ್ನ ಕರಸ್ಥಲಕ್ಕನುವಾದ ಲಿಂಗವೆ,
ಎನ್ನ ಕಂಗಳ ಕೊನೆಯಲ್ಲಿ ಮೂರ್ತಿಯಪ್ಪೆಯಯ್ಯಾ ಧರ್ಮಿ
ಕೂಡಲಚೆನ್ನ ಸಂಗಮದೇವಾ. || ೩೯೪ ||

೧೨೪೭

ಚೆನ್ನಸಂಗಾ, ನಿಮ್ಮಲ್ಲಿ ಬಯಸಿ ಬೇಡುವಡೆ,
ಬಸವನಂತಪ್ಪ ನಿಧಾನ ದೊರಕಿತ್ತೆನಗೆ.
ಚೆನ್ನಸಂಗಾ, ನಿಮ್ಮಲ್ಲಿ ಬಯಸಿ ಬೇಡುವಡೆ,
ಬಸವನಂತಪ್ಪ ಪರುಷ ದೊರಕಿತ್ತೆನಗೆ.
ಚೆನ್ನಸಂಗಾ, ನಿಮ್ಮಲ್ಲಿ ಬಯಸಿ ಬೇಡುವಡೆ,
ಬಸವನಂತಪ್ಪ ಕಾಮಧೇನು ದೊರಕಿತ್ತೆನಗೆ.
ಚೆನ್ನಸಂಗಾ, ನಿಮ್ಮಲ್ಲಿ ಬಯಸಿ ಬೇಡುವಡೆ,
ಬಸವನಂತಪ್ಪ ಸುರತರು ದೊರಕಿತ್ತೆನಗೆ.
ಚೆನ್ನಸಂಗಾ, ನಿಮ್ಮಲ್ಲಿ ಬಯಸಿ ಬೇಡುವಡೆ,
ತ್ರಿವಿಧ ತ್ರಿವಿಧ[ದ] ಮೊದಲನೆ ತೋರಿದ ಬಸವಣ್ಣನೆನಗೆ.
ಚೆನ್ನಸಂಗಾ, ನಿಮ್ಮಲ್ಲಿ ಬಯಸಿ ಬೇಡುವಡೆ,
ಬಸವಣ್ಣನಿಂದ ನೀವಾದಿರಾಗಿ, ಕೂಡಲಚೆನ್ನಸಂಗಯ್ಯನಲ್ಲಿ
ಪ್ರಸಾದಿಯು ಪ್ರಸಾದಿಯಾದೆನು. || ೩೯೫ ||

೧೨೪೮

ಜಂಗಮ ಘನವೆಂಬೆನೆ? ಬೇಡಿ ಕಿರಿದಾಯಿತ್ತು.
ಲಿಂಗ ಘನವೆಂಬೆನೆ? ಕಲುಕುಟಿಗರ ಕೈಯ ಮಾಡಿಸಿಕೊಂಡು ಕಿರಿದಾಯಿತ್ತು.
ಭಕ್ತ ಘನವೆಂಬೆನೆ? ತನುಮನಧನ ವಂಚನೆಯಿಂದ ಕಿರಿದಾಯಿತ್ತು.
ಇಂತೀ ತ್ರಿವಿಧ ನಿಷ್ಪತ್ತಿಯಾಗದನ್ನಕ್ಕರ
ಕೂಡಲಚೆನ್ನಸಂಗಮದೇವನೆಂತೊಲಿವನೊ? || ೩೯೬ ||

೧೨೪೯

ಜಂಗಮ ಜಂಗಮವೆಂದರೆ ಬಾಯಿಲೆಕ್ಕವೆ ಜಂಗಮ?
ಜಂಗಮ ಜಂಗಮವೆಂದರೆ ಉಪಾಧಿಕನೆ ಜಂಗಮ?

ಜಂಗಮ ಜಂಗಮವೆಂದೇನೊ ಬೋಧಕನೆ ಜಂಗಮ?
ಜಂಗಮ ಜಂಗಮವೆಂದೇನೊ ಆಶ್ರಿತನೆ ಜಂಗಮ?
ಜಂಗಮ ಜಂಗಮವೆಂದೇನೊ ಕಾರ್ಯಕಾರಣನೆ ಜಂಗಮ?
ಜಂಗಮ ಜಂಗಮವೆಂದೇನೊ ಸ್ತ್ರೀಲಂಪಟನೆ ಜಂಗಮ?
ಈ ಷಡುಗ್ಣದಿಚ್ಛುಕರ ಜಂಗಮವೆಂಬೆನೆ? ಎನ್ನೆನು.
ಈ ಪಾತಕದ ನುಡಿಯ ಕೇಳಲಾಗದು.
ಜಂಗಮವೆಂತಹನೆಂದರೆ:
ನಿರವಯ ಜಂಗಮ, ನಿರುಪಾಧಿಕ ಜಂಗಮ
ನಿರ್ಬೋಧಕ ಜಂಗಮ, ನಿರಾಶ್ರಿತ ಜಂಗಮ
ನಿಃಕಾರಣ ಜಂಗಮ, ನಿರ್ಲಂಪಟ ಜಂಗಮ–
ಇಂತಪ್ಪುದೆ ಕಾರಣವಾಗಿ ಪ್ರಭುದೇವರಿಗೆ ಶರಣೆಂದು
ಬದುಕಿದ ಬಸವಣ್ಣ.
ಅವರಿಬ್ಬರ ಒಕ್ಕುದ ಕೊಂಡು, ನಾನು ಬದುಕಿದೆನು ಕಾಣಾ
ಕೂಡಲಚೆನ್ನಸಂಗಮದೇವಾ. || ೩೯೭ ||

೧೨೫೦

ಜಂಗಮದ ಪಾದತೀರ್ಥ ಪ್ರಸಾದವ
ಲಿಂಗಕ್ಕೆ ಕೊಟ್ಟು ಕೊಳಬಾರದು ಎಂಬಾತನು ಲಿಂಗದ್ರೋಹಿ,
ಜಂಗಮದ್ರೋಹಿ, ಪಾದೋದಕ ಪ್ರಸಾದದ್ರೋಹಿಯಾದ
ಚಾಂಡಾಲರ ಮುಖವ ನೋಡಲಾಗದು.
ನೋಡಿದಡೆ ನಾಯಕನರಕ ತಪ್ಪದು
ಕೂಡಲಚೆನ್ನಸಂಗಮದೇವಾ. || ೩೯೮ ||

೧೨೫೧

ಜಂಗಮ ನಾನೆಂಬ ಅಗ್ಗಳೆಯಿನ್ನೆಂತೊ?
ಜಂಗಮ ತಾನಾದಡೆ ಲಿಂಗ ತನ್ನ ಬೆಸಮಗನಾಗಿರಬೇಕು.
ಇಂತಿರ್ದುದು ಉಭಯಾರ್ಥವು.
ಅದೆಂತೆಂದಡೆ:
ಆಚಾರಶ್ಚಾಪ್ಯನಾಚಾರೋ ಸೀಮೋ ನಿಸ್ಸೀಮ ಏವ ಚ|
ಆಗಮೋಽನಾಗಮೋ ನಾಸ್ತಿ ಸಹಿ ಜಂಗಮ ಉಚ್ಯತೇ|| ಎಂದುದಾಗಿ,
ಕೂಡಲಚೆನ್ನಸಂಗಯ್ಯಾ, ಆ ಲಿಂಗ–ಜಂಗಮವಪೂರ್ವ. || [illegible] ||

೧೨೫೨

ಜಂಗಮ ಪ್ರಸಾದದಿಂದ ಲಿಂಗಕ್ಕೆ ಚೈತನ್ಯಸ್ವರೂಪವೆಂದರಿದು,
ಪಾದೋದಕದಿಂದ ಲಿಂಗಕ್ಕೆ ಮಜ್ಜನವೆಂದರಿದು,
ಜಂಗಮ ಪ್ರಸಾದವೆ ಲಿಂಗಕ್ಕೆ ಅರ್ಪಿತವಾಗಿ,
ಲಿಂಗದಿಂದ ನೋಡುತ್ತ, ಕೇಳುತ್ತ, ರುಚಿಸುತ್ತ,
ಮುಟ್ಟುತ್ತ, ವಾಸಿಸುತ್ತ, ಕೂಡುತ್ತ, ಅಹಂ ಮಮತೆಗೆಟ್ಟು,
ಸಂದು ಸಂಸಯುವರತು, ಹಿಂದ ಮುಂದ ಹಾರದಿಪ್ಪುದೇ ನಿಜವೀರಶೈವ.
ಇಂತಲ್ಲದೆ ಉಳಿದುದೆಲ್ಲವು ಇತರ ಶೈವ ಕಾಣಾ
ಕೂಡಲಚೆನ್ನಸಂಗಮದೇವಾ. ॥ ೪೦೦ ॥

೧೨೫೩

ಜಂಗಮಪ್ರಸಾದವ ಲಿಂಗಕ್ಕೆ ಸಲಿಸಬಾರದೆಂಬ ಮಾತ ಕೇಳಲಾಗದು.
ಪ್ರಸಾದವೆ ಲಿಂಗ, ಆ ಲಿಂಗವೆ ಅಂಗ;
ಆ ಜಂಗಮವೆ ಚೈತನ್ಯ, ಆ ಚೈತನ್ಯವೆ ಪ್ರಸಾದ.
ಇಂತೀ ಉಭಯದ ಭೇದವನರಿಯರು ನೋಡಾ!
ಜಿಹ್ವೆಯಲ್ಲಿ ಉಂಡ ರಸ ಸರ್ವೇಂದ್ರಿಯಕ್ಕೆ ಬೇರೆಯಾಗಬಲ್ಲುದೆ?
ಪ್ರಾಣಲಿಂಗದಲ್ಲಿ ಸವಿದು ಭಾವಲಿಂಗದಲ್ಲಿ ತೃಪ್ತಿಯಾದ ಬಳಿಕ
ಇಷ್ಟಲಿಂಗಕ್ಕೆ ಭಿನ್ನವುಂಟೆ?
ಇದನರಿದು ಅರ್ಪಿಸಿ ಸುಖಿಸಲೊಲ್ಲರು.
ದೇಹಭಾವದಲ್ಲಿ ಕೊಂಬುದು ಅನರ್ಪಿತವೆಂದರಿಯರು.
ಲಿಂಗಕ್ಕೂ ಭಕ್ತಂಗೂ ಭೇದವಿಲ್ಲೆಂಬುದನರಿಯಲರಿಯರು.
ಜಂಗಮಮುಖದಿಂದೊಗೆದುದು ಪ್ರಸನ್ನಪ್ರಸಾದವೆಂದರಿಯರು.
ಸರ್ವೇಂದ್ರಿಯ ಮುಖದ್ವಾರೇ ಸದಾಸನ್ನಿಹಿತಃ ಶಿವಃ।
ಪ್ರಾಣೇ ಲಿಂಗಸ್ಥಿತಿಂ ಮತ್ವಾಯೋ ಭುಂಕ್ತೇ ಲಿಂಗವರ್ಜಿತಃ॥
ಸಃ ಸ್ವಮಾಂಸಂ ಸ್ವರುಧಿರಂ ಸ್ವಮಲಂ ಭಕ್ಷಯತ್ಯಹೋ।
ತಸ್ಮಾಲ್ಲಿಂಗ ಪ್ರಸಾದಂ ಚ ನಿರ್ಮಾಲ್ಯಂ ತಜ್ಜಲಂ ತಥಾ
ನೈವೇದ್ಯಂ ಚರಲಿಂಗಸ್ಯ ಶೃಣು ಷಣ್ಮುಖ ಸರ್ವದಾ।
ಇದು ಕಾರಣ,
ಪ್ರಸಾದವೆ ಇಷ್ಟ ಪ್ರಾಣ ಭಾವವಾಗಿ ನಿಂದುದನರಿಯರು.
ಇಂತೀ ಮರ್ಮವ ನಮ್ಮ ಬಸವಣ್ಣ ಬಲ್ಲ.
ಇದನೆಲ್ಲರಿಗೆ ತೋರಿ, ಲಕ್ಷದ ಮೇಲೆ ತೊಂಬತ್ತಾರುಸಾವಿರ ಜಂಗಮದ
ಒಕ್ಕುದನೆತ್ತಿಕೊಂಬ; ಅಚ್ಚಪ್ರಸಾದವ ಲಿಂಗಕ್ಕಿತ್ತುಕೊಂಬ.

ಪ್ರಸಾದಿಗಳು ಮೂವತ್ತಿರ್ಛಾಸಿರದೊಳಗೆ ತಾನೊಬ್ಬನಾಗಿ ಸುಖಿಸುವುದ
ನಾನು ಬಲ್ಲೆನಾಗಿ, ಸಂದೇಹವಳಿದು ಬದುಕಿದೆನಯ್ಯಾ
ಕೂಡಲಚೆನ್ನಸಂಗಮದೇವಾ. ॥ ೪೦೧ ॥

೧೨೫೪

ಜಂಗಮಪಾದವು ಪರಮಪವಿತ್ರವಾಗಿರ್ಪುದಯ್ಯಾ,
ಜಂಗಮಪಾದವು ಜಗದ್ಭರಿತವಾಗಿರ್ಪುದಯ್ಯಾ,
ಜಂಗಮಪಾದವು ಆದಿಯಿಂದತ್ತತ್ತಲಾಗಿರ್ಪುದಯ್ಯಾ,
'ಚರಣಂ ಪವಿತ್ರಂ ವಿತತಂ ಪುರಾಣಂ' ಎಂದುದಾಗಿ,
ಜಂಗಮದ ಶ್ರೀಪಾದವ ಭಕ್ತಿಯಿಂದ ಪಿಡಿದ ಸದ್ಭಕ್ತನು
ದುರಿತಾಂಬುಧಿಯಿಂದ ದೂರವಾಗಿರ್ಪನಯ್ಯಾ
ಕೂಡಲಚೆನ್ನಸಂಗಮದೇವಾ. ॥ ೪೦೨ ॥

೧೨೫೫

ಜಂಗಮಭಕ್ತನು ಗಂಡನುಳ್ಳ ಸಜ್ಜನಸತಿಯಂತಿರಬೇಕು:
ಹೊಯ್ದಡೆ ಬಯ್ದಡೆ ಜರಿದಡೆ ಕೋಪಿಸಿದಡೆ ನಿಂದಿಸಿದಡೆ
ಅಳಲಿಸಿದಡೆ ಬಳಲಿಸಿದಡೆ ಹುರುಡಿಸಿದಡೆ,
ಇಂತಿವು ಮೊದಲಾಗಿ ಏನೊಂದ ಮಾಡಿದಡೆಯೂ
ಮನದಲ್ಲಿ ಮುರುಗಿದಡೆ ಇದಿರುತ್ತರವ ಕೊಟ್ಟಡೆ
ಆ ಸಜ್ಜನಸತಿಯ ಗುಣಕ್ಕೆ ಕೊರತೆಯಹುದು.
ಆ ಪುರುಷನೆ ದೈವವೆಂದರಿವುದು,
ಅವನ ಗುಣವ ನೋಡದೆ, ತನ್ನ ಗುಣವ ಬಿಡದೆ ಇದ್ದಡೆ
ಪತಿವ್ರತೆ ಎನಿಸುವಳು, ಮೇಲೆ ಮುಕ್ತಿಯಪ್ಪುದು.
ಈ ಪತಿವ್ರತೆಯಂತೆ ಜಂಗಮದಾಸೋಹವ ಮಾಡುವ ಭಕ್ತರು
ಜಂಗಮ ಮಾಡಿದಂತೆ ಮಾಡಿಸಿಕೊಂಬುದು, ನಿರುತ್ತರವಲ್ಲಿಪ್ಪುದು.
ಓಂಗಿರವೆ, ಜಂಗಮಕ್ಕೆ ಇದಿರುತ್ತರವ ಕೊಟ್ಟಡೆ,
ಅವರಿಗೆ ಮಾಡುವ ಭಕ್ತಿಯ ಸಾಮಾನ್ಯವ ಮಾಡಿದಡೆ
ತಾ ಹಿಂದೆ ಮಾಡಿದ ಭಕ್ತಿಯೆಲ್ಲ ಬೆಂದುಹೋಗಿ
ಮುಂದೆ ನರಕಕ್ಕೆ ಗುರಿಯಹುದು ತಪ್ಪದು ಕಾಣಾ
ಕೂಡಲಚೆನ್ನಸಂಗಮದೇವಾ. ॥ ೪೦೩ ॥

೧೨೫೬

ಜಂಗಮಭಕ್ತನು, ಚಿನ್ನದಂತೆ ಕಬ್ಬಿನಂತೆ ಶ್ರೀಗಂಧದಂತೆ ಇರಬೇಕು.
ಅದು ಹೇಂಗೆ?
ಆ ಚಿನ್ನವ ಕಾಸಿದಡೆ ಕರಗಿಸಿದಡೆ ಕಡಿದಡೆ ನಿಗುಚಿದಡೆ
ಬಣ್ಣ ಅಧಿಕವಲ್ಲದೆ ಕಿರಿದಾಗದು, ಇವರು ನನ್ನನೇಕೆ ಘಾಸಿ ಮಾಡಿದರೆನ್ನದು.
ಆ ಕಬ್ಬು ಕಡಿದಡೆ ಖಂಡಿಸಿದಡೆ ಗಾಣದಲಿಕ್ಕಿ ಹಿಂಡಿ, ಹಿಳಿದು,
ಬಂದ ರಸವನಟ್ಟಡೆ,
ನಾನಾ ಪ್ರಕಾರದಲ್ಲಿ ಸಾಯಸಗೊಳಿಸಿದಡೆಯೂ
ಮಿಗೆ ಮಿಗೆ ಮಧುರವಾಗಿಪ್ಪುದಲ್ಲದೆ ವಿಷವಾಗದು,
ನನ್ನನೇಕೆ ನೋಯಿಸಿದರೆಂದೆನ್ನದು.
ಆ ಶ್ರೀಗಂಧವು ಕೊರೆದಡೆ ತೇದಡೆ ಹೂಸಿದಡೆ ಬೆಂಕಿಯೊಳಗೆ ಹಾಯಿಕಿದಡೆ
ಪರಿಮಳ ಘನವಾಯಿತ್ತಲ್ಲದೆ ದುರ್ಗಂಧವಾಗದು, ತನ್ನಲ್ಲಿ ದುಃಖಿಗೊಳ್ಳದು.
ಈ ತ್ರಿವಿಧದ ಗುಣದ ಪರಿಯಲ್ಲಿ;
ಭಕ್ತನು ತನ್ನ ಸುಗುಣವ ಬಿಡದ ಕಾರಣ
ಸದ್ಭಕ್ತನಹ ಮಾಹೇಶ್ವರನಹ ಪ್ರಸಾದಿಯಹ
ಪ್ರಾಣಲಿಂಗಿಯಹ ಶರಣನಹ ಐಕ್ಯನಹ.
ಇಂತು ಷಟ್‌ಸ್ಥಲದಲ್ಲಿ ಸಂಪನ್ನನಹಡೆ
ಇಂತಪ್ಪ ಜಂಗಮಭಕ್ತಿಯೆ ಮೂಲವಯ್ಯಾ
ಕೂಡಲಚೆನ್ನಸಂಗಮದೇವಾ. || ೪೦೪ ||

೧೨೫೭

ಜಂಗಮಮುಖದಲು ಲಿಂಗ ಸರ್ವಾಂಗವಾಯಿತ್ತಾಗಿ
ಆರೋಗಿಸಿ ಕೊಡುವುದು ನೋಡಾ!
ಜಂಗಮದಾಪ್ಯಾಯನವೆ ಲಿಂಗದಾಪ್ಯಾಯನ ನೋಡಾ!
ಜಂಗಮತೃಪ್ತಿಯೆ ಲಿಂಗತೃಪ್ತಿನೋಡಾ!
ಜಂಗಮವಾರೋಗಿಸಿ ಡರ್‍ರನೆ ತೇಗಿದಡೆ
ಅಂಗೈಯಲೆರಗುವುದು [ಮುಕ್ತಿ] ನೋಡಾ!
ಜಂಗಮಮುಖದಲು ತೃಪ್ತನಾದನೆಂದು
'ಬಾರಯ್ಯಾ ಬಸವ' ಎಂದು ಕೈವಿಡಿದು, ತೆಗೆವಪ್ಪಿ ಮುದ್ದಾಡಿ,
ತಕ್ಕೈಸಿಕೊಂಡು, ನಿನ್ನ ಹೊರಗಿರಿಸಲಾರೆನೆಂದು

ತನ್ನ ಹೃದಯಕಮಲದಲ್ಲಿ ಇಂಬಿಟ್ಟುಕೊಂಡ
ಕೂಡಲಚೆನ್ನಸಂಗಯ್ಯಂಗೆ ಬಸವ ಪ್ರಾಣಲಿಂಗವಾದ. ॥ ೪೦೫ ॥

೧೨೫೮

ಜಂಗಮಲಿಂಗಮೋಹಿತನಾದಡೆ ತನ್ನ ಕುಲಗೋತ್ರಮೋಹವ ಮರೆಯಬೇಕು.
ಜಂಗಮಲಿಂಗಭಕ್ತನಾದಡೆ ಪೂರ್ವಕುಲವ ಬೆರಸಲಾಗದು.
ಜಂಗಮಲಿಂಗಪೂಜಕನಾದಡೆ ಮಾನವರನು ಉಪಾಧಾವಿಸಲಾಗದು.
ಜಂಗಮಲಿಂಗವೀರನಾದಡೆ ಅರ್ಥವ ಕಟ್ಟಲಾಗದು.
ಜಂಗಮಲಿಂಗಪ್ರಸಾದಿಯಾದಡೆ ಬೇಡಿದಡೆ ಇಲ್ಲೆನ್ನಲಾಗದು.
ಜಂಗಮಲಿಂಗಪ್ರಾಣಿಯಾದಡೆ ಲಾಂಛನದ ನಿಂದೆಯ ಕೇಳಲಾಗದು.
ಇದು ಕಾರಣ–ಕೂಡಲಚೆನ್ನಸಂಗಯ್ಯನಲ್ಲಿ
ಈ ಆರು ಸಹಿತ ಜಂಗಮಲಿಂಗಭಕ್ತಿ. ॥ ೪೦೬ ॥

೧೨೫೯

ಜಂಗಮ ಲಿಂಗವೆಂದು ಪಾದಪ್ರಕ್ಷಾಲನವ ಮಾಡುವದು.
ಅದೆಂತೆಂದೊಡೆ:
ತಾ ಭಾವಿಸಲು ತೀರ್ಥವಾಯಿತ್ತು!
ಆ ಭಾವವಂ ಬಿಟ್ಟಡದು ನೀರೆನಿಸುವದು.
ಅದು ಸಕಲ ಮಹೇಶ್ವರರಿಗೂ ಸನುಮತಶೀಲ,
ತಪ್ಪಿದಡೆ ಪ್ರಾಣತ್ಯಾಗವ ಮಾಡುವುದಯ್ಯಾ.
ಆ ಸಮಯದಲ್ಲಿ ಲಿಂಗವಿದ್ದರೆ,
ಅದೇ ತೀರ್ಥವನರ್ಪಿಸಿ ಸಲಿಸುವುದು.
ಬೇರೆ ತೀರ್ಥವಂ ಪಡೆದುಕೊಳಲಾಗದು,
ಕೂಡಲಚೆನ್ನಸಂಗಯ್ಯಾ ನಿಮ್ಮಾಣೆ. ॥ ೪೦೭ ॥

೧೨೬೦

ಜಂಗಮವ ಜರಿದು, ಲಿಂಗವ ಮ(ರೆದು) ಅಂಗಹೀನನಾದ ಬಳಿಕ
ಸಂಗಸಂಯೋಗ ಎಲ್ಲಿಯದೋ ಅಯ್ಯಾ?
(ಜಂಗ)ಮಮೋಹಿ ಜರಿಯಬಲ್ಲನೆ?
ಲಿಂಗಮೋಹಿ ಮರೆಯಬಲ್ಲನೆ?
ಜಾತಿಕಾರ ಭಂಡರ ಮೆಚ್ಚುವನೆ
ನಮ್ಮ ಜಾತ ಅಜಾತ ಕೂಡಲಚೆನ್ನಸಂಗಮದೇವಯ್ಯ. ॥ ೪೦೮ ॥

೧೨೬೧

ಜಂಗಮವೆಂದು ಪಾದಪ್ರಕ್ಷಾಲನವ ಮಾಡಿ
ಉನ್ನತಾಸನದಲ್ಲಿ ಮೂರ್ತಮಾಡಿಸಿ
ವಿಶ್ವಾಸದಿಂದ ಪಾದತೀರ್ಥವ ಪಡಕೊಂಡು -
ಆ ಸಮಯದಲ್ಲಿ ಆ ಜಂಗಮದೇವರ ಸೆಜ್ಜೆಯಲ್ಲಿ ಲಿಂಗವಿಲ್ಲದಿರಲು
ಆ ತೀರ್ಥವ ಬಿಡಲಾಗದು. ಅದೆಂತೆಂದಡೆ:
ತಾ ಭಾವಿಸಲು ತೀರ್ಥವಾಯಿತ್ತು,
ಆ ಭಾವವ ಬಿಟ್ಟಡೆ ಅದು ನೀರೆನಿಸಿತ್ತು.
ಇದು ಸಕಲಮಾಹೇಶ್ವರರಿಗೂ ಸನ್ಮತ.
ಶೀಲವ್ರತಿಗಳಾದಡೆ, ಪಾದೋದಕ ತ್ಯಾಗವ ಮಾಡುವುದಯ್ಯಾ.
ಅದೆಂತೆಂದಡೆ:
ಪ್ರಕ್ಷಾಲಿತಂ ಚ ಪದಾಂಬು ಜಂಗಮೋ ಲಿಂಗವರ್ಜಿತಃ।
ಪಾದೋದಕಂ ತ್ಯಜೇತ್ ಜ್ಞಾನೀ ಇದಂ ಮಾಹೇಶ ಸಮ್ಮತಂ॥
ಆ ಸಮಯದಲ್ಲಿ ಲಿಂಗವಿದ್ದಡೆ, ಆ ತೀರ್ಥವ ಅರ್ಪಿಸಿ ಸಲಿಸುವುದು.
ಬೇರೆ ತೀರ್ಥವ ಪಡಕೊಳಲಾಗದು, ಕೂಡಲಸಂಗಯ್ಯಾ ನಿಮ್ಮಾಣೆ. ॥ ೪೧೯ ॥

೧೨೬೨

ಜಂಗಮವೆ ಪರವೆಂದರಿದಡೇನು, ಆ ಜಂಗಮದಂಗವಲ್ಲವೆ ಲಿಂಗ?
ಆ ಲಿಂಗಚೈತನ್ಯದರಿವೆಲ್ಲವು ಜಂಗಮವಲ್ಲವೆ?
ಅಂಗವಿಲ್ಲದ ಜೀವಕ್ಕೆ, ಆತ್ಮನಿಲ್ಲದ ಅಂಗಕ್ಕೆ, ಸರ್ವಭೋಗದ ಸುಖವುಂಟೆ?
ಮಣ್ಣಿಲ್ಲದ ಮರನುಂಟೆ? ಮರನಿಲ್ಲದ ಹಣ್ಣುಂಟೆ? ಹಣ್ಣಿಲ್ಲದೆ ಸ್ವಾದವುಂಟೆ?
ಹೀಂಗರಿವುದಕ್ಕೆ ಕ್ರಮ:
ಅಂಗವೇ ಮಣ್ಣು, ಲಿಂಗವೇ ಮರನು, ಜಂಗಮವೇ ಫಲವು,
ಪ್ರಸಾದವೇ ರುಚಿಯು.
ಇದು ಕಾರಣ–ಕೂಡಲಚೆನ್ನಸಂಗಯ್ಯನಲ್ಲಿ
ಸಾಕಾರಲಿಂಗವೆ ಜಂಗಮದಂಗವಯ್ಯಾ ಪ್ರಭುವೆ. ॥ ೪೨೦ ॥

೧೨೬೩

ಜಂಗಮವೆ ಪ್ರಾಣವೆಂದರಿದ ಭಕ್ತಂಗೆ,
ಜಂಗಮಪ್ರಸಾದವಲ್ಲದೆ ಲಿಂಗಪ್ರಸಾದವ ಕೊಳಲಾಗದು.
ಜಂಗಮಪ್ರಸಾದ ಲಿಂಗಕ್ಕೆ ಸಲ್ಲದೆಂದು ಶಂಕಿಸಲಾಗದು.

ಅದೆಂತೆಂದಡೆ:
ಜಂಗಮಾದಿ ಗೂರೂಣಾಂ ಚ ಅನಾದಿ ಸ್ವಯಲಿಂಗವತ್ ।
ಆದಿಪ್ರಸಾದವಿರೋಧೇ ಇಷ್ಟೋಚ್ಛಿಷ್ಟಂತು ಕಿಲ್ಬಿಷಂ ॥ ಎಂದುದಾಗಿ,
ಪ್ರಾಣ ಭಾವದಲ್ಲಿ ಸಂಬಂಧವಾಗಿ ಇಷ್ಟಕ್ಕೂ ಸಂದಿತ್ತು.
ಈ ಭೇದವನರಿದು ಜಂಗಮಪ್ರಸಾದವಿಲ್ಲದ ಲಿಂಗಪ್ರಸಾದವ ಕೊಳಲಾಗದು
ಕೂಡಲಚೆನ್ನಸಂಗಮದೇವಾ. ॥ ೪೧೧ ॥

೧೨೬೪

ಜಂಗಮವೆ ಲಿಂಗ, ಲಿಂಗವೆ ಜಂಗಮವೆಂದು ತೋರಿ
ನಿಜಲಿಂಗೈಕ್ಯನಾದೆಯಲ್ಲಾ ನಿಜಗುರು ಬಸವಣ್ಣಾ.
ಪ್ರಸಾದವೆ ಕಾಯ, ಕಾಯವೆ ಪ್ರಸಾದವೆಂಬುದ
ಎನ್ನ ಸರ್ವಾಂಗದಲ್ಲಿ ಪ್ರತಿಷ್ಠಿಸಿ,
ಎನ್ನನಾಗುಮಾಡಿ ಮುಂದುವರಿದೆಯಲ್ಲಾ ಬಸವಣ್ಣಾ.
ನಿಜಲಿಂಗವ ಎನ್ನಂಗದಲ್ಲಿ ಸ್ಥಾಪಿಸಿ ಎನ್ನ ನಿನ್ನಂತೆಮಾಡಿ
ನಿಜಲಿಂಗದೊಳು ನಿರವಯವಾದೆಯಲ್ಲಾ ಬಸವಣ್ಣಾ.
ಎನ್ನ ಮನವ ಮಹದಲ್ಲಿ ಲಯಮಾಡಿ
ನಿರ್ವಯಲಾಗಿ ಹೋದೆಯಲ್ಲಾ ನಿಜಲಿಂಗೈಕ್ಯ ಬಸವಣ್ಣಾ.
ನಿಮ್ಮ ಒಕ್ಕುಮಿಕ್ಕಪ್ರಸಾದವನಿಕ್ಕಿ ನಿರಂತರದಲ್ಲಿ ಆಗುಮಾಡಿ
ನಾಗಾಯಪ್ಪೆಯನಿಂಬುಕೊಂಡೆಯಲ್ಲಾ, ಬಸವಣ್ಣಾ.
ಎನ್ನ ಮನ ನಿಮ್ಮ ಪಾದದಲ್ಲಿ ಕರಗಿತ್ತಯ್ಯಾ, ಬಸವಣ್ಣಾ.
ಕೂಡಲಚೆನ್ನಸಂಗಯ್ಯಂಗೆ ಸುಜ್ಞಾನವಾಹನವಾಗಬೇಕೆಂದು
ನಿರವಯವಾಗಿ ಹೋದೆಯಲ್ಲಾ ಸುಗನಬಸವಣ್ಣಾ. ॥ ೪೧೨ ॥

೧೨೬೫

ಜಗದ ಕರ್ತನ ಕೈಯಲ್ಲಿ ಹಿಡಿದುಕೊಂಡು ಬೇಡುವ
ತುಡುಗುಣಿಗಳ ಏನೆಂಬೆನಯ್ಯಾ?
ಬೇಡಲಾಗದು ಭಕ್ತನ, ಕಾಡಲಾಗದು ಭವಿಯ.
ಬೇಡಿ ಕಾಡಿ ಒಡಲ ಹೊರೆವನಾದರೆ,
ಬೇಟೆಯನಾಡಿದ ಮೊಲನನಟ್ಟು ಬಾಣಸವ ಮಾಡಿ
ನಾಯಿ ತಿಂದು ಮಿಕ್ಕುದ ತಾ ತಿಂದಂತೆ
ಕೂಡಲಚೆನ್ನಸಂಗಮದೇವಾ. ॥ ೪೧೩ ॥

೧೨೬೬

ಜಲನಿಧಿ ತಟಾಕದಲ್ಲಿ ಕನ್ನವನಿಕ್ಕಿ ಉದಕವ ತಂದು
ಮಜ್ಜನಕ್ಕೆರೆವರೆಲ್ಲ ಶೀಲವಂತರೆ?
ಭವಿಪಾಕವನೊಲ್ಲೆವೆಂದು ಭುಂಜಿಸುವ
ಉದರಪೋಷಕರೆಲ್ಲ ಶೀಲವಂತರೆ?
ಅವರಲ್ಲ, ನಿಲ್ಲು ಮಾಣು.
ಅಶನವರತು ವ್ಯಸನ ಬೆಂದು ವ್ಯಾಪ್ತಿಗಳು ಅಲ್ಲಿಯೆ ಲೀಯವಾಗಿ
ಅಷ್ಟಮದ ಬೆಂದು ನಷ್ಟವಾಗಿ, ತನುಗುಣ ಸಮಾಧಾನವಾದಡೆ
ಕೂಡಲಚೆನ್ನಸಂಗಯ್ಯನಲ್ಲಿ ಅಚ್ಚಶೀಲವೆಂಬೆ. ॥ ೪೧೪ ॥

೧೨೬೭

ಜಾಗ್ರಪ್ರಸಾದಿಗಳ ಪ್ರಸಾದಿಗಳೆಂದೆನ್ನೆ,
ಮುಂದೆ ಸ್ವಪ್ನಪ್ರಸಾದಿಗಳುಂಟಾಗಿ.
ಸ್ವಪ್ನಪ್ರಸಾದಿಗಳ ಪ್ರಸಾದಿಗಳೆಂದೆನ್ನೆ,
ಮುಂದೆ ಸುಷುಪ್ತಿಪ್ರಸಾದಿಗಳುಂಟಾಗಿ.
ಸುಷುಪ್ತಿಪ್ರಸಾದಿಗಳ ಪ್ರಸಾದಿಗಳೆಂದೆನ್ನೆ,
ಮುಂದೆ ಲಿಂಗಪ್ರಸಾದಿಗಳುಂಟಾಗಿ.
ಈ ಒಂದರಲ್ಲು ನಿಯತರಲ್ಲಾಗಿ
ನಾವು ಭಕ್ತರು, ನಾವು ಶರಣರು, ನಾವು ಹಿರಿಯರೆಂಬ
ಮಧುಭುಜಕರ ಮೆಚ್ಚುವನೆ, ನಮ್ಮ ಕೂಡಲಚೆನ್ನಸಂಗಮದೇವ? ॥ ೪೧೫ ॥

೧೨೬೮

ಜಾತಕರ್ಮ ಶುಭಕರ್ಮ ಪ್ರೇತಕರ್ಮವ
ಮಾಡುವರು ಲೋಕದ ಮನುಜರು.
ಅದೆಂತೆಂದಡೆ:
ಈರಿಲು, ಮೂವಟ್ಟಲು; ಹಸೆ–ಹಂದರ ತೊಂಡಿಲು ಬಾಸಿಂಗ;
ಹಣೆಯಕ್ಕಿ ಹೆಣನ ಸಿಂಗಾರ ಶ್ರಾದ್ಧಕೂಳು–
ಈ ಪರಿಯ ಮಾಡುವನೆ ಶಿವಭಕ್ತ? [ಅಲ್ಲ].
ಅದೆಂತೆಂದಡೆ:
ಹುಟ್ಟಿದ ಮಕ್ಕಳಿಗೆ ಲಿಂಗಧಾರಣೆ,
ನೆಟ್ಟನೆ ವಿವಾಹದಲ್ಲಿ ಶಿವಗಣಂಗಳ ಪ್ರಸಾದ,

ದೇವರಪಾದಕ್ಕೆ ಸಂದಲ್ಲಿ ಶಿವಭಕ್ತಂಗೆ ವಿಭೂತಿವೀಳೆಯಂಗೊಟ್ಟು
ಸಮಾಧಿಪೂರ್ಣನಂ ಮಾಡುವುದೆ ಶಿವಾಚಾರ.
ಲೋಕದ ಕರ್ಮವ ಮಾಡಿದಡೆ ಆತ ಭಕ್ತನಲ್ಲ,
ಲಿಂಗದೂರ ಅಘೋರನರಕಿಯಯ್ಯಾ, ಕೂಡಲಚೆನ್ನಸಂಗಮದೇವಾ. || ೪೧೬ ||

೧೨೬೯

ಜಾತಿವಿಡಿದು ಜಂಗಮವ ಮಾಡಬೇಕೆಂಬ ಪಾತಕರು ನೀವು ಕೇಳಿರೊ:
ಜಾತಿ ಘನವೊ ಗುರುದೀಕ್ಷೆ ಘನವೊ?
ಜಾತಿ ಘನವಾದ ಬಳಿಕ, ಆ ಜಾತಿಯೆ ಗುರುವಾಗಿರಬೇಕಲ್ಲದೆ
ಗುರುದೀಕ್ಷೆ ಪಡೆದು, ಗುರುಕರಜಾತರಾಗಿ
ಜಾತಕವ ಕಳೆದು ಪುನರ್ಜಾತರಾದೆವೆಂಬುದ ಏತಕ್ಕೆ ಬೊಗಳುವಿರೊ?
ಜಾತಿವಿಡಿದು ಕಳೆಯಿತ್ತೆ ಜಾತಿತಮವು? ಅಜಾತಂಗೆ ಆವುದು ಕುಲ?
ಆವ ಕುಲವಾದಡೇನು ದೇವನೊಲಿದಾತನೆ ಕುಲಜ.
ಅದೆಂತೆಂದಡೆ: ದೀಯತೇ ಜ್ಞಾನಸಂಬಂಧಃ ಕ್ಷೀಯತೇ ಚ ಮಲತ್ರಯಂ।
ದೀಯತೇ ಕ್ಷೀಯತೇ ಯೇನಾ ಸಾ ದೀಕ್ಷೇತಿ ನಿಗದ್ಯತೇ॥ ಎಂಬುದನರಿದು,
ಜಾತಿ ನಾಲ್ಕುವಿಡಿದು ಬಂದ ಜಂಗಮವೇ ಶ್ರೇಷ್ಠವೆಂದು
ಅವನೊಡಗೂಡಿಕೊಂಡು ನಡೆದು ಜಾತಿ ಎಂಜಲುಗಳ್ಳರಾಗಿ
ಉಳಿದ ಜಂಗಮವ ಕುಲವನೆತ್ತಿ ನುಡಿದು, ಅವನ ಅತಿಗಳೆದು
ಕುಲವೆಂಬ ಸರ್ಪಕಚ್ಚಿ, ಎಂಜಲೆಂಬ ಅಮೇಧ್ಯವ ಭುಂಜಿಸಿ
ಹಂದಿ-ನಾಯಂತೆ ಒಡಲ ಹೊರೆವ ದರುಶನಜಂಗುಳಿಗಳು
ಜಂಗಮಪಥಕ್ಕೆ ಸಲ್ಲರಾಗಿ.
ಅವರಿಗೆ ಗುರುವಿಲ್ಲ ಗುರುಪ್ರಸಾದವಿಲ್ಲ, ಲಿಂಗವಿಲ್ಲ ಲಿಂಗಪ್ರಸಾದವಿಲ್ಲ,
ಜಂಗಮವಿಲ್ಲ ಜಂಗಮಪ್ರಸಾದವಿಲ್ಲ.
ಇಂತೀ ತ್ರಿವಿಧಪ್ರಸಾದಕ್ಕೆ ಹೊರಗಾದ ನರಜೀವಿಗಳ
ಸ್ವಯ-ಚರ-ಪರವೆಂದಾರಾಧಿಸಿ ಪ್ರಸಾದವ ಕೊಳಸಲ್ಲದು ಕಾಣಾ
ಕೂಡಲಚೆನ್ನಸಂಗಮದೇವಾ. || ೪೧೭ ||

೧೨೭೦

ಜಿತಪ್ರಸಾದ ಸಮಾಕ್ಷವಾದುದ ಅಪುದ್ಧಿ ತರೆತ್ತ ಬಲ್ಲರು?
ಮಹಾಮುನಿಗಳೆತ್ತ ಬಲ್ಲರು?
ಅನೇಕ ಕಾಲ ಮಹಾಕ್ಷೇತ್ರದಲ್ಲಿ ನಿಜನಿವಾಸಿಯಾಗಿರ್ದನು, ನಮ್ಮ ಮಡಿವಳನು.
ಆ ಮಡಿವಳನ ಧ್ಯಾನದಲ್ಲಿ ಆರೂಢನಾಗಿರ್ದನು ನಮ್ಮ ಬಸವಣ್ಣನು.

ಆ ಬಸವಣ್ಣನು ಬಪ್ಪಲ್ಲಿ ಮೈಯೆಲ್ಲ ಕಣ್ಣಾಗಿ, ಉತ್ತಮಾಂಗವೆಲ್ಲ ಕಣ್ಣಾಗಿ,
ರೋಮ ರೋಮಾದಿಗಳೆಲ್ಲ ಕಣ್ಣಾಗಿ ಬಂದನಯ್ಯಾ,
ಆ ಬಸವಣ್ಣನ ಭಕ್ತಿಯ ಜಡವ ಹರಿಯ ಬಂದನಯ್ಯಾ
ನಮ್ಮ ಮಡಿವಾಳಯ್ಯನು.
ಇವರಿಬ್ಬರ ನಿತ್ಯಪ್ರಸಾದಿ ನಾನಾದೆನು, ಕೂಡಲಚೆನ್ನಸಂಗಮದೇವಾ. || ೪೧೮ ||

೧೨೭೧

ಜೀವನ ಪಾಪವ ಜೀವನಲ್ಲಿಯೇ ಕಳೆವುದು.
"ಜೀವಾತ್ಮ ಪರಮಾತ್ಮಾ ಚೇನ್ಮುಕ್ತಾನಾಂ ಪರಮಾಗತಿ।
ಅವ್ಯಯ ಪುರುಷಃ ಸರ್ವಕ್ಷೇತ್ರಜ್ಞೋಽಕ್ಷಯಾ ಏವ ಚ॥"
ಎಂಬುದಾಗಿ ಕೂಡಲಚೆನ್ನಸಂಗಯ್ಯ,
ನಿಮ್ಮ ಶರಣನ ಕಾಯವು ಸುಕ್ಷೇತ್ರವೆಂದೆನಿಸುವುದು. || ೪೧೯ ||

೧೨೭೨

ಜ್ಞಾನ ಉಪಾಸ್ಥೆ ಪಶುಜ್ಞಾನವ ಬಲ್ಲ ಮಾತ ನುಡಿಯಲಾಗದು,
ಉತ್ಪತ್ತಿ ಸ್ಥಿತಿ ಲಯವೆಂಬ ಕಾಲತ್ರಯದಲ್ಲಿ ಬೀಳದೆ,
ಜಾಗ್ರ ಸ್ವಪ್ನ ಸುಷುಪ್ತಿಯೆಂಬ ವ್ಯಾಪಾರತ್ರಯದ ಅನುಮಾನವರಿತು,
ಆಧ್ಯಾತ್ಮಿಕ ಆದಿಭೌತಿಕ ಆದಿದೈವಿಕವೆಂಬ ತಾಪತ್ರಯವಂ ಕೊಳಲಾಗದೆ,
ಅರ್ಥೇಷಣ ಪುತ್ರೇಷಣ ದಾರೇಷಣವೆಂಬ ಈಷಣತ್ರಯದ ಭ್ರಾಂತಿಯುಡಗಿ,
ಅಭಾವ ಸ್ವಭಾವ ನಿರ್ಭಾವದಲ್ಲಿ ಶುದ್ಧವಾಗಿ,
ದೀಕ್ಷೆ ಶಿಕ್ಷೆ ಸ್ವಾನುಭಾವವೆಂಬ ದೀಕ್ಷಾತ್ರಯದಲ್ಲಿ ಅನುಮಾನವನ್ನರಿತು,
ಇಷ್ಟಲಿಂಗ ಪ್ರಾಣಲಿಂಗ ತೃಪ್ತಿಲಿಂಗವೆಂಬ ಲಿಂಗತ್ರಯದ ಭೇದವಂ ಭೇದಿಸಿ,
ಶುದ್ಧ ಸಿದ್ಧ ಪ್ರಸಿದ್ಧವೆಂಬ ಪ್ರಸಾದತ್ರಯವಂ ಭೇದಿಸಿ,
ಸ್ವರ್ಗ ಮರ್ತ್ಯ ಪಾತಾಳವೆಂಬ ಲೋಕತ್ರಯವಸತಿಗಳದು,
ಇಹ ಪರ ಸ್ವಯವೆಂಬ ಮುಕ್ತಿತ್ರಯದ ಹಂಗು ಹಿಂಗಿ,
ಮಥನ ನಿರ್ಮಥನ ಸಮ್ಮಥನವೆಂಬ ಮಥನತ್ರಯದಲ್ಲಿ ನಿರತನಾಗಿ,
ರಾಜಸ ತಾಮಸ ಸಾತ್ವಿಕವೆಂಬ ಗುಣತ್ರಯದ ಹಮ್ಮ ಬಿಟ್ಟು,
ವಿಶ್ವ ತೈಜಸ ಪ್ರಾಜ್ಞವೆಂಬ ಜೀವತ್ರಯವನೊರಸಲೀಯದೆ,
ಆಣವ ಮಲ ಮಾಯಾಮಲ ಕಾರ್ಮಿಕಮಲವೆಂಬ
ಮಲತ್ರಯಂಗಳಂ ನಿರ್ಮಲವಂ ಮಾಡಿ,
ಗುರುನಿಂದೆ ಶಿವನಿಂದೆ ಭಕ್ತನಿಂದೆಯೆಂಬ ನಿಂದಾತ್ರಯಂಗಳಂ ಕೇಳದೆ,
ಚಂದ್ರ ಸೂರ್ಯ ಅಗ್ನಿ ಎಂಬ ನೇತ್ರತ್ರಯದ ಹೊಲಬನರಿದು,
ಪ್ರಾಹ್ಣ ಮಧ್ಯಾಹ್ನೆ ಅಪರಾಹ್ನವೆಂಬ ವೇಳಾತ್ರಯವಂ ಮೀರಿ,

ಉದರಾಗ್ನಿ ಶೋಕಾಗ್ನಿ ಕಾಮಾಗ್ನಿ ಎಂಬ ಅಗ್ನಿತ್ರಯಕ್ಕೆ ಇಂಬುಗೊಡದೆ,
ಅಧೋನಿರಾಳ ಮಧ್ಯನಿರಾಳ ಊರ್ಧ್ವನಿರಾಳವೆಂಬ ನಿರಾಳತ್ರಯದಲ್ಲಿ ನಿರತನಾಗಿ,
ಅನುಭಾವ ಮಹಾನುಭಾವ ಸ್ವಾನುಭಾವವೆಂಬ
ಅನುಭಾವತ್ರಯಂಗಳಲ್ಲಿ ಬೇಸರಹೊಂದದೆ,
ಬಾಲ್ಯ ಯೌವನ ವೃದ್ಧಾಪ್ಯವೆಂಬ ತನುತ್ರಯಂ ಮರೆದು,
ತನು ಮನ ಧನದಲ್ಲಿ ಶುದ್ಧನಾಗಿ,
ಆಗಮತ್ರಯದಲ್ಲಿ ಅನುವರಿತು, ಇಂತೀ ತ್ರಯ ಸಂಪಾದನೆಯಂ
ಮೀರಿದ ನಿಜಶರಣನೆ ಕೂಡಲಚೆನ್ನಸಂಗಯ್ಯನೆಂದರಿತು
ಸುಖಿಯಾದೆನು. || ೪೨೦ ||

೧೨೬೩

ಜ್ಞಾನಪಾದೋದಕದಲ್ಲಿ ಮೂರು ಸಂಬಂಧವಾಗುವವು, ಅದೆಂತೆಂದಡೆ:
ಮಹಾಂತನ ಪಾದವನ್ನು ಪಡೆದುಕೊಂಬಂತಹ ಭಕ್ತನು
ಆ ಮಹೇಶ್ವರನ ಉನ್ನತಾಸನದಲ್ಲಿ ಮೂರ್ತಗೊಳಿಸಿ
ಪಾದಪ್ರಕ್ಷಾಲನೆಯ ಮಾಡಿದ ನಂತರದಲ್ಲಿ
ದೀಕ್ಷಾಪಾದೋದಕವ ಮಾಡಿ, ಶುಭ್ರವಸ್ತ್ರದಿಂದ ದ್ರವವ ತೆಗೆದು
ಅಷ್ಟವಿಧಾರ್ಚನೆಯಿಂದ ಲಿಂಗಪೂಜೆಯ ಮಾಡಿಸಿ ಮರಳಿ ತಾನು
ಚೈತನ್ಯಂ ಶಾಶ್ವತಂ ಶಾಂತಂ ವ್ಯೋಮಾತೀತಂ ನಿರಂಜನಂ।
ನಾದ ಬಿಂದು ಕಲಾತೀತಂ ತಸ್ಮೈ ಶ್ರೀಗುರವೇ ನಮಃ॥
ಎಂದು ಅಷ್ಟಾಂಗಯುಕ್ತನಾಗಿ ವಂದನಂಗೈದು
ಪಾದಪೂಜೆಗೆ ಅಪ್ಪಣೆಯ ತೆಗೆದುಕೊಂಡು,
ಅವರ ಸಮ್ಮುಖದಲ್ಲಿ ಗದ್ದುಗೆಯ ಹಾಕಿಕೊಂಡು,
ಅದರ ಮೇಲೆ ಮೂರ್ತವ ಮಾಡಿಕೊಂಡು, ತನ್ನ ಲಿಂಗವ ನಿರೀಕ್ಷಿಸಿ,
ವಾಮಹಸ್ತದಲ್ಲಿ ನಿರಂಜನ ಪ್ರಣವವ ಲಿಖಿಸಿ ಪೂಜೆಯ ಮಾಡಿ,
ಆಮೇಲೆ ಜಂಗಮದ ಪಾದವ ಹಿಡಿದು ಪೂಜೆಯ ಮಾಡಿ ಆ ಪೂಜೆಯನಿಳುಹಿ,
ಅದೇ ಉದಕದ ಪಾತ್ರೆಯಲ್ಲಿ ಶಿಕ್ಷಾಪಾದೋದಕವ ಮಾಡಿ,
ಪಾದದ್ರವವ ತೆಗೆದು ಐದಂಗುಲಿಗಳಲ್ಲಿ ಪಂಚಾಕ್ಷರವ ಲೇಪಿಸವ ಮಾಡಿ,
ಮಧ್ಯದಲ್ಲಿ ಮೂಲಪ್ರಣವವ ಬರೆದು,
ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಪೂಜೆಯ ಮಾಡಬೇಕು.

ಶಿವಧರ್ಮೋತ್ತರೇ:
ಲಿಂಗಾರ್ಪಿತಪ್ರಸಾದಂ ಚ ನ ದದ್ಯಾಚ್ಚರಲಿಂಗಕೇ।
ಚರಾರ್ಪಿತಪ್ರಸಾದಂ ಚ ದದ್ಯಾಲ್ಲಿಂಗಾಯ ವೈ ಶುಭಂ॥
ಶಿವರಹಸ್ಯೇ:
ಅನಾದಿಜಂಗಮಶ್ಚೈವ ಆದಿಲಿಂಗಸ್ಥಲಂ ಭವೇತ್।
ಅನಾದಿಜಂಗಮಾಯ್ಯೈವಂ ಇಷ್ಟೋಚ್ಛಿಷ್ಟಂ ತು ಕಿಲ್ಬಿಷಂ॥ ಎಂದುದಾಗಿ
ಲಿಂಗಕ್ಕೆ ತೋರಿ ಪಾದವ ಪೂಜಿಸಲಾಗದು.
ಅದೆಂತೆಂದಡೆ:
ಗುರುವಿಗೂ ಲಿಂಗಕ್ಕೂ ಚೈತನ್ಯಸ್ವರೂಪ, ಜಂಗಮವಾದ ಕಾರಣ,
ಆ ಜಂಗಮದ ಪ್ರಸಾದವ ಲಿಂಗಕ್ಕೆ ತೋರಬೇಕಲ್ಲದೆ
ಲಿಂಗಪ್ರಸಾದವ ಪಾದಕ್ಕೆ ತೋರಲಾಗದು.
ಅದೇನು ಕಾರಣವೆಂದಡೆ:
ಗುರುಲಿಂಗಜಂಗಮಕ್ಕೆ ಅನಾದಿಜಂಗಮವೆ ಚೈತನ್ಯಸ್ವರೂಪವಾದ ಕಾರಣ,
ಆ ಜಂಗಮವೆ ಮುಖ್ಯಸ್ವರೂಪು.
ಇಂತಪ್ಪ ಜಂಗಮಪಾದವೆ ಪರಬ್ರಹ್ಮಕ್ಕೆ ಆಧಾರವಾಗಿಪ್ಪುದು.
ಆ ಪಾದವ ಬಿಟ್ಟು ಪರವ ಕಂಡುದಿಲ್ಲವೆಂದು ಶ್ರುತಿಗಳು ಪೊಗಳುತಿರ್ದ ಕಾರಣ,
ಇಂತಪ್ಪ ಚರಮೂರ್ತಿಯ ಪಾದವನು ಅಷ್ಟವಿಧಾರ್ಚನೆ
ಷೋಡಶೋಪಚಾರದಿಂದ ಅರ್ಚಿಸಿದಂತಹುದೆ ಲಿಂಗಪೂಜೆ.
ಆಮೇಲೆ ಆ ಮೂರ್ತಿಯ ಉಭಯಪಾದಗಳ ಹಿಮ್ಮಡ ಸೋಂಕುವಂತೆ
ಹಸ್ತವ ಮಡಗಿ ಲಲಾಟವ ಮುಟ್ಟಿ ನಮಸ್ಕರಿಸಿ ಆ ಪೂಜೆಯನಿಳುಹಿ,
ಆ ಶಿಕ್ಷಾಪಾದೋದಕವನು
ಬಲದಂಗುಷ್ಠ ಮೇಲೆ ಷಡಕ್ಷರಮಂತ್ರವ ಆರುವೇಳೆ ಸ್ಮರಿಸುತ್ತ ನೀಡಿ,
ಅಲ್ಲಿ ಇಷ್ಟಲಿಂಗವೆಂದು ಭಾವಿಸಿ,
ಎಡದಂಗುಷ್ಠದ ಮೇಲೆ ಪಂಚಾಕ್ಷರೀಮಂತ್ರವ ಐದುವೇಳೆ ಸ್ಮರಿಸುತ್ತ ನೀಡಿ,
ಅಲ್ಲಿ ಪ್ರಾಣಲಿಂಗವೆಂದು ಭಾವಿಸಿ,
ಮಧ್ಯದಲ್ಲಿ 'ಓಂ ಬಸವಾಯ ನಮಃ' ಎಂದು
ಒಂದುವೇಳೆ ಒಂದು ಪುಷ್ಪವ ಧರಿಸಿ ಸ್ಮರಿಸುತ್ತ ನೀಡಿ,
ಅಲ್ಲಿ ಭಾವಲಿಂಗವೆಂದು ಭಾವಿಸಿ,
ನೀಡಿದ ಉದಕವೆ ಬಟ್ಟಲಲಿ ನಿಂದು ಮಹತ್ಪಾದವೆಂದೆನಿಸುವುದು,
ಈ ಮಹತ್ಪಾದದಲ್ಲಿ ದ್ರವವ ತೆಗೆದು ಮತ್ತೆ ಪೂಜಿಸಬೇಕಾದಡೆ,
ಬಹುಪುಷ್ಪವ ಧರಿಸದೆ ಒಂದೆ ಪುಷ್ಪವ ಧರಿಸಬೇಕು.
ಅದೇನು ಕಾರಣವೆಂದಡೆ:

ಪಶ್ಚಿಮಚಕ್ರದಲ್ಲಿ ಸಂಬಂಧವಾದ ನಿರಂಜನ ಜಂಗಮಕ್ಕೆ
ಏಕದಳವನುಳ್ಳ ಒಂದೆ ಪುಷ್ಪವು ಮುಖ್ಯವಾದ ಕಾರಣ,
ಏಕ ಕುಸುಮವನೆ ಧರಿಸಿ ಪೂಜೆಯುಮಾಡಿ ನಮಸ್ಕರಿಸುವುದೆ ಜಂಗಮಪೂಜೆ.
ಆ ಪೂಜೆಯ ತೆಗೆದ ಶಿಷ್ಯನು 'ಶರಣಾರ್ಥಿ ಸ್ವಾಮಿ' ಎಂದು
ಬಟ್ಟಲವನೆತ್ತಿಕೊಟ್ಟಲ್ಲಿ,
ಕರ್ತೃವಾದ ಜಂಗಮವು ಆ ಬಟ್ಟಲಲ್ಲಿರ್ದ ತೀರ್ಥವನು
ತಮ್ಮ ಪಂಚಾಂಗುಲಿಗಳೆ ಪಂಚಪ್ರಾಣವೆಂದು ಭಾವಿಸಿ,
ಮೂಲಮಂತ್ರದಿಂದ ಮೂರುವೇಳೆ ಪ್ರದಕ್ಷಿಣವ ಮಾಡಿ ನಮಸ್ಕರಿಸಿ,
ಲಿಂಗದ ಮಸ್ತಕದ ಮೇಲೆ ಮೂರುವೇಳೆ
ಚತುರಂಗುಲ ಪ್ರಮಾಣಿನಲ್ಲಿ ಲಿಂಗವ ಮುಟ್ಟದೆ ನೀಡಿ,
ಆ ಪಂಚಾಂಗುಲಿಗಳ ತಮ್ಮ ಜಿಹ್ವೆಯಲ್ಲಿ ಸ್ವೀಕರಿಸುವಲ್ಲಿ
ಗುರುಪಾದೋದಕವೆನಿಸುವುದು; ಅದೇ ದೀಕ್ಷಾಪಾದೋದಕ.
ತಾವು ಲಿಂಗವನೆತ್ತಿ ಸಲಿಸಿದುದೆ
ಲಿಂಗಪಾದೋದಕವೆನಿಸುವುದು; ಅದೇ ಶಿಕ್ಷಾಪಾದೋದಕ.
ಬಟ್ಟಲನೆತ್ತಿ ಸಲಿಸಿದಲ್ಲಿ
ಜಂಗಮಪಾದೋದಕವೆನಿಸುವುದು; ಅದೇ ಜ್ಞಾನಪಾದೋದಕ.
ಈ ರೀತಿಯಲ್ಲಿ ಮಾಹೇಶ್ವರನು ಸಲಿಸಿದ ಬಳಿಕ
'ಶರಣಾರ್ಥಿ' ಎಂದು ಶಿಷ್ಯೋತ್ತಮನು ಎದ್ದು,
ಲಲಾಟಂ ಚ ಭುಜದ್ವಂದ್ವಂ ಪಾಣಿಯುಗ್ಮಮುರಸ್ತಥಾ।
ಅಂಗುಷ್ಠಯುಗಲಂ ಪ್ರೋಕ್ತಂ ಪ್ರಣಾಮೋಽಷ್ಟಾಂಗಮುಚ್ಯತೇ॥ ಎಂದು
ಭೃತ್ಯೋಪಚಾರಗಳಿಂದ ಪ್ರಣತಿಂಗೈದು ಅಪ್ಪಣೆಯ ಪಡೆದುಕೊಂಡು ಬಂದು,
ಆ ಜಂಗಮದ ಮರ್ಯಾದೆಯಲ್ಲಿಯೆ ತಾನು ಸ್ವೀಕರಿಸುವುದು.
ಇದೇ ರೀತಿಯಲ್ಲಿ ಗುರುಶಿಷ್ಯರೀರ್ವರು ಸಮರಸಭಾವದಿಂದ ಸೇವನೆ ಮಾಡಿದಲ್ಲಿ,
ಆ ಶಿಷ್ಯೋತ್ತಮನೆ ನಿಜಶಿಷ್ಯನಾದ ಕಾರಣ,
ಗುರುವೆ ಶಿಷ್ಯ, ಶಿಷ್ಯನೆ ಗುರು.
ಈ ಎರಡರ ಮರ್ಮವು ಆದ ಬಗೆ ಹೇಗೆಂದಡೆ:
ಆ ಶಿಷ್ಯನು ಪಡೆದುಕೊಂಡ ಪಾದೋದಕವ
ಈ ಗುರು ಭಕ್ತಿಮುಖದಿಂದ ತೆಗೆದುಕೊಂಡಲ್ಲಿ ಗುರುವೆ ಶಿಷ್ಯನಾಗಿಪ್ಪನು.
ಆ ಗುರು ಸೇವನೆಯು ಮಾಡಿ ಉಳಿದ ಉದಕವ
ಶಿಷ್ಯ ಭಕ್ತಿಭಾವದಿಂದ ಸೇವನೆ ಮಾಡಿದಲ್ಲಿಗೆ ತಚ್ಛಿಷ್ಯನಾದವನು.
ಈ ಮರ್ಮವ ತಿಳಿದು ಗುರುಶಿಷ್ಯರೀರ್ವರು ಸಲಿಸಿದ ಬಳಿಕ
ಕೆಲವು ಭಕ್ತಮಾಹೇಶ್ವರರು ಸಲಿಸುವುದು.
ಇನ್ನು ನಿಚ್ಚಪ್ರಸಾದಿಗಳಿಗೆ, ಸಮಯಪ್ರಸಾದಿಗಳಿಗೆ

ಆಯಾಯ ತತ್ಕಾಲದಲ್ಲಿ ತ್ರಿವಿಧೋದಕವಾಗಿಪ್ಪುದು:
ಇದೇ ಆಚರಣೆ.
ಇದನರಿಯದಾಚರಿಸುವವರಿಗೆ ನಿಮ್ಮ ನಿಲವರಿಯಬಾರದು ಕಾಣಾ,
ಕೂಡಲಚೆನ್ನಸಂಗಮದೇವಾ. || ೪೨೧ ||

೧೨೭೪

ಜ್ಞಾನ, ಸುಜ್ಞಾನ, ಕೈವಲ್ಯಜ್ಞಾನ:
ಜ್ಞಾನ ತನುವಿನ ಪರಿಣಾಮ, ಸುಜ್ಞಾನ ಪ್ರಾಣದ ಪರಿಣಾಮ,
ಕೈವಲ್ಯಜ್ಞಾನ ಮನದ ಪರಿಣಾಮ.
ಗಮನದ ಭಾವದರಿವು ತ್ರಿವಿಧ:
ವೈಲ, ವೈರಂಭಣ, ಮುಖಪ್ರಭಂಜನ.
ಅಂತರ್ವಾಹ ವಾಯು ಭಾವದ ಚರಿತ್ರ.
ಇದರ ಭೇದವ, ಕೂಡಲಚೆನ್ನಸಂಗಾ
ನಿಮ್ಮ ಶರಣನಲ್ಲದೆ ಕುಹಕಯೋಗಿಗಳವರೆತ್ತ ಬಲ್ಲರು? || ೪೨೨ ||

೧೨೭೫

ಜ್ಞಾನಾಮೃತಜಲನಿಧಿಯ ಮೇಲೆ, ಸಂಸಾರವೆಂಬ ಹಾವಸೆ ಮುಸುಕಿಹುದು.
ನೀರ ಮೊಗೆವರು ಬಂದು ನೂಕಿದಲ್ಲದೆ ತೆರಳದು.
ಮರಳಿ ಮುಸುಕುವುದ ಮಾಣಿಸಯ್ಯಾ.
ಅಗಳು ಎನ್ನುವ ನೆನೆವುತ್ತಿರಬೇಕೆಂದು ಬೇಗ ಗುರು ಅಪ್ಪೈಸಿ
ತನ್ನ ಪ್ರಸಾದವೆಂದು ಕುರುಹ ಕೊಟ್ಟನು,
ದಿವಾರಾತ್ರಿ ತನ್ನನರಿಯಬೇಕೆಂದು.
ಕೆರೆಯ ನೀರನುಂಡು ತೊರೆಯ ನೀರ ಹೊಗಳುವ
ಅರೆಮರುಳರ ಮೆಚ್ಚುವನೆ ನಮ್ಮ ಕೂಡಲಚೆನ್ನಸಂಗಮದೇವ? || ೪೨೩ ||

೧೨೭೬

ತಂಗುಳು ಬುತ್ತಿಯ ಕಟ್ಟಿ ಹೊಟ್ಟೆಯ ಮೇಲಿಕ್ಕಿಕೊಂಡಿರ್ದಡೆ
ಹಸಿವು ಹೋಗಿ ಆಪ್ಯಾಯನವಹುದೆ?
ಅಂಗದ ಮೇಲೆ ಲಿಂಗವಿದ್ದಲ್ಲಿ ಫಲವೇನು?
ಅಂಗವೂ ಲಿಂಗವೂ ಕೂಡುವ ಭೇದವನರಿಯದವರು
ಗುರುತಲ್ಪಕರು, ಪಂಚಮಹಾಪಾತಕರು–ಅದೆಂತೆಂದಡೆ:
ದ್ವೈತಭಾವಿತದುಃಖಾನಾಮದ್ವೈತಂ ಪರಮಂ ಪದಂ!
ಭಾರಮಸ್ನಿಂ ಪಥಶ್ರಾಂತೇ ತಸ್ಮಿನ್ ಭುಕ್ತೇ ಸುಖಾವಹಂ||

ಮತ್ತೆಯೂ—ಅಂಗಾನಾಂ ಲಿಂಗಸಂಬಂಧೋ ಲಿಂಗಾನಾಮಂಗಸಂಯುತಿಃ।
ನಿಮಿಷಾರ್ಧ ವಿಯೋಗೇನ ನರಕೇ ಕಾಲಮಕ್ಷಯಂ॥ ಎಂದುದಾಗಿ,
ಅಂಗದಲ್ಲಿ ಲಿಂಗ ಒಡಗಲಸಬೇಕು, ಲಿಂಗದಲ್ಲಿ ಅಂಗ ಒಡಗಲಸಬೇಕು.
ಇದು ಕಾರಣ—ಎಲ್ಲರೂ ಅಂಗಸಂಬಂಧಿಗಳಲ್ಲದೆ
ಲಿಂಗಸಂಬಂಧಿಗಳಪೂರ್ವ ಕಾಣಾ—ಕೂಡಲಚೆನ್ನಸಂಗಮದೇವಾ. ॥ ೪೨೪ ॥

೧೨೭೭

ತನಗೆ ತಾನೆ ಹುಟ್ಟಿದನಾಗಿ, ತಾನೆ ಸ್ಥಾವರವಾದ ಆ ಲಿಂಗವು,
ತನ್ನಲ್ಲಿರ್ದ ರುಚಿಯ ಅವ್ಯಕ್ತಕ್ರೀಯಿಂದ
ಮನವೆ ಬಾಯಾಗಿ ಉಂಬ ಲಿಂಗವು,
ಇತರರ ಸುಖವ ಬಲ್ಲುದೆ, ಕೂಡಲಚೆನ್ನಸಂಗಮದೇವಾ? ॥ ೪೨೫ ॥

೧೨೭೮

ತನತನಗೆ ಕುಳ್ಳಿರ್ದು ಮನಸಿಗೆ ಬಂದಂತೆ
ಘನಲಿಂಗದ ವಾರ್ತೆಯ ಗಳಹುತಿಪ್ಪರು ನೋಡಾ!
ಗುರುಕಾರುಣ್ಯವ ಪಡೆಯದೆ, ಸ್ವರಬಿಂದುಗಳ ತಡೆಯದೆ
ಹರನ ಶರಣರ ಮುಂದೆ ಹಿರಿದು ಮಾತನಾಡುತಿಪ್ಪರು ನೋಡಾ!
ಇರಿಯದೆ ಮೆರೆವರು, ಅರಿಯದೆ ಉಳಿವರು
ಕೂಡಲಚೆನ್ನಸಂಗಯ್ಯನಲ್ಲಿ ಜನಜಂಗುಳಿಗಳು. ॥ ೪೨೬ ॥

೧೨೭೯

ತನ್ನ ತಾನರಿವ ಶಿವಯೋಗಿಯ ಪರಿಯೆಂತೆಂದಡೆ:
ದೇಹ ತಾನಲ್ಲ, ಜಾತಿಜಾತಕಂಗಳು ತಾನಲ್ಲ, ಪ್ರಾಣ ತಾನಲ್ಲ,
ದಶವಾಯುಗಳು ತಾನಲ್ಲ, ಇಂದ್ರಿಯಂಗಳು ತಾನಲ್ಲ, ಗುಣತ್ರಯಂಗಳು ತಾನಲ್ಲ
ಅಂತಃಕರಣ ಚತುಷ್ಟಯಂಗಳು ತಾನಲ್ಲವೆಂದರಿದು ವಿವರಿಸಿ ಕಳೆದು,
ತನ್ನ ನಿಜಸ್ವರೂಪ ತಾನೇ ನೋಡಿ ಕಂಡು;
ಜೀವಾತ್ಮ ಅಂತರಾತ್ಮ ಪರಮಾತ್ಮ ಮತ್ತಂ ಭೂತಾತ್ಮ ಶುದ್ಧಾತ್ಮ
ನಿರ್ಮಲಾತ್ಮ ಸತ್ಯಾತ್ಮ ಮಹಾತ್ಮವೆಂಬ
ಅಷ್ಟ ಆತ್ಮೇಶ್ವರರು ಏಕಾರ್ಥವೆಂದರಿದು,
ಅಲ್ಲಿಯೆ ತಲ್ಲೀಯವಾಗಿಪುದೀಗ ಯೋಗ ಕಾಣಾ,
ಕೂಡಲಚೆನ್ನಸಂಗಮದೇವಾ. ॥ ೪೨೭ ॥

೧೨೮೦

ತನ್ನ ನಿಕ್ಕಿ ನಿಧಾನವ ಸಾಧಿಸಲರಿಯದ ಹಂದೆಗಳಿದ್ದೇನು ಫಲ?
ಕಾಡಹಂದಿ ನಱಿಯ ಹಿಂಡು ತರುವಿಂಧ್ಯದಲ್ಲಿ ಕೂಡಿರವೆ?
ನರವಿಂಧ್ಯದಲ್ಲಿ ಕೂಡಿರವೆ?
ತಮ್ಮ ತಮ್ಮ ತಮಂಧ ಕತ್ತಲೆ ಹರಿಯದನ್ನಕ್ಕ
ಇದಿರಿಗೆ ಬುದ್ಧಿಯ ಹೇಳಿ ಉದರವ ಹೊರೆವ ಚದುರರೆಲ್ಲರು ಹಿರಿಯರಪ್ಪರೆ?
ಲೋಗರ ಮಕ್ಕಳನಿಕ್ಕಿ ನೆಲೆಯ ನೋಡಿಹೆನೆಂದಡೆ,
ಅದೆಂತು ಸಾಧ್ಯವಪ್ಪಸಯ್ಯಾ ನಮ್ಮ ಕೂಡಲಚೆನ್ನಸಂಗಮದೇವರು? || ೪೨೮ ||

೧೨೮೧

ತನ್ನ ಪ್ರೀತಿಯ ಪುತ್ರ ಮಿತ್ರಾದಿಗಳು ಪರದೇಶದೊಳಗಿಪ್ಪರೆಂಬ ಭಾವದಲ್ಲಿ
ಅಡಗಿದ ಆನಂದಕ್ಕಿಂತ
ಮನಮುಟ್ಟಿ ನೆನೆವುದರಿಂದಾದ ಆನಂದ ಮಿಗಿಲಾಗಿಪ್ಪುದು ನೋಡಾ!
ಮನಮುಟ್ಟಿ ನೆನೆವುದರ ಸುಖಕ್ಕಿಂತ, ಅವರನಪ್ಪಿ ಆಲಂಗಿಸುವುದರಿಂದಾದ ಸುಖ
ಅಧಿಕವಾಗಿ ತೋರ್ಪುದು ನೋಡಾ!
ಒಮ್ಮೆ ಅಪ್ಪಿ ಆಲಂಗಿಸಿದ ಆನಂದಕ್ಕಿಂತ ಅವರೊಡನೆ ಸದಾ ಕೂಡಿಪ್ಪ ಹರ್ಷ
ಹಿರಿದಾಗಿಪ್ಪುದು ನೋಡಾ!
ಇಂತೀ ದೃಷ್ಟಾಂತದಂತೆ, ಪರಶಿವಲಿಂಗವ ಭಾವದಲ್ಲಿ ಭಾವಿಸುವುದಕ್ಕಿಂತ
ಮನಮುಟ್ಟಿ ನೆನೆವುದು, ಮನಮುಟ್ಟಿ ನೆನೆವುದಕ್ಕಿಂತ ಕಣ್ಮುಟ್ಟಿ ಕಾಣುವುದು,
ಕಣ್ಮುಟ್ಟಿ ಕಾಣುವುದಕ್ಕಿಂತ ಕರಮುಟ್ಟಿ ಪೂಜಿಸುವುದು,
ಕರಮುಟ್ಟಿ ಪೂಜಿಸುವುದಕ್ಕಿಂತ ಸದಾ ಅಂಗದಲ್ಲಿ ಹಿಂಗದೆ ಧರಿಸುವ ಹರ್ಷವು,
ಪರಮಾವಧಿಯಾಗಿಪ್ಪುದು ನೋಡಾ!
ಇದು ಕಾರಣ– ಕೂಡಲಚೆನ್ನಸಂಗಯ್ಯನ ಶರಣರು
ಭಾವದಿಂದ ಮನಕ್ಕೆ, ಮನದಿಂದ ನೇತ್ರಕ್ಕೆ, ನೇತ್ರದಿಂದ ಕರಕ್ಕೆ
ಆ ಶಿವಲಿಂಗವ ಬಿಜಯಂಗೈಸಿಕೊಂಡು
ಪೂಜಾದಿ ಸತ್ಕ್ರಿಯೆಗಳನಗಲವೆ ಅಲಸದೆ ಆಚರಿಸುತಿಪ್ಪರು || ೪೨೯ ||

೧೨೮೨

ತನ್ನ ಪುತ್ರಂಗೆ ತಾನೆ ಗುರುವಾದೆನೆಂಬ
ಗುರುದ್ರೋಹಿಯ ಮಾತ ಕೇಳಲಾಗದು.
ಅವರಿಬ್ಬರನು ಹೊತ್ತಿಸಿ ಸಂದಿಸಿ ಸುಡುವ
ಕೂಡಲಚೆನ್ನಸಂಗಯ್ಯನವರ ಗುರುಶಿಷ್ಯತನವ. || ೪೩೦ ||

೧೨೮೩

ತನ್ನ ಲಿಂಗಕ್ಕೆ ಕೊಡಬಾರದ ಠಾವಿನಲ್ಲಿ ಪ್ರಸಾದಿಸಿಕೊಂಡು,
ತುಡುಗುಣಿ ನಾಯಂತೆ ತಿಂಬವರನೇನೆಂಬೆನಯ್ಯಾ!
ಅದು ತನ್ನ ಒಡಲ ಹೊರೆವುದಲ್ಲದೆ ಹಿಡಿದ ಕುಳಕ್ಕೆ ಸಲ್ಲದು,
'ದ್ರವ್ಯಂ ಜಾತು ಶುಭಂ ಭವೇತ್'– ಎಂದುದಾಗಿ.
ಇದು ಕಾರಣ ಕೂಡಲಚೆನ್ನಸಂಗಯ್ಯಾ
ಆಯತ ಬೀಸರವೋದ ವ್ರತಗೇಡಿಗಳನೇನೆಂಬೆನಯ್ಯಾ. ॥ ೪೩೧ ॥

೧೨೮೪

ತನ್ನ ಲಿಂಗಕ್ಕೆ ಬಾರದ ರುಚಿಯ,
ಜಂಗಮಕ್ಕೆ ಸಲಿಸಿ ಕೈಯ ನೀಡಿ ಪ್ರಸಾದವನಿಕ್ಕೆಂಬಿರಿ,
ಅದು ಪ್ರಸಾದವಲ್ಲ, ಸಿಂಗಿ ಕಾಳಕೂಟ ವಿಷವು, ಕೇಳಿರಣ್ಣಾ.
ಆ ಪ್ರಸಾದ ಪದವೆಂಬಿರಿ, ಆ ಪ್ರಸಾದ ಕಿಲ್ಬಿಷವೆಂಬೆ
ಕೂಡಲಚೆನ್ನಸಂಗಮದೇವಾ. ॥ ೪೩೨ ॥

೧೨೮೫

ತನ್ನ ಲಿಂಗಕ್ಕೆ ಮಾಡಿದ ಬೋನವ
ಜಂಗಮಕ್ಕೆ ನೀಡಬಾರದೆಂಬುದನೇಕ ನರಕ!
ತನ್ನ ಲಿಂಗವಾರೋಗಿಸಿ ಮಿಕ್ಕ ಪ್ರಸಾದವ
ಜಂಗಮಕ್ಕೆ ನೀಡುವುದನೇಕ ನಾಯಕನರಕ.
ಆ ಜಂಗಮವಾರೋಗಿಸಿ ಮಿಕ್ಕ ಪ್ರಸಾದ,
ಎನ್ನ ಲಿಂಗಕ್ಕೆ ಬೋನವಾಯಿತ್ತು, ಎನಗೆ ಪ್ರಸಾದವಾಯಿತ್ತು.
ಕೂಡಲಚೆನ್ನಸಂಗಯ್ಯಾ ಎನಗೆಯೂ ನಿನಗೆಯೂ
ಜಂಗಮಪ್ರಸಾದ ಪ್ರಾಣವಾಯಿತ್ತು. ॥ ೪೩೩ ॥

೧೨೮೬

ತನ್ನ ಲಿಂಗದಲ್ಲಿ ಪದಾರ್ಥದ ಪೂರ್ವಾಶ್ರಯ ಹೋಗದೆಂದು
ಅನುಸರಿಸಿ ಜಂಗಮದ ಒಕ್ಕುದ ಮಿಕ್ಕುದ ಕೊಂಬೆನೆಂಬವನೊಬ್ಬ ತಕ್ಕಭವಿ.
ಆ ಚರಲಿಂಗ ಜಂಗಮ ಹೋದ ಬಳಿಕ್ಕ
ತನ್ನ ಸ್ವಯಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರವಂ ಮಾಡಿ,
ಆ ಲಿಂಗಪ್ರಸಾದವಲ್ಲದೆ ಒಲ್ಲೆನೆಂಬವನೊಬ್ಬ ತಕ್ಕಭವಿ.
ಅವಂಗೆ ಲಿಂಗವಿಲ್ಲ, ಲಿಂಗಕ್ಕೆ ತಾನಿಲ್ಲ, ಅವ ಆಚಾರಭ್ರಷ್ಟ.

ಅಂಥವರ ಕಂಡಡೆ ಇರಿದಿರಿದು ಸುಡುವನಲ್ಲದೆ, ಮೆರೆವನಲ್ಲ
ಕೂಡಲಚೆನ್ನಸಂಗಮದೇವ. || ೪೩೪ ||

೧೨೮೭

ತನ್ನ ಲಿಂಗವ ಶಿಷ್ಯಂಗೆ ಬಿಜಯಂಗೈಸಿ ಕೊಟ್ಟು
ಮುಂದೆ ತಾನೇನಾಗುವನೆಲವೊ?
ಅವನ ಧರ್ಮಕ್ಕೆ ಗುರುವಾದನಲ್ಲದೆ
ಅವನ ಮನಕ್ಕೆ ಗುರುವಾದುದಿಲ್ಲ.
ಹಿಂದಾದ ಮುಕ್ತಿಯ ಮಾರಿಕೊಂಡುಂಬ
ಭಂಗಗಾರರ ತೋರದಿರಾ– ಕೂಡಲಚೆನ್ನಸಂಗಮದೇವಾ. || ೪೩೫ ||

೧೨೮೮

ತನ್ನ ಸತ್ಕಾಯಕದಿಂದೊದಗಿದ ವಿಶುದ್ಧಪದಾರ್ಥವ ಲಿಂಗಕ್ಕಿತ್ತು,
ಆ ಲಿಂಗಪ್ರಸಾದವ ತಾನು ಭೋಗಿಸಬೇಕಲ್ಲದೆ
ಇದು ಸ್ಥೂಲ, ಇದು ಸೂಕ್ಷ್ಮವೆಂದರಿಯದೆ,
ಅಂಗಸುಖಕ್ಕಾಗಿ ಲಿಂಗವನು ಮರೆತು,
ಕಂಡ ಕಂಡ ಪದಾರ್ಥವನುಂಡಡೆ ಅದು ಕೆಂಡದಂತಾಗುವುದಯ್ಯಾ.
ಈ ಮರ್ಮವನರಿಯದನ್ನಕ್ಕ
ಕೂಡಲಚೆನ್ನಸಂಗಯ್ಯನಲ್ಲಿ ಸದ್ಭಕ್ತರೆಂತಪ್ಪರಯ್ಯಾ? || ೪೩೬ ||

೧೨೮೯

ತನ್ನ ಸಮಯಾಚಾರಕ್ಕೆ ಸಲ್ಲದವರಿಗೆ
ಉಪದೇಶವ ಮಾಡುವಾತ ಗುರುವಲ್ಲ, ಮಾಡಿಸಿಕೊಂಬಾತ ಶಿಷ್ಯನಲ್ಲ.
ಲಿಂಗವ ಮಾರಿಕೊಂಡುಂಬ ವಾಳಕರು, ಗುರುಲಿಂಗಜಂಗಮಕ್ಕೆ ದೂರವರು.
ಕೂಡಲಚೆನ್ನಸಂಗಯ್ಯಾ ಆ ಇಬ್ಬರಿಗೆಯೂ ನರಕ ತಪ್ಪದು. || ೪೩೭ ||

೧೨೯೦

ತನ್ನ ಪೊದ್ದದಂತೆ ಮಾಡಿದ, ತನ್ನ ಸಾರದಂತೆ ಮಾಡಿದ.
ಕಾಮವ ತಂದು ಕಣ್ಣಿಗೆ ತೋರಿದನು,
ವಿಷಯವ ತಂದು ಮುಂದೊಡ್ಡಿದನು ನೋಡಯ್ಯಾ.
ಪ್ರಸಾದಸಾಧಕರಿಗೆ ಇದೇ ವಿಘ್ನವಯ್ಯಾ.
ಕೂಡಲಚೆನ್ನಸಂಗಮದೇವಯ್ಯ ತನ್ನ ಪೊದ್ದದಂತೆ ಮಾಡಿದನಯ್ಯಾ. || ೪೩೮ ||

೧೨೯೧

ತನು ಗುರುವಿನಲ್ಲಿ ಸವೆದು, ಮನ ಲಿಂಗದಲ್ಲಿ ಸವೆದು,
ಧನ ಜಂಗಮದಲ್ಲಿ ಸವೆದು,
ತನುವೆ ಗುರುವಾಗಿ, ಮನವೆ ಲಿಂಗವಾಗಿ, ಧನವೆ ಜಂಗಮವಾಗಿ–
ಇಂತೀ ತ್ರಿವಿಧ ಐಕ್ಯವಾಗಿ ನಿಮ್ಮಲ್ಲಿ ನಿಂದನಾಗಿ;
ಕಾಯವಿಡಿದು ಕರ್ಮವಿರಹಿತನಾದ,
ಕೂಡಲಚೆನ್ನಸಂಗಮದೇವರಲ್ಲಿ
ಸಂಗನಬಸವಣ್ಣನು ಉಪಮಾತೀತನಾಗಿರ್ದನು. || ೪೩೯ ||

೧೨೯೨

ತನುಧನಾದಿಗಳ ಮೋಹ ಮಾಣದೆ,
ತನ್ನಲ್ಲಿ ನಿಜದ ನೆನಹು ನೆಲೆಗೊಳ್ಳದೆ,
ಎನಗೆ ಕುಲಗೋತ್ರಗಳಿಲ್ಲವೆಂದು ಗಳಪುತ್ತ ವಿಧಿನಿಷೇಧವನಾರಯ್ಯದೆ,
ಕಂಡಕಂಡಂತೆ ಕುಣಿವ ಮಂದ ಮನುಜರು ಕೆಟ್ಟು ಭ್ರಷ್ಟರಪ್ಪರಯ್ಯಾ.
ಅದೇತಕೆಂದಡೆ: ಬೊಮ್ಮವಾನೆಂಬ ಸುಜ್ಞಾನ ನೆಲೆಗೊಳ್ಳದಾಗಿ.
ಅರಸಿನ ಹೆಸರಿನ ಅನಾಮಿಕಂಗೆ, ಅರಸೊತ್ತಿಗೆಯ ಸಿರಿ ದೊರೆಯದಂತೆ
ಮಾಯಾ ಜಡಧಿಯಲ್ಲಿ ಮುಳುಗಿದ ಮರುಳುಮಾನವಂಗೆ
ಪರಮಸುಖವೆಂತು ದೊರೆವುದಯ್ಯಾ ಕೂಡಲಚೆನ್ನಸಂಗಮದೇವಾ? || ೪೪೦ ||

೧೨೯೩

ತನು ನಿಮ್ಮನಪ್ಪಿ ಮಹಾತನುವಾದ ಬಳಿಕ
ತನುವೆಂಬುದು ಮತ್ತೆಲ್ಲಿಯದೊ?
ಮನ ನಿಮ್ಮನಪ್ಪಿ ಘನಮನವಾದ ಬಳಿಕ
ಮನವೆಂಬುದು ಮತ್ತೆಲ್ಲಿಯದೊ?
ಭಾವ ನಿಮ್ಮನಪ್ಪಿ ನಿರ್ಭಾವವಾದ ಬಳಿಕ
ಭಾವವೆಂಬುದು ಮತ್ತೆಲ್ಲಿಯದೊ?
ಇಂತೀ ತ್ರಿವಿಧವು ಲಿಂಗದಲ್ಲಿ ನಿರ್ಲೇಪವಾಗಿ ಪೈದೋಂದಿರವ,
ಕೂಡಲಚೆನ್ನಸಂಗಯ್ಯ ತಾನೆ ಬಲ್ಲ. || ೪೪೧ ||

೧೨೯೪

ತನು ಬಯಲು ನಿರವಯದೊಳಡಗಿತ್ತು;
ಮನ ಬಯಲು ನಿರವಯದೊಳಡಗಿತ್ತು;

ಭಾವ ಬಯಲು ನಿರವಯದೊಳಡಗಿತ್ತು;
ಬಯಲು ಬಯಲು ಬೆರಸಿ ಬಯಲೆ ಆಯಿತ್ತು!
ಕೂಡಲಚೆನ್ನಸಂಗಯ್ಯನೆಂಬ ನುಡಿಯುಡಗಿತ್ತು. ॥ ೪೪೨ ॥

೧೨೯೫

ತನು ಮನ ಧನ ಏಕಾರ್ಥವಾದ ಕಾರಣ,
ಉದಯದಲ್ಲಿ, 'ಲಿಂಗವೇ ಶರಣು, ಜಂಗಮವೇ ಶರಣು, ಪ್ರಸಾದವೆ ಶರಣು'
ಕಂಡಯ್ಯಾ.
ಈ ತ್ರಿವಿಧಗುಣಸಂಪನ್ನರು,
ಕೂಡಲಚೆನ್ನಸಂಗನ ಶರಣರು ಮಹಾಘನವಯ್ಯಾ. ॥ ೪೪೩ ॥

೧೨೯೬

ತನು ಮನ ಬಳಲದೆ ಉದ್ದಂಡವೃತ್ತಿಯಲ್ಲಿ ಧನವಗಳಿಸಿ ತಂದು
ಗುರುಲಿಂಗಜಂಗಮಕ್ಕೆ ವೆಚ್ಚಿಸಿ, ದಾಸೋಹವ ಮಾಡಿ,
ಭಕ್ತರಾದೆವೆಂಬವರನೆನಗೆ ತೋರದಿರಯ್ಯಾ.
ಅದೇಕೆಂದರೆ: ಅವ ಪರಧನ ಚೋರಕ; ಅವ ಪಾಪಿ.
ಅವಗೆ ವಿಚಾರಿಸದೆ ಉಪದೇಶವ ಕೊಟ್ಟ ಗುರುವಿಂಗೆ ರೌರವ ನರಕ.
ಅವನ ಕಾಯಕವ ವಿಚಾರಿಸದೆ ಅವರ ಮನೆಯಲ್ಲಿ ಹೊಕ್ಕು
ಲಿಂಗಾರ್ಚನೆಯ ಮಾಡುವ ಜಂಗಮಕ್ಕೆ ಏಳನೆಯ ಪಾತಕ.
ಇಂತವರ ಬದುಕು, ಹುಲಿ ಕಪಿಲೆಯ ತಿಂದು
ಮಿಕ್ಕುದ್ದ ನರಿ ಬಂದು ತಿಂಬಂತೆ ಕಾಣಾ.
ಕೂಡಲಚೆನ್ನಸಂಗಮದೇವಾ. ॥ ೪೪೪ ॥

೧೨೯೭

ತನುವ ಕೊಟ್ಟು ತನು ಬಯಲಾಯಿತ್ತು,
ಮನವ ಕೊಟ್ಟು ಮನ ಬಯಲಾಯಿತ್ತು,
ಧನವ ಕೊಟ್ಟು ಧನ ಬಯಲಾಯಿತ್ತು,
ಈ ತ್ರಿವಿಧವನು ಕೊಟ್ಟು ಕೂಡಲಚೆನ್ನಸಂಗಯ್ಯನಲ್ಲಿ
ಬಸವಣ್ಣಂಗೆ ಬಯಲಸಮಾಧಿಯಾಯಿತ್ತು. ॥ ೪೪೫ ॥

೧೨೯೮

ತನುವಿಡಿದು ನಡೆವ ತ್ರಿವಿಧ ಸಂಪತ್ತುಗಳು ಭಕ್ತಮಹೇಶ್ವರ ಪ್ರಸಾದಿ;
ಮನ ವಿಡಿದು ನಡೆವ ತ್ರಿವಿಧ ಸಂಪತ್ತುಗಳು ಪ್ರಾಣಲಿಂಗಿ ಶರಣ ಐಕ್ಯ.
ಈ ಉಭಯದನುಭವವಿಡಿದು
'ಸ್ಥಾವರಂ ಜಂಗಮಶ್ಚೈವ ದ್ವಿವಿಧಂ ಲಿಂಗಮುಚ್ಯತೇ'। ಎಂಬ,
ಈ ಭೇದವ ಭೇದಿಸಬಲ್ಲಡೆ ಹಿಂದಿಲ್ಲ ಮುಂದಿಲ್ಲ,
ಇಹ ಪರ ಒಂದೆ, ಕರ್ಮ ನಾಸ್ತಿ ಭವಂ ನಾಸ್ತಿ.
ಕೂಡಲಚೆನ್ನಸಂಗ ಸ್ವಾಯತವಾದವಂಗೆ ಇದು ಸಹಜ. || ೪೪೬ ||

೧೨೯೯

ತನುವಿನ ಸೂತಕ, ಮನದ ಸಂಚಲ, ಜೀವನ ಕಳವಳ;
ಹಿಂಗಿದುವಯ್ಯಾ ಗುರುಕರುಣವ ಪಡೆದೆನಾಗಿ.
ಕೂಡಲಚೆನ್ನಸಂಗಮದೇವಾ
ಎನ್ನ ಭಾವಭ್ರಾಂತಿಯಳಿಯಿತ್ತು ನೀವೆಂದರಿದೆನಾಗಿ! || ೪೪೭ ||

೧೩೦೦

ತನುವಿನೊಳಗಿದ್ದು ತನುವ ಗೆದ್ದಳು, ಮನದೊಳಗಿದ್ದು ಮನವ ಗೆದ್ದಳು,
ವಿಷಯದೊಳಗಿದ್ದು ವಿಷಯಂಗಳ ಗೆದ್ದಳು,
ಅಂಗಸುಖವ ತೊರೆದು ಭವವ ಗೆದ್ದಳು,
ಕೂಡಲಚೆನ್ನಸಂಗಯ್ಯನ ಹೃದಯಕಮಲವ ಬಗಿದು ಹೊಕ್ಕು
ನಿಜಪದವನೈದಿದ ಮಹಾದೇವಿಯಕ್ಕನ ಶ್ರೀಪಾದಕ್ಕೆ
ನಮೋ ನಮೋ ಎಂಬೆನು. || ೪೪೮ ||

೧೩೦೧

ತನು ಶೀತೋಷ್ಣವ ಮರೆದು, ಘ್ರಾಣ ಗಂಧವ ಮರೆದು,
ನಯನ ನೋಟವ ಮರೆದು, ಕರ್ಣ ಶಬ್ದವ ಮರೆದು,
ನಾಲಗೆ ರುಚಿಯ ಮರೆದು, ಅಂಡಜ ಜರಾಯುಜವೆನಿಸದೆ
ಕೂಡಲಚೆನ್ನಸಂಗಯ್ಯನ ಉಪಮಾತೀತ ಶರಣನಾಗಿ[ದ್ದನಯ್ಯಾ] || ೪೪೯ ||

೧೬೦೨

ತನು ಶುದ್ಧವಾಯಿತ್ತು ಗುರುವಿನಿಂದೆ.
ಮನ ಶುದ್ಧವಾಯಿತ್ತು ಲಿಂಗದಿಂದೆ.
ಧನ ಶುದ್ಧವಾಯಿತ್ತು ಜಂಗಮದಿಂದೆ.
ಪ್ರಾಣ ಶುದ್ಧವಾಯಿತ್ತು ಪ್ರಸಾದದಿಂದೆ.–
ಇಂತೀ ಚತುರ್ವಿಧದಿಂದೆನ್ನ ಸರ್ವಾಂಗ ಶುದ್ಧವಾಯಿತ್ತು
ಕೂಡಲಚೆನ್ನಸಂಗಮದೇವಾ. ॥ ೪೫೦ ॥

೧೬೦೩

ತನುಸ್ವಾಯತವಾಗಿ ತನುವಿನ ಹಂಗಿನ ಗುರುವೆನ್ನದೆ,
ಗುರುಸ್ವಾಯತವಾಗಿ ಗುರುವಿನ ಹಂಗಿನ ತನುವೆನ್ನದೆ,
ತನ್ನೊಳಗೆ ಗುರು ಐಕ್ಯವೆನ್ನದೆ, ಗುರುವಿನೊಳಗೆ ತಾನೈಕ್ಯವೆನ್ನದೆ,
ಅವಿರಳ ಸಂಭಾವನೆಯಿಂದ ಸುಬುದ್ಧಿ ನಿಷ್ಠೆ ಅಣುಮಾತ್ರ ಓಸರಿಸದೆ,
ರಸಮುಖಾರ್ಪಿತ ತೃಪ್ತನಾಗಿ, ಕಾಯಾಧಾರಲಿಂಗೋಪಜೀವಿಯಾಗಿ,
ಸ್ಥಾವರದಂತೆ ನಿಬ್ಬೆರಗಾಗಿ, ತನು ಸೋಂಕಿ ತನು ನಷ್ಟವಾಗಿ
ಒಂದು ಮುಖಮಾರ್ಗವಲ್ಲದೆ ಮತ್ತೊಂದ ಮೆಟ್ಟದಿರಬಲ್ಲಡಾತ
ಮಹೇಶ್ವರನಯ್ಯಾ ಕೂಡಲಚೆನ್ನಸಂಗಯ್ಯಾ. ॥ ೪೫೧ ॥

೧೬೦೪

ತನುಸ್ವಾಯತವಾದವರಂಗ ಸ್ಥಾವರದಂತಿಪ್ಪುದು,
ಮನಸ್ವಾಯತವಾದವರಂಗ ಜ್ಯೋತಿರ್ಮಯಲಿಂಗದಂತಿಪ್ಪುದು,
ಶಬ್ದಸ್ವಾಯತವಾದವರಂಗ ಪೃಥ್ವಿಯಂತಿಪ್ಪುದು.–
ಇಂತೀ ತ್ರಿವಿಧಸ್ವಾಯತರಾದವರಂಗ
ಜಂಗಮಲಿಂಗವೆಂಬೆ ಕಾಣಾ, ಕೂಡಲಚೆನ್ನಸಂಗಮದೇವಾ. ॥ ೪೫೨ ॥

೧೬೦೫

ತಾನು ಭಕ್ತಿಪಥಕ್ಕೆ ಹೇಸಿ ಭಕ್ತನಾದ ಬಳಿಕ
ಮರಳಿ, ಭವಿಯಾಗಿದ್ದ ತಾಯಿ ತಂದೆ ಒಡಹುಟ್ಟಿದವರು
ಬಂಧುಬಳಗವೆಂದು ಬೆರಸಿದಡೆ
ಕೊಂಡ ಮಾಲಿಂಗೆ ಹೋಹುದು ತಪ್ಪದು.
ವಹಿಯ ಮಣ್ಣಿನಲ್ಲಿ ಮಾಡಿದ ಮಡಕೆ, ಅಗ್ನಿಯ ಮುಖದಲ್ಲಿ ಶುದ್ಧವಾದ ಬಳಿಕ
ಅದು ತನ್ನ ಪೂರ್ವಕುಲವ ಕೂಡದು ನೋಡಾ, ಅದೆಂತೆಂದಡೆ:

ಅಗ್ನಿದಗ್ಧಘಟಃ ಪ್ರಾಪೂರ್ನ ಭೂಯೋ ಮೃತ್ತಿಕಾಯತೇ।
ತಚ್ಛಿವಾಚಾರಸಂಗೇನ ನ ಪುನರ್ಮಾನುಷೋ ಭವೇತ್॥ ಎಂದುದಾಗಿ,
ಭಕ್ತನಾಗಿ, ಭವಿಯ ನಂಟನೆಂದು ಪಂತಿಯಲ್ಲಿ ಕುಳ್ಳಿರಿಸಿಕೊಂಡು
ಉಂಡನಾದರೆ; ಪಂಚಮಹಾಪಾತಕ,
ಅವಂಗೆ ನಾಯಕನರಕ ತಪ್ಪದು ಕಾಣಾ
ಕೂಡಲಚೆನ್ನಸಂಗಯ್ಯಾ. ॥ ೪೫೩ ॥

೧೩೦೬

ತಾನೆ ಜಗ, ಜಗವೆಲ್ಲ ತಾನೆಂದರಿದ, ಘನವೇದ್ಯನಭೇದರೂಪನಾಗಿ,
ಅನ್ಯವಿಲ್ಲದನ್ಯವನರಿಯಲೆಲ್ಲಿಯದೊ?
ನಿರಂಜನ ನಿಜಚಿದ್ರೂಪು ತಾನಾಗಿ
ಅರಿವು ತಾನೆಂಬ ಮಾತಿಗೆಡೆಯಲ್ಲಿಯದೊ?
ಅನ್ಯವೆನ್ನದ ತಾನೆನ್ನದಳಿದುಳಿದುಪಮಿಸಬಹುದೆ?
ಅನುಪಮಸುಖಸಾರಾಯ, ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೪೫೪ ॥

೧೩೦೭

ತಾನೆನ್ನದೆ ಇದಿರೆನ್ನದೆ ಏನೂ ಏನೂ ಎನಲಿಲ್ಲದ ಅನಿರ್ವಾಚ್ಯವಾಗಿದ್ದ ವಸ್ತು
ತನ್ನ ಲೀಲೆಯಿಂ ತಾನೆ ಸ್ವಯಂಭುಲಿಂಗವಾಗಿತ್ತು.
ಆ ಲಿಂಗದಿಂದಾಯಿತ್ತು ಶಿವಶಕ್ತ್ಯಾತ್ಮಕ
ಆ ಶಿವಶಕ್ತ್ಯಾತ್ಮಕನಿಂದಾಯಿತ್ತು ವಿಶ್ವ.
ಆ ವಿಶ್ವಪ್ರಪಂಚದಿಂದಾದುದು ಸಂಸಾರ.
ಆ ಸಂಸಾರವ ತನ್ನ ವಿವೇಕದಿಂ ವಿಚಾರಿಸಿ
ತಾನಾರಿದೆಲ್ಲಿಯದೆಂದು ವಿಡಂಬಿಸಿ
ಗುರುಸನ್ನಿಧಿಯ[ಲ್ಲಿ], ಗುರು ಪಸ್ತಮಸ್ತಕ ಸಂಯೋಗದಿಂ ಮಹಾಲಿಂಗವ
ಕರತಳಾಮಳಕವಾಗಿ ಕರ ಮನ ಭಾವದಲ್ಲಿ ಪ್ರತಿಷ್ಠಿಸಿ ತೋರಲು
ಪರಮಾನಂದವನೆಯ್ದಿ; ಆ ಲಿಂಗದಲ್ಲಿ ಆಚಾರ ವಿಡಿದು ಭಕ್ತ,
ಪೂಜೆವಿಡಿದು ಮಾಹೇಶ್ವರ, ಅರ್ಪಿತವಿಡಿದು ಪ್ರಸಾದಿ,
ಅನುಭಾವವಿಡಿದು ಪ್ರಾಣಲಿಂಗಿ, ಆನಂದವಿಡಿದು ಶರಣ,
ಸಮರಸವಿಡಿದು ಐಕ್ಯ– ಇಂತು ತಾನೆಲ್ಲವಾಗಿ, ಎಲ್ಲವೂ ತಾನಾಗಿ
ಒಳಹೊರಗೆನ್ನದೆ, ಇಹಪರವೆನ್ನದೆ
ಸರ್ವವೂ ತಾನಾದ ಮಹಾಜ್ಞಾನಿ ಶರಣನ ಸುಳುಹೆ
ಜಗತ್ಪಾವನವಯ್ಯಾ, ಕೂಡಲಚೆನ್ನಸಂಗಮದೇವಾ. ॥ ೪೫೫ ॥

೧೩೦೮

ತಾರಕಾಕೃತಿ, ದಂಡಕಾಕೃತಿ, ಕುಂಡಲಾಕೃತಿ, ಅರ್ಧಚಂದ್ರಾಕೃತಿ,
ದರ್ಪಣಾಕೃತಿ–ಜ್ಯೋತಿರ್ಮಯಾಕೃತಿ, ನಿಷ್ಕಳಾಕೃತಿ, ನಿರಾಳಾಕೃತಿ,
ನಿರಂಜನಾಕೃತಿ–ಈ ಆ ಕೃತಿಗಳು.
ಈ ಆ ಕೃತಿಗಳ ಮಧ್ಯದಲ್ಲಿ ಪ್ರಣವಂಗಳಾವಾವೆಂದಡೆ:
ನಕಾರ, ಮಕಾರ, ಶಿಕಾರ, ವಕಾರ, ಯಕಾರ, ಓಂಕಾರ,
ಬಕಾರ, ಕ್ಷಕಾರ, ಪಕಾರ–ಈ ಪ್ರಣವಂಗಳು.
ಈ ಪ್ರಣವಂಗಳ ನಾದಂಗಳಾವಾವೆಂದಡೆ:
ಪೆಣ್ಡುಂಬಿನಾದ, ವೇಣುನಾದ, ಘಂಟಾನಾದ, ಭೇರಿನಾದ,
ಮೇಘನಾದ, ಪ್ರಣವನಾಗ, ಕಿಂಕಿಣಿನಾದ, ಅಗಣಿತನಾದ, ದಿವ್ಯನಾದ
ಈ ನಾದಂಗಳು.
ಈ ನಾದಂಗಳಿಗೆ ಪಿಂಡಂಗಳಾವಾವೆಂದಡೆ:
ಭಕ್ತನೆಂಬ ಪಿಂಡ, ಮಹೇಶ್ವರನೆಂಬ ಪಿಂಡ,
ಪ್ರಾಣಲಿಂಗಿಯೆಂಬ ಪಿಂಡ, ಶರಣನೆಂಬ ಪಿಂಡ, ಐಕ್ಯವೆಂಬ ಪಿಂಡ,
ಚಿದ್ಗುಣವೆಂಬ ಪಿಂಡ, ಚಿನ್ಮಯವೆಂಬ ಪಿಂಡ,
ಚಿನ್ಮೂರ್ತಿಯೆಂಬ ಪಿಂಡ–ಈ ಪಿಂಡಂಗಳು.
ಈ ಪಿಂಡಂಗಳಿಗೆ ಷಡಾಧಾರಂಗಳಾವಾವೆಂದಡೆ:
ಆಧಾರಚಕ್ರ, ಸ್ವಾದಿಷ್ಠಾನಚಕ್ರ, ಮಣಿಪೂರಕಚಕ್ರ,
ಅನಾಹತಚಕ್ರ, ವಿಶುದ್ಧಿಚಕ್ರ, ಅಜ್ಞಾಚಕ್ರ, ಬ್ರಹ್ಮಚಕ್ರ, ಶಿಖಾಚಕ್ರ,
ಪಶ್ಚಿಮಚಕ್ರ,–ಈ ಚಕ್ರಂಗಳು.
ಈ ಚಕ್ರಂಗಳಿಗೆ ವರ್ಣಂಗಳಾವಾವೆಂದಡೆ:
ಪೀತವರ್ಣ, ಶ್ವೇತವರ್ಣ, ಪುಷ್ಯರಾಗದ ವರ್ಣ, ಮುತ್ತಿನ ವರ್ಣ,
ವೈಢೂರ್ಯದ ವರ್ಣ, ಎಳೆಯ ಮಾಣಿಕ್ಯದ ವರ್ಣ, ಗೋಮೇಧಿಕವರ್ಣ
ಪಶ್ಯವರ್ಣ, ವಜ್ರದ ವರ್ಣ–ಈ ವರ್ಣಂಗಳು.
ಈ ವರ್ಣಂಗಳಿಗೆ ಅಂಗಾಂಗಳಾವಾವೆಂದಡೆ:
ಪೃಥ್ವಿಯಂಗ, ಅಪ್ಪುವಂಗ, ಅಗ್ನಿಯಂಗ, ವಾಯುವಂಗ,
ಆಕಾಶವಂಗ, ಆತ್ಮಾಂಗ, ಯೋಗಾಂಗ, ತ್ಯಾಗಾಂಗ–ಈ ಅಂಗಂಗಳು.
ಈ ಅಂಗಂಗಳಿಗೆ ಆತ್ಮಂಗಳಾವಾವೆಂದಡೆ:
ಜೀವಾತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ,
ನಿರ್ಮಲಾತ್ಮ, ಶುದ್ಧಾತ್ಮ, ಮಹಾತ್ಮ, ಚಿದಾತ್ಮ, ದಿವ್ಯಾತ್ಮ–ಈ ಆತ್ಮಂಗಳು.
ಈ ಆತ್ಮಂಗಳಿಗೆ ಮೂರ್ತಿಗಳಾರಾರೆಂದೊಡೆ:
ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ,

ನಿಃಕಳ, ನಿರಾಳ, ನಿರಂಜನ–ಈ ಮೂರ್ತಿಗಳು.
ಈ ಮೂರ್ತಿಗಳಿಗೆ ತನುಗಳಾವಾವೆಂದಡೆ:
ಸ್ಥೂಲತನು, ಸೂಕ್ಷ್ಮತನು, ಕಾರಣತನು, ನಿರ್ಮಳತನು,
ಆನಂದತನು, ಶುದ್ಧತನು, ಚಿದ್ರೂಪತನು, ಚಿನ್ಮಯತನು, ನಿರ್ಮುಕ್ತತನುಗಳು.
ಈ ತನುಗಳಿಗೆ ಹಸ್ತಂಗಳಾವಾವೆಂದಡೆ:
ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ,
ಮಹಾಲಿಂಗ, ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಅಂತುಮಲ್ಲದೆ
ನಿಃಕಲಲಿಂಗ, ನಿಃಶೂನ್ಯಲಿಂಗ, ನಿರಂಜನಲಿಂಗ–ಈ ಲಿಂಗಂಗಳು.
ಈ ಲಿಂಗಂಗಳಿಗೆ ಮುಖಂಗಳಾವಾವೆಂದಡೆ:
ಘ್ರಾಣ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಹೃದಯ, ಪರಬ್ರಹ್ಮ,
ಅಗ್ರಶಿಖಿ, ಉನ್ಮನಿ–ಈ ಮುಖಂಗಳು.
ಈ ಮುಖಂಗಳಿಗೆ ಶಕ್ತಿಗಳಾವಾವೆಂದಡೆ:
ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಆದಿಶಕ್ತಿ, ಪರಾಶಕ್ತಿ,
ಚಿಚ್ಛಕ್ತಿ, ಪರಿಪೂರ್ಣಶಕ್ತಿ, ನಿಭ್ರಾಂತಶಕ್ತಿ, ನಿರ್ಭಿನ್ನಶಕ್ತಿ–ಈ ಶಕ್ತಿಗಳು.
ಈ ಶಕ್ತಿಗಳಿಗೆ ಭಕ್ತಿಗಳಾವಾವೆಂದಡೆ:
ಶ್ರದ್ಧಾಭಕ್ತಿ, ನೈಷ್ಠಿಕಾಭಕ್ತಿ, ಸಾವಧಾನಭಕ್ತಿ, ಅನುಭಾವಭಕ್ತಿ,
ಆನಂದಭಕ್ತಿ, ಸಮರಸಭಕ್ತಿ, ಪರಿಪೂರ್ಣಭಕ್ತಿ, ಅಪ್ರದರ್ಶಭಕ್ತಿ,
ನಿರ್ನಾಮಭಕ್ತಿ. ಅಂತುಮಲ್ಲದೆ ಅಖಂಡಭಕ್ತಿ, ನಿರಂಜನಭಕ್ತಿ–ಈ ಭಕ್ತಿಗಳು.
ಈ ಭಕ್ತಿಗಳಿಗೆ ಪದಾರ್ಥಂಗಳಾವಾವೆಂದಡೆ:
ಗಂಧಪದಾರ್ಥ, ರಸಪದಾರ್ಥ, ರೂಪುಪದಾರ್ಥ, ಸ್ಪರ್ಶನಪದಾರ್ಥ,
ಶಬ್ದಪದಾರ್ಥ, ತೃಪ್ತಿಪದಾರ್ಥ, ಆನಂದವೆಂಬ ರೂಪುಪದಾರ್ಥ,
ಪರಮಾನಂದವೆಂಬ ರುಚಿಪದಾರ್ಥ, ಪರಮಾಮೃತವೆಂಬ
ತೃಪ್ತಿ ಪದಾರ್ಥ–ಈ ಪದಾರ್ಥಂಗಳು.
ಈ ಪದಾರ್ಥಂಗಳು ಲಿಂಗಾರ್ಪಿತವಾದ ಪ್ರಸಾದಂಗಳಾವಾವೆಂದಡೆ:
ಸುಗಂಧಪ್ರಸಾದ, ಸುರಸಪ್ರಸಾದ, ಸುರೂಪುಪ್ರಸಾದ,
ಸುಸ್ಪರ್ಶನಪ್ರಸಾದ, ಸುಶಬ್ದಪ್ರಸಾದ, ಸುತೃಪ್ತಿಪ್ರಸಾದ, ಸುಅವಿರಳ
ಶುದ್ಧಪ್ರಸಾದ, ಸುಪರಮಾನಂದ ಸಿದ್ಧಪ್ರಸಾದ, ಸುಪರಮಾಮೃತ
ಪ್ರಸಿದ್ಧಪ್ರಸಾದ–ಈ ಪ್ರಸಾದಂಗಳು.
ಈ ಪ್ರಸಾದಂಗಳ ಲಿಂಗಾರ್ಪಿತವ ಮಾಡುವ ಪೂಜಾರಿಗಳಾರಾರೆಂದೊಡೆ:
ಬ್ರಹ್ಮಪೂಜಾರಿ, ವಿಷ್ಣುಪೂಜಾರಿ, ರುದ್ರಪೂಜಾರಿ, ಈಶ್ವರಪೂಜಾರಿ,
ಸದಾಶಿವಪೂಜಾರಿ, ಪರಶಿವಪೂಜಾರಿ, ಅಗಣಿತನೆಂಬ ಪೂಜಾರಿ,
ಅಪ್ರಮಾಣನೆಂಬ ಪೂಜಾರಿ, ಬಾಳೇಶ್ವರನೆಂಬ ಪೂಜಾರಿ–ಈ ಪೂಜಾರಿಗಳು.
ಈ ಪೂಜಾರಿಗಳಿಗೆ ಅಧಿದೈವಂಗಳಾರಾರೆಂದಡೆ:

ಭವನಧಿದೈವ, ಮೃಡನಧಿದೈವ, ಹರನಧಿದೈವ, ಭೀಮನಧಿದೈವ,
ಮಹಾದೇವನಧಿದೈವ, ಮಹಾಶ್ರೀಗುರುವಧಿದೈವ,
ಪದ್ಮೋದ್ಭವನಧಿದೈವ, ಚಿದಿಂದುವಧಿದೈವ, ಚಿತ್ಸೂರ್ಯವಧಿದೈವ,
ಈ ಅಧಿದೈವಂಗಳು.
ಈ ಅಧಿದೈವಂಗಳಿಗೆ ಬ್ರಹ್ಮಮೂರ್ತಿಗಳಾರಾರೆಂದೊಡೆ:
ಮೂರ್ತಿಬ್ರಹ್ಮ, ಪಿಂಡಬ್ರಹ್ಮ, ಕಲಾಬ್ರಹ್ಮ, ಆನಂದಬ್ರಹ್ಮ,
ವಿಜ್ಞಾನಬ್ರಹ್ಮ, ಪರಬ್ರಹ್ಮ, ಪರಿಪೂರ್ಣಬ್ರಹ್ಮ, ಅಖಂಡಬ್ರಹ್ಮ,
ಅವಿರಳಬ್ರಹ್ಮ–ಈ ಬ್ರಹ್ಮಗಳು.
ಈ ಬ್ರಹ್ಮಗಳಿಗೆ ಕಲೆಗಳಾವಾವೆಂದಡೆ:
ನಿವೃತ್ತಿಕಲೆ, ಪ್ರತಿಷ್ಠಾಕಲೆ, ವಿದ್ಯಾಕಲೆ, ಶಾಂತಿಕಲೆ,
ಶಾಂತ್ಯಾತೀತಕಲೆ, ಶಾಂತ್ಯಾತೀತೋತ್ತರಕಲೆ, ಅನಾದಿಯೆಂಬಕಲೆ,
ನಿರುಪಮಕಲೆ, ನಿರ್ವಾಚ್ಯಕಲೆ–ಈ ಕಲೆಗಳು.
ಈ ಕಲೆಗಳಿಗೆ ಸಾದಾಖ್ಯಂಗಳಾವಾವೆಂದಡೆ:
ಕರ್ಮಸಾದಾಖ್ಯ, ಕರ್ತೃಸಾದಾಖ್ಯ, ಮೂರ್ತಿಸಾದಾಖ್ಯ,
ಅಮೂರ್ತಿಸಾದಾಖ್ಯ, ಶಿವಸಾದಾಖ್ಯ, ಮಹಾಸಾದಾಖ್ಯ,
ನಿರ್ಮಾಯಸಾದಾಖ್ಯ, ಅವಿರಳಸಾದಾಖ್ಯ, ನಿರ್ಮುಕ್ತಿಸಾದಾಖ್ಯ
ಈ ಸಾದಾಖ್ಯಂಗಳು.
ಈ ಸಾದಾಖ್ಯಂಗಳಿಗೆ ಲಕ್ಷಣಂಗಳಾವಾವೆಂದಡೆ:
ಸತ್ತುವೆಂಬ ಲಕ್ಷಣ, ಚಿತ್ತುವೆಂಬ ಲಕ್ಷಣ, ಆನಂದವೆಂಬ ಲಕ್ಷಣ,
ನಿತ್ಯವೆಂಬ ಲಕ್ಷಣ, ಪರಿಪೂರ್ಣವೆಂಬ ಲಕ್ಷಣ, ಅಖಂಡವೆಂಬ ಲಕ್ಷಣ,
ಅನಾಮಯವೆಂಬ ಲಕ್ಷಣ, ಅಗಮ್ಯವೆಂಬ ಲಕ್ಷಣ,
ಅಪ್ರಮಾಣವೆಂಬ ಲಕ್ಷಣ,–ಈ ಲಕ್ಷಣಂಗಳು.
ಈ ಲಕ್ಷಣಂಗಳಿಗೆ ಸಂಜ್ಞೆಗಳಾವಾವೆಂದಡೆ:
ಪರವೆಂಬ ಸಂಜ್ಞೆ, ಗೂಢವೆಂಬ ಸಂಜ್ಞೆ, ಶರೀರಸ್ಥವೆಂಬ ಸಂಜ್ಞೆ,
ಲಿಂಗಕ್ಷೇತ್ರವೆಂಬ ಸಂಜ್ಞೆ, ಅನಾದಿವತ್ ಎಂಬ ಸಂಜ್ಞೆ, ಮಹಾಸಂಜ್ಞೆ,
ನಿರ್ನಾಮವೆಂಬ ಸಂಜ್ಞೆ, ಅಪ್ರಮಾಣವೆಂಬ ಸಂಜ್ಞೆ, ಅವಿರಳ ಸಂಜ್ಞೆ
ಈ ಸಂಜ್ಞೆಗಳು.
ಈ ಸಂಜ್ಞೆಗಳಿಗೆ ದಿಕ್ಕುಗಳಾವಾವೆಂದಡೆ:
ಪಶ್ಚಿಮದಿಕ್ಕು, ಉತ್ತರದಿಕ್ಕು, ದಕ್ಷಿಣದಿಕ್ಕು, ಪೂರ್ವದಿಕ್ಕು,
ಊರ್ಧ್ವದಿಕ್ಕು, ಗಂಭೀರದಿಕ್ಕು, ಘನದಿಕ್ಕು, ಸುವ್ವವಯನೆಂಬದಿಕ್ಕು,
ಜ್ಞಾನಸೂರ್ಯಮಹಾಜ್ಯೋತಿ ದಿವ್ಯವಾದ ಘೋಷದಿಕ್ಕು,–ಈ ದಿಕ್ಕುಗಳು.
ಈ ದಿಕ್ಕುಗಳಿಗೆ ವಕ್ತ್ರಂಗಳಾವಾವೆಂದಡೆ:
ಸದ್ಯೋಜಾತವಕ್ತ್ರ, ವಾಮದೇವವಕ್ತ್ರ, ಅಘೋರವಕ್ತ್ರ,
ತತ್ಪುರುಷವಕ್ತ್ರ, ಈಶಾನವಕ್ತ್ರ, ಗೋಪ್ಯವಕ್ತ್ರ, ತಾರಕಬ್ರಹ್ಮವೆಂಬ ವಕ್ತ್ರ,

ಸುರಾಳವೆಂಬ ವಕ್ತ್ರ, ನಿರಂಜನವೆಂಬ ವಕ್ತ್ರ–ಈ ವಕ್ತ್ರಂಗಳು.
ಈ ವಕ್ತ್ರಂಗಳಲ್ಲಿ ಪುಟ್ಟಿದ ವೇದಂಗಳಾವಾವೆಂದಡೆ:
ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ,
ಅಜಪವೇದ, ಗಾಯತ್ರಿವೇದ, ಗಾಂಧರ್ವವೇದ, ಧನುರ್ವೇದ,
ಕಾಣ್ವವೇದ ಅಂತುಮಲ್ಲದೆ ಆಯುರ್ವೇದ, ವರ್ತುಳವೇದ,
ಅರ್ಥವೇದ–ಈ ವೇದಂಗಳು.
ಈ ವೇದಂಗಳಿಗೆ ಅಧ್ವಂಗಳಾವಾವೆಂದಡೆ:
ಭುವನಾಧ್ವ, ಪದಾಧ್ವ, ವರ್ಣಾಧ್ವ, ಕಲಾಧ್ವ, ತತ್ವಾಧ್ವ,
ಮಂತ್ರಾಧ್ವ, ಲಿಂಗಾಧ್ವ, ಪ್ರಸಾದಾಧ್ವ, ಸರ್ವಶೂನ್ಯಾಧ್ವ ಈ ಅಧ್ವಂಗಳು.
ಈ ಸಕೀಲಂಗಳೆಲ್ಲ ಇಪ್ಪ ಬ್ರಹ್ಮದ ವೃತ್ತ, ಕಟಿ, ವರ್ತುಳ,
ಗೋಮುಖ, ನಾಳ, ಗೋಳಕ, ಆಜ್ಯಪ್ರದಾರಿಕೆ, ಅಭ್ರಶಿಖಿ,
ಚಿದಬ್ಜವೆಂಬ ನವಸ್ಥಾನಂಗಳಲ್ಲಿ ಸಂಬಂಧವಾಗಿಹವು. ಅದೆಂತೆಂದು ಸದ್ಭಕ್ತ
ಶರಣಜನಂಗಳು ಬೆಸಗೊಂಡಲ್ಲಿ, ಮುಂದೆ ತ್ರಿವಿಧ ಲಿಂಗಾನುಭಾವಿಗಳಾದ
ಷಟ್‌ಸ್ಥಲಬ್ರಹ್ಮಿಗಳು ಸೂತ್ರವಿಟ್ಟು ನಿರೂಪಿಸುತ್ತಿಹರು.
ಇಂತು ಹಿಂದೆ ಹೇಳಿದ ಸಕೀಲಂಗಳನು ಹಸ್ತಾಬ್ಜ ಪೀಠದಲ್ಲಿ
ಮೂರ್ತಿಗೊಂಡಿಪ್ಪ ಪಂಚಸೂತ್ರಯುಕ್ತವಾದ ವಿಷ್ಣುಬ್ರಹ್ಮದಲ್ಲಿ
ಸಂಬಂಧ ಮಾಡುವ ಭೇದವ ಸದ್ಭಕ್ತ ಶರಣಜನಂಗಳು ಬೆಸಗೊಂಡಲ್ಲಿ,
ಮುಂದೆ ತ್ರಿವಿಧ ಲಿಂಗಾನುಭಾವಿಗಳಾದ ಷಟ್‌ಸ್ಥಲ ಸಂಪನ್ನರಾದ
ವೀರಶೈವಾಚಾರ್ಯರು ಉಪದೇಶವ ಮಾಡುತ್ತಿಹರು.
ಅದೆಂತೆದೊಡೆ:
ಆ ವಿಷ್ಣು ಬ್ರಹ್ಮದಧೋಕಂಜದಲ್ಲಿ ತಾರಕಾಕೃತಿ, ನಕಾರಪ್ರಣವ,
ಪೆಣ್ದುಂಬಿನಾದ, ಭಕ್ತನೆಂಬಪಿಂಡ, ಆಧಾರಚಕ್ರ, ಪೀತವರ್ಣ,
ಪೃಥ್ವಿಯಂಗ, ಜೀವಾತ್ಮಭಕ್ತ, ಸ್ಥೂಲತನು, ಸುಚಿತ್ತಹಸ್ತ, ಆಚಾರಲಿಂಗ,
ಘ್ರಾಣವೆಂಬ ಮುಖ, ಕ್ರಿಯಾಶಕ್ತಿ, ಶ್ರದ್ಧಾಭಕ್ತಿ, ಗಂಧಪದಾರ್ಥ,
ಸುಗಂಧಪ್ರಸಾದ, ಬ್ರಹ್ಮಪೂಜಾರಿ, ಭವನಧಿದೈವ, ನಿವೃತ್ತಿಕಳೆ,
ಕರ್ಮಸಾದಾಖ್ಯ, ಸತ್ತುವೆಂಬ ಲಕ್ಷಣ, ಪರವೆಂಬ ಸಂಜ್ಞೆ,
ಸದ್ಯೋಜಾತವಕ್ತ್ರ, ಋಗ್ವೇದ ಇಂತಿವೆಲ್ಲವು
ಇಷ್ಟಲಿಂಗದ ವೃತ್ತದಲ್ಲಿ ಸಂಬಂಧವು.
ದಂಡಾಕೃತಿ, ಮಕಾರಪ್ರಣವ, ವೇಣುನಾದ, ಮಾಹೇಶ್ವರನೆಂಬ ಪಿಂಡ,
ಸ್ವಾಧಿಷ್ಠಾನಚಕ್ರ, ಶ್ವೇತವರ್ಣ, ಅಪ್ಪುವಂಗ, ಅಂತರಾತ್ಮ,
ಮಾಹೇಶ್ವರ, ಸೂಕ್ಷ್ಮತನು, ಸುಬುದ್ಧಿ ಹಸ್ತ, ಗುರುಲಿಂಗ, ಜಿಹ್ವೆಯೆಂಬ
ಮುಖ, ಜ್ಞಾನಶಕ್ತಿ, ನೈಷ್ಠಿಕಾಭಕ್ತಿ, ರಸಪದಾರ್ಥ, ಸುರಸಪ್ರಸಾದ,
ವಿಷ್ಣುಪೂಜಾರಿ, ಮೃಡನಧಿದೈವ, ಪ್ರತಿಷ್ಠೆಯೆಂಬಕಲೆ, ಕರ್ತೃಸಾದಾಖ್ಯ,

ಚಿತ್ತುವೆಂಬ ಲಕ್ಷಣ, ಗೂಢವೆಂಬ ಸಂಜ್ಞೆ, ವಾಮದೇವ ವಕ್ತ್ರ
ಯಜುರ್ವೇದ– ಇಂತಿವೆಲ್ಲವು ಇಷ್ಟಲಿಂಗದ ಕಟಿಯಲ್ಲಿ ಸಂಬಂಧವು.
ಕುಂಡಲಾಕೃತಿ, ಶಿಕಾರಪ್ರಣವ, ಘಂಟಾನಾದ, ಪ್ರಸಾದವೆಂಬ ಪಿಂಡ,
ಮಣಿಪೂರಕ ಚಕ್ರ, ಪುಷ್ಯರಾಗವರ್ಣ, ಅಗ್ನಿಯೆಂಬ ಅಂಗ, ಪರಮಾತ್ಮ,
ಪ್ರಸಾದಿ, ಕಾರಣತನು, ನಿರಹಂಕಾರಹಸ್ತ, ಶಿವಲಿಂಗ, ನೇತ್ರವೆಂಬ ಮುಖ
ಇಚ್ಛಾಶಕ್ತಿ, ಸಾವಧಾನಭಕ್ತಿ, ರೂಪುಪದಾರ್ಥ, ಸುರೂಪುಪ್ರಸಾದ,
ರುದ್ರಪೂಜಾರಿ, ಹರನಧಿದೈವ, ವಿದ್ಯಾಕಲೆ, ಮೂರ್ತಿಸಾದಾಖ್ಯ,
ಆನಂದವೆಂಬ ಲಕ್ಷಣ, ಶರೀರಸ್ಥವೆಂಬ ಸಂಜ್ಞೆ, ಅಘೋರವಕ್ತ್ರ,
ಸಾಮವೇದ–ಇಂತಿವೆಲ್ಲವು ಇಷ್ಟಲಿಂಗದ ವರ್ತುಳದಲ್ಲಿ ಸಂಬಂಧವು.
ಅರ್ಧಚಂದ್ರಾಕೃತಿ, ವಕಾರಪ್ರಣವ, ಭೇರಿನಾದ, ಪ್ರಾಣಲಿಂಗಿಯೆಂಬ ಪಿಂಡ,
ಅನಾಹತಚಕ್ರ, ಮುತ್ತಿನವರ್ಣ, ವಾಯುವಂಗ, ನಿರ್ಮಲಾತ್ಮ,
ಪ್ರಾಣಲಿಂಗಿ, ನಿರ್ಮಲತನು, ಮನಹಸ್ತ, ಜಂಗಮಲಿಂಗ, ತ್ವಕ್ಕೆಂಬ ಮುಖ,
ಆದಿಶಕ್ತಿ, ಅನುಭಾವಭಕ್ತಿ, ಸ್ಪರ್ಶಪದಾರ್ಥ, ಸುಸ್ಪರ್ಶನ ಪ್ರಸಾದ,
ಈಶ್ವರಪೂಜಾರಿ, ಭೀಮನಧಿದೈವ, ಶಾಂತಿಕಲೆ, ಅಮೂರ್ತಿಸಾದಾಖ್ಯ,
ನಿತ್ಯವೆಂಬ ಲಕ್ಷಣ, ಲಿಂಗಕ್ಷೇತ್ರವೆಂಬ ಸಂಜ್ಞೆ, ತತ್ಪುರುಷವಕ್ತ್ರ,
ಅಥರ್ವಣವೇದ–ಇಂತಿವೆಲ್ಲವು ಇಷ್ಟಲಿಂಗದ ಗೋಮುಖದಲ್ಲಿ ಸಂಬಂಧವು.
ದರ್ಪಣಾಕೃತಿ, ಯಕಾರಪ್ರಣವ, ಮೇಘನಾದ, ಶರಣನೆಂಬ ಪಿಂಡ,
ವಿಶುದ್ಧಿ ಚಕ್ರ, ಪೈಢೂರ್ಯದ ವರ್ಣ, ಆಕಾಶವಂಗ, ಶುದ್ಧಾತ್ಮ, ಶರಣ,
ಆನಂದತನು, ಸುಜ್ಞಾನಹಸ್ತ. ಪ್ರಸಾದಲಿಂಗ, ಶ್ರೋತ್ರಮುಖ, ಪರಾಶಕ್ತಿ,
ಆನಂದಭಕ್ತಿ, ಶಬ್ದಪದಾರ್ಥ, ಸುಶಬ್ದಪ್ರಸಾದ, ಸದಾಶಿವಪೂಜಾರಿ,
ಮಹಾದೇವನಧಿದೈವ, ಶಾಂತ್ಯತೀತಕಲೆ, ಶಿವಸಾದಾಖ್ಯ
ಪರಿಪೂರ್ಣವೆಂಬ ಲಕ್ಷಣ, ಅನಾದಿವತ್ ಎಂಬ ಸಂಜ್ಞೆ, ಈಶಾನವಕ್ತ್ರ,
ಅಜಪವೇದ– ಇಂತಿವೆಲ್ಲವು ಇಷ್ಟಲಿಂಗದ ನಾಳದಲ್ಲಿ ಸಂಬಂಧವು.
ಜ್ಯೋತಿರಾಕೃತಿ, ಓಂಕಾರಪ್ರಣವ, ಪ್ರಣವನಾದ,
ಐಕ್ಯನೆಂಬ ಪಿಂಡ, ಆಜ್ಞಾಚಕ್ರ, ಎಳೆಯಮಾಣಿಕ್ಯವರ್ಣ, ಆತ್ಮನೆಂಬ ಅಂಗ,
ಜ್ಞಾನಾತ್ಮ, ಐಕ್ಯನೆಂಬ ಮೂರ್ತಿ, ಶುದ್ಧತನು, ಸದ್ಭಾವಹಸ್ತ,
ಮಹಾಲಿಂಗ, ಹೃದಯಮುಖ, ಚಿಚ್ಛಕ್ತಿ, ಸಮರಸಭಕ್ತಿ, ತೃಪ್ತಿಪದಾರ್ಥ,
ಸುತೃಪ್ತಿಪ್ರಸಾದ, ಪರಶಿವಪೂಜಾರಿ, ಮಹಾಶ್ರೀಗುರುವಧಿದೈವ,
ಶಾಂತ್ಯತೀತೋತ್ತರೆ ಎಂಬ ಕಲೆ, ಮಹಾಸಾದಾಖ್ಯ ಅಖಂಡವೆಂಬ ಲಕ್ಷಣ,
ಮಹಾಸಂಜ್ಞೆ, ಗೋಪ್ಯವಕ್ತ್ರ, ಗಾಯತ್ರಿವೇದ– ಇಂತಿವೆಲ್ಲವು ಇಷ್ಟಲಿಂಗದ
ಗೋಳಕದಲ್ಲಿ ಸಂಬಂಧವು.
ನಿಷ್ಕಲಾಕೃತಿ, ಬಕಾರಪ್ರಣವ, ಸುನಾದ, ಚಿನ್ಮಣನೆಂಬ ಪಿಂಡ

ಬ್ರಹ್ಮಚಕ್ರ, ಗೋಮೇಧಿಕವರ್ಣ, ತ್ಯಾಗಾಂಗ, ಮಹಾತ್ಮ, ನಿಃಕಲವೆಂಬ ಭಕ್ತಿ,
ಚಿದ್ರೂಪತನು, ನಿರ್ಭಾವಹಸ್ತ, ಇಷ್ಟಲಿಂಗ, ಪರಬ್ರಹ್ಮವೆಂಬ ಮುಖ,
ಅನಾಮಯಶಕ್ತಿ, ಪರಿಪೂರ್ಣಭಕ್ತಿ, ಆನಂದವೆಂಬ ರೂಪುಪದಾರ್ಥ,
ಅವಿರಳಶುದ್ಧಪ್ರಸಾದ, ಅಗಣಿತನೆಂಬ ಪೂಜಾರಿ, ಪದ್ಮೋದ್ಭವನಧಿದೈವ,
ಅನಾದಿಯೆಂಬ ಕಲೆ, ನಿರ್ಮಾಯ ಸಾದಾಖ್ಯ, ಅನಾಮಯವೆಂಬ ಲಕ್ಷಣ,
ನಿರ್ನಾಮವೆಂಬ ಸಂಜ್ಞೆ, ತಾರಕಬ್ರಹ್ಮವೆಂಬ ವಕ್ತ್ರ, ಗಾಂಧರ್ವವೇದ–
ಇಂತಿವೆಲ್ಲವು ಇಷ್ಟಲಿಂಗದ ಆಜ್ಯಪ್ರದಾರಿಕೆಯಲ್ಲಿ ಸಂಬಂಧವು.
ನಿರಾಳಾಕೃತಿ, ಕ್ಷಕಾರಪ್ರಣವ, ಅಗಣಿತನಾದ, ಚಿನ್ಮಯನೆಂಬ ಪಿಂಡ,
ಶಿಖಾಚಕ್ರ, ಪಶ್ಯವರ್ಣ, ವಿಶ್ವಮಾದಯೋಗಾಂಗ, ಚಿದಾತ್ಮ, ನಿರಾಳವೆಂಬ ಭಕ್ತ,
ಚಿನ್ಮಯತನು, ನಿರ್ಮಾಯ ಹಸ್ತ ಶೂನ್ಯಸ್ವರೂಪವಪ್ಪ
ಪ್ರಾಣಲಿಂಗ, ಅಭ್ರಶಿಖಿಯೆಂಬ ಮುಖ, ನಿರ್ಭ್ರಾಂತಶಕ್ತಿ, ಅಪ್ರದರ್ಶನಭಕ್ತಿ,
ರುಚಿಪದಾರ್ಥ, ಸುರುಚಿಪ್ರಸಾದ, ಅಪ್ರಮಾಣನೆಂಬ ಪೂಜಾರಿ,
ಚಿದ್ಬಿಂದುವೆಂಬ ಅಧಿದೈವ, ನಿರುಪಮ ಕಲೆ, ಅವಿರಳ ಸಾದಾಖ್ಯ,
ಅಗಮ್ಯವೆಂಬ ಲಕ್ಷಣ, ಅಪ್ರಮಾಣಸಂಜ್ಞೆ, ಸುರಾಳವೆಂಬ ವಕ್ತ್ರ,
ಧನುರ್ವೇದ– ಇಂತಿವೆಲ್ಲವು ನಿಶ್ಶೂನ್ಯ ಸ್ವರೂಪವಪ್ಪ ಪ್ರಾಣಲಿಂಗದ
ಅಭ್ರಶಿಖಿಯಲ್ಲಿ ಸಂಬಂಧವು.
ಏಕನಿರಂಜನಾಕೃತಿ, ಏಕಾರ ಪ್ರಣವ, ದಿವ್ಯನಾದ, ಚಿನ್ಮೂರ್ತಿಯೆಂಬ ಪಿಂಡ,
ಪಶ್ಚಿಮಚಕ್ರ, ವಜ್ರದ ವರ್ಣ, ಭೋಗಾಂಗ, ದಿವ್ಯಾತ್ಮ,
ನಿರಂಜನನೆಂಬ ಶರಣ, ನಿರ್ಮಲತನು, ನಿರಾಳಹಸ್ತ, ನಿರಂಜನ
ಸ್ವರೂಪವಪ್ಪ ಭಾವಲಿಂಗ, ಉನ್ಮನಿಯೆಂಬ ಮುಖ, ನಿರ್ಭಿನ್ನಶಕ್ತಿ,
ನಿರಂಜನಭಕ್ತಿ, ಪರಮಾಮೃತ ಪದಾರ್ಥ, ಪರಿಪೂರ್ಣವೆಂಬ ಪ್ರಸಿದ್ಧ
ಪ್ರಸಾದ, ಬಾಲೇಶ್ವರನೆಂಬ ಪೂಜಾರಿ ಚಿತ್ಸೂರ್ಯನಧಿದೇವತೆ,
ನಿರ್ವಾಜ್ಯಕಲೆ, ನಿರ್ಮುಕ್ತ ಸಾದಾಖ್ಯ, ಅಪ್ರಮಾಣವೆಂಬ ಲಕ್ಷಣ,
ಅವಿರಳ ಸಂಜ್ಞೆ, ಜ್ಞಾನಶೂನ್ಯಮಹಾಜ್ಯೋತಿದಿವ್ಯನಾದ ಘೋಷದಿಕ್ಕು,
ನಿರಂಜನನೆಂಬ ವಕ್ತ್ರ, ಕಾಣ್ವವೇದ– ಇಂತಿವೆಲ್ಲವು ಅದೇ ಇಷ್ಟಲಿಂಗದ
ಒಂದೆಸೆಯಲ್ಲಿರ್ಪ ನಿರಂಜನ ಸ್ವರೂಪವಪ್ಪ ಚಿದ್ವಸ್ತುವಿನಲ್ಲಿ ಸಂಬಂಧವು. || ೪೫೭
ಕೂಡಲಚೆನ್ನಸಂಗಮದೇವಾ.

೧೩೦೯

ತಾವು ಗುರುವೆಂದು ಮುಂದಣವರಿಗನುಗ್ರಹವ ಮಾಡುವರಯ್ಯಾ,
ತಾವು ಗುರುವೆಂತಾದರೋ! ಎಲ್ಲರಿಗೆಯೂ ಒಂದೇ ದೇಹ.
"ಸಪ್ತಧಾತು ಸಮಂ ಪಿಂಡಂ ಸಮಯೋನಿ ಸಮುದ್ಭವಂ|
ಆತ್ಮಕಾಯ ಸಮಾಯುಕ್ತಂ ವರ್ಣಾನಾಂ ಕಿಂ ಪ್ರಯೋಜನಂ –
ಎಂಬುದಾಗಿ, ಗುರುವೆಂಬುದು ತಾನು ಪರುಷವು

ಆ ಪರುಷವು ಮುಟ್ಟಲೊಡನೆ ಉಳಿದ ಲೋಹಂಗಳು ಸುವರ್ಣವಾದುವಲ್ಲದೆ,
ಆ ಪರುಷವೆ ಆಗಲರಿಯವು–ಅದು ಗುರುಸ್ಥಲವಲ್ಲ ನಿಲ್ಲು ಮಾಣು.
ಗುರುವೆಂಬುದು ತಾನು ಸ್ವಯಂ ಜ್ಯೋತಿಪ್ರಕಾಶವು,
ಅಂತಪ್ಪ ಸ್ವಯಂಜ್ಯೋತಿ ಪ್ರಕಾಶವ ತಂದು
ಪರಂಜ್ಯೋತಿಯ ಹೊತ್ತಿಸಿದಡೆ, ಆ ಜ್ಯೋತಿ ತನ್ನಂತೆ ಮಾಡಿತ್ತು.
ಅದಾವ ಜ್ಯೋತಿಯೆಂದಡೆ ಪಶ್ಚಿಮ ಜ್ಯೋತಿ.
ಆ ಪಶ್ಚಿಮ ಜ್ಯೋತಿಯ ಬೆಳಗಿನಿಂದ ಪ್ರಾಣಲಿಂಗವ ಕಂಡು ಸುಖಿಯಾದೆನು.
ನಾಲ್ಕು ವೇದಾರ್ಥ: ಅಜಪಗಾಯತ್ರಿ.
ಅಜಪಗಾಯತ್ರಿಯರ್ಥ: ಪ್ರಾಣಾಯಾಮ.
ಪ್ರಾಣಾಯಾಮದಿಂದ ಪ್ರಾಣಲಿಂಗ ಸಂಬಂಧವ ಮಾಡೂದು.
ಇಷ್ಟರಲ್ಲಿ ತಾನು ಸ್ವತಂತ್ರನಾದಡೆ, ಇಷ್ಟಲಿಂಗವನಾರಿಗಾದರೂ ಕೊಡುವ್ರಮು.
ಇಲ್ಲದಿದ್ದರೆ ಅಂಧಕನ ಕೈಯ ಹೆಳವ ಹಿಡಿದಂತೆ ಕಾಣಾ
ಕೂಡಲಚೆನ್ನಸಂಗಮದೇವಯ್ಯಾ. ॥ ೪೫೭ ॥

೧೩೧೦

ತಾ ಸವಿದಲ್ಲದೆ ಲಿಂಗಕ್ಕೆ ಕೊಡಲಾಗದು,
ಆ ಲಿಂಗವು ಕಹಿ–ಸಿಹಿಯೆಂದರಿಯದಾಗಿ,
ಕಹಿಯ ಕಳೆದು ಸಿಹಿಯೆಂದು ಕೊಡದೆ ಕೊಂಡುದು ಕಿಲ್ಬಿಷ
ಕೂಡಲಚೆನ್ನಸಂಗಮದೇವಾ. ॥ ೪೫೮ ॥

೧೩೧೧

ತಿಳಿದುಪ್ಪ ಗಟ್ಟಿದುಪ್ಪಕ್ಕೆ ಭೇದವುಂಟೆ?
ದೀಪಕ್ಕೆ ದೀಪ್ತಿಗೆ ಭಿನ್ನವುಂಟೆ?
ಆತ್ಮಕ್ಕೆಯೂ ದೇಹಕ್ಕೆಯೂ ಸಂದುಂಟೆ?
ಕ್ಷೀರಕ್ಕೆಯೂ ಸ್ವಾದಕ್ಕೆಯೂ ಭೇದವುಂಟೆ?
ಇದು ಕಾರಣ, ಸಾಕಾರವೆ ನಿರಾಕಾರವೆಂದುದು;
ಅಂಗಲಿಂಗಸಂಬಂಧವಿಲ್ಲದವರ ಸಂಗ ಭಂಗವೆಂದು
ಕೂಡಲಚೆನ್ನಸಂಗಯ್ಯನ ಶರಣರು ಮೆಚ್ಚರಯ್ಯಾ ಪ್ರಭುವೆ ॥ ೪೫೯ ॥

೧೩೧೨

ತುದಿ ಮೊದಲಿಲ್ಲದ ಘನವ ನೋಡಾ,
ಒಳಹೊರಗಿಲ್ಲದ ಅಸುವ ನೋಡಾ,
ಗುರುಲಿಂಗಜಂಗಮ ತಾನೆಯಾಗಿ,

ಮತ್ತೆ ತಾನೆಂಬುವೇನೂ ಇಲ್ಲದ ಪರಿಯ ನೋಡಾ!
ತನ್ನ ತಾನಿರ್ದೆಸೆಯ ಮಾಡಿಕೊಂಡು
ನಿಜಪದವನೆಯ್ದಿಪ್ಪ ಪರಿಯ ನೋಡಾ.
ಕೂಡಲಚೆನ್ನಸಂಗಮದೇವರಲ್ಲಿ
ಪ್ರಸಾದಿಯಾಗಿಪ್ಪ ಮರುಳಶಂಕರದೇವರ ನಿಲವ ನೋಡಾ! || ೪೭೦ ||

೧೩೧೩

ತೆಂಗಿನೊಳಗಣ ತಿರುಳು ಸೇವಿಸಬರ್ಪುದಲ್ಲದೆ
ಹೊರಗಣ ಪರಟೆ ಸೇವಿಸಲು ಬಾರದು.
ಚಾಂಡಾಲಂಗೆ ಜ್ಞಾನವಂಕುರಿಸಿದಡೆ
ಆತನ ಅಂತರಂಗದ ವೃತ್ತಿಗೆ ಪೂಜ್ಯತೆಯಲ್ಲದೆ
ಬಹಿರಂಗದ ತನುವಿಗೆ ಪೂಜ್ಯತೆಯಾಗದು.
ಒಳಹೊರಗೆಂಬ ಭೇದವಿಲ್ಲದೆ ಸೇವಿಸಲುಚಿತವಪ್ಪಂತೆ
ಶಿವಕುಲಪ್ರಸೂತಂಗೆ ಶಿವಜ್ಞಾನವಾಗಲು
ಆತನ ತನುವೃತ್ತಿಗಳೆರಡೂ ಸೇವ್ಯವಾಗಿರ್ಪವು.—
ಇಂತಿದು ಸಾಧಕರ ಸ್ಥಿತಿಯಯ್ಯಾ ಕೂಡಲಚೆನ್ನಸಂಗಮದೇವಾ. || ೪೭೧ ||

೧೩೧೪

ತೆರಹಿಲ್ಲದ ಘನವು ಭಿನ್ನವಾಯಿತ್ತೆಂದು
ತನುವಿನ ಮೇಲೆ ಶಸ್ತ್ರವನಿಕ್ಕಿಕೊಂಬ
ಶಿವದ್ರೋಹಿಯ ಮುಖವ ನೋಡಲಾಗದು.
ಕಲುಕುಟಿಗ ಮುಟ್ಟಿ ಚಕ್ಕೆಳುವಾಗ,
ಪ್ರಾಣಲಿಂಗ ಭಿನ್ನವಾಯಿತ್ತೆ? ಭಾವಲಿಂಗ ಭಿನ್ನವಾಯಿತ್ತೆ?
ಪೂಜಾಲಿಂಗ ಭಿನ್ನವಾಯಿತ್ತಲ್ಲದೆ.
ಇಂತೀ ನಿರಾಳದ ನೆಲೆಯ ಸೋಂಕನಾರೂ ಅರಿಯರು.
ಇಷ್ಟಲಿಂಗ ಬಿದ್ದಿತ್ತೆಂಬ ಕಷ್ಟವ ನೋಡಾ
ಕೂಡಲಚೆನ್ನಸಂಗಮದೇವಾ. || ೪೭೨ ||

೧೩೧೫

ತೆರಹಿಲ್ಲದ ಘನವು ಮನದೊಳಗೆ ನಿಂದು ನೆಲೆಗೊಂಡ ಬಳಿಕ,
ಆ ಘನವ ತೆರೆಯ ಮರೆಯಲಡಗಿಸಿಹೆನೆಂಬಡೆ ಅಡಗುವುದೆ?
ಹೇಮಗಿರಿಯ ಕದ್ದು ಭೂಮಿಯಲಡಗಿಸಿಹೆನೆಂಬಡೆ
ಆ ಕಳವು ಸಿಕ್ಕದೆ ಮಾಣ್ಬುದೆ?

ಕೂಡಲಚೆನ್ನಸಂಗನ ಶರಣ ಪ್ರಭುವಿನಲ್ಲಿ ಬೆರಸಿದ ಸುಖವ
ಮರೆಸಿಹೆನೆಂದಡೆ ನಿನ್ನಳವೆ ಹೇಳಾ ಸಂಗನಬಸವಣ್ಣಾ? || ೪೬೩ ||

೧೩೧೬

ತೆರಹಿಲ್ಲದ ಮಹಾಘನ ಪರಿಪೂರ್ಣ ಲಿಂಗಭರಿತವೆಂದೇ ಭಾವಿಸಿ, ಪೂಜಿಸಿ,
ಮರಳಿ ಬಿದ್ದಿತ್ತು ಕೆಡೆಯಿತ್ತು ಎಂಬ ಅಜ್ಞಾನವ ನೋಡಾ!
ತೆರಹಿಲ್ಲದ ಪರಿಪೂರ್ಣ ಲಿಂಗವು, ಬೀಳಲಿಕ್ಕೆ ತೆರಹುಂಟೆ?
ಅರಿಯರು ಪ್ರಾಣಲಿಂಗದ ನೆಲೆಯನು.
ಅರಿಯದೆ ಅಜ್ಞಾನದಲ್ಲಿ ಕುರುಹು ಬಿದ್ದಿತ್ತೆಂದು
ಪ್ರಾಣಘಾತವ ಮಾಡಿಕೊಂಡು ಸಾವ ಅಜ್ಞಾನಿಗಳ ನೋಡಾ!
ಅರಿದು ಕೂಡಿ ಸ್ವಯವಾಗಿರ್ದ ಲಿಂಗವು ಓಸರಿಸಿತ್ತೆಂದು
ಆ ಲಿಂಗದೊಡನೆ ಪ್ರಾಣಘಾತವ ಮಾಡಿಕೊಂಡು ಸಾವ ಅಜ್ಞಾನಿಗಳಿಗೆ
ಅಘೋರ ನರಕ ತಪ್ಪದು ಕಾಣಾ–ಕೂಡಲಚೆನ್ನಸಂಗಮದೇವಾ. || ೪೬೪ ||

೧೩೧೭

ತ್ರಿವಿಧನಿರ್ವಂಚಕನೆ ಭಕ್ತ, ತ್ರಿವಿಧವಿರಾಗಿಯೆ ಜಂಗಮ.
ಭಾಷೆಗೆ ತಪ್ಪದಿರ್ದಡೆ ಮಾಹೇಶ್ವರ, ವೇಷವ ತೋರದಿರ್ದಡೆ ಜಂಗಮ.
ಇಂದ್ರಿಯ ವಿಕಾರವಳಿದಡೆ ಪ್ರಸಾದಿ, ಮನವಳಿದಡೆ ಜಂಗಮ.
ಪ್ರಾಣಸಂಚಾರಗೆಟ್ಟಡೆ ಪ್ರಾಣಲಿಂಗಿ, ಜೀವಭಾವಗೆಟ್ಟಡೆ ಜಂಗಮ.
ಅರಿವಿನ ಭ್ರಾಂತಳಿದರೆ ಶರಣ, ಬೋಧೆಗೆಟ್ಟಡೆ ಜಂಗಮ.
ತಾನಿಲ್ಲದಿರ್ದಡೆ ಐಕ್ಯ, ಏನೂ ಇಲ್ಲದಿರ್ದಡೆ ಜಂಗಮ–
ಇಂತೀ ಷಟ್‌ಸ್ಥಲದಲ್ಲಿ ನಿಜವನರಿದು ನೆಲೆಗೊಂಡಾತನೆ ಶ್ರೀಗುರು.
ಇಂತಲ್ಲದೆ ನುಡಿಯಲ್ಲಿ ಅದ್ವೈತವನಾಡಿ
ನಡೆಯಲ್ಲಿ ಅನಂಗವ ನಡೆವರ ಕಂಡಡೆ
ಎನ್ನ ಮನ ನಾಚಿತ್ತು ಕೂಡಲಚೆನ್ನಸಂಗಮದೇವಾ. || ೪೬೫ ||

೧೩೧೮

ದಶ ದ್ವಾದಶಂಗಳ ಪೋಲಿಣ ಬಾಗಿಲಲಿರ್ದು, ಕಾಲ ಜರಾ ಮರಣವೆಂಬ
ಬಾಗಿಲ ಹೊಗದೆ ಹೊನ್ನಬಣ್ಣವಾಗದಂತೆ ಮಾಡಿಕೊಂಬುದು.
ಕುಲಸಂಕುಲವಾಗದೆ ದಶದಿಕ್ಕಿನಲ್ಲಿ ದೇಸಿಗನಾಗದೆ ದೇಶಿಕನಾಗಿರಬೇಕು
ದಶಸ್ಥಾನಂಗಳ ನೋಡಿ ಲಿಂಗಸ್ಥಾನದಲ್ಲಿ ನಿಂದು.
ಇಂತು ದಶಸಂಪಾದನೆ ಮೂವತ್ತಾರರಿಂದ, ಸಂಸಾರಮೃಗದ

ಮರೀಚಿಕಾಜಲದ ಮಾಯವೆಂದರಿತು ನಿಶ್ಚಲ ಮತಿಯಿಂದ
ಶುದ್ಧಾತ್ಮಚಿತ್ತರಾಗಿ ಆರಾಧಿಸಬೇಕು ಕೂಡಲಚೆನ್ನಸಂಗನ ಶರಣರು. ॥ ೪೬೬ ॥

೧೩೯

ದಶರಥನ ಸುತ ರಘುರಾಮನು ಅಸುರಪಡೆಯ ಸಂಹರಿಸಿ,
ಅವರ ಸತಿಜನಂಗಳ ಹಿಡಿತಂದು, ಅವರ ಸರ್ವಾಂಗದಲ್ಲಿ
ಭಗ ಮೇಢ್ರ ಶ್ವಪಚಪಾದುಕೆ ಶ್ವಾನಮುದ್ರೆಗಳನೊತ್ತಿ
ಸುರೆ ಮಾಂಸವ ಕೊಂಡು, ಹಲಬರಿಗುರುಳುತ್ತಲಿರಿ ಇತ್ತ ದಕ್ಷಿಣಾವನಿಯಲ್ಲಿ
ಎಂದು ಹೋಗಲು, ಆ ಸುರಸತಿಯರು ತಮ್ಮಂಗಮಧ್ಯದೊಳು ಬರೆದೊತ್ತಿದ
ಆ ಭಗ ಮೇಢ್ರ ಶ್ವಪಚಪಾದುಕೆ ಶ್ವಾನಮುದ್ರೆಗಳನು
ತಮ್ಮುಪಮೆಗಳಿಂದ ಹಸಿರು ಹಚ್ಚೆಗಳೆಂದು ಹೆಸರಿಟ್ಟುಕೊಂಡು,
ಹಲವಂದದಿಂದ ನುಡಿದು
ಬರೆದಿರಿದುಕೊಂಡು ನಡೆದು ಬಳಿವಿಡಿದು ಬಂದ ಈ ಪತಿತಲೇಖಸವನು,
ಹರಭಕ್ತಾಂಗನೆಯರು ತಮ್ಮ ಕರ ಭಾಳ ಶರೀರಂಗಳ ಮಧ್ಯದಲ್ಲಿ
ಮುಳ್ಮೊನೆಗಳಿಂದ ಬರೆದಿರಿದುಕೊಂಡು ಆ ಸುರೆಗುಡಿ ಹೊಲೆರಾಕ್ಷಸ ಭವಿ
ಸತಿ ಸೂಳೆಯರಂತೆ ಪತಿತಾಂಗನೆಯರಾಗಿ, ಮತ್ತೆ ತಾವು ಭಕ್ತರೆಂದು ಬಗುಳಿ
ಲಿಂಗಜಂಗಮವನಾರಾಧಿಸಿ ಪ್ರಸಾದವ ಕೊಂಡೆಹೆವೆಂಬ ಈ ಭಂಗಮಾರಿ
ಹೊಲೆಸತಿಯರಿಗೆಲ್ಲಿಯದೊ ಲಿಂಗಜಂಗಮಪ್ರಸಾದವು?
ಇಂತೀ ಹರಭಕ್ತಿಗೆ ಹೊರಗಾದ ಹೊಲೆ ಮಚ್ಚುಮಾರಿ ಪತಿತ ಪಾತಕಿಯರ ಕೈಯಲ್ಲಿ
ಕೊಂಬ ಅನ್ನ ಉದಕಂಗಳೆಲ್ಲವು
ನಾಯಡಗು ನರಮಾಂಸ ಸುರೆ ಶ್ವಾನರಕ್ತಕ್ಕೆ ಸಮಾನ.
ಇದನರಿದು ಅವ ಪರಿಹರಿಸದೆ ಅವರನೊಡಗೂಡಿಕೊಂಡು ನಡೆವವರು
ಗುರುಮಾರ್ಗಕ್ಕೆ ಹೊರಗು. ಅವರು ಕೊಂಬುದು ಸುರೆಮಾಂಸವಲ್ಲವೆ
ಅವರಿಗೆ ಪ್ರಸಾದವಿಲ್ಲ.
ಇದು ಕಾರಣ ಇಂತಪ್ಪ ನರಕಜೀವಿಗಳನು ಕೂಡಲಚೆನ್ನಸಂಗಯ್ಯ
ರವಿ ಸೋಮವುಳ್ಳನ್ನಕ್ಕ ನಾಯಕನರಕದಲ್ಲಿಕ್ಕುವ. ॥ ೪೬೭ ॥

೧೬೩೦

ದಾಯೆಂದಡೆ ನಡೆದು ಹೋಯೆಂದಡೆ ನಿಲ್ಲನೆ ಜಗವ ಹೊರೆಯಲೆಂದು?
ಆತನ ಸಾಹಸವ ಬೆಸಗೊಂಬಡೆ ಈಶ್ವರನ ತಾಳುವನಯ್ಯಾ.

ಆವರಿಸಿದಡಲ್ಲಾಡಿದತ್ತು ಕೈಲಾಸವು!
ಗಂಡುಗೆದರಿ ಈಡಾಡಿದಡೆ ಅಂಡಜ ಬ್ರಹ್ಮಾಂಡಗಳು ನಿಲುವವೆ?
ಕೆಲೆದು ಕೆದರಿ ಅಟ್ಟಿದೊಡೆ ಮೊರೆಯೆಂಬರಲ್ಲದೆ ಇದಿರಾನುವರುಂಟೆ?
ಅಯ್ಯಾ ನೀನು ಬಿಟ್ಟು ಬೀದಿವರಿದೋಡೆ
ಅಟ್ಟಿ ಹಿಡಿವ ಗಂಡುಗರ ನಾ ಕಾಣೆನಯ್ಯಾ.
ಸೃಷ್ಟಿಗೀಶ್ವರನಲ್ಲದೆ ಮತ್ತಾರೂ ಇಲ್ಲ.
ಗಂಭೀರವೆಂದಡೆ ಇಂಬುಗೊಳ್ವವೆ ಕೊಳಗು?
ಶಂಭುವೇರುವ ವಾಹನವೆಂದೊಡೆ ಚೆನ್ನು ಬೆಂಕಟ್ಟಾಗದೆ?
ಈ ಕೀಳು ಭುವನಕ್ಕೆ. ನಮ್ಮ ಕೂಡಲ[ಚೆನ್ನ]ಸಂಗಮದೇವನಲ್ಲಿ
ತೆತ್ತೀಸಾದಿಗಳಿಗುಬ್ಬಸವಯ್ಯ ಎಮ್ಮ ಬಸವರಾಜನು. || ೪೬೮ ||

೧೩೨೧

ದಾಸಿಯ ಸಂಗ ಕಸ ನೀರ ಹೊರಿಸಿತ್ತು,
ವೇಶಿಯ ಸಂಗ ಎಂಜಲ ತಿನ್ನಿಸಿತ್ತು,
ಪರಸ್ತ್ರೀಯ ಸಂಗ ಪಂಚಮಹಾಪಾತಕಕ್ಕಿಕ್ಕಿತ್ತು.
ಇಂತೀ ತ್ರಿವಿಧ ನಾಸ್ತಿಯಾದಂಗಲ್ಲದೆ ಭಕ್ತಿಯಿಲ್ಲ,
ಕೂಡಲಚೆನ್ನಸಂಗಮದೇವಾ. || ೪೬೯ ||

೧೩೨೨

ದಾಸಿಯ ಸಂಗ, ಭಂಗಿಯ ಸೇವನೆ,
ವೇಶಿಯ ಸಂಗ, ಸುರೆಯ ಸೇವನೆ,
ಮುಂಡೆಯ ಸಂಗ, ಅಮೇಧ್ಯದ ಸೇವನೆ,
ಕನ್ನೆಯ ಸಂಗ, ರಕ್ತದ ಸೇವನೆ.–
ಇಂತೀ ಐವರ ಸಂಗವ ಮಾಡುವ ದ್ರೋಹಿಗೆ
ಕಂಠಪಾವಡ, ಧೂಳಪಾವಡ, ಸರ್ವಾಂಗಪಾವಡ ಉಂಟೆಂಬ
ಪಂಚಮಹಾಪಾತಕರಿಗೆ, ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ,
ಪಾದೋದಕ ಪ್ರಸಾದವಿಲ್ಲ
ನಾ (ನಾಮ?) ಮೊದಲೇ ಇಲ್ಲ–ಕೂಡಲಚೆನ್ನಸಂಗಮದೇವಾ. || ೪೭೦ ||

೧೩೨೩

ದಾಸಿಯ ಸಂಗವ ಮಾಡಿದಡೆ ಸೂಕರನ ಮಾಂಸವ ತಿಂದ ಸಮಾನ,
ವೇಶಿಯ ಸಂಗವ ಮಾಡಿದಡೆ ಮಾಂಸವ ತಿಂದ ಸಮಾನ,

ಮುಂಡೆಯ ಸಂಗವ ಮಾಡಿದಡೆ ಅಮೇಧ್ಯವ ತಿಂದ ಸಮಾನ,
ಗಂಡನ ಬಿಟ್ಟವಳ ಸಂಗವ ಮಾಡಿದಡೆ ನರಮಾಂಸವ ತಿಂದ ಸಮಾನ,
ಗಂಡನುಳ್ಳವಳ ಸಂಗವ ಮಾಡಿದಡೆ ಸತ್ತ ಹೆಣದ ಬೆನ್ನ ಮಲವ ತಿಂದ ಸಮಾನ,
ಚೋರ ಕನ್ನಿಕೆಯ ಸಂಗವ ಮಾಡಿದಡೆ ಸುರಾಪಾನವ ಕೊಂಡ ಸಮಾನ.
ಇದು ಕಾರಣ
ಗುರುವಾಗಲಿ, ಜಂಗಮವಾಗಲಿ, ಭಕ್ತನಾಗಲಿ
ದಾಸಿ ವೇಶಿ ವಿಧವೆ ಪರಸ್ತ್ರೀ ಚೋರಕನ್ನಿಕೆ ಬಿಡಸ್ತ್ರೀ ಮೊದಲಾದ
ಹಲವು ಪ್ರಕಾರದ ರಾಸಿಕೂಟದ ಸ್ತ್ರೀಯರ ಬಿಟ್ಟು
ಶುದ್ಧಕನ್ಯೆಯ ಭಕ್ತಗಣ ಸಾಕ್ಷಿಯಾಗಿ ವಿಭೂತಿಪಟ್ಟ ಪಾಣಿಗ್ರಹಣ
ಏಕಪ್ರಸಾದಭುಕ್ತನಾಗಿ ಭಕ್ತಿಕಲ್ಯಾಣವಾಗಿ ಸತ್ಯಸದಾಚಾರದಲ್ಲಿ ವರ್ತಿಸುವ
ಭಕ್ತಾರಾಧ್ಯರಿಗೆ–ಗುರುವುಂಟು ಲಿಂಗವುಂಟು ಜಂಗಮವುಂಟು
ಪಾದೋದಕವುಂಟು ಪ್ರಸಾದವುಂಟು; ಆತಂಗೆ ನಿಜಮೋಕ್ಷವುಂಟು.
ಇಂತಲ್ಲದೆ–ತನ್ನಂಗವಿಕಾರಕ್ಕೆಳಸಿ ದುರ್ವಿಷಯಾಸಕ್ತನಾಗಿ
ಆರು ಪ್ರಕಾರದ ಸ್ತ್ರೀಯರು ಮುಂತಾದ ರಾಸಿಕೂಟದ ಸ್ತ್ರೀಯರಿಗೆ ಹೇಸದೆ
ಆಸೆ ಮಾಡುವ ಪಾತಕರಿಗೆ; ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ
ಪಾದೋದಕವಿಲ್ಲ ಪ್ರಸಾದವಿಲ್ಲ; ಅವ ಭಕ್ತನಲ್ಲ ಜಂಗಮವಲ್ಲ,
ಅವರಿಗೆ ಮುಕ್ತಿಯಿಲ್ಲ, ಮುಂದೆ ನರಕ ತಪ್ಪದು ಕಾಣಾ
ಕೂಡಲಚೆನ್ನಸಂಗಮದೇವಾ. ॥ ೪೭೧ ॥

೧೩೨೪

ದೂರದಲ್ಲಿ ಅರ್ಪಿತವೆಂಬ ದುರಾಚಾರಿಯ ಮಾತ ಕೇಳಲಾಗದು.
ಭಾವದಲ್ಲಿ ಅರ್ಪಿತವೆಂಬ ಭ್ರಮಿತರ ಮಾತ ಕೇಳಲಾಗದು.
ಅಂತರದಲ್ಲಿ ಅರ್ಪಿತವೆಂಬ ಅನಾಚಾರಿಗಳ ಮಾತ ಕೇಳಲಾಗದು.
ತನ್ನ ಕಾಯದ ಮೇಲಣ ಲಿಂಗಕ್ಕೆ
ಭಾವಶುದ್ಧಿಯಲ್ಲಿ ಕೊಟ್ಟಲ್ಲದೆ ಕೊಂಡನಾದಡೆ,
ಸತ್ತ ಹಳೆಯ ನಾಯಿಯ ಅರಸಿ ತಂದು
ಅಟ್ಟದ ಮೇಲೆ ಇರಿಸಿಕೊಂಡು,
ಗದ್ಯಾಣ ಗದ್ಯಾಣ ತೂಕವ ಕೊಂಡಂತೆ ಕಾಣಾ
ಕೂಡಲಚೆನ್ನಸಂಗಮದೇವಾ. ॥ ೪೭೨ ॥

೧೩೨೫

ದೇವ ದಾನವ ಮಾನವ ಮೊದಲಾದ ಎಲ್ಲಾ ಜೀವರಲ್ಲಿ
ಹಿರಿದು ಕಿರಿದೆನ್ನದೆ ನಿದ್ರೆಯ ಬಲೆಯ ಬೀಸಿ,
ಸರಿದು ತೆಗೆಯಲೊಡನೆ, ಅರಿವು ಮರೆಯಿತ್ತು,
ನೋಟ ಜಾರಿತ್ತು, ಬುದ್ಧಿ ತೊಡೆಯಿತ್ತು,
ಜೀವ ಹಾರಿತ್ತು, ದೇಹ ಒರಗಿತ್ತು.
ಇದು ನಿಚ್ಚ ನಿಚ್ಚ ಬಹುದು, ಹೋಹುದರ ಕೀಲನಾರೂ ಅರಿಯರು
ಕೂಡಲಚೆನ್ನಸಂಗಯ್ಯಾ. || ೪೭೩ ||

೧೩೨೬

ದೇವ ದೇವ ಮಹಾಪ್ರಸಾದ.
ತನ್ನ ರೂಪವ ತಿಳಿದು ನೋಡಬೇಕೆಂದು ಕನ್ನಡಿಯನುಪಾಸ್ತಿ ಮಾಡಲು
ಆ ಕನ್ನಡಿ ಬೇಕು ಬೇಡೆಂಬುದೆ ಅಯ್ಯಾ?
ಪತಿಯಾಜ್ಞೆಯಂತೆ ಸತಿಪತಿಭಾವವ ಧರಿಸಿದಡೆ
ಸಂಯೋಗಕಾಲದಲ್ಲಿ ಅಲ್ಲವೆಂದೆನಬಹುದೆ?
ನೀವೆ ಮಾಡಿದಡೆ ನೀವೆ ಮಾಡಿದುದು
ನಾನೆ ಮಹಾಪ್ರಸಾದವೆಂದು ಸ್ವೀಕರಿಸಿದಡೂ ನೀವೆ ಮಾಡಿದುದು.
ಅಂಗೈಯ ಲಿಂಗದ ಲಕ್ಷಣವ ನೋಡಿ ಎಂದು ಕೈಯಲ್ಲಿ ಕೊಟ್ಟಡೆ,
ಲಿಂಗದಲ್ಲಿ ಲಕ್ಷಣವನರಸಲಾಗದೆಂದು
ಚೆನ್ನಸಂಗಮನಾಥನ 'ಕೋ' ಎಂದು ಕೊಟ್ಟಡೆ
ಮಹಾಪ್ರಸಾದವೆಂದು ಕೈಕೊಂಡೆನು ಗುರುವೆ.
ಬೆದರಿ ಅಂಜಿದಡೆ ಮನವ ಸಂತೈಸಿ
ಏಕಾರ್ಥದ ಭೇದವ ತೋರಿ ಬಿನ್ನಹವ ಮಾಡಿದೆನು.
ಕೂಡಲಚೆನ್ನಸಂಗಮದೇವರ ಮಹಾಮನೆಯ ಗಣಂಗಳು ಮೆಚ್ಚಲು,
ಸಂಗನಬಸವಣ್ಣನ ಕರುಣದ ಶಿಶುವೆಂಬುದ
ಮೂರುಲೋಕವೆಲ್ಲವು ಅರಿಯೆ ಜಯ ಜಯ ಎನುತಿರ್ದುದು. || ೪೭೪ ||

೧೩೨೭

ದೇವ ದೇವ ಮಹಾಪ್ರಸಾದ,
ನಿಮ್ಮಡಿಗಳಿಗೆ ಉತ್ತರಕೊಡಲಮ್ಮೆನಯ್ಯಾ,
[ಇದು] ಏಕೆನೆಂಬ ಏಲುಮೆಯ ದೇಹಿ ನೀವಲ್ಲವಾಗಿ,

ಆನು ಭಕ್ತನೆಂಬ ಭಕ್ತಿಶೂನ್ಯನಲ್ಲವಾಗಿ
ಆನು ಬಲ್ಲೆನೆಂಬ ನುಡಿ ಎನ್ನನಿರಿದಿರಿದು ಸುಡದೆ?
ತಪ್ಪೆನ್ನದು ಕ್ಷಮೆ ನಿಮ್ಮದು.
ಕೂಡಲಚೆನ್ನಸಂಗಮದೇವರು ಸಾಕ್ಷಿಯಾಗಿ
ಕೊಲ್ಲು, ಕಾಯಿ, ನಿಮ್ಮ ಧರ್ಮ! ॥ ೪೭೫ ॥

೧೩೨೮

ದೇವರು ಬಿದ್ದರು ದೇವರು ಬಿದ್ದರು ಎಂದು
ಸಾಹಿತ್ಯದ ಕೂಡ ಸಾಯಬೇಕೆಂಬಿರಿ.
ಆವಾಗ ಬಿದ್ದಿತ್ತೆಂದರಿಯಿರಿ ಆವಾಗ ಇದ್ದಿತ್ತೆಂದರಿಯಿರಿ.
ಆವಾಗ ಇದ್ದಿತ್ತು ಆವಾಗ ಬಿದ್ದಿತ್ತು ಎಂದು ಬಲ್ಲರೆ ನೀವು ಹೇಳಿರೆ?
"ಅದೃಶ್ಯಭಾವನೋ ನಾಸ್ತಿ ದೃಶ್ಯಮೇವ ವಿನಶ್ಯತಿ।
ಅವರ್ಣಮಕ್ಷರಂ ಬ್ರಹ್ಮ ಕಥಂ ಧ್ಯಾಯಂತಿ ಯೋಗಿನಃ॥
ಎಂದುದಾಗಿ, ಇದು ಕಾರಣ ಕೂಡಲಚೆನ್ನಸಂಗಯ್ಯನ
ಅರಿದಾಗಲಿದ್ದಿತ್ತು ಮರೆದಾಗ ಬಿದ್ದಿತ್ತು. ॥ ೪೭೬ ॥

೧೩೨೯

ದೇವಾ, "ನಮಃಶಿವಾಯೇತಿ ಶಿವಂ ಪ್ರಪದ್ಯೇ। ಶಿವಪ್ರಸೀದೇತಿ ಶಿವ ಪ್ರಪದ್ಯೇ॥
ಶಿವಾತ್ಪರಂ ನೇತಿ ಶಿವಂ ಪ್ರಪದ್ಯೇ। ಶಿವೋऽಹಮಸ್ಮೀತಿ ಶಿವಂ ಪ್ರಪದ್ಯೇ॥
ಎಂದು ನಿಮ್ಮ ಪವಿತ್ರವಚನವಿಪ್ಪುದಾಗಿ
ಎನ್ನ ತನುವ ನಿಮ್ಮ ಶರಣರ ಸೇವೆಯಲ್ಲಿರಿಸುವೆನಯ್ಯಾ.
ಆನು ಸತ್ಕಾರ್ಯದಿಂದ ಸಂಪಾದಿಸಿದ ಧನವ
ನಿಮ್ಮ ನಿಲುವಿಂಗಾಗಿ ವಿನಿಯೋಗಿಸುವೆನಯ್ಯಾ.
ಇಂತೀ ಸಕಲದ್ರವ್ಯವ ನಿರ್ವಂಚನೆಯಿಂದ ನಿಮಗರ್ಪಿಸಿ,
ನಿಮ್ಮಡಿಯ ಹೊಂದಲಿಚ್ಛಿಸುವೆನಯ್ಯಾ.
ಮೇಣು, ನಿಮ್ಮ ಸುಪ್ರಸಾದವ ಪಡೆದು ಲಿಂಗಭೋಗೋಪಭೋಗಿಯಾಗಿ,
ನಿಮ್ಮ ಹೊಂದಲಾತುರಿಪೆನಯ್ಯಾ.
ದೇವಾ, ನೀವು ಸರ್ವಶಕ್ತರಾಗಿ ಅಂದಿಂದು ಮುಂದೆಂದಿಗೆಯೂ
ನಿಮ್ಮ ಸರಿಮಿಗಿಲಾರೂ ಇಲ್ಲವೆಂಬುದನರಿದು
ನಿಮ್ಮಡಿಯ ಸೇರೆ ಯತ್ನಿಸುವೆನಯ್ಯಾ.
ಬಳಿಕ ನೀವೇ ಎನ್ನ ಸ್ವರೂಪವಾಗಿ [ಅನ್ಯ] ಭೇದವಡಗಿ
ನಿಮ್ಮೊಡನೆ ಬೆರೆದು ನಿತ್ಯಮುಕ್ತನಾಗಿಪ್ಪೆನಯ್ಯಾ
ಕೂಡಲಚೆನ್ನಸಂಗಮದೇವಾ. ॥ ೪೭೭ ॥

೧೩೩೦

ಧರೆಯಾಕಾಶವಿಲ್ಲದಂದು, ಅನಲ ಪವನ ಜಲ ಕೂರ್ಮರಿಲ್ಲದಂದು,
ಚಂದ್ರಸೂರ್ಯರೆಂಬವರು ಕಳೆದೋರದಂದು,
ಆತ್ಮಸ್ಥಲ ಅನುಭಾವಕ್ಕೆ ಬಾರದಂದು,
ನಿತ್ಯನಿಜಲಿಂಗವ ಬಲ್ಲರಾರಯ್ಯ ನೀವಲ್ಲದೆ?
ಮಹಾಘನಕ್ಕೆ ಘನವಾಹನವಾಗಿ, ಅಗಮ್ಯಸ್ಥಾನದಲ್ಲಿ ನಿಂದು
ಭರಿತರಾಗಿರಬಲ್ಲರಾರಯ್ಯಾ ನೀವಲ್ಲದೆ?
ನಿಮ್ಮ ಒಕ್ಕು ಮಿಕ್ಕ ಶೇಷಪ್ರಸಾದದ ಕಾರುಣ್ಯದ ಶಿಶುವಾಗಿ ಒಡಲೊಳಗೆ ಇದ್ದಲ್ಲಿ
ವಿಭೂತಿ ಪಟ್ಟವ ಕಟ್ಟಿ, ಹಸ್ತಮಸ್ತಕಸಂಯೋಗವ ಮಾಡಿ
ಎನ್ನನುಳುಹಿದರಾರಯ್ಯ ನೀವಲ್ಲದೆ?
ಕೂಡಲಚೆನ್ನಸಂಗಮದೇವರ ಸಾಕ್ಷಿಯಾಗಿ
ನಾನು ನಿಮ್ಮ ಕರುಣದ ಕಂದನೆಂಬುದ ಮೂರುಲೋಕ ಬಲ್ಲುದು ಕಾಣಾ
ಸಂಗನಬಸವಣ್ಣ. ॥ ೪೭೮ ॥

೧೩೩೧

ಧೀರಸಂಪನ್ನರೆಲ್ಲ ಅಲಗಿನ ಮೊನೆಗೆ ಭಾಜನವಾದರು ನೋಡಯ್ಯಾ!
ಧನಸಂಪನ್ನರೆಲ್ಲ ರಾಜರಿಗೆ ಭಾಜನವಾದರು ನೋಡಯ್ಯಾ!
ರೂಪಸಂಪನ್ನರೆಲ್ಲ ಸ್ತ್ರೀಯರಿಗೆ ಭಾಜನವಾದರು ನೋಡಯ್ಯಾ!
ಗುಣಸಂಪನ್ನರೆಲ್ಲ ಬಂಧುಗಳಿಗೆ ಭಾಜನವಾದರು ನೋಡಯ್ಯಾ!
ಜ್ಞಾನಸಂಪನ್ನ ಬಸವಣ್ಣ ಲಿಂಗಕ್ಕೆ ಭಾಜನವಾದ ನೋಡಯ್ಯಾ
ಕೂಡಲಚೆನ್ನಸಂಗಮದೇವಾ. ॥ ೪೭೯ ॥

೧೩೩೨

ನಂಬುಗೆಗೆ ಇಂಬಾಗದೆ ನೈಷ್ಠೆ ನೆಲೆಗೊಳ್ಳದು;
ನೈಷ್ಠೆ ನೆಲೆಗೊಳ್ಳದೆ ಎಚ್ಚರವಚ್ಚೊತ್ತದು;
ಎಚ್ಚರವಿಲ್ಲದೆ ಅನುಭವವು ಮನಂಗೊಳ್ಳದು;
ಅನುಭವವಿಲ್ಲದೆ ಆನಂದವು ತಲೆದೋರದು;
ಆನಂದವಿಲ್ಲದೆ ಶಿವಲಿಂಗದಲ್ಲಿ ಸಮರಸವಾಗದು.
ಇಂತೀ ಆರು ತೆರನಾದ ಭಕ್ತಿಯ ಗೊತ್ತನರಿದಡೆ,
ಭಕ್ತನೆಂಬೆನು ಮಹೇಶ್ವರನೆಂಬೆನು—
ಇಲ್ಲದಿರ್ದಡೆ ಶುದ್ಧಭವಿಯೆಂಬೆನು ಕಾಣಾ
ಕೂಡಲಚೆನ್ನಸಂಗಮದೇವಾ. ॥ ೪೮೦ ॥

೧೩೩೩

'ನ' ಕಾರವೆ ಬಸವಣ್ಣನ ನಾಸಿಕ, 'ಮ' ಕಾರವೆ ಬಸವಣ್ಣನ ಜಿಹ್ವೆ,
'ಶಿ' ಕಾರವೆ ಬಸವಣ್ಣನ ನಯನ, 'ವ' ಕಾರವೆ ಬಸವಣ್ಣನ ತ್ವಕ್ಕು,
'ಯ' ಕಾರವೆ ಬಸವಣ್ಣನ ಶ್ರೋತ್ರ, 'ಓಂ' ಕಾರವೆ ಬಸವಣ್ಣನ ಪ್ರಾಣ.
'ಅ' ಕಾರವೆ ಬಸವಣ್ಣನ ನಾದ, 'ಉ' ಕಾರವೆ ಬಸವಣ್ಣನ ಬಿಂದು,
'ಮ' ಕಾರವೆ ಬಸವಣ್ಣನ ಕಳೆ–
ಇಂತೀ ಮೂರು ಪ್ರಣವಂಗಳೆ ಪ್ರಣವದ ಶಿರಸ್ಸಾಗಿ,
ಪ್ರಣವದ ಕುಂಡಲಿ ಸೋಂಕಿ ಶಾಖೆಗಳಾಗಿಪ್ಪವು.
'ಬ' ಕಾರವೆ ಭವಹರ ಗುರು, 'ಸ' ಕಾರವೆ ಸಕಲಚೈತನ್ಯಲಿಂಗ,
'ವ' ಕಾರವೆ ವಚಿಸುವ ಜಂಗಮ–
ಇಂತೀ ಮೂರು ಪ್ರಣವಂಗಳೆ ಪ್ರಣವದ ಮೂರು ಪಾದಂಗಳಾಗಿ
ಪ್ರಣವಕ್ಕೆ ಮೂಲಪದಂಗಳಾಗಿಪ್ಪವು–
ಇಂತೀ ಹನ್ನೆರಡು ಪ್ರಣವ ತಾನೆಯಾದ ಕೂಡಲಚೆನ್ನಸಂಗಯ್ಯನಲ್ಲಿ
ಸಂಗನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು. ॥ ೪೮೧ ॥

೧೩೩೪

ನದಿ ಕೂಪ ತಟಾಕ ಜಲಾಶಯದಲ್ಲಿ ಅಗ್ಘಣಿಯ ತಂದು
ಮಜ್ಜನಕ್ಕೆ ನೀಡುವರೆಲ್ಲ ಶೀಲವಂತರೆ?
ಪಾಕದಲ್ಲಿ ಪರಪಾಕ ಭವಿಪಾಕ ಎಂಬವರೆಲ್ಲ ಶೀಲವಂತರೆ?
ತಳಿಗೆ ಬಟ್ಟಲ ಪ್ರಗಾಳಿಸಿ ನೇಮವ ಮಾಡಿಕೊಂಬವರೆಲ್ಲ ಶೀಲವಂತರೆ?
ಕಂತಪಾವಡ, ಧೂಳಿಪಾವಡ, ಸರ್ವಾಂಗಪಾವಡವೆಂಬವರೆಲ್ಲ ಶೀಲವಂತರೆ?
[ಅಲ್ಲ], ಅದೇನು ಕಾರಣವೆಂದಡೆ:
ಅವರು 'ಸಂಕಲ್ಪಂ ಚ ವಿಕಲ್ಪಂ ಚ' ಎಂದುದಾಗಿ, ಶುದ್ಧಭವಿಗಳು.
ಭವಿಯೆಂಬವನೆ ಶ್ವಪಚ, ವ್ರತಸ್ಥನೆಂಬವನೆ ಸಮ್ಮಗಾರ.
ಶೀಲವಿನ್ನಾವುದೆಂದಡೆ:
ಅಶನ ಅರತು, ವ್ಯಸನ ನಿಂದು, ವ್ಯಾಪ್ತಿಯಳಿದು,
ಅಷ್ಟಮದವೆಲ್ಲ ನಷ್ಟವಾದಲ್ಲದೆ,
ಕೂಡಲಚೆನ್ನಸಂಗಮದೇವರಲ್ಲಿ ಶೀಲವಿಲ್ಲ ಕಾಣಿರೊ. ॥ ೪೮೨ ॥

೧೩೩೫

ನಮ್ಮ ಆದಿಪುರಾತನರು ಪ್ರಸಾದಕ್ಕೆ ತಪ್ಪವೆ ನಡೆದರು,
ನಡೆ ತಪ್ಪದೆ ನುಡಿದರು.

ಇಂತಪ್ಪ ಪುರಾತನರ ವಚನಂಗಳ ಎರಡಿಲ್ಲದೆ ಕೊಂಡಾಡಿ
ತನು ಮನ ಧನವ ಎರಡಿಲ್ಲದೆ ಸಮರ್ಪಿಸುವ,
ಭಕ್ತರ ಭಕ್ತನಾನು, ಆಳಿನಾಳಯ್ಯಾ ನಾನು,
ಕೂಡಲಚೆನ್ನಸಂಗನ ಶರಣರು ಸಾಕ್ಷಿಯಾಗಿ. || ೪೪೩ ||

೧೩೩೬

ನಮ್ಮ ಗುರುಗಳ ಸನ್ನಿಧಿಯಲ್ಲಿ ನಿಮ್ಮ ಗುರುಗಳು ಪಲ್ಲಕ್ಕಿಯನೇರುವರೆಂತು?
ನಮ್ಮ ಗುರುಗಳ ಸನ್ನಿಧಿಯಲ್ಲಿ ನಿಮ್ಮ ಗುರುಗಳು ಮೆರೆವರೆಂತು?
ಅವರ ಮೆರವಣಿಗೆಯೆ ಎನ್ನ ಮೆರವಣಿಗೆ,
ಅವರಾನಂದವೆ ಎನ್ನಾನಂದ ಕಾಣಾ
ಕೂಡಲಚೆನ್ನಸಂಗನ ಶರಣ ಸಿದ್ಧರಾಮಯ್ಯಾ. || ೪೪೪ ||

೧೩೩೭

ನಮ್ಮ ಪುರಾತನರ ವಚನಂಗಳೆನೆಲ್ಲ ಓದದೆ ಇದ್ದಾರು,
ಓದಿಯೂ ನಂಬಿಗೆ ಇಲ್ಲದೆ ಇದ್ದಾರು, ನೂರಕ್ಕೊಬ್ಬರಲ್ಲದೆ ನಂಬರು,
ನಮ್ಮ ಆದ್ಯರ ವಚನಂಗಳ ಜರೆದಾರು, ತಮ್ಮ ಕವಿತ್ವವ ಮೆರೆದಾರು,
ನಮ್ಮ ಆದ್ಯರ ವಚನಂಗಳಿಂದೊದವಿದ ಜ್ಞಾನವೆಂಬುದನರಿಯರು.
ತಾಯಿಯಿಂದ ಮಕ್ಕಳಾದರೆಂಬುದನರಿಯರು.
ಊರೆಲ್ಲಕ್ಕೆ ಹುಟ್ಟಿದ ಹಾಗೆ ನುಡಿದಾರು
ನಮ್ಮ ಪುರಾತನರ ವಚನವೆ ತಾಯಿ ತಂದೆ ಎಂದರಿಯರು.
ನಮ್ಮ ಆದ್ಯರ ವಚನ ಜ್ಞಾನದ ನೆಲೆಯ ತೆಗೆದಿರಿಸಿತ್ತು
ನಮ್ಮ ಆದ್ಯರ ವಚನ ಮದ ಮಾತ್ಸರ್ಯಾದಿ ಅರಿಷಡ್ವರ್ಗ ಸಪ್ತವ್ಯಸನ
ಪಂಚೇಂದ್ರಿಯ ದಶವಾಯುಗಳಿಚ್ಛೆಗೆ ಹರಿವ ಮನವ ಸ್ವಸ್ಥವಾಗಿ ನಿಲಿಸಿತ್ತು.
ನಮ್ಮ ಆದ್ಯರ ವಚನ ಅಂಗೇಂದ್ರಿಯಂಗಳ ಲಿಂಗೇಂದ್ರಿಯಂಗಳೆನಿಸಿತ್ತು.
ನಮ್ಮ ಆದ್ಯರ ವಚನ ನೂರೊಂದುಸ್ಥಲವ ಮೀರಿದ ಮಹದಲ್ಲಿ ನೆಲಸಿತ್ತು.
ನಮ್ಮ ಆದ್ಯರ ವಚನ ಇನ್ನೂರಹದಿನಾರು ಲಿಂಗಕ್ಕೆ
ಸರ್ವೇಂದ್ರಿಯವ ಸನ್ಮತವ ಮಾಡಿ,
ಸಾಕಾರವ ಸವೆದು ನಿರಾಕಾರವನರಿದು ನಿರವಯಲ ನಿತ್ಯಸುಖದಲ್ಲಿರಿಸಿತ್ತು.
ಇಂತಪ್ಪ ಆದ್ಯರ ವಚನಭಂಡಾರವ,
ನಮ್ಮ ಪ್ರಭುದೇವರು ಮುಖ್ಯವಾದ ಏಳುನೂರೆಪ್ಪತ್ತು ಅಮರಗಣಂಗಳು
ಅಸಂಖ್ಯಾತ ಪುರಾತನರು, ಪ್ರಮಥಗಣಂಗಳು ಕೇಳಿ ಕೇಳಿ ಕೊಂಡಾಡಿದ ಕಾರಣ

ನಮ್ಮ ಕೂಡಲಚೆನ್ನಸಂಗಯ್ಯನಲ್ಲಿ
ಸರ್ವಸುಖವ ಸೂರೆಗೊಂಡು ಸ್ವಯಲಿಂಗವಾದರು. || ೪೮೫ ||

೧೩೩೮

ನಮ್ಮ ಶರಣ ಅಂತರಂಗದ ಅಷ್ಟವಿಧಾರ್ಚನೆಯ ಮಾಡಿ
ಸುಜ್ಞಾನದೃಷ್ಟಿಯಿಂದ ನೋಡಲು
ಆ ಜ್ಯೋತಿರ್ಲಿಂಗ ಒಂದೆರಡಾಯಿತ್ತು ಎರಡು ಮೂರಾಯಿತ್ತು:
ಮೂರಾರಾಯಿತ್ತು: ಆರೊಂಬತ್ತಾಯಿತ್ತು, ಒಂಬತ್ತು ಹದಿನೆಂಟಾಯಿತ್ತು:
ಹದಿನೆಂಟು ಮೂವತ್ತಾರಾಯಿತ್ತು: ಆ ಮೂವತ್ತಾರೆ ಇನ್ನೂರ ಹದಿನಾರಾಯಿತ್ತು.
ಇನ್ನೂರ ಹದಿನಾರೆ ಸಾವಿರದೇಳನೂರಿಪ್ಪತ್ತೆಂಟಾಯಿತ್ತು.
ಆ ಲಿಂಗಂಗಳೆ ಶರಣನ ರೋಮದ ಕುಳಿಯಲ್ಲಿ ನಿಂದು ಸರ್ವಾಂಗ ಲಿಂಗವಾಯಿತ್ತು.
ಆ ಲಿಂಗ ಶರಣಂಗೆ ಚೈತನ್ಯವಾಯಿತ್ತು. ಆ ಶರಣನೆ ಲಿಂಗಕ್ಕೆ ಚೈತನ್ಯವಾಗಲು,
ಶರಣಸತಿ ಲಿಂಗಪತಿಯೆಂಬೆರಡಳಿದು ಒಬ್ಬ ಶರಣನೆ ಉಳಿಯಲು
ಆ ಶರಣನ ಪಾದೋದಕವೆ ಲಿಂಗಕ್ಕೆ ಅಭಿಷೇಕವಾಯಿತ್ತು.
ಆ ಶರಣನ ಪಾದಕ್ಕರ್ಪಿಸಿದ ಕುಸುಮವೆ ಪ್ರಸಾದಪುಷ್ಪವಾಯಿತ್ತು.
ಆ ಶರಣನ ಪಾದಕ್ಕರ್ಪಿಸಿದ ಗಂಧಾಕ್ಷತೆಯೆ,
ತಾಂಬೂಲವೆ ಲಿಂಗಪ್ರಸಾದಗಳಾದವು.
ಆ ಶರಣನ ಸನ್ನಿಧಿಯಲ್ಲಿ ಪ್ರಕಾಶವಾದ ಧೂಪದೀಪಂಗಳೆ ಲಿಂಗದ್ರವ್ಯಂಗಳಾಗಿ
ಆ ಶರಣನ ಪಾದಪೂಜಾದ್ರವ್ಯವೆ ಲಿಂಗಪೂಜಾದ್ರವ್ಯವಾಗಿ ಆಚಾರಿಸುತಿರ್ದಲ್ಲಿ
ಶರಣಸತಿ ಲಿಂಗಪತಿ ಎಂಬ ನ್ಯಾಯ ಒಂದಾಯಿತ್ತು. ಲಿಂಗ ಹಿರಿದು ಅಂಗ ಕಿರಿದು
ಎಂಬ ನ್ಯಾಯ ಇಲ್ಲದೆ ಹೋಯಿತ್ತು–ಅದೆಂತೆಂದಡೆ:
ದೀಪದಿಂದ ದೀಪ ಹುಟ್ಟಿದಲ್ಲಿ, ಆವ ಆವ ದೀಪ ಮೊದಲೆಂಬುದು ಕಾಣದಂತೆ:
ಸರ್ಪ ಕಚ್ಚಿದ ಮನುಷ್ಯನ ಅಂಗವಿಷ,
ಒಂದು ಠಾವಿನಲ್ಲಿದೆಯೆಂದು ಕುರುಹಿಡಬಾರದಂತೆ,
ಲಿಂಗ ಪ್ರಾಣವಾದ ಶರಣಂಗೆ,
ಶರಣ ಪ್ರಾಣವಾದ ಲಿಂಗಕ್ಕೆ ಭೇದವಿಲ್ಲ–
ಪರಗುರು ವಾಕ್ಯದಲ್ಲಿ ಶರಣ– ಲಿಂಗದಾಚರಣೆ ಇಂತಿಪ್ಪುದು.
ಈ ಶರಣ–ಲಿಂಗದೂಷಣೆಯ ಮಾಡುವ ದ್ರೋಹಿಗಳಿಗೆ
ನಾಯಕನರಕ ತಪ್ಪದು, ಕೂಡಲಚೆನ್ನಸಂಗಮದೇವಾ. || ೪೮೬ ||

೧೩೩೯

ನರನೆಂಬ ಪೂರ್ವಾಶ್ರಯವ ಕಳೆದು ಗುರುಪೆಂಪ.
ಶಿಲೆಯೆಂಬ ಪೂರ್ವಾಶ್ರಯುವ ಕಳೆದು ಲಿಂಗಪೆಂಪ.
ಜಾತಿಸೂತಕವೆಂಬ ಪೂರ್ವಾಶ್ರಯುವ ಕಳೆದು ಜಂಗಮಪೆಂಪ.
ಎಂಜಲವೆಂಬ ಪೂರ್ವಾಶ್ರಯುವ ಕಳೆದು ಪ್ರಸಾದಪೆಂಪ–
ಇಂತೀ ಚತುರ್ವಿಧದ ಪೂರ್ವಾಶ್ರಯವ ಕಳೆಯಬಲ್ಲನಾಗಿ
ಕೂಡಲಚೆನ್ನಸಂಗಾ ನಿಮ್ಮ ಶರಣ ಸ್ವತಂತ್ರನು. ॥ ೪೮೭ ॥

೧೩೪೦

ನರರು ಸುರರು ನವಕೋಟಿಯುಗಗಳ ಪ್ರಳಯಕ್ಕೆ ಒಳಗಾಗಿ ಹೋದರು,
ಒಳಗಾಗಿ ಹೋಹಲ್ಲಿ ಸುರಪತಿಗೆ ಪರಮಾಯು ನೋಡಿರೆ!
ಅಂಥ ಸುರಪತಿ ನವಕೋಟಿಯುಗ ಪ್ರಳಯಕ್ಕೆ ಒಳಗಾಗಿ ಹೋಹಲ್ಲಿ,
ಚಿಟ್ಟಜನೆಂಬ ಋಷಿಗೆ ಒಂದು ಚಿಟ್ಟು ಸಡಿಲಿತ್ತು ನೋಡಿರೆ!
ಅಂಥ ಚಿಟ್ಟನೆಂಬ ಋಷಿ ನವಕೋಟಿಯುಗ ಪ್ರಳಯಕ್ಕೊಳಗಾಗಿ ಪೋಪಲ್ಲಿ
ಚಿಪ್ಪಜನೆಂಬ ಋಷಿಗೆ ಒಂದು ಚಿಪ್ಪು ಸಡಿಲಿತ್ತು ನೋಡಿರೆ!
ಅಂಥ ಚಿಪ್ಪಜನೆಂಬ ಋಷಿ ನವಕೋಟಿಯುಗ ಪ್ರಳಯಕ್ಕೆ ಒಳಗಾಗಿ ಹೋಪಲ್ಲಿ
ಡೊಂಕಜನೆಂಬ ಋಷಿಗೆ ಒಂದು ಡೊಂಕು ಸಡಿಲಿತ್ತು ನೋಡಿರೆ!
ಅಂಥ ಡೊಂಕಜನೆಂಬ ಋಷಿ ನವಕೋಟಿಯುಗ ಪ್ರಳಯಕ್ಕೆ ಒಳಗಾಗಿ ಹೋಹಲ್ಲಿ
ರೋಮಜನೆಂಬ ಋಷಿಗೆ ಒಂದು ರೋಮ ಸಡಿಲಿತ್ತು ನೋಡಿರೆ!
ಅಂಥ ರೋಮಜನೆಂಬ ಋಷಿ
ನವಕೋಟಿಯುಗ ಪ್ರಳಯಕ್ಕೆ ಒಳಗಾಗಿ ಹೋಪಲ್ಲಿ
ಆದಿ ಬ್ರಹ್ಮಂಗೆ ಆಯುಷ್ಯವು ನೂರಾಯಿತ್ತು ನೋಡಿರೆ!
ಅಂಥ ಆದಿ ಬ್ರಹ್ಮ ನವಕೋಟಿಯುಗ ಪ್ರಳಯಕ್ಕೆ ಒಳಗಾಗಿ ಹೋಪಲ್ಲಿ
ಆದಿ ನಾರಾಯಣಂಗೆ ಒಂದು ದಿನವಾಯಿತ್ತು ನೋಡಿರೆ!
ಅಂಥ ಆದಿ ನಾರಾಯಣ ನವಕೋಟಿಯುಗ ಪ್ರಳಯಕ್ಕೆ ಒಳಗಾಗಿ ಹೋಪಲ್ಲಿ
ರುದ್ರಂಗೆ ಕಣ್ಣೆವೆ ಹಳಚಿತ್ತು ನೋಡಿರೆ!
ಅಂಥ ರುದ್ರರು ನವಕೋಟಿಯುಗ ಪ್ರಳಯಕ್ಕೆ ಒಳಗಾಗಿ ಹೋಪಲ್ಲಿ
ಫಣಿಮುಖರೊಂದು ಕೋಟಿ, ಪಂಚಮುಖರೊಂದು ಕೋಟಿ,
ಷಣ್ಮುಖರೊಂದು ಕೋಟಿ, ಸಪ್ತಮುಖರೊಂದು ಕೋಟಿ
ಅಷ್ಟಮುಖರೊಂದು ಕೋಟಿ, ನವಮುಖರೊಂದು ಕೋಟಿ
ದಶಮುಖರೊಂದು ಕೋಟಿ– ಇಂತಿವರೆಲ್ಲರ

ಕಿರೀಟದಾಭರಣಂಗಳು ಬಿದ್ದವು ನೋಡಿರೆ!
ಅಂಥ ಸಪ್ತಕೋಟಿಗಳು ನವಕೋಟಿಯುಗ ಪ್ರಳಯಕ್ಕೆ ಒಳಗಾಗಿ ಹೋಹಲ್ಲಿ
ನಂದಿವಾಹನರೊಂದು ಕೋಟಿ, ಭೃಂಗಿ ಪ್ರಿಯರೊಂದು ಕೋಟಿ
ಚಂದ್ರಪ್ರಿಯರೊಂದು ಕೋಟಿ– ಇಂತೀ ತ್ರಿಕೋಟಿಗಳ ತಲೆಗಳು
ಬಾಗಿದವು ನೋಡಿರೆ!
ಅಂಥ ತ್ರಿಕೋಟಿಗಳ ತಲೆಗಳು ನವಕೋಟಿಯುಗ ಪ್ರಳಯಕ್ಕೆ ಒಳಗಾಗಿ ಹೋಹಲ್ಲಿ
ಕೂಡಲಚೆನ್ನಸಂಗಯ್ಯಾ
ನಮ್ಮ ಬಸವಣ್ಣನೀ ಸುದ್ದಿಯನೇನೆಂದುವರಿಯನು. ॥ ೪೮೮ ॥

೧೩೪೧

ನರಸುರಾದಿಗಳೆಲ್ಲರು ನಿಮ್ಮ ಹೊಳೆಯೊಳಗಿದ್ದರು,
ಮನು ಮುನಿ ಯತಿ ವ್ರತಿಗಳೆಲ್ಲರು ನಿಮ್ಮ ತೋಹಿನೊಳಗಿದ್ದರು.
ಗಂಗೆವಾಳುಕರೆಲ್ಲರು ನಿಮ್ಮ ಮಡಿಯೊಳಗಿದ್ದರು.
ಗಂಗೆ ಗೌರೀವಲ್ಲಭರೆಲ್ಲರು, ಚತುರ್ಮುಖ, ಪಂಚಮುಖ,
ಷಣ್ಮುಖ, ದಶಮುಖರೆಲ್ಲರು ನಿಮ್ಮ ಮಡಿಯ ಗಳಿಗೆಯೊಳಗಿದ್ದರು.
ಲೋಕಾದಿ ಲೋಕವೆಲ್ಲವು ನಿಮ್ಮ ಕುಕ್ಷಿಯೊಳಗು.
ಕೂಡಲಚೆನ್ನಸಂಗಮದೇವರು ಸಾಕ್ಷಿಯಾಗಿ, ನಿಮ್ಮ ನಿರಾಳದ ಪ್ರಸಾದದಿಂದ
ನಿರವಯಲ ಹಾದಿಯ ಕಂಡೆನಲ್ಲದೆ,
ನಿಮ್ಮಿಂದಲಾನು ಘನವೆ ಮಡಿವಾಳ ಮಾಚಯ್ಯಾ? ॥ ೪೮೯ ॥

೧೩೪೨

ನವಸೂತ್ರ ಪಟ್ಟಣಕ್ಕೆ ನವದ್ವಾರ ಬೀದಿಯೊಳು,
ನವ ಲಿಂಗಸ್ಥಾವರಕ್ಕೆ ನವ ಕಳಸವು
ನವದೀಪ, ನವಧೂಪ, ನವಮಂತ್ರ, ನವಪೂಜೆ, ನವಜಪ
ನಮೋ ನಮೋ ಎನುತಿರ್ದೆನು ಕೂಡಲಚೆನ್ನಸಂಗಯ್ಯಾ
ನಿಮ್ಮ ಬಸವಣ್ಣಂಗೆ. ॥ ೪೯೦ ॥

೧೩೪೩

ನಾದದಿಂದಾದ ಸಂಗ ವಿನೋದಸಂಗ,
ಬಿಂದುವಿನಿಂದಾದ ಸಂಗ ಬದ್ಧಕ್ರಿ.
ನ್ವಯ, ಅನ್ವಯದಿಂದಾದ ಸಂಗ ಪರಿಭಾವ.

ಗಮಿಸುವುದೆ ನಿರವಯವು, ಬಯಸದಿರಾ! ಬೇರೆ ಮತ್ತಿಲ್ಲ,
ಅನುಭಾವವೆಂಬ ಘನಮಹಿಮೆಯು ನಿಮ್ಮತ್ತ ಆಯಿತ್ತು:
ಆ ನಾದದ ನಿಶ್ಚಿಂತನಿಲವನರಿಯಿತ್ತೆ ಆಯಿತ್ತು.
ಇದು ನಿಮ್ಮ ಕಲ್ಪನೆ, ಆದಿ ಅಂತ್ಯವ ಬಲ್ಲಡೆ, ಬಲ್ಲನು.
ಅವಚಿತ್ತದ ಅವಧಾನದ, ಅಹುದೆಂಬ ಅಲ್ಲವೆಂಬ, ಉಂಟೆಂಬ ಇಲ್ಲವೆಂಬ
ಈ ಎರಡರ ಮಥನವಲ್ಲ ಕೇಳಿರಯ್ಯಾ.
ಚಿಂದಗೆಡದ ಮುನ್ನ ಬೇಗಮಾಡಿ ತಿಳಿದಿರಾದಡೆ
ಬಸವನಂತೆ ಭಾವ, ಬಸವನಂತೆ ಮನ,
ಬಸವನ ಪದವಿಡಿದಡೆ ಇದೇ ಪಥ ಕಾಣಾ
ಕೂಡಲಚೆನ್ನಸಂಗಮದೇವಾ. ॥ ೪೯೧ ॥

೧೩೪೪

ನಾನಾ ವಿಲಾಸದ ಜಪವ ಬಿಟ್ಟು ತಪಸಿಯಾಗಿ,
ಕರಿಯ [ಕ]ತ್ತರಿಸಿ, ಕರಣನಾಳದ ಗಂಟಲ ಮುಳ್ಳಕಿತ್ತು
ಗಡ್ಡ, ಮಂಡೆಯ ಕೇಶವ ಸವರಿ
ಜ್ಞಾನವೆಂಬ ದಂಡವಂ ಪಿಡಿದು ವೇಳರಿಸಿ
ಕರಪಾತ್ರ ತಿರಿತ[ದಿಂ] ಮೂವರು ಜ್ವಾಲೆಯವರ ಜಾಡಿಸಿ
ಜೋಡಿ ಜವಳಿ ಪರನಾದನಾಗಿ ಲೀಲಾಂಗನ ವಿಲಾಸದವರಂತೆ
ಹಾದುಣ್ಣದೆ ಒದ್ದು?
ಲಿಂಗಾಂಗಿಗಳಲ್ಲಿ ಕ್ಷುಧಾತೃಷ್ಣೆಯರತು, ಮೂಸಿದ ಮುಸಿಯುಳಿದು
ವಿಚಾರ ಅವಿಚಾರಿ ಅನಾಚಾರಸಂಹಾರಿ
ಲಿಂಗಾಲಿಂಗಾಂಗಿ ಲಿಂಗಾರ್ಪಿತ ಶಬ್ದ ಅಕ್ಷಯನ ನಿರೀಕ್ಷಿಸುತ್ತ
ಕುಕ್ಷಿಯ ಕುಕ್ಕಿರವೆ ಹೇಮಚೋಲಚಾಲನು,
ತುತ್ತಿಂಗೆ ಕೂಳನಾಯ ಲಾಳಭಂಜಕರನೊಲ್ಲೆನೆಂದ
ಕೂಡಲ[ಚೆನ್ನಸಂಗ]ಯ್ಯನು. ॥ ೪೯೨ ॥

೧೩೪೫

ನಾನು–ನೀನು, ಅರಿದೆ–ಮರೆದೆ, ಅಳಿವೆ–ಉಳಿದೆನೆಂಬುದು ತತ್ವಭ್ರಮೆ.
ಸ್ಥೂಲ–ಸೂಕ್ಷ್ಮ ವಿಪರೀತಭ್ರಮೆ,
ಪುಣ್ಯ–ಪಾಪ, ಸ್ವರ್ಗ–ನರಕ–ಮೋಕ್ಷ,
ಪ್ರವರ್ತಕ–ನಿವರ್ತಕ ಯೋಗದಾಗು ಸಿಲುಕುಭ್ರಮೆ,
ಬಹಿರ್ಮುಖಿ ಭ್ರಮೆ, ಅನೃತಭ್ರಮೆ, ಸತ್ಯಭ್ರಮೆ, ನಿತ್ಯಭ್ರಮೆ,

ವಾಗದ್ವೈತಭ್ರಮೆ, ಮಂತ್ರಭ್ರಮೆ, ತಂತ್ರಭ್ರಮೆ
ಆದಿಸಪ್ತಕ ಕರ್ಮಭ್ರಮೆ, ಹುಸಿಜೀವ ಪರಮರೈಕ್ಯ ಸಂಧಾನಭ್ರಮೆ,
ನಾಹಂ ಭ್ರಮೆ, ಕೋಹಂ ಭ್ರಮೆ, ಸೋಹಂಭ್ರಮೆ
ತತ್ವವೇಷ್ಟಿತ ಜಗತ್ರಯಕ್ಕೆಲ್ಲಾ ಮಾಯಾಮಯ–
ಇದು ಕಾರಣ ಕೂಡಲಚೆನ್ನಸಂಗಯ್ಯನ ಕೂಡಿದ ಶರಣಂಗೆ
ಆವ ಭ್ರಮೆಯೂ ಇಲ್ಲ. || ೪೯೩ ||

೧೩೪೬

ನಾನು ನೀನೆಂಬ ಮೋಹವೆಲ್ಲಿಯದೊ?
ನಿರ್ಭಾವವೆಂಬ ಪ್ರಸಂಗವೆಲ್ಲಿಯದು ಹೇಳಾ?
ಮನಲೀಯ, ಉಭಯಭಾವರಹಿತ
ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು. || ೪೯೪ ||

೧೩೪೭

ನಾನೆಂಬುದಿಲ್ಲ, ನೀನೆಂಬುದಿಲ್ಲ,
ಸ್ವಯವೆಂಬುದಿಲ್ಲ, ಪರವೆಂಬುದಿಲ್ಲ
ಅರಿವೆಂಬುದಿಲ್ಲ ಮರಹೆಂಬುದಿಲ್ಲ,
ಒಳಗೆಂಬುದಿಲ್ಲ, ಹೊರಗೆಂಬುದಿಲ್ಲ
ಕೂಡಲಚೆನ್ನಸಂಗಯ್ಯನೆಂಬ [ಶಬ್ದ] ಮುನ್ನಿಲ್ಲ. || ೪೯೫ ||

೧೩೪೮

ನಾನೊಂದ ತೋರಲರಿಯೆನು, ನಾನೊಂದ ಹೇಳಲರಿಯೆನು,
ನಾನೊಂದ ಸ್ಥಲವಿಡಲರಿಯೆನು, ಕುಲವಿಡಲರಿಯೆನು.
ಕೂಡಲಚೆನ್ನಸಂಗಮದೇವರಲ್ಲಿ
ಮಡಿವಾಳನ ನಿಲವ ನಾನೆತ್ತ ಬಲ್ಲೆನಯ್ಯಾ ಸಂಗನಬಸವಣ್ಣ? || ೪೯೬ ||

೧೩೪೯

ನಾಭಿ ಲಿಂಗ ಮಧ್ಯನಾಳಕಂದದ ಬಯಲೊಳಗಿಪ್ಪ ಸೂಕ್ಷ್ಮಾಗ್ನಿಯನು
ವ್ಯಾಹೃತಿಯಿಂದ ಊರ್ಧ್ವಮುಖಕ್ಕೆ ತಂದು, ಧ್ರುವಮಂಡಲದಲ್ಲಿ ನಿಲಿಸಿ
ಪ್ರಭಾಮಂಡಲದೊಳಗೆ ಹೊಳೆವ ಪ್ರಾಣಲಿಂಗಕ್ಕೆ
ನವಚಕ್ರಮಧ್ಯದಲ್ಲಿಪ್ಪ ಅಮೃತವನರ್ಪಿತವ ಮಾಡಿ
ಪ್ರಸಾದವ ಕೊಳಬಲ್ಲ, ಕೂಡಲಚೆನ್ನಸಂಗಾ–ನಿಮ್ಮ ಶರಣ. || ೪೯೭ ||

೧೩೫೦

ನಾರಾಯಣ ತನ್ನ ಲೋಕದಲ್ಲಿ ಮಾಡಿದ ಮಂಟಪದಂತಲ್ಲ,
ಇಂದ್ರ ನಿಜವನದಲ್ಲಿ ಮಾಡಿದ ಮಂಟಪದಂತಲ್ಲ,
ವೀರಭದ್ರ ಭೀಮಾದ್ರಿಯಲ್ಲಿ ರಚಿಸಿದ ಪೂಜಾಮಂಟಪದಂತಲ್ಲ.
ಇಲ್ಲಿರ್ಪ ಮಂಟಪದ ಉದಯವ ನೋಡಿದಡೆ
ಇದರ ವಿಸ್ತಾರ ಅರಿದಯ್ಯಾ ಕೂಡಲಚೆನ್ನಸಂಗಮದೇವಾ. ॥ ೯೮೮ ॥

೧೩೫೧

ನಾಲ್ಕು ಜಾವಕ್ಕೆ ಒಂದು ಜಾವ ವ್ಯಾಪಾರ ಹಸಿವೆ,
ಮಿಕ್ಕಾದ ದೆಸೆಯೆಣಿಕೆ [ಯಲ್ಲಿ] ಸಂದಿತ್ತು.
ಮತ್ತೊಂದು ಜಾವ ನಿದ್ರೆ ಸ್ವಪ್ನ ನಾನಾ ಅವಸ್ಥೆ[ಯಲ್ಲಿ] ಬಿಟ್ಟಿತ್ತು.
ಮತ್ತೊಂದು ಜಾವ ಅಂಗನೆಯರ ಕೂಟ ಅಧರಚುಂಬನ
ಮಿಕ್ಕಾದ ಬಹುವಿಧ ಅಂಗವಿಕಾರದಲ್ಲಿ ಸಂದಿತ್ತು.
ಇನ್ನೊಂದು ಜಾವವಿರೆ ನೀವು ನೀವು ಬಂದ ಬಟ್ಟೆಯ ತಿಳಿದು
ಮುಂದಣ ಆಗು ಚೇಗೆಯನರಿತು ನಿತ್ಯನೇಮವ ವಿಸ್ತರಿಸಿಕೊಂಡು
ನಿಮ್ಮ ಶಿವಾರ್ಚನೆ, ಪೂಜೆ, ಪ್ರಣವದ ಪ್ರಮಥಾಳಿ, ಭಾವದ ಬಲಿಕೆ,
ವಿಶಕ್ತಿಯ ಬಿಡುಗಡೆ,
ಸದ್ಭಕ್ತಿಯ ಮುಕ್ತಿ–ಇಂತೀ ಕೃತ್ಯದ ಕಟ್ಟು ತಪ್ಪಿದಿರಿ.
ಅರುಣನ ಉದಯಕ್ಕೆ ಒಡಲಾಗದ ಮುನ್ನವೆ
ಖಗ ವಿಹಂಗಾದಿಗಳ ಪಶು ಮೃಗ ನರಕುಲದುಲುಹಿಂಗೆ ಮುನ್ನವೆ
ಹೃದಯಕಮಲಪುಷ್ಪದ ಪೂಜೆಯ ಮಾಡುವೆ.
ಕಿವಿಗಳೇ ಕೀರ್ತಿಮುಖ, ನೆನೆವ ನಾಲಗೆಯೆ ಘಂಟೆ, ಶಿರವೆ ಸುವರ್ಣದ ಕಲಶ,
ಎನ್ನ ನಯನವೆಂಬ ಸ್ವಯಂಜ್ಯೋತಿಯನಾರತಿಯನೆತ್ತುವೆ.
ಎನ್ನ ಚಂದ್ರಶೇಖರಲಿಂಗಕ್ಕೆ ಮಾಡಿದೆನೆನ್ನ ಪ್ರಾಣಪೂಜೆಯ
ಎನ್ನ ಕಾಯದ ಭಾಜನವನೀಪರಿ ಮಾಡಿದನಾಗಿ
ಕೂಡಲಚೆನ್ನಸಂಗನ ಪೂಜಿಸಿದಲ್ಲದೆ ನಿಲ್ಲಲಾರೆ. ॥ ೯೮೯ ॥

೧೩೫೨

ನಾಲ್ಕು ವೇದವನೋದಿದ ವಿಪ್ರರ ಮನೆಯ
ಎಣ್ಣೆ ಹೋಳಿಗೆ ತುಪ್ಪ ಸಕ್ಕರೆ ಎಂದಡೆ
ನಮ್ಮ ಶಿವಭಕ್ತರ ಮನೆಯ ಶ್ವಾನ, ಮೂಸಿನೋಡಿ ಒಲ್ಲದೆ ಹೋಯಿತ್ತು.
ಅದೆಂತೆಂದಡೆ: ಸಾಮವೇದಿ ಹೋಗುತ್ತಿರಲು ಶ್ವಪಚಯ್ಯಗಳು,

ತಮ್ಮ ಪಾಕಕ್ಕೆ ಪಾದರಕ್ಷೆಯ ತೆರೆಯ ಹಿಡಿದಿದ್ದರಾಗಿ.
ಆ ಶ್ವಾನನೆ ಶುಚಿಯೆಂದು ಹಾಕಿದ ಮುಂಡಿಗೆಯ
ಆರಾದಡೂ ಎತ್ತುವಿರೊ, ಜಗದ ಸಂತೆಯ ಸೂಳೆಯ ಮಕ್ಕಳಿರಾ?
ಜಗಕ್ಕೆ ಪಿತನೊಬ್ಬನೆ ಅಲ್ಲದೆ ಇಬ್ಬರೆಂದು ಬಗಳುವನ ಬಾಯಲ್ಲಿ
ನಮ್ಮ ಪಡಿಹಾರಿ ಉತ್ತಣ್ಣಗಳ ಎಡದ ಪಾದರಕ್ಷೆಯ
ಅವಸಂಗಳ ಮುಟ್ಟಿಕ್ಕುವನೆಂದ—ಕೂಡಲಚೆನ್ನಸಂಗಮದೇವ. ॥ ೫೦೦ ॥

೧೩೫೩

ನಿಜವೆಲ್ಲ ತಾನಾಗಿ, ತಾನೆಲ್ಲ ನಿಜವಾಗಿ, ಒಡಲುಪಾಧಿಯೆಂಬುದಿಲ್ಲ ನೋಡಾ,
ನಿಂದಡೆ ನೆಳಲಿಲ್ಲ, ನಡೆದಡೆ ಹೆಜ್ಜೆಯಿಲ್ಲ,
ಅಪರಿಮಿತ ಘನಮಹಿಮನನೇನೆಂಬೆನಯ್ಯಾ!
ಶಬ್ದವರಿದು ಸಾರಾಯನಲ್ಲ, ಗತಿವಿಡಿದು ಜಡನಲ್ಲ, ಎರಡಳಿದುಳಿದ ನಿಶ್ಚಿಂತನು!
ತನಗೆ ತಾ ನಿಜವಾದ ಕೂಡಲಚೆನ್ನಸಂಗಯ್ಯನಲ್ಲಿ
ಪ್ರಭುದೇವರೆಂಬ ಜಂಗಮದ ಪಾದಕ್ಕೆ ನಮೋ ನಮೋ ಎನುತಿರ್ದೆನು. ॥ ೫೦೧ ॥

೧೩೫೪

ನಿತ್ಯ ನಿರವಯ ನಿರಂಜನ ಪರಂಜ್ಯೋತಿ ಮಹಾಘನ ಪರವಸ್ತು
ಪರಮಲೀಲಾ ವಿನೋದದಿಂದ ಪರಶಕ್ತಿಸಂಯುಕ್ತನಾಗಿ
ಪರಾಪರ ವಿನೋದದಿಂದ ಅಖಿಲ ಬ್ರಹ್ಮಾಂಡಾವರಣವಾಯಿತ್ತು.
ಇದನರಿಯದೆ ಶೈವರು ಶಾಕ್ತೇಯರು ವೈಷ್ಣವರು
ಗಾಣಪತ್ಯರು ಸೌರರು, ಕಾಪಾಲಿಕರು,
ಒಂದೊಂದು ಪರಿಯಲ್ಲಿ ಲಕ್ಷಿಸಿ ಹೆಸರಿಟ್ಟು ನುಡಿವರು.
ಇನ್ನು ಶೈವನ ಯುಕ್ತಿ ಎಂತೆಂದಡೆ:
'ಶಿವಸಾಕ್ಷಿಕ, ಶಕ್ತಿ, ತಂತ್ರ, ಜೀವನೋಪಾಧಿ' ಎಂಬ.
ಇದು ಕ್ರಮವಲ್ಲ—ಮತ್ತೆ ಹೇಗೆಂದಡೆ:
ಬೀಜವೃಕ್ಷದಂತೆ ಬ್ರಹ್ಮದ ಪರಿಯಾಯ. ಅದೆಂತೆಂದಡೆ:
"ಪತ್ರಪುಷ್ಪ ಫಲೈರ್ಯುಕ್ತಃ ಸಶಾಖಃ ಪಾದಮೂಲವಾನ್।
ಬೀಜೇ ವೃಕ್ಷೋ ಯಥಾ ಸರ್ವಂ ತಥಾ ಬ್ರಹ್ಮಣಿ ಸಂಸ್ಥಿತಂ॥" ಎಂದುದಾಗಿ.
ಇನ್ನು ಶಾಕ್ತೇಯನ ಯುಕ್ತಿ ಎಂತೆಂದಡೆ:
'ನಾದಬಿಂದು ಸಂಯುಕ್ತ, ಮಂತ್ರರೂಪವಸ್ತು ಜಗತ್ತು ಕರ್ಮರೂಪ.'
ಇದು ಕ್ರಮವಲ್ಲ: ಮತ್ತೆ ಹೇಗೆಂದಡೆ:
ವಾರಿಧಿಯ ನೆರೆ ತೊರೆ ತರಂಗದಂತೆ ಬ್ರಹ್ಮದ ಪರಿಯಾಯ; ಅದೆಂತೆಂದಡೆ:

"ಯಥಾ ಫೇನ ತರಂಗಾಣಿ ಸಮುದ್ರೇ ತೂರ್ಜಿತೇ ಪುನಃ|
ಉತ್ಪದ್ಯಂತೇ ವಿಲೀಯಂತೇ ಮಯಿ ಸರ್ವಂ ಜಗತ್ತಥಾ|| ಎಂದುದಾಗಿ.
ಇನ್ನು ವೈಷ್ಣವನ ಯುಕ್ತಿ ಎಂತೆಂದಡೆ:
'ಕರ್ಮಕರ್ತೃ, ಮಾಯಾಧೀನ ಜಗತ್ತು' ಎಂಬ.
ಇದು ಕ್ರಮವಲ್ಲ, ಮತ್ತೆ ಹೇಗೆಂದಡೆ:
"ರೂಪಾದಿ ಸಕಲಂ ವಿಶ್ವಂ ವಿಶ್ವರೂಪಾಧಿಕಃ ಪರಃ|
ಸರ್ವಾದಿ ಪರಿಪೂರ್ಣತ್ವಂ ಪರವಸ್ತು ಪ್ರಮಾಣತಃ|| ಎಂದುದಾಗಿ.
ಇನ್ನು ಗಾಣಪತ್ಯನ ಯುಕ್ತಿ ಎಂತೆಂದಡೆ:
'ಅತೀತವೆ ವಸ್ತು, ಜಗತ್ತುಮಾಯಾತಂತ್ರ' ಎಂಬ.
ಇದು ಕ್ರಮವಲ್ಲ; ಮತ್ತೆ ಹೇಗೆಂದಡೆ:
"ಪರಾಧೀನಂ ಜಗತ್‌ಸರ್ವಂ ಪರಿಣಾಮೋತ್ತರಃ ಪ್ರಭುಃ|
ಯದ್ವಿಲಾಸೋ ವಿಲಾಸಾಯ ಮಹತೋ ನಚ ವಹ್ನಿವತ್|| ಎಂದುದಾಗಿ.
ಇನ್ನು ಸೌರನಯುಕ್ತಿ ಎಂತೆಂದಡೆ:
'ಘಟಾದಿ ಮೂಲ ಬಿಂದು, ದಿಟವಪ್ಪುದೆ ನಾದ' ಎಂಬ.
ಇದು ಕ್ರಮವಲ್ಲ; ಮತ್ತೆ ಹೇಗೆಂದಡೆ:
"ನಾದಾತೀತಮಿದಂ ವಿಶ್ವಂ ಬಿಂದ್ವತೀತೋ ಸ್ವಯಂ ಪ್ರಭುಃ|
ಅನಾಮಯೋ ನಿರಂಜನೋ ನಿಶ್ಚಯಃ ಪರಮೇಶ್ವರಃ|| ಎಂದುದಾಗಿ.
ಇನ್ನು ಕಾಪಾಲಿಕನ ಯುಕ್ತಿ ಎಂತೆಂದಡೆ:
'ಜೋಗೈಸುವ ವಿಶ್ವಂ ಮಹಾಜೋಗಿ ಜೋಗೈವ ಈಶಂ' ಎಂಬ.
ಇದು ಕ್ರಮವಲ್ಲ; ಮತ್ತೆ ಹೇಗೆಂದಡೆ:
"ಬ್ರಹ್ಮಾದಿಸ್ತಂಭಪರ್ಯಂತಂ ಸಿದ್ಧಯೋಗಮುದಾಹೃತಂ|
ನಿರಂಜನಂ ನಿರಾಕಾರಂ ನಿರ್ಮಾಯಂ ಪರಮಾಶ್ರಯಂ|| ಎಂದುದಾಗಿ.
ಪರಾಪರವಸ್ತು ಪರಮಾರ್ಥವಿಲಾಸಿಯಾಗಿ, ಪರಶಕ್ತಿಲೋಲನಾಗಿ,
ಪರಮಾಶ್ರಯ ಪರಿಪೂರ್ಣನಾಗಿ, ನಾನಾವಿಚಿತ್ರವಿನೋದನಾಗಿ,
ಪರಮಾತ್ಮ ಅಂತರಾತ್ಮನಾಗಿ, ಅಂತರಾತ್ಮ ಜೀವಾತ್ಮನಾಗಿ,
ಜೀವಾತ್ಮ ಅಖಿಲಾತ್ಮನಾಗಿ, ಅಖಿಲಾತ್ಮ ಏಕಾತ್ಮನಾಗಿ–
ನಿರಂಜನ ನಿರುಪಮ ನಿರ್ವಿಕಾರ ನಿತ್ಯಾನಂದ ನಿಶ್ಚಲ ನಿಶ್ಚಿಂತ ನಿರಾಳ
ನಿಜಾತ್ಮಸುಖಿ ನೀನೇ ಕೂಡಲಚೆನ್ನಸಂಗಮದೇವಾ. || ೩೦೨ ||

೧೩೫೫

ನಿಧಾನವನಗೆವೆನೆಂದು ಹೋದರೆ
ವಿಘ್ನ ಬಪ್ಪುದು ಮಾಬುವೆ ಅಯ್ಯಾ?
ಸದಾಶಿವನ ಪೂಜಿಸುವೆನೆಂದು ಹೋದಡೆ

ಕದುಬಿ ಹಿಡಿವವಯ್ಯಾ ಸಕಲ ವಿಪತ್ತುಗಳು.
ಎದೆ ಭಂಗವಿಲ್ಲದೆ ನಿಲ್ಲಬಲ್ಲಡೆ
ಸದಮಲ ಸುಖವನೀವ ನಮ್ಮ ಕೂಡಲಚೆನ್ನಸಂಗಮದೇವ. || ೫೦೩ ||

೧೩೫೬

ನಿಮನಿಮಗೆಲ್ಲಾ ಬಲ್ಲೆವೆಂದೆಂಬಿರಿ.
ಹರಿ ಹತ್ತು ಭವಕ್ಕೆ ಬಂದಲ್ಲಿ, ಅಜನ ಶಿರವರಿದಲ್ಲಿ
ಅಂದೆಲ್ಲಿಗೆ ಹೋದವೋ ನಿಮ್ಮ ವೇದಶಾಸ್ತ್ರಾಗಮ ಪುರಾಣಂಗಳೆಲ್ಲಾ.
ಚೆನ್ನಯ್ಯನ ಕೈಯಲ್ಲಿ ಹಾಗವನೆ ಕೊಟ್ಟು
ಕಂಕಣದ ಕೈಯ ಕಂಡು ಧನ್ಯರಾಗಿರೆ ನೀವು.
ಮಾತಂಗಿಯ ಮಕ್ಕಳೆಂದು, ಗಗನದಲ್ಲಿ ಸ್ನಾನವನೆ ಮಾಡೆ
ಆಕಾಶದಲ್ಲಿ ಧೋತ್ರಂಗಳು ಹಾರಿ ಹೋಗಲಾಗಿ
ನಮ್ಮ ಶ್ವಪಚಯ್ಯಗಳ ಕೈಯಲ್ಲಿ ಒಕ್ಕುದ ಕೊಂಡು
ಧನ್ಯರಾಗರೆ ಸಾಮವೇದಿಗಳೆಂದು?
ನಿಮ್ಮ ನಾಲ್ಕು ವೇದವನೋದದೆ ನಮ್ಮ ಭಕ್ತರ ಮನೆಯ 'ಕಾಳ'ಸು?–
ಇದು ಕಾರಣ; ನಮ್ಮ ಕೂಡಲಚೆನ್ನಸಂಗನ ಶರಣರ ಮುಂದೆ
ಈ ಒಡ್ಡುಗಳ ಮಾತ ಪ್ರತಿ ಮಾಡಬೇಡ. || ೫೦೪ ||

೧೩೫೭

ನಿಮ್ಮ ಅಂಗದಲ್ಲಿರ್ದ ಅವಗುಣಂಗಳ ವಿಚಾರಿಸದೆ
ಜಂಗಮದಲ್ಲಿ ಅವಗುಣವ ವಿಚಾರಿಸುವ ದುರಾಚಾರಿಗಳು ನೀವು ಕೇಳಿರೆ
ಅದೆಂತು ಅಂಗದಲ್ಲಿ ಅನಾಚಾರವುಂಟೆಂಬುದ,
ನಾನು ವಿಚಾರಿಸಿ ಹೇಳುವೆನು ಕೇಳಿರೆ:
ನೀವು ಪರಸ್ತ್ರೀಯರ ನೋಡುವ ಕಣ್ಗಳನೊಳಗಿಟ್ಟುಕೊಂಡಿರ್ಪುದು
ನಿಮ್ಮದಾಚಾರವೆ ಹೇಳಿರಣ್ಣಾ ಅನಾಚಾರವಲ್ಲದ?
ತನ್ನ ಸ್ತ್ರೀಯಲ್ಲವೆ ಅನ್ಯ ಸ್ತ್ರೀಯಲ್ಲಿ ಆಚರಿಸುವುದು
ನಿಮ್ಮದಾಚಾರವೆ ಹೇಳಿರಣ್ಣಾ ಅನಾಚಾರವಲ್ಲವೆ?
ಅಂಗದ ಮೇಲಣ ಲಿಂಗವ ಪೂಜಿಸಿ ಜಂಗಮವ ನಿಂದಿಸುವುದು
ನಿಮ್ಮದಾಚಾರವೆ ಹೇಳಿರಣ್ಣಾ ಅನಾಚಾರವಲ್ಲವೆ?
ಇನ್ನು ಹೇಳುವಡೆ ಅವಕೇನು ಕಡೆಯಿಲ್ಲ.
ಇದನರಿದು, ನಮ್ಮ ಜಂಗಮಲಿಂಗವ ಮಾಡಿಕೊಳ್ಳದಿರಿ
ಅಥವಾ ಮಾಡಿಕೊಂಡಿರಾದಡೆ, ಆ ದ್ರೋಹ ಲಿಂಗವ ಮುಟ್ಟುವುದು.
ಅದೆಂತೆಂದಡೆ:
ಬೀಜಕ್ಕೆ ಚೈತನ್ಯವ ಮಾಡಿದಡೆ, ವೃಕ್ಷಕ್ಕೆ ಚೈತನ್ಯವಪ್ಪುದು.

ಆ ಅಂತಪ ಬೀಜಕ್ಕೆ ಚೈತನ್ಯವ ಮಾಡದಿರ್ದಡೆ
ವೃಕ್ಷ ಫಲವಾಗದಾಗಿ, ಬೀಜಕ್ಕೆ ಕೇಡಿಲ್ಲ.
ಅದು ನಿಮಿತ್ತವಾಗಿ, ಬೀಜವೆ ಜಂಗಮಲಿಂಗವು.
ಆ ಜಂಗಮಲಿಂಗವೆಂಬ ಬೀಜವನು ಸುರಕ್ಷಿತವ ಮಾಡಿವಡೆ
ಲಿಂಗವೆಂಬ ವೃಕ್ಷ ಫಲಿಸುವುದಯ್ಯಾ.
ಕೂಡಲಚೆನ್ನಸಂಗಮದೇವಾ. || ೫೦೫ ||

೧೩೫೮

ನಿಮ್ಮ ಗುರುಗಳು ಪಲ್ಲಕ್ಕಿಯಲ್ಲಿ,
ನಿಮ್ಮ ಪರಮಗುರು ನಂದಿವಾಹನದಲ್ಲಿ ವಿರಾಜಿಪ ಪರಿ
ನಿನ್ನ ಮನಕ್ಕೆ ವೇದ್ಯವೆ?
ಗುರುಶಿಷ್ಯರ ಭಾವದ ಗೌರವ ನೀ ಬಲ್ಲೆಯಲ್ಲವೆ
ಮತ್ತಾರಯ್ಯಾ ಕೂಡಲಚೆನ್ನಸಂಗಮದೇವಾ? || ೫೦೬ ||

೧೩೫೯

ನಿಮ್ಮ ಜಂಗಮವ ಕಂಡು ಉದಾಸೀನವ ಮಾಡಿದಡೆ, ಒಂದನೆಯ ಪಾತಕ.
ನಿಮ್ಮ ಜಂಗಮದ ಸಮಯೋಚಿತವ ನಡೆಸದಿದ್ದಡೆ, ಎರಡನೆಯ ಪಾತಕ.
ನಿಮ್ಮ ಜಂಗಮದ ಕೂಡೆ ಮಾರುತ್ತರವ ಕೊಟ್ಟಡೆ, ಮೂರನೆಯ ಪಾತಕ.
ನಿಮ್ಮ ಜಂಗಮದ ಸಕಲಾರ್ಥಕ್ಕೆ ಸಲ್ಲದಿದ್ದಡೆ, ನಾಲ್ಕನೆಯ ಪಾತಕ.
ನಿಮ್ಮ ಜಂಗಮಕ್ಕೆ ಮಾಡಿದೆನೆಂದು ಮನದಲ್ಲಿ ಹೊಳೆವಡೆ, ಐದನೆಯ ಪಾತಕ.
ನಿಮ್ಮ ಜಂಗಮವು ಅಂಥವರಿಂಥವರೆಂದು ನುಡಿದಡೆ, ಆರನೆಯ ಪಾತಕ.
ನಿಮ್ಮ ಜಂಗಮವೆ ಲಿಂಗವೆಂದು ನಂಬದಿದ್ದಡೆ, ಏಳನೆಯ ಪಾತಕ.
ನಿಮ್ಮ ಜಂಗಮದ ಕೂಡೆ ಸುಖಸಂಭಾಷಣೆಯ ಮಾಡದಿದ್ದಡೆ,
ಎಂಟನೆಯ ಪಾತಕ.
ನಿಮ್ಮ ಜಂಗಮಕ್ಕೆ ಸಕಲ ಪದಾರ್ಥವ ನೀಡದೆ,
ತನ್ನ ಲಿಂಗಕ್ಕೆ ಕೊಡುವುದು ಒಂಬತ್ತನೆಯ ಪಾತಕ.
ನಿಮ್ಮ ಜಂಗಮದ ಪಾದೋದಕ ಪ್ರಸಾದವನು ತಂದು,
ತನ್ನ ಲಿಂಗಕ್ಕೆ ಕೊಟ್ಟು ಕೊಳದಿಹುದು
ಪತ್ತನೆಯ ಪಾತಕ—ಇಂತೀ ಪತ್ತು ಪಾತಕವ ಕಳೆದಲ್ಲದೆ
ಭಕ್ತನಲ್ಲ, ಮಹೇಶ್ವರನಲ್ಲ, ಪ್ರಸಾದಿಯಲ್ಲ, ಪ್ರಾಣಲಿಂಗಿಯಲ್ಲ,
ಶರಣನೈಕ್ಯನೆಂತೂ ಆಗಲರಿಯ.
ಇದು ಕಾರಣ, ಕೂಡಲಚೆನ್ನಸಂಗಮದೇವಾ
ಭಕ್ತಿಹೀನ ಜಡಜೀವಿಗಳು ನಿಮಗೆಂದೂ ದೂರವಯ್ಯಾ. || ೫೦೭ ||

೧೩೬೦

ನಿಮ್ಮ ಭಕ್ತಂಗೆ ಮಲತ್ರಯವಿಲ್ಲ;
ಅದೇನು ಕಾರಣವೆಂದಡೆ:
ತನುವ ಸದಾಚಾರಕ್ಕರ್ಪಿಸಿ, ಮನವ ಮಹಾಲಿಂಗಭಾವದಲಿರಿಸಿ,
ಧನವ ನಿಮ್ಮ ಶರಣರ ದಾಸೋಹಕ್ಕೆ ಸವೆಯಬಲ್ಲವನಾಗಿ–
ಇಂತೀ ತ್ರಿವಿಧವ ತ್ರಿವಿಧಕ್ಕೆ ಕೊಟ್ಟಬಳಿಕ
ಆ ಭಕ್ತನ ತನು ನಿರ್ಮಲ, ಆ ಭಕ್ತನ ಮನ ನಿಶ್ಚಿಂತ,
ಆ ಭಕ್ತನ ಧನ ನಿರ್ವಾಣ.
ಇಂತಪ್ಪ ಭಕ್ತ ಪ್ರಸಾದಕಾಯನಯ್ಯಾ ಕೂಡಲಚೆನ್ನಸಂಗಮದೇವಾ. || ೫೦೮ ||

೧೩೬೧

ನಿರಾಳ ನಿಶ್ಶೂನ್ಯಲಿಂಗಕ್ಕೆ ಶರಣರು
ತಮ್ಮ ತನುಮನವ ಕೊಡುವುದು ಕರ್ಮ,
ಇರಿಸಿಕೊಂಡಿಪ್ಪುದು ಕರ್ಮ.
ಈ ಉಭಯ ನಾಸ್ತಿಯಾಗದ ಸುಳುಹು
ಮುಂದೆ ಕಾಡುವುದು ಕಾಣಾ,
ಕೂಡಲಚೆನ್ನಸಂಗಮದೇವಾ. || ೫೦೯ ||

೧೩೬೨

ನಿರ್ನಾಮವಾಯಿತ್ತು, ನಿಷ್ಪತ್ತಿಯಾಯಿತ್ತು,
ಅಗಮ್ಯದಲ್ಲಿ ಗಮನಗೆಟ್ಟಿತ್ತು, ನಿಂದಲ್ಲಿ ನಿರಾಳವಾಯಿತ್ತು,
ಕೂಡಲಚೆನ್ನಸಂಗಮದೇವರಲ್ಲಿ ಶಬ್ದಮುಗ್ಧವಾಯಿತ್ತು! || ೫೧೦ ||

೧೩೬೩

ನಿಷ್ಠಾಂಗದಲ್ಲಿ, ದೃಷ್ಟಾಂಗದಲ್ಲಿ, ದ್ರಷ್ಟಾಂಗದಲ್ಲಿ, ದೃಷ್ಟ್ಯಂಗದಲ್ಲಿ,
ನಷ್ಟಾಂಗದಲ್ಲಿ ಮುಟ್ಟಿ ನಿಷ್ಠೆಯಾದ ಪ್ರಸಾದಿ.
ಇಷ್ಟಾನಿಷ್ಟವಾದ ಪ್ರಸಾದಿ, ಪ್ರಸಾದದಿಂದ ಪ್ರಸಾದಿ
ಕೂಡಲಚೆನ್ನಸಂಗಯ್ಯಾ, ಲಿಂಗೈಕ್ಯಪ್ರಸಾದಿ. || ೫೧೧ ||

೧೩೬೪

ನಿಷ್ಠೆ ನಿಬ್ಬೆರಗು ಗಟ್ಟಿಗೊಂಡಡೆ
ಏಕೋಭಾವದಲ್ಲಿ ಸೊಮ್ಮು ಸಂಬಂಧ.
ಆಹ್ವಾನ ವಿಸರ್ಜನ ದುರ್ಭಾವಬುದ್ಧಿ ಲಯವಾದಡೆ, ಆತ ಮಾಹೇಶ್ವರ.
ಗುರುಮುಖದಲ್ಲಿ ಸರ್ವಶುದ್ಧನಾಗಿ ಪಂಚಭೂತದ ಹಂಗಡಗಿದಡೆ
ಆತ ಮಾಹೇಶ್ವರ.
ಪರದೈವ ಮಾನವಸೇವೆ ಪರಸ್ತ್ರೀ ಪರಧವನ ಬಿಟ್ಟು
ಏಕಲಿಂಗನಿಷ್ಠಾಪರನಾಗಿ,
"ದಾಸತ್ವಂ ವೀರದಾಸತ್ವಂ ಭೃತ್ಯತ್ವಂ ವೀರಭೃತ್ಯತಾ।
ಸಮಯಃ ಸಕಲಾವಸ್ಥಃ ಸಜ್ಜನಂ ಷಡ್ವಿಧಸ್ತಥಾ॥"
ಎಂಬ ಶ್ರುತ್ಯರ್ಥದಲ್ಲಿ ನಿಹಿತನಾಗಬಲ್ಲಡೆ
ಆತ ಮಾಹೇಶ್ವರನಪ್ಪನಯ್ಯಾ.
ಗುರುಮಾರ್ಗವೆ ತನಗೆ ಸನ್ಮತವಾಗಿ ಇರಬಲ್ಲಡೆ
ಆತ ಮಾಹೇಶ್ವರ.
ಈ ಮತವನರಿಯದ ಮೂಕೊರೆಯರ ಮೆಚ್ಚುವನೆ
ಕೂಡಲಚೆನ್ನಸಂಗಮದೇವ? ॥ ೫೧೨ ॥

೧೩೬೫

ನಿಸ್ಸಾರ(ನಿಃಸ್ವರೂಪ?)ನ ಸ್ವರೂಪಕ್ಕೆ ತಂದು
ನಯನಾದಿ ಅನಿಮಿಷ ದೃಷ್ಟವಾದ ಪ್ರಸಾದಿ
ಇಷ್ಟಾನಿಷ್ಟವಾದ ಪ್ರಸಾದಿ, ಪ್ರಸಾದೇನ ಪ್ರಸಾದಿ.
ಇದು ಕಾರಣ ಕೂಡಲಚೆನ್ನಸಂಗಯ್ಯಾ, ಲಿಂಗೈಕ್ಯಪ್ರಸಾದಿ! ॥ ೫೧೩ ॥

೧೩೬೬

ನೀಡಿ ನೀಡಿ ನಿಜವಿಲ್ಲದೆ ಕೆಟ್ಟೆ,
ಮಾಡಿ ಮಾಡಿ ಮನವಿಲ್ಲದೆ ಕೆಟ್ಟೆನಯ್ಯಾ.
ಅಟಮಟದ ಬೆಂದ ಸಂಸಾರವ ಹಿಡಿದು,
ಒಡಲ ಹೊರೆದೆನೆಂದು ಭವಭಾರಿಯಾದೆನಯ್ಯಾ.
ಕುಹಕವೆಂಬ ಮಡುವಿನ ಕೆಸರೊಳು ಬಿದ್ದು,
ಪಶುವಿನಂತಾದೆನಯ್ಯಾ.
ನನ್ನವಗುಣವ ಸಂಪಾದಿಸದಿರಯ್ಯಾ.

ಎನ್ನ ಭವಪಾಶವ ಹರಿದು,
ಇನ್ನಾದರೂ ಕರುಣಿಸೈ ಮಹಾದಾನಿ
ಕೂಡಲಚೆನ್ನಸಂಗಮದೇವಯ್ಯಾ. ॥ ೫೧೪ ॥

೧೩೬೭

ನೀ ನಿಲಿಸಿದಲ್ಲಿ ನಾನಂಜೆ ನಾನಂಜೆ ನಾನಂಜೆನಯ್ಯಾ
ಘನವು ಮಹಾಘನಕ್ಕೆ ಶರಣು ಹೊಕ್ಕುದಾಗಿ.
ನೀ ನಿಲಿಸಿದ ಧನದಲ್ಲಿ ನಾನಂಜೆ ನಾನಂಜೆನಯ್ಯಾ,
ಧನವು ಸತಿಸುತ ಮಾತಾಪಿತರಿಗೆ ಹೋಗದಾಗಿ.
ನೀ ನಿಲಿಸಿದ ತನುವಿನಲ್ಲಿ ನಾನಂಜೆ ನಾನಂಜೆನಯ್ಯಾ,
ತನು ಸರ್ವಾರ್ಪಿತದಲ್ಲಿ ನಿಹಿತಪ್ರಸಾದಭೋಗಿಯಾಗಿ,
ಇಂತೆಲ್ಲರ ಧೀರಸಮಗ್ರನಾಗಿ,
ಕೂಡಲಚೆನ್ನಸಂಗಮದೇವಾ, ನಿಮಗಾನಂಜೆನು. ॥ ೫೧೫ ॥

೧೩೬೮

ನೆರೆನಂಬೋ ನೆರೆನಂಬೋ ಗುರುಲಿಂಗಜಂಗಮವ.
ನೆರೆನಂಬೋ ನೆರೆನಂಬೋ ಧರಧುರವಿಲ್ಲದೆ ಸಾಮವೇದಿಗಳಂತೆ.
ನೆರೆನಂಬೋ ನೆರೆನಂಬೋ ದಾಸದುಗ್ಗಳೆಯರಂತೆ.
ನೆರೆನಂಬೋ ನೆರೆನಂಬೋ ಸಿರಿಯಾಳ ಚೆಂಗಳೆಯರಂತೆ.
ನೆರೆನಂಬೋ ನೆರೆನಂಬೋ ಕೆಂಭಾವಿಯ ಭೋಗಣ್ಣನಂತೆ.
ನೆರೆನಂಬೋ ನೆರೆನಂಬೋ ಸಿಂಧುಬಲ್ಲಾಳನಂತೆ.
ನೆರೆನಂಬಿದೆಯಾದಡೆ ತನ್ನನೀವ ಕೂಡಲಚೆನ್ನಸಂಗಮದೇವ. ॥ ೫೧೬ ॥

೧೩೬೯

ನೆಲನೊಂದೆ ಜಲ[ನೊಂದೆ] ಎಂಬುದ ಎಲ್ಲ ಲೋಕವು ಬಲ್ಲುದು ನೋಡಿರೆ!
ನೆಲ ಶುದ್ಧವೆಂಬಿರಿ: ನೆಲದೊಳಗಿಪ್ಪ ಎಂಬತ್ತುನಾಲ್ಕುಲಕ್ಷ ಜೀವರಾಸಿಗಳು
ಅಲ್ಲಿಯೆ ಪುಟ್ಟಿ ಅಲ್ಲಿಯೆ ಮಡಿವವಾಗಿ ಆ ನೆಲ ಶುದ್ಧವಲ್ಲ ನಿಲ್ಲು.
ಜಲ ಶುದ್ಧವೆಂಬಿರಿ: ಜಲದೊಳಗಿಪ್ಪ ಇಪ್ಪತ್ತೊಂದು[ಲಕ್ಷ] ಜೀವರಾಸಿಗಳು
ಅಲ್ಲಿಯೆ ಪುಟ್ಟಿ ಅಲ್ಲಿಯೆ ಮಡಿವವಾಗಿ ಆ ಜಲ ಶುದ್ಧವಲ್ಲ ನಿಲ್ಲು.
ನಿಮ್ಮ ತನು ಶುದ್ಧವೆಂಬಿರಿ: ತನುವಿನೊಳಗಿಪ್ಪ ಅಷ್ಟಮದಗಳೆಂಬ ಭವಿಗಳಂ
ಕಟ್ಟಿ ನಿಲಿಸಲರಿಯಲಿಲ್ಲವಾಗಿ ಆ ತನು ಶುದ್ಧವಲ್ಲ ನಿಲ್ಲು.
ನಿಮ್ಮ ಪಸ್ತುಗಳು ಶುದ್ಧವೆಂಬಿರಿ: ಒಂದು ಪಸ್ತು ಜಿಪ್ಪೆಯೊಳಗಾಡುವವು

ಒಂದು ಹಸ್ತ ಗುಹ್ಯದೊಳಗಾಡುವುದು–[ಆ] ಹಸ್ತಂಗಳು ಶುದ್ಧವಲ್ಲ ನಿಲ್ಲು.
ನಿಮ್ಮ ನಯನಂಗಳು ಶುದ್ಧವೆಂಬಿರಿ: ನಯನದಲ್ಲಿ ನೋಡಿದಲ್ಲಿ ಕೂಡುವಿರಾಗಿ
ನಿಮ್ಮ ನಯನಂಗಳು ಶುದ್ಧವಲ್ಲ ನಿಲ್ಲು–
ಇಂತೀ ತಮ್ಮ ಅಶುದ್ಧವಂ ತಾವು ಕಳೆಯಲರಿಯವೆ,
ಇದಿರ ಅಶುದ್ಧವಂ ಕಳೆದೆವೆಂದಡೆ, ನಾಚಿತ್ತು ನೋಡಾ ಎನ್ನ ಮನವು.
ಭಕ್ತಿ ವಿಶ್ವಾಸದಿಂದ ಗುರುಲಿಂಗಜಂಗಮದ ಪಾದಾರ್ಚನೆಯಂ ಮಾಡಿ
ಪಾದೋದಕ ಪ್ರಸಾದವಂ ಕೊಂಬ ಭಕ್ತನ ಶೀಲವೇ ಶೀಲವಲ್ಲದೆ
ಉಳಿದವರದಲ್ಲ ಕಾಣಾ ಕೂಡಲಚೆನ್ನಸಂಗಮದೇವಾ. || ೫೧೭ ||

೧೩೭೦

ನೇಮಸ್ತನಿಂದ ಮಹಾಪಾಪಿ ಲೇಸು,
ಅವನಿಂದ ಭೂಮಿಯ ಮೇಲೆ ಹುಟ್ಟಿದ
ಸಮಸ್ತಪ್ರಾಣಿಯ ಕೊಲುವ ವ್ಯಾಧ ಲೇಸು.
ಅವನಿಂದ ಅನಂತಕೋಟಿ ನರಕವನೈದುವರು, ಆ ನೇಮಸ್ತನೆಂಬ ಮಹಾಪಾಪಿಯ
ಮುಖವ ನೋಡಿ ಅವನ ಒಡಗೂಡಿಕೊಂಡು ನಡೆವವರು: ಅದೆಂತೆಂದಡೆ:
ನೇಮಸ್ತಯೋ ಮಹಾಪಾಪಿ ತೇನ ದರ್ಶಂತೇ ಯೋನರಃ।
ಭೌಕ್ತಿಕಂ ತತ್ವಪರ್ಯಂತಂ ನರಕಂ ಯಾಂತಿ ಸ ಧ್ರುವ॥
ಇಂತೆಂದುದಾಗಿ–ಇದು ಕಾರಣ ಕೂಡಲಚೆನ್ನಸಂಗಯ್ಯಾ
ನೇಮಸ್ತರಾದ ಪಾಪಿಗಳನೆನಗೆ ತೋರದಿರಯ್ಯಾ. || ೫೧೮ ||

೧೩೭೧

ನೋಟವುಳ್ಳನ್ನಕ್ಕರ ಕೂಟವುಂಟು, ಭಾವವುಳ್ಳನ್ನಕ್ಕರ ಭ್ರಮೆಯುಂಟು.
ನೋಟಗೆಟ್ಟು ಭಾವನಷ್ಟವಾಗಿ ಮನ ಲಯವಾದ ಬಳಿಕ
ಕೂಡಲಚೆನ್ನಸಂಗಮದೇವಾ,
ನಿಮ್ಮ ಶರಣ ಒಳಗೂ ನೋಡ, ಹೊರಗೂ ನೋಡ. || ೫೧೯ ||

೧೩೭೨

ನೋಡುವುದೊಂದು ನೋಡಿಸಿಕೊಂಬುದೊಂದು
ಇನ್ನು ನಿನ್ನಲ್ಲಿ ಎರಡುಂಟಲ್ಲಾ!
ಕರಸ್ಥಲದಲ್ಲಿ ಒಂದು, ಮನಸ್ಥಲದಲ್ಲಿ ಒಂದು,
ಇನ್ನು ನಿನ್ನಲ್ಲಿ ಎರಡುಂಟಲ್ಲಾ

ಕೂಡಲಚೆನ್ನಸಂಗಯ್ಯನಲ್ಲಿ ಗುಹೇಶ್ವರನೆಂಬ ಲಿಂಗವು
ನಿನಗೆಂತು ಸಾಧ್ಯವಾಯಿತ್ತು ಹೇಳಾ ಪ್ರಭುವೆ? ॥ ೫೨೦ ॥

೧೩೭೩

ಪಂಚಬ್ರಹ್ಮ ಮಂತ್ರವೆ ಶಿವನ ದೇಹವೆಂದರಿವುದಯ್ಯಾ.
ಶಿರವೆ ಈಶಾನ್ಯ, ಮುಖವೆ ತತ್ಪುರುಷ,
ಹೃದಯವೆ ಅಘೋರ, ಗುಹ್ಯವೆ ವಾಮದೇವ,
ಪಾದವೆ ಸದ್ಯೋಜಾತಮಂತ್ರವಯ್ಯಾ!
ಇಂತೀ ಪಂಚಮಂತ್ರತನುರೂಪಾದ ನೀನೆ
ಕೂಡಲಸಂಗಮದೇವಾ. ॥ ೫೨೧ ॥

೧೩೭೪

ಪಂಚಶತಕೋಟಿ ವಿಸ್ತೀರ್ಣ ಭೂಮಂಡಲ ಮೊದಲಾದ
ನವಖಂಡಪೃಥ್ವಿಯೆಲ್ಲವು ಒಂದು ಭುವನದೊಳಡಗಿತ್ತು.
ಇಂತಹ ಈರೇಳು ಭುವನವನೊಳಕೊಂಡ ಮಹಾಘನಕ್ಕೆ
ನಯದಾನವ ನೀಡಿಹೆನೆಂಬ ಸ್ವಾಮಿಯ ಮರುಳತನವನೇನೆಂಬೆನು?
ಕೂಡಲಚೆನ್ನಸಂಗಮದೇವರ ತೃಪ್ತಿಯ ತೆರನನೊಲಿವಡೆ
ನೀವು ಬೋನ, ನಾನು ಪದಾರ್ಥ.
ಇದರಿಂದ ಮೇಲೇನೂ ಘನವಿಲ್ಲ ಕಾಣಾ ಸಂಗನಬಸವಣ್ಣಾ. ॥ ೫೨೨ ॥

೧೩೭೫

ಪಂಚೇಂದ್ರಿಯಂಗಳ ಮುಖಂಗಳಲ್ಲಿ
ಅಲ್ಲಲ್ಲಿ ತಾಗಿದ ಸುಖವ ಸುಖಿಸಿ ಲಿಂಗಾರ್ಪಿತವೆಂಬರು.
ಅದು ಲಿಂಗಾರ್ಪಿತವೆ? ಅಲ್ಲಲ್ಲ.
ಅರ್ಪಿತವ ಮಾಡದೆ, ಅನರ್ಪಿತವ ಹೊದ್ದದೆ ಅರ್ಪಿಸಬೇಕು.
ಅರ್ಪಿಸುವ ಈ ಭೇದವುಳ್ಳನ್ನಕ್ಕ ಶರಣನೆನಿಸಬಾರದು,
ಕೂಡಲಚೆನ್ನಸಂಗಯ್ಯಾ. ॥ ೫೨೩ ॥

೧೩೭೬

ಪಂಚೇಂದ್ರಿಯಂಗಳು ಲಿಂಗಲಿಕ್ತದಲ್ಲಿಂದ ಪರು(ರಿ?)ವ ಸಂಚವನರಿಯದೆ
ತೋಟದ ಕೋಜೆಯನಾಗಿ ಕರಣಂಗಳ ಮೇಲೆ ಮಣಿಹವಾಗಿ ಬಂದೆನಯ್ಯಾ
ಯೋಗಿ ವಿಯೋಗಿಯಾಗಿ ಕುಂಡಲಿಯನೆ ಬಿಗಿದು ಇಂದ್ರಿಯ ಷಡಂಗವ

ಮಡ(ಡಿ?)ದಲ್ಲಿ ಇಂದ್ರಿಯನಿಗ್ರಹವಂ ಮಾಡಿ
ಮಂತ್ರ ಮಂತ್ರ ಮಥನದ ಹೋಮದ ಹೊಗೆಯ ತೆಗೆದು
ಚಂದ್ರಸೂರ್ಯರನಾಣೆಯಿಟ್ಟಂತೆ ಒಂದೆ ಠಾವಿನಲ್ಲಿ ನಿಲಿಸಿದೆ ರುದ್ರಪದದಲ್ಲಿ-
ಇಂತು ಕ್ರೀಯಳಿದು ನಿಃಕ್ರಿಯದಲ್ಲಿ ನಿಂದ ಕೂಡಲಚೆನ್ನಸಂಗಯ್ಯನು
ಎನ್ನ ಪ್ರಾಣನಾಥನೆಂದರಿದು ಎನ್ನ ಕಾಯವ ಬಾಧಿಪುದಂ ಬಿಟ್ಟು
ನಿಜದಲ್ಲಿ ನಿಂದೆನು. ॥ ೫೨೪ ॥

೧೩೭೭

ಪಕ್ಕವಿಲ್ಲದ ಹಕ್ಕಿ ಮಿಕ್ಕು ಮೀರಿ ಹಾರಿಯಾಡುತ್ತಿರಲು,
ಹಿಡಿದವರ ಹಿಡಿಯನೊಡೆದು, ಹರಿಯ ಹೃದಯವನೊಡೆದು,
ಬ್ರಹ್ಮನ ಬ್ರಹ್ಮಾಂಡವನೊಡೆದು, ರುದ್ರನ ರೌದ್ರವ ಭಸ್ಮವ ಮಾಡಿ,
ದ್ವೈತಾದ್ವೈತವೆಂಬ ಮೋಹಕೊಂಡು, ಘನಕ್ಕೆ ಘನವೆಂಬ ಘುಟಿಕೆಯನೆ ನುಂಗಿ,
ಇದ್ದುದೆಲ್ಲವಂ ನಿರ್ಲೋಪವಂ ಮಾಡಿ
ಮಿಕ್ಕಿನ ಘನವ ಹೇಳಲೊಲ್ಲದೆ ಇದಕ್ಕಿನ್ನಾರೆಂದಡೆ:
ಕೂಡಲಚೆನ್ನಸಂಗಯ್ಯನ ಶರಣರಲ್ಲದೆ
ಮತ್ತಾರು ಮತ್ತಾರು ಇಲ್ಲವೆಂದು ಘೂ ಘೂ ಘೂಕೆಂದಿತ್ತು! ॥ ೫೨೫ ॥

೧೩೭೮

ಪಟವಾಕಾಶವನಡರಿತ್ತೆಂದಡೆ,
ಪಟಸೂತ್ರದ ಸಂಚು ಕೆಳಗಿಪ್ಪುದು ನೋಡಾ!
ವ್ಯೋಮದಲ್ಲಿ ಚರಿಸುವ ಸೋಮಸೂರ್ಯರೆಂದಡೆ
ಹೇಮಗಿರಿಯ ಸಂಚ ತಪ್ಪದು ನೋಡಾ!
ಭೂಮಿಯನೊಲ್ಲದೆ ಗಗನಕ್ಕೆ ಹಾರಿದವಂಗೆ,
ಆ ವ್ಯೋಮದಲ್ಲಿ ನಿಲುವುದಕ್ಕೆ ಒಂದೆಡೆಯುಂಟೆ?
ನಮ್ಮ ಕೂಡಲಚೆನ್ನಸಂಗನ ಶರಣರೊಳಗಿರ್ದು
ಸೀಮೆಯ ಮೀರಿದ ನಿಸ್ಸೀಮನು ಸಿದ್ಧರಾಮಯ್ಯನೆಂಬ ಮಾತು
ಅಂತಿರಲಯ್ಯಾ ಪ್ರಭುವೆ. ॥ ೫೨೬ ॥

೧೩೭೯

ಪತ್ರದಲ್ಲಿ ಪದಸ್ಥರಿಬ್ಬರು ಕಾಯ್ದುಕೊಂಡಿಪರು
ಪದ್ಮ ಬೆಂದು ಪತ್ರ ಉಳಿಯಿತ್ತು.
ಆ ಪತ್ರದ ಭೇದವ ಕೂಡಲಚೆನ್ನಸಂಗಾ
ನಿಮ್ಮ ಶರಣ ಬಲ್ಲ. ॥ ೫೨೭ ॥

೧೩೮೦

ಪದಾರ್ಥ ಪ್ರಸಾದವಾಗದು, ಇದೆಂತೊ?
ಪ್ರಸಾದ ಪದಾರ್ಥವಾಗದು ಇದೆಂತೊ?
ಪ್ರಸಾದ ಪದಾರ್ಥವಾಗದ ಪರಿಯು
ಪದಾರ್ಥ ಪ್ರಸಾದವಾಗದ ಪರಿಯು–
ಇಂತೀ ಉಭಯದ ವಿವರವ,
ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣನನೆ ಕೇಳಬೇಕು. ॥ ೫೨೮ ॥

೧೩೮೧

ಪರಂಜ್ಯೋತಿಯಪ್ಪ ಮಹಾಲಿಂಗವ ಮರೆದು
ಜಡತನುವಾನೆಂಬ ಆಣವವೈರಿಯ ಗೆಲುವಡೆ
ಚಿತ್‌ಸ್ವರೂಪಿ ಶ್ರೀಜಂಗಮಪಾದವನೊಡನೆ ಪಿಡಿವುದಯ್ಯಾ.
ಚಿತ್‌ಕೈಲಾಸವನೈದುವಡೆ ಜಂಗಮಪಾದವೆ ಮಹಾದ್ವಾರವಾಗಿಪ್ಪುದಯ್ಯಾ.
ಆ ಜಂಗಮಪಾದವೆ ಭವಜಡಧಿಗೆ ಹಡಗವಾಗಿಪ್ಪುದಯ್ಯಾ.
'ಆರಾತಿಂ ತರೇಮ ಶಿವಲೋಕಸ್ಯದ್ವಾರಂ....' ಎಂದುದಾಗಿ
ಕೂಡಲಚೆನ್ನಸಂಗಮದೇವಾ
ಇಂತಪ್ಪ ಪಾದವಿಡಿದು ಪವಿತ್ರರಾದ ಸದ್ಭಕ್ತರ ಸಂಗವನೆನಗೆ ಕರುಣಿಸು.॥ ೫೨೯ ॥

೧೩೮೨

ಪರಂಜ್ಯೋತಿವಸ್ತು ಉಪದೇಶವ ಕೊಟ್ಟು ಗುರುವಾದ
ಕರಸ್ಥಲಕ್ಕೆ ಬಂದು ಲಿಂಗವಾದ,
ಹಸರವಾದ ಪ್ರಪಂಚವನಳಿಸಿ ದಾಸೋಹವ ಮಾಡಿಸಿಕೊಂಡು ಜಂಗಮವಾದ.
ಆ ಗುರುಲಿಂಗಜಂಗಮ ಒಂದೆಯಲ್ಲದೆ ಭಿನ್ನವಿಲ್ಲ.
ಮೂರಕ್ಕೆ ಮೂರನಿತ್ತು, ಮೂರನೊಂದ ಮಾಡಬಲ್ಲಡೆ
ಆ ಭಕ್ತನಚ್ಚಪ್ರಸಾದಿ ಕಾಣಾ ಕೂಡಲಚೆನ್ನಸಂಗಮದೇವಾ. ॥ ೫೩೦ ॥

೧೩೮೩

ಪರತರಶಿವಲಿಂಗವೆ ಗುರುಲಿಂಗಜಂಗಮವಾಗಿ
ಧರೆಯ ನರರನುದ್ಧರಿಸುತಿಪ್ಪುದು ಕಾಣಿರೊ,
ಅದೆಂತೆಂದಡೆ: ಅಜ್ಞಾನವೆಂಬ ಕತ್ತಲೆಯ ಕಳೆವಡೆ
ಗುರುಲಿಂಗ ಕಾರಣವಾಗಿಪ್ಪುದು ಕಾಣಿರೊ.
ಒಳಹೊರಗಿನ ನೋಟಮಾಟವ ತಿಳಿವಿನ ಬೆಳಗಕ್ಕೆಲ್ಲ

ಶಿವಲಿಂಗವೆ ಕಾರಣವಾಗಿಪ್ಪುದು ಕಾಣಿರೊ.
'ಜ್ಯೋತಿಷ್ಮದ್ಭ್ರಾಜಮಾನಂ ಮಹಸ್ವತ್' ಎಂದು
ಕೂಡಲಚೆನ್ನಸಂಗಮದೇವನ ವಚನವಿಪ್ಪುದಾಗಿ
ಗುರುಲಿಂಗಜಂಗಮದ ಪಾದೋದಕವೆಂಬಮೃತವ ಸೇವಿಸಿ
ನಮ್ಮ ಶರಣರು ಜರಾಮರಣರಹಿತರೆನಿಸಿ ನಿತ್ಯಮುಕ್ತರಾದರು. ॥ ೩೩೧ ॥

೧೩೮೪

ಪರಧನ ಪರಸತಿ ಪರವಾರ್ತೆಯ ತೊರೆಯದನ್ನಕ್ಕ
ಎಂತು ಮಾಹೇಶ್ವರನಪ್ಪನಯ್ಯಾ?
ಲಿಂಗಪೂಜೆಯಲ್ಲಿ ಲೀಯವಾಗಿ ಅಂಗಗುಣವಿರೋಧಿಯಾಗದನ್ನಕ್ಕ
ಎಂತು ಮಾಹೇಶ್ವರನಪ್ಪನಯ್ಯಾ?
ಗುರುಪ್ರಸಾದದಲ್ಲಿ ನಿಹಿತಾವಧಾನಿಯಾಗದನ್ನಕ್ಕ
ಎಂತು ಮಾಹೇಶ್ವರನಪ್ಪನಯ್ಯಾ?
ಕೂಡಲಚೆನ್ನಸಂಗಯ್ಯನಲ್ಲಿ,
ಮಾಹೇಶ್ವರನೆನಿಸಿಕೊಂಬುದು ಸಾಮಾನ್ಯವೆ ಅಯ್ಯಾ? ॥ ೩೩೨ ॥

೧೩೮೫

ಪರಬೊಮ್ಮವೆ ಶರಣನ ಶಿರದರಮನೆಯಿಂದ ಕರದರಮನೆಗೆ
ಗುರುಕೃಪೆಯಿಂದ ಲಿಂಗಮೂರ್ತಿಯಾಗಿ ಬಿಜಯಂಗೈದಿರ್ಪುದು ಕಂಡಾ!
ಅದು ಕಾರಣ ಶರಣಂಗೆಯೂ ಲಿಂಗಕ್ಕೆಯೂ
ಭೇದಾಭೇದ ಸಂಬಂಧವಿರ್ಪುದು ಕಂಡಾ!
ಈ ಗೊತ್ತನರಿಯದೆ ಯುಕ್ತಿಗೆಟ್ಟ ಮನುಜರು,
ಲಿಂಗವು ಕೈಲಾಸದ ಶಿವನ ಕುರುಹಾದುದರಿಂದ ಪೂಜ್ಯವೆಂಬರು;
ಶರಣನು ಮನುಜನಾದುದರಿಂದ ಅವನು ಪೂಜಕನೆಂಬರು.
ಇಂತೀ ಕೇವಲ ಭೇದಸಂಬಂಧ ಕಲ್ಪಿಸುವ ಭವಭಾರಿಗಳು
ಶಿವಾದ್ವೈತಕ್ಕೆ ದೂರವಾಗಿಪ್ಪರು ಕಂಡಾ!
ಅರಿಯರುವಿನ ನರಜೀವಿಗಳು ಶರಣರ ಸಾಮರಸ್ಯಕ್ಕೆ ಹೊರಗಾಗಿರ್ಪರು ಕಂಡಾ,
ಕೂಡಲಚೆನ್ನಸಂಗಮದೇವಾ! ॥ ೩೩೩ ॥

೧೩೮೬

ಪರಮಾರಾಧ್ಯರ ಭಾವ ಅಂತಿರ್ದಡೆ ಆಗಬಹುದು:
ನುಡಿದ ತೆರದಿ ನೋಡುವ ಭಕ್ತರ ಮನಕ್ಕೆ ಸಂಶಯ;
ನೋಡುವ ರಾಜಕುಮಾರಿಗೆ ವಿಪರೀತ ಉಪದ್ರವ.

ಇದು ಕಾರಣ– ಗುರು–ಶಿಷ್ಯರಲ್ಲಿರ್ಪುದೆ ಲೇಸು
ಕೂಡಲಚೆನ್ನಸಂಗಮದೇವಾ. ॥ ೫೩೪ ॥

೧೩೮೭

ಪರಮೂತ್ರದ ಕುಳಿಯುನಗುಳುವಂಗೆ
ಚಿಲುಮೆಯಗ್ಗ ಣಿಯೆಂಬ ಕಟ್ಟಳೆ ಏತಕಯ್ಯಾ?
ಪರನಾರಿಯರ ಅಧರಪಾನವ ಕೊಂಬವಂಗೆ
ಸ್ವಯಪಾಕದ ಕಟ್ಟಳೆ ಏತಕಯ್ಯಾ?
ದುಷ್ಟಸ್ತ್ರೀಯರನಾಳಿಪ್ಪಂಗೆ ಗುರುವಿನ ಪ್ರಸಾದವಿಲ್ಲ,
ಬೆಕ್ಕ ಸಲಹಿಪ್ಪಂಗೆ ಲಿಂಗದ ಪ್ರಸಾದವಿಲ್ಲ,–
ಇಂತೀ ತ್ರಿವಿಧವ ಸಲಹಿದ ದ್ರೋಹಿಗೆ ನರಕ ತಪ್ಪದು ಕಾಣಾ
ಕೂಡಲಚೆನ್ನಸಂಗಮದೇವಾ. ॥ ೫೩೫ ॥

೧೩೮೮

ಪರಶಿವನು ಗುರುಜಂಗಮರೂಪಿಂದ ನರರನುದ್ಧರಿಸಲೆಂದು
ಸಜಾತೀಯವಾದ ಮನುಜಾಕಾರವ ಧರಿಸಿ ಧರೆಗವತರಿಸಿರ್ಪನಯ್ಯಾ.
ಇದನರಿಯದ ಮಂದಮತಿಗಳು ಆ ಗುರುಜಂಗಮವನಾರಾಧಿಸಿ ಭಕ್ತರಾಗದೆ,
ವಿಜಾತೀಯವಾದ ಕಲ್ಲು ಕಟ್ಟಿಗೆ ಮಣ್ಣು ಮುಂತಾಗಿ
ಹೊರಗಿನ ಜಡಾಕಾರವೆ ದೈವವೆಂದಾರಾಧಿಸಿ,
ಮೊರಡಿಯಿಂದೊಸರುವ ನೀರ ತೀರ್ಥವೆಂದು ಸೇವಿಸಿ
ಭವಭಾರಿಗಳಾಗುತ್ತಿಪ್ಪರಯ್ಯಾ
'ತೀರ್ಥೇ ದಾನೇ ಜಪೇ ಯಜ್ಞೇ ಕಾಷ್ಠೇ ಪಾಷಾಣಕೇ ಸದಾ।
ಶಿವಂ ಪಶ್ಯತಿ ಮೂಢಾತ್ಮಾ ಶಿವೇ ದೇಹೇ ಪ್ರತಿಷ್ಠಿತೇ॥ ಎಂದುದಾಗಿ
ನಮ್ಮ ಕೂಡಲಚೆನ್ನಸಂಗಯ್ಯನ ವಚನವನಾರಯ್ಯದೆ ಕೆಡುತಿಪ್ಪರಯ್ಯಾ. ॥ ೫೩೬ ॥

೧೩೮೯

ಪರಶಿವನು ಪರಮಪುರುಷನಾಗಿಪ್ಪನು ನೋಡಾ.
ಈ ಪುರುಷಪದವು ಶಿವಂಗಲ್ಲದೆ ಮಿಕ್ಕ ದೈವಂಗಳಿಗಿಲ್ಲ ನೋಡಾ.
ಆ ಪರಶಿವನು ಗುರುಲಿಂಗಜಂಗಮವೆಂಬ
ಮೂರು ಪಾದಂಗಳಿಂದುತ್ಕೃಷ್ಟವಾಗಿ ಉದಯಿಸಿ
ಜಗದುದ್ಧಾರಂಗೆಯ್ಯುತಿಪ್ಪನು ನೋಡಾ,
'ತ್ರಿಪಾದೂರ್ಧ್ವಂ ಉದೆತ್ಪುರುಷಃ' ಎಂದುದಾಗಿ

ಇಂತಪ್ಪ ಗುರುಲಿಂಗಜಂಗಮದ ಪಾದೋದಕ ಪ್ರಸಾದವ ಪಡೆಯಲರಿಯದೆ
ಇಳೆಯ ಮೇಲಿನ ಹಲವು ಜಲಂಗಳಿಗೆ ಹರಿದು,
ಬಳಲಿ ಬಾಯಾರಿ ನರರೆಲ್ಲರು ತೊಳಲುತಿಪ್ಪರು ನೋಡಾ.
ಕೂಡಲಚೆನ್ನಸಂಗಮದೇವಾ,
ಇಂತಿದರ ಭೇದವನರಿದು ನಮ್ಮ ಶರಣರು
ತ್ರಿವಿಧ ಪಾದೋದಕ ಪ್ರಸಾದವ ಸವಿದು ಚಿರಸುಖಿಯಾಗಿಪ್ಪರು. || ೫೩೭ ||

೧೩೯೦

ಪರಿಪೂರ್ಣವನೈದಿಪ್ಪನಾಗಿ ಜ್ಞಾನಿಯಲ್ಲ ಅಜ್ಞಾನಿಯಲ್ಲ,
ಶೂನ್ಯನಲ್ಲ, ನಿಶ್ಶೂನ್ಯನಲ್ಲ,
ಉಭಯಾಚಾರ ತಾನೆಯಾಗಿ ಕೊಳುಕೊಡೆಯಿಲ್ಲ.
ಸಾಕಾರದ ಸಂಬಂಧವನರಿಯ, ನಿತ್ಯಮುಕ್ತ ನಿರವಯ,
ಉಭಯಾತ್ಮಕ ತಾನೆ ಕೂಡಲಚೆನ್ನಸಂಗಯ್ಯನೆಂದೆನ್ನ
ಸುಯಿದಾನಿಯಯ್ಯಾ ಬಸವಣ್ಣನು. || ೫೩೮ ||

೧೩೯೧

ಪರಿಯಾಣ ಅಂಗ ಲಿಂಗಕ್ಕೆ ಭಾಜನವೆಂಬರು, ಅಂಗ ಲಿಂಗಕ್ಕೆ ಭಾಜವನಲ್ಲ.
ಕಾಯಗುಣಂಗಳ ಕಳೆದು ಮಾಯಾತಮಂಧವ ಹಿಂಗಿಸಿ
ಮನವೆಂಬ ಘನಪರಿಯಾಣವ ಬೆಳಗಿ, ಷಡಾಧಾರಚಕ್ರವೆಂಬ ಅಡ್ಡಣಿಗೆಯನಿಟ್ಟು
ಸಕಲ ಇಂದ್ರಿಯಗಳೆಂಬ ಕೆಲವಟ್ಟಲಂಗಳನಳವಡಿಸಿ
ಸುಜ್ಞಾನಪ್ರಕಾಶವೆಂಬ ದೀಪಸ್ತಂಭಮಂ ಬೆಳಗಿ
ಸಕಲಕರಣಂಗಳೆಂಬ ಮೇಲುಸಾಧನಂಗಳಂ ಹಿಡಿದು
ಸದ್ಭಕ್ತ್ಯಾನಂದವೆಂಬ ಬೋನಮಂ ಬಡಿಸಿ
ವಿನಯ ವಿವೇಕವೆಂಬ ಅಭಿಗಾರಮಂ ಗಡಣಿಸಿ
ಪ್ರಸನ್ನಪರಿಣಾಮದ ಮಹಾರುಚಿಯೆಂಬ ಚಿಲುಪಾಲಘಟ್ಟಿಯಂ ತಂದಿಳುಹಿ,
ಸುಚಿತ್ತ ಸುಯಿಧಾನದಿಂದ ನಿಮ್ಮ ಹಸ್ತದ ಅವಧಾನವೆ ಅನುವಾಗಿ
ಬಸವಣ್ಣನೆ ಬೋನ, ನಾನೆ ಮೇಲೋಗರವಾಗಿ
ನಿಮ್ಮ ಪರಿಯಾಣಕ್ಕೆ ವೇದಿಸಿದೆನು.
ಆರೋಗಣೆಯ ಮಾಡಯ್ಯಾ ಕೂಡಲಚೆನ್ನಸಂಗಮದೇವಾ. || ೫೩೯ ||

೧೩೯೨

ಪರುಷದ ಅರಸಿಂಗೆ ಕಬ್ಬುನದ ಪರಿವಾರದಂತೆ,
ಮುನಿದೊಮ್ಮೆ ಮುಟ್ಟಿದರೂ ಸುವರ್ಣವಾಗುವುದು ತಪ್ಪದು,
ಸ್ನೇಹದಿಂದ ಮುಟ್ಟಿದರೂ ಸುವರ್ಣವಾಗುವುದು ತಪ್ಪದು.
ಪರುಷ ಲೋಹದ ಸಂಗದಂತೆ
ಕೂಡಲಚೆನ್ನಸಂಗನ ಶರಣರ ಸನ್ನಿಧಿ. ॥ ೫೪೦ ॥

೧೩೯೩

ಪರುಷವ ಬಂಧನಕ್ಕೆ ತಂದಿರಿಸಿಕೊಂಡಾತ ನೀನಯ್ಯಾ,
ಅತೀತನ ಬಂಧನಕ್ಕೆ ತಂದಿರಿಸಿಕೊಂಡಾತ ನೀನಯ್ಯಾ,
ಆನಂದನ ಬಂಧನಕ್ಕೆ ತಂದಿರಿಸಿಕೊಂಡಾತ ನೀನಯ್ಯಾ.
ಬ್ರಹ್ಮನಿದ್ದಲ್ಲಿ ಪರುಷವನಿರಿಸಿದೆ,
ವಿಷ್ಣುವಿದ್ದಲ್ಲಿ ಅತೀತನನಿರಿಸಿದೆ,
ರುದ್ರನಿದ್ದಲ್ಲಿ ಆನಂದನನಿರಿಸಿದೆ,
ಈ ತ್ರಿವಿಧಧ್ಯಾನವರ್ಣನೆ ನಷ್ಟವಾದ ಕಾರಣ
ಕೂಡಲಚೆನ್ನಸಂಗಯ್ಯನಲ್ಲಿ
ಮಡಿವಾಳ ಬಸವಣ್ಣನೆಂಬೆರಡು ಶಬ್ದಪ್ರಸಾದವೆನಗದೆ ಅಳವಟ್ಟಿತ್ತು. ॥ ೫೪೧ ॥

೧೩೯೪

ಪಶ್ಚಿಮಪದ್ಮಾಸನದಲ್ಲಿ ಕುಳ್ಳಿರ್ದು, ನಿಟ್ಟೆಲುವ ನೆಟ್ಟನೆ ಮಾಡಿ,
ಅಧೋಮುಖ ಕಮಲವ ಬಲಿದು, ಊರ್ಧ್ವಮುಖವ ಮಾಡಿ,
ಇಂದ್ರಿಯಂಗಳನು ಏಕಮುಖವ ಮಾಡಿ,
ಚಂದ್ರ ಸೂರ್ಯರನೊಂದೆ ಠಾವಿನಲ್ಲಿರಿಸಿ
ಅತ್ತಿತ್ತ ಮಿಸುಕದೆ ನಡುಗೀರ ಜ್ಯೋತಿಯ ದೃಢವಾಗಿ ಹಿಡಿದು,
ಪರಮಾನಂದದ ಮಠದೊಳಗೆ, ಪ್ರಾಣಲಿಂಗಾರ್ಚನೆಯ ಮಾಡುವ
ಮಹಾಮಹಿಮರ ತೋರಿ ಬದುಕಿಸಾ, ಕೂಡಲಚೆನ್ನಸಂಗಯ್ಯಾ. ॥ ೫೪೨ ॥

೧೩೯೫

ಪಾದಪೂಜೆಯ ಮಾಡಿ, ಅಂಗುಷ್ಠವೆರಡು ಅಂಗುಲವೆಂಟು
ಉಭಯಹಸ್ತದಲ್ಲಿ ಮಾಡಿಕೊಂಬುದೆ ಶಿಕ್ಷಾಪಾದೋದಕ.
ಲಿಂಗಧಾರೀ ಮಹಾಯೋಗೀ ಚರಪಾದೋದಕಂ ವಿನಾ।
ದಿನೇನ ದಶಜನ್ಮಾನಿ ಮಾಸೇನಶತ ಜನ್ಮಸು॥

ವರ್ಷೇ ಸಹಸ್ರಜನ್ಮಾನಿ ವರ್ಷಾರ್ಧೇ ಘೂಕ ವಾಯಸೌ|
ದ್ವಿವರ್ಷೇ ಸೌಕರೇ ಗರ್ಭೇ ಜಾಯತೇ ನಾತ್ರ ಸಂಶಯಃ|| ಎಂದುದಾಗಿ
ಆ ಶಿಕ್ಷಾಪಾದೋದಕವನೆ ಆ ವಿಭೂತಿಯಲ್ಲಿ ಸಮ್ಮಿಶ್ರವ ಮಾಡಿ
ಲಲಾಟ ಮೊದಲಾದ ನಾಲ್ವತ್ತೆಂಟು ಸ್ಥಾನಂಗಳಲ್ಲಿ ಧಾರಣವ ಮಾಡುವುದು
ಇದು ವೀರಶೈವರಿಗೆ ಸಲ್ಲುವ ನಡತೆ.
ಶುದ್ಧಶೈವರಿಗೆ ಗಿಂಡಿಯಲ್ಲಿ ತುಂಬುವ ನಡತೆ.
ವಿಶೇಷವೀರಶೈವರು ಗಿಂಡಿಯ ಮಾಡಲಾಗದು,
ಅದೇನು ಕಾರಣವೆಂದಡೆ: ಅವರಿಗೆ ತ್ರಿವಿಧ ಪಾದೋದಕವು
ನಿತ್ಯದ ಸಂಬಂಧವಾಗುವುದೆಂದು.
[ಇದ]ನರಿದು ಆಚರಿಸುವಾತನೆ ನಿತ್ಯಮುಕ್ತನಯ್ಯಾ
ಕೂಡಲಚೆನ್ನಸಂಗಮದೇವಾ. || ೫೪೩ ||

೧೩೯೬

ಪಾದೋದಕ ಪಂಚೇಂದ್ರಿಯಾರ್ಚನೆ, ಲಿಂಗೋದಕ ಅಂಗಾರ್ಚನೆ,
ಪ್ರಸಾದೋದಕ ಘ್ರಾಣಾರ್ಚನೆ- ಇಂತೀ ತ್ರಿವಿಧೋದಕವ
ಈ ಕ್ರಮವರಿದಲ್ಲದೆ ಮುಟ್ಟಲಾಗದು
ಕೂಡಲಚೆನ್ನಸಂಗಮದೇವಾ. || ೫೪೪ ||

೧೩೯೭

ಪಾಲುಂಡ ಸವಿಯ ಮೇಲು ಪಂಕ್ತಿಯ ಹೇಳಬಹುದಲ್ಲದೆ
ಸುಖದ ಸೋಂಕಿನ ಸ್ವಾನುಭಾವವ ಹೇಳಬಾರದು ಕೇಳಬಾರದು.
ಇಂಬಿನ ಸೋಂಕು ಸಂಬಂಧವರಿದ ಬಳಿಕ ಉಪಚಾರವುಂಟೆ?
ಕೂಡಲಚೆನ್ನಸಂಗಯ್ಯನರುಹಿದಡರಿವೆನಲ್ಲದೆ
ಎನಗೆ ಬೇರೆ ಸ್ವತಂತ್ರಜ್ಞಾನವಿಲ್ಲ. || ೫೪೫ ||

೧೩೯೮

ಪುಣ್ಯತೀರ್ಥಕ್ಷೇತ್ರಂಗಳಲ್ಲಿ ತಂದ ಶಿಲೆಯ ಪರೀಕ್ಷಿಸಿ ಸಂಸ್ಕಾರಂಗೈಯಲು
ಅದು ಲಿಂಗವಾಗಿಪ್ಪುದಯ್ಯಾ.
ಸದ್ವಂಶೀಯರಾದ ವಟುಗಳ ಪರೀಕ್ಷಿಸಿ ಸಂಸ್ಕಾರಂಗೈಯಲು
ಗುರುಜಂಗಮವಾಗಿರ್ಪರಯ್ಯಾ,
ಇಂತಿಮುದನಾರಯ್ಯದೆ ಸಂಸ್ಕಾರವಿರಹಿತ ಗುರುಲಿಂಗಜಂಗಮವ ಪೂಜಿಸುವ
ಅರೆಮರುಳರನೆನಗೊಮ್ಮೆ ತೋರದಿರಯ್ಯಾ-
ಕೂಡಲಚೆನ್ನಸಂಗಮದೇವಾ. || ೫೪೬ ||

೧೪೯೯

ಪುಣ್ಯ ಪಾಪವೆಂಬ ಉಭಯಕರ್ಮವ ಇವನಾರಯ್ಯ ಬಲ್ಲವರು?
ಇವನಾರಯ್ಯ ಉಂಬವರು?
ಕಾಯ ತಾನುಂಬಡೆ ಕಾಯ ಮಣ್ಣು,
ಜೀವ ತಾನುಂಬಡೆ ಜೀವ ಬಯಲು.
ಈ ಉಭಯದ ಭೇದವ
ಕೂಡಲಚೆನ್ನಸಂಗಯ್ಯಾ ನಿಮ್ಮ ಶರಣನೆ ಬಲ್ಲ. || ೫೪೭ ||

೧೫೦೦

ಪೂರ್ವಜನ್ಮವ ನಿವೃತ್ತಿಯ ಮಾಡಿ ಶ್ರೀಗುರುಕರಕಮಲದಲ್ಲಿ ಜನಿಸಿದ ಭಕ್ತನ ಪಂಚಭೌತಿಕದ ತನುವಿನಂತೆ ವರ್ಣಿಸಿ ನುಡಿಯಬಹುದೆ?
ಉತ್ತಮಾಧಮ ತೃಣ ಮೊದಲಾದುವೆಲ್ಲವು
ಜ್ಯೋತಿಯ ಮುಟ್ಟಿ ಜ್ಯೋತಿಯಪ್ಪವು ಕೇಳಿರೆ.
ಜ್ಯೋತಿರ್ಮಯಲಿಂಗವ ಮುಟ್ಟಿದ ತನು ಕೇವಲ ಜ್ಯೋತಿರ್ಮಯಲಿಂಗ.
ಆಧಾರ, ಸ್ವಾಧಿಷ್ಠಾನ, ಮಣಿಪೂರಕ ಅನಾಹತ, ವಿಶುದ್ಧಿ, ಆಜ್ಞೇಯ
ಬ್ರಹ್ಮರಂಧ್ರ ದಳ ಕಳೆ ವರ್ಣ ಅಧಿದೇವತೆ ಎಂದು,
ಅಲ್ಲಿ ಶುಕ್ಲ ಶೋಣಿತಾತ್ಮಕನಂತೆ ವರ್ಣಿಸಿ ನುಡಿಯಬಹುದೆ, ಶಿವಲಿಂಗತನುವ?
ಷಡಾಧಾರಚಕ್ರವನು ಎನ್ನ ಸರ್ವಾಂಗದಲ್ಲಿ ಪ್ರತಿಷ್ಠೆಯ ಮಾಡಿ,
ಅಂತರ್ಬಾಹ್ಯದಲ್ಲಿ ಭರಿತನಾಗಿ ಸರ್ವಾಂಗವ ಲಿಂಗವ ಮಾಡಿದ,
ಕೂಡಲಚೆನ್ನಸಂಗಾ ಶ್ರೀಗುರುಲಿಂಗ. || ೫೪೮ ||

೧೫೦೧

ಪೂರ್ವಜಾತವಳಿದು ಪುನರ್ಜಾತರೆನಿಸಿ, ಅಂಗದ ಮೇಲೆ ಲಿಂಗವ ಧರಿಸಿ ಲಿಂಗವಂತರೆನಿಸಿದ ಮೇಲೆ;
ಮತ್ತೆ ಜಾತಿಸೂತಕ ಜನನಸೂತಕ ಪ್ರೇತಸೂತಕ ರಜಸ್ಸೂತಕ,
ಎಂಜಲಸೂತಕ ಬಿಡದನ್ನಕ್ಕರ ಇವರನೆಂತು ಭಕ್ತರೆಂಬೆನಯ್ಯಾ?
ಇವರನೆಂತು ಯುಕ್ತರೆಂಬೆನಯ್ಯಾ? ಇವರನೆಂತು ಮುಕ್ತರೆಂಬೆನಯ್ಯಾ?
ಶ್ರೀಗುರುಸ್ವಾಮಿ ಶಿಷ್ಯನ ಪೂರ್ವಾಶ್ರಯಮಂ ಕಳೆದು,
ಹಸ್ತಮಸ್ತಕಸಂಯೋಗವಂ ಮಾಡಿ, ಕರ್ಣಮಂತ್ರಮಂ ತುಂಬಿ,
ಕರಸ್ಥಲಕೆ ಶಿವಲಿಂಗಮಂ ಬಿಜಯಂಗೈಸಿ ಕೊಟ್ಟ ಬಳಿಕ
ಕಾಡ್ಗಿಚ್ಚಿನ ಕೈಯಲ್ಲಿ ಕರಡವ ಕೊಯ್ಸಿದಂತಿರಬೇಕು ಭಕ್ತನು!

ಹಿಂದೆ ಮೆದೆಯಿಲ್ಲ ಮುಂದೆ ನಿಲವಿಲ್ಲ– ಇದು ಕಾರಣ
ಕೂಡಲಚೆನ್ನಸಂಗಯ್ಯಾ, ನಿಮ್ಮ ಸದ್ಭಕ್ತರು ಸೂತಕವ ಮಾಡಲಿಲ್ಲ. ॥ ೫೪೯ ॥

೧೪೦೨

ಪೂರ್ವದ್ವಾರವ ಬಿಟ್ಟು ಪಶ್ಚಿಮದ್ವಾರದಲ್ಲಿ ಪ್ರಾಣನಿರವ ಮಾಡಿ,
ನಾಭಿಮುಖದಗ್ನಿಯನೂರ್ಧ್ವಮುಖಕ್ಕೊಯ್ದು,
ಶಂಕಿನಿಯನೋಟದಲ್ಲಿ ನಿಲಯವಾದಾತ ಶರಣ.
ಆತನೇ ತೂರ್ಯಾತೀತ ಉನ್ಮನಿಯವಸ್ಥೆಯಾದಾತ
ಆತನೇ ಜನನ–ಮರಣವರ್ಜಿತನಪ್ಪ, ಆತನೆ ನಿರ್ದೇಹಿಯಪ್ಪ,
ಆತನೇ ಮಹಾಪುರುಷನು.
ಇದನಲ್ಲಾ ಎಂಬ ಗುರುದ್ರೋಹಿಯನೇನೆಂಬೆ,
ಇದನಲ್ಲಾ ಎಂಬ ಲಿಂಗದ್ರೋಹಿಯನೇನೆಂಬೆ,
ಅಯ್ಯಾ ಕೂಡಲಚೆನ್ನಸಂಗಮದೇವಾ? ॥ ೫೫೦ ॥

೧೪೦೩

ಪೃಥ್ವ್ಯಾದಿಪಂಚತತ್ವಕ್ಕೆ ಇಪ್ಪತ್ತೈದು ಗುಣಂಗಳು ಸಹಿತ
ಮೂವತ್ತನೊಳಗು ಮಾಡದೆ
ಪ್ರಾಣಾದಿ ಪಂಚವಾಯುವಂ ಸತ್ಪ್ರಾಣವಂ ಮಾಡಿ,
ನಾಗ ಕೂರ್ಮ ಕೃಕರ ದೇವದತ್ತ ಧನಂಜಯನೆಂಬ
ಈ ಐವರನು ಭೂತಗ್ರಾಮಂಗಳಿಂದರಿದು,
ಶ್ರೋತ್ರದಿಂ ಪಂಚಜ್ಞಾನೇಂದ್ರಿಯಂಗಳ ವ್ಯವಹಾರವನರಿತು ಮುಂದರಿವುದು,
ನಾದ ಅನಾದ ಸುನಾದ ಮಹಾನಾದ
ಅನಾಹತನಾದವೆಂಬ ನಾದಪಂಚಕದಿಂದ ನಿರತನಾಗಿ,
ಗರ್ಭ ಸಂಸಾರ ದೇಹ ದಾರಿದ್ರ ದುಮ್ಮಲವೆಂಬ
ಪಂಚ ಉಪಾಯಂಗಳ ಹೊದ್ದಲೀಯದೆ,
ದೇಹ ಶಿರ ಮುಖ ಪಾಣಿ ಚರಣವೆಂಬ ಪಂಚಾಂಗ ಹೀನನಾಗದೆ
ಅವಯವ ಸಂಪೂರ್ಣನಾಗಿ,
ಇಂತೀ ಪಂಚತತ್ವದ ಗುಣ ಇಪ್ಪತ್ತೈದು,
ಪಂಚಸಂಪಾದನೆ ನಾಲ್ವತ್ತೈದು, ಇದರ ಅನುಭಾವಿ ಬಸವಣ್ಣ,
ಮಹಾನುಭಾವಿ ಪ್ರಭುದೇವರು. ಇವರಿಬ್ಬರ ಸಂಗದಿಂದ ನಾನು
ಸ್ವಯಾನುಭಾವಿಯಾದೆನು ಕಾಣಾ ಕೂಡಲಚೆನ್ನಸಂಗಮದೇವಾ. ॥ ೫೫೧ ॥

೧೪೦೪

ಪೃಥ್ವ್ಯಾದಿ ಪಂಚಭೂತಂಗಳು ಇದಕ್ಕೆ ವಿವರ:
ಅಸ್ಥಿ ಚರ್ಮ ಮಾಂಸ ರೋಮ ಮಜ್ಜೆ ಇವೈದು ಪೃಥ್ವಿಯ ಅಂಶ.
ಶುಕ್ಲ ಶೋಣಿತ ಶ್ಲೇಷ್ಮ ಪಿತ್ತ ರಕ್ತ ಇವೈದು ಅಪ್ಪುವಿನ ಅಂಶ.
ಹಸಿವು ತೃಷೆ ನಿದ್ರೆ ಆಲಸ್ಯ ಸ್ತ್ರೀಸಂಗ ಇವೈದು ಅಗ್ನಿಯ ಅಂಶ.
ಹರಿವುದು ಕುಳ್ಳಿರುವುದು ಏಳುವುದು ಮೈಮುರಿವುದು ನಡೆವುದು
ಈ ಐದು ವಾಯುವಿನ ಅಂಶ.
ಡಂಬು ಪ್ರಕಟ ಪ್ರಪಂಚು ಅಭ್ರಚ್ಛಾಯೆ ಆನಂದ ಇವೈದು ಆಕಾಶದ ಅಂಶ.
ಇಂತೀ ಅಂಗ ಶುದ್ಧಂಗಳ ಬಿಟ್ಟು ಲಿಂಗಾಂಗವ ಮಾಡಬಲ್ಲಡೆ
ಕೂಡಲಚೆನ್ನಸಂಗಯ್ಯನಲ್ಲಿ ಶರಣನೆನಿಸುವನು. || ೫೫೨ ||

೧೪೦೫

ಪೃಥ್ವಿ ಅಪ್ಪು ತೇಜ ವಾಯು, ಆಕಾಶ–
ಇಂತೀ ಪಂಚಭೂತದಿಂದ ಒದಗಿದ ತನುವಿನ ಭೇದವ ನೋಡಿರೆ ಅಯ್ಯಾ.
ಐದರ ವಿಶ್ರಾಂತಿಯಲ್ಲಿಯೆ ತನು ಸವೆದು ಹೋಗುತ್ತಿರಲು
ಮತ್ತೆ ದೇವರ ಕಂಡೆನೆಂದರೆ ತನುವೆಲ್ಲಿಯದೊ?
ಅಕ್ಕಟಕ್ಕಟಾ ಲಿಂಗವೆ!
ಜಡದೇಹಿಗಳೆಲ್ಲಾ ಜಡವನೆ ಪೂಜಿಸಿ ಹತ್ತಿದರಲ್ಲಾ ಕೈಲಾಸದ ಬಟ್ಟೆಯ,
ಹೋ ಹೋ ಅಲ್ಲಿಯೂ ಪ್ರಳಯ ಬಿಡದು!
ನಾ ನನ್ನ ಅಚಲಲಿಂಗವ ಸೋಂಕಿ ಸ್ವಯಾನುಭಾವ ಸಮ್ಯಕ್ಜ್ಞಾನದಿಂದ
ಕೈಲಾಸದ ಬಟ್ಟೆ ಹಿಂದಾಗಿ ನಾ ಬಯಲಾದೆ ಕಾಣಾ
ಕೂಡಲಚೆನ್ನಸಂಗಮದೇವಾ. || ೫೫೩ ||

೧೪೦೬

ಪೃಥ್ವಿ ಅಪ್ಪು ತೇಜ ವಾಯು ಆಕಾಶವೆಂಬ ಪಂಚಭೂತಂಗಳಲ್ಲಿ
ಪಂಚಮುಖಲಿಂಗವ ಪ್ರತಿಷ್ಠೆಯ ಮಾಡಿದನಯ್ಯಾ.
ಮನ ಬುದ್ಧಿ ಚಿತ್ತ ಅಹಂಕಾರವೆಂಬ ಅಂತಃಕರಣ ಚತುಷ್ಟಯದಲ್ಲಿ
ಚತುರ್ಮುಖಲಿಂಗವ ಪ್ರತಿಷ್ಠೆಯ ಮಾಡಿದನಯ್ಯಾ.
ಶ್ರೋತ್ರ ನೇತ್ರ ಘ್ರಾಣ ತ್ವಕ್ಕು ಜಿಹ್ವೆ ವಾಕ್ಕು ಪಾಣಿ ಪಾದ
ಪಾಯು ಗುಹ್ಯಗಳೆಂಬ ದಶೇಂದ್ರಿಯಂಗಳಲ್ಲಿ
ದಶಮುಖಲಿಂಗದ ಪ್ರತಿಷ್ಠೆಯ ಮಾಡಿ

ಅಂತರಂಗ ಬಹಿರಂಗವ ಹತವ ಮಾಡಿದನಯ್ಯಾ
ಕೂಡಲಚೆನ್ನಸಂಗಮದೇವಾ ಎನ್ನ ಶ್ರೀಗುರು ಬಸವಣ್ಣನು. || ೫೫೪ ||

೧೪೦೭

ಪೃಥ್ವಿಗೆ ಹುಟ್ಟಿದ ಪಾಷಾಣ, ಬಿನ್ನಣಿಗೆ ಹುಟ್ಟಿದ ಪ್ರತಿಮೆ,
ಮಂತ್ರಕ್ಕೆ ಹುಟ್ಟಿದ ಮೂರ್ತಿ, ಗುರುವಿಂಗೆ ಹುಟ್ಟಿದ ಲಿಂಗ–
ಇಂತೀ ಚತುರ್ವಿಧದ ಕೈಗೆ ಕೈಗೆ ಬಾಯ್ಗೆ ಬಾಯ್ಗೆ ಬರಲಾಗಿ
ಹೇಸಿ ಲಿಂಗವೆಂದು ಮುಟ್ಟಿ ಪೂಜೆಯ ಮಾಡೆ ಕಾಣಾ
ಕೂಡಲಚೆನ್ನಸಂಗಮದೇವಾ. || ೫೫೫ ||

೧೪೦೮

ಪೃಥ್ವಿ ಭಕ್ತಸ್ಥಲ, ಮುಖ ನಾಸಿಕ, ಅದಕ್ಕೆ ಆಚಾರಲಿಂಗ.
ಅಪ್ಪು ಮಾಹೇಶ್ವರಸ್ಥಲ, ಮುಖ ಜಿಹ್ವೆ, ಅದಕ್ಕೆ ಗುರುಲಿಂಗ.
ತೇಜ ಪ್ರಸಾದಿಸ್ಥಲ, ಮುಖ ನೇತ್ರ, ಅದಕ್ಕೆ ಶಿವಲಿಂಗ.
ವಾಯು ಪ್ರಾಣಲಿಂಗಿಸ್ಥಲ, ಮುಖ ಸ್ಪರ್ಶನ, ಅದಕ್ಕೆ ಜಂಗಮಲಿಂಗ.
ಆಕಾಶ ಶರಣಸ್ಥಲ, ಮುಖ ಶ್ರೋತ್ರ, ಅದಕ್ಕೆ ಪ್ರಸಾದಲಿಂಗ.
ಅತೀತ ಐಕ್ಯಸ್ಥಲ, ಮುಖ ತೃಪ್ತಿ, ಅದಕ್ಕೆ ಮಹಾಲಿಂಗ.
ಇಂತೀ ಷಡುಸ್ಥಲಂಗಳುತ್ಪತ್ಯ ಕೂಡಲಚೆನ್ನಸಂಗಮದೇವಾ. || ೫೫೬ ||

೧೪೦೯

ಪೃಥ್ವಿಯ ಮೇಲಣ ಕಣೆಯ ತಂದು,
ಪೂಜಾವಿಧಾನಕ್ಕೊಳಗಾದ ಅಷ್ಟತನುವಿನ ಕೈಯಲ್ಲಿ ಕೊಟ್ಟು
ಮುಟ್ಟಿ ಪೂಜಿಸವೇಕೆಂಬರು.
ಮೂವರಿಗೆ ಹುಟ್ಟಿದಾತನನೆಂತು ಪೂಜಿಸುವಿರೊ?
ಭೂಮಿಗೆ ಹುಟ್ಟಿ ಶಿಲೆಯಾಯಿತ್ತು.
ಕಲ್ಲುಕುಟ್ಟಿಗ ಮುಟ್ಟಿ ರೂಪಾಯಿತ್ತು.
ಗುರುಮುಟ್ಟಿ ಲಿಂಗವಾಯಿತ್ತು.
ಇದು ಜನ್ಮಿತ್ತೆಂದು ಸಮಾಧಿಯ ಪೊಕ್ಕೆವೆಂಬರು
ಎತ್ತಿಕೊಂಡು ಅಷ್ಟವಿಧಾರ್ಚನೆ ಷೋಡಶೋಪಚಾರವ
ಮಾಡುವುದೆ ವ್ರತವು.
ಕಟ್ಟುವ ಠಾವನು ಮುಟ್ಟುವ ಭೇದವನು
ಕೂಡಲಚೆನ್ನಸಂಗಯ್ಯಾ ನಿಮ್ಮ ಶರಣನೆ ಬಲ್ಲ. || ೫೫೭ ||

೧೪೧೧

ಪೃಥ್ವಿಯಿಂದ ಈಶ್ವರ ಪರಿಯಂತ ಪಂಚವಿಂಶತಿ ತತ್ವಂಗಳುತ್ಪತ್ಯ,
ಈಶ್ವರಾದಿ ಪರಶಿವ ಪರಿಯಂತ ಶಿವತತ್ವದುತ್ಪತ್ಯ.
ದೇವತಾದಿಗೆ ಜಗದಾದಿಗೆ ಪೃಥ್ವಿಯಾದಿಗೆ
ಪಂಚವಿಂಶತಿತತ್ವಂಗಳುತ್ಪತ್ಯಮಂ ಪೇಳ್ವೆ:
ಪಂಚಶತಕೋಟಿ (ವಿಸ್ತೀರ್ಣ) ಭೂಮಂಡಲವಳಯದಲ್ಲಿ
ಮೇರುಮಂದಿರದ ವಿಸ್ತೀರ್ಣ
ಒಂದುಕೋಟಿ ಇಪ್ಪತ್ತಾರುಲಕ್ಷದ ಮೇಲೆ ಎಂಬತ್ತೈದುಸಾವಿರ
ಯೋಜನ ಪ್ರಮಾಣು.
ಆ ಮೇರುಮಂದಿರದ ಮೇಲೆ ಬ್ರಹ್ಮ ವಿಷ್ಣು ರುದ್ರ ಸದಾಶಿವ
ನಂದಿ ಮಹಾಕಾಳ ವೀರಭದ್ರ ಅಷ್ಟಾತೀತಸಹಸ್ರ ಋಷಿಯರು,
ಅಸಂಖ್ಯಾತ ಮಹಾಗಣಂಗಳು, ದ್ವಾದಶಾದಿತ್ಯರು, ನಾರದಯೋಗೀಶ್ವರರು,
ಅಷ್ಟದಿಕ್ಪಾಲಕರು ಏಕಾದಶ ರುದ್ರರು ಮುಖ್ಯವಾಗಿ
ಶಿವಸುಖಸಂತೋಷದಿಂ ರಾಜ್ಯಂಗೆಯ್ವರು.
ಆ ಮೇರುಮಂದಿರದ ಕೆಳಗಣ ಜಂಬೂದ್ವೀಪದ ವಿಸ್ತೀರ್ಣ
ಲಕ್ಷದಮೇಲೆ ಇಪ್ಪತ್ತೈದುಸಾವಿರ ಯೋಜನಪ್ರಮಾಣು.
(ಅಲ್ಲಿಂದ ಮುಂದೆ) ಲವಣಸಮುದ್ರ
ಲಕ್ಷದಮೇಲೆ ಇಪ್ಪತ್ತೈದುಸಾವಿರ ಯೋಜನಪ್ರಮಾಣು.
ಆ ಲವಣಸಮುದ್ರದಿಂದಾಚೆಯಲ್ಲಿ ಭೂಮಿ
ಎರಡುಲಕ್ಷದಮೇಲೆ ಐವತ್ತುಸಾವಿರ ಯೋಜನಪ್ರಮಾಣು.
(ಆ ದೀಪದ ಹೆಸರು ಪ್ಲಕ್ಷದ್ವೀಪ)
ಪ್ಲಕ್ಷದ್ವೀಪಕ್ಕೆ ಇಕ್ಷುರಸಸಮುದ್ರ
ಎರಡುಲಕ್ಷ ಐವತ್ತುಸಾವಿರ ಯೋಜನಪ್ರಮಾಣು.
ಅದರಿಂದಾಚೆಯಲ್ಲಿ ಭೂಮಿ ಐದುಲಕ್ಷ ಯೋಜನಪ್ರಮಾಣು.
(ಆ ದ್ವೀಪದ ಹೆಸರು ಶಾಲ್ಮಲಿದ್ವೀಪ)
ಶಾಲ್ಮಲಿದ್ವೀಪಕ್ಕೆ ಮಧುಸಮುದ್ರ, ಐದುಲಕ್ಷ ಯೋಜನಪ್ರಮಾಣು.
ಅದರಿಂದಾಚೆಯಲ್ಲಿ ಭೂಮಿ, ಪತ್ತುಲಕ್ಷ ಯೋಜನಪ್ರಮಾಣು.
(ಆ ದ್ವೀಪದ ಹೆಸರು ಕುಶದ್ವೀಪ)
ಕುಶದ್ವೀಪಕ್ಕೆ ಘೃತಸಮುದ್ರ, ಪತ್ತುಲಕ್ಷ ಯೋಜನಪ್ರಮಾಣು.
ಅಲ್ಲಿಂದತ್ತ ಭೂಮಿ, ಇಪ್ಪತ್ತೈದುಲಕ್ಷ ಯೋಜನಪ್ರಮಾಣು.
(ಆ ದ್ವೀಪದ ಹೆಸರು ಶಾಕದ್ವೀಪ)
ಶಾಕದ್ವೀಪಕ್ಕೆ ದಧಿಸಮುದ್ರ, ನಾಲ್ವತ್ತುಲಕ್ಷ ಯೋಜನಪ್ರಮಾಣು.
ಅದರಿಂದಾಚೆಯಲ್ಲಿ ಭೂಮಿ ನಾಲ್ವತ್ತುಲಕ್ಷ ಯೋಜನಪ್ರಮಾಣು.

(ಆ ದ್ವೀಪದ ಹೆಸರು ಕ್ರೌಂಚದ್ವೀಪ)
ಕ್ರೌಂಚದ್ವೀಪಕ್ಕೆ ಕ್ಷೀರಸಮುದ್ರ, ನಾಲ್ವತ್ತುಲಕ್ಷ ಯೋಜನಪ್ರಮಾಣು.
ಅದರಿಂದಾಚೆಯಲ್ಲಿ ಭೂಮಿ, ಎಂಬತ್ತುಲಕ್ಷ ಯೋಜನಪ್ರಮಾಣು,
(ಆ ದ್ವೀಪದ ಹೆಸರು ಪುಷ್ಕರದ್ವೀಪ)
ಪುಷ್ಕರದ್ವೀಪಕ್ಕೆ ಸ್ವಾದೋದಕಸಮುದ್ರ ಎಂಬತ್ತುಲಕ್ಷ ಯೋಜನಪ್ರಮಾಣು.
ಅಲ್ಲಿಂದತ್ತತ್ತ ಲೋಕಾಲೋಕ ಪರ್ವತಾಕಾರವಾಗಿಪ್ಪದು.
ಇಂತೀ ಸಪ್ತಸಮುದ್ರಂಗಳ ಸಪ್ತದ್ವೀಪಂಗಳ ಪ್ರಮಾಣವೊಂದಾಗಿ ಮೇಳೈಸಿದಡೆ
ಮೂರುಕೋಟಿಯುಂ ಪದಿನೇಳುಲಕ್ಷದೈವತ್ತುಸಹಸ್ರ ಯೋಜನ
ಪರಿಮಾಣಿನ ಕಟ್ಟಳೆಯಾಯಿತ್ತು.
ಮತ್ತಲ್ಲಿಂದ ಭೂಮಂಡಲ ಉಂಟೆ? ಎಂದೊಡೆ, ಉಂಟು:
ನಾನೂರುಕೋಟಿಯೋಜನ ಹೇಮೋರ್ವಿ.
ಅಲ್ಲಿಂದತ್ತ ಭೂಮಂಡಲ ಉಂಟೆ? ಎಂದೊಡೆ ಉಂಟು:
ಹತ್ತುಕೋಟಿ ಇಪ್ಪತ್ತುಲಕ್ಷ ಯೋಜನಪ್ರಮಾಣು, ಹೇಮದ ಬೆಟ್ಟ.
ಮತ್ತಲ್ಲಿಂದತ್ತಲೂ ಭೂಮಂಡಲ ಉಂಟೆ? ಎಂದಡೆ, ಉಂಟು:
ಎಂಬತ್ತೈದುಕೋಟಿ ಮೂವತ್ತೈದುಲಕ್ಷದ ಅರುವತ್ತೈದುಸಾವಿರ
ಯೋಜನ ಪರಿಮಾಣ ವಳಯದಲ್ಲಿ ಅಂಧಕಾರವಾಗಿ, ಸೂರ್ಯಚಂದ್ರರ ಬೆಳಗಿಲ್ಲ.
ಇಂತಿವನೆಲ್ಲವನೊಂದಾಗಿ ಮೇಳೈಸಿದಡೆ
ಐನೂರುಕೋಟಿ ಯೋಜನ ಪರಿಪ್ರಮಾಣು ಕಟ್ಟಳೆಯಾಗಿತ್ತು.
ಆ ಮೇರುವಿನ ಒಂದು ದಿಕ್ಕಿನ ಪ್ರಮಾಣು: ಆ ಮೇರುವಿನ ಪ್ರದಕ್ಷಿಣವಾಗಿ
ಎಂಟು ದಳದಲ್ಲಿ ಎಂಟು ಪಂಚಶತಕೋಟಿ [ಯೋಜನ] ವಿಸ್ತೀರ್ಣವಾಯಿತ್ತು.
ಇದನು ದಿವಸದೊಳಗೆ ಸೂರ್ಯ ತಿರುಗುವನು,
ರಾತ್ರಿಯೊಳಗೆ ಚಂದ್ರ ತಿರುಗುವನು,
ಇಪ್ಪತ್ತೇಳು ನಕ್ಷತ್ರ, ಧ್ರುವಮಂಡಲ, ಸಪ್ತಋಷಿಯರು, ರಾಹುಕೇತು, ನವಗ್ರಹ-
ಇಂತಿವರೆಲ್ಲರು ಆ ಮೇರುಮಂದಿರದ ಹೊಸಪ್ರದಕ್ಷಿಣವಂ
ದಿವಾರಾತ್ರಿಯಲ್ಲಿ ತಿರುಗಿ ಬಹರು.
ಇವರೆಲ್ಲರ ಪ್ರಮಾಣವನು ಮಹಕ್ಕೆ ಮಹವಾಗಿಪ್ಪ ಶರಣಸ್ಥಲದವರು ಬಲ್ಲರು.
ಪ್ರಭುದೇವರು ಸಿದ್ಧರಾಮದೇವರು ಸಾಮವೇದಿಗಳು,
ಆದಿಲಿಂಗ ಅನಾದಿಶರಣ ಪೂರ್ವಾಚಾರಿ ಸಂಗನಬಸವಣ್ಣನು
ಕಟ್ಟಿದ ಕಟ್ಟಳೆಯೊಳಗೆ ಜ್ಯೋತಿರ್ಜ್ಞಾನದವರು.
(ಇಂತೀ) ಕಾಲ ಜ್ಯೋತಿಷ ಗ್ರಹಣ ಸಂಕ್ರಮಣ ತಿಥಿ ವಾರ ನಕ್ಷತ್ರ
ಯೋಗ ಕರಣ ಸಂವತ್ಸರ ಇವೆಲ್ಲವು
ಕೂಡಲಚೆನ್ನಸಂಗನಲ್ಲಿ ಬಸವಣ್ಣ ಕಟ್ಟಿದ ಕಟ್ಟಳೆ. ॥ ೫೫೮ ॥

೧೪೧೧

ಪ್ರಜರು, ಪ್ರಧಾನಿಯ ಮುಂದೆ ಗಜವನೇರಲಾಗದು.
ಪ್ರಧಾನಿ, ಪಟ್ಟದವರ ಮುಂದೆ ತುರಂಗವನೇರಲಾಗದು.
ಪಟ್ಟದಾತ, ಕೂಡಲಚೆನ್ನಸಂಗನ ಶರಣರ ಮುಂದೆ
ಆಂದೋಳನವನೇರಲಾಗದು, ಸಿದ್ಧರಾಮಯ್ಯ. || ೫೫೯ ||

೧೪೧೨

ಪ್ರಣಮ, ಪ್ರಾಣವಾಯುವಿನ ನೆಲೆಯನರಿದು ಬಿಡಬಲ್ಲರೆ,
ಪ್ರಣಮ, ಓಂಕಾರದ ಶ್ರುತಿಯ ಮೂಲಾಂಕುರವನರಿಯಬಲ್ಲರೆ,
ಪ್ರಣಮ, ಐವತ್ತೆರಡಕ್ಷರದ ಲಿಪಿಯ ತಿಳಿದುನೋಡಿ ಓದಬಲ್ಲರೆ,
ಪ್ರಣಮ, ನಾದಬಿಂದು ಕಲಾತೀತನಾಗಬಲ್ಲರೆ–
ಇದು ಕಾರಣ, ಕೂಡಲಚೆನ್ನಸಂಗಾ,
ನಿಮ್ಮ ಶರಣರು ಸಹಸ್ರವೇದಿಗಳಾದ ಕಾರಣ ಪ್ರಣಮಪ್ರತಿಷ್ಠಾಚಾರ್ಯರಾದರು.
ಅವರಿಗೆ ಮಿಗೆ ಮಿಗೆ ನಮೋ ನಮೋ ಎಂಬೆನು. || ೫೬೦ ||

೧೪೧೩

ಪ್ರಥಮ ಕಾಲದಲ್ಲಿ ನಿರಾಲಂಬಿಯಾಗಿರ್ದಿರಯ್ಯಾ.
ದ್ವಿತೀಯ ಕಾಲದಲ್ಲಿ ತೇಜೋಮೂರ್ತಿಯಾಗಿದ್ದಿರಯ್ಯಾ.
ತೃತೀಯ ಕಾಲದಲ್ಲಿ ನಾದಮೂರ್ತಿಯಾಗಿರ್ದಿರಯ್ಯಾ.
ಚತುರ್ಥ ಕಾಲದಲ್ಲಿ ಚೈತನ್ಯರೂಪ ತಾಳಿರ್ದಿರಯ್ಯಾ.
ಪಂಚಮ ಕಾಲದಲ್ಲಿ ಧರ್ಮಮೂರ್ತಿಯಾಗಿರ್ದಿರಯ್ಯಾ.
ಷಷ್ಠ ಕಾಲದಲ್ಲಿ ಪರಮಪುರುಷಾರ್ಥಸಾಧನವಾಗಿ,
ತ್ರಿವಿಧಭಕ್ತಿಗೆ ನೀವೇ ಕಾರಣವಾಗಿ ಬಂದಿರಿ ಪ್ರಮಥರು ಸಹಿತ,
ಮುಟ್ಟಿ ಪ್ರಾಣಲಿಂಗದ ಪರಿವ ತೋರಿಸಬೇಕೆಂಬ ನಿಮಿತ್ತ.
ಬಸವವಿಡಿದು ನಿಮ್ಮ ಕರುಣದ ಶಿಶುವಾಗಿ ಪುಟ್ಟಿದೆ ನಿಮ್ಮ ಕರಸ್ಥಲದಲ್ಲಿ
ಕೂಡಲಚೆನ್ನಸಂಗಮದೇವಾ
ನಿಮ್ಮ ಮಹಿಮೆಗೆ ನಮೋ ನಮೋ ಎನುತಿರ್ದೆನು. || ೫೬೧ ||

೧೪೧೪

ಪ್ರಥಮದಲ್ಲಿ ಪಾದೋದಕ, ದ್ವಿತೀಯದಲ್ಲಿ ಲಿಂಗೋದಕ,
ತೃತೀಯದಲ್ಲಿ ಮಜ್ಜನೋದಕ, ಚತುರ್ಥದಲ್ಲಿ ಸ್ಪರ್ಶನೋದಕ,
ಪಂಚಮದಲ್ಲಿ ಅವಧಾನೋದಕ, ಷಷ್ಠದಲ್ಲಿ ಆಪ್ಯಾಯನೋದಕ,

ಸಪ್ತಮದಲ್ಲಿ ಹಸ್ತೋದಕ, ಅಷ್ಟಮದಲ್ಲಿ ಪರಿಣಾಮೋದಕ,
ನವಮದಲ್ಲಿ ನಿರ್ನಾಮೋದಕ, ದಶಮದಲ್ಲಿ ಸತ್ಯೋದಕ,–
ಇಂತೀ ದಶವಿಧಪಾದೋದಕವ ತಿಳಿದುಕೊಳಬಲ್ಲ
ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೫೬೨ ॥

೧೪೧೫

ಪ್ರಥಮದಲ್ಲಿ ಮಹಾದೇವಂಗೆ ಮನವರ್ಪಿತ,
ದ್ವಿತೀಯದಲ್ಲಿ ಮಹೇಶ್ವರಂಗೆ ವೀರಾರ್ಪಿತ,
ತೃತೀಯದಲ್ಲಿ ಶಂಕರಂಗೆ ಸಮಾಧಾನವರ್ಪಿತ,
ಚತುರ್ಥದಲ್ಲಿ ನಿರ್ವಿಷಯಾರ್ಪಿತ; ಪಂಚಮದಲ್ಲಿ ಪಂಚವಸ್ತ್ರಾರ್ಪಿತ;
ಷಷ್ಠದಲ್ಲಿ ನಷ್ಟರೂಪಾಗಿ ನಿರೂಪಾರ್ಪಿತ;
ಸಪ್ತಮದಲ್ಲಿ ಆತ್ಮಾರ್ಪಿತ; ಅಷ್ಟಮದಲ್ಲಿ ತನ್ನ ಮರೆದು ಮಹಾರ್ಪಿತ;
ನವಮದಲ್ಲಿ ನಿಶ್ಶೂನ್ಯಾರ್ಪಿತ; ದಶಮದಲ್ಲಿ ಮಹಾರ್ಪಿತ.
ಏಕಾದಶದಲ್ಲಿ ಏಕಾದಶಪ್ರಸಾದವ ನೋಡಹೋದಡೆ,
ತನ್ನ ನುಂಗಿತ್ತಯ್ಯಾ; ಉಪಮಿಸಬಾರದು ಮಹಾಘನವ!
ಕೂಡಲಚೆನ್ನಸಂಗಮದೇವಾ. ॥ ೫೬೩ ॥

೧೪೧೬

ಪ್ರಥಮದಲ್ಲಿ ಸ್ಪರ್ಶವೆಂಬ ಸ್ಪರ್ಶಸಗುಣದಿಂದ ಪಾದೋದಕ,
ದ್ವಿತೀಯದಲ್ಲಿ ಅಂಗಗುಣವಳಿಯಿತ್ತಾಗಿ
ಲಿಂಗಮುಖದಿಂದ ಬಂದುದು ಲಿಂಗೋದಕ,
ತೃತೀಯದಲ್ಲಿ ಮಹಾಗಣಂಗಳ ಬರವಿನಿಂದ (ಬಂದುದಾಗಿ) ಮಜ್ಜನೋದಕ,
ಚತುರ್ಥದಲ್ಲಿ ಚತುರ್ದಳಪದ್ಮ ವಿಕಸಿತವಾಗಿ ಪುಷ್ಪೋದಕ,
ಪಂಚಮದಲ್ಲಿ ಲಿಂಗಕ್ಕೆ ಪರಮ ಪರಿಯಾಣ (ಪರಿಣಾಮ?)
ಇಕ್ಕುವಲ್ಲಿ ಅವಧಾನೋದಕ,
ಷಷ್ಠಮದಲ್ಲಿ ಲಿಂಗಾರೋಗಣೆಯ ಅಪ್ಯಾಯನೋದಕ,
ಸಪ್ತಮದಲ್ಲಿ ಲಿಂಗಕ್ಕೆ ಹಸ್ತೋದಕ
ಅಷ್ಟಮದಲ್ಲಿ ಅಷ್ಟಾಂಗಯೋಗ ಪರಮಪರಿಣಾಮೋದಕ,
ನವಮದಲ್ಲಿ ನಾಮ ಸೀಮೆ ಇಲ್ಲವಾಗಿ ನಿರ್ನಾಮೋದಕ,
ದಶಮದಲ್ಲ ಹೆಸರಿಲ್ಲವಾಗಿ ನಿತ್ಯೋದಕ,– ಇಂತು ದಶವಿಧೋದಕ.
ಇನ್ನು ಏಕಾದಶಪ್ರಸಾದ:
ಪ್ರಥಮದಲ್ಲಿ ಮಹಾದೇವಂಗೆ ಮನವರ್ಪಿತ,

ದ್ವಿತೀಯದಲ್ಲಿ ಮಹೇಶ್ವರಂಗೆ ವೀರಾರ್ಪಿತ,
ತೃತೀಯದಲ್ಲಿ ಶಂಕರಂಗೆ ಸಮಾಧಾನಾರ್ಪಿತ,
ಚತುರ್ಥದಲ್ಲಿ ನಿರ್ವಿಷಯಾರ್ಪಿತ, ಪಂಚಮದಲ್ಲಿ ಪಂಚವಸ್ತ್ರಾರ್ಪಿತ,
ಷಷ್ಠಮದಲ್ಲಿ ನಷ್ಟರೂಪ ನಿರೂಪಾರ್ಪಿತ, ಸಪ್ತಮದಲ್ಲಿ ಆತ್ಮಾರ್ಪಿತ,
ಅಷ್ಟಮದಲ್ಲಿ ತನ್ನ ಮರೆದ ಮರಹಾರ್ಪಿತ,
ನವಮದಲ್ಲಿ ಅಸಮಸಹಸ್ರನಾಳದಿಂದ ತೃಪ್ತ್ಯಾರ್ಪಿತ,
ದಶಮದಲ್ಲಿ ಚಿತ್ತಸುಯಿಧಾನಿಯಾಗಿ ಸುಷುಮ್ನಾನಾಳದಿಂದ ಅಮೃತಾರ್ಪಿತ,
ಏಕಾದಶದಲ್ಲಿ ಏಕಪ್ರಸಾದ ನೋಡಹೋದರೆ ತನ್ನ ನುಂಗಿತ್ತಯ್ಯಾ.
ಹೇಳಬಾರದ ಘನವು ಕಾಣಬಾರದಾಗಿ
ಕೂಡಲಚೆನ್ನಸಂಗನಲ್ಲಿ ಉಪಮಿಸಬಾರದ ಮಹಾಘನವು. ॥ ೫೬೪ ॥

೧೪೧೭

ಪ್ರಥಮಸ್ಥಲ ಸೂತಕದಲ್ಲಿ ಹೊಲೆ, ದ್ವಿತೀಯಸ್ಥಲ ಜನನದಲ್ಲಿ ಹೊಲೆ,
ತೃತೀಯಸ್ಥಲ ಮರಣದಲ್ಲಿ ಹೊಲೆ, ಇಂತೀ ಹೊಲೆಯ ತನ್ನೊಳಗೆ ಇಂಬಿಟ್ಟು
ಮುಂದಿಸವರ ಹೊಲೆಯನರಸುವ
ಅನ್ಯಾಯಿಗಳ ಮಾತ ಕೇಳಲಾಗದು ಕೇಳಲಾಗದು ಕಾಣಾ,
ಕೂಡಲಚೆನ್ನಸಂಗಮದೇವಾ. ॥ ೫೬೫ ॥

೧೪೧೮

ಪ್ರಸಾದ ಪ್ರಸಾದವೆಂದು ಹೆಸರಿಟ್ಟು ಕೊಂಬಿರಣ್ಣಾ
ಮುಂದೆ ನೋಡಿದಡೆ ಪ್ರಸಾದವಾಯಿತ್ತು
ಹಿಂದೆ ನೋಡಿದಡೆ ಮಲಮೂತ್ರವಾಯಿತ್ತು,
ಪ್ರಸಾದಕ್ಕೆ ಭಂಗ ಬಂದಿತ್ತು ನೋಡಾ!
ಇಂತಪ್ಪ ಪ್ರಸಾದಿಗಳ ನಮ್ಮ ಕೂಡಲಚೆನ್ನಸಂಗ ಮೆಚ್ಚ. ॥ ೫೬೬ ॥

೧೪೧೯

ಪ್ರಸಾದಲಿಂಗಮೋಹಿತನಾದಡೆ ಅಂಗರುಚಿಗೆ ಇಚ್ಛೈಸಲಾಗದು.
ಪ್ರಸಾದಲಿಂಗಭಕ್ತನಾದಡೆ ಪೂರ್ವಾಹಾರವ ಕೈಕೊಳ್ಳಲಾಗದು.
ಪ್ರಸಾದಲಿಂಗಪೂಜಕನಾದಡೆ ಅಪ್ರಸಾದಿಗೆ ಉಣಲಿಕ್ಕಲಾಗದು.
ಪ್ರಸಾದಲಿಂಗವೀರನಾದಡೆ ಅನ್ಯರಿಗೆ ಕೈಯಾನಲಾಗದು.
ಪ್ರಸಾದಲಿಂಗಪ್ರಸಾದಿಯಾದಡೆ ಜೀವಹಿಂಸೆಯ ಮಾಡಲಾಗದು.
ಪ್ರಸಾದಲಿಂಗಪ್ರಾಣಿಯಾದಡೆ ಆತ್ಮನಿಗ್ರಹವ ಮಾಡಲಾಗದು.

ಇದು ಕಾರಣ– ಕೂಡಲಚೆನ್ನಸಂಗಯ್ಯನಲ್ಲಿ
ಈ ಆರು ಸಹಿತ ಪ್ರಸಾದಲಿಂಗಭಕ್ತಿ. || ೫೬೭ ||

೧೪೨೦

ಪ್ರಸಾದಿಗೆ ಅಗ್ನಿಯೆ ಅಂಗ, ಆ ಅಂಗಕ್ಕೆ ನಿರಹಂಕಾರವೆ ಹಸ್ತ,
ಆ ಹಸ್ತಕ್ಕೆ ಮೂರ್ತಿಸಾದಾಖ್ಯ, ಆ ಸಾದಾಖ್ಯಕ್ಕೆ ಇಚ್ಛಾಶಕ್ತಿ,
ಆ ಶಕ್ತಿಗೆ ಶಿವನೆ ಲಿಂಗ, ಆ ಲಿಂಗಕ್ಕೆ ವಿದ್ಯೆಯೆ ಕಳೆ,
ಆ ಕಳೆಗೆ ನೇತ್ರೇಂದ್ರಿಯವೆ ಮುಖ,
ಆ ಮುಖಕ್ಕೆ ಸುರೂಪುದ್ರವ್ಯಂಗಳನು
ರೂಪು ರುಚಿ ತೃಪ್ತಿಯನರಿದು, ಅವಧಾನಭಕ್ತಿಯಿಂದರ್ಪಿಸಿ
ಆ ಸುರೂಪಪ್ರಸಾದವನು ಭೋಗಿಸಿ ಸುಖಿಸುತಿಹನು
ಕೂಡಲಚೆನ್ನಸಂಗಾ ನಿಮ್ಮ ಪ್ರಸಾದಿ. || ೫೬೮ ||

೧೪೨೧

ಪ್ರಸಾದಿ ಪ್ರಸಾದವನೆ ಪತಿಕರಿಸಿಕೊಂಡು,
ಓಗರ ಪ್ರಸಾದವೆಂಬ ಸಂಕಲ್ಪ ವಿರಹಿತ ಪ್ರಸಾದಿ.
ಭ್ರಾಂತುಸೂತಕವಳಿದುಳಿದು ಪ್ರಸಾದಿ.
ಕೂಡಲಚೆನ್ನಸಂಗಯ್ಯನಲ್ಲಿ ತಾನೇ ಪ್ರಸಾದಿ. || ೫೬೯ ||

೧೪೨೨

ಪ್ರಾಣ ಲಿಂಗ ಎಂಬಿರಿ, ಪ್ರಾಣವೆಲ್ಲಿರ್ಪುದು?
ಪ್ರಾಣ ಲಿಂಗದ ಭೇದವ ಬಲ್ಲಡೆ ನೀವು ಹೇಳಿರೆ.
ಕಾಯಶೂನ್ಯ ಲಿಂಗ, ಪ್ರಾಣಶೂನ್ಯ ಶರಣ.
ಕಾಯವಳಿದು ಸಮಾಧಿಯೊ? ಕಾಯವಳಿಯವೆ ಸಮಾಧಿಯೊ?
ಬಲ್ಲಡೆ ನೀವು ಹೇಳಿರೆ.
ಕಾಯ ವಾಯುವಾಗದೆ ಸಮಾಧಿಯುಂತುವ ಬಲ್ಲ,
ಕೂಡಲಚೆನ್ನಸಂಗಯ್ಯನಲ್ಲಿ ನಿಮ್ಮ ಶರಣ ಬಸವಣ್ಣನು. || ೫೭೦ ||

೧೪೨೩

ಪ್ರಾಣಲಿಂಗ ಓಸರಿಸಿತ್ತು ಓಸರಿಸಿತ್ತು ಎಂಬಿರಯ್ಯಾ
ಪ್ರಾಣಲಿಂಗ ಓಸರಿಸಿದಡೆ ಕಾಯವೇಕೆ ಬೀಳದು ಹೇಳಿರೆ?
ಪ್ರಾಣಲಿಂಗ ಓಸರಿಸಬಲ್ಲುದೆ ಸರ್ವಭುವನದೊಡೆಯನು?
ಈ ಪ್ರಾಣಲಿಂಗ ಓಸರಿಸಿದುದೆಂದು ಸಮಾಧಿಯ ಹೊಗುವ[ರ]

ಮುಸುಡ ನೋಡಲಾಗದು ಕಾಣಾ
ಕೂಡಲಚೆನ್ನಸಂಗಮದೇವಾ. ॥ ೫೭೧ ॥

೧೪೭೪

ಪ್ರಾಣಲಿಂಗದಲ್ಲಿ ಪ್ರವೇಶಿಯಾಗಿ, ಪ್ರಸಾದದಲ್ಲಿ ಸನ್ನಿಹಿತನಯ್ಯಾ.
ಪ್ರಸಾದದಲ್ಲಿ ಸನ್ನಿಹಿತನಾಗಿ ಪ್ರಾಣಲಿಂಗದಲ್ಲಿ ಪ್ರವೇಶಿಯಯ್ಯಾ.
ಲಿಂಗಾರ್ಪಿತವನಲ್ಲದೆ ಅನರ್ಪಿತವ ಮುಟ್ಟಲೀಯನಯ್ಯಾ.
ಅಂಗಗುಣಂಗಳನೆಲ್ಲವ ಕಳೆದು ಪ್ರಸಾದಬ್ರಹ್ಮಚಾರಿ,
ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣನು. ॥ ೫೭೨ ॥

೧೪೭೫

ಪ್ರಾಣಲಿಂಗ ಪ್ರಾಣಲಿಂಗವೆಂಬರು, ಪ್ರಾಣಲಿಂಗವೆಂಬುದಾರಿಗುಂಟಯ್ಯಾ?
ಮೂವರಿಗೆ ಹುಟ್ಟಿದ ಲಿಂಗವು ತನ್ನ ಪ್ರಾಣಲಿಂಗವಾದ ಪರಿಯಿನ್ನೆಂತೊ?
ವಸುಧೆಗೆ ಹುಟ್ಟಿದ ಲಿಂಗವನು ವಶಕ್ಕೆ ತಂದು,
ತನ್ನ ದೆಸೆಯಲ್ಲಿ ನಿಲಿಸುವ ಪರಿಯಿನ್ನೆಂತೊ?
ಭೂಮಿಗೆ ಹುಟ್ಟಿ ಶಿಲೆಯಾದ, ಕಲುಕುಟಿಗ ಮುಟ್ಟಿರೂಪಾದ,
ಗುರುಮುಟ್ಟಿ ತೇಜವಾದ.
ಹಿಂದೆ ಮುಟ್ಟಿದವರಿಗೆಲ್ಲ ಪ್ರಾಣಲಿಂಗವಾದ ಪರಿಯಿನ್ನೆಂತೊ?
ತನ್ನ ಪ್ರಾಣ ಮುಂದೆ ಹೋಗಿ ಲಿಂಗ ಹಿಂದುಳಿದಡೆ
ಪ್ರಾಣ ಲಿಂಗವಾದ ಪರಿಯಿನ್ನೆಂತೊ?
ಹಸಿವು ತೃಷೆ, ವಿಷಯ ನಿದ್ರೆ ಜಾಡ್ಯ,
ಇಂತಿವೆಲ್ಲವನತಿಗಳೆದು ನಿರ್ಮಲದೇಹಿಯಾಗಿ
ಹೃದಯಕಮಲದೊಳು ವಿಮಲವಪ್ಪ ಶ್ರೀಗುರುಮೂರ್ತಿ,
ಪರಂಜ್ಯೋತಿ ಎಂದೆನಿಸುವ ಲಿಂಗವ,
ಮಲಿನವಿಡಿಯದ ಕಾಯದ ಸಜ್ಜೆಯೊಳು ದೃಢವೊಳ್ಪಜಯಂಗೈಸಿ,
ಸಪ್ತಧಾತು ಅಷ್ಟಮದವಿಲ್ಲದೆ ಜ್ಞಾನದೋಗರವನರ್ಪಿಸಿ,
ಸುಜ್ಞಾನಬುದ್ಧಿಯೊಳು ಪ್ರಸಾದವ ಸ್ವೀಕಾರವ ಮಾಡಿ,
ನಿತ್ಯಸುಖಿಯಾಗಿ ಆಡುತಿಪ್ಪ–
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ
ಬಸವಣ್ಣನೊಬ್ಬನೆ ಪ್ರಾಣಲಿಂಗ ಸಂಬಂಧಿ;
ಪ್ರಾಕ್‌ಶುದ್ಧಿಗಳೆಲ್ಲ ಲಿಂಗಲಾಂಛನಧಾರಿಗಳೆಂದೆನಿಸುವರು. ॥ ೫೭೩ ॥

೧೪೨೬

ಪ್ರಾಣಲಿಂಗಿಗೆ ವಾಯುವೆ ಅಂಗ, ಆ ಅಂಗಕ್ಕೆ ಸುಮನವೆ ಹಸ್ತ,
ಆ ಹಸ್ತಕ್ಕೆ ಅಮೂರ್ತಿಸಾದಾಖ್ಯ, ಆ ಸಾದಾಖ್ಯಕ್ಕೆ ಆದಿಶಕ್ತಿ,
ಆ ಶಕ್ತಿಗೆ ಜಂಗಮಲಿಂಗ, ಆ ಲಿಂಗಕ್ಕೆ ಶಾಂತಿಯೇ ಕಳೆ,
ಆ ಕಳೆಗೆ ತ್ವಗಿಂದ್ರಿಯವೆ ಮುಖ, ಆ ಮುಖಕ್ಕೆ ಸ್ಪರ್ಶದ್ರವ್ಯಂಗಳನು
ರೂಪು–ರುಚಿ–ತೃಪ್ತಿಯನರಿದು ಅನುಭಾವಭಕ್ತಿಯಿಂದರ್ಪಿಸಿ,
ಆ ಸುಸ್ಪರ್ಶಪ್ರಸಾದವನು ಭೋಗಿಸಿ ಸುಖಿಸುತ್ತಿಹನು
ಕೂಡಲಚೆನ್ನಸಂಗಾ ನಿಮ್ಮ ಪ್ರಾಣಲಿಂಗಿ. ॥ ೫೭೪ ॥

೧೪೨೭

ಪ್ರಾಣಲಿಂಗಿಯಾಗಿ ಲಿಂಗವ ನಂಬಿದ.
ನಿಸ್ಸಂಗಿಯ ನಿಲವಿನ ಭೇದವಾವರಿಸಲೊಡನೆ,
ತನ್ನ ಮರವಹುದು; ಮತ್ತೊಂದಕ್ಕಿಂಬುಗೊಡದು.
ಕೂಡಲಚೆನ್ನಸಂಗನ ಅರಿವು ಅನುಪಮವಾಗಿ
ವ್ಯವಹಾರದೊಳಗಿರಲೀಯದು. ॥ ೫೭೫ ॥

೧೪೨೮

ಪ್ರಾಣಾದಿ ವಾಯುಗಳ ಕಳೆದು ಭಕ್ತರಾದರೆಮ್ಮವರು, –ಅದೆಂತೆಂದಡೆ:
ಅಲ್ಲಲ್ಲಿರ್ದ ದಶವಾಯುಗಳ ದಶಸ್ಥಾನದಲ್ಲಿ ನಿಲಿಸಿ
ಭಕ್ತಿಯ ಮಾಡುವ ಪರಿಯ ಹೇಳಿಹೆ ಕೇಳಿರಣ್ಣಾ:
ಪ್ರಾಣವಾಯುವ ನಿಲಿಸಿದರು ಪ್ರಾಣಲಿಂಗದಲ್ಲಿ,
ಅಪಾನವಾಯುವ ನಿಲಿಸಿದರು ಪ್ರಸಾದಲಿಂಗದಲ್ಲಿ;
ವ್ಯಾನವಾಯುವ ನಿಲಿಸಿದರು ಚತುರ್ವಿಧಪದದ ಬಯಕೆಯುಳಿದ ಲಿಂಗಧ್ಯಾನದಲ್ಲಿ.
ಉದಾನ ವಾಯುವ ನಿಲಿಸಿದರು ಉಪದೇಶದಿಂದ ನಡೆವ ಅನ್ಯಗಮನವ ಕೆಡಿಸಿ
ನಿರ್ಗಮನವೆಂಬ ಸುಚಿತ್ತದಲ್ಲಿ.
ಸಮಾನವಾಯುವ ನಿಲಿಸದರು ಸಮ್ಯಗ್ ಜ್ಞಾನದ ಸ್ವಯಂಜ್ಯೋತಿಯ
ಬೆಳಗಿನ ಕಳೆಯಲ್ಲಿ.
ನಾಗವಾಯುವ ನಿಲಿಸಿದರು ಸುಚಿತ್ತ ಸುಬುದ್ಧಿ ಸುಗೋಷ್ಠಿಯ ಸುಜ್ಞಾನದ
ಬೆಳಗಿನ ಕಳೆಯೊಳಗೆ ಸುಳಿದಾಡುವ ಮಹಾಲಿಂಗವಂತರ ಅನುಭಾವದಲ್ಲಿ.
ಕೂರ್ಮವಾಯುವ ನಿಲಿಸಿದರು,
ಶಿವಸ್ತುತಿ ಶಿವಮಂತ್ರ ಷಡಕ್ಷರಿ ಬೀಜಂಗಳ ಜಪಿಸುವಲ್ಲಿ.
ಕೃಕರ ವಾಯುವ ನಿಲಿಸಿದರು
ಚತುರ್ವಿಧ ಪುರುಷಾರ್ಥಂಗಳ ಕಳೆದು ಷಡ್ವಿಧ ದಾಸೋಹದ ಭಕ್ತರತಿಯಾನಂದ

ಸೂಕ್ಷ್ಮಸಂಬಂಧದ ಕೂಟದಲ್ಲಿ ತೆರಹಿಲ್ಲದ ತನ್ನ ತಾನರಿವಲ್ಲಿ.
ದೇವದತ್ತವಾಯುವ ನಿಲಿಸಿದರು ಶಿವಲಿಂಗವೆ ಲಿಂಗ ಶಿವಭಕ್ತರೆ ಕುಲಜರು,
ಶಿವಾಗಮವೆ ಆಗಮ, ಶಿವಾಚಾರವೆ ಆಚಾರವೆಂಬ ಏಕೋಭಾವದ
ನಿಷ್ಠೆಯಿಂದ ಭಾಷೆಯ ನುಡಿದು
ದೃಢವಿಡಿದು ಅನ್ಯವ ಜರಿವಲ್ಲಿ.
ಧನಂಜಯ ವಾಯುವ ನಿಲಿಸಿದರು, ಅನಂತ ಪರಿಯಲ್ಲಿ ಧಾವತಿಗೊಂಡು
ಕಾಯಕ್ಲೇಶದಿಂದ ತನು ಮನ ಬಳಲಿ ಗಳಿಸಿದಂತಹ ಧನವ
ಅನರ್ಥವ ಮಾಡಿ ಕೆಡಿಸದೆ, ಲಿಂಗಾರ್ಚನೆಯ ಮಾಡಿ
ಗುರುಲಿಂಗಜಂಗಮವೆಂಬ ತ್ರಿವಿಧ ದಾಸೋಹದ ಪರಿಣಾಮದಲ್ಲಿ,
ಈ ದಶವಾಯುಗಳ ಪ್ರಯತ್ನಕ್ಕೆ ಧ್ಯಾನ ಗಮನ ಸಂಗ ಸುಬುದ್ಧಿ ನಿರ್ಗುಣ
ತಮಂಧ ಕೋಪ ಚಿಂತ ಎಂಬಿವನರಿದು, ದುಶ್ಚಿತ್ತವ ಮುರಿದು,
ಅಹಂಕಾರವಳಿದು, ದಶವಾಯುಗಳ ದಶಸ್ಥಾನದಲ್ಲಿ ನಿಲಿಸಿ
ಭಕ್ತರಾಗಬೇಕು ಕಾಣಿರೆ, ಎಲೆ ಅಣ್ಣಗಳಿರಾ!
ಅಲ್ಲಲ್ಲಿ ಇವರ ಓತು, ಭರವ ಕೆಡಿಸಿ ತಗ್ಗಲೊತ್ತಿ, ಮೇಲೆ ತಲೆಯೆತ್ತಲೀಯವೆ
ದಶವಾಯುಗಳ ದಶಸ್ಥಾನದಲ್ಲಿ [ನಿಲಿಸಿ] ದಶಾವಸ್ಥೆಯಿಂದ ಲಿಂಗವನೊಲಿಸಿದ
ಮಹಾಮಹಿಮನ ಮಸ್ತಕವೆ ಶ್ರೀಪರ್ವತ, ಲಲಾಟವೆ ಕೇತಾರವೆನಿಸುವುದು.
ಆತನ ಹೃದಯದಲ್ಲಿ ಅಷ್ಟಷಷ್ಟಿ ತೀರ್ಥಂಗಳಿಪ್ಪವು.
ಆತನ ಶ್ರೀಪಾದ ವಾರಣಾಸಿ ಅವಿಮುಕ್ತಕ್ಷೇತ್ರದಿಂದ ವಿಶೇಷ.
ಆತನ ಪಾದಾಂಗುಷ್ಠಕ್ಕೆ ಸಮಸ್ತ ತೀರ್ಥಕ್ಷೇತ್ರ ಸಪ್ತಸಮುದ್ರಂಗಳ ತಿರುಗಿ ಮಿಂದ
ಒಂದು ಕೋಟಿ ಫಲ ಸರಿಯಲ್ಲ.
ಆತನು ಸತ್ಯವೆಂಬ ವೃಕ್ಷವನೇರಿ, ನಿಷ್ಠೆಯೆಂಬ ಕೊನೆಯ ಹಿಡಿದು
ಪರಬ್ರಹ್ಮವೆಂಬ ಫಲವ ಸುವಿವೇಕದಿಂದ ಸವಿದು ಸುಖಿಯಾಗಿರ್ಪನಾಗಿ,
ಆತನು ಪುಣ್ಯಪಾಪವೆಂಬೆರಡರ ಸುಖದುಃಖದವನಲ್ಲ;
ಗತಿ ಅವಗತಿಯೆಂಬೆರಡರ ಮತಿಗೇಡಿಯಲ್ಲ;
ಧರ್ಮ ಕರ್ಮವೆಂಬೆರಡರ ಭ್ರಮೆಯವನಲ್ಲ,
ಆತನ ನಿಲವು ಪುಷ್ಪ ನುಂಗಿದ ಪರಿಮಳದಂತೆ, ಆಲಿಕಲ್ಲು ನುಂಗಿದ ಅಪ್ಪುವಿನಂತೆ,
ಅಗ್ನಿ ಆಹುತಿಗೊಂಡ ಘೃತದಂತೆ, ಕಬ್ಬುನವುಂಡ ನೀರಿನಂತೆ,
ಉರಿಯುಂಡ ಕರ್ಪುರದಂತೆ!
ಆತಂಗೆ ತೋರಲೊಂದು ಪ್ರತಿಯಿಲ್ಲ, ಎಣೆಯಿಲ್ಲ.
ಆತ ನಿತ್ಯ ನಿರಂಜನ ಚಿನ್ಮಯ ಚಿದ್ರೂಪ ನಿಶ್ಚಿಂತ ನಿರಾಳನಯ್ಯಾ.
ಕೂಡಲಚೆನ್ನಸಂಗಮದೇವಾ, ನಿಮ್ಮ ಪ್ರಾಣಲಿಂಗ ಸಂಬಂಧಿಯ ನಿಲವು
ಮಹವ ನುಂಗಿದ ಬಯಲೊ! || ೫೭೬ ||

೧೪೨೯

ಪ್ರಾರಬ್ಧ ಪ್ರಯತ್ನಗಳ ತಾರತಮ್ಯವನಿಲ್ಲಿ ಹೇಳಿಹೆ ಕೇಳಿರಯ್ಯಾ:
ಪ್ರಯತ್ನದ ಹೆಚ್ಚು ಕುಂದಿನಂತೆ, ಇಂದಾಗಲಿ ಮುಂದಾಗಲಿ
ಪ್ರಾರಬ್ಧವು ಫಲಪದವನೀವುದಲ್ಲವೆ?
"ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೇ ॥ ಎಂದುದಾಗಿ
ಪಿರಿದಪ್ಪ ಪುಣ್ಯಪಾಪಂಗಳು ಇದೆ ಜನ್ಮದಲ್ಲಿಯೆ
ಫಲವನೀಯದೆ ಮಾಣವು.
ವಿಶ್ವಾಮಿತ್ರನು ಕ್ಷತ್ರಿಯನಾದಡೆಯೂ,
ತನ್ನ ತಪಃಪ್ರಭಾವದಿಂದ ಬ್ರಾಹ್ಮಣನಾಗಲಿಲ್ಲವೆ?
ಮಾರ್ಕಂಡೇಯನು ಅತ್ಯುತ್ಕಟವಾದ ಶಿವಭಕ್ತಿಯಿಂದ
ಚಿರಂಜೀವಿಯಾಗಲಿಲ್ಲವೆ?
ರಾವಣ ಕೀಚಕಾದಿಗಳು ಪಾಪಾಧಿಕ್ಯದಿಂದ ಹತಭಾಗ್ಯರಾಗಲಿಲ್ಲವೆ?
ಅದು ಕಾರಣ–ತಾನು ಕೈಕೊಂಡ ಕಜ್ಜದಲ್ಲಿ
ಪ್ರಯತ್ನವೆ ಪ್ರಾರಬ್ಧವಾಗಿ ಫಲವೀವುದರಿಂದ
ಪ್ರಾರಬ್ಧಕ್ಕಿಂತ ಪ್ರಯತ್ನವೇ ಮಿಗಿಲಾಗಿಪ್ಪುದು ಕಾಣಾ,
ಕೂಡಲಚೆನ್ನಸಂಗಮದೇವಾ. ॥ ೫೭೭ ॥

೧೪೩೦

ಬಟ್ಟಬಯಲೆಲ್ಲ ಗಟ್ಟಿಗೊಂಡಡೆ,
ಸ್ವರ್ಗ ಮರ್ತ್ಯ ಪಾತಾಳಕ್ಕೆ ಠಾವೆಲ್ಲಿಯದೊ?
ಮೇಘನಿರ್ಮಳಜಲವೆಲ್ಲ ಮುತ್ತಾದಡೆ
ಸಪ್ತಸಾಗರಂಗಳಿಗೆ ಉದಕವೆಲ್ಲಿಯದೊ?
ಕಷ್ಟಜೀವಿ ಮನುಜರೆಲ್ಲ ನೆಟ್ಟನೆ ಶಿವಜ್ಞಾನಿಗಳಾದಡೆ
ಮುಂದೆ ಭವದ ಬಳ್ಳಿ ಬೆಳೆಯಲಿನ್ನೆಲ್ಲಿಯದೊ?
'ಗುರುಭಕ್ತಿಂ ಪರಿತ್ಯಜ್ಯ ಸದ್ಯೋಽಪಿ ನರಕಂ ವ್ರಜೇತ್'–
ಇಂತೆಂದುದಾಗಿ, ಕೂಡಲಚೆನ್ನಸಂಗಯ್ಯಾ
ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ. ॥ ೫೭೮ ॥

೧೪೩೧

ಬಟ್ಟಬಯಲೊಳಗೊಂದು ಐವಾಗಿಲ ಪಟ್ಟಣ.
ಆ ಪಟ್ಟಣಕ್ಕೆ ಒಡಲಿಲ್ಲದಾದ ಅರಸು ನೋಡಾ!

ಆ ಅರಸಂಗೆ ಆರುವರು ಅರಸಿಯರು;
ಮೂವರು ಸುರೂಪಿಯರು ಮೂವರು ಕುರೂಪಿಯರು;
ಇವರಿಗೊಬ್ಬರಿಗೊಬ್ಬರಿಗೊಂದೊಂದು ಪರಿಯ ಕೂಟ ನೋಡಾ!
ಐವರ ಕಣ್ಣ ಕಟ್ಟಿ ಒಬ್ಬಳನೆ ನೆನೆದಡೆ
ಪ್ರತಿಯಿಲ್ಲದ ಸುಖವು ಸಯವಾದ ಕಾರಣ
ಕೂಡಲಚೆನ್ನಸಂಗಾ,
ನಿಮ್ಮ ಶರಣ ಪ್ರಭುವಿಂಗೆ ನಮೋ ನಮೋ ಎನುತಿರ್ದೆನು. || ೫೭೯ ||

೧೪೩೨

ಬಟ್ಟಲೊಳಗಣ ಉದಕವ ತಗೆದುಕೊಂಡು ಲಿಂಗದ ಮೇಲೆ ನೀಡಿ,
ಜಿಹ್ವೆಯಲ್ಲಿ ಸ್ವೀಕರಿಸಿದಲ್ಲಿಗೆ ಗುರು ಪಾದೋದಕವು.
ಮೊದಲು ನಿರೂಪಿಸಿದ ಗುರುಪಾದೋದಕದಿಂದ ಆವ ಪದವಿಯೆಂದಡೆ:
ಧರೆಯ ಜನನದ ಅಜ್ಞಾನದ ಭವತ್ವವಳಿದು,
ಶಿವಜ್ಞಾನವ ಕರುಣಿಸಿ ಕೊಡುವುದು.
ಲಿಂಗಪಾದೋದಕದಿಂದ ಆವ ಪದವಿಯೆಂದಡೆ:
ಇಹಲೋಕದ ತನುಭೋಗವಪ್ಪ ಪ್ರಾರಬ್ಧಕರ್ಮವಳಿವುದು,
ಶಿವಲೋಕದಲ್ಲಿ 'ಇತ್ತಬಾ' ಎಂದೆನಿಸಿಕೊಂಬ ಮನ್ನಣೆಯ ಪದವಿಯಪ್ಪುದು,
ಆ ಬಟ್ಟಲಲೆತ್ತಿ ಸಲಿಸಿದ ಜಂಗಮಪಾದೋದಕದಿಂದ ಆವ ಪದವಿ ಎಂದಡೆ:
ಇಹಪರಕ್ಕೆ ಎಡೆಯಾಡುವ ಅವಸ್ಥೆಗಳನು,
ಪರತತ್ವವಾದ ಜಂಗಮವನು ಐಕ್ಯಮಾಡಿ ಅಳವಡಿಸಿಕೊಂಡಿಪ್ಪನು.
ಇಂತು ಗುರುಪಾದೋದಕ, ಲಿಂಗಪಾದೋದಕ,
ಜಂಗಮಪಾದೋದಕ, ತ್ರಿವಿಧ.
ಉಳಿದ ಏಳು ಉದಕದೊಳಗೆ ಸ್ಪರ್ಶನೋದಕ ಅವಧಾನೋದಕ ಇವೆರಡು,
ಆ ಲಿಂಗ ಮಸ್ತಕದ ಮೇಲೆ ನೀಡಿ,
ಅಂಗುಲಿಗಳ ಜಿಹ್ವೆಯಲ್ಲಿ ಇಟ್ಟುಕೊಂಡಂತಹ ಗುರುಪಾದೋದಕದಲ್ಲಿ ಸಂಬಂಧವು
ಆಪ್ಯಾಯನೋದಕ, ಹಸ್ತೋದಕ ಇವೆರಡು,
ಬಟ್ಟಲೆತ್ತಿ ಸಲಿಸಿದಂತಹ ಜಂಗಮ ಪಾದೋದಕದಲ್ಲಿ ಸಂಬಂಧವು.
ಸತ್ಯೋದಕ ಬಟ್ಟಲ ಖಂಡಿತ ಮಾಡಿದಲ್ಲಿಗೆ ಸಂಬಂಧವು
ಈ ಹತ್ತು ಪಾದೋದಕವು ಮಹತ್ಪಾದದಲ್ಲಿ ಸಂಬಂಧವು
ಧೂಳಪಾದೋದಕ, ದಶವಿಧ ಪಾದೋದಕ ಸಂಬಂಧವು
ಕ್ರಿಯಾಪಾದೋದಕದಲ್ಲಿ ನೋಡಾ ಕೂಡಲಚೆನ್ನಸಂಗಮದೇವಾ. || ೫೮೦

೧೪೩೩

ಬರಿಯ ಬೋಳಂಗಳೆಲ್ಲಾ ಜಂಗಮವೆ?
ಜಡಜೀವಿಗಳೆಲ್ಲಾ ಜಂಗಮವೆ?
ವೇಷಧಾರಿಗಳೆಲ್ಲ ಜಂಗಮವೆ?
ಇನ್ನಾವುದು ಜಂಗಮವೆಂದಡೆ:
ನಿಸ್ಸೀಮನೆ ಜಂಗಮ, ನಿಜೈಕ್ಯನೆ ಜಂಗಮ
ಇಂಥ ಜಂಗಮದ ಸುಳುಹ ಕಾಣದೆ
ಕೂಡಲಚೆನ್ನಸಂಗಮದೇವ ತಾನೆ ಜಂಗಮವಾದ. ॥ ೫೮೧ ॥

೧೪೩೪

ಬಲ್ಲಿದ ಬಲ್ಲಿದರೆಂಬವರು ತಮ್ಮಿಂದ ತಾವಾದ ಸ್ವತಂತ್ರಶೀಲರೆ? ಅಲ್ಲ.
ಬ್ರಹ್ಮ ಬಲ್ಲಿದನೆಂದಡೆ, ಶಿರ ಹೋಗಲದೇನು?
ಹರಿ ಬಲ್ಲಿದನೆಂದಡೆ, ಹಲವು ಭವಕ್ಕೆ ಬರಲದೇನು?
ಅಂಧಕಾಸುರ ಬಲ್ಲಿದನೆಂದಡೆ ಹರನ ಅಂಗಾಲ ಕೆಳಗೆ ಇರಲೇನು?
ದಕ್ಷ ಬಲ್ಲಿದನೆಂದಡೆ, ಹೋಮಕ್ಕೆ ಗುರಿಯಾಗಲದೇನು?
ಕೋಪಾಗ್ನಿರುದ್ರನೆಂಬ ಜಮದಗ್ನಿ ಬಲ್ಲಿದನೆಂದಡೆ
ಆತನ ತಲೆಯುಸರಿಯಲದೇನು?
ಪರಶುರಾಮ ಬಲ್ಲಿದನೆಂದಡೆ ತನ್ನ ಬಿಲ್ಲ ಬಿಟ್ಟು ಹೋಗಲದೇನು?
ಸಹಸ್ರಾರ್ಜುನ ಬಲ್ಲಿದನೆಂದಡೆ, ತೋಳು ತುಂಡಿಸಲದೇನು?
ಅಂಬುಧಿ ಬಲ್ಲಿತೆಂದಡೆ, ಆಪೋಶನಕ್ಕೊಳಗಾಗಲವೇನು?
ಅಗಸ್ತ್ಯ ಬಲ್ಲಿದನೆಂದಡೆ ಅರಣ್ಯದೊಳಗೆ ತಪವ ಮಾಡಲವೇನು?
ನಳರಾಜ ಬಲ್ಲಿದನೆಂದಡೆ, ತನ್ನ ಸತಿಯನಿಕ್ಕಿಟ್ಟು ಹೋಗಲವೇನು?
ಕೃಷ್ಣ ಬಲ್ಲಿದನೆಂದಡೆ, ಬೇಡನ ಅಂಬು ತಾಗಲದೇನು?
ರವಿ ಶಶಿಗಳು ಬಲ್ಲಿದರೆಂದಡೆ, ರಾಹುಕೇತು ಗ್ರಹಿಸಲದೇನು?
ಶ್ರೀರಾಮ ಬಲ್ಲಿದನೆಂದಡೆ, ತನ್ನ ಸತಿ ಕೋಳುಹೋಗಲದೇನು?
ಪಾಂಡವರು ಬಲ್ಲಿದರೆಂದಡೆ ತಮಗೆ ಹಳುವಟ್ಟು ಹೋಗಲವೇನು?
ಹರಿಶ್ಚಂದ್ರ ಬಲ್ಲಿದನೆಂದಡೆ, ಸ್ಮಶಾನವ ಕಾಯಲವೇನು?
ಹರನೆ ನೀ ಮಾಡಲಿಕೆ ರುದ್ರರು, ನೀ ಮಾಡಲಿಕೆ ದೇವರ್ಕಳು,
ನೀ ಮಾಡಲಿಕೆ ಬಲ್ಲಿದರು, ನೀ ಮಾಡಲಿಕೆ ವೀರರು, ನೀ ಮಾಡಲಿಕೆ ಧೀರರು.
ಅಮೂರ್ತಿ ಮೂರ್ತಿ, ನಿರಾಕಾರ, ನಿರ್ಮಾಯ–
ಇಂತು ಬಲ್ಲಿದರೆಂಬವರ ಇನ್ನಾರುವ ಕಾಣೆ ನಿಮ್ಮ ತಪ್ಪಿಸಿ
ಕೂಡಲಚೆನ್ನಸಂಗಮದೇವಾ. ॥ ೫೮೨ ॥

೧೪೩೫

'ಬಸವ' ಎಂಬ ಮೂರಕ್ಷರ ಹೃದಯಕಮಲದಲ್ಲಿ ನೆಲೆಗೊಂಡಡೆ,
ಅಭೇದ್ಯ ಭೇದ್ಯವಾಯಿತ್ತು, ಅಸಾಧ್ಯ ಸಾಧ್ಯವಾಯಿತ್ತು.
ಇಂತು ಬಸವಣ್ಣನಿಂದ ಲೋಕಲೌಕಿಕದ ಕುಭಾಷೆಯ ಕಳೆದು,
ಲೋಕಾಚರಣೆಯನತಿಗಳೆದು ಭಕ್ತಿಭರವಪ್ಪುದು,
ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣನ ಕಾರುಣ್ಯದಿಂದ. ॥ ೫೮೩ ॥

೧೪೩೬

ಬಸವಣ್ಣನ ಶೃಂಗದಲ್ಲಿ ತುಂಬುರ ನಾರದರು,
ಬಸವಣ್ಣನ ಲಲಾಟದಲ್ಲಿ ವೀರಗಣಂಗಳು,
ಬಸವಣ್ಣನ ನಯನದಲ್ಲಿ ಸೂರ್ಯಚಂದ್ರರು,
ಬಸವಣ್ಣನ ಕರ್ಣದಲ್ಲಿ ಗಂಗೆವಾಳುಕಸಮರುದ್ರರು,
ಬಸವಣ್ಣನ ನಾಸಿಕದಲ್ಲಿ ವಾಯು, ಬಸವಣ್ಣನ ದಂತದಲ್ಲಿ ಭೃಂಗೀಶ್ವರದೇವರು,
ಬಸವಣ್ಣನ ಕೊರಳಲ್ಲಿ ಈರೇಳು ಭುವನಂಗಳು,
ಬಸವಣ್ಣನ ಬೆನ್ನ ಸುಳಿಯಲ್ಲಿ ಅಭಿನವ ಪಾರ್ವತೀ ಪರಮೇಶ್ವರರು,
ಬಸವಣ್ಣನ ಅಂಡದಲ್ಲಿ ಅಷ್ಟಷಷ್ಟಿ ತೀರ್ಥಂಗಳು,
ಒಸವಣ್ಣನ ಬಲದೊಡೆಯುಲ್ಲಿ ಅಜ, ಹರಿ, ಸರಸ್ವತಿ, ಪಂಚನದಿ, ಮಹಾಗಂಗೆ,
ಬಸವಣ್ಣನ ಮಣಿಪಾದದಲ್ಲಿ ದೇವಲೋಕದ ದೇವಗಣಂಗಳು,
ಬಸವಣ್ಣನ ಕಿರುಗೊಳಗಿನಲ್ಲಿ ಸಮಸ್ತಸಮುದ್ರಂಗಳು.
ಈ ಸಪ್ತಸಮುದ್ರಂಗಳೊಳಗಿಹ ಸಕಲ ಪ್ರಾಣಿಗಳಿಗೆ ಸಂಕೀರ್ಣತೆಯಾದೀತೆಂದು,
ವಾಲದಂಡದಲೆತ್ತಿ ತಡಿಗೆ ಸೇರಿಸಿದನು ನಮ್ಮ ಬಸವಣ್ಣನು–ಇದು ಕಾರಣ,
ನಾಗಲೋಕದ ನಾಗಗಣಂಗಳು ಕೊಂಬುದು ಬಸವಣ್ಣನ ಪ್ರಸಾದ.
ಮರ್ತ್ಯಲೋಕದ ಮಹಾಗಣಂಗಳು ಕೊಂಬುದು ಬಸವಣ್ಣನ ಪ್ರಸಾದ.
ದೇವಲೋಕದ ದೇವಗಣಂಗಳು ಕೊಂಬುದು ಬಸವಣ್ಣನ ಪ್ರಸಾದ.
ರುದ್ರಲೋಕದ ರುದ್ರಗಣಂಗಳು ಕೊಂಬುದು ಬಸವಣ್ಣನ ಪ್ರಸಾದ.–
ಇಂತು ನಮ್ಮ ಬಸವಣ್ಣನ ಪ್ರಸಾದವನುಂಡುಟ್ಟು ಕೊಂಡು ಕೊಟ್ಟು
ಅನ್ಯದೈವಂಗಳ ಹೊಗಳುವ ಕುನ್ನಿಗಳನೇನೆಂಬೆ
ಕೂಡಲಚೆನ್ನಸಂಗಮದೇವಾ. ॥ ೫೮೪ ॥

೧೪೩೭

ಬಸವಣ್ಣನುದ್ಧರಿಸಿದ ಭಕ್ತಿವಿಡಿದು, ಅಂಗದ ಮೇಲೆ ಲಿಂಗವ ಧರಿಸಿ
ಗುರುಲಿಂಗಜಂಗಮವನಾರಾಧಿಸಿ, ಅವರೊಕ್ಕುದ ಕೊಂಡು ಮುಕ್ತರಾಗಲರಿಯದೆ,
ಬೇರೆ ಇದಿರಿಟ್ಟು ನಂದಿ ವೀರಭದ್ರ ಮತ್ತೆ ಕೆಲವು ಲಿಂಗಂಗಳೆಂದು ಪೂಜಿಸುವ
ಲಿಂಗದ್ರೋಹಿಯ ಮುಖವ ನೋಡಲಾಗದು. ಅದೇನು ಕಾರಣವೆಂದಡೆ:
ಗಂಡನುಳ್ಳ ಸತಿ ಅನ್ಯಪುರುಷನನಪ್ಪುವಲ್ಲಿ ಪಾಣ್ಬರಪ್ಪರಲ್ಲದೆ ಸತ್ಯರಪ್ಪರೆ?
ಅದು ಕಾರಣ-ಲಿಂಗವಂತನ ಕೈಯಲ್ಲಿ ಪೂಜಿಸಿಕೊಂಬ ಅನ್ಯಲಿಂಗಂಗಳೆಲ್ಲವು
ಹಾದರಕ್ಕೆ ಹೊಕ್ಕ ಹೊಲೆಗೆಟ್ಟವಪ್ಪುವಲ್ಲದೆ ಅವು ಲಿಂಗಂಗಳಲ್ಲ.
ತನ್ನ ಲಿಂಗದಲ್ಲಿ ಅವಿಶ್ವಾಸವ ಮಾಡಿ ಅನ್ಯಲಿಂಗಂಗಳ ಭಜಿಸುವಲ್ಲಿ
ಆ ಲಿಂಗವಂತ ಕರ್ಪ ಕಚ್ಚಿದ ಶ್ವಾನನಪ್ಪನಲ್ಲದೆ ಭಕ್ತನಲ್ಲ. ಅದೆಂತೆಂದಡೆ:
ಲಿಂಗದೇಹೀ ಶಿವಾತ್ಮೀಚ ಸ್ವಗೃಹಂ ಪ್ರತಿಪೂಜನಾತ್ (ಪೂಜನಂ?) ।
ಉಭಯಂ ಪಾಣ್ಬಸಂಬಂಧಂ ಶ್ವಾನ ಶ್ವಪಚಪಾದುಕೈಃ ॥-ಎಂದುದಾಗಿ
ಇದುಕಾರಣ, ಈ ಉಭಯವನು ಕೂಡಲಚೆನ್ನಸಂಗಯ್ಯ ಛಿದ್ರಿಸಿ
ಚಿನಿಖಂಡವನಾಯ್ದು ದಿಗ್ಬಲಿ ಕೊಟ್ಟು ಅಘೋರ ನರಕದಲ್ಲಿಕ್ಕುವನು. ॥ ೫೮೫ ॥

೧೪೩೮

ಬಸವಣ್ಣ ಮರ್ತ್ಯಲೋಕಕ್ಕೆ ಬಂದು ಮಹಾಮನೆಯ ಕಟ್ಟಿ,
ಭಕ್ತಿಜ್ಞಾನವೆಂಬ ಜ್ಯೋತಿಯನೆತ್ತಿ ತೋರಲು
ಸುಜ್ಞಾನವೆಂಬ ಪ್ರಭೆ ಪಸರಿಸಿತಯ್ಯಾ ಜಗದೊಳಗೆ.
ಬೆಳಗಿನೊಳು ತಿಳಿದು ನೋಡಿ ಪರೆದಿದ್ದ ಶಿವಗಣಂಗಳೆಲ್ಲ ನೆರೆದು ಕೂಡಿತಯ್ಯಾ.
ಕೂಡಲಚೆನ್ನಸಂಗಮದೇವಾ ನಿಮ್ಮ ಶರಣ ಬಸವಣ್ಣನ ಕೃಪೆಯಿಂದ
ಪ್ರಭುದೇವರ ನಿಜವನರಿದು ನಿಶ್ಚಿಂತರಾದರಯ್ಯಾ ಶಿವಗಣಂಗಳೆಲ್ಲರು. ॥ ೫೮೬ ॥

೧೪೩೯

ಬಸವಣ್ಣ ಮಾಡುವ ಮಾಟವನಾರು ಬಲ್ಲರಯ್ಯಾ?
ಲಿಂಗವಿಲ್ಲದೆ ಮಾಡಿದನಯ್ಯಾ ಬಸವಣ್ಣನು;
ಜಂಗಮವಿಲ್ಲದೆ ನೀಡಿದನಯ್ಯಾ ಬಸವಣ್ಣನು;
ಪ್ರಸಾದವಿಲ್ಲದೆ ರುಚಿಸಿದನಯ್ಯಾ ಬಸವಣ್ಣನು.
ಈ ಮಹಕ್ಕೆ ಬಂದು ಅನುಭಾವವ ಮಾಡಿ
ಆಡಿದನಯ್ಯಾ ಬಸವಣ್ಣನು.
ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮದ ಸಂಗ

ಇಂದಿನಲಿ ಅಗಲಿತ್ತು ಕಾಣಾ
ಕೂಡಲಚೆನ್ನಸಂಗಮದೇವಾ ನಿಮ್ಮ ಶರಣ ಬಸವಣ್ಣಂಗೆ. ॥ ೫೮೭ ॥

೧೪೪೦

ಬಸವೇಶ್ವರದೇವರು ತೃಣಪುರುಷನ ಮಾಡಿ
'ಮೀಮಾಂಸಕಂಗೆ ಉತ್ತರವ ಕೊಡು ಹೋಗು' ಎನಲು
ಆ ತೃಣ ಪುರುಷನು ಮಹಾಪ್ರಸಾದವೆಂದು ಕೈಕೊಂಡು,
ಮೀಮಾಂಸಕಂಗೆ ಉತ್ತರವ ಕೊಟ್ಟು
ಶಿವವಿರಹಿತವಾದ ಕಾಳ್ಪುರಾಣವೆಲ್ಲವ ಬಯಲು ಮಾಡಿ ನುಡಿಯಲು
ಆತಂಗೆ ಶಿವಜ್ಞಾನ ತಲೆದೋರಿ, ಆ ಬಸವೇಶಂಗೆ ವಂದಿಸಂಗೈದು
ಉಪದೇಶವ ಮಾಡಬೇಕೆನಲು, ಆತಂಗೆ ವೀರಶೈವದೀಕ್ಷೆಯ ಮಾಡಿ
ಷಟ್‌ಸ್ಥಲಮಾರ್ಗ ಕ್ರೀಯ ನಿರೂಪಿಸಿ ತಿಳುಹಲು,
'ಎಲೆ ಬಸವೇಶ್ವರಾ ಜಂಗಮದ ಪಾದತೀರ್ಥಪ್ರಸಾದವ
ಲಿಂಗಕ್ಕೆ ಕೊಟ್ಟುಕೊಳಬಹುದೆ?' ಎಂದು ಕೇಳಲು,
ಕೇಳೈ ಮೀಮಾಂಸಕಾ, ಪೂರ್ವದಲ್ಲಿ ಪರಮೇಶ್ವರನು
ಸಮಸ್ತ ದೇವತೆಗಳ ಒಡ್ಡೋಲಗದಲ್ಲಿರಲು ಸೂತ್ರಿಕನೆಂಬ ಶೈವಾಚಾರ್ಯನು
"ಎಲೆ ಪರಮೇಶ್ವರಾ ಜಂಗಮದ ಪಾದತೀರ್ಥಪ್ರಸಾದವ
ಲಿಂಗಕ್ಕೆ ಕೊಡಬಹುದೆ?" ಎನಲು
'ಎಲೆ ಸೂತ್ರಿಕನೆ ಕೇಳು, ನಾನೆಂದಡೆಯೂ ಜಂಗಮವೆಂದಡೆಯೂ ಬೇರಿಲ್ಲ
ಅದು ಕಾರಣ ಜಂಗಮವೆ ಅಧಿಕ. ನೀನಾ ಜಂಗಮಲಿಂಗದ ಪಾದತೀರ್ಥಪ್ರಸಾದವ
ಲಿಂಗಕ್ಕೆ ಕೊಡಬಾರದೆಂದು ನಿಂದಿಸಿ ನುಡಿದ ವಾಗ್ದೋಷಕ್ಕೆ ಮರ್ತ್ಯಕ್ಕೆ ಹೋಗಿ
ಹೊಲೆಯನ ಮನೆಯ ಸೂಕರನ ಬಸುರಲ್ಲಿ ಹುಟ್ಟಿ
ಹದಿನೆಂಟು ಜಾತಿಯ ಅಶುದ್ಧವನು ನಾಲಗೆಯಲಿ ಭುಂಜಿಸಿ
ನರಕಜೀವಿಯಾಗಿರು" ಎಂದುದೆ ಸಾಕ್ಷಿ.
ಇದನರಿದು ಮತ್ತೆ ಜಂಗಮದ ಪಾದತೀರ್ಥಪ್ರಸಾದವ
ಲಿಂಗಕ್ಕೆ ಕೊಟ್ಟು ಕೊಳಲಾಗದೆಂಬ ಪಂಚಮಹಾಪಾತಕರ ಮಾತ ಕೇಳಲಾಗದು.
ಅದೆಂತೆಂದಡೆ: ವೀರಾಗಮದಲ್ಲಿ,

ಜಂಗಮಾನಾಮಹಂ ಪ್ರಾಣೋ ಮಮ ಪ್ರಾಣೋಹಿ ಜಂಗಮಃ।
ಜಂಗಮೇನ ತ್ವಹಂ ಪೂಜ್ಯೋ ಮಯಾ ಪೂಜ್ಯೋಹಿ ಜಂಗಮಃ
ಪರಸ್ಪರಮಭೇದತ್ವಾಜ್ಜಂಗಮಸ್ಯ ಮಮಾಪಿ ಚ।
ಪಾದೋದಕ ಪ್ರಸಾದಾಭ್ಯಾಂ ವಿನಾ ತೃಪ್ತಿರ್ನಜಾಯತೇ॥

ಇಂತೆಂಬ ಶಿವನ ವಾಕ್ಯವನರಿದು, ಜಂಗಮದ ಪಾದತೀರ್ಥವ
ಲಿಂಗಕ್ಕೆ ಮಜ್ಜನಕ್ಕೆರೆದು ಪ್ರಸಾದವ ಲಿಂಗಕ್ಕೆ ನೈವೇದ್ಯವ ಸಮರ್ಪಿಸಿ

ಭೋಗಿಸುವಾತನೆ ಸದ್ಭಕ್ತ, ಆತನೆ ಮಾಹೇಶ್ವರ, ಆತನೆ ಪ್ರಸಾದಿ,
ಆತನೆ ಪ್ರಾಣಲಿಂಗಿ, ಆತನೆ ಶರಣ, ಆತನೆ ಐಕ್ಯನು.
ಇಂತಪ್ಪ ಷಟ್‌ಸ್ಥಲಬ್ರಹ್ಮಿಗೆ ನಮೋ ನಮೋ ಎಂಬೆ.
ಇಂತಲ್ಲದೆ ಜಂಗಮದ ಪಾದತೀರ್ಥಪ್ರಸಾದರಹಿತನಾಗಿ
ಆವನಾನೊಬ್ಬನು ತನ್ನ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ
ಷೋಡಶೋಪಚಾರಕ್ರೀಯಿಂದ ಪೂಜೆಯ ಮಾಡುವಲ್ಲಿ
ಅವನು ಶುದ್ಧಶೈವನು, ಅವನಿಗೆ ಮುಕ್ತಿಯಿಲ್ಲ ಕಾಣಾ
ಕೂಡಲಸಂಗಮದೇವಾ. || ೫೮೮ ||

೧೪೪೧

ಬಹಿರಂಗದಲ್ಲಿ ಮಡಿವಾಳಯ್ಯನ ಒಳಕೊಂಡು,
ಅಂತರಂಗದಲ್ಲಿ ಪ್ರಭುದೇವರನೊಳಕೊಂಡು,
ಈ ಉಭಯಸಂಗದಲ್ಲಿ ನಿಜೈಕ್ಯನಾಗಿದ್ದನು.
ಪ್ರಸಾದದಲ್ಲಿ ಪರಮಾನಂದ ಸುಖಿ, ಅರಿವಿನಲ್ಲಿ ಕುರುಹಳಿದ ನಿಲವು.
ಕೂಡಲಚೆನ್ನಸಂಗಮದೇವಾ, ಬಸವಣ್ಣನ ಶ್ರೀಪಾದಕ್ಕೆ
ನಮೋ ನಮೋ ಎನುತಿರ್ದೆನು. || ೫೮೯ ||

೧೪೪೨

ಬಾಗಿಲ ಕಾಯ್ದಿರ್ದ ಗೊಲ್ಲಂಗೆ ವೆಚ್ಚಕ್ಕೆ ಒಡೆತನವುಂಟೆ ಅಯ್ಯಾ?
ಸೂತ್ರದ ಬೊಂಬೆಗೆ ಪ್ರಾಣವುಂಟೆ ಆಡಿಸುವ ಜಾತಿ ಉತ್ತಮಂಗಲ್ಲದೆ?
ಎನ್ನ ಭಾವಕ್ಕೆ ಮನೋಮೂರ್ತಿಯಾಗಿ, ಕೂಡಲಚೆನ್ನಸಂಗಮದೇವರಲ್ಲಿ
ಪ್ರಭುದೇವರ ಸುಳುಹು ಅಗಮ್ಯವಾಗಿತ್ತು. || ೫೯೦ ||

೧೪೪೩

ಬಾಯಿಗೆ ಬಂದಂತೆ ಬಗುಳಾಟ,
ಹಸಿದಾಗ ಲಿಂಗಕ್ಕೆ ಸಿತಾಳಪತ್ರೆಯುಂ ಕೊಟ್ಟು,
ವಿಭೂತಿಯನಿಟ್ಟು, ರುದ್ರಾಕ್ಷಿಯ ತೊಟ್ಟು,
ಕಂಥೆ ಬೊಂತೆಯ ಧರಿಸಿ ಪರನಿಂದೆಯಂ ಮಾಡಿ,
ರುದ್ರನ ಮನೆಯ ಛತ್ರದಲುಂಡುಂಡು ಕೆಡೆವಾತನು
ವೇಶಿಯ ಪುತ್ರ ಕಾಣಾ ಕೂಡಲಚೆನ್ನಸಂಗಮದೇವಾ. || ೫೯೧ ||

೧೪೪೪

ಬೀಜದಿಂದಾಯಿತ್ತು ಅಂಕುರವೆಂದೆಂಬರು,
ಆ ಬೀಜಕ್ಕೆ ಅಂಕುರವೆ ಪ್ರಾಣವೆಂದರಿಯರು.
ಲಿಂಗದಿಂದಾಯಿತ್ತು ಜಂಗಮವೆಂದೆಂಬರು
ಆ ಲಿಂಗಕ್ಕೆ ಜಂಗಮವೆ ಪ್ರಾಣವೆಂದರಿಯರು, ಕಾಣಾ
ಕೂಡಲಚೆನ್ನಸಂಗಮದೇವಾ. ॥ ೫೯೨ ॥

೧೪೪೫

ಬೆನ್ನಲ್ಲಿ ಬಸವಣ್ಣನ ತೆಗೆದ, ಹೊಟ್ಟೆಯಲ್ಲಿ ಎನ್ನ ತೆಗೆದ,
ಬ್ರಹ್ಮರಂಧ್ರದಲ್ಲಿ ಅಲ್ಲಮನ ತೆಗೆದ,
ಸಂಗನೆ ಮಡಿವಾಳನೋ: ಮಡಿವಾಳನೆ ಸಂಗನೊ,
ಎಂದು ನುಡೆಯಲಮ್ಮೆನು.
ಇದು ಕಾರಣ–ಕೂಡಲಚೆನ್ನಸಂಗಯ್ಯನಲ್ಲಿ
ಮಡಿವಾಳಸಾಹಿತ್ಯ ನಮ್ಮ ಬಸವಣ್ಣಂಗೆ. ॥ ೫೯೩ ॥

೧೪೪೬

ಬೆಲ್ಲದ ನೀರೆರೆದಡೇನು, ಬೇವು ಸಿಹಿಯಪ್ಪುದೆ?
ಕತ್ತುರಿಯ ಲೇಪವಿತ್ತಡೇನು, ಸೀರುಳ್ಳಿಯ ದುರ್ಗಂಧ ದೂರಪ್ಪುದೆ?
ಕಸುಗಾಯ ಹಿಸುಕಿದಡೇನು, ಹಣ್ಣಿಗೆ ಹವಣಪ್ಪುದೆ?
ಕಿರಿಯ ಮನದ ಮಾನವಂಗೆ ಬಹಿರಂಗದ ಬರಿಯ ಸಂಸ್ಕಾರವಾದಡೇನು,
ಭವಿಯಾಗಿಪ್ಪನಲ್ಲದೆ ಭಕ್ತನಪ್ಪನೆ ಕೂಡಲಚೆನ್ನಸಂಗಮದೇವಾ
ಪೂರ್ವಗುಣವಳಿದು ಪುನರ್ಜಾತನಾಗದನ್ನಕ್ಕ? ॥ ೫೯೪ ॥

೧೪೪೭

ಬೆಳಗಿನೊಳಗಣ ಮಹಾಬೆಳಗು!
ಶಿವ ಶಿವಾ! ಪರಮಾಶ್ರಯವೆ ತಾನಾಗಿ
ಶತಪತ್ರಕಮಲ ಕರ್ಣಿಕಾಮಧ್ಯದಲ್ಲಿ ಸ್ವತಃ ಸಿದ್ಧನಾಗಿಪ್ಪ
ನಮ್ಮ ಕೂಡಲಚೆನ್ನಸಂಗಮದೇವಾ. ॥ ೫೯೫ ॥

೧೪೪೮

ಬೇಕು ಬೇಡೆನ್ನದ ಪ್ರಸಾದಿಯ ಕಾಯ, ಲಿಂಗಾರ್ಪಿತ,
ಆ ಅರ್ಪಿತವೆ ಪ್ರಸಾದ, ಅದೆ ಮತ್ತೆ ಮತ್ತೆ ಅರ್ಪಿತ,

ದರ್ಶನದಿಂದಾಯಿತ್ತು ಸ್ಪರ್ಶನದಿಂದಾಯಿತ್ತು.
ಅರ್ಪಿಸಿ, ಸೋಂಕನರ್ಪಿಸಲರಿಯದಿರ್ದಡದು ಭ್ರಾಂತು.
ಕೂಡಲಚೆನ್ನಸಂಗನ ಪ್ರಸಾದಿಯ ಪ್ರಸಾದವನತಿಗಳೆವಡೆ
ಮುಂದೆ ಅದಕ್ಕೆಂತೊ? || ೫೯೬ ||

೧೪೪೯

ಬೇಕೆನಲಾಗದು ಶರಣಂಗೆ, ಬೇಡೆನಲಾಗದು ಶರಣಂಗೆ,
ಲಿಂಗವಶದಿಂದ ಬಂದುದ ಪತಿಕರಿಸದಿರ್ದಡೆ
ಮಹಾಘನವು ಅವಗವಿಸದು ನೋಡಾ.
ಅದೆಂತೆಂದಡೆ:
ಅವ್ರತ ಸುವ್ರತಶ್ಚೈವ ವೇಶ್ಯಾ ದಿವ್ಯಾನ್ನಭೂಷಣಂ|
ಅಕಲ್ಪಿತಂ ಚ ಭೋಗಾನಾಂ ಸರ್ವಂ ಲಿಂಗಸ್ಯ ಪ್ರೇರಣಂ|| ಎಂದುದಾಗಿ
ಕೂಡಲಚೆನ್ನಸಂಗಯ್ಯಾ ನಿಮ್ಮ ಶರಣರ
ಪರದ್ವಾರಿಗಳೆಂದು ನುಡಿದವರಿಗೆ ನಾಯಕನರಕವಯ್ಯಾ. || ೫೯೭ ||

೧೪೫೦

ಬೇಕೆಂಬುದು ಕಾಯಗುಣ, ಬೇಡವೆಂಬುದು ವೈರಾಗ್ಯಗುಣ.
ಬೇಕೆಂಬುದು ಇನಿತಿಲ್ಲ, ಬೇಡವೆಂಬುದು ಇನಿತಿಲ್ಲ.
ಈ ಉಭಯವ ಅತಿಗಳೆದು ಭೋಗಿಸಬಲ್ಲಡೆ
ಕೂಡಲಚೆನ್ನಸಂಗಮದೇವಾ, ನಿಮ್ಮ ಶರಣನೆಂಬೆ. || ೫೯೮ ||

೧೪೫೧

ಬೇಡವೊ ಇಲಿಚಯ್ಯಾ!
ಮೊನ್ನೆ ಬಂದು ನಮ್ಮ ಶಿವದಾರವ ಕಡಿದೆ,
ಇಂದು ಬಂದು ನಮ್ಮ ವಸ್ತ್ರವ ಕಡಿದೆ.
ಬೇಡವೊ ಇಲಿಚಯ್ಯಾ!
ನಿನಗಂಜರು ನಿನ್ನ ಗಣಪತಿಗಂಜರು;
ಕೂಡಲಚೆನ್ನಸಂಗನ ಶರಣರು ಕಂಡಡೆ,
ನಿನ್ನ ಹಲ್ಲ ಕಳೆವರು, ಹಂತವ ಮುರಿವರು. || ೫೯೯ ||

೧೪೫೨

ಬೇಡುವಾತ ಕರ್ತನಲ್ಲ, ಮಾಡುವಾತ ಭಕ್ತನಲ್ಲ.
ಬೇಡಬೇಕು ನೋಯದಂತೆ, ಮಾಡಬೇಕು ಮರುಗದಂತೆ.
ಇದು ಕಾರಣ–ಕೂಡಲಚೆನ್ನಸಂಗಯ್ಯಾ
ಈ ಉಭಯದ ನೋವು ಲಿಂಗದ್ರೋಹ. ||೬೦೦||

೧೪೫೩

ಬೇಡುವಾತ ಜಂಗಮನಲ್ಲ, ಬೇಡಿಸಿಕೊಂಬಾತ ಭಕ್ತನಲ್ಲ,
ಬೇಡದೆ ಆ ಭಕ್ತ ಮಾಡಿದ ಮಾಟವ ಪರಿಣಾಮಿಸಬಲ್ಲಡೆ ಜಂಗಮ.
ಬೇಡಿಸಿಕೊಳ್ಳದೆ ಆ ಜಂಗಮದ ಇಂಗಿತವನರಿದು
ಅವನ ಮನದಿಚ್ಛೆಯ ಸಲಿಸಬಲ್ಲಡೆ ಆತನೆ ಪರಮಭಕ್ತ.
ಆ ಭಕ್ತ ನನ್ನದು ನಾನೆಂದು ನುಡಿದಡೆ
ನಾಯ ಮಾಂಸ, ಸತ್ತ ಹೆಣನ ಮಲವು!
ಇದು ಕಾರಣ–ನಿಮ್ಮ ಕೂಡಲಚೆನ್ನಸಂಗಯ್ಯನಲ್ಲಿ
ಬೇಡಿಸಿಕೊಳ್ಳದೆ ಮಾಡುವ ಭಕ್ತನುಂಟಾದಡೆಯೂ
ಬೇಡದೆ ಮಾಡಿಸಿಕೊಂಬುವ ಜಂಗಮಪೂರ್ವವಯ್ಯಾ. ||೬೦೦||

೧೪೫೪

ಬೊಬ್ಬೆಯ ಬಾಯಿ ಬಾಚಹ ಮುಂಡೆ, ಮೀರಿದ ಶರಣಂಗಲ್ಲದೆ ಇಲ್ಲ.
ಓಡಿನ ಊಟ, ಕಾಡಿನಲ್ಲಿ ಇಕ್ಕೆ, ಮೀರಿದ ಶರಣಂಗಲ್ಲದೆ ಇಲ್ಲ.
ವಿರಕ್ತೋ ವಾಥ ಯುಕ್ತೋ ವಾ ಸಸ್ತ್ರ್ಯಾದಿವಿಷಯೇಷ್ವಪಿ।
ಪಾಪೈರ್ನೈವ ಪ್ರಲಿಪ್ಯೇತ ಪದ್ಮಪತ್ರಮಿವಾಂಭಸಾ॥ ಎಂದುದಾಗಿ,
ಕೂಡಲಚೆನ್ನಸಂಗಮದೇವಾ,
ನಿಮ್ಮ ಶರಣರು ಮಲೆಯೊಳಗಿರ್ದಡೇನು? ಪೊಲೆಯೊಳಗಿರ್ದಡೇನು? ||೬೦೨||

೧೪೫೫

ಬ್ರಹ್ಮ ತಲೆದೋರದಂದು, ವಿಷ್ಣು ಉದಯಿಸದಂದು
ರುದ್ರನವತರಿಸದಂದು, ಈರೇಳುಭುವನ ನೆಲೆಗೊಳ್ಳದಂದು
ಸಪ್ತಸಾಗರಂಗಳುಕ್ಕಿ ಹರಿಯದಂದು, ಅಮೃತಮಥನವಿಲ್ಲದಂದು,
ಮೂವತ್ತುಮೂರುಕೋಟಿ ದೇವರ್ಕಳಿಲ್ಲದಂದು
ಮುನ್ನಾರು ಬಲ್ಲರು? ಮುನ್ನಾರು ಬಲ್ಲರು?

ಆದಿಮೂಲಸ್ವಾಮಿ ಕೂಡಲಚೆನ್ನಸಂಗಯ್ಯ
ಹೆಮ್ಮೆಲ್ಲದಿರ್ದನೆಂದು! || ೬೦೩ ||

### ೧೪೫೭

ಬ್ರಹ್ಮನನಾರಾಧಿಸಿ ನಿರ್ಮೂಲವಾದರು,
ವಿಷ್ಣುವನಾರಾಧಿಸಿ ಭವಭವಕ್ಕೆ ಬಂದರು,
ಭೈರವನನಾರಾಧಿಸಿ ಬಾಹಿರರಾದರಯ್ಯಾ,
ಮೈಲಾರನನಾರಾಧಿಸಿ ಕುರುಳು ಬೆರಳ ಕಡಿಸಿಕೊಂಡು
ನಾಯಾಗಿ ಬಗಳುತ್ತಿಪ್ಪರು,
ಜಿನನನಾರಾಧಿಸಿ ಲಜ್ಜೆ ನಾಚಿಕೆವೋದರು.
ನಮ್ಮ ಕೂಡಲಚೆನ್ನಸಂಗಯ್ಯನನಾರಾಧಿಸಿ
ಭಕ್ತರೆನಿಸಿಕೊಂಡರು ನೋಡಯ್ಯಾ. || ೬೦೪ ||

### ೧೪೫೮

ಬ್ರಹ್ಮ ನಿಮ್ಮ ಬಲ್ಲಡೆ ನಿರ್ಮಾಲ್ಯವಹನೆ?
ವಿಷ್ಣು ನಿಮ್ಮ ಬಲ್ಲಡೆ ಭುಜವ ಸುಡಿಸಿಕೊಂಬನೆ?
ಶ್ರವಣ ನಿಮ್ಮ ಬಲ್ಲಡೆ ಭತ್ತಲೆಯಾಗಿ ತಲೆಯ ತರಿಸಿಕೊಂಬನೆ?
ಕೃತಯುಗದಲ್ಲಿ ಶಿವನ ಹೊಗಳುವ ವೇದವನೋದಿ
ಗಜಯಾಗವಮಾಡಿ ಆನೆಯ ತಿನ್ನ ಹೇಳಿತ್ತೆ ನಿಮ್ಮ ವೇದ?
ತ್ರೇತಾಯುಗದಲ್ಲಿ ಶಿವನ ಹೊಗಳುವ ವೇದವನೋದಿ
ಅಶ್ವಯಾಗವ ಮಾಡಿ ಕುದುರೆಯ ಕೊಂದು ತಿನ್ನ ಹೇಳಿತ್ತೆ ನಿಮ್ಮ ವೇದ?
ದ್ವಾಪರಯುಗದಲ್ಲಿ ಶಿವನ ಹೊಗಳುವ ವೇದವನೋದಿ
ಮಹಿಷಹೋಮವ ಮಾಡಿ ಕೋಣನ ಕೊಂದು ತಿನ್ನ ಹೇಳಿತ್ತೆ ನಿಮ್ಮ ವೇದ?
ಕಲಿಯುಗದಲ್ಲಿ ಶಿವನ ಹೊಗಳುವ ವೇದವನೋದಿ
ಅಜಯಾಗವ ಮಾಡಿ ಹೋತನ ಕೊಂದು ತಿನ್ನ ಹೇಳಿತ್ತೆ ನಿಮ್ಮ ವೇದ?
ಬ್ರಾಹ್ಮಣನೆ ದೈವವೆಂದಾರಾಧಿಸಿ ಗೌತಮ ಗೋಹಂತ್ಯವಾದುದಿಲ್ಲವೆ?
ಬ್ರಾಹ್ಮಣನೆ ದೈವವೆಂದಾರಾಧಿಸಿ ಪಂಚಪಾಂಡವರು ದೇಶಭ್ರಷ್ಟರಾಗರೆ?
ಬ್ರಾಹ್ಮಣನೆ ದೈವವೆಂದಾರಾಧಿಸಿ ಹರಿಶ್ಚಂದ್ರ ಚಂಡಾಲಗೆ ಮಾರಿಸಿಕೊಳ್ಳನೆ?
ಬ್ರಾಹ್ಮಣನೆ ದೈವವೆಂದಾರಾಧಿಸಿ ಬಲಿಚಕ್ರವರ್ತಿ ಬಂಧನಕ್ಕೊಳಗಾಗನೆ?
ಬ್ರಾಹ್ಮಣನೆ ದೈವವೆಂದಾರಾಧಿಸಿ ಮುಕ್ತಿಗ ಸಂದವರಿಲ್ಲ.
ಬಲ್ಲಡೆ ನೀವು ಹೇಳಿರೊ, ಅರಿಯದಿದ್ದರೆ ನೀವು ಕೇಳಿರೊ:
ನಮ್ಮ ಜಂಗಮಲಿಂಗವ ದೈವವೆಂದಾರಾಧಿಸಿ,
ಚಾಪೂರ ಬೊಮ್ಮಯ್ಯಗಳು ಕಲ್ಲ ಸಂದಿಗೆ ಕಬ್ಬು ಮೇಯಿಸಿದ್ದಿಲ್ಲವೆ?

ನಮ್ಮ ಜಂಗಮಲಿಂಗವ ದೈವವೆಂದಾರಾಧಿಸಿ
ಗೊಬ್ಬೂರ ಬಿಬ್ಬಿಬಾಚಯ್ಯಗಳು ಪ್ರಸಾದದಿಂದ ಗೊಬ್ಬೂರ ಸುಟ್ಟುದಿಲ್ಲವೆ?
ನಮ್ಮ ಜಂಗಮಲಿಂಗವ ದೈವವೆಂದಾರಾಧಿಸಿ
ಶಂಕರ ದಾಸಿಮಯ್ಯಗಳು ಸರ್ವಭೂತಂಗಳ ಕೈಯಲ್ಲಿ
ಕೊಟ್ಟಣವ ಕುಟ್ಟಿಸಲಿಲ್ಲವೆ?
ನಮ್ಮ ಜಂಗಮಲಿಂಗವ ದೈವವೆಂದಾರಾಧಿಸಿ
ಹಾವಿನಹಾಳ ಕಲ್ಲಯ್ಯಂಗಳು ಶ್ವಾನನ ಬಾಯಿಂದ ವೇದವನೋದಿಸಲಿಲ್ಲವೆ?
ನಮ್ಮ ಜಂಗಮಲಿಂಗವ ದೈವವೆಂದಾರಾಧಿಸಿ
ಸಿಂಧುಬಲ್ಲಾಳ ಸ್ವಯಲಿಂಗಿಯಾಗಲಿಲ್ಲವೆ?
ಅಯ್ಯಾ ನಮ್ಮ ಜಂಗಮಲಿಂಗವ ದೈವವೆಂದಾರಾಧಿಸಿ
ಸಿರಿಯಾಳಸೆಟ್ಟಿ ಕಂಚಿಪುರವ ಕೈಲಾಸಕ್ಕೆ ಕೊಂಡೊಯ್ಯಲಿಲ್ಲವೆ?
ಅಯ್ಯಾ ನಮ್ಮ ಜಂಗಮಲಿಂಗವ ದೈವವೆಂದಾರಾಧಿಸಿ
ಮುಂದೆ ನುತಿಸಿ ಹಿಂದೆ ಆಡಿಕೊಂಬ ಪರವಾದಿ ಹೊಲೆಯರ ಬಾಯಲ್ಲಿ
ನಮ್ಮ ಪಡಿಹಾರಿ ಉತ್ತಣ್ಣಗಳ ಎಡದ ಪಾವರಕ್ಷೆಯ
ಅಂಗುಳವ ಮೆಟ್ಟಿಕ್ಕುವನೆಂದ ಕೂಡಲಚೆನ್ನಸಂಗಮದೇವ. || ೭೦೫ ||

೧೪೫೮

"ಬ್ರಹ್ಮಾಂಡಚ್ಛತ್ರದಂಡಃ ಶತಧೃತಿಭವನಾಂಭೋರುಹೋ ನಾಲದಂಡಃ|
ಕ್ಷೋಣೀನೌಕೂಪದಂಡಃ ಕ್ಷರದಮರ ಸರಿತ್ಪಟ್ಟಿಕಾಕೇತುದಂಡಃ||
ಜ್ಯೋತಿಶ್ಚಕ್ರಾಕ್ಷದಂಡಸ್ತ್ರಿಭುವನ ವಿಜಯಸ್ತಂಭದಂಡೋಽಂಘ್ರಿದಂಡಃ|
ಶ್ರೇಯಸ್ತ್ರೈವಿಕ್ರಮಸ್ತೇ ವಿದಧತು ವಿಬುಧದ್ವೇಷಿಣಾಂ ಕಾಲದಂಡಃ||"
ಧರೆಗೆ ತೊಂಬತ್ತೆಂಟುಸಾವಿರ ಯೋಜನದುದ್ದದಲು
ಸಿಡಿಲು ಮಿಂಚು ಮುಗಿಲುಗಳಿಹವು.
ಅದರಿಂದ ಮೇಲೆ ಒಂದುಲಕ್ಷ ಯೋಜನದುದ್ದದಲು ಬೃಹಸ್ಪತಿ ಇಹನು.
ಆ ಬೃಹಸ್ಪತಿಯಿಂದ ಮೇಲೆ ಮೂವತ್ತೆರಡುಲಕ್ಷ ಯೋಜನದುದ್ದದಲು
ಶುಕ್ರನಿಹನು.
ಆ ಶುಕ್ರನಿಂದ ಮೇಲೆ ಅರುವತ್ತುನಾಲ್ಕು(ಸಾವಿರ?) ಯೋಜನದುದ್ದದಲು
ಶನಿಯಿಹನು.
ಆ ಶನಿಯಿಂದ ಮೇಲೆ ಒಂದುಕೋಟಿ ಇಪ್ಪತ್ತೆಂಟುಲಕ್ಷ ಯೋಜನದುದ್ದದಲು
ಆದಿತ್ಯನಿಹನು.
ಆ ಆದಿತ್ಯನಿಂದ ಮೇಲೆ ಎರಡುಕೋಟಿಯುಂ ಐವತ್ತುಸಾವಿರ(ಐವತ್ತಾರು?)ಲಕ್ಷ
ಯೋಜನದುದ್ದದಲು ರಾಹುಕೇತುಗಳು ಪ್ರವರ್ತಿಸಿಕೊಂಡಿಹವು.
ಅಲ್ಲಿಂದ ಮೇಲೆ ಐದುಕೋಟಿಯುಂ ಪನ್ನೆರಡುಲಕ್ಷ ಯೋಜನದುದ್ದದಲು

ನಕ್ಷತ್ರವಿಹವು.
ಆ ನಕ್ಷತ್ರಗಳಿಂದ ಮೇಲೆ ಹತ್ತುಕೋಟಿಯುಂ ಇಪ್ಪತ್ತುನಾಲ್ಕು(ಲಕ್ಷ)
ಯೋಜನದುದ್ದದಲು ಸಕಲ ಮಹಾಋಷಿಗಳಿಹರು.
ಆ ಋಷಿಗಳಿಂದ ಮೇಲೆ ಇಪ್ಪತ್ತುಕೋಟಿಯುಂ ನಾಲ್ವತ್ತೆಂಟುಲಕ್ಷ
ಯೋಜನದುದ್ದದಲು ತ್ರಿವಿಧ ದೇವತೆಗಳಿಹರು.
ಆ ತ್ರಿವಿಧ ದೇವತೆಗಳಿಂದಂ ಮೇಲೆ ನಾಲ್ವತ್ತುಕೋಟಿಯುಂ ತೊಂಬತ್ತಾರುಲಕ್ಷ
ಯೋಜನದುದ್ದದಲು ದೇವರ್ಕಳಿಹರು.
ಆ ದೇವರ್ಕಳಿಂದಂ ಮೇಲೆ ಎಂಬತ್ತೊಂದುಕೋಟಿಯುಂ ತೊಂಬತ್ತೆರಡುಲಕ್ಷ
ಯೋಜನದುದ್ದದಲು ದ್ವಾದಶಾದಿತ್ಯರಿಹರು.
ಆ ದ್ವಾದಶಾದಿತ್ಯರಿಂದಂ ಮೇಲೆ ನೂರರುವತ್ತುಮೂರುಕೋಟಿಯುಂ
ಎಂಬತ್ತುನಾಲ್ಕುಲಕ್ಷ ಯೋಜನದುದ್ದದಲು ಮಹಾಸೇನರಿಹರು.
ಆ ಮಹಾಸೇನರಿಂದಂ ಮೇಲೆ ಮುನ್ನೂರಿಪ್ಪತ್ತೇಳುಕೋಟಿಯುಂ
ಅರವತ್ತೆಂಟುಲಕ್ಷ ಯೋಜನದುದ್ದದಲು ಕೃತರೆಂಬ ಮಹಾಮುನಿಗಳಿಹರು.
ಇಂತು-ಧರೆಯಿಂದಂ ಆಕಾಶ ಉಭಯಂ ಕೂಡಲು
ಆರುನೂರೈವತ್ತೈದು ಕೋಟಿ ಐದು ಲಕ್ಷ ತೊಂಬತ್ತೆಂಟು ಸಾವಿರ
ಯೋಜನದುದ್ದದಲು ಒಂದು ಮಹಾಲೋಕವಿಹುದು.
ಆ ಲೋಕದಿಂದ ಹದಿನಾಲ್ಕು ಲೋಕವುಂಟು. ಅವು ಎಲ್ಲಿಹವೆಂದಡೆ:
ಪಾತಾಳಲೋಕ ದೇವರ ಕಟಿಯಲ್ಲಿಹುದು,
ರಸಾತಳಲೋಕ ದೇವರ ಗುಹ್ಯದಲ್ಲಿಹುದು,
ತಳಾತಳಲೋಕ ಊರುವಿನಲ್ಲಿಹುದು,
ಸುತಳಲೋಕ ಜಾನುವಿನಲ್ಲಿಹುದು, ನಿತಳಲೋಕ ಜಂಘೆಯಲ್ಲಿಹುದು,
ವಿತಳಲೋಕ ಪಾದೋರ್ಧ್ವದಲ್ಲಿಹುದು, ಅತಳಲೋಕ ಪಾದತಳದಲ್ಲಿಹುದು.
ಅಲ್ಲಿಂದತ್ತ ಕೆಳಗುಳ್ಳ ಲೋಕವನಾತನೆ ಬಲ್ಲ.
ಭೂಲೋಕ ನಾಭಿಯಲ್ಲಿಹುದು, ಭುವರ್ಲೋಕ ಹೃದಯದಲ್ಲಿಹುದು,
ಸ್ವರ್ಲೋಕ ಉರೋಮಧ್ಯದಲ್ಲಿಹುದು, ಮಹರ್ಲೋಕ ಕಂಠದಲ್ಲಿಹುದು,
ಜನರ್ಲೋಕ ತಾಲವ್ಯದಲ್ಲಿಹುದು, ತಪರ್ಲೋಕ ಲಲಾಟದಲ್ಲಿಹುದು,
ಸತ್ಯಲೋಕ ಬ್ರಹ್ಮರಂಧ್ರದಲ್ಲಿಹುದು.
ಅಲ್ಲಿಂದತ್ತ ಮೇಲುಳ್ಳ ಲೋಕವನಾತನೆ ಬಲ್ಲ.
ಇಂತೀ ಈರೇಳು ಲೋಕವು ತಾನೆಯಾಗಿಪ್ಪ ಮಹಾಲಿಂಗವನ್ನು
ಅಡಗಿಸಿಹೆನೆಂಬ ಅತುಳಬಲ್ಲಿದರು ಕೆಲಬರುಂಟೆ?
ಅಡಗುವಸು ಮತ್ತೊಂದು ಪರಿಯಲ್ಲಿ, ಅದು ಹೇಂಗೆ?
ಅಡರಿ ಓಡಿಯುಲು ಬಹುದು ಭಕ್ತಿಯೆಂಬ ಭಾವದಲ್ಲಿ
ಸತ್ಯಸದಾಚಾರವನರಿದು ಪಾಪಕ್ಕೆ ನಿಲ್ಲದೆ ಕೋಪಕ್ಕೆ ಸಲ್ಲದೆ

ಮಾಯುವನುಣ್ಣದೆ ಮನದಲ್ಲಿ ಅಜ್ಞಾನವ ಬೆರಸವೆ
ಅಲ್ಲದುದನೆ ಬಿಟ್ಟು, ಬಲ್ಲುದನೆ ಲಿಂಗಾರ್ಚನೆಯೆಂದು
'ಓಂ' ಎಂಬ ಅಕ್ಷರವನೋದಿ ಅರಿತ ಬಳಿಕ
ಬಸುರಲ್ಲಿ ಬಂದಿಪ್ಪ, ಶಿರದಲ್ಲಿ ನಿಂದಿಪ್ಪ
ಅಂಗೈಯೊಳಗೆ ಅಪ್ರತಿಮನಾಗಿ (ಸಿಲ್ಕಿಪ್ಪ) ಕಾಣಾ
ಕೂಡಲಚೆನ್ನಸಂಗಮದೇವ. || ೬೦೬ ||

೧೪೫೯

ಬ್ರಾಹ್ಮಣದೇಹಿಕನಲ್ಲ, ಕ್ಷತ್ರಿಯದೇಹಿಕನಲ್ಲ,
ವೈಶ್ಯದೇಹಿಕನಲ್ಲ, ಶೂದ್ರದೇಹಿಕನಲ್ಲ,
ಭಕ್ತದೇಹಿಕ ದೇವನೆಂದು ಕೇಳಿಯೂ ಅರಿಯರು.
ಶ್ವಪಚನಾದಡೆಯೂ ಲಿಂಗಭಕ್ತನೇ ಕುಲಜನೆಂದುದು.
ಲೈಂಗ್ಯಪುರಾಣೇಃ
'ನ ಲಿಂಗೀ ಸರ್ವವೇದಜ್ಞೋ ಯಸ್ತು ಚಾಂಡಾಲವದ್ಭವೀ।
ಲಿಂಗಾರ್ಚಕಶ್ಚ ಶ್ವಪಚೋ ದ್ವಿಜಕೋಟಿ ವಿಶೇಷಿತಃ॥' –ಎಂದುದಾಗಿ,
ಅಂಗದ ಮೇಲೆ ಲಿಂಗವಿದ್ದ ಶ್ವಪಚನಾದಡೆಯೂ
ಆತನೆ ಸದ್ಬ್ರಾಹ್ಮಣ.
ಅಂಗವ ಮೇಲೆ ಶಿವಲಿಂಗವಿಲ್ಲದ ಬ್ರಾಹ್ಮಣರೊಂದುಕೋಟಿಯಾದಡೆಯೂ
ಶ್ವಪಚರಿಂದ ಕರಕಷ್ಟ ನೋಡಾ, ಕೂಡಲಚೆನ್ನಸಂಗಮದೇವಾ. || ೬೦೭ ||

೧೪೬೦

ಬ್ರಾಹ್ಮಣ ಭಕ್ತನಾದರೇನಯ್ಯಾ? ಸೂತಕಪಾತಕಂಗಳ ಬಿಡ.
ಕ್ಷತ್ರಿಯ ಭಕ್ತನಾದರೇನಯ್ಯ? ಕ್ರೋಧವ ಬಿಡ.
ವೈಶ್ಯ ಭಕ್ತನಾದರೇನಯ್ಯ? ಕಪಟವ ಬಿಡ.
ಶೂದ್ರ ಭಕ್ತನಾದರೇನಯ್ಯ? ಸ್ವಜಾತಿಯೆಂಬುವ ಬಿಡ.
ಇಂತೀ ಜಾತಿಡಂಭಕರ ಮೆಚ್ಚುವನೆ ಕೂಡಲಚೆನ್ನಸಂಗಮದೇವ? || ೬೦೮ ||

೧೪೬೧

ಬ್ರಹ್ಮಾಬ್ರಹ್ಮರಿಲ್ಲದಂದು, ವಿಷ್ಣು ಮಾಯಾಜಾಲವಿಲ್ಲದಂದು
ಸೃಷ್ಟಿ ಸೃಷ್ಟಿಯಿಲ್ಲದಂದು, ಕಾಳಿಂಗ ಕರೆಕಂತರಿಲ್ಲದಂದು,
ಉಮೆಯ ಕಲ್ಯಾಣವಿಲ್ಲದಂದು,
ದ್ವಾದಶಾದಿತ್ಯರಿಲ್ಲದಂದು, ನಂದಿಕೇಶ್ವರನಿಲ್ಲದಂದು
ಲಿಂಗಸ್ಥಲ ಜಂಗಮಸ್ಥಲ ಪ್ರಸಾದಿಸ್ಥಲವಿಲ್ಲದಂದು

ದೇಹಾಹಂಕಾರ ಪ್ರಕೃತಿಯಿಲ್ಲದಂದು,
ಕೂಡಲಚೆನ್ನಸಂಗಯ್ಯ ತಾನೆನ್ನದಿರ್ದನಂದು. ॥ ೬೦೯ ॥

೧೪೬೨

ಭಕ್ತಂಗಾದರೂ ಆಗಲಿ, ಜಂಗಮಕ್ಕಾದರೂ ಆಗಲಿ
[ಅನು]ಭಾವವೇ ಬೀಜ ಕಾಣಿರೇ! ಅನುಭಾವವೇ ಆಚಾರ ಕಾಣಿರೇ!
ಅನುಭಾವವನರಿಯದ ಭಕ್ತಿ ಎಳತಟಗೊಳಿಸಿತ್ತು ಸಯಿಧಾನದ ಕೇಡು.
ಒಮ್ಮನದ ಧರ್ಮಕ್ಕೆ ಒಕ್ಕಳದಕರ್ಮ.
ಅನುಭಾವವ ಮಾಡುವಲ್ಲಿಗೆ ಹೋಗಿ,
ದೀ[ರ್ಘ ದಂ]ಡ ನಮಸ್ಕಾರವಂ ಮಾಡಿ,
ವಿನಯಾರ್ಥದಲ್ಲಿ ಅನುಭಾವವ ಕೇಳದಿರ್ದಡೆ
ಅಘೋರ ನರಕದಲ್ಲಿಕ್ಕುವ ಕೂಡಲಚೆನ್ನಸಂಗಮದೇವ. ॥ ೬೧೦ ॥

೧೪೬೩

ಭಕ್ತಂಗೆ ಪೃಥ್ವಿಯೆ ಅಂಗ, ಆ ಅಂಗಕ್ಕೆ ಸುಚಿತ್ತವೆ ಹಸ್ತ,
ಆ ಹಸ್ತಕ್ಕೆ ಕರ್ಮಸಾದಾಖ್ಯ, ಆ ಸಾದಾಖ್ಯಕ್ಕೆ ಕ್ರಿಯಾಶಕ್ತಿ,
ಆ ಶಕ್ತಿಗೆ ಆಚಾರವೆ ಲಿಂಗ, ಆ ಲಿಂಗಕ್ಕೆ ನಿವೃತ್ತಿಯೆ ಕಲೆ,
ಆ ಕಲೆಗೆ ಘ್ರಾಣೇಂದ್ರಿಯವೆ ಮುಖ,
ಆ ಮುಖಕ್ಕೆ ಸುಪರಿಮಳದ್ರವ್ಯಂಗಳನು
ರುಚಿತೃಪ್ತಿಯನರಿದು ಸದ್ಭಕ್ತಿಯಿಂದರ್ಪಿಸಿ
ಸುಗಂಧಪ್ರಸಾದವ ಭೋಗಿಸಿ ಸುಖಿಸುತ್ತಿಹನು
ಕೂಡಲಚೆನ್ನಸಂಗಾ ನಿಮ್ಮ ಭಕ್ತನು. ॥ ೬೧೧ ॥

೧೪೬೪

ಭಕ್ತ ಜಂಗಮಕ್ಕೆ, ಲೆತ್ತ ಪಗಡೆ ಚದುರಂಗ ಜೂಜು ಕಳವು ಪಾಪ,
ಪರಿಹಾಸ ಸರಸ ವಿನೋದ ಕುತ್ಸಿತ ಕುಟಿಲ ಕುಹಕ ಅಟಮಟ
ಸಟೆ ಸಂಕಲ್ಪ ಉದಾಸೀನ ನಿರ್ದಯ ದಾಕ್ಷಿಣ್ಯ ದಾಸಿ ವೇಶಿ
ಪರಸತಿ ಪರಧನ ಪರದ್ರವ್ಯ ಭವಿಸಂಗ–ಇಷ್ಟುಳ್ಳನ್ನಕ್ಕ,
ಅವನು ನಾಯುಡಗು ನರಮಾಂಸ ಕ್ರಿಮಿಮಲ ಭುಂಜಕನು
ಸುರಾಪಾನಸೇವಕನಪ್ಪನಲ್ಲನೆ, ಭಕ್ತನಲ್ಲ, ಜಂಗಮನಲ್ಲ, ಅದೆಂತೆಂದಡೆ:
ಅಕ್ಷದೂತ ವಿನೋದಶ್ಚ ನೃತ್ಯಗೀತೇಷು ಮೋಹನಂ।
ಅಪಶಬ್ದ ಪ್ರಯೋಗಶ್ಚ ಜ್ಞಾನಹೀನ ಸಕಾರಣಂ॥
ತಸ್ಕರಂ ಪಾರದ್ವಾರಂಚ ಅನ್ಯದೈವಮುಪಾಸಕಂ।

ಅನೃತಂ ನಿಂದಕಶ್ಚೈವ ತಸ್ಯ ಚಂಡಾಲ ವಂಶಜಃ|| ಎಂದುದಾಗಿ
ಈತನು ಗುಣಾವಗುಣವನೊಡಗೂಡಿಕೊಂಡು ನಡೆದಡೆ
ಭಕ್ತ ಜಂಗಮವಲ್ಲ ಕಾಣಾ ಕೂಡಲಚೆನ್ನಸಂಗಮದೇವಾ. || ೬೧೨ ||

೧೪೬೫

ಭಕ್ತ ಜಂಗಮದ ಸಕೀಲಸಂಬಂಧವೆಂತಿಪ್ಪುದೆಂಬುದನಾರು ಬಲ್ಲರಯ್ಯಾ?
ಅದು ಉಪಮಾತೀತ!
ಭಕ್ತನೊಳಗೆ ಜಂಗಮವಡಗಿದಡೆ
ಭಕ್ತನಾಗಿ ಕ್ರಿಯಾನಿಷ್ಪತ್ತಿಯಲ್ಲಿ ಸಮರಸಸುಖಿಯಾಗಿಪ್ಪ ನೋಡಯ್ಯಾ.
ಜಂಗಮದೊಳಗೆ ಭಕ್ತನಡಗಿದಡೆ,
ಕರ್ತೃಭೃತ್ಯಭಾವವಳಿದು ಸಂಬಂಧ ಸಂಶಯದೋರದೆ,
ಅರಿವರತು ಮರಹು ನಷ್ಟವಾಗಿ,
ಸ್ವತಂತ್ರ ಶಿವಾಚಾರಿಯಾಗಿರಬೇಕು ನೋಡಯ್ಯಾ.
ಈ ಉಭಯಭಾವಸಂಗದ ಪರಿಣಾಮವ ಕಂಡು
ಕೂಡಲಚೆನ್ನಸಂಗಯ್ಯನಲ್ಲಿ ಬಸವಪ್ರಭುದೇವರ ಶ್ರೀಪಾದಕ್ಕೆ
ನಮೋ ನಮೋ ಎಂದು ಬದುಕಿದೆನು. || ೬೧೩ ||

೧೪೬೬

ಭಕ್ತನ ಹಾಡಿ ಬೇಡುವಾತ ಜಂಗಮವಲ್ಲ.
ಭಕ್ತನ ಹೊಗಳಿ ಬೇಡುವಾತ ಜಂಗಮವಲ್ಲ.
ಭಕ್ತನ ಓದಿ ಬೇಡುವಾತ ಜಂಗಮವಲ್ಲ.
ಭಕ್ತನ ಕೊಂಡಾಡಿ ಬೇಡುವಾತ ಜಂಗಮವಲ್ಲ.
ಭಕ್ತನ ಸ್ತುತಿಸಿ ಬೇಡುವಾತ ಜಂಗಮವಲ್ಲ.
ಭಕ್ತನ ಕೈವಾರಿಸಿ ಬೇಡುವಾತ ಜಂಗಮವಲ್ಲ.
ಕೂಡಲಚೆನ್ನಸಂಗಮದೇವರಲ್ಲಿ ಬೇಡದೆ ಮಾಡುವನೆ ಭಕ್ತ,
ಬೇಡದೆ ಮಾಡಿಸಿಕೊಂಬಾತನೆ ಜಂಗಮ. || ೬೧೪ ||

೧೪೬೭

ಭಕ್ತನಾಗಿ ಬಯಕೆಯ ಮಾಡಿ ನೋಡುವದು ಭಕ್ತಿಯ ಸ್ಥಲವಲ್ಲ.
ಬಯಸಿ ಮಾಡುವುದೆ ಭಕ್ತಿಯ ಕೇಡು
ಕೂಡಿಸಿ ಮಾಡುವುದೇ (ಕೂಟಉಂಡು)
(ಸಯುಸ)ವಿಲ್ಲದೆ ಸಮತೆಯ ಮಾಡಿ,
ಬೋನವ ನೀಡಿಪೆನೆಂಬುದು ಸಜ್ಜನತ್ವವಕೇಡು.

ಇಂಥ ಬಯಕೆಯ ಮಾಡಿ ನೀಡುವವನ ಭಕ್ತಿ
ಬರಿಯ ಮಡಕೆಯನಟ್ಟು ಹೊರಗೆ
ಹುಲಿಯೇದಿಸಿದಂತಾಯಿತ್ತು ಕಾಣಾ.
ಅವನು ಭಕ್ತಿ ಜಪತಪನೇಮನಿತ್ಯ
ಅನುಷ್ಠಾನಾರ್ಚನೆ ಷೋಡಶ ಉಪಚಾರವ ಮಾಡಿ
ಮುಕ್ತಿಯ ಪಡೆದೆನೆಂದು
ಗುರುವಿನಲ್ಲಿ ಆಜ್ಞೆಯ ಮಾಡಿಕೊಂಡು,
ಸಮಯಾಚಾರಕ್ಕೆ ಜಂಗಮದೇವರ ತಂದು
ಪ್ರಸಾದ ಕೃತ್ಯವೆಂದು ಕಟ್ಟು ಮಾಡಿ ತನ್ನಲ್ಲಿ ಇಟ್ಟುಕೊಂಡು
ಆಯತದ ಅಗ್ಘವಣಿ ಆಯತವೆಂದು ಮಾಡುವನ್ನಕ್ಕ (ಶೀಲವೆ?)
ಆ ಜಂಗಮದೇವರ ತಂದು ತನ್ನ ಮನೆಯುಲ್ಲಿಟ್ಟುಕೊಂಡು,
ಆ ಜಂಗಮಕ್ಕೆ ಇಚ್ಛಾಭೋಜನವ ನೀಡಿ ತೃಪ್ತಿಯಂ ಬಡಿಸಿ,
ಮುಂದೆ ಕೃತ್ಯವ ಮಾಡುವುದೇ ಸತ್ಯ ಸದಾಚಾರ ಶೀಲ,
ಧರ್ಮದ ನಡೆ ಧರ್ಮದ ನುಡಿ. ಇದು ತಪ್ಪದೇ ಒಪ್ಪದು ಕಾಣಾ.
ಇದರ ಅಂತವನರಿಯದೆ
ತನ್ನ ಮನೆಯ ಆಯತದ ಬೋನವಾಗುವನ್ನಕ್ಕ
ಆ ಜಂಗಮದೇವರು ಹಸಿದು ಬಳಲಿಸು ಎಂದು
ಆಯತವ ಕಟ್ಟಿಕೊಟ್ಟನೆ ನಿಮ್ಮ ಗುರುನಾಥನು?
ಇಂಥ ಕಟ್ಟಳೆಯ ಕಟ್ಟಿದಾತ ಗುರುವಲ್ಲ,
ಕಟ್ಟಿಕೊಂಡಾತ ಭಕ್ತನಲ್ಲ, ಭವಿ.
ಇಂತೀ ಗುರುವಲ್ಲ ನರನು, ಇಂತಿವರು ಭಕ್ತರಲ್ಲ.
ಒಲಿದು ಭಕ್ತಿಯ ಮಾಡಿಹನೆಂದು
ಭಕ್ತನ ಅಂತವನರಿಯದೆ ಮುಂದುಗಾಣದೆ
ಕೃತ್ಯವ ಕಟ್ಟುವ ಗುರುವಿಗೆ ಹಿಂದೆ ಬಹನರಕ
ಇವರಿಗೆ ಇಂದೇ ಅಘೋರನರಕ ಕಾಣಾ
ಮಹಾದಾನಿ ಕೂಡಲಚೆನ್ನಸಂಗಮದೇವಯ್ಯಾ. || ೬೧೫ ||

೧೪೬೮

ಭಕ್ತನೆದ್ದು ಭವಿಯ ಮುಖವ ಕಂಡರೆ, ರೌರವ ನರಕವೆಂಬರು.
ಭಕ್ತನಾವನು? ಭವಿಯಾವನು? ಬಲ್ಲರೆ ಹೇಳಿ, ಅರಿಯದಿದ್ದರೆ ಕೇಳಿ.
ಕಾಮ ಒಂದನೆಯ ಭವಿ, ಕ್ರೋಧ ಎರಡನೆಯ ಭವಿ,
ಲೋಭ ಮೂರನೆಯ ಭವಿ, ಮೋಹ ನಾಲ್ಕನೆಯ ಭವಿ,

ಮದ ಐದನೆಯ ಭವಿ, ಮತ್ಸರ ಆರನೆಯ ಭವಿ.
ಇಂತೀ ಷಡ್ವಿಧ ಭವಿಯ ತಮ್ಮೆದೆಯೊಳಗೆ ಇಂಬಿಟ್ಟುಕೊಂಡು,
'ನಾನು ಭವಿಯ ಮೋರೆಯ ಕಾಣಬಾರದು,' ಎಂದು
ಮುಖದ ಮೇಲೆ ವಸ್ತ್ರವ ಬಾಸಣಿಸಿಕೊಂಡು ತಿರುಗುವ
ಕುನ್ನಿಗಳ ಮೆಚ್ಚುವನೆ ಕೂಡಲಚೆನ್ನಸಂಗಮದೇವ? ||೬೧೬||

೧೪೬೯

ಭಕ್ತ, ಭೃತ್ಯನಾಗಿ ಮಾಡುವ ಮಾಟದಲ್ಲಿ ವಿಚಾರವುಂಟಯ್ಯಾ,
ಅದೆಂತೆಂದರೆ: ಸಂಸಾರಚ್ಛೇದನೆಯುಳ್ಳರೆ ಜಂಗಮಲಿಂಗವಹುದು,
ಆದಕ್ಕೆ ಮಾಡಿದ ಫಲಂ ನಾಸ್ತಿ.
ಸಂಸಾರಚ್ಛೇದನೆ ಇಲ್ಲದಿದ್ದರೆ ಆ ಜಂಗಮ ಭವಭಾರಿಯಹನು.
ಆದಕ್ಕೆ ಮಾಡಿದಲ್ಲಿ ಫಲವುಂಟು.
ಫಲವುಂಟಾದಲ್ಲಿ ಭವ ಉಂಟು, ಫಲವಿಲ್ಲದಲ್ಲಿ ಭವವಿಲ್ಲ.
'ಮನದಂತೆ ಮಂಗಳ' ಎಂಬ ಶ್ರುತಿಯ ದಿಟವ ಮಾಡಿ,
ಈ ಉಭಯದೊಳಗೆ ಆವುದ ಪ್ರಿಯವಾಗಿ ಮಾಡುವರು ಅವಂಗೆ ಇವರು ಕಾಣಾ
ಕೂಡಲಚೆನ್ನಸಂಗಮದೇವಾ. ||೬೧೭||

೧೪೭೦

ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ
ಎಂದಿಂತು ಷಟ್‌ಸ್ಥಲವಾರು:
ಭಕ್ತ ಮಹೇಶ ಈ ಎರಡು ಗುರುಸ್ಥಲ;
ಪ್ರಸಾದಿ ಪ್ರಾಣಲಿಂಗಿ ಈ ಎರಡು ಲಿಂಗಸ್ಥಲ;
ಶರಣ ಐಕ್ಯ ಈ ಎರಡು ಜಂಗಮಸ್ಥಲ.
ಇವಕ್ಕೆ ಅಂಗಂಗಳಾವವೆಂದಡೆ:
ಭಕ್ತಂಗೆ ಪೃಥ್ವಿಯೆ ಅಂಗ, ಮಹೇಶ್ವರಂಗೆ ಅಪ್ಪುವೆ ಅಂಗ,
ಪ್ರಸಾದಿಗೆ ಅಗ್ನಿಯೆ ಅಂಗ, ಪ್ರಾಣಲಿಂಗಿಗೆ ವಾಯುವೆ ಅಂಗ.
ಶರಣಂಗೆ ಆಕಾಶವೆ ಅಂಗ, ಐಕ್ಯಂಗೆ ಆತ್ಮವೆ ಅಂಗ.
ಈ ಅಂಗಂಗಳಿಗೆ ಹಸ್ತಂಗಳಾವವೆಂದಡೆ:
ಭಕ್ತಂಗೆ ಸುಚಿತ್ತವೆ ಹಸ್ತ, ಮಹೇಶ್ವರಂಗೆ ಸುಬುದ್ಧಿಯೆ ಹಸ್ತ,
ಪ್ರಸಾದಿಗೆ ನಿರಹಂಕಾರವೆ ಹಸ್ತ, ಪ್ರಾಣಲಿಂಗಿಗೆ ಸುಮನವೆ ಹಸ್ತ,
ಶರಣಂಗೆ ಸುಜ್ಞಾನವೆ ಹಸ್ತ, ಐಕ್ಯಂಗೆ ಸದ್ಭಾವವೆ ಹಸ್ತ.
ಈ ಹಸ್ತಂಗಳಿಗೆ ಲಿಂಗಂಗಳಾವವೆಂದಡೆ:
ಸುಚಿತ್ತಹಸ್ತಕ್ಕೆ ಆಚಾರಲಿಂಗ, ಸುಬುದ್ಧಿಹಸ್ತಕ್ಕೆ ಗುರುಲಿಂಗ,

ನಿರಹಂಕಾರಹಸ್ತಕ್ಕೆ ಶಿವಲಿಂಗ, ಸುಮನಹಸ್ತಕ್ಕೆ ಚರಲಿಂಗ,
ಸುಜ್ಞಾನಹಸ್ತಕ್ಕೆ ಪ್ರಸಾದಲಿಂಗ, ಸದ್ಭಾವಹಸ್ತಕ್ಕೆ ಮಹಾಲಿಂಗ,
ಈ ಲಿಂಗಂಗಳಿಗೆ ಮುಖಂಗಳಾವವೆಂದಡೆ:
ಆಚಾರಲಿಂಗಕ್ಕೆ ಘ್ರಾಣ, ಗುರುಲಿಂಗಕ್ಕೆ ಜಿಹ್ವೆ,
ಶಿವಲಿಂಗಕ್ಕೆ ನೇತ್ರ, ಚರಲಿಂಗಕ್ಕೆ ತ್ವಕ್ಕು,
ಪ್ರಸಾದಲಿಂಗಕ್ಕೆ ಶ್ರೋತ್ರ, ಮಹಾಲಿಂಗಕ್ಕೆ ನಿರ್ಭಾವ.
ಈ ಮುಖಂಗಳಿಗೆ ಅರ್ಪಿತಂಗಳಾವವೆಂದಡೆ:
ಘ್ರಾಣಕ್ಕೆ ಗಂಧ, ಜಿಹ್ವೆಗೆ ರುಚಿ, ನೇತ್ರಕ್ಕೆ ರೂಪು,
ತ್ವಕ್ಕಿಗೆ ಸ್ಪರ್ಶನ, ಶ್ರೋತ್ರಕ್ಕೆ ಶಬ್ದ, ನಿರ್ಭಾವಕ್ಕೆ ನಿರ್ವಯಲು.
ಇಂತೀ ಸರ್ವೇಂದ್ರಿಯ ಸಮ್ಮತ ನಿರ್ವಿಕಲ್ಪ ಮಹಾಲಿಂಗಾಂಗಭಾವದ
ಸುಚಿತ್ತಲೇಪಗ್ರಾಹಕ ಭಕ್ತ ಗುರುಲಿಂಗವಾದ.
ಗುರುಲಿಂಗಾಂಗ ಸುಬುದ್ಧಿಲೇಪಗ್ರಾಹಕ ಮಹೇಶ್ವರ ಶಿವಲಿಂಗವಾದ.
ಶಿವಲಿಂಗಾಂಗ ನಿರಹಂಕಾರಲೇಪಗ್ರಾಹಕ ಪ್ರಸಾದಿ ಜಂಗಮಲಿಂಗವಾದ.
ಜಂಗಮಲಿಂಗಾಂಗ ಸುಮನಲೇಪಗ್ರಾಹಕ ಪ್ರಾಣಲಿಂಗಿ ಪ್ರಸಾದಲಿಂಗವಾದ.
ಪ್ರಸಾದಲಿಂಗಾಂಗ ಸುಜ್ಞಾನಲೇಪಗ್ರಾಹಕ ಶರಣ ಮಹಾಲಿಂಗವಾದ.
ಮಹಾಲಿಂಗಾಂಗ ಸದ್ಭಾವಲೇಪಗ್ರಾಹಕ ಐಕ್ಯ
ಅಭೇದಾನಂದ ಪರಿಪೂರ್ಣಮಯವಾದ.
‘ನಿಶ್ಶಬ್ದಂ ಬ್ರಹ್ಮ ಉಚ್ಯತೇ’ ಎಂಬ ಶ್ರುತಿಯ ಮೀರಿ ನಿಂದ
ಅಖಂಡಮಹಿಮಂಗೆ, ಸುನಾದಯುಕ್ತಂಗೆ ಶಬ್ದ ನಷ್ಟವಾದಲ್ಲಿ-
ಆಚಾರಲಿಂಗವಿಲ್ಲ ಭಕ್ತಂಗೆ, ಗುರುಲಿಂಗವಿಲ್ಲ ಮಹೇಶ್ವರಂಗೆ,
ಶಿವಲಿಂಗವಿಲ್ಲ ಪ್ರಸಾದಿಗೆ, ಚರಲಿಂಗವಿಲ್ಲ ಪ್ರಾಣಲಿಂಗಿಗೆ,
ಪ್ರಸಾದಲಿಂಗವಿಲ್ಲ ಶರಣಂಗೆ, ಜಡದೇಹ ಧರ್ಮ ಭಾವವಿಲ್ಲ ಐಕ್ಯಂಗೆ.
ಇದು ಕಾರಣ, ಕೂಡಲಚೆನ್ನಸಂಗಯ್ಯಾ,
ನಿಮ್ಮ ಷಟ್‌ಸ್ಥಲದ ಪರಿಯಾಯವ ನೀವೆ ಬಲ್ಲಿರಿ.
ಉಳಿದ ಅಜ್ಞಾನಿಜೀವಿಗಳೆತ್ತ ಬಲ್ಲರು? || ೬೧೮ ||

೧೪೬೧

ಭಕ್ತ ಮಹೇಶ ಪ್ರಸಾದಿಯು
ಪಿಂಡಾದಿಯಾದ ಸಾಕಾರ ಮೂವತ್ತೊಂದು ಸ್ಥಲದ ಮೂಲಿಗ ತಾನಯ್ಯಾ.
ಪ್ರಾಣಲಿಂಗಿ ಶರಣ ಐಕ್ಯ ಮೊದಲಾದ
ನಿರಾಕಾರ ಹದಿಮೂರು ಸ್ಥಲದ ಆಚಾರ್ಯ ತಾನಯ್ಯಾ.
ಈ ಉಭಯ ಕುಲಸ್ಥಲ ಒಂದೆಂದರಿದು ತಾನಾದ ಲಿಂಗೈಕ್ಯನು

ಜಾತನಲ್ಲ ಅಜಾತನಲ್ಲ ಮೂರ್ತನಲ್ಲ ಅಮೂರ್ತನಲ್ಲ,
ದ್ವೈತಿಯುಲ್ಲ ಅದ್ವೈತಿಯಲ್ಲ, ಸಕಲನಲ್ಲ ನಿಷ್ಕಲನಲ್ಲ,
ಸಕಲ ನಿಷ್ಕಲಾತ್ಮಕ ತಾನೆ ಕೂಡಲಚೆನ್ನಸಂಗಮದೇವ. || ೬೧೯ ||

೧೪೭೨

ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನೆಂದು
ಬೇರು ಮಾಡಿ ನುಡಿದು ಬೇರು ಮಾಡಿ ನಡೆವ ಭಿನ್ನನಲ್ಲ.
ಭಿನ್ನವಿಲ್ಲದ ಅಂತರಂಗದಲ್ಲಿ ಅರಿವು ಪರಿಪೂರ್ಣ ಬಸವಣ್ಣ.
ಬಹಿರಂಗದಲ್ಲಿ ದಾಸೋಹ ಸಂಪನ್ನ ಬಸವಣ್ಣ.
ಮನ ವಚನ ಕಾಯದಲ್ಲಿ ಸದ್ಭಕ್ತಿಸಂಪನ್ನ ಬಸವಣ್ಣ.
ಎಡೆದೆರಹಿಲ್ಲದ ಲಿಂಗಸಂಪನ್ನ ಬಸವಣ್ಣ.
ಸರ್ವಾಂಗದಲ್ಲಿ ಸರ್ವಾಚಾರಸಂಪನ್ನ ಬಸವಣ್ಣ.
ಕೂಡಲಚೆನ್ನಸಂಗನಲ್ಲಿ ಬಸವಣ್ಣನ ಶ್ರೀಪಾದಕ್ಕೆ
ನಮೋ ನಮೋ ಎನುತಿರ್ದೆನು. || ೬೨೦ ||

೧೪೭೩

ಭಕ್ತರ ಮಠವನರಸಿಕೊಂಡು ಹೋಗಿ
ಭಕ್ತದೇಹಿಕ ದೇವನೆಂಬ ಶ್ರುತಿವಾಕ್ಯವ ಕೇಳಿ
ಭಕ್ತನೆ ದೇವನೆಂದರಿದು ಯುಕ್ತಿಯನರಸುವ ಪಾತಕರ ವಿಧಿಗಿನ್ನೆಂತೊ?
ಭಕ್ತರ ಮಠಕ್ಕೆ ಹೋಗಿ 'ಅದು ಇದು' ಎಂಬ ಸಂದೇಹಪಾತಕ ನೀ ಕೇಳಾ
ಭಕ್ತರ ಮಠದೊಳಗೆ ಭಕ್ತಿರಸದ ಬೆಳಸು, ಲಿಂಗದ ಬೆಳೆ, ಪ್ರಸಾದದ ರಾಶಿ,
ಇಂತಪ್ಪ ಪ್ರಸಾದದಲ್ಲಿಗೆ ಹೋಗಿ
ಸೂತಕವನರಸುವ ಪಾತಕರ ಮೆಚ್ಚುವನೆ
ಕೂಡಲಚೆನ್ನಸಂಗಮದೇವ? || ೬೨೧ ||

೧೪೭೪

ಭಕ್ತರ ಮಂದಿರದಲ್ಲಿ ಹೊಕ್ಕು ಲಿಂಗಾರ್ಚನೆಯ ಮಾಡುವ
ಪರಿಯಾಯವೆಂತೆಂದಡೆ:
ಆ ಭಕ್ತನ ಗೃಹದಲ್ಲಿ ಕರ್ತನಾಗಿ ನಿಂದು,
ಆ ಭಕ್ತನ ಭಾಜನ ಭಾಂಡಗಳ ಮುಟ್ಟಿ ಸೇವೆಯ ಮಾಡುವ
ಸತಿ ಸುತ ಪಿತ ಮಾತೆ ಸಹೋದರ ಬಂಧು ಭೃತ್ಯಜನ ದಾಸಿಯರು
ಮೊದಲಾದ ಸರ್ವರು; ಲಿಂಗಾರ್ಚಕ ಶ್ರೇಷ್ಠ ಪಾದೋದಕ ಪ್ರಸಾದ ವಿಶ್ವಾಸ

ಸತ್ಯಭಕ್ತರೆಂಬುದನರಿದು; ಅಂದಂದಿಗೆ ಅವರ ಹೊಂದಿ,
ಮುಂದುಗೊಂಡಿರ್ದ ತಾಮಸಂಗಳ ಹಿಂದುಗಳೆವುತ್ತ,
ಸತ್ಯಭಕ್ತಿಯ ಮುಂದುಗೊಳಿಸುತ್ತ,
ಆ ಭಕ್ತಮುಖದಿಂದ ಬಂದ ಪದಾರ್ಥವ ಪ್ರಸಾದವೆಂದು ಕಂಡು ಕೈಕೊಂಡು,
ಲಿಂಗಾರ್ಪಿತ ಘನಪ್ರಸಾದಭೋಗಿಯಾಗಿ ತನ್ನೊಕ್ಕ ಮಿಕ್ಕುದನಾ
ಭಕ್ತಜನಕಿಕ್ಕಿ ತನ್ನೊಳಗೊಡಗೂಡಿಕೊಂಡು ಸಲಹಬಲ್ಲ ಜಂಗಮವೆ
ಜಗತ್ಪಾವನ– ಇನಿತಲ್ಲದೆ ಅವರು ನಡೆದಂತೆ ನಡೆಯಲಿ [ಎಂದು],
ಆ ಭಕ್ತ ಜನಂಗಳು ಹೊಂದಿದ್ದ ತಾಮಸಂಗಳನು ಪರಿಹರಿಸದೆ
ತಮ್ಮೊಡಲ ಕಕ್ಕುಲತೆಗೆ ಹೋಗಿ ಉಪಾಧಿಯ ನುಡಿದು
ತುಡುಗುಣಿನಾಯಿ ಬಾಲವ ಬಡಿದು [ಹಡಕೆ] ತಿಂಬಂತೆ ತಿಂದು
ತನ್ನೊಡಲ ಹೊರೆವ ದರುಶನಜಂಗುಳಿಗಳು ಜಂಗಮಸ್ಥಲಕ್ಕೆ ಸಲ್ಲ[ರು].
ತಾಮಸವಿಡಿದು ಮಾಡುವಾತ ಭಕ್ತನಲ್ಲ,
ಆ ತಾಮಸಮುಖದಿಂದ ಬಂದ ಮಾಯೋಚ್ಛಿಷ್ಟವ ಕೊಂಬಾತ ಜಂಗಮವಲ್ಲ.
ಅವರೀರ್ವರಿಗೂ ಭವ ಹಿಂಗದು ಕಾಣಾ ಕೂಡಲಚೆನ್ನಸಂಗಯ್ಯಾ. ॥ ೬೨೨ ॥

೧೪೭೫

ಭಕ್ತರಲ್ಲಿ ಬಣ್ಣವನರಸುವಾತನೆ ಆಚಾರದ್ರೋಹಿ.
ಜಂಗಮದಲ್ಲಿ ಜಾತಿಯನರಸುವಾತನೆ ಗುರುದ್ರೋಹಿ.
ಪಾದೋದಕದಲ್ಲಿ ಸೂತಕವ ಹಿಡಿವಾತನೆ ಲಿಂಗದ್ರೋಹಿ.
ಪ್ರಸಾದದಲ್ಲಿ ರುಚಿಯನರಸುವಾತನೆ ಜಂಗಮದ್ರೋಹಿ.
ಇಂತೀ ಚತುರ್ವಿಧದೊಳಗೆ ಸನ್ನಿಹಿತನಾದಾತನೆ ಭಕ್ತ,
ಇಂತೀ ಚತುರ್ವಿಧದೊಳಗೆ ಕಲಿಯಾದಾತನೆ ಮಾಹೇಶ್ವರ,
ಇಂತೀ ಚತುರ್ವಿಧದೊಳಗೆ ಅವಧಾನಿಯಾದಾತನೆ ಪ್ರಸಾದಿ,
ಇಂತೀ ಚತುರ್ವಿಧದೊಳಗೆ ತದ್ಗತನಾದಾತನೆ ಪ್ರಾಣಲಿಂಗಿ,
ಇಂತೀ ಚತುರ್ವಿಧದೊಳಗೆ ಲವಲವಿಕೆಯುಳ್ಳಾತನೆ ಶರಣ,
ಇಂತೀ ಚತುರ್ವಿಧದೊಳಗೆ ಅಡಗಿದಡೆ ಐಕ್ಯ.
ಇಂತಿಪ್ಪ ಷಡುಸ್ಥಲವು ಸಾಧ್ಯವಾದಡೆ ಲಿಂಗದೇಹಿ.
ಆತ ನಡೆಯಿತ್ತೇ ಬಟ್ಟೆ ಆತ ನುಡಿಯಿತ್ತೇ [ಸಿದ್ಧಾಂತ].
ಕೂಡಲಚೆನ್ನಸಂಗಯ್ಯನಲ್ಲಿ ಆತನೇ ಸರ್ವಾಂಗಲಿಂಗಿ, ಆತನೆ ಸಿರ್ವೇಸಿ. ॥ ೬೨೩ ॥

೧೪೭೬

ಭಕ್ತರ ಹೆಚ್ಚು ಕುಂದು ಜಂಗಮದ ಹೆಚ್ಚು ಕುಂದೆಂಬುದನರಿಯಾ ಪ್ರಭುವೆ?
ನಿಮ್ಮ ಪ್ರಾಣವೆ ಬಸವಣ್ಣನ ಪ್ರಾಣ, ಬಸವಣ್ಣನ ಪ್ರಾಣವೆ ನಿಮ್ಮ ಪ್ರಾಣ

ನಿಮ್ಮ ಕಾಯವೆ ಬಸವಣ್ಣನ ಕಾಯ, ಬಸವಣ್ಣನ ಕಾಯವೆ ನಿಮ್ಮ ಕಾಯ.
ನೀವಿಲ್ಲದಿರೆ ಬಸವಣ್ಣನಿಲ್ಲ, ಬಸವಣ್ಣನಿಲ್ಲದಿರೆ ನೀವಿಲ್ಲ.
ಇಂತಿದನೊಂದು ಬಿಚ್ಚಿ ಬೇರೆ ಮಾಡಬಾರದೆಂಬುದನರಿದು
ಮತ್ತೆ ಬಗಿದೆ ಮುನಿವರೆ ಬಲ್ಲವರು?
ನಡೆವ ವಾರುವ ಮುಗ್ಗಿದಡೆ ನಡೆಸಿಕೊಂಬುದಲ್ಲದಡೆ
ಬಿಡಿ ಹರಿಯೆ ಹೊಯ್ದವರುಂಟೆ ಲೋಕದೊಳಗೆ?
ಮರಹಿಂದ ಬಂದ ಅವಗುಣವ ಸಂಪಾದಿಸದೆ
ಬಿಜಯಂಗೈಯ್ವುದಯ್ಯಾ ನಿಮ್ಮ ಗೃಹಕ್ಕೆ ಕೂಡಲಚೆನ್ನಸಂಗಮದೇವಾ,
ನಿಮ್ಮ ಶರಣ ಬಸವಣ್ಣನಾರೆಂಬುದ
ನೀನೊಮ್ಮೆ ತಿಳಿದು ನೋಡಾ ಪ್ರಭುವೆ. || ೬೨೪ ||

೧೪೭೭

ಭಕ್ತರಾದೆವೆಂಬರು–ಭಕ್ತಿಯ ಪರಿಯನರಿಯರು
ಭಕ್ತರೆಂತಾದಿರಯ್ಯಾ?
ಮಾಹೇಶ್ವರರಾದೆವೆಂಬರು,–ಆದಿ ಅನಾದಿಯ ಅರಿಯದನ್ನಕ್ಕ
ಮಾಹೇಶ್ವರರೆಂತಾದಿರಯ್ಯಾ?
ಪ್ರಸಾದಿಗಳಾದೆವೆಂಬರು,–ಪ್ರಸಾದದ ಅರ್ಪಿತ ಆಯತವನರಿಯದೆ
ಪ್ರಸಾದವ ಗ್ರಹಿಸುವನ್ನಕ್ಕ ಪ್ರಸಾದಿಗಳೆಂತಾದಿರಯ್ಯಾ?
ಪ್ರಾಣಲಿಂಗಿಗಳಾದೆವೆಂಬರು–ನಡೆ ನುಡಿ ಭಾವ ಎರಡಾಗಿದೆ
ಪ್ರಾಣಲಿಂಗಿಗಳೆಂತಾದಿರಯ್ಯಾ?
ಶರಣನಾದೆವೆಂಬರು–ಇಂದ್ರಿಯಂಗಳ ಭಿನ್ನವಿಟ್ಟು ವರ್ತಿಸುವನ್ನಕ್ಕ
ಶರಣರೆಂತಾದಿರಯ್ಯಾ?
ಐಕ್ಯವಾದೆವೆಂಬರು–ಧರ್ಮಕರ್ಮ ಚತುರ್ವಿಧದ ಫಲಪದ ಮೋಕ್ಷ
ಜನನ ಮರಣ ಬೆನ್ನ ಬಿಡದೆ ಐಕ್ಯರೆಂತಾದಿರಯ್ಯಾ?
ಕೂಡಲಚೆನ್ನಸಂಗಮದೇವರಲ್ಲಿ ಈ ಷಡುಸ್ಥಲದ ನಿರ್ಣಯವ
ಬಸವಣ್ಣನೆ ಬಲ್ಲ. || ೬೨೫

೧೪೭೮

ಭಕ್ತಿಗೆ ಅನುಭಾವವೆ ಬೀಜ ಕಾಣಿರೆ,
ಭಕ್ತಿಗೆ ಅನುಭಾವವೆ ಆಚಾರ ಕಾಣಿರೆ,
ಅನುಭಾವವಿಲ್ಲದವನ ಭಕ್ತಿ ಏಕತಟಗೊಳಿಸಿತ್ತು.
ಅನುಭಾವವ ಮಾಡುವಲ್ಲಿ ವಿನಯದಿಂದ ಕೇಳದಿದ್ದಡೆ
ಕೂಡಲಚೆನ್ನಸಂಗಮದೇವರು ಅಘೋರನರಕದಲ್ಲಿಕ್ಕುವ.

೧೪೭೯

ಭಕ್ತಿ ಜ್ಞಾನ ವೈರಾಗ್ಯ ಕುಲಸ್ಥಲವ ಹರಹಲೆಂದು
ಮರ್ತ್ಯಲೋಕಕ್ಕೆ ಇಳಿತಂದನಯ್ಯಾ ಬಸವಣ್ಣನು.
ವ್ರತಾಚಾರದ ಶಿವಾಚಾರದ ಮುಂದಣ ಕನ್ನಡಕವ ಕಳೆದು
ಕರತಳಾಮಳಕ ಮಾಡಿದನಯ್ಯಾ ಬಸವಣ್ಣನು.
ಪರವಾದಿ ಬಿಜ್ಜಳನ ಒರೆಗಲ್ಲ ಹಿಡಿದು ಶಿವಭಕ್ತಿಸಂಪಾದನೆಯ ಮಾಡುವಲ್ಲಿ
ಮೂವತ್ತಾರು ಕೊಂಡೆಯ ಪರಿಹರಿಸಿ
ಶಿವಾಚಾರದ ಧ್ವಜವನೆತ್ತಿ ಮೆರೆದನಯ್ಯಾ ಬಸವಣ್ಣನು–
ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ
ಬಸವಣ್ಣನ ನಿಲವ ಹೊಗಳುವುದು ಎನ್ನಳವಲ್ಲ, ನಿನ್ನಳವಲ್ಲ. ॥ ೭೨೭ ॥

೧೪೮೦

ಭಕ್ತಿಯುಕ್ತಿಯ ಹೊಲಬ ಬಲ್ಲವರ,
ಮೂರುಲೋಕದೊಳಗಾರನೂ ಕಾಣೆ.
ಲಿಂಗದಲ್ಲಿ ಭಕ್ತಿಯ ಮಾಡಿದಡೆ ಭವ ಹರಿಯದೆಂದು
ಜಂಗಮಮುಖ ಲಿಂಗವೆಂದರಿದು ಅರ್ಚಿಸಿ ಪೂಜಿಸಿ
ದಾಸೋಹವ ಮಾಡಿ ಪ್ರಸನ್ನತೆಯ ಹಡೆದ ಬಸವಣ್ಣನು.
ಆ ಪ್ರಸನ್ನತೆಯ ರುಚಿಯನುಪಮಿಸಬಾರದು.
ಆ ಬಸವಣ್ಣನ ಪ್ರಸಾದವ ಕೊಂಡು ನಾನು ಬದುಕಿದೆನು.
ಆ ಬಸವಣ್ಣನ ಭಕ್ತಿ ಪ್ರಸಾದವಕೊಂಡು ಅಲ್ಲಮಪ್ರಭು ತೃಪ್ತನಾದನು.
ಅಲ್ಲಮಪ್ರಭು ಕೊಂಡ ಪ್ರಸಾದದ ತೃಪ್ತಿ
ಲಕ್ಷದಮೇಲೆ ತೊಂಬತ್ತಾರುಸಾವಿರ ಜಂಗಮ ತೃಪ್ತಿಯಾಯಿತ್ತು;
ಆ ಲಕ್ಷದ ಮೇಲೆ ತೊಂಬತ್ತಾರುಸಾವಿರ ಜಂಗಮ ತೃಪ್ತಿಯಾದಲ್ಲಿ
ಸಚರಾಚರವೆಲ್ಲ ಕೂಡೆ ತೃಪ್ತಿಯಾಯಿತ್ತೆಂದಡೆ,
ಇಲ್ಲವೆಂದು ಬಿಜ್ಜಳ ತರ್ಕಿಸಲು,
ಕಪ್ಪೆಯ ಒಡಲೊಳಗೆ ಪ್ರಭುವಿನ ಪ್ರಸಾದವ ತೋರನೆ ಬಸವಣ್ಣನು?
ಇದು ಕಾರಣ ಕೂಡಲಚೆನ್ನಸಂಗಮದೇವರಲ್ಲಿ
ಬಸವಣ್ಣ ಪ್ರಭುದೇವರ ಪ್ರಸಾದದ ಘನವು
ತ್ರೈಲೋಕ್ಯದೊಳಗೆ ಬೆಳಗಿಂಯಾಯಿತ್ತು! ॥ ೭೨೮ ॥

೧೪೮೧

ಭಕ್ತಿಯೆಂಬುದು ಬಾಳ ಬಾಯ ಧಾರೆ, ಅದೆಂತೆದಡೆ:
ಕಂಗಳಿನ ವಳಯದಂತೆ ಸುತ್ತಲರಿದು;
ಮಧ್ಯಾಹ್ನದ ಆದಿತ್ಯನಂತೆ ನೋಡಲರಿದು,
ಪಾಪಿಯ ಕೂಸಿನಂತೆ ಎತ್ತಲರಿದು,
ಒಳು(ವಾಳಿ?)ಗುದುರಿಯಂತೆ ಒ(ಪ?)ತ್ತಲರಿದು,
ಸಜ್ಜನವುಳ್ಳ ಸತಿಯಂತೆ ಉಳಿಯಲರಿದು,
ಪಾದರಸದಂತೆ ಹಿಡಿಯಲರಿದು,
ಮೊದಲುಗೆಟ್ಟ ಹರದನಂತೆ ಕೆತ್ತಿಕೊಂಡಿಪುದು,
ಭಕ್ತಿಯ ಮುಖ ಎತ್ತಲೆಂದರಿಯಬಾರದು.
ಇದು ಕಾರಣ–ಕೂಡಲಚೆನ್ನಸಂಗಯ್ಯ ಹಿಡಿಯಬಲ್ಲವರಿಗಳವಟ್ಟಿತ್ತು
ಹೊಡ(ಹಿಡಿ?)ಯಲರಿಯದವರಿಗೆ ವಿಗುರ್ಬಣೆಯಾಗಿತ್ತು. ॥ ೬೨೯ ॥

೧೪೮೨

ಭವಕ್ಕೆ ಬಿತ್ತುವಪ್ಪ ಬಯಕೆ ಇಹನ್ನಬರ
ಕಾಮನ ಕಾಟವು ಕಡೆಗಾಣದಯ್ಯಾ.
ಲಿಂಗದೇವನ ಮರಹಿನಿಂದಪ್ಪ ಮರಣಬಾಧೆ ಇಹನ್ನಬರ
ಕಾಲದೂತರ ಭೀತಿಯು ತಪ್ಪದಯ್ಯಾ.
ತನುತ್ರಯದ ಅಭಿಮಾನ ಇಹನ್ನಬರ
ಸಂಸಾರಸಂತಾಪ ಓರೆಯಾಗದಯ್ಯಾ.
ಕೂಡಲಚೆನ್ನಸಂಗಮದೇವಾ,–
ಇದು ಸೃಷ್ಟಿ ಸ್ಥಿತಿ ಸಂಹಾರರೂಪವಪ್ಪ
ನಿನ್ನ ಮಾಯದ ಮಾಟವೆಂದರಿವೆನಯ್ಯಾ. ॥ ೬೩೦ ॥

೧೪೮೩

ಭವಪಾಶದಿಂದೆ ಕಟ್ಟುವಡೆದು ಕಂಗೆಟ್ಟ ಮನುಜನು
ಶ್ರೀಗುರುವಿನ ಕರುಣವ ಪಡೆಯಬೇಕಾಗಿ
ಆ ಗುರುವಿನಿರವ ಬೆದಕುತ್ತಿರುವಲ್ಲಿ,
ಶಿಷ್ಯತಂಡವನೊಳಕೊಂಡ ಒರ್ವ ದೇಶಿಕನ ಕಂಡು,
ಕೆಲಕಾಲ ಆತನ ಸೇವೆಯಲ್ಲಿರಬೇಕು.
ಆತನಲ್ಲಿ ಜ್ಞಾನಾಚಾರಂಗಳಿಲ್ಲದುದ ಕಂಡಡೆ ಆತನನ್ನುಳಿದು
ಗುರುಲಕ್ಷಣದಿಂದೊಪ್ಪುವ ಮತ್ತೊರ್ವ ಮಹಿಮನೆಡೆಗೈದಿ

ಪರಿಕಿಸಿ ಮನದಟ್ಟಾದಲ್ಲಿ ಆತನಿಂದೆ ಜ್ಞಾನದೀಕ್ಷೆಯ ಪಡೆಯಬೇಕು.
ಇದು ಸದ್ಭಾವಿಗಳ ಸನ್ಮಾರ್ಗವಯ್ಯಾ, ಕೂಡಲಚೆನ್ನಸಂಗಮದೇವಾ. || ೬೩೧ ||

೧೪೮೪

ಭವಬೀಜಂ ತಥಾ ಭಕ್ತಿರ್ಭಕ್ತಿಬೀಜಂ ತಥಾ ಶಿವಃ।
ಶಿವಬೀಜಂ ತಥಾ ಜ್ಞಾನಂ ಜ್ಞಾನಂ ತ್ರೈಲೋಕ್ಯದುರ್ಲಭಂ॥
ಈಷಣತ್ರಯ ಸಂಯುಕ್ತಃ ಶಿವಜ್ಞಾನ ವಿವರ್ಜಿತಃ।
ಶ್ವಪಚಃ ಪಾದತೀರ್ಥಂ ತು ಸ್ವೀಕುರ್ವನ್ನರಕಂ ವ್ರಜೇತ್॥
ಸಂಸಾರಾರ್ಣವ ಘೋರೇಣ ವೇಷಮಂಗೀಕರೋತಿ ಯಃ।
ಪಾದತೀರ್ಥಂ ಪ್ರಸಾದಂ ಚ ಸ್ವೀಕುರ್ವನ್ನರಕಂ ವ್ರಜೇತ್॥
ಉತ್ತಮಂ ಪ್ರಾಣಲಿಂಗಸ್ಯ ತ್ವಂಗಲಿಂಗಸ್ಯ ಮಧ್ಯಮಂ।
ಕನಿಷ್ಠಂ ಸ್ಥಾವರಾದೀನಾಂ ಧ್ಯಾನಂ ಶೂನ್ಯಸ್ಯ ನಿಷ್ಫಲಂ॥–ಇಂತೆಂದುದಾಗಿ
ಪ್ರಾಣಲಿಂಗವರಿಯದವರ ಪಾದಾರ್ಚನೆಯ ಮಾಡಲಾಗದು.
ಮುಖಲಿಂಗವಿಲ್ಲದವರಲ್ಲಿ ಪ್ರಸಾದವ ಕೊಂಡಡೆ,
ಸರ್ವಾಂಗ ಲಿಂಗವೆಂದರಿಯದವರಲ್ಲಿ ಪ್ರಸಾದವ ಕೊಂಡಡೆ
ಅಘೋರನರಕ ತಪ್ಪದಯ್ಯಾ, ಕೂಡಲಚೆನ್ನಸಂಗಮದೇವಾ. || ೬೩೨ ||

೧೪೮೫

ಭವಿಗೆ ಭವವಿಲ್ಲ. ಭಕ್ತಂಗೆ ಭವಿಯನೊಲ್ಲೆನೆಂಬುದು ದುರಾಚಾರ.
ದೇವಾರಾಧನೆಯ ಫಲವುಳ್ಳನ್ನಕ್ಕರ ಭಕ್ತರೆಂದೆ,
ಲಿಂಗಾರಾಧನೆಯ ಫಲವುಳ್ಳನ್ನಕ್ಕರ ಭಕ್ತರೆ?
ಭವಿಗೆ ಮಾಡುವ ಪದಾರ್ಥವನತಿ ಸುಯಿದಾನದಲ್ಲಿ ಮಾಡಬೇಕು.
ಭಕ್ತಕಂಡಡೆ ಮುಟ್ಟಪಡವಾಯಿತಾಗಿ–ಇದು ಕಾರಣ
ಕೂಡಲಚೆನ್ನಸಂಗಯ್ಯ, ಭಕ್ತನಾಗಿ ಭವಿಯಾಗದಿರ್ದಡೆ
ಅವರನೆಂತು ಭಕ್ತರೆಂಬೆ? || ೬೩೩ ||

೧೪೮೬

ಭವಿತನಕ್ಕೆ ಹೇಸಿ ಭಕ್ತನಾಗಬೇಕೆಂದು,
ಜಂಗಮವ ಕಂಡು ಗೃಹಕ್ಕೆ ಬಿಜಯಂಗೈಸಿ ತಂದು,
ತೊತ್ತಿನ ಕೈಯಲ್ಲಿ ಅಗ್ಗವಣಿಯ ತಂದಿರಿಸಿ

ಪಾದಾರ್ಚನೆಯು ಮಾಡುವ ಭಕ್ತನ ಯುಕ್ತಿಯ ಕೇಳಿರಣ್ಣಾ !
ಭಕ್ತರ ಬಸುರಲ್ಲಿ ಬರುತ ಬರುತಲಾ
ತೊತ್ತಿನ ಬಸುರಲ್ಲಿ ಬರುತ್ತಿಪ್ಪನು ಕಾಣಾ
ಕೂಡಲಚೆನ್ನಸಂಗಮದೇವಾ. || ೬೩೪ ||

೧೪೮೭

ಭವಿತನಕ್ಕೆ ಹೇಸಿ ಭಕ್ತನಾಗಬೇಕೆಂಬಾತನು
ಸದ್ಗುರುವನರಸಿಕೊಂಡು ಬಂದು
ಅವರ ಕಾರುಣ್ಯದಿಂದ ಮುಕ್ತಿಯುಂ ಪಡೆದೆನೆಂದು
ಆ ಶ್ರೀಗುರುವಿಂಗೆ ದಂಡಪ್ರಣಾಮಂ ಮಾಡಿ
ಭಯಭಕ್ತಿಯಿಂದ ಕರಂಗಳಂ ಮುಗಿದು ನಿಂದಿರ್ದು
ಎಲೆ ದೇವಾ! ಎನ್ನ ಬವಿತನಮಂ ಹಿಂಗಿಸಿ
ನಿಮ್ಮ ಕಾರುಣ್ಯದಿಂದೆನ್ನ ಭಕ್ತನಂ ಮಾಡುವುದೆಂದು
ಶ್ರೀಗುರುವಿಂಗೆ ಬಿನ್ನಹವಂ ಮಾಡಲು
ಆ ಶ್ರೀಗುರುವು ಅಂತಪ್ಪ ಭಯಭಕ್ತಿ ಕಿಂಕರತೆಯೊಳಿಪ್ಪ ಶಿಶುವಂ ಕಂಡು
ತಮ್ಮ ಕೃಪಾವಲೋಕನದಿಂ ನೋಡಿ ಆ ಭವಿಯ
ಪೂರ್ವಾಶ್ರಯಮಂ ಕಳೆದು ಪುನರ್ಜಾತನಂ ಮಾಡಿ
ಆತನ ಅಂಗದಮೇಲೆ ಲಿಂಗಪ್ರತಿಷ್ಠೆಯುಂ ಮಾಡುವ
ಕ್ರಮವೆಂತೆಂದಡೆ—
ಮೊದಲಲ್ಲಿ ಕಾಯಶುದ್ಧ ಜೀವಶುದ್ಧ ಆತ್ಮಶುದ್ಧನಂ ಮಾಡುವ
ಕ್ರಮವೆಂತೆಂದರೆ—
ಓಂ ಜಲಮಿತಿ ಭಸ್ಮ ಓಂ ಸ್ಥಲಮಿತಿ ಭಸ್ಮ
ಓಂ ಅಗ್ನಿರಿತಿ ಭಸ್ಮ ಓಂ ವಾಯುರಿತಿ ಭಸ್ಮ
ಓಂ ವ್ಯೋಮೇತಿ ಭಸ್ಮ ಓಂ ಸೋಮೇತಿ ಭಸ್ಮ
ಓಂ ಸೂರ್ಯೇತಿ ಭಸ್ಮ ಓಂ ಆತ್ಮೇತಿ ಭಸ್ಮ
ಎಂಬೀ ಮಂತ್ರದಿಂದ ಆತನ ಅಷ್ಟತನುವಂ ಶುದ್ಧವಮಾಡುವುದು
ಇನ್ನು ಆತನ ಜೀವ ಶುದ್ಧವ ಮಾಡುವ ಕ್ರಮವೆಂತೆಂದಡೆ—
ಓಂ ಅಸ್ಯ ಪ್ರಾಣ ಪ್ರತಿಷ್ಠಾ ಮಂತ್ರಸ್ಯ ಬ್ರಹ್ಮವಿಷ್ಣುಮಹೇಶ್ವರಾ ಋಷಯಃ
ಋಗ್ಯಜುಃ ಸಾಮಾಥರ್ವಣಾ ಛಂದಾಂಸಿ
ಸದಾಶಿವ ಮಹಾಪ್ರಾಣ ಉಪಪ್ರಾಣ ಮಮ ಜೀವ ಅಯುಂ ತಥಾ
ಮಮಾಸಕ್ತ ಸರ್ವೇಂದ್ರಿಯಾಣಿ
ವಾಙ್ಮನಶ್ಚಕ್ಷುಃ ಶ್ರೋತ್ರ ಜಿಹ್ವಾಘ್ರಾಣ ಮನೋಬುದ್ಧಿ ಚಿತ್ತ ವಿಜ್ಞಾನವ

ಮಮ ಶರೀರೇ ಲಿಂಗಸ್ಯ ಸುಖಂ ಸ್ಥಿರಿಷ್ಯತಿ॥
ಜೀವಃ ಶಿವಃ ಶಿವೋ ಜೀವಃ ಸಜೀವಃ ಕೇವಲಃ ಶಿವಃ।
ಪಾಶಬದ್ಧೋಭವೇಜ್ಜೀವಃ ಪಾಶಮುಕ್ತಃ ಸದಾಶಿವಃ॥
ಎಂದೀ ಮಂತ್ರದಿಂದ ಆತನ ಜೀವ ಶುದ್ಧವಂ ಮಾಡುವುದು.
ಇನ್ನು ಆತ್ಮಶುದ್ಧವ ಮಾಡುವ ಕ್ರಮವೆಂತೆಂದಡೆ—
ಓಂ ಶಿವಾತ್ಮಕ ಸುಖಂ ಜೀವೋ ಜೀವಾತ್ಮಕ ಸುಖಂ ಶಿವಃ।
ಶಿವಜೀವಾತ್ಮಸಂಯೋಗೇ ಪ್ರಾಣಲಿಂಗಂ ತಥಾ ಭವೇತ್॥
ಎಂದೀ ಮಂತ್ರದಿಂದ ಆತನ ಆತ್ಮನ ಶುದ್ಧವಂ ಮಾಡುವುದು.
ಇನ್ನು ವಾಕ್ಕು ಪಾಣಿ ಪಾದಗುಹ್ಯ ಪಾಯುವೆಂಬ ಕರ್ಮೇಂದ್ರಿಯಂ
ಮೇಲಣ ಇಂದ್ರಿಯ ಲಿಖಿತವಂ ತೊಡೆದು ಲಿಂಗಲಿಖಿತವಂ
ಮಾಡುವ ಕ್ರಮವೆಂತೆಂದಡೆ—
ಓಂ ನೇತ್ರೇ ತ್ರ್ಯಂಬಕಃ ಪಾತು ಮುಖೇ ಪಾತು ಮಹೇಶ್ವರಃ।
ಕರ್ಣಯೋಃ ಪಾತು ಶಂಭುರ್ಮೇ ನಾಶಿ ಕಾಯಾಂ ಭವೋದ್ಭವಃ॥
ವಾಗೀಶಃ ಪಾತು ಮೇ ಜಿಹ್ವಾಮೋಷ್ಠಂ ಪಾತ್ವಂಬಿಕಾಪತಿಃ।
ಎಂದೀ ಮಂತ್ರದಿಂದ ಆತನ ಪಂಚೇಂದ್ರಿಯಂಗಳ ಮೇಲಣ ಇಂದ್ರಿಯ
ಲಿಖಿತಮಂ ತೊಡೆದು ಲಿಂಗಲಿಖಿತವಂ ಮಾಡುವುದು.
ಇನ್ನು ಮನ ಬುದ್ಧಿ ಚಿತ್ತ ಅಹಂಕಾರವೆಂಬ ಅಂತಃಕರಣ ಚತುಷ್ಟಯಂಗಳ
ನಿವರ್ತನೆಯ ಮಾಡುವ ಕ್ರಮವೆಂತೆಂದಡೆ—
ಮನದಲ್ಲಿ ಧ್ಯಾನವಾಗಿ ಬುದ್ಧಿಯಲ್ಲಿ ವಂಚನೆಯಿಲ್ಲದೆ
ಚಿತ್ತವು ದಾಸೋಹದಲ್ಲಿ ಅಹಂಕಾರವು ಜ್ಞಾನದಲ್ಲಿಟ್ಟು
ಈ ಮರ್ಯಾದೆಯಲ್ಲಿ ಚತುರ್ವಿಧಮಂ ನಿವರ್ತನೆಯಂ ಮಾಡುವುದು.
ಇನ್ನು ಆತಂಗೆ ಪಂಚಗವ್ಯಮಂ ಕೊಟ್ಟು ಏಕಭುಕ್ತೋಪವಾಸಂಗಳಂ
ಮಾಡಿಸಿ ಪಂಚಭೂತಸ್ಥಾನದ ಅಧಿದೇವತೆಗಳಂ ತೋರುವುದು
ಅದಾವೆಂದಡೆ—
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಈಶ್ವರಶ್ಚ ಸದಾಶಿವಃ।
ಏತೇ ಗರ್ಭಗತಾಯಸ್ಯ ತಸ್ಮೈ ಶ್ರೀಗುರವೇ ನಮಃ॥
ಎಂದೀ ಮಂತ್ರದಿಂದ ಆತನ ಪಂಚಭೂತ ಶುದ್ಧಿಯಂ ಮಾಡುವುದು.
ಈ ಕ್ರಮದಲ್ಲಿ ಶುದ್ಧಾತ್ಮನಂ ಮಾಡಿದ ಬಳಿಕ ಆತನನ್ನು
ಗಣತಿಂಥಿಣಿಯ ಮುಂದೆ ನಿಂದಿರಿಸುವುದು. ನಿಂದಿರ್ದಾತನಂ
ದಂಡಪ್ರಣಾಮಮಂ ಮಾಡಿಸುವ ಕ್ರಮವೆಂತೆಂದಡೆ—
ಅನಂತ ಜನ್ಮಸಂಪ್ರಾಪ್ತ ಕರ್ಮೇಂಧನ ವಿದಾಹಿನೇ।
ಜ್ಞಾನಾನಲ ಪ್ರಭಾವಾಯ ತಸ್ಮೈ ಶ್ರೀಗುರವೇ ನಮಃ
ಕರ್ಮಣಾ ಮನಸಾ ವಾಚಾ ಗುರವೇ ಭಕ್ತವತ್ಸಲಃ।

ಶರೀರಂ ಪ್ರಾಣಮರ್ಥಂ ಚ ಸದ್ಗುರುಭ್ಯೋ ನಿವೇದಯೇತ್॥
ಪ್ರಣಮ್ಯ ದಂಡವದ್ಭೂಮೌ ಅಷ್ಟಮಂತ್ರೈಃ ಸಮರ್ಚಯೇತ್।
ಶ್ರೀಗುರೋಃ ಪಾದಪದ್ಮಂಚ ಗಂಧಪುಷ್ಪಾಕ್ಷತಾದಿಭಿಃ॥
ಅನ್ಯಥಾ ವಿತ್ತಹೀನೋಽಪಿ ಗುರುಭಕ್ತಿ ಪರಾಯಣಃ।
ಕೃತ್ವಾ ದಂಡನಮಸ್ಕಾರಂ ಸ್ವಶರೀರಂ ನಿವೇದಯೇತ್॥
ಎಂದೀ ಮಂತ್ರದಿಂದ ದಂಡಪ್ರಣಾಮಮಂ ಮಾಡಿಸುವುದು.
ಆತನ ಕೈವಿಡಿದೆತ್ತುವ ಕ್ರಮವೆಂತೆಂದರೆ—
ಗುರುಃ ಪಿತಾ ಗುರುರ್ಮಾತಾ ಗುರುರೇವ ಹಿ ಬಾಂಧವಃ।
ಗುರುರ್ದೈವಾತ್ಪರಂ ನಾಸ್ತಿ ತಸ್ಮೈ ಶ್ರೀಗುರವೆ ನಮಃ॥
ಓಂ ಗುರುದೇವೋ ಭವ ಓಂ ಪಿತೃದೇವೋ ಭವ ಓಂ ಆಚಾರ್ಯದೇವೋ ಭವ।
ಎಂದೀ ಮಂತ್ರದಿಂದ ಆತನ ಕೈವಿಡಿದೆತ್ತುವುದು
ಇನ್ನು ಭೂಶುದ್ಧಿಯಂ ಮಾಡುವ ಕ್ರಮವೆಂತೆಂದಡೆ—
ಓಂ ಶಿವಶಿವ ಶಿವಾಜ್ಞಾ ವಿಷ್ಣುಪ್ರವರ್ತಮಾನುಷಾ ಪವಿತ್ರಾಪವಿತ್ರಾವನೀ
ಸರ್ವವಸ್ತುಗತೋಽಪಿ ವಾ।
ಯಃಸ್ಮರೇತ್ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಂ ಶುಚಿಃ॥
ಪೃಥ್ವಿ—ತ್ವಯಾಧೃತಾ ದೇವಿ ದೇವತ್ವಂ ವಿಷ್ಣುನಾ ಧೃತಾ।
ಪಂಚದಾರಾಮಯೋ ದೇವಿ ಪವಿತ್ರಂ ಕುರು ಚಾಸನಮ್॥
ಸಮ್ಮಾರ್ಜನಂ ಶತಂ ಪುಣ್ಯಂ ಸಹಸ್ರಮನು ಲೇಪನಮ್!
ರೇಖಾ ಶತಸಹಸ್ರೇಷು ಅನಂತಂ ಪದ್ಮಮುಚ್ಯತೇ॥
ಬಂಧೋ ಭವಪರಶ್ಚೈವ ಸ್ವಸ್ತಿಕಂ ಶತ್ರುನಾಶನಮ್।
ಪದ್ಮಂ ಪುಣ್ಯ ಫಲಂ ಚೈವ ಮುದ್ರಾ ತು ಮೋಕ್ಷಸಾಧನಮ್॥
ಎಂದೀ ಮಂತ್ರದಿಂದ ಭೂಶುದ್ಧಿಯಂ ಮಾಡುವುದು.
ಇನ್ನು ಆತನ ಚೌಕಮಧ್ಯದಲ್ಲಿ ಕುಳ್ಳಿರಿಸುವ ಕ್ರಮವೆಂತೆಂದಡೆ—
ಓಂ ನಮೋ ರುದ್ರೇಭ್ಯೋ ಯೇ ಪೃಥಿವ್ಯಾಂ
ಯೇಽಂತರಿಕ್ಷೇ ಯೇ ದಿವಿ ಯೇಷಾಮನ್ನಂ ವಾತೋ
ವರ್ಷಮಿಷವಸ್ತೇಭ್ಯೋ ದಶಪ್ರಾಚೀ ದಶ ದಕ್ಷಿಣಾ
ದಶಪ್ರತೀಚೀ ದಶೋದೀಚೀ ದಶೋರ್ಧ್ವಾಸ್ತೇಭ್ಯೋ
ನಮಸ್ತೇ ನಮೋ ಮೃಡಾಯ ತಸ್ಮೈ ವಿಷ್ಣೋ ಯಶ್ಚನೋ
ದ್ವೇಷ್ಟಿ ತಂ ವೊ ಜಂಭೇ ದಧಾಮಿ।
ಜಾಂ ಪೃಥಿವ್ಯಾ ಮೇರು ಪೃಷ್ಠ ಋಷಿಃ। ಕೂರ್ಮೋದೇವತಾ
ಜಗತೀ ಛಂದಃ ಆಸನೇ ವಿನಿಯೋಗಃ।
ಎಂದೀ ಮಂತ್ರದಿಂದ ಶ್ರೀಗುರು ಆತನ ಚೌಕಮಧ್ಯದಲ್ಲಿ ಕುಳ್ಳಿರಿಸುವುದು.
ಇನ್ನು ನಾಲ್ಕು ಕಲಶದ ಪ್ರತ್ಯೇಕ ಪ್ರಧಾನ ದೇವತೆಗಳಂ ಕುಳ್ಳಿರಿಸಿ

ಗುರುಕಲಶವಂ ಸ್ಥಾಪ್ಯವಂ ಮಾಡುವ ಕ್ರಮವೆಂತೆಂದಡೆ–
ಚೌಕ ಮಧ್ಯ ಸುಮಾಂಗಲ್ಯಂ ಷೋಡಶಂ ಕಲಶಂ ತಥಾ।
ಭಾಸುರಂ ತಂಡುಲಂ ತಸ್ಯ ಪಂಚಸೂತ್ರಂ ತಥೈವ ಚ॥
ತೇಷು ತೀರ್ಥಾಂಬು ಪೂರ್ಣೇಷು ನಿದಧ್ಯಾದಾಮ್ರಪಲ್ಲವಾನ್।
ದೂರ್ವಾಂಕುರ ಸುಪೂಗಾನಿ ನಾಗವಲ್ಲೀದಲಾನ್ಯಪಿ॥
ಓಂ ತತ್ಪುರುಷಾಯ ನಮಃ ತತ್ಪುರುಷವಕ್ತ್ರಾಯ ನಮಃ।
ಓಂ ಅಘೋರಾಯ ನಮಃ ಅಘೋರವಕ್ತ್ರಾಯ ನಮಃ।
ಓಂ ಸದ್ಯೋಜಾತಾಯ ನಮಃ ಸದ್ಯೋಜಾತವಕ್ತ್ರಾಯ ನಮಃ।
ಓಂ ವಾಮದೇವಾಯ ನಮಃ ವಾಮದೇವ ವಕ್ತ್ರಾಯ ನಮಃ।
ಓಂ ಈಶಾನಾಯ ನಮಃ ಈಶಾನ ವಕ್ತ್ರಾಯ ನಮಃ।
ಓಂ ತತ್ಪುರುಷ ಅಘೋರ ಸದ್ಯೋಜಾತ ವಾಮದೇವ ಈಶಾನ।
ಎಂದು ಈ ಮಂತ್ರದಿಂದ ಗುರುಕಲಶಕ್ಕೆ ಪಂಚಸೂತ್ರಂಗಳನಿಕ್ಕಿ ಪಂಚಪಲ್ಲವಂಗಳನಿಕ್ಕಿ ಪಂಚಮುಖಂಗಳನಿಕ್ಕಿ ಗುರುಕಲಶವಂ ಸ್ಥಾಪ್ಯವಂ ಮಾಡುವುದು.
ಇನ್ನು ಜಲಶುದ್ಧವಂ ಮಾಡುವ ಕ್ರಮವೆಂತೆಂದಡೆ–
ಓಂ ನಮಃ ಶಿವಾಯ ನಮಸ್ತೇ ಅಸ್ತು ಭಗವನ್
ವಿಶ್ವೇಶ್ವರಾಯ ಮಹಾದೇವಾಯ ತ್ರ್ಯಂಬಕಾಯ ತ್ರಿಪುರಾಂತಕಾಯ
ತ್ರಿಕಾಗ್ನಿಕಾಲಾಯ ಕಾಲಾಗ್ನಿರುದ್ರಾಯ ನೀಲಕಂಠಾಯ
ಮೃತ್ಯುಂಜಯಾಯ ಸರ್ವೇಶ್ವರಾಯ ಸದಾಶಿವಾಯ
ಶ್ರೀಮನ್ಮಹಾದೇವಾಯ ನಮಃ॥
ಓಂ ನಿಧನಪತಯೇ ನಮಃ ನಿಧನಪತಾಂತಿಕಾಯ ನಮಃ
ಓಂ ಊರ್ಧ್ವಾಯ ನಮಃ ಊರ್ಧ್ವಲಿಂಗಾಯ ನಮಃ
ಓಂ ಹಿರಣ್ಯಾಯ ನಮಃ ಹಿರಣ್ಯಲಿಂಗಾಯನಮಃ
ಓಂ ಸುವರ್ಣಾಯ ನಮಃ ಸುವರ್ಣಲಿಂಗಾಯ ನಮಃ
ಓಂ ದಿವ್ಯಾಯ ನಮಃ ದಿವ್ಯಲಿಂಗಾಯ ನಮಃ
ಓಂ ಭವಾಯ ನಮಃ ಭವಲಿಂಗಾಯ ನಮಃ
ಓಂ ಶಿವಾಯ ನಮಃ ಶಿವಲಿಂಗಾಯ ನಮಃ
ಓಂ ಜ್ಯೇಷ್ಠಾಯ ನಮಃ ಜ್ಯೇಷ್ಠಲಿಂಗಾಯ ನಮಃ
ಓಂ ಶ್ರೇಷ್ಠಾಯ ನಮಃ ಶ್ರೇಷ್ಠಲಿಂಗಾಯ ನಮಃ
ಓಂ ಜ್ವಾಲಾಯ ನಮಃ ಜ್ವಾಲಲಿಂಗಾಯ ನಮಃ
ಓಂ ಸ್ಥೂಲಾಯ ನಮಃ ಸ್ಥೂಲಲಿಂಗಾಯ ನಮಃ
ಓಂ ಸೂಕ್ಷ್ಮಾಯ ನಮಃ ಸೂಕ್ಷ್ಮಲಿಂಗಾಯ ನಮಃ
ಓಂ ಶೂನ್ಯಾಯ ನಮಃ ಶೂನ್ಯಲಿಂಗಾಯ ನಮಃ
ಓಂ ನೇತ್ರಾಯ ನಮಃ ನೇತ್ರಲಿಂಗಾಯ ನಮಃ

ಓಂ ಶ್ರೋತ್ರಾಯ ನಮಃ ಶ್ರೋತ್ರಲಿಂಗಾಯ ನಮಃ
ಓಂ ಘ್ರಾಣಾಯ ನಮಃ ಘ್ರಾಣಲಿಂಗಾಯ ನಮಃ
ಓಂ ಪ್ರಾಣಾಯ ನಮಃ ಪ್ರಾಣಲಿಂಗಾಯ ನಮಃ
ಓಂ ವ್ಯೋಮಾಯ ನಮಃ ವ್ಯೋಮಲಿಂಗಾಯ ನಮಃ
ಓಂ ಆತ್ಮಾಯ ನಮಃ ಆತ್ಮಲಿಂಗಾಯ ನಮಃ
ಓಂ ಪರಮಾಯ ನಮಃ ಪರಮಲಿಂಗಾಯ ನಮಃ
ಓಂ ಶರ್ವಾಯ ನಮಃ ಶರ್ವಲಿಂಗಾಯ ನಮಃ
ಓಂ ಶಾಂತಾಯ ನಮಃ ಶಾಂತಲಿಂಗಾಯ ನಮಃ
ಓಮೇತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಂ
ಸ್ಥಾಪಯತಿ ಪಾಣಿಮಂತ್ರಂ ಪವಿತ್ರಮ್॥
ಓಂ ನಮಸ್ತೇ ಸರ್ವೇ ವೈ ರುದ್ರಸ್ತಸ್ಮೈ ರುದ್ರಾಯ ನಮೋಽಸ್ತು
ನಮೋ ಹಿರಣ್ಯ ಬಾಹವೇ ಹಿರಣ್ಯ ವರ್ಣಾಯ ಹಿರಣ್ಯರೂಪಾಯ
ಹಿರಣ್ಯಪತಯೇ ಅಂಬಿಕಾಪತಯೇ ಉಮಾಪತಯೇ
ಪಶುಪತಯೇ ನಮೋ ನಮಃ॥
ಋತಂ ಸತ್ಯಂ ಪರಬ್ರಹ್ಮ ಪುರುಷಂ ಕೃಷ್ಣಪಿಂಗಲಂ।
ಊರ್ಧ್ವರೇತಂ ವಿರೂಪಾಕ್ಷಂ ವೈ ನಮಃ॥
ಓಂ ಸದ್ಯೋ ಜಾತಂ ಪ್ರಪದ್ಯಾಮಿ ಸದ್ಯೋಜಾತಾಯ ವೈ ನಮಃ
ಭವೇ ಭವೇ ನಾತಿಭವೇ ಭಜಸ್ವ ಮಾಂ ಭವೋದ್ಭವಾಯ ನಮಃ
ಓಂ ವಾಮದೇವಾಯ ನಮಃ ಪರಮಪದಾಯ ನಮಃ
ಜ್ಯೇಷ್ಠಾಯ ನಮಃ ಶ್ರೇಷ್ಠಾಯ ನಮಃ ರುದ್ರಾಯ ನಮಃ
ಕಾಲಾಯ ನಮಃ ಕಲವಿಕರಣಾಯ ನಮಃ
ಬಲಾಯ ನಮಃ ಬಲಪ್ರಮಥನಾಥಾಯ ನಮಃ
ಸರ್ವಾಯ ನಮಃ ಸರ್ವಭೂತದಮನಾಯ ನಮಃ
ಮನೋನ್ಮನಾಯ ನಮಃ॥
ಓಮಘೋರೇಭ್ಯೋಽಥ ಘೋರೇಬ್ಯೋ ಘೋರ ಘೋರತರೇಭ್ಯ
ಸರ್ವ ತತ್ಸರ್ವ ಸರ್ವೇಭ್ಯೋ ನಮಸ್ತೇ ಅಸ್ತು, ರುದ್ರರೂಪೇಭ್ಯಃ
ಶಿವೇಭ್ಯಃ ಶ್ರೀ ಸದಾಶಿವಾಯ ನಮಃ॥
ಓಂ ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ
ತನ್ನೋ ರುದ್ರಃ ಪ್ರಚೋದಯಾತ್॥
ಓಮೀಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ
ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿ ಬ್ರಹ್ಮಾಶಿವೋಮೇ
ಮೃಡೋಽಸ್ತು ಸದಾಶಿವಾಯ ನಮೋ ನಮಃ
ಕದ್ರುದ್ರಾಯಸ್ತನ್ಮಹೇ ಪ್ರಚೇತಸೇ

ಏಕಃ ಶಿವ ಏವಾಸ್ಯರಹಿತಾಯ ತೇ ನಮೋ ನಮಃ॥
ಓಂ ವಿಶ್ವಂ ಭೂತಂ ಭುವನಂ ಚಿತ್ರಂ ಬಹುಧಾ ಜಾಯಮಾನಂ ಚ ಯತ್॥
ಓಂ ಶಂ ಚ ಮೇ ಮಯಶ್ಚ ಮೇ ಪ್ರಿಯಂ ಚ ಮೇ
ಸುಕಾಮಶ್ಚ ಮೇ ಕಾಮಶ್ಚ ಮೇ ಸೌಮನಶ್ಚ ಮೇ
ಭದ್ರಂ ಚ ಮೇ ಶ್ರೇಯಶ್ಚ ಮೇ ವಶ್ಯಂ ಚ ಮೇ
ಯಶಶ್ಚ ಮೇ ಜಗಚ್ಚ ಮೇ ಭಗಶ್ಚ ಮೇ
ದ್ರವಿಣಂ ಚ ಮೇ ಯಂತಾ ಚ ಮೇ ಧರ್ತಾ ಚ ಮೇ
ಕ್ಷೇಮಂ ಚ ಮೇ ಧೃತಿಶ್ಚ ಮೇ ವಿಶ್ವಂ ಚ ಮೇ
ಮಹಶ್ಚಮೇ ಸಂವಿಚ್ಚ ಮೇ ಜ್ಞಾತ್ರಂ ಚ ಮೇ
ಸೂತಶ್ಚ ಮೇ ಪ್ರಸೂತಶ್ಚ ಮೇ ಸೀರಂ ಚ ಮೇ
ಲಯಂ ಚ ಮೇ ಮೃತಂ ಚ ಮೇ ಆಯುಷ್ಯಂ ಚ ಮೇ
ನಾಮಯಶ್ಚ ಮೇ ಜೀವಾತು ಶ್ಚ ಮೇ ದೀರ್ಘಾಯುತ್ವಂ ಚ ಮೇ
ನಮಿತ್ರಂ ಚ ಮೇ ಸುಗಂಧಂ ಚ ಮೇ ಶಯನಂ ಚ ಮೇ
ಸುಶಾಂತಂ ಚ ಮೇ ಸುದಿನಂ ಚ ಮೇ॥
ಓಂ ಸಹನಾವವತು ಸಹನೌಭುನಕ್ತು
ಸಹ ವೀರ್ಯಂ ಕರವಾವಹೈ ತೇಜಸ್ವಿನಾವಧೀತಮಸ್ತು
ಮಾ ವಿದ್ವಿಷಾವಹೈ ಓಂ ಶಾಂತಿಃ ಶಾಂತಿಃ ಶಾಂತಿಃ॥
ಎಂದೀ ಮಂತ್ರದಿಂದ ಜಲಶುದ್ಧವಂ ಮಾಡುವುದು.
ಇನ್ನು ಜಂಗಮಕ್ಕೆ ಪಾದಾರ್ಚನೆಯಂ ಮಾಡುವ ಕ್ರಮವೆಂತೆಂದಡೆ-
ಅಂಗುಷ್ಠಾಗ್ರೇ ಅಷ್ಟಷಷ್ಟಿ ತೀರ್ಥಾನಿ ನಿವಸಂತಿ ವೈ।
ಸಪ್ತಸಾಗರ ಪಾದಾಧಸ್ತದೂರ್ಧ್ವೇ ಕುಲಪರ್ವತಾಃ॥
ಚರಸ್ಯ ಪಾದತೀರ್ಥೇನ ಲಿಂಗಮಜ್ಜನಮುತ್ತಮಮ್।
ತತ್ಪ್ರಸಾದಂ ಮಹಾದೇವಿ ನೈವೇದ್ಯಂ ಶುಭ ಮಂಗಲಮ್॥
ಈ ಮಂತ್ರದಿಂದ ಪಾದಾರ್ಚನೆಯಂ ಮಾಡುವುದು.
ಇನ್ನು ಕುಮಾರಶಾವನು ಜಲಾಧಿವಾಸವ ಮಾಡುವ ಕ್ರಮವೆಂತೆಂದಡೆ-
ಜ್ವಾಲಾಮಾಲಾವೃತಾಂಗಾಯ ಜ್ವಲನಸ್ತಂಭರೂಪಿಣೇ।
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ॥
ಅನಾದಿಮಲ ಸಂಸಾರ ರೋಗ ವೈದ್ಯಾಯ ಶಂಭವೇ।
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ॥
ಎಂದೀ ಮಂತ್ರದಿಂದ ಕುಮಾರಶಾವನ್ನು ಜಲಾಧಿವಾಸವ ಮಾಡಿಸುವುದು.
ಇನ್ನು ಆ ಶಿಷ್ಯನ ಹಸ್ತವಂ ಶೋಧಿಸುವ ಕ್ರಮವೆಂತೆಂದಡೆ-
ಓಂ ತ್ರಾಸ್ತಿಯಂ ವಿಶಕ್ತಃ।
ಶ್ರೀಕರಂ ಚ ಪವಿತ್ರಂ ಚ ರೋಗಶೋಕ ಭಯಾಪಹಮ್।

ಮನಸಾ ಸಹ ಹಸ್ತೇಭ್ಯೋ ಹದ್ಭ್ಯಾಮುದ್ಧರಣಾಯ ಚ||
ಎಂದೀ ಮಂತ್ರದಿಂದ ಶಿಷ್ಯನ ಹಸ್ತವಂ ಶೋಧಿಸುವುದು.
ಇನ್ನು ವಿಭೂತಿಯ ಧರಿಸುವ ಕ್ರಮವೆಂತೆಂದಡೆ-
ಮೂರ್ಧ್ನಿ ಲಲಾಟೇ ಕರ್ಣೇ ಚ ಚಕ್ಷುಷೋರ್ಘ್ರಾಣಕೇ ತಥಾ|
ಆಸ್ಯೇ ದ್ವಾಭ್ಯಾಂ ಚ ಬಾಹುಭ್ಯಾಂ ತನ್ಮೂಲ ತನವಸ್ತಥಾ||
ಮಣಿಬಂಧೇ ಚ ಹೃತ್ಪಾರ್ಶ್ವೇ ನಾಭೌ ಮೇಢ್ರೇ ತಥೈವ ಚ|
ಉರೌ ಚ ಜಾನುಕೇ ಚೈವ ಜಂಘಾ ಪೃಷ್ಠೇ ತಥೈವ ಚ||
ಪಾದೇ ದ್ವಾತ್ರಿಂಶತಿಶ್ಚೈವ ಪಾದಸಂಧೌ ಯಥಾ ಕ್ರಮಾತ್|
ಇತ್ಯುದ್ಧೂಳನಂ ಸ್ನಾನಂ ದಾರಣಂ ಮೋಕ್ಷಕಾರಣಮ್||
ಎಂದೀ ಮಂತ್ರದಿಂದ ಆ ಶಿಷ್ಯನ ಮೂವತ್ತೆರಡು ಸ್ಥಾನಗಳಲ್ಲಿ
ವಿಭೂತಿಯುಂ ಧರಿಸುವುದು.
ಇನ್ನು ರುದ್ರಾಕ್ಷಿಯುಂ ಧರಿಸುವ ಕ್ರಮವೆಂತೆಂದಡೆ-
ಓಂ ಹ್ರೂಂ ಶ್ರೂಂ ಭ್ರೂಂ ರೂಂ ಬ್ರೂ-
ಪ್ರರುರೂಮಪಿ ಸ್ರೀಯುಂ ಕ್ಷೇಕ್ಷಮುಪಿಕ್ಷೂ ಹ್ರೀಂ ನಮೋಂತಿ ಮಯುಯೇ
ಇತಿ ಪೂರ್ವೋಕ್ತ ಮಂತ್ರಾನಂತರೇ ಪ್ರಾಣನಾಯಮ್ಯ
"ಸಮಸ್ತ ಪಾಪಕ್ಷಯಾರ್ಥಂ ಶಿವಜ್ಞಾನಾವಾಪ್ತ್ಯರ್ಥಂ
ಸಮಷ್ಟಿಮಂತ್ರೈಃ ಸಹ ಧಾರಣಂ ಕರಿಷ್ಯೇ" ಇತಿ ಸಂಕಲ್ಪ್ಯ-
ಶಿರಸಾ ಧಾರಯೇತ್ಕೋಟಿ ಕರ್ಣಯೋರ್ದಶಕೋಟಿಭಿಃ|
ಶತಕೋಟಿ ಗಳೇ ಬದ್ಧಂ ಸಹಸ್ರಂ ಬಾಹುಮೂಲಯೋಃ||
ಅಪ್ರಮಾಣ ಫಲಂ ಹಸ್ತೇ ರುದ್ರಾಕ್ಷಂ ಮೋಕ್ಷ ಸಾಧನಮ್|
ಎಂದೀ ಮಂತ್ರದಿಂದ ಆ ಶಿಷ್ಯನ ಹಸ್ತಂಗಳಲ್ಲಿ ರುದ್ರಾಕ್ಷಿಯುಂ ಧರಿಸುವುದು.
ಇನ್ನು ಜಲಾಧಿವಾಸದೊಳಗಣ ಕುಮಾರಠಾವಂ ತೆಗೆಯುವ ಕ್ರಮವೆಂತೆಂದಡೆ-
ಮಹಾದೇವಾಯ ಮಹತೇ ಜ್ಯೋತಿಷೇಽನಂತತೇಜಸೇ|
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ||
ಎಂದೀ ಮಂತ್ರದಿಂದ ಜಲಾಧಿವಾಸದೊಳಗಣ ಕುಮಾರಠಾವಂ ತೆಗೆಯುವದು.
ಇನ್ನು ಶಿಲೆಯ ಪೂರ್ವಾಶ್ರಯವಂ ಕಳೆವ ಪರಿಯೆಂತೆಂದಡೆ-
ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ ವಿಶ್ವತೋ ಬಾಹುರುತ
ವಿಶ್ವತಃ ಪಾತ್ ಸಬಾಹುಭ್ಯಾಂ ದಮತಿ ಸಂಪದಂ ತ್ರಯೀ-
ದ್ಯಾವಾಭೂಮೀ ಜನಯನ್ ದೇವ ಏಕ ಏವ||
ಎಂದೀ ಮಂತ್ರದಿಂದ ಆ ಶಿಲೆಯ ಪೂರ್ವಾಶ್ರಯವಂ ಕಳೆವುದು.
ಇನ್ನು ಆ ಶಿಲೆಗೆ ಪ್ರಾಣ ಪ್ರತಿಷ್ಠೆಯುಂ ಮಾಡುವ ಕ್ರಮವೆಂತೆಂದಡೆ-
ಓಂ ವಿಶ್ವಾಧಿಕೋ ರುದ್ರೋ ಮಹರ್ಷಿಃ ಸರ್ವೋ ಹ್ಯೇಷ ರುದ್ರ-
ತಸ್ಮೈ ರುದ್ರಾಯ ತೇ ಅಸ್ತು ನಮೋ ರುದ್ರೋ ವೈ ಕ್ರೂರೋ-

ರುದ್ರಃ ಪಶುನಾಮಧಿಪತಿಸ್ತಥಾ ದೇವಾ ಊರ್ಧ್ವಬಾಹವೊ—
ರುದ್ರಾ ಸ್ತುನ್ವಂತಿ। ಯಸ್ಮಾತ್ಪರಂ ನಾಪರಮಸ್ತಿ ಕಿಂಚಿದ್ಯಸ್ಮಾನ್ನ-
ಣೀಯೊ ನ ಧ್ಯೇಯಃ ಕಿಂಚಿತ್। ಶಿವ ಏಕೋ ಧ್ಯೇಯಃ
ಎಂದೀ ಮಂತ್ರದಿಂದ ಆ ಶಿಲೆಗೆ ಪ್ರಾಣಪ್ರತಿಷ್ಠೆಯಂ ಮಾಡುವುದು.
ಇನ್ನು ದೇವರಿಗೆ ಸ್ನಪನಕ್ಕೆರೆಯುವ ಕ್ರಮವೆಂತೆಂದಡೆ—
ಸಪುಪ್ಪ ಶೀರ್ಷಕಂ ಲಿಂಗಂ ತಥಾ ಸ್ನಪನಮಾಚರೇತ್।
ಪಯೋಧಧ್ಯಾಜ ಮಧ್ವಿಕ್ಷುರಸೈರ್ಮೂಲೇನ ಪಂಚಭಿಃ॥
ಓಮನಂತ ಶುಚಿರಾಯುಕ್ಷ ಭಕ್ತಂ ತಿಸ್ತರತಾತ್
ಪರಮಂ ನಿಯಮುಚ್ಯತೇರ್ಮರಾತಸ್ಯ
ಅವಿರಸ ಭುವನಂ ಜ್ಯೋತಿರೂಪಕಮ್॥
ಎಂದೀ ಮಂತ್ರದಿಂದ ದೇವರಿಗೆ ಸ್ನಪನಕ್ಕೆರೆವುದು.
ಇನ್ನು ದೇವರಿಗೆ ವಸ್ತ್ರವಂ ಸಮರ್ಪಿಸುವುದೆಂತೆಂದಡೆ—
ವ್ಯೋಮರೂಪ ನಮಸ್ತೇಽಸ್ತು ವ್ಯೋಮಾತ್ಮಾಯ ಪ್ರಪರ್ಪಿಣೇ।
ವಾಸಾಂಸಿ ಚ ವಿಚಿತ್ರಾಣಿ ಸರವಂತಿ ಮೃದೂನಿ ಚ॥
ಶಿವಾಯ ಗುರವೇ ದತ್ತಂ ತಸ್ಯ ಪುಣ್ಯ ಫಲಂ ಶೃಣು।
ಏವಂ ತದ್ವಸ್ತ್ರ ತಂತೂನಾಂ ಪರಿಸಂಖ್ಯಾತ ಏವ ಹಿ॥
ತಾವದ್ವರ್ಷ ಸಹಸ್ರಾಣಿ ರುದ್ರಲೋಕೇ ಮಹೀಯತೇ।
ಎಂದೀ ಮಂತ್ರದಿಂದ ದೇವರಿಗೆ ವಸ್ತ್ರವಂ ಸಮರ್ಪಿಸುವುದು.
ಇನ್ನು ದೇವರಿಗೆ ಗಂಧವಂ ಸಮರ್ಪಿಸುವ ಕ್ರಮವೆಂತೆಂದಡೆ—
ಚಂದನಾಗರು ಕರ್ಪೂರ ತಮಾಲದಳ ಕುಂಕುಮಂ।
ಉಶೀರಕೋಷ್ಠಸಂಯುಕ್ತಂ ಶಿವಗಂಧಾಷ್ಟಕಂ ಸ್ಮೃತಮ್॥
ಆಚಮಾನಸ್ತು ಸಿದ್ಧಾರ್ಥಂ ಅವಧಾರ್ಯ ಯಥೈವ ಚ।
ಅಷ್ಟಗಂಧಸಮಾಯುಕ್ತಂ ಪುಣ್ಯಪ್ರದ ಸಮನ್ವಿತಮ್॥
ಎಂದೀ ಮಂತ್ರದಿಂದ ದೇವರಿಗೆ ಗಂಧವಂ ಸಮರ್ಪಿಸುವುದು.
ಇನ್ನು ದೇವರಿಗೆ ಅಕ್ಷತೆಯನರ್ಪಿಸುವ ಕ್ರಮವೆಂತೆಂದಡೆ—
ಅಭಿನ್ನ ಶಂಖವಚ್ಚೈವ ಸುಶ್ವೇತ ವ್ರೀಹಿ ತಂಡುಲಮ್।
ಸ್ಮೃತಂ ಶಿವಾರ್ಚನಾಯೋಗ್ಯಂ ನೇತರಂ ಚ ವರಾನನೇ॥
ಗಂಧಾಕ್ಷತ ಸಮಾಯುಕ್ತಂ ಶಿವಮುಕ್ತೇಶ್ಚಕಾರಣಮ್।
ಸರ್ವವಿಘ್ನ ವಿನಿರ್ಮುಕ್ತಂ ಶಿವಲೋಕೇ ಮಹೀಯ ತೇ।
ಎಂದೀ ಮಂತ್ರದಿಂದ ದೇವರಿಗೆ ಅಕ್ಷತೆಯಂ ಸಮರ್ಪಿಸುವುದು.
ಇನ್ನು ದೇವರಿಗೆ ಪುಷ್ಪವಂ ಸಮರ್ಪಿಸುವ ಕ್ರಮವೆಂತೆಂದಡೆ—
ಮಲ್ಲಿಕೋತ್ಪಲಪುನ್ನಾಗಕದಂಬಾಶೋಕ ಚಂಪಕಮ್।

ಸೇವಂತಿ ಕರ್ಣಿಕಾರಾಖ್ಯಂ ತ್ರಿಸಂಧ್ಯಾರಕ್ತ ಕೇಸರೀ||
ಕದಂಬವನಸಂಭೂತಂ ಸುಗಂಧಿಂ ಚ ಮನೋಹರಮ್|
ತತ್ವತ್ರಯಾತ್ಮಕಂ ದಿವ್ಯಂ ಪುಷ್ಪಂ ಶಂಭೋಽರ್ಪಯಾಮಿ ತೇ||
ಎಂದೀ ಮಂತ್ರದಿಂದ ದೇವರಿಗೆ ಪುಷ್ಪವ ಸಮರ್ಪಿಸುವುದು.
ಇನ್ನು ದೇವರಿಗೆ ಧೂಪವ ಸಮರ್ಪಿಸುವ ಕ್ರಮವೆಂತೆಂದಡೆ—
ಗುಗ್ಗುಲಂ ಘೃತಸಂಯುಕ್ತಂ ಲಿಂಗಮಭ್ಯರ್ಚ್ಯಸುಂದರೇತ್|
ವನಸ್ಪತಿವಾಸನೋಕ್ತಂ ಗಂಧಂ ದದ್ಯಾತ್ತ ಮುತ್ತಮಮ್||
ಅರ್ಪಣಾದೇವ ದೇವಾಯ ಭಕ್ತಪಾಪಹರಾಯ ಚ|
ಎಂಬೀ ಮಂತ್ರದಿಂದ ದೇವರಿಗೆ ಧೂಪವನರ್ಪಿಸುವುದು.
ಇನ್ನು ದೇವರಿಗೆ ದೀಪವ ಸಮರ್ಪಿಸುವ ಕ್ರಮವೆಂತೆಂದಡೆ—
ಸ್ವಪ್ರಕಾಶ ಮಹಾತೇಜ ಸರ್ವಾಂತಸ್ತಿಮಿರಾಪಹ|
ಸಬಾಹ್ಯಾಭ್ಯಂತರಂ ಜ್ಯೋತಿರ್ದೀಪೋಽಯಂ ಪ್ರತಿಗೃಹ್ಯತಾಮ್||
ಎಂಬೀ ಮಂತ್ರದಿಂದ ದೇವರಿಗೆ ದೀಪವನರ್ಪಿಸುವುದು.
ಇನ್ನು ದೇವರಿಗೆ ನೈವೇದ್ಯವನರ್ಪಿಸುವ ಕ್ರಮವೆಂತೆಂದಡೆ—
ಕ್ಷೀರವಾರಿಧಿಸಂಭೂತಮಮೃತಂ ಚಂದ್ರಸನ್ನಿಭಮ್|
ನೈವೇದ್ಯಂ ಷಡ್ರಸೋಪೇತಂ ಶಾಶ್ವತಾಯ ಸಮರ್ಪಿತಮ್||
ಎಂಬೀ ಮಂತ್ರದಿಂದ ದೇವರಿಗೆ ನೈವೇದ್ಯವ ಸಮರ್ಪಿಸುವುದು.
ಇನ್ನು ದೇವರಿಗೆ ತಾಂಬೂಲವ ಸಮರ್ಪಿಸುವ ಕ್ರಮವೆಂತೆಂದಡೆ—
ಪೂಗಸಂಭೂತ ಕರ್ಪೂರ ಚೂರ್ಣ ಪರ್ಣಾದ್ವಿಸಂಯುತಃ|
ತ್ರಯೋದಶಕಲಾತ್ಮಾಸಂ ತಾಂಬೂಲಂ ಫಲಮುಚ್ಯತೇ||
ಎಂದೀ ಮಂತ್ರದಿಂದ ದೇವರಿಗೆ ತಾಂಬೂಲವ ಸಮರ್ಪಿಸುವುದು.
ಇನ್ನು ದೇವರಿಗೆ ಮಂತ್ರಪುಷ್ಪವ ಸಮರ್ಪಿಸುವ ಕ್ರಮವೆಂತೆಂದಡೆ—
ತ್ರಿಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಮ್|
ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್||
ಎಂಬೀ ಮಂತ್ರದಿಂದ ದೇವರಿಗೆ ಮಂತ್ರಪುಷ್ಪವ ಸಮರ್ಪಿಸುವುದು.
ಇನ್ನು ದೇವರಿಗೆ ನಮಸ್ಕಾರವ ಮಾಡುವ ಕ್ರಮವೆಂತೆಂದಡೆ—
ಪೀಠಂಯಸ್ಯಾ ಧರಿತ್ರೀ ಜಲಧರಕಲಶಂ ಲಿಂಗಮಾಕಾಶಮೂರ್ತಿಂ
ನಕ್ಷತ್ರಂ ಪುಷ್ಪಮಾಲ್ಯಂ ಗ್ರಹಗಣಕುಸುಮಂ ನೇತ್ರ ಚಂದ್ರಾರ್ಕವಹ್ನಿಮ್
ಕುಕ್ಷಿಂ ಸಪ್ತ ಸಮುದ್ರಂ ಭುಜಗಿರಿ ಶಿಖರಂ ಸಪ್ತಪಾತಾಳಪಾದಂ
ವೇದಂ ವಕ್ತ್ರಂ ಷಡಂಗಂ ದಶದಿಶವಸನಂ ದಿವ್ಯಲಿಂಗಂ ನಮಾಮಿ||
ಎಂಬೀ ಮಂತ್ರದಿಂದ ದೇವರಿಗೆ ನಮಸ್ಕಾರವ ಮಾಡುವುದು.
ಇನ್ನು ದೇವರಿಗೆ ಅನುಷ್ಠಾನವ ಮಾಡುವ ಕ್ರಮವೆಂತೆಂದಡೆ—
"ಏತೇಷಾಂ ಪುರುಷೋಽಸ್ತು"

ಎಂದೀ ಮಂತ್ರದಿಂದ ದೇವರಿಗೆ ಅನುಷ್ಠಾನವಂ ಮಾಡುವುದು.
ಇನ್ನು ಅನುಷ್ಠಾನವಂ ಮಾಡಿದ ಬಳಿಕ ಶ್ರೀಗುರುವು ಶಿಷ್ಯಂಗೆ
ಉರಸ್ಥಲದ ಸಜ್ಜೆಯಲ್ಲಿ ಲಿಂಗವ ಧರಿಸುವ ಕ್ರಮವೆಂತೆಂದಡೆ—
ಅಯಂ ಮೇ ಹಸ್ತೋ ಭಗವಾನ್ ಅಯಂ ಮೇ ಭಗವತ್ತರಃ।
ಅಯಂ ಮೇ ವಿಶ್ವಭೇಷಜಃ ಅಯಂ ಶಿವಾಭಿಮರ್ಶನಃ॥
ಅಯಂ ಮಾತಾ ಅಯಂ ಪಿತಾ ಅಯಂ ಜೀವಾತುರಗಮತ್।
ಇದಂ ತವ ಸಮರ್ಪಣಂ ಸುಬಂಧವೇ ನಿರೀಹಿ॥
ಎಂದೀ ಮಂತ್ರದಿಂದ ಆ ಶಿಷ್ಯನ ಅಂಗದ ಮೇಲೆ ಲಿಂಗಪ್ರತಿಷ್ಠೆಯಂ
ಮಾಡುವುದು.
ಇನ್ನು ಆ ಶಿಷ್ಯನ ವಾಯುಪ್ರಾಣಿತ್ವವಂ ಕಳೆದು ಲಿಂಗಪ್ರಾಣಿಯ
ಮಾಡುವ ಕ್ರಮವೆಂತೆಂದಡೆ—
ಓಂ ಅಪಿ ಚ ಪ್ರಾಣಾಪಾನವ್ಯಾನೋದಾನ ಸಮಾನಾದಿ
ತಚ್ಚೈತನ್ಯ ಸ್ವರೂಪಸ್ಯ ಪರಮೇಶ್ವರಸ್ಯ॥
ಓಂ ಶ್ರದ್ಧಾಯಾಂ ಪ್ರಾಣೇನ ವಿಷ್ಣೋಽಮೃತಂ ಜುಹೋಮಿ
ಶಿವೋ ಮಾಂ ವಿಷಪ್ರದಾಹಾಯ ಪ್ರಾಣಾಯ ಸ್ವಹಾ॥
ಓಂ ಶ್ರದ್ಧಾಯಾಮಪಾನೇನ ವಿಷ್ಣೋಽಮೃತಂ ಜುಹೋಮಿ
ಶಿವೋ ಮಾಂ ವಿಷಪ್ರದಾಹಾಯ ಅಪಾನಾಯ ಸ್ವಹಾ॥
ಓಂ ಶ್ರದ್ಧಾಯಾಂ ವ್ಯಾನೇನ ವಿಷ್ಣೋಽಮೃತಂ ಜುಹೋಮಿ
ಶಿವೋ ಮಾಂ ವಿಷಪ್ರದಾಹಾಯ ವ್ಯಾನಾಯ ಸ್ವಹಾ॥
ಓಂ ಶ್ರದ್ಧಾಯಾಮುದಾನೇನ ವಿಷ್ಣೋಽಮೃತಂ ಜುಹೋಮಿ
ಶಿವೋ ಮಾಂ ವಿಷಪ್ರದಾಹಾಯ ಉದಾನಾಯ ಸ್ವಹಾ॥
ಓಂ ಶ್ರದ್ಧಾಯಾಂ ಸಮಾನೇನ ವಿಷ್ಣೋಽಮೃತಂ ಜುಹೋಮಿ
ಶಿವೋ ಮಾಂ ವಿಷಪ್ರದಾಹಾಯ ಸಮಾನಾಯ ಸ್ವಹಾ॥
ಎಂದೀ ಮಂತ್ರದಿಂದ ಆ ಶಿಷ್ಯನ ವಾಯುಪ್ರಾಣಿತ್ವವ ಕಳೆದು ಲಿಂಗ
ಪ್ರಾಣಿಯಂ ಮಾಡುವುದು.
ಇನ್ನು ಆ ಶಿಷ್ಯಂಗೆ ಅಗೋರೋದಕವನ್ನು ಸರ್ವಾಂಗದ ಮೇಲೆ ತಳಿವ
ಕ್ರಮವೆಂತೆಂದಡೆ—
ಶಿವಃ ಪಶ್ಯತಿ ಶಿವೋ ದೃಶ್ಯತೇ ಅಹೋರಾತ್ರಂ
ಶಿವಸನ್ನಿಧಾಪ್ಯೈಕಮೇನಂ ಪ್ರಯುಜ್ಯತೇ॥
ತ್ರೈಜಾತಾಮಿ ಯಜೇಕಂ ಆ ಸರ್ವೇಭ್ಯೋ ಹಿ
ಕಾಮೇಭ್ಯೋ ಅಗ್ನೀನಾಂ ಪ್ರಯುಜ್ಯತೇ॥
ಸರ್ವೇಭ್ಯೋ ಹಿ ಕಾಮೇಭ್ಯೋ ಅಗ್ನೀನಾಂ ಪ್ರಯುಜ್ಯತೇ
ತ್ರೈಜಾತಾಮಿಯಜೇಕಂ ಅಭಿಚಾರನ್॥ಇತಿ॥

ಸರ್ವೋ ವೈ ಏಷ ಯಜ್ಞಃ ಯತ್ರೋಪಾತ್ತ ಯಜ್ಞ
ಸರ್ವೇಪಾಪೇನಂ ಯಜ್ಞೇನ ಜಾಯತೇ॥
ನ ದೇವತಾಭ್ಯಾಂ ಆ ವೃಚ್ಚತೇ ದ್ವಾದಶಕಪಾಲ ಪೌರುಷೋ ಭವತಿ॥
ತಂ ತೇ ಯಜೇತ ಕಪಾಲ ಸ್ತ್ರೀಸಾಮುದ್ರೈ—
ತ್ರಯಂ ತ್ರಯೀ ಮೇ ಲೋಕಾ ಏಷಾವಮ್—
ಲೋಕಾನಾಮಷ್ಯತ್ತರೋತ್ತರ ಜ್ಞೇಯೋ ಭವತಿ॥
ಎಂದೀ ಮಂತ್ರದಿಂದ ಆ ಶಿಷ್ಯಂಗೆ ಸರ್ವಾಂಗದಲ್ಲಿ ಅಗ್ರೋದಕವಂ ತಳೆವುದು.
ಇನ್ನು ಆ ಶಿಷ್ಯನ ಭಾಳದಲ್ಲಿ ವಿಭೂತಿಯ ಪಟ್ಟವಂ ಕಟ್ಟುವ ಕ್ರಮವೆಂತೆಂದಡೆ—
ಓಂ ತ್ರಿಪುಂಡ್ರಂ ಸತತಂತ್ರಿಪುಂಡ್ರಂ
ಸರ್ವದೇವ ಲಲಾಟ ಪಟ್ಟತ್ರಿಪುಂಡ್ರಂ
ಸಪ್ತ ಜನ್ಮಕೃತಂ ಪಾಪಂ ಭಸ್ಮೀಭೂತಂ ತತಃ ಕ್ಷಣಮ್॥
ಎಂದೀ ಮುತ್ರದಿಂದ ಆ ಶಿಷ್ಯನ ಭಾಳದಲ್ಲಿ ವಿಭೂತಿ ಪಟ್ಟವಂ ಕಟ್ಟುವುದು.
ಇನ್ನು ಆ ಶಿಷ್ಯನ ದುರಕ್ಷರವ ತೊಡೆವ ಕ್ರಮವೆಂತೆಂದಡೆ—
ಐಶ್ವರ್ಯಕಾರಣಾದ್ಭೂತಿರ್ಭಾಸನಾದ್ಭಸಿತಂ ತಥಾ।
ಸರ್ವಾಂಗಾಭ್ಯರ್ಚನಾದ್ಭಸ್ಮ ಚಾಪದಕ್ಷರಣಾತ್ ಕ್ಷರಂ॥
ತತೋಭೂತಪ್ರೇತ ಪಿಶಾಚ ಬ್ರಹ್ಮರಾಕ್ಷಸ—
ಅಪಸ್ಮಾರಭವಭೀತಿಭ್ಯೋ ಭೀಕಾರಣಾದ್ರಕ್ಷಾ ರಕ್ಷತೇ॥
ಏತಾನಿ ತಾನಿ ಶಿವಮಂತ್ರ ಪವಿತ್ರತಾನಿ
ಭಸ್ಮಾನಿ ಕಾಮದಹನಾಂಗ ವಿಭೂಷಿತಾನಿ।
ತ್ರೈಪುಂಡ್ರಕಾನಿ ರಚಿತಾನಿ ಲಲಾಟಪಟ್ಟೇ
ಲುಂಪಂತಿ ದೈವಲಿಖಿತಾನಿ ದುರಕ್ಷರಾಣಿ॥
ಎಂದೀ ಮಂತ್ರದಿಂದ ಆ ಶಿಷ್ಯನ ದುರಕ್ಷರವಂ ತೊಡೆವುದು.
ಇನ್ನು ಆ ಶಿಷ್ಯನ ಲಲಾಟದಲ್ಲಿ ಲಿಂಗಲಿಖಿತವಂ ಬರೆವ ಕ್ರಮವೆಂತೆಂದಡೆ—
"ಓಂ ಓಂ ಓಂ ನಮಃಶಿವಾಯ ಸರ್ವಜ್ಞಾನಧಾಮ್ನೇ"
ಎಂದೀ ಮಂತ್ರದಿಂದ ಆ ಶಿಷ್ಯನ ಲಲಾಟದಲ್ಲಿ ಶಿವಲಿಖಿತಮಂ ಬರೆವುದು.
ಇನ್ನು ಆ ಶಿಷ್ಯನ ಮಸ್ತಕದಲ್ಲಿ ಹಸ್ತವನಿರಿಸುವ ಕ್ರಮವೆಂತೆಂದಡೆ—
ಉದ್ಯದ್ಭಾಸ್ಕರ ಕೋಟಿ ಪ್ರಕಾಶ ಮಹಾದರ್ಶನ ದಿವ್ಯಮೂರ್ತಿಭೀಷಣಮ್।
ಭುಜಂಗ ಭೂಷಣಂ ಧ್ಯಾಯೇ ದಿವ್ಯಾಯುಧಂ ರುದ್ರಮ್।
ಸರ್ವೈಸ್ತಪಸ್ವಿಭಿಃ ಪ್ರೋಕ್ತಂ ಸರ್ವಜ್ಞೇಷು ಭಾಗಿನಮ್॥
ರುದ್ರಭಕ್ತಂ ಸ್ಮೃತಾಃ ಸರ್ವೇ ತ್ರಿಪುಂಡ್ರಾಂಕಿತ ಮಸ್ತಕಮ್।
ಎಂದೀ ಮಂತ್ರದಿಂದ ಆ ಶಿಷ್ಯನ ಮಸ್ತಕದ ಮೇಲೆ ಹಸ್ತವನ್ನಿರಿಸುವುದು.
ಇನ್ನು ಆ ಶಿಷ್ಯನ ಕರ್ಣದಲ್ಲಿ ಶಿವಮಂತ್ರವಂ ನಿರೂಪಿಸುವ ಕ್ರಮವೆಂತೆಂದಡೆ—

ಕರ್ಣದ್ವಾರೇ ಯಥಾವಾಕ್ಯಂ ಸದ್ಗುರೋರ್ಲಿಂಗಮೀರ್ಯತೇ।
ಇಷ್ಟಪ್ರಾಣಸ್ತಥಾಭಾವೋ ತ್ರಿಧಾಮೈಕ್ಯಮಿದಂ ಶೃಣು॥
ಕರ್ಣೇ ಶಿಷ್ಯಸ್ಯ ಶನಕೈಃ ಶಿವಮಂತ್ರಮುದೀರಯೇತ್॥
ಸ ತು ಬದ್ಧಾಂಜಲಿಃ ಶಿಷ್ಯೋ ಮಂತ್ರತದ್ಧ್ಯಾನಮಾನಸಃ।
ಎಂದೀ ಮಂತ್ರದಿಂದ ಆ ಶಿಷ್ಯನ ಕರ್ಣದಲ್ಲಿ ಶಿವಮಂತ್ರಮಂ ನಿರೂಪಿಸುವುದು.
ಇನ್ನು ಶತಪತ್ರದೊಳಗಣ ಮನಪ್ರಾಣದೊಳಗಿಪ್ಪ
ಪ್ರಾಣಲಿಂಗಕ್ಕೊಂದು ಇಷ್ಟಲಿಂಗ ಸ್ಥಲಮಂ ತೋರಿಸಿ
ಆ ಶಿಷ್ಯನಂ ಕೃತಕೃತ್ಯನಂ ಮಾಡಿದ ಶ್ರೀಗುರುವಿಂಗೆ
ನಮೋ ನಮಃ ಎಂದು ಬದುಕಿದೆನಯ್ಯಾ
ಕೂಡಲಚೆನ್ನಸಂಗಮದೇವಾ. ॥ ೬೩೪ ॥

೧೪೮೮

ಭವಿತನಕ್ಕೆ ಹೇಸಿ ಭಕ್ತನಾದಹೆನೆಂದರೆ,
ಆ ಭವಿಯ ಪೂರ್ವಾಶ್ರಯವ ಕಳೆದು ಭಕ್ತನಮಾಡುವ ಪರಿಯೆಂತುಟಯ್ಯಾ?
ಆತನ ಕಾಯಶುದ್ಧನ ಮಾಡುವುದು, ಜೀವಶುದ್ಧನ ಮಾಡುವುದು,
ಆತ್ಮಶುದ್ಧನ ಮಾಡುವುದು, ಮಂತ್ರಶುದ್ಧನ ಮಾಡುವುದು,
ವಾಕು ಪಾಣಿ ಪಾದ ಪಾಯು ಗುಹ್ಯವೆಂಬ
ಕರ್ಮೇಂದ್ರಿಯಂಗಳ ಶುದ್ಧನ ಮಾಡುವುದು.
ಶ್ರೋತ್ರ ನೇತ್ರ ಜಿಹ್ವೆ ತ್ವಕ್ಕು ಘ್ರಾಣವೆಂಬ
ಬುದ್ಧೀಂದ್ರಿಯಂಗಳ ಶುದ್ಧನ ಮಾಡುವುದು.
ಸುತ್ತಿರ್ದ ಮಾಯಾಪ್ರಪಂಚಮಂ ಬಿಡಿಸಿ,
ಜೀವನೆ ಶಿವನೆಂಬ ಪರಿಯಾಯಮಂ ಕೆಡಿಸಿ
ಶಿವನೆ ಜೀವನೆಂಬ ಪರಿಯಾಯಮಂ ತೋರಿ ಜೀವಶುದ್ಧನ ಮಾಡುವುದು.
ಪಂಚಭೂತಂಗಳ ಅಧಿದೇವತೆಗಳಂ ತೋರಿ ಪಂಚವಕ್ತ್ರಂಗಳಂ ನೆಲೆಗೊಳಿಸಿ
ಅವರ ವರ್ಣ–ಶ್ವೇತ ಪೀತ ಹರಿತ ಕಪೋತ
ಮಾಂಜಿಷ್ಟ ಗೌರವರ್ಣಂಗಳಂ ತೋರಿ
ಪಂಚಭೂತಶುದ್ಧನಂ ಮಾಡುವುದು.
'ಜೀವಾತ್ಮಾ ಪರಮಾತ್ಮಾ ಚ' ಎಂಬ ಶ್ರುತಿಯಿಂದ, ಆತ್ಮಶುದ್ಧನ ಮಾಡುವುದು,
ಇಂತು ಸರ್ವಶುದ್ಧನ ಮಾಡುವುದು.
ಆತನಂ ತಂದು ಗಣತಿಂಥಿಣಿಯ ಮುಂದೆ ನಿಲಿಸಿ,
"ಕರ್ಮಣಾ ಮನಸಾ ವಾಚಾ ಗುರು ಭಕ್ತ್ಯಾಂ ತು ವತ್ಸಲಃ।
ಶರೀರಮರ್ಥಂ ಪ್ರಾಣಂ ಚ ಸದ್ಗುರುಭ್ಯೋ ನಿವೇದಯೇತ್॥
ಎಂದು ಮನಃ ಸ್ಮರಣೆಯುಂ ಮಾಡಿಸಿ, ಶಿಷ್ಯನ ಭವಚ್ಛೇದನಂ ಮಾಡಿ

ಚೌಕಮಧ್ಯದಲ್ಲಿ ಕುಳ್ಳಿರಿಸಿ,
‘ಓಂ ಸ ಮೇ ಕಾಮಾನ್ ಕಾಮ ಕಾಮಾಯ ಮಹ್ಯಂ’ ಎಂಬ ಮಂತ್ರದಿಂದ
ಅಗ್ರೋದಕವಂ ತಳಿದು, ಭಾಳದಲ್ಲಿ ವಿಭೂತಿಯ ಪಟ್ಟವಂ ಕಟ್ಟಿ
ಮಸ್ತಕದ ಕಳಸದ ಮೇಲೆ ಹಸ್ತವನ್ನಿಳುಹಿ,
[ಸಹಸ್ರದಳ] ಕಮಳದೊಳಗಿಪ್ಪ ಮಾನಸ ಪೃಥ್ವಿಯಿಂದ
ಪ್ರಾಣಲಿಂಗಸ್ಥಳಮಂ ತೋರಿ,
ಸ್ಥಾವರ ಪೂಜೆಯಂ ಮಾಣಿಸಿ,
ಎನ್ನ ಕೃತಾರ್ಥನಂ ಮಾಡಿದ ಕೂಡಲಚೆನ್ನಸಂಗಯ್ಯಾ
ನಿಮ್ಮ ಸಂಗನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ. || ೬೩೫ ||

೧೪೪೯

ಭವಿತನವ ಕಳೆದು ಭಕ್ತನಾದ ಬಳಿಕ
ಮತ್ತೆ ಭಕ್ತಿಯ ಹೊಲಬ ಹೊದ್ದಲೊಲ್ಲದೆ,
ಆಚಾರವನತಿಗಳೆದು ಅನ್ಯದೈವವ ಭಜಿಸಿ, ಅವರೆಂಜಲ ಭುಂಜಿಸಿ
ನರಕಕ್ಕಿಳಿವ ಪಾತಕರು ತಾವು ಕೆಟ್ಟುದಲ್ಲದೆ;
ಇತ್ತ ಮತ್ತೆ ಎತ್ತಲಾನೊಬ್ಬನು ಸತ್ಯಸದಾಚಾರವಿಡಿದು
ಗುರುಲಿಂಗಜಂಗಮವನಾರಾಧಿಸಿ ಪ್ರಸಾದವ ಕೊಂಡು ಬದುಕುವೆನೆಂಬ
ಭಕ್ತಿಯುಕ್ತನ ಅಂದಂದಿಂಗೆ ಜರೆದು,
ನಿಮ್ಮ ತಂದೆತಾಯಿ ಬಳಿವಿಡಿದು ಬಂದ ಕುಲದೈವ ಮನೆದೈವವ ಬಿಟ್ಟು
ಈ ಲಿಂಗಜಂಗಮದ ಪ್ರಸಾದ ಭಕ್ತಿಯುಕ್ತಿಗಳಲ್ಲಿ ಏನುಂಟೆಂದು
ಕೆಡೆನುಡಿದು ಬಿಡಿಸಿ, ಆ ಅನ್ಯದೈವಂಗಳ ಹಿಡಿಸಿ
ತಾ ಕೆಡುವ ಅಘೋರನರಕದೊಳಗೆ ಅವರನೂ ಒಡಗೂಡಿಕೊಂಡು
ಮುಳುಗೇನೆಂಬ ಕಡುಸ್ವಾಮಿದ್ರೋಹಿನಾಯ ಹಿಡಿದು, ಮೂಗ ಕೊಯಿದು
ನಡೆಸಿ ಕೆಡಹುವ ನಾಯಕನರಕದಲ್ಲಿ
ಎನ್ನೊಡೆಯ ಕೂಡಲಚೆನ್ನಸಂಗಯ್ಯ. || ೬೩೬ ||

೧೪೫೦

ಭವಿ ಭಕ್ತನಾದರೇನಯ್ಯ ಪೂರ್ವಾಶ್ರಯವಳಿಯದನ್ನಕ್ಕ?
ವೇಶಿ ಭಕ್ತೆಯಾದರೇನಯ್ಯ ಎಂಜಲ ತಿಂಬುದ ಬಿಡದನ್ನಕ್ಕ?
ಅರಸು ಭಕ್ತನಾದರೇನಯ್ಯ, ಅಹಂಕಾರವಳಿಯದನ್ನಕ್ಕ?–
ಇಂತೀ ಮೂವರಿಗೆ ಲಿಂಗವ ಕೊಟ್ಟಾತ ವ್ಯವಹಾರಿ, ಕೊಂಡಾತ ಲಾಭಗಾರ
ಇವರ ಭಕ್ತಿಯೆಂಬುದು,
ಒಕ್ಕಲಗಿತ್ತಿ ಹೊಸ್ತಿಲ ಪೂಜೆಯ ಮಾಡಿ, ಇಕ್ಕಾಲಿಕ್ಕಿ ದಾಟಿದಂತಾಯಿತ್ತು.

ಹಟ್ಟಿಯ ಹೊರಗೆ ಜೆನವನ ಪೂಜೆಯ ಮಾಡಿ
ತಿಪ್ಪೆಯೊಳಗೆ ಬಿಟ್ಟಂತಾಯಿತ್ತು.
ಜಂಗಮದ ಪೂಜೆಯ ಮಾಡಿ ನೈಷ್ಠೆಯಿಲ್ಲದ ಭ್ರಷ್ಟರ ಮೆಚ್ಚುವನೆ
ಕೂಡಲಚೆನ್ನಸಂಗಮದೇವ? || ೬೩೭ ||

೧೪೯೧

ಭವಿಯ ಕಳೆದು ಭಕ್ತನ ಮಾಡಿ ಅಂಗದ ಮೇಲೆ ಲಿಂಗವ ಧರಿಸಿ,
ಗುರುರೂಪನ ಮಾಡಿದ ತನ್ನ ನಿಜಗುರುವಪ್ಪ
ಪೂರ್ವಾಚಾರ್ಯನನತಿಗಳೆದು; ಯತಿ ಜತಿಗಳಿವರು ಅತಿಶಯರೆಂದು
ಅವರಲ್ಲಿ ಹೊಕ್ಕು, ಪ್ರತಿದೀಕ್ಷೆಯ ಕೊಂಡವಂಗೆ ಗುರುದ್ರೋಹ
ಕೊಟ್ಟವಂಗೆ ಲಿಂಗದ್ರೋಹ. ಇವರಿಬ್ಬರಿಗೂ ಗುರುವಿಲ್ಲ,
ಗುರುವಿಲ್ಲವಾಗಿ ಲಿಂಗವಿಲ್ಲ, ಲಿಂಗವಿಲ್ಲವಾಗಿ ಜಂಗಮವಿಲ್ಲ
ಜಂಗಮವಿಲ್ಲಾಗಿ ಪಾದೋದಕವಿಲ್ಲ, ಪಾದೋದಕವಿಲ್ಲವಾಗಿ ಪ್ರಸಾದವಿಲ್ಲ.
ಇಂತೀ ಪಂಚಾಚಾರಕ್ಕೆ ಹೊರಗಾದ ಪತಿತರನು,
ಗುರು ಚರ ಪರವೆಂದು ಆರಾಧಿಸಿದವಂಗೆ ಅಘೋರನರಕ ತಪ್ಪದು.
ಅದೆಂತೆಂದಡೆ: "ಯಸ್ಯಗುರು ಭ್ರಷ್ಟಾರಾರಾಧಿತಂ ತಸ್ಯ ಘೋರನರಕಃ"
ಎಂದುದಾಗಿ– ಇವಂದಿರನು ಗುರುಹಿರಿಯರೆಂದು ಸಮಪಂಕ್ತಿಯಲ್ಲಿ ಕೂಡಿ
ಪ್ರಸಾದವ ನೀಡಿ, ಒಡಗೂಡಿಕೊಂಡು ನಡೆಯ ಸಲ್ಲದು ಕಾಣಾ
ಕೂಡಲಚೆನ್ನಸಂಗಮದೇವಾ. || ೬೩೮ ||

೧೪೯೨

ಭವಿಯ ಮನೆಯಲ್ಲಿ ಭವಿಪಾಕವಲ್ಲದೆ
ಭಕ್ತನ ಮನೆಯಲ್ಲಿ ಭವಿಪಾಕವಿಲ್ಲ.
ಆ ಭಕ್ತನೂ ಆ ಭಕ್ತನ ಸ್ತ್ರೀಯೂ ಲಿಂಗಮುಖಿಗಳಾಗಿ
ಗುರುಲಿಂಗ ಜಂಗಮಕ್ಕೆ ಬೇಕೆಂದು ಭಕ್ತಿರತಿಯಿಂದ
ಲಿಂಗಹಸ್ತದಲ್ಲಿ ಮಾಡಿದ ಸರ್ವದ್ರವ್ಯಂಗಳು ಸಕಲಪದಾರ್ಥಂಗಳೆಲ್ಲವೂ
ಶುದ್ಧಪಾಕ, ಅತ್ಯಂತ ಪವಿತ್ರಪಾಕ, ಲಿಂಗಕ್ಕೆ ಸಲುವುದು.
ಅದನತಿಗಳೆವಡೆ ದ್ರೋಹ, ಲಿಂಗಕ್ಕೆ ಕೊಟ್ಟುಕೊಳಬೇಕು
ಕೂಡಲಚೆನ್ನಸಂಗಮದೇವಾ. || ೬೩೯ ||

೧೪೯೩

ಭವಿಯ ಮನೆಯಲ್ಲಿ ಭವಿಯ ಹಸ್ತದಲ್ಲಿ ಭವಿಪಾಕವಲ್ಲದೆ,
ಭಕ್ತರ ಮನೆಯಲ್ಲಿ ಭಕ್ತರ ಹಸ್ತದಲ್ಲಿ ಭವಿಪಾಕವುಂಟೆ? ಇಲ್ಲ ಇಲ್ಲ.
ಸುಡಲಿವದಿರ ಭಕ್ತಿಯೆಂತಹುದೊ, ಯುಕ್ತಿಯಂತಹುದೊ, ಶೀಲವೆಂತಹುದೊ!
ಸದ್ಭಕ್ತಿಯಿಂದ ಮಾಡಿ ನೀಡುವ ಭಕ್ತನು ಭಕ್ತದೇಹಿಕದೇವ
ಆತ ತಾನೆ ಪರಶಿವನು.
ಆ ಭಕ್ತನ ಹಸ್ತದಿಂದ ಬಂದ ದ್ರವ್ಯಪದಾರ್ಥಂಗಳೆಲ್ಲವೂ
ಪ್ರಸನ್ನತ್ವದಿಂದ ಬಂದುವಾಗಿ ಪ್ರಸಾದ, ಲಿಂಗಕ್ಕೆ ಕೊಟ್ಟು ಕೊಂಬುದು.
ಅದು ತಾನೆ ಶುದ್ಧ ಸಿದ್ಧ ಪ್ರಸಿದ್ಧಪ್ರಸಾದವು.
ಆ ಮಹಿಮನು ಭಕ್ತದೇಹಿಕದೇವನೆಂದು
ಭಾವಶುದ್ಧಿಯಿಂದ ಪ್ರಸಾದವ ಕೊಂಡಡೆ
ಅದೇ ಮಹಾಪ್ರಸಾದ ಕೂಡಲಚೆನ್ನಸಂಗಯ್ಯಾ. ॥ ೬೪೦ ॥

೧೪೯೪

ಭವಿಯ ಸಂಗವುಳ್ಳನ್ನಬರ ಭಕ್ತನಲ್ಲ,
ಪರಧನ ಪರಸತಿಯಾಸೆಯುಳ್ಳನ್ನಬರ ಮಾಹೇಶ್ವರನಲ್ಲ,
ಸಕಲ ಪದಾರ್ಥವನೆಲ್ಲ ಗ್ರಹಿಸುವನ್ನಕ್ಕ ಪ್ರಸಾದಿಯಲ್ಲ,
ಪ್ರಾಣಲಿಂಗದಲ್ಲಿ ಸ್ವಸ್ಥಿರವಾಗದನ್ನಕ್ಕ ಪ್ರಾಣಲಿಂಗಿಯಲ್ಲ,
ಕರಣಾದಿಗಳು ವರ್ತಿಸುವನ್ನಕ್ಕ ಶರಣನಲ್ಲ,
ಜನನಮರಣವುಳ್ಳನ್ನಕ್ಕ ಐಕ್ಯನಲ್ಲ.
ಕೂಡಲಚೆನ್ನಸಂಗಮದೇವರಲ್ಲಿ
ಈ ಷಡುಸ್ಥಲದ ನಿರ್ಣಯವ ಬಸವಣ್ಣನೆ ಬಲ್ಲ. ॥ ೬೪೧ ॥

೧೪೯೫

ಭವಿವಿರಹಿತನಾಗಿ ಭಕ್ತನಾದ ಬಳಿಕ
ತನ್ನ ಮನೆಯಲ್ಲಿ ಮಾಡಿದ ಪಾಕವ ಭವಿಗಿಕ್ಕಬಹುವೆ?
ಇಂತಪ್ಪ ಯುಕ್ತಿಶೂನ್ಯರಿಗೆ ಪ್ರಸಾದವಿಲ್ಲ; ಮುಕ್ತಿ ಎಂತಪ್ಪುದೊ?
ಮುಂದೆ ನಾಯ ಬಸುರಲ್ಲಿ ಬಪ್ಪುದು ತಪ್ಪದು!
ಕೂಡಲಚೆನ್ನಸಂಗಮದೇವಯ್ಯ
ನಿಮ್ಮಾ ಪಥವನರಿಯದ ಅನಾಚಾರಿಗಿನ್ನೆಂತಯ್ಯ? ॥ ೬೪೨ ॥

೧೪೯೬

ಭಾಂಡ ಭಾಜನ ಪದಾರ್ಥ ತ್ರೈವಿಧ ಪ್ರಸಾದವಪ್ಪಾ,
ಅಂಗಲೇಪನ ಸರ್ವಪ್ರಸಾದವಪ್ಪಾ,
ರೋಮ ರೋಮ ಪ್ರಸಾದವಪ್ಪಾ,
ಸ್ವಯಂ ಕೂಡಲಚೆನ್ನಸಂಗನ ಪ್ರಸಾದವಪ್ಪಾ. ॥ ೬೪೩ ॥

೧೪೯೭

ಭಿನ್ನದೈವವುಳ್ಳ ಭಕ್ತನ ಮನೆಯ ಆರೋಗಣೆ ಅನ್ಯಾಹಾರವಯ್ಯಾ
ನಂಬಿಗೆಯಿಲ್ಲದ ಭಕ್ತನ ಮನೆಯ ಆರೋಗಣೆ ಸಂದೇಹದ ಕೂಳು.
ಕೊಟ್ಟು ಕೊಂಡು ನೀಡಿ ಮಾಡಿ, ಹಮ್ಮು ನುಡಿವ
ಭಕ್ತನ ಮನೆಯ ಆರೋಗಣೆ ಕಾರಿದ ಕೂಳು
ನಿಮ್ಮ ನಂಬಿದ ಸದ್ಭಕ್ತರ ಮನೆಯ ಆರೋಗಣೆ ಲಿಂಗಾರ್ಪಿತವಯ್ಯಾ.
ಅದೆಂತೆಂದಡೆ:
ಸದಾಚಾರ ಶಿವಾಚಾರ ಲಿಂಗಾಚಾರ ಗಣಾಚಾರ ಭೃತ್ಯಾಚಾರ
ಸತ್ಕಾಯಕದಿಂದ ಬಂದುದಾಗಿ ಭಕ್ತಿಪದಾರ್ಥವಯ್ಯಾ
ಕೂಡಲಚೆನ್ನಸಂಗಮದೇವಾ. ॥ ೬೪೪ ॥

೧೪೯೮

ಭಿನ್ನಪ್ರಾಣವಳಿದು ನಿರ್ಮಳಚಿತ್ತವ ಮಾಡಿ
ಕಣ್ಣಾಲಿ ಉರೆ ನಟ್ಟು ಹೊರಸೂಸದೆ
(ಕ)ಣ್ಣು ಬಣ್ಣವ ಕಳೆದು, ಉಣ್ಣನು ಉಣ್ಣದೆ ಇರನು,
ತನ್ನ ನಿಲವನರಿತು ತಾನೊಬ್ಬನೆ ಇರನು.
ಜನ್ಮ ಮೃತ್ಯುಗಳಲ್ಲಿ ಕಾಳು ಬೆಳುದಿಂಗಳಲ್ಲಿ, ತನ್ನ ಪ್ರಾಣ ತನಗೆ ಪ್ರಕಾಶವು.
ತನ್ನೊಳಗೆ ಹೂಣೆ ಹೊಕ್ಕು, ಕುಂಬಳದ ಸೂಚಿಯ ಸುಮ್ಮಾನಿ
ಶರಣನ ನಿಲವ ನೋಡಾ!
ಅಳಲಿಲ್ಲ ಬಳಲಲಿಲ್ಲ ಅಳಿಯಲಿಲ್ಲ ಉಳಿಯಲಿಲ್ಲ,–ಎರಡಳಿದ ನಿಲವು.
ಉಭಯ ಮಧ್ಯದ ಕೊರಡಿಂಗೆ ಕುಂಟೆಯನಿಕ್ಕಿ ಕೆಡಿಸುವನು ತಾನಲ್ಲ.
ಪೊರಳಲರಿಯನು ಕೊಳಚಿಯ ಉದಕದೊಳಗೆ.
ಕಳಾಕಳಾ ಭೇದದಿಂದ ತೊಳತೊಳಗುವನು.
ದಶಭ್ರೂಮಧ್ಯದ ಧ್ರುವಮಂಡಲವ ಮೀರಿ ಕಳೆದು ದಾಂಟಿ
ಕೂಡಲಚೆನ್ನಸಂಗಯ್ಯನೊಳಗೆ
ಶರಣಕಾಂತಿಯ ನಿಲಪಿಂಗೆ ಶರಣು ಶರಣು! ॥ ೬೪೫ ॥

೧೪೯೯

ಭೂತಪ್ರಾಣಿಯ ಕಳೆದು ಲಿಂಗಪ್ರಾಣಿಯ ಮಾಡಿದ ಬಳಿಕ
ಆ ಶಿಷ್ಯನೆ ಜಂಗಮವಾಗಿ ಗುರುವಿನ ಮಠಕ್ಕೆ ನಡೆದು ಬಂದರೆ
ಗುರುವೆಂಬ ಹಮ್ಮಿಲ್ಲದೆ ಪರಮಗುರುವೆಂದು
ಪಾದಾರ್ಚನೆಯಂ ಮಾಡೂದು ಆಚಾರ,
ನಾಚಿ ಮಾಡದಿದ್ದರೆ ನಾಯಕ ನರಕ.
ಆ ಜಂಗಮ ಶಂಕೆಯಿಲ್ಲದೆ ಪಾದಾರ್ಚನೆಯ ಮಾಡಿಸಿಕೊಂಬುದೆ ಕರ್ತೃತ್ವ,
ಶಂಕೆಗೊಂಡಡೆ ಪಂಚಮಹಾಪಾತಕ.
ಹಿಂಗಲ್ಲದೆ ಗುರುವೆಂಬ ಹಮ್ಮು, ಶಿಷ್ಯನೆಂಬ ಶಂಕೆಯುಳ್ಳನ್ನಬರ
ರೌರವನರಕದಲ್ಲಿಕ್ಕುವ ಕೂಡಲಚೆನ್ನಸಂಗಮದೇವ. ॥ ೭೪೭ ॥

೧೫೦೦

ಮಂಡೆಯ ಬೋಳಿಸಿಕೊಂಡು
(ಜಂ)ಗಮವಾದೆವೆಂಬ ಅಣ್ಣಗಳು ನೀವು ಕೇಳಿರೇ!
ಹಿಂದೆ ಮುಂದೆ ಬೋಳಿಸಿದರೆ,
ಇಹಲೋಕ ಪರಲೋಕ ನಾಸ್ತಿಯಾಗಬೇಕು.
ಕೆಲಬಲನ ಬೋಳಿಸಿದರೆ,
ಪುಣ್ಯಪಾಪಂಗಳರತು ಹೋಗಬೇಕು.
ಈ ವರ್ಮವನರಿಯದೆ ಬೋಳಾದರೆ,
ಅವರು ಕೂಡಲಚೆನ್ನಸಂಗಯ್ಯನಲ್ಲಿ ಕುರುಹಿಂಗೆ ಪಾತ್ರರಲ್ಲದೆ
ಲಿಂಗಕ್ಕೆ ಪಾತ್ರರಲ್ಲ ಕಾಣಾ. ॥ ೭೪೮ ॥

೧೫೦೧

ಮಂಡೆ ಮಾಸಿದಡೆ ಮಹಾಮಜ್ಜನವ ಮಾಡುವುದು;
ವಸ್ತ್ರ ಮಾಸಿದರೆ ಮಡಿವಾಳರಿಗಿಕ್ಕುವುದು;
ಮನದ ಮೈಲಿಗೆಯ ತೊಳೆಯಬೇಕಾದಡೆ
ಕೂಡಲಚೆನ್ನಸಂಗಯ್ಯನ ಶರಣರ ಅನುಭಾವವ ಮಾಡುವುದು. ॥ ೭೪೯ ॥

೧೫೦೨

ಮಂತ್ರವೆ ಅವಯವಂಗಳಾಗುಳ್ಳ ಪರಶಿವಂಗೆ, ನಾದವೆ ಕರೀಟ,
'ಅ'ಕಾರ 'ಉ'ಕಾರವೆ ಬಿಂದುವಕ್ತ್ರ,
ಪರಶಿವಸ್ವರೂಪವಾದ 'ಪ್ರ'ಕಾರವೆ ದೇಹ,

'ಹ್ರೀಂ' ಕಾರವೆ ಶಕ್ತಿ, ಹಂಸದ್ವಯಾ ಶೃಂಗವೇ ಭುಜ,
'ವ'ಕಾರವೆ—ಕಳಾ ಸ್ವರೂಪವಾದವನಿಯೆ ಪಾದದ್ವಯ.
ಇಂತೀ ಮಂತ್ರಮೂರ್ತಿಯಾದ ಪರಶಿವನು,
ಮಂತ್ರಾರ್ಥಿಗಳಿಗೆ ಮಂತ್ರಸಿದ್ಧಿಯ ಕೊಡುವದೇವ
ನಮ್ಮ ಕೂಡಲಚೆನ್ನಸಂಗಯ್ಯ, ಬೇರಿಲ್ಲ. || ೬೪೯ ||

೧೫೦೩

ಮತಿಗೆಟ್ಟ ಕುಂಬರ ಮಣ್ಣ ಸೂಜಿಯ ಮಾಡಿ
ಕುಂಬಾರಗೇರಿಗೆ ಮಾರಹೋದಡೆ,
ಅವರುಕ್ಕಿನ ಸೂಜಿಯ ಮಾರುವರಾಗಿ!
ವೇಷಧಾರಿ ಮಾತ ಕಲಿತು ಅಭಿಮಾನಕ್ಕೆ ಪರೀಕ್ಷೆಯ ಕೊಡುವಂತೆ
ಕೂಡಲಚೆನ್ನಸಂಗನ ನಿಲವನರಿಯದೆ
ಉಲಿಯದಿರಾ ಲೀಲೆಯ ಪಶುವೆ! || ೬೫೦ ||

೧೫೦೪

ಮತಿಜ್ಞಾನ, ಶ್ರುತಿಜ್ಞಾನ, ಖಂಡಜ್ಞಾನ,
ಕೇವಲಜ್ಞಾನ, ಜ್ಯೋತಿರ್ಜ್ಞಾನ,
ಮಹಾಜ್ಯೋತಿರ್ಜ್ಞಾನವೆಂದಿಂತು ಜ್ಞಾನವಾರು ತೆರನು.
ಮತಿಜ್ಞಾನದಿಂದ ಶ್ರುತಿಜ್ಞಾನವಹುದು,
ಶ್ರುತಿಜ್ಞಾನದಿಂದ ಖಂಡಜ್ಞಾನವಹುದು.
ಖಂಡಜ್ಞಾನದಿಂದ ಕೇವಲಜ್ಞಾನವಹುದು,
ಕೇವಲಜ್ಞಾನದಿಂದ ಜ್ಯೋತಿರ್ಜ್ಞಾನವಹುದು.
ಜ್ಯೋತಿರ್ಜ್ಞಾನದಿಂದ ಮಹಾಜ್ಯೋತಿರ್ಜ್ಞಾನವಹುದು.
ಮತಿಜ್ಞಾನವೆ ಭಕ್ತ, ಶ್ರುತಿಜ್ಞಾನವೆ ಮಹೇಶ್ವರ,
ಖಂಡಜ್ಞಾನವೆ ಪ್ರಸಾದಿ,
ಕೇವಲಜ್ಞಾನವೆ ಪ್ರಾಣಲಿಂಗಿ, ಜ್ಯೋತಿರ್ಜ್ಞಾನವೆ ಶರಣ,
ಮಹಾಜ್ಯೋತಿರ್ಜ್ಞಾನವೆ ಐಕ್ಯ.
ಈ ಷಟ್‌ಸ್ಥಲದ ನೆಲೆಯ ಬಲ್ಲಾತನೆ-
ಕೂಡಲಚೆನ್ನಸಂಗಯ್ಯನಲ್ಲಿ ಐಕ್ಯನು. || ೬೫೧ ||

೧೫೦೫

ಮಧುರಗುಣವ ಇರುವೆ ಬಲ್ಲುದು.
ವೇಳೆಯ ಗುಣವ ಕೋಳಿ ಬಲ್ಲುದು.
ಗೋತ್ರದ ಗುಣವ ಕಾಗೆ ಬಲ್ಲುದು.
ಈ ಮನುಷ್ಯ ಜನ್ಮದಲ್ಲಿ ಹುಟ್ಟಿ,
ಶಿವಜ್ಞಾನಿಗಳ ಬರವನರಿಯದಿಪ್ಪಡೆ
ಆ ಕೋಳಿ ಕಾಗೆ ಇರುವೆಗಿಂದಲು ಕರಕಷ್ಟ ಕಾಣಾ
ಕೂಡಲಚೆನ್ನಸಂಗಮದೇವಾ. || ೬೫೨ ||

೧೫೦೬

ಮನ ಆವ ವಸ್ತುವನಾದಡೂ ನೆನೆದಡೆ ಬುದ್ಧಿ ನಿಶ್ಚೈಸುವುದು,
ಚಿತ್ತ ವಾಕ್ಯಕ್ಕೆ ತಂದು, ಮಾಡಬೇಕೆಂಬುದು,
ಅಹಂಕಾರ ಕಾಯದ ಕೈಯಿಂದ ಮಾಡಿಸುವುದು.
ಇಂತೀ ಅಂತಃಕರಣ ಚತುಷ್ಟಯಂಗಳ ಅಂತುವನರಿತು ಸಮವೇದಿಸಲು
ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯನೆನಿಸುವನು. || ೬೫೩ ||

೧೫೦೭

ಮನಕ್ಕೆ ಮನವೇಕಾರ್ಥವಾಗಿ,
ಪ್ರಾಣಕ್ಕೆ ಪ್ರಾಣವೇಕಾರ್ಥವಾಗಿ,
ಭಾವಕ್ಕೆ ಭಾವವೇಕಾರ್ಥವಾಗಿ, ಸಂಗಕ್ಕೆ ಸಂಗ ಸಮರತಿಯಾಗಿ,
ಕೂಡಿದ ಕೂಟವನಗಲಬಾರದಯ್ಯ;
ಅಗಲಿ ಒಂದು ನಿಮಿಷ ಸೈರಿಸಬಾರದಯ್ಯಾ.
ಕೂಡಲಚೆನ್ನಸಂಗಾ, ನಿಮ್ಮ ನಚ್ಚುಮೆಚ್ಚಿನ ಶರಣರನಗಲುವ ಅಗಲಿಕೆ
ಎನ್ನ ಪ್ರಾಣದ ಹೋಕು ನೋಡಯ್ಯಾ. || ೬೫೪ ||

೧೫೦೮

ಮನದ ಭ್ರಮೆಯ ಕಳೆದು ಗುರುವ ಮಾಡಿ
ಗುರುಭಕ್ತನಾದನಯ್ಯಾ ಬಸವಣ್ಣನು.
ಪ್ರಾಣದ ಭ್ರಮೆಯ ಕಳೆದು ಲಿಂಗವ ಮಾಡಿ
ಲಿಂಗಭಕ್ತನಾದನಯ್ಯಾ ಬಸವಣ್ಣನು.
ಸಂಸಾರದ ಭ್ರಮೆಯ ಕಳೆದು ಜಂಗಮವ ಮಾಡಿ
ಜಂಗಮಭಕ್ತನಾದನಯ್ಯಾ ಬಸವಣ್ಣನು.

ಈ ತ್ರಿವಿಧಭ್ರಮೆಯ ತ್ರಿಕರಣದಲ್ಲಿ ಕಳೆದು
ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯನಾದನಯ್ಯಾ ಬಸವಣ್ಣನು. ॥ ೬೫೫ ॥

೧೫೦೯

ಮನವಂತೆ ಮಂಗಳವೆಂಬುದು ತಪ್ಪದು ನೋಡಾ ಬಸವಣ್ಣಾ;
ಅರಸುವಂಗೆ ಅರಕೆ ಸಾಧ್ಯವಪ್ಪುದು ತಪ್ಪದು ನೋಡಾ ಬಸವಣ್ಣಾ.
ನಿಮ್ಮ ಮನದ ಆರ್ತವನಡಗಿಸುವಡೆ
ಕೂಡಲಚೆನ್ನಸಂಗಮದೇವರ ಶರಣ ಪ್ರಭುದೇವರ ಬರವು
ತಪ್ಪಲರಿಯದು ಕೇಳಾ ಬಸವಣ್ಣಾ. ॥ ೬೫೬ ॥

೧೫೧೦

ಮನ ಭಾವ ಕರಣಂಗಳೊಳಹೊರಗೆ ತೆರಹಿಲ್ಲದ ದೇವಾ,
ಬಂದ ಪದಾರ್ಥವನವಧರಿಸು ದೇವಾ, ಭಾವಭರಿತದೇವಾ.
ಅದೆಂತೆಂದಡೆ:
ತಿಲ ಮಧ್ಯೇ ಯಥಾ ತೈಲಂ ಕ್ಷೀರಮಧ್ಯೇ ಯಥಾ ಘೃತಂ।
ಪುಷ್ಪಮಧ್ಯೇ ಯಥಾ ಗಂಧೋ, ಭಾವಮಧ್ಯೇ ತಥಾ ಶಿವಃ॥ ಎಂದುದಾಗಿ
ಎಲ್ಲ ಭೋಗಂಗಳು ತನ್ನವಾಗಿ,
ಎಲ್ಲ ಕರಣಂಗಳ ತನ್ಮಯ ಮಾಡಿಕೊಂಡನಾಗಿ
ಕೂಡಲಚೆನ್ನಸಂಗಮದೇವರು. ॥ ೬೫೭ ॥

೧೫೧೧

ಮನಮನವೇಕಾರ್ಥವಾಗಿ ಕಾಯಕ್ಕೆ ಕಾಯ ಸಂಬಂಧವಾಗಿ ಇಪ್ಪವರಲ್ಲಿ
ತೆರೆಮರೆಯೆಂಬುದಿಲ್ಲ ನೋಡಯ್ಯಾ.
ಸಂಗ ನಿಸ್ಸಂಗವಾಗಿಪ್ಪವರಲ್ಲಿ ಉಪಚರ್ಯಕ್ಕಂಬಿಲ್ಲ ಕೇಳಯ್ಯಾ.
ಕೂಡಲಚೆನ್ನಸಂಗನ ಶರಣ ಬಸವಣ್ಣನಿಟ್ಟಿದನು
ಕೃಪೆ ಮಾಡಾ ಗುರುವೆ. ॥ ೬೫೮ ॥

೧೫೧೨

ಮನ ಲಿಂಗವಾಗಿ ಘನ ವೇದ್ಯವಾದನೆಂದು ನುಡಿವವ,
ತಾ ಲಿಂಗಪ್ರಸಾದವ ಕೊಂಬಾಗ ಭವಿದೃಷ್ಟಿ ಸೋಂಕಿತ್ತೆಂದು
ಬಿಡುವ ಅನಾಚಾರವ ನೋಡಾ!
ಆಚಾರವನೆ ಅನಾಚಾರವ ಮಾಡಿ ಅನಾಚಾರವನೆ ಆಚಾರವೆಂದು

ಸಂಬಂಧಿಸಿಕೊಂಬ ಪರಿಯ ನೋಡಾ!
ಇದು ಕಾರಣ–ಸಂಕಲ್ಪಿತವ ಮಾಡಲಾಗದು.
ಸಂಕಲ್ಪಿತದಲ್ಲಿ ಶಿವನಿಲ್ಲ ಪ್ರಸಾದವಿಲ್ಲ.
ಲಿಂಗ ಮುಟ್ಟಿ ತಾ ಲಿಂಗವಾದ ಬಳಿಕ ಭವವಿಲ್ಲ ಕಾಣಾ
ಕೂಡಲಚೆನ್ನಸಂಗಮದೇವಾ. || ೬೫೯ ||

೧೫೧೩

ಮನವಿಲ್ಲದೆ ಮಾಡಿದಡೆ ಲಿಂಗರೂಪಾಯಿತ್ತು;
ಧನವಿಲ್ಲದೆ ಮಾಡಿದಡೆ ಜಂಗಮರೂಪಾಯಿತ್ತು;
ತನುವಿಲ್ಲದೆ ಮಾಡಿದಡೆ ಪ್ರಸಾದರೂಪಾಯಿತ್ತು;
ಈ ತ್ರಿವಿಧ ಸಕೀಲಸಂಬಂಧವ ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣ ಬಲ್ಲ. || ೬೬೦ ||

೧೫೧೪

ಮನವೆಂಬ ಘನದ ತಲೆವಾಗಿಲಲ್ಲಿ ಸದಾಸನ್ನಹಿತನಾಗಿಪ್ಪೆ ಎಲೆ ಅಯ್ಯಾ.
ಸಕಲ ಪದಾರ್ಥಂಗಳು ನಿಮ್ಮ ಮುಟ್ಟಿ ಬಹವಲ್ಲದೆ,
ನಿಮ್ಮ ಮುಟ್ಟದೆ ಬಾರವೆಂಬ ಎನ್ನ ಮನದ ನಿಷ್ಠೆಗೆ
ನೀನೆ ಒಡೆಯ ಕೂಡಲಚೆನ್ನಸಂಗಯ್ಯಾ. || ೬೬೧ ||

೧೫೧೫

ಮನು ಮುನೀಶ್ವರ ವೇದ ಶಾಸ್ತ್ರ ಸ್ಮೃತಿಗಳೆಲ್ಲ
ತಮ ತಮಗೆ ಹೊಗಳುತಿಹವು ಶಿವಘನತೆಯಂ,
ಘನತರಾಂತರಗಾಣದ ಅತ್ಯತಿಷ್ಠದ್ದಶಾಂಗುಲನೆಂದು,
ಒರಲುತಿಹವು ಎನಲು ಆ ಘನವದು ದರ್ಶನಾಗಮ ತರ್ಕದನುಮತಕೆ ಸಾಧ್ಯವೆ?
ಲಿಂಗದ ಮಹಾತ್ಮೆಗೆ ಕಡೆಯನೆಣೆಸಲಿಲ್ಲಾಗಿ,
ಪ್ರಣವಾದಿ ಪಂಚಾಕ್ಷರಿಯೊಳಗಡಕವಾಗಿಹುದು ಸತ್ಯ, ನಿತ್ಯ.
ಅನಿತ್ಯದೇವತೆಗಳರಿಯಲಿಕಳವೆ ಸಚ್ಚಿದಾನಂದ ಶಿವಜ್ಞಾನಾನುಭಾವಭಾವೋತ್ತಮರ
ಭಾವ ಕರಣದ ಕರದೊಳಮೃತಕರಕರಣ ಸಮ್ಯಗ್ಜ್ಯೋತಿಯ?
ಒತ್ತರಿಸಿ ತೊಳತೊಳಗುವತ್ಯಂತ ನಿರವಯದ
ಮತ್ತೆ ಸಚ್ಚಿತ್ ಸುಖನಿರಂಜನದ ನಿರ್ಮಲದ ನಿತ್ಯ ಕೂಡಲಚೆನ್ನಸಂಗಸಂಗವನು
ಪ್ರಭುಲಿಂಗದಲ್ಲಿಯೆ ಕಂಡೆನು. || ೬೬೨ ||

೧೫೧೬

ಮನೆಯ ನೋಡ ಬಡವರು, ಮನವ ನೋಡ ಧೀರರು.
ಸೋಂಕಿನಲ್ಲಿ ಶುಚಿಗಳು ಸರ್ವಾಂಗಧೀರರು.
ಪಸರವ ನೋಡಿದಡೇನೂ ಇಲ್ಲ ಸಮಯೋಚಿತಕ್ಕೆ ಸಕಲ ಪದಾರ್ಥ ಬಂದಿಹುದು.
ಕೂಡಲಚೆನ್ನಸಂಗಾ, ನಿಮ್ಮ ಶರಣ
ಸರ್ವಾಂಗಧೀರ ಮೋಳಿಗೆಯ ಮಾರಿ ತಂದೆ! || ೬೬೩ ||

೧೫೧೭

ಮನೆಯೊಳಗಣ ಕಿಚ್ಚು ಕಾನನವ ಸುಟ್ಟಿತ್ತು.
ಕಾನನ ಬೆಂದಲ್ಲಿ ಮನೆ ಉರಿಯಹತ್ತಿತ್ತು, ಮನೆ ಬೆಂದು ಕಂಬ ಉಳಿಯಿತ್ತು.
ಆ ಕಂಬದ ಮೇಲೆ ರತ್ನವಿದ್ದುದ ಕಂಡೆ.
ಅದರ ಬೆಳಗು ಮೂರು ಲೋಕವ ತುಂಬಿತ್ತಲ್ಲಾ
ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ
ಪ್ರಭುದೇವರ ನಿಲವಿಂಗೆ ನಾನು ಶರಣೆನುತಿರ್ದೆನು. || ೬೬೪ ||

೧೫೧೮

ಮರಹು ಅರಿವಿನಲ್ಲಡಗಿ, ಅರಿವು ಮರಹ ನುಂಗಿ
ತೆರಹಿಲ್ಲದಿರ್ದೆನೆಂಬ ಅಹಂ ಇದೇನೊ?
ಬ್ರಹ್ಮವನೊಳಕೊಂಡ ಬ್ರಹ್ಮವು ತಾನಾಗಿ
ಮತ್ತೆ ಬ್ರಹ್ಮದ ನುಡಿ ಇದೇನೊ?
ಆದಿಶೂನ್ಯ ಮಧ್ಯಶೂನ್ಯ ಅಂತ್ಯಶೂನ್ಯ ಊರ್ಧ್ವಶೂನ್ಯದಿಂದತ್ತತ್ತ ನಿಂದ
[ಘನದ] ನಿಲವ ಕಾಬರಾರೊ?
ಇದು ಕಾರಣ-ಕೂಡಲಚೆನ್ನಸಂಗನ [ಸಹಜದ] ನಿಲವು
ಬಯಲು ಚಿತ್ರಿಸಿದ ರೂಪ, ಬಯಲರಿಯದಂತೆ! || ೬೬೫ ||

೧೫೧೯

ಮರೀಚಿಯೊಳಡಗಿದ ಬಿಸಿಲಿನಂತಿದ್ದಿತ್ತು,
ಕ್ಷೀರದೊಳಡಗಿದ ತುಪ್ಪದಂತಿದ್ದಿತ್ತು,
ಚಿತ್ರಕನೊಳಡಗಿದ ಚಿತ್ರದಂತಿದ್ದಿತ್ತು,
ಆಲಿಯೊಳಡಗಿದ ತೇಜದಂತಿದ್ದಿತ್ತು,
ನುಡಿಯೊಳಡಗಿದ ಅರ್ಥದಂತಿದ್ದಿತ್ತು
ಕೂಡಲಚೆನ್ನಸಂಗಯ್ಯಾ ನಿಮ್ಮ ನಿಲವು. || ೬೬೬ ||

೧೫೨೦

ಮರುತನ ಸಂಗದಿಂದ ಪರಿಮಳ ಬೀಸರವಾಯಿತ್ತು,
ನುಡಿಯ ಗಡಣದಿಂದ ಅನುಭಾವ ಬೀಸರವಾಯಿತ್ತು,
ಮಾಟದ ಸಂಭ್ರಮದಿಂದ ಭಕ್ತಿ ಬೀಸರವಾಯಿತ್ತು,
ಕೂಟದ ಬೆರಕೆಯ ಸಂಭ್ರಮದಿಂದ ಅರಿವು ಬೀಸರವಾಯಿತ್ತು.
ಸೂಕ್ಷ್ಮ ಶಿವಪಥವು ಸಾಮಾನ್ಯಂಗಳವೆ?
ಕೂಡಲಚೆನ್ನಸಂಗನ ಶರಣರಿಗಲ್ಲದಿಲ್ಲ. || ೬೬೭ ||

೧೫೨೧

ಮರ್ತ್ಯಲೋಕ ಶಿವಲೋಕವೆಂಬುವು ನಿಚ್ಚಣಿಕೆಯಾದವು,
ದೇವಾ, ನೀವೀ ಕಲ್ಯಾಣಕ್ಕೆ ಬಂದವತರಿಸಿದಲ್ಲಿ.
ಸತ್ಯ ಶರಣರೆಲ್ಲರನು ಪಾವನವ ಮಾಡಲೆಂದು ಬಂದಡೆ,
ಜನ್ಮದಲ್ಲಿ ಬಂದನೆಂದೆನಬಹುದೆ?
ಕರ್ತನ ನಿರೂಪು ಭೃತ್ಯಂಗೆ ಬಂದಲ್ಲಿ, ಆ ಭೃತ್ಯ ಕರ್ತನನರಸಿ ಬಂದನಲ್ಲಾ!
ಸತ್ಯ ಸದಾಚಾರವ ಪರಡಿ, ಮರ್ತ್ಯರ ಪಾವನವ ಮಾಡಿ
ನಿಜಲಿಂಗ ಸಮಾಧಿಯೊಳು, ನಿಲ್ಲುವರಿನ್ನಾರು ಹೇಳಾ, ನೀವಲ್ಲದೆ?
ಕೂಡಲಚೆನ್ನಸಂಗಮದೇವರು ಸಾಕ್ಷಿಯಾಗಿ
ನಿಮಗೆ ಭವವುಂಟೆಂದು ಮನದಲ್ಲಿ ಹಿಡಿವಡೆ
ಸಂಗನಬಸವಣ್ಣಾ ನಿಮ್ಮ ಶ್ರೀಪಾದದಾಣೆ! || ೬೬೮ ||

೧೫೨೨

ಮಲವಿಶಿಷ್ಟರಾದ ಮಾನವರು ಬಹಿರಂಗದ ತೀರ್ಥವ ಪೊಕ್ಕು,
ಅಲ್ಲಿ ಕಾಲು ಕೈ ಮುಂತಾದ ಸರ್ವಾಂಗವ ತೊಳೆದು,
ಪರಿಶುದ್ಧರಾದವೆಂದು ಭಾವಿಸುತಿಪ್ಪರು ನೋಡಾ.
ಮತ್ತೆ ಆ ಮಲಿನವಾದ ಜಲವನೆ ತೀರ್ಥವೆಂದು
ಲಿಂಗಕ್ಕಭಿಷೇಕಂಗೆಯ್ಯುತಿಪ್ಪರು ನೋಡಾ.
ಶಿವಜ್ಞಾನಿಗಳ ಪಾದೋದಕವು ಪರಿಶುದ್ಧವಲ್ಲವೆಂದು ಗಳಹುತಿಪ್ಪರು ನೋಡಾ.
ಇಂತೀ ಮರುಳರಾಟವ ಕಂಡು,
ನಮ್ಮ ಪ್ರಮಥರು ಗಹಗಹಿಸಿ ನಗುತಿಪ್ಪರು ನೋಡಾ
ಕೂಡಲಚೆನ್ನಸಂಗಮದೇವಾ. || ೬೬೯ ||

೧೫೨೩

ಮಸಣವೈರಾಗ್ಯರು ಲಕ್ಷ ಲಕ್ಷ, ಪುರಾಣವೈರಾಗ್ಯರು ಲಕ್ಷ ಲಕ್ಷ,
ಪ್ರಸೂತಿವೈರಾಗ್ಯರು ಲಕ್ಷ ಲಕ್ಷ, ಪಿತ್ತವೈರಾಗ್ಯರು ಲಕ್ಷ ಲಕ್ಷ,
ಸ್ವಯಾನುಭಾವ ಸಮ್ಯಕ್‌ಜ್ಞಾನ ವೈರಾಗ್ಯರನೊಬ್ಬರನೂ ಕಾಣೆ
ಕೂಡಲಸಂಗಮದೇವಾ. ॥ ೬೭೦ ॥

೧೫೨೪

ಮಸ್ತಕದಲ್ಲಿ ಮಹಾದೇವನೆಂಬ ರುದ್ರನಿಪ್ಪನಯ್ಯಾ,
ನೊಸಲಲ್ಲಿ ಲಕುಲೀಶ್ವರನೆಂಬ ರುದ್ರನಿಪ್ಪನಯ್ಯಾ.
ನಾಭಿಯಲ್ಲಿ ಶಂಕರನೆಂಬ ರುದ್ರನಿಪ್ಪನಯ್ಯಾ,
ಎದೆಯಲ್ಲಿ ಮಹೇಶ್ವರನೆಂಬ ರುದ್ರನಿಪ್ಪನಯ್ಯಾ.
ಗಳಲ್ಲಿ ಲೋಕೇಶ್ವರನೆಂಬ ರುದ್ರನಿಪ್ಪನಯ್ಯಾ.
ಬಲದ ಭುಜದಲ್ಲಿ ಶ್ರೀಕಂಠನೆಂಬ ರುದ್ರನಿಪ್ಪನಯ್ಯಾ,
ಎಡದ ಭುಜದಲ್ಲಿ ದೇವೇಶನೆಂಬ ರುದ್ರನಿಪ್ಪನಯ್ಯಾ.
ಬಲದ ಬಾಹುವಿನಲ್ಲಿ ಈಶ್ವರನೆಂಬ ರುದ್ರನಿಪ್ಪನಯ್ಯಾ,
ಎಡದ ಬಾಹುವಿನಲ್ಲಿ ಶೂಲಪಾಣಿಯೆಂಬ ರುದ್ರನಿಪ್ಪನಯ್ಯಾ.
ಬಲದ ಮುಂಗೈಯಲ್ಲಿ ಕೋದಂಡನೆಂಬ ರುದ್ರನಿಪ್ಪನಯ್ಯಾ,
ಎಡದ ಮುಂಗೈಯಲ್ಲಿ ಲಿಂಗಕಾಮಿಯೆಂಬ ರುದ್ರನಿಪ್ಪನಯ್ಯಾ.
ಬಾಯಲ್ಲಿ ಭವನಾಶನೆಂಬ ರುದ್ರನಿಪ್ಪನಯ್ಯಾ,
ನಾಸಿಕದಲ್ಲಿ ನಾಗಭೂಷಣನೆಂಬ ರುದ್ರನಿಪ್ಪನಯ್ಯಾ.
ಬಲದ ಕಣ್ಣಲ್ಲಿ ಕಾಮಸಂಹರನೆಂಬ ರುದ್ರನಿಪ್ಪನಯ್ಯಾ,
ಎಡದ ಕಣ್ಣಲ್ಲಿ ತ್ರಿಪುರಸಂಹರನೆಂಬ ರುದ್ರನಿಪ್ಪನಯ್ಯಾ.
ಬಲದ ಕರ್ಣದಲ್ಲಿ ಪಾರ್ವತೀಪ್ರಿಯನೆಂಬ ರುದ್ರನಿಪ್ಪನಯ್ಯಾ,
ಎಡದ ಕರ್ಣದಲ್ಲಿ ಏಕಾದಶನೆಂಬ ರುದ್ರನಿಪ್ಪನಯ್ಯಾ.
ಹಿಂದಲೆಯಲ್ಲಿ ಪಂಚಮುಖನೆಂಬ ರುದ್ರನಿಪ್ಪನಯ್ಯಾ.
ಬ್ರಹ್ಮರಂಧ್ರದಲ್ಲಿ ಬ್ರಹ್ಮಾಂಡಖಂಡಿತನೆಂಬ ರುದ್ರನಿಪ್ಪನಯ್ಯಾ.–
ಇಂತೀ ರುದ್ರರುಗಳು ತಮ್ಮ ತಮ್ಮ ಸ್ಥಾನಂಗಳೊಳಗಿಪ್ಪರಾಗಿ;
ಇವನರಿಯದ ವಿಭೂತಿಯ ಧರಿಸಿದಡೆ
ಕತ್ತೆ ಬೂದಿಯಲ್ಲಿ ಹೊರಳಿದಂತೆ ಕಾಣಾ
ಕೂಡಲಸಂಗಮದೇವಾ. ॥ ೬೭೧ ॥

೧೫೨೫

ಮಹಾಕಾಲದಲ್ಲಿ ನಿಮ್ಮಿಂದ ನೀವೆ ಸ್ವಯಂಭುವಾಗಿರ್ದಿರಯ್ಯಾ
ಒಂದನಂತಕಾಲ.
ಮಹವು ಮಹಾನಂದದಲಕ್ಕಾಡಿ, ಮತ್ತಲ್ಲಿಯೆ ಲೀಯವಾಗಿರ್ದುದು
ಒಂದನಂತಕೋಟಿ ವರುಷ
ಕೂಡಲಚೆನ್ನಸಂಗಮದೇವ ವಿಪರೀತಚಾರಿತ್ರ. ॥ ೬೭೨ ॥

೧೫೨೬

ಮಹಾಘನಲಿಂಗವೆ ಅಂಗತ್ರಯದಲ್ಲಿ,
ಇಷ್ಟ ಪ್ರಾಣ ತೃಪ್ತಿಯೆನಿಸಿತ್ತು,
ಇಂದ್ರಿಯಸ್ಥಾನದಲ್ಲಿ ಷಡ್ವಿಧಲಿಂಗವೆನಿಸಿತ್ತು.
ನವವಿಧವಾದುದು ಒಂದು ಎಂದರಿದ
ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೬೭೩ ॥

೧೫೨೭

ಮಹಾಘನ ಶ್ರೀಗುರುಲಿಂಗವೆ ಗುರುವಲ್ಲದೆ,
ಪಿತನೊಂದು ಗುರುವೆ? ಮಾತೆಯೊಂದು ಗುರುವೆ?
ಭ್ರಾತನೊಂದು ಗುರುವೆ? ಸತಿಯೊಂದು ಗುರುವೆ?
ಸುತನೊಂದು ಗುರುವೆ?
ಗುರುಗುರುವೆಂದೇನೊ ಒಮ್ಮರ (ಒಮ್ಮರಿ?) ಗುರುವೆ?
ಆ ಮಹಾಘನ ಗುರುಲಿಂಗಕ್ಕೆ ಇವರೆಲ್ಲರ ಸರಿಗಂಡಡೆ
ಅಘೋರ ನಾಯಕನರಕ ತಪ್ಪದು
ಕೂಡಲಚೆನ್ನಸಂಗಮದೇವಾ. ॥ ೬೭೪ ॥

೧೫೨೮

ಮಹಾಜ್ಞಾನ ಗುರುವಿನಲ್ಲಿ ಸ್ವಾಯತವಾಯಿತ್ತು,
ಸುಜ್ಞಾನ ಶಿಷ್ಯನಲ್ಲಿ ಸ್ವಾಯತವಾಯಿತ್ತು;
ಜ್ಞಾನ ಲಿಂಗದಲ್ಲಿ ಸ್ವಾಯತವಾಯಿತ್ತು.–
ಇಂತು ಜ್ಞಾನ ಸುಜ್ಞಾನ ಮಹಾಜ್ಞಾನವೆಂಬವು,
ಜಂಗಮ ಲಿಂಗದಲ್ಲಿ ಸ್ವಾಯತವಾಗಿಪ್ಪವಾಗಿ!–
ಅದು ಕಾರಣ, ಲಿಂಗಕ್ಕೆ ಮಜ್ಜನಕ್ಕೆರೆಯಲಾಗದು; ಅದೇನು ಕಾರಣವೆಂದಡೆ–
ಗಮನಿಸಿ ಬಂದ ಜಂಗಮಲಿಂಗವು ಪಾದಾರ್ಚನೆಯ ಮಾಡಿ[ಕೊಂಬು]ದಾಗಿ.

ಲಿಂಗಕ್ಕೆ ವಸ್ತ್ರವ ಕೊಡಲಾಗದು, ಅದೇನು ಕಾರಣವೆಂದಡೆ-
ಚರವೆಂಬ ಜಂಗಮಲಿಂಗವು ವಸ್ತ್ರಾಲಂಕಾರವ ಮಾಡಿಕೊಳ್ಳ[ಬಲ್ಲು]ದಾಗಿ.
ಲಿಂಗಕ್ಕೆ ಗಂಧವ ಪೂಸಲಾಗದು, ಅದೇನು ಕಾರಣವೆಂದಡೆ-
ಚರವೆಂಬ ಜಂಗಮಲಿಂಗವು ಗಂಧವ ಲೇಪಿಸಿಕೊಳ್ಳ[ಬಲ್ಲು]ದಾಗಿ.
ಲಿಂಗಕ್ಕೆ ಅಕ್ಷತೆಯ ಕೊಡಲಾಗದು, ಅದೇನು ಕಾರಣವೆಂದಡೆ-
ಚರವೆಂಬ ಜಂಗಮವು ಲಲಾಟದಲ್ಲಿ ಧರಿಸಿಕೊಳ್ಳ[ಬಲ್ಲು]ದಾಗಿ.
ಲಿಂಗಕ್ಕೆ ಪುಷ್ಪವ ಕೊಡಲಾಗದು, ಅದೇನು ಕಾರಣವೆಂದಡೆ-
ಚರವೆಂಬ ಜಂಗಮಲಿಂಗವು, ತಮ್ಮ ಸಿರಿಮುಡಿಯಲ್ಲಿ ತುರುಬಿಕೊಳ್ಳ[ಬಲ್ಲು]ದಾಗಿ.
ಲಿಂಗಕ್ಕೆ ಧೂಪಾರತಿಯ ಕೊಡಲಾಗದು, ಅದೇನು ಕಾರಣವೆಂದಡೆ-
ಚರವೆಂಬ ಜಂಗಮಲಿಂಗವು, ನಾಸಿಕದಲ್ಲಿ ಪರಿಮಳವ ಕೊಳ್ಳ[ಬಲ್ಲು]ದಾಗಿ.
ಲಿಂಗಕ್ಕೆ ದೀಪಾರತಿಯ ಬೆಳಗಲಾಗದು, ಅದೇನು ಕಾರಣವೆಂದಡೆ-
ಚರವೆಂಬ ಜಂಗಮಲಿಂಗವು ದೃಷ್ಟಿಯಲ್ಲಿ ನೋಡಿ ಪರಿಣಾಮಿಸ[ಬಲ್ಲು]ದಾಗಿ.
ಲಿಂಗಕ್ಕೆ ನೈವೇದ್ಯವ ಕೊಡಲಾಗದು, ಅದೇನು ಕಾರಣವೆಂದಡೆ-
ಚರವೆಂಬ ಜಂಗಮಲಿಂಗವು ಜಿಹ್ವೆಯಲ್ಲಿ ಸಕಲರುಚಿಗಳ ರುಚಿಸ[ಬಲ್ಲು]ದಾಗಿ.
ಲಿಂಗಕ್ಕೆ ಹಸ್ತಮಜ್ಜನಕ್ಕೆ ಸಿತಾಳವ ನೀಡಲಾಗದು, ಅದೇನು ಕಾರಣವೆಂದಡೆ-
ಚರವೆಂಬ ಜಂಗಮಲಿಂಗವು, ಹಸ್ತಮಜ್ಜನವ ಮಾಡಿಕೊಳ್ಳ[ಬಲ್ಲು]ದಾಗಿ.
ಲಿಂಗಕ್ಕೆ ತಾಂಬೂಲವನರ್ಪಿಸಲಾಗದು, ಅದೇನು ಕಾರಣವೆಂದಡೆ-
ಚರವೆಂಬ ಜಂಗಮಲಿಂಗವು,
ಶ್ರೀಮುಖದಲ್ಲಿ ತಾಂಬೂಲವನರ್ಪಿಸಿಕೊಳ್ಳ[ಬಲ್ಲು]ದಾಗಿ.
ಲಿಂಗಕ್ಕೆ ಸುಖಾಸನವನಿಕ್ಕಲಾಗದು, ಅದೇನು ಕಾರಣವೆಂದಡೆ-
ಚರವೆಂಬ ಜಂಗಮಲಿಂಗವು ಸುಖಾಸನದಲ್ಲಿ ಕುಳ್ಳಿರ[ಬಲ್ಲು]ದಾಗಿ.
ಲಿಂಗಕ್ಕೆ ಸ್ತೋತ್ರ, ಮಂತ್ರ, ಗೀತ, ವಾದ್ಯ, ನೃತ್ಯಂಗಳನಾಗಿಸಲಾಗದು,
ಅದೇನು ಕಾರಣವೆಂದಡೆ-
ಚರವೆಂಬ ಜಂಗಮಲಿಂಗವು ನೇತ್ರ ಶ್ರೋತ್ರ ಹಸ್ತಂಗಳಿಂದ
ಸ್ತೋತ್ರ ಮಂತ್ರ ವಾದ್ಯ ನೃತ್ಯಂಗಳ
ಕೇಳಿ ನೋಡಿ ತಣಿದು ಪರಿಣಾಮಿಸ[ಬಲ್ಲು]ದಾಗಿ.
ಲಿಂಗಕ್ಕೆ ಭೂಷಣಾಲಂಕಾರವ ಮಾಡಲಾಗದು, ಅದೇನು ಕಾರಣವೆಂದಡೆ-
ಚರವೆಂಬ ಜಂಗಮಲಿಂಗವು ಕರ ಶಿರ ಚರಣಾದ್ಯವಯವಂಗಳಲ್ಲಿ
ಆಭರಣಂಗಳನಲಂಕರಿಸ[ಬಲ್ಲು]ದಾಗಿ.
ಲಿಂಗಕ್ಕೆ ವಾಹನಂಗಳನರ್ಪಿಸಲಾಗದು, ಅದೇನು ಕಾರಣವೆಂದಡೆ-
ಚರವೆಂಬ ಜಂಗಮಲಿಂಗವು ವಾಹನಂಗಳ ಮೇಲೆ ಕುಳಿತು ಚಲಿಸ[ಬಲ್ಲು]ದಾಗಿ.
ಇಂತೀ ಹದಿನಾರು ತೆರದ ಭಕ್ತಿಯನು ಚರಲಿಂಗವೆಂಬ ಜಂಗಮಲಿಂಗಕ್ಕೆ
ದಾಸೋಹವ ಮಾಡಿ ಪ್ರಸಾದವ ಕೊಂಬ ಭಕ್ತಂಗೆ

ಗುರುವುಂಟು, ಲಿಂಗವುಂಟು ಜಂಗಮವುಂಟು,
ಪಾದೋದಕ ಪ್ರಸಾದವುಂಟು, ಆಚಾರವುಂಟು ಸದ್ಭಕ್ತಿಯುಂಟು.
ಇಂತೀ ಎಲ್ಲವನು ಜಂಗಮಕ್ಕೆ ದಾಸೋಹವ ಮಾಡದೆ
ತನ್ನ ಗುರುವಿಗೂ ಲಿಂಗಕ್ಕೂ ಆರು ಕೆಲಂಬರು ಭಕ್ತಿಯ ಮಾಡುವರು
ಅವರಿಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ ಪಾದೋದಕ ಪ್ರಸಾದವಿಲ್ಲ.
ಇಂತೀ ಪಂಚಾಚಾರವಿಲ್ಲವಾಗಿ ಅವರು ವ್ರತಗೇಡಿಗಳು.
ಅವರ ಮುಖವ ನೋಡಲಾಗದು, ಕೂಡಲಚೆನ್ನಸಂಗಮದೇವಾ. ॥ ೬೭೫ ॥

೧೫೬೯

ಮಹಾಜ್ಞಾನವು ಗುರುವಿನಲ್ಲಿ ಸಾಹಿತ್ಯ
ಸುಜ್ಞಾನವು ಶಿಷ್ಯನಲ್ಲಿ ಸಾಹಿತ್ಯ, ಜ್ಞಾನವು ಲಿಂಗದಲ್ಲಿ ಸಾಹಿತ್ಯ.
ಇಂತೀ ಜ್ಞಾನವೂ ಸುಜ್ಞಾನವೂ ಮಹಾಜ್ಞಾನವೂ ಜಂಗಮದಲ್ಲಿ ಸಾಹಿತ್ಯವು.
ಇದು ಕಾರಣವಾಗಿ– ಸಕಲ ಭೋಗಾದಿಭೋಗಂಗಳೆಲ್ಲವನು
ಜಂಗಮಕ್ಕೆ ಕೊಡದೆ ಲಿಂಗಕ್ಕೆ ಕೊಡಲಾಗದು
ಅದೇನು ಕಾರಣವೆಂದರೆ:
ಸರ್ವಸುಖಂಗಳನು ಜಂಗಮಕ್ಕೆ ಅರ್ಪಿಸಿದಡೆ
ಆ ಸುಖವ ಸುಖಿಸಬಲ್ಲನಾಗಿ ತನಗೆ ಪ್ರಸಾದವಾಯಿತ್ತು.
ಲಿಂಗಕ್ಕೆ ಅರ್ಪಿಸಿದಡೆ ಆ ಸುಖವ ಸುಖಿಸಲರಿಯದಾಗಿ
ತನಗೆ ಪ್ರಸಾದವಿಲ್ಲ, ಪ್ರಸಾದವಿಲ್ಲವಾಗಿ ಮುಕ್ತಿಯಿಲ್ಲ.
ಅದು ಕಾರಣವಾಗಿ– ಜಂಗಮಕ್ಕೆ ಮಾಡದೆ ಲಿಂಗಕ್ಕೆ ಆರು ಮಾಡಿಹಾರು
ಅಲ್ಲಿ ಲಿಂಗಕ್ಕೆ ತೃಪ್ತಿಯಿಲ್ಲ ಕಾಣಾ
ಕೂಡಲಚೆನ್ನಸಂಗಮದೇವಾ. ॥ ೬೭೬ ॥

೧೫೭೦

ಮಹಾಂತನ ಕೂಡಲದೇವರೆಂಬ ಪಾಷಂಡಿ ವೇಷಧಾರಿ
ಉದರಘಾತಕ ಮೂಳ ಹೊಲೆಯರನೇನೆಂಬೆಸಯ್ಯಾ?
ಮಹಾಂತನ ಪರಿ ಪ್ರಕಾರವನೇನೆಂದರಿಯರಯ್ಯಾ.
ಮಹಾಂತನೆಂದಡೆ ಪರಂಜ್ಯೋತಿ ಸ್ವರೂಪು, ನಿತ್ಯ ನಿರಂಜನನು,
ನಿಃಕಳಂಕ, ನಿರ್ದೇಹನು, ನಿಃಶೂನ್ಯ ನಿರಾಮಯನು,
ಅನಂತ ಬ್ರಹ್ಮಾಂಡಗಳ ನೆನಹು ಮಾತ್ರದಲ್ಲಿ ಕರ್ತೃ.
ಪಾದದಲ್ಲಿ ಪಾತಾಳಲೋಕ, ನೆತ್ತಿಯಲ್ಲಿ ಸತ್ಯಲೋಕ
ಕುಕ್ಷಿಯಲ್ಲಿ ಹದಿನಾಲ್ಕು ಲೋಕವ ತಾಳಿಹ ವಿಶ್ವಪರಿಪೂರ್ಣನು.
ಇಂತಪ್ಪ ಪರಂಜ್ಯೋತಿ ಮಹಾಂತನ ತನ್ನ ಸರ್ವಾಂಗದೊಳಗಡಗಿಸಿಕೊಂಡು

ನಿಬ್ಬೆರಗಿಯಾಗಿ ನಿಃಶೂನ್ಯ ನಿಃಶಬ್ದನಾಗಿ ಇರಬಲ್ಲಡೆ
ಮಹಾಂತ ಕೂಡಲದೇವರೆಂಬೆ.
ಇದನರಿಯದ ವೇಷಲಾಂಛನ ನರಕಿಗಳನೇನೆಂಬೆನಯ್ಯಾ
ಕೂಡಲಚೆನ್ನಸಂಗಮದೇವರಲ್ಲಿ ಸಲ್ಲದ ನರಕಿಗಳ? || ೬೭೭ ||

೧೫೩೧

ಮಹಾಲಿಂಗಮೋಹಿತನಾದಡೆ ಲೋಕದ ಮೋಹವ ಮರೆಯಬೇಕು.
ಮಹಾಲಿಂಗಭಕ್ತನಾದಡೆ ಪೂರ್ವಭಕ್ತಿಯ ಮಾಡಲಾಗದು.
ಮಹಾಲಿಂಗಪೂಜಕನಾದಡೆ, ಅಜ್ಞಾನಿಗಳ ಕೂಡೆ
ಸಂಗ–ಸಂಭಾಷಣೆಯ ಮಾಡಲಾಗದು.
ಮಹಾಲಿಂಗವೀರನಾದಡೆ ಪ್ರಳಯಾದಿಗಳಿಗಂಜಲಾಗದು.
ಮಹಾಲಿಂಗಪ್ರಸಾದಿಯಾದಡೆ ಸಮತೆ ನೆಲೆಗೊಳ್ಳಬೇಕು.
ಮಹಾಲಿಂಗಪ್ರಾಣಿಯಾದಡೆ ಮನದ ಕೊನೆಯಲ್ಲಿ
ಲಿಂಗದ ನೆನಹು ಹಿಂಗಲಾಗದು.
ಇದು ಕಾರಣ– ಕೂಡಲಚೆನ್ನಸಂಗಯ್ಯನಲ್ಲಿ
ಈ ಆರು ಸಹಿತ ಮಹಾಲಿಂಗಭಕ್ತ. || ೬೭೮ ||

೧೫೩೨

ಮಾಂಸಕ್ಕೆ ಮೆಚ್ಚಿದ ಅರಸುಗಳು ನಾಯುಂಜಲ ತಿಂದು
ನರಕಕ್ಕಿಳಿದು ಹೋದರು.
ಸೂಳೆಗೆ ಮೆಚ್ಚಿದವರು ಸೂಳೆಯ ಬಂಟರೆಂಜಲ ತಿಂದು
ನರಕಕ್ಕಿಳಿದು ಹೋದರು– ಇದು ಲೋಕವರಿಯಲುಂಟು.
ಲಿಂಗವ ಮೆಚ್ಚಿದ ಸದ್ಭಕ್ತರು ಗುರುಲಿಂಗಜಂಗಮದ
ಒಕ್ಕು ಮಿಕ್ಕ ಪ್ರಸಾದವ ಕೊಂಡು,
ಆಗಳೆ ಅಂತೆ ಮೋಕ್ಷವನೈದಿದರೆಂಬುದು
ಶಿವರಹಸ್ಯದಲ್ಲಿ;
ಶ್ವಾನೋಚ್ಛಿಷ್ಟಾಯತೇ ರಾಜಾ ವೇಶ್ಯೋಚ್ಛಿಷ್ಟಂ ಜಗತ್ತ್ರಯಂ।
ಜಂಗಮೋಚ್ಛಿಷ್ಟ ಭುಂಜಾನೋ ಸದ್ಯೋ ಮುಕ್ತೋ ನ ಸಂಶಯಃ॥ ಎಂದುದಾಗಿ
ಗುರುಲಿಂಗಜಂಗಮದ ಪ್ರಸಾದವ ಕೊಂಬವರ ಕಂಡು
ನಿಂದಿಸುವರ ಬಾಯಲ್ಲಿ ಬಾಲಹುಳು ಸುರಿಯದೆ ಮಾಣ್ಬುದೆ
ಕೂಡಲಚೆನ್ನಸಂಗಮದೇವಾ? || ೬೭೯ ||

೧೫೩೩

ಮಾಡಬಾರದ ಭಕ್ತಿಯನೆ ಮಾಡಿ, ನೋಡಬಾರದ ನೋಟವನೆ ಕೂಡಿ,
ಸ್ತುತಿಸುವರೆ ಸ್ತುತಿಗೆ ಬಾರದೆ, ಮುಟ್ಟುವ[ರೆ] ಮುಟ್ಟಬಾರದೆ
ಬಟ್ಟಬಯಲಾಗಿ ಹೋದ ಮರುಳಶಂಕರದೇವರ ಮಹಾತ್ಮೆಗೆ
ನಮೋ ನಮೋ ಎಂದು ಬದುಕಿದೆನು ಕಾಣಾ
ಕೂಡಲಚೆನ್ನಸಂಗಮದೇವಾ. || ೬೮೦ ||

೧೫೩೪

ಮಾಡಿ ಮಾಟವ ಮರೆದು, ಕೂಡಿ ಕೂಟವ ಮರೆದು
ಬಯಲ ಸಮರಸಕ್ಕೆ ಮರುಳಾಯಿತ್ತಲ್ಲಾ!
ಅನ್ಯ ಚಿಹ್ನವಳಿದು ತನ್ನ ತಾ ಮರೆಯಿತ್ತು,
ಕೂಡಲಚೆನ್ನಸಂಗನೆಂದೆನಿಸಿತ್ತು! || ೬೮೧ ||

೧೫೩೫

ಮಾಡುವಲ್ಲಿ ಎನ್ನ ನಾನು ಅರೆಯಿತ್ತು ಮಾಡಿದೆನಾದಡೆ,
ನೀಡುವಲ್ಲಿ ಎನ್ನ ನಾನು ಅರೆಯಿತ್ತು ನೀಡಿದೆನಾದಡೆ,
[ಉಣಿಸುವಲ್ಲಿ] ಎನ್ನ ನಾನು ರುಚಿಗೆ ಹಾರೈಸಿದೆನಾದಡೆ
ನಿಮಗಂದೇ ದ್ರೋಹಿಯಯ್ಯಾ!
ಮಾಡುವಲ್ಲಿ ನೀಡುವಲ್ಲಿ [ಉಣಿಸುವಲ್ಲಿ] ಕೂಡೆ ಶುದ್ಧನಲ್ಲದಡೆ
ನೀನಂದೆ ಮೂಗ ಕೊಯ್ಯಾ ಕೂಡಲಚೆನ್ನಸಂಗಮದೇವಾ. || ೬೮೨ ||

೧೫೩೬

ಮಾಡುವ ಸದಾಚಾರಕ್ಕೆ ಮೊದಲನೆಯ ಲಿಂಗಪೂಜೆಯೆ ಗುರುಪೂಜೆ.
ಮಾಡುವ ಸದಾಚಾರಕ್ಕೆ ಎರಡನೆಯ ಲಿಂಗಪೂಜೆಯೆ ಲಿಂಗಪೂಜೆ.
ಮಾಡುವ ಸದಾಚಾರಕ್ಕೆ ಮೂರನೆಯ ಲಿಂಗಪೂಜೆಯೆ ಜಂಗಮಪೂಜೆ.
ಮಾಡುವ ಸದಾಚಾರಕ್ಕೆ ಮೂರು ಪೂಜೆ.
ಈ ಪೂಜೆ ಅನಂತಜನ್ಮದುರಿತಧ್ವಂಸ ನೋಡಾ,
ಕೂಡಲಚೆನ್ನಸಂಗಮದೇವ ಸಾಕ್ಷಿಯಾಗಿ. || ೬೮೩ ||

೧೫೩೭

ಮಾಣಿಕ್ಯದ ಮಂಟಪದೊಳಗೆ ವಿಳು ಚಿತ್ರಕರೊಡನೆ
ಮೇಳವಿಸಿದನು ಮಹಾಮಂತ್ರಂಗಳ.

ಮೂಲಮಂತ್ರದ ಮೇಲೆ ಪ್ರಾಣಲಿಂಗದ ಬೆಳಗು!
ವಾರಿಕಲ್ಲಲ್ಲಿ ವಜ್ರದ ಕೀಲು ಕೂಟ
ಜಾಳಾಂದರದೊಳಗೆ ಮಾಣಿಕ್ಯದ ಪ್ರತಿಬಿಂಬ
ಏಳು ರತ್ನದ ಪ್ರತ್ಥಳಿಗಳಾಟವು,
ಮಣಿಮಾಲೆಗಳ ಹಾರ, ಹೊಳೆವ ಮುತ್ತಿನ ದಂಡೆ,
ಎಳೆಯ ನೀಲದ ತೊಡಿಗೆಯನೆ ತೊಟ್ಟರು,
ಸುಳಿದು ಮದ್ದಳೆಗಾರರೊಳು ಮೊಳಗೆ (ದಂಡಳ) ಮಿನಲು
ಕುಣಿವ (ಪಾಡುವ) ಬಹುರೂಪಿಗಳ ನಾಟಕ, ತಾಳಧಾರಿಯ ಮೇಳ
ಕಹಳೆಗಾರನ ನಾದ ಕೊಳಲ ರವದೊಳಗಾಡುತ್ತ
ಒಳಹೊರಗೆ ಕಾಣಬರುತ್ತಿದೆ ಚಿತ್ರದ ಬೊಂಬೆ!
ಫಣಿಪತಿಯು ಕೋಣೆ ಸಂದಣಿಸುತ್ತಿರಲು ಗಣಮೇಳ
ಕೂಡಲಚೆನ್ನಸಂಗಯ್ಯನಲ್ಲಿ
ಕಳಸ (ಕಳಾಸ?) ಪ್ರಾಣಲಿಂಗದ ಬೆಳಗಿನೊಳು ಬೆಳಗಿತ್ತು. || ೬೮೪ ||

೧೫೩೮

ಮಾತನು ಮನೆಯು ಮಾಡಿ ಪತಿ (ಸತಿ?) ಯ ನೆಲೆಗೊಳಿಸಿ
ಭ್ರಾಂತಿನ ಕದವನಿಕ್ಕಿ ಸೂತಕವಳಿದ ಸುಯಿದಾನಿ,
ಇದನರಿದು ಮರೆದವರ. ಕೂಡಲಚೆನ್ನಸಂಗನೆಂಬೆ. || ೬೮೫ ||

೧೫೩೯

ಮಾತು ಮಾಣಿಕ್ಯವ ನುಂಗಿ, ಜ್ಯೋತಿ ಕತ್ತಲೆಯ ನುಂಗಿ
ಆಳು ಆಳ್ದನ ನುಂಗಿ ಉಗುಳಲಿನ್ನೆಂತೊ?
ಮಥನವಿಲ್ಲದ ಸಂಗ, ಮರಣವಿಲ್ಲದ ಉದಯ, ಅಳಲಿಲ್ಲದ. ಶೋಕ
ಸಮರಸದಲ್ಲಿ!
ಉದಯದ ಬೆಳಗನು ಮದಗಜ ಒಳಕೊಂಡು
ಮಾವತಿಗನ ನುಂಗಿ ಉಗುಳದಲ್ಲಾ!
ಸದಮದ ಭರಿಕ್ಕೈಯೊಳಗೆ ಈರೇಳು ಭುವನವನು
ಒದರಿ ದಾಂಟ್ಕಿ ತಾನೆ ನಿಂದುದಲ್ಲಾ!
ಸದಮಲಜ್ಞಾನಸಂಪನ್ನ ಕೂಡಲಚೆನ್ನಸಂಗಯ್ಯನಲ್ಲಿ
ಬಸವಣ್ಣಂಗೆ ಸ್ವಯವಾಯಿತ್ತು. || ೬೮೬ ||

೧೫೪೦

ಮಾಯದ ಕಾಯದಲ್ಲಿ ಹುಟ್ಟಿದ ಕಷ್ಟಗುಣಂಗಳ ಬಿಟ್ಟು,
ನಿಷ್ಠೆಯಿಂದ ಬಂದು ನಿಮ್ಮ ಚರಣಕೆರಗಿದೆನು, ಮೊರೆಹೊಕ್ಕೆನು,
ಕೃಪೆಯಿಂದಲೆನಗೆ ಉಪದೇಶಪ್ರಸಾದವನಿತ್ತು ಸಲಹಾ
ಬಸವಣ್ಣ ಗುರುವೆ, ಕೂಡಲಚೆನ್ನಸಂಗಮದೇವಾ. ॥ ೬೮೭ ॥

೧೫೪೧

ಮಾಯೆವಿಡಿದು ಜೀವಿಸುವ ಜೀವಕನಲ್ಲ,
ಅದೇನು ಕಾರಣವೆಂದಡೆ:
ಆತ ಘನಲಿಂಗವಿಡಿದು ಜೀವಿಸುವ ಜೀವಕನಾಗಿ.
ವಿಷಯವಿಡಿದು ಭುಂಜಿಸುವ ಭುಂಜಕನಲ್ಲ;
ಅದೇನು ಕಾರಣವೆಂದಡೆ:
ಆತ ಮಹಾಪ್ರಸಾದವಿಡಿದು ಭುಂಜಿಸುವ ಭುಂಜಕನಾಗಿ.
ವೇಷವಿಡಿದು ರಂಜಿಸುವ ರಂಜಕನಲ್ಲ,
ಅದೇನು ಕಾರಣವೆಂದಡೆ:
ಆತ ಸಹಜವಿಡಿದು ರಂಜಿಸುವ ರಂಜಕನಾಗಿ.
ಇಂತೀ ತ್ರಿವಿಧವಿಡಿದು ಪರಮಾರ್ಥದಲ್ಲಿ ಆಚರಿಸುವ ಶರಣಂಗೆ
ಶರಣೆಂಬೆನು ಕೂಡಲಚೆನ್ನಸಂಗಮದೇವಾ. ॥ ೬೮೮ ॥

೧೫೪೨

ಮಾಹೇಶ್ವರಂಗೆ ಅಪ್ಪುವೆ ಅಂಗ, ಆ ಅಂಗಕ್ಕೆ ಸುಬುದ್ಧಿಯೆ ಹಸ್ತ
ಆ ಹಸ್ತಕ್ಕೆ ಕರ್ತೃಸಾದಾಖ್ಯ, ಆ ಸಾದಾಖ್ಯಕ್ಕೆ ಜ್ಞಾನಶಕ್ತಿ,
ಆ ಶಕ್ತಿಗೆ ಗುರುಲಿಂಗ, ಆ ಲಿಂಗಕ್ಕೆ ಪ್ರತಿಷ್ಠೆಯೆ ಕಳೆ,
ಆ ಕಳೆಗೆ ಜಿಹ್ವೇಂದ್ರಿಯವೆ ಮುಖವು,
ಆ ಮುಖಕ್ಕೆ ಸುರಸದ್ರವ್ಯಂಗಳ ರೂಪು–ರುಚಿ–ತೃಪ್ತಿಯನರಿದು
ನೈಷ್ಠಿಕ ಭಕ್ತಿಯಿಂದರ್ಪಿಸಿ, ಸುಪ್ರಸಾದವ ಭೋಗಿಸಿ ಸುಖಿಸುತ್ತಿಹನು
ಕೂಡಲಚೆನ್ನಸಂಗಾ ನಿಮ್ಮ ಮಾಹೇಶ್ವರ. ॥ ೬೮೯ ॥

೧೫೪೩

ಮಿಂಚು ಮಿಂಚಿದಡೆ,
ಮಿಂಚಿನಲುಳ್ಳ ಪ್ರಯೋಗವನಾಕ್ಷಣವೆ ಪ್ರಯೋಗಿಸಬೇಕು.
ಇಂದ್ರಚಾಪ ತೋರಿದಡೆ

ಇಂದ್ರಚಾಪದಲುಳ್ಳ ಪ್ರಯೋಗವನಾಕ್ಷಣವೆ ಪ್ರಯೋಗಿಸಬೇಕು.
ಮಹಾನುಭಾವಿಗಳು ಮನದೆರೆದು ಮಾತನಾಡಿದಡೆ
ಅನುಭಾವದೊಳಗುಳ್ಳ ಪ್ರಯೋಗವನಾಕ್ಷಣವೆ ಪ್ರಯೋಗಿಸಬೇಕು.
ಕೂಡಲಚೆನ್ನಸಂಗಯ್ಯನಲ್ಲಿ ಸ್ವಾಯತವಾದ ಶರಣರು ಸ್ವೇಚ್ಛಾಪರರು. ॥ ೬೯೦ ॥

೧೫೪೪

ಮುಂಡೆಯ ಕೈಯಲ್ಲಿ ಬಾಗಿನವ ಕೊಂಡಡೇನಯ್ಯಾ?
ಗಂಡನುಳ್ಳ ಗರತಿಯರು ಮೆಚ್ಚರು.
ಶೈವಗುರುವಿನ ಕೈಯಲ್ಲಿ ಲಿಂಗಸಾಹಿತ್ಯವಾದಡೇನಯ್ಯಾ?
ವೀರಶೈವ ಶರಣರು ಮೆಚ್ಚರು.
ಇದು ಕಾರಣ– ಕೂಡಲಚೆನ್ನಸಂಗಮದೇವಯ್ಯಾ,
ಶೈವಗುರುವಿನ ಕೈಯಲ್ಲಿ ಸಾಹಿತ್ಯವಪ್ಪುದರಿಂದ ಸಾವುದೆ ಲೇಸಯ್ಯಾ. ॥ ೬೯೧ ॥

೧೫೪೫

ಮುಕ್ತಿಯೆಂದು ಮನದಲ್ಲಿ ಹೊಳೆದು ಕಾಮಿಸುವನ್ನಕ್ಕ
ಪ್ರಸಾದಸಾಹಿತ್ಯವಾಗದು.
ಪರವೆಂದು ಮನದಲ್ಲಿ ಹೊಳೆದು ಕಾಮಿಸುವನ್ನಕ್ಕ
ಜಂಗಮಸಾಹಿತ್ಯವಾಗದು.
ಲಿಂಗವ ಬೆರಸಿಹೆನೆಂದು ಮನದಲ್ಲಿ ಹೊಳೆದು ಕಾಮಿಸುವನ್ನಕ್ಕ
ಶಿವಲಿಂಗಸಾಹಿತ್ಯವಾಗದು.
ವಿಶೇಷ ತತ್ವ ಉಂಟೆಂದು ಮನದಲ್ಲಿ ಹೊಳೆದು ಕಾಮಿಸುವನ್ನಕ್ಕ
ಶ್ರೀಗುರುಸಾಹಿತ್ಯವಾಗದು.
ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ–
ಇಂತೀ ಚತುರ್ವಿಧಲಿಂಗವ ಏಕೀಕರಿಸಿ
ಪ್ರಾಣಲಿಂಗವಾದ ಮಹಾಮಹಿಮಂಗೆ
ಕಾಮಿಸಲಿಲ್ಲ, ಕಲ್ಪಿಸಲಿಲ್ಲ, ಭಾವಿಸಲಿಲ್ಲ ಚಿಂತಿಸಲಿಲ್ಲ.
ಆತ ನಿಶ್ಚಿಂತ ಪರಮಸುಖಿ, ಆತನಿರ್ದುದೆ ಕೈಲಾಸ,
ಕೂಡಲಚೆನ್ನಸಂಗಮದೇವಾ. ॥ ೬೯೨ ॥

೧೫೪೬

ಮುಟ್ಟುದ ಮುನ್ನ ಗುರುವುಂಟು,
ಲಿಂಗವುಂಟು ಜಂಗಮವುಂಟು,

ಅಂತಹ ಆತ್ಮನಿಲ್ಲದಿರ್ದಡೆ ಮತಿಯು ಮನದೊಳಗಿರಬಲ್ಲುದೆ?
ಅದು ಹುಸಿ ಎಂದಡೆ, ಅಂಗುಷ್ಟದೊಳಗೆ ವಿಷವುಂಟು;
ನಾಭಿಯಲ್ಲಿ ಅಗ್ನಿಯುಂಟು, ಕಂಕುಳಲ್ಲಿ ನಗೆಯುಂಟು,
ಕಂಗಳಲ್ಲಿ ದುಃಖವುಂಟು; ಹುಬ್ಬಿನಲ್ಲಿ ಅಮೃತವುಂಟು,
ಕೋಪವೆಂಬಾ ಕಿಚ್ಚು ಕೆದರಿ ಅಂಗುಷ್ಟದ ಮೇಲೆ ಬೀಳಲಿಕೆ,
ಆ ವಿಷವು ಭುಗಿಲೆಂದೆದ್ದು ಸರ್ವಾಂಗಮಂ ಸುಡುತ್ತ ಬಪ್ಪಲ್ಲಿ
ಜ್ಞಾನವೆಂಬ ಜ್ಯೋತಿ ಹೋಗಿ ತಲೆಯೊಳಡಗಿತ್ತು.
ಅಂತಹ ಕೋಪವೆಂಬ ಹೊಲೆಯು ಶತಸಹಸ್ರ
ಹೊನ್ನಕೊಟ್ಟಡೆ ತಿದ್ದುವುದೆ? ತಿದ್ದದು.
ಹಣೆಯ ಅಮೃತ ಬಂದು ಅಂಗುಷ್ಟದ ವಿಷದ ಮೇಲೆ ಬೀಳಲಿಕೆ
ಪರುಷ ಬಂದು ಲೋಹಮಂ ಮುಟ್ಟಿದಂತಾಯಿತ್ತು.
ಸರ್ವಮಂ ಕೊಂದ ಹಗೆಯಾದಡೆಯೂ ಹೋಹುದು.
ಇಂತಪ್ಪ ಸರ್ವಾಂಗಲಿಂಗಾಂಗಿಗಳು ನಿಮ್ಮ ಶರಣರು.
ಕೂಡಲಚೆನ್ನಸಂಗಮದೇವಾ. ॥ ೬೯೭ ॥

೧೫೫೧

ಮೂರು ಗ್ರಾಮದ ಪಟ್ಟಣಕ್ಕೆ ಪಂಚನಾಯಕರ ಕಾಪು.
ಅವರ ಸಂಚವಿಡಿದು ಲಿಂಗಾರ್ಚನೆಯ ಮಾಡಿದಡೆ
ಲೋಕದ ಬಳಕೆ ಕಂಡಯ್ಯಾ.
ಐವರ ಪಂಚಸ್ಥಳವಳಿದು ಏಕಸ್ಥಳವಾಗಿ
ನವನಾಳಭೇದದ ಓವರಿಯನರಿದಡೆ
ಕೂಡಲಚೆನ್ನಸಂಗಯ್ಯನೊಬ್ಬನೆ. ॥ ೬೯೮ ॥

೧೫೫೨

ಮೂರು ಲೋಕದವರ ನಿದ್ರಾಂಗನೆ ಹೀರಿ ಹಿಂಡಿ
ಪ್ರಾಣಕಾರ್ಪಣ್ಯವ ಮಾಡಿ ತಟ್ಟುಗೆಡಹಿದಳು.
ಇವಳ ಗೆಲುವವರ ಆರನೂ ಕಾಣೆ,
ಇವಳ ಬಾಣಕ್ಕೆ ಗುರಿಯಾಗಿ ಏಳುತ್ತ ಬೀಳುತ್ತ ಐದಾರೆ
ಕೂಡಲಚೆನ್ನಸಂಗಮದೇವಾ. ॥ ೬೯೯ ॥

೧೫೫೩

ಮೃದು ಕಠಿಣ ಶೀತ ಉಷ್ಣ ಸ್ಪರ್ಶನ ಅಂಗಸೋಂಕೆಲ್ಲಾ ಲಿಂಗಸೋಂಕು.
ಅಂಗ ಲಿಂಗ ಸಂಬಂಧವಾದ ಬಳಿಕ ಎನ್ನ ಘ್ರಾಣ ಜಿಹ್ವೆ ನೇತ್ರ ತ್ವಕ್ಕು ಶ್ರೋತ್ರ

ಮುಂತಾದ ಪಂಚವಿಷಯದಲ್ಲಿ ತಟ್ಟುವ ಪಂಚದ್ರವ್ಯಕ್ಕೆಲ್ಲಕ್ಕೂ
ನೀನಲ್ಲದೆ ನಾನೆಂಬುದಿಲ್ಲ.
ಕೂಡಲಚೆನ್ನಸಂಗಯ್ಯಾ ಎನ್ನಂಗಸೋಂಕಿಲ್ಲ, ಶಬ್ದಸ್ಪರ್ಶರೂಪುರಸಗಂಧವೆಲ್ಲ
ನಿನ್ನ ಪೂಜೆಯಲ್ಲದೆ ಬೇರನ್ಯ ವಿಷಯ ಸೋಂಕಿಲ್ಲ. ॥ ೭೦೦ ॥

೧೫೫೪

ಮೆಲ್ಲಮೆಲ್ಲನೆ ಭಕ್ತ, ಮೆಲ್ಲಮೆಲ್ಲನೆ ಮಾಹೇಶ್ವರ,
ಮೆಲ್ಲಮೆಲ್ಲನೆ ಪ್ರಸಾದಿ, ಮೆಲ್ಲಮೆಲ್ಲನೆ ಪ್ರಾಣಲಿಂಗಿ,
ಮೆಲ್ಲಮೆಲ್ಲನೆ ಶರಣ, ಮೆಲ್ಲಮೆಲ್ಲನೆ ಐಕ್ಯರಾದೆವೆಂಬರು–
ನಿಮ್ಮ ಶರಣರು ತಾವೇನು ಮರುಜವಣೆಯ ಕೊಂಡರೆ?
ಅಮೃತಸೇವನೆಯ ಮಾಡಿದರೆ?
ಆವ ಸ್ಥಲದಲ್ಲಿ ನಿಂದರೂ
ಆ ಸ್ಥಲದಲ್ಲಿ ಷಡುಸ್ಥಲ ಅಳವಡದಿದ್ದರೆ,
ಆ ಭಕ್ತಿಯ ಬಾಯಲ್ಲಿ ಹುಡಿಯ ಹೊಯ್ದು ಹೋಗುವೆನೆಂದ
ಕೂಡಲಚೆನ್ನಸಂಗಮದೇವರ. ॥ ೭೦೧ ॥

೧೫೫೫

ಮೋಹದಲಚ್ಚೊತ್ತಿ ಎ(ಅ?)ಚ್ಚ ಏರಕವ ಬಿಟ್ಟು,
ಗಡ್ಡ ಮಂಡೆ ಬೋಳಿಸಿ, ಮೂರು ಬೇಳಿನ ಕುರುಹಿನಿಂದವೆ
ಎಚ್ಚರಿಕೆಯಲ್ಲಿ ನಡೆವುದು, ನುಡಿವುದು.
ಅಂತಲ್ಲವೆ–ಮನದ ವಿಕಾರದ ಕತ್ತಲೆಯೊಳಗೆ ಸಿಲುಕಿ
ಕಾಲೂರಿ ನಿಂದು ಮೆಲುವೆ.
ಪ್ರಸನ್ನತೆಗೆ ನೆಲೆಯಾಗದಿರ್ದಡೆ, ಕೂಡಲಚೆನ್ನಸಂಗಯ್ಯನು
ಗಸಣಿಗೆ ಗೋರಿಗೊಳಿಸುವನು. ॥ ೭೦೨ ॥

೧೫೫೬

ಯದಾ ಶಿವಕಲಾಯುಕ್ತಂ ಲಿಂಗಂ ದದ್ಯಾನ್ಮಹಾಗುರುಃ।
ತದಾರಾಧ್ಯಂ ಶಿವಸ್ತತ್ರ ತಿಷ್ಠತ್ಯಾಹ್ವಾನವತ್ರ ಕಿಂ॥
ಸುಸಂಸ್ಕೃತೇಷು ಲಿಂಗೇಷು ಸದಾಸನ್ನಿಹಿತಃ ಶಿವಃ।
ಅಥಾಹ್ವಾನಂ ನ ಕರ್ತವ್ಯಂ ಪ್ರತಿ ಪತಿವಿರೋಧತಃ॥
ಆಹ್ವಾನಂ ಚ ವಿಸರ್ಜನಂ ಚ ಸ್ವೇಷ್ಟಲಿಂಗೇನ ಕಾರಯೇತ್।

ಲಿಂಗನಿಷ್ಠಾಪರೋ ನಿತ್ಯಮಿತಿ ಶಾಸ್ತ್ರವಿನಿಶ್ಚಯಃ||
ಆಹ್ವಾನಕ್ಕೊಕ್ಕೋಸ್ಕರವಾಗಿ ಎಲ್ಲಿರ್ದನು?
ಈರೇಳು ಭುವನ ಹದಿನಾಲ್ಕುಲೋಕವನೊಡಲುಗೊಂಡಿಪ್ಪ ದಿವ್ಯವಸ್ತು
ಮತ್ತೆ ವಿಸರ್ಜಿಸಿ ಬಿಡುವಾಗ ಎಲ್ಲಿರ್ದನು?
ಮುಳ್ಳೂರೆ ತೆರಹಿಲ್ಲದಂತಿಪ್ಪ ಅಖಂಡವಸ್ತು!
ಆಕಾಶಂ ಲಿಂಗಮಿತ್ಯಾಹುಃ ಪೃಥಿವೀ ತಸ್ಯ ಪೀಠಿಕಾ|
ಆಲಯಂ ಸರ್ವಭೂತಾನಾಂ ಅಯನಂ ಲಿಂಗಮುಚ್ಯತೇ||
ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಂ|
ಲಿಂಗಬಾಹ್ಯಾತ್ಪರಂ ನಾಸ್ತಿ ತಸ್ಮಾಲ್ಲಿಂಗಂ ಪ್ರಪೂಜಯೇತ್||
ಯತೋ ವಾಚೋ ನಿವರ್ತಂತೆ ಅಪ್ರಾಪ್ರ ಮನಸಾ ಸಹ|
ನಾದ ಬಿಂದು ಕಲಾತೀತಂ ಗುರುಣಾ ಲಿಂಗಮುದ್ಭವಂ
ವೇದಾದಿನಾಮ ನಿರ್ನಾಮ ಮಹತ್ವಂ ಮಮರೂಪಯೋಃ|
ಗುರೂಕ್ತ ಮಂತ್ರ ಮಾರ್ಗೇಣ ಇಷ್ಟಲಿಂಗಂ ತು ಶಾಂಕರೀ||
ಇಂತೆಂದುದಾಗಿ, ಬರಿಯ ಮಾತಿನ ಬಳಕೆಯ ತೂತಜ್ಞಾನವ ಬಿಟ್ಟು
ನೆಟ್ಟನೆ ತನ್ನ ಕರಸ್ಥಲದೊಳ್ ಒಪ್ಪುತಿರ್ಪ ಇಷ್ಟಲಿಂಗವ ದೃಷ್ಟಿಸಿ ನೋಡಲು
ಅಲ್ಲಿ ತನ್ನ ಮನಕ್ಕೆ ಮನ ಸಂಧಾನವಾದ ದಿವ್ಯ ನಿಶ್ಚಯ ಒದಗಿ,
ಆ ದಿವ್ಯ ನಿಶ್ಚಯದಿಂದ ವ್ಯಾಕುಳವಡಗಿ ಅದ್ವೈತವಪ್ಪುದು.
ಅದು ಕಾರಣ–ನಮ್ಮ ಕೂಡಲಚೆನ್ನಸಂಗಯ್ಯನ ಶರಣರು
ಆಹ್ವಾನ–ವಿಸರ್ಜನವೆಂಬ ಉಭಯ ಜಡತೆಯ ಬಿಟ್ಟು
ತಮ್ಮ ತಮ್ಮ ಕರಸ್ಥಲದಲ್ಲಿ ನಿಶ್ಚಯಿಸಿದರಾಗಿ
ಸ್ವಯಲಿಂಗವಾದರು ಕಾಣಿರೋ! || ೭೦೩ ||

೧೫೫೭

'ಯದ್ಭಾವಸ್ತದ್ಭವತಿ' ಎಂಬ ಭಾವವುಂಟಾಗಿ ಶಿವ ತಾನೆ ಗುರುವಾದ.
'ಯದ್ಭಾವಸ್ತದ್ಭವತಿ' ಎಂಬ ಭಾವವುಂಟಾಗಿ ಶಿವ ತಾನೆ ಶಿಷ್ಯನಾದ.
'ಯದ್ಭಾವಸ್ತದ್ಭವತಿ' ಎಂಬ ಭಾವವುಂಟಾಗಿ ಶಿವ ತಾನೆ ಜಂಗಮವಾದ.
'ಯದ್ಭಾವಸ್ತದ್ಭವತಿ' ಎಂಬ ಭಾವವುಂಟಾಗಿ ಶಿವ ತಾನೆ ಭಕ್ತನಾದ.
'ಯದ್ಭಾವಸ್ತದ್ಭವತಿ' ಎಂಬ ಭಾವವುಂಟಾಗಿ ಶಿವ ತಾನೆ ಪ್ರಸಾದವಾದ.
'ಯದ್ಭಾವಸ್ತದ್ಭವತಿ' ಎಂಬ ಭಾವವುಂಟಾಗಿ ಶಿವ ತಾನೆ ಪ್ರಸಾದಿಯಾದ.
'ಯದ್ಭಾವಸ್ತದ್ಭವತಿ' ಎಂಬ ಭಾವವುಂಟಾಗಿ
ಕೂಡಲಚೆನ್ನಸಂಗ ತಾನೆಯಾದ. || ೭೦೪ ||

೧೫೫೮

ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ
ಧ್ಯಾನಧಾರಣ ಸಮಾಧಿಯೆಂಬ ಅಷ್ಟಾಂಗಯೋಗವನರಿದು
ನಿಟಿಲತಟ ಭ್ರೂಮಧ್ಯದ ಮೇಲಣ ಉಭಯದಳದ
ಜೀವ ಪರಮರ ಭೇದವೆಂತಿರ್ದುದೆಂದಡೆ:
ಗ್ರಂಥ:
ಜೀವಾತ್ಮಾ ಪರಮಾತ್ಮಾ ಚೇನ್ಮುಕ್ತಾನಾಂ ಪರಮಾಗತಿ।
ಅವ್ಯಯಃ ಪುರುಷಃ ಸರ್ವಕ್ಷೇತ್ರಜ್ಞೋಽಕ್ಷಯ ಏವ ಚ॥
ಎಂದುದಾಗಿ–ಇಂತಾದ ತನುಕ್ಷೇತ್ರಜ್ಞನನು
ಗಂಧದ್ವಾರದ ರಂಧ್ರದ ನಡುವಣ ಸಣ್ಣ ಬಿಲಬಟ್ಟೆಯೆಂಬ
ಬ್ರಹ್ಮರಂಧ್ರದ ನಾಳದೊಳು ಪ್ರಯೋಗಿಸಿ, ಕವಾಟದ್ವಾರಮಂ ತೆಗೆದು
ತೆರಹಿಲ್ಲದೆ ಬಯಲಾದ, ಕೂಡಲಚೆನ್ನಸಂಗಯ್ಯಾ ನಿಮ್ಮ ಶರಣ. ॥ ೭೦೫ ॥

೧೫೫೯

ಯಾಂತ್ರಿಕನ ಯಂತ್ರಮಂತ್ರ ಸಂಬಂಧದಿಂದ
ಪಿಶಾಚಗ್ರಸ್ತನ ಪಿಶಾಚಿಯು ಫಲಾಯನವಪ್ಪ ತೆರನಂತೆ,
ಶ್ರೀಗುರುವಿನ ಶಿವಮಂತ್ರ ಶಿವಲಿಂಗ ಸಂಬಂಧದಿಂದ
ಮನುಜನ ಮಾಯಾಗ್ರಹವು ತೊಲಗುವುದಯ್ಯಾ.
ಗಿಡಮರಬಳ್ಳಿಗಳ ನಾರುಬೇರುಗಳ ಶರೀರದೊಂಡೆಯಲ್ಲಿ ಧರಿಸಿದಡೆ
ರೋಗಿಯ ಹಲವು ರೋಗಗಳು ನಷ್ಟವಪ್ಪ ಪರಿಯಂತೆ
ಇಷ್ಟಲಿಂಗವನಂಗದಲ್ಲಿ ಸಂಗಗೊಳಿಸುವುದರಿಂದ,
ಭವಿಯು ಭವ ಕೆಟ್ಟು, ಕೂಡಲಚೆನ್ನಸಂಗಯ್ಯನ
ಕಾರುಣ್ಯಕ್ಕೆ ಪಕ್ಕಾಗುವನಯ್ಯಾ. ॥ ೭೦೬ ॥

೧೫೬೦

ರಚನೆ ರಂಜಕವ ನುಡಿವಾತ ಜಂಗಮವಲ್ಲ.
ನರರ ಹೊಗಳಿ ಹಾಡಿ ಬೇಡುವಾತ ಜಂಗಮವಲ್ಲ.
ನರರ ಕೈವಾರಿಸುವಾತ ಜಂಗಮವಲ್ಲ.
ಇದು ಕಾರಣ–ಕೂಡಲಚೆನ್ನಸಂಗಯ್ಯನಲ್ಲಿ
ಪ್ರಭುವೇ ಜಂಗಮ, ಬಸವಣ್ಣನೇ ಭಕ್ತ. ॥ ೭೦೭ ॥

೧೫೭೧

ರಜದ ನಿಜದ ಭುಜದ ಗಜದ ಸದದ
ಇವೆಲ್ಲವನು ಕೊಂಡು ಹೋಗಿ, ಮಡಿವಾಳನೆಂದು ಒಗೆಯ ಹಾಕಿದನು.
ಒಗೆಯ ಹಾಕಿದಡೆ, ಗುರುಮೂರ್ತಿಯ ನಷ್ಟವ ಬಿಳಿದು ಮಾಡಿದನು.
ಲಿಂಗಸಾರಾಯಸ್ವರೂಪವ ಬಿಳಿದು ಮಾಡಿದನು,
ಜಂಗಮಸಾರಾಯಸ್ವರೂಪವ ಬಿಳಿದು ಮಾಡಿದನು,
ಅಗ್ನಿಯಿಲ್ಲದ ಪಾಕದ ಪದಾರ್ಥವ ಲಿಂಗವಿಲ್ಲದೆ ಅರ್ಪಿಸಿದನು;
ಜಂಗಮವಿಲ್ಲದೆ ನೀಡಿದನು, ಪ್ರಸಾದವಿಲ್ಲದೆ ಗ್ರಹಿಸಿದನು.
ಇದು ಕಾರಣ–ಕೂಡಲಚೆನ್ನಸಂಗಯ್ಯನಲ್ಲಿ
ಬಸವಣ್ಣ, ಮಡಿವಾಳನೆಂಬ ಪ್ರಸಾದ ಎನಗಳವಟ್ಟಿತ್ತು. || ೭೦೮ ||

೧೫೭೨

ರುದ್ರಮುನಿಲಿಂಗವೆ ಸದ್ಭಕ್ತರನೆ ತೋರಿಸಯ್ಯಾ ಪ್ರಭುವೆ.
ನಿಧಾನವನಗೆಪೆನೆಂದು ಹೋದಡೆ,
ವಿಘ್ನಬಪ್ಪುದು ಮಾಬುದೆ ಅಯ್ಯಾ?
ಸದಾಶಿವನ ಪೂಜಿಸಿಹೆನೆಂದು ಹೋದಡೆ
ಕದುಬಿ ಹಿಡಿವವಯ್ಯಾ ಸಕಲ ವಿಪತ್ತುಗಳು
ಎಡೆಭಂಗವಿಲ್ಲದೆ ನಿಲಬಲ್ಲಡೆ
ಸದಮಲಸುಖವನೀವ ನಮ್ಮ ಕೂಡಲಸಂಗಮದೇವರು. || ೭೦೯ ||

೧೫೭೩

ರುದ್ರ ಮುಖದಲ್ಲಿ, ವಿಷ್ಣು ಭುಜದಲ್ಲಿ, ಜಂಘೆಯಲ್ಲಿ ಅಜ ಜನನವು.
ಇಂದ್ರ ಪಾದದಲ್ಲಿ, ಚಂದ್ರ ಮನದಲ್ಲಿ, ಚಕ್ಷುವಿನಲ್ಲಿ ಸೂರ್ಯ ಜನನವು.
ಮುಖದಲಗ್ನಿ, ಪ್ರಾಣದಲ್ಲಿ ವಾಯು, ನಾಭಿಯಲ್ಲಿ ಅಂತರಿಕ್ಷ ಜನನವು.
ಶಿರದಲುದಯ ತೆತ್ತೀಸಕೋಟಿ ದೇವತಾದಿಗಳು.
ಪಾತಾಳದಲ್ಲಿ ಭೂಮಿ ಜನನವು, ಶ್ರೋತ್ರದಲ್ಲಿ ದಶದಿಕ್ಕುಗಳು.
ಇವೆಲ್ಲವನು ನಿಕ್ಷೇಪಿಸಿದ ಕುಕ್ಷಿಯಲ್ಲಿ, ಅಕ್ಷಯನಗಣಿತಮಹಿಮನು
"ಬ್ರಾಹ್ಮಣೋಽಸ್ಯ ಮುಖಮಾಸೀತ್ ಬಾಹೂ ರಾಜನ್ಯಃ ಕೃತಃ
ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ
ಚಂದ್ರಮಾ ಮನಸೋ ಜಾತಃ ಚಕ್ಷೋಃ ಸೂರ್ಯೋ ಅಜಾಯತ
ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ
ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ

ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ ತಥಾ ಲೋಕಾನ್ ಅಕಲ್ಪಯನ್"–
ಇಂತೆಂದುದಾಗಿ,
ಸಾಸಿರ ಶಿರ, ಸಾಸಿರ ಕಣ್ಣು, ಸಾಸಿರ ಕೈ, ಸಾಸಿರ ಪಾದ
ಸಾಸಿರ [ಸಾಸಿರ] ಸನ್ನಿಹಿತ ನಮ್ಮ ಕೂಡಲಚೆನ್ನಸಂಗಯ್ಯ. || ೭೧೦ ||

೧೫೭೪

ರೂಢಿಯ (ರುಂಡವ?) ಧರಿಸಿದಾತ ರುಂಡಾಭರಣನೆಂಬ ಗಣೇಶ್ವರನು.
ಆಕಾಶವ ಧರಿಸಿದಾತ ಅಂಥಾಭರಣನೆಂಬ ಗಣೇಶ್ವರನು.
ಭೂವ್ಯಾಕಾಶವ ತಾಳವ ಮಾಡಿ ಒತ್ತಿದಾತ
ಕ್ಷಿತಿವಿಯತ್ತಳನೆಂಬ ಗಣೇಶ್ವರನು.
ಬ್ರಹ್ಮಾಂಡವ ಖಂಡಿಸಿದಾತ ಬ್ರಹ್ಮಾಂಡಖಂಡಿತನೆಂಬ ಗಣೇಶ್ವರನು.
ತ್ರಿಪುರದಹನವ ಮಾಡಿದಾತ ಪಂಚವಿಕೃತನೆಂಬ ಗಣೇಶ್ವರನು.
ಕಾಮದಹನವ ಮಾಡಿದಾತ ಅರ್ಧನಾರೀಶ್ವರನೆಂಬ ಗಣೇಶ್ವರನು.
ಬಲ್ಲಾಳನ ವಧುವ ಬೇಡಿದಾತ ಮಹಾರುದ್ರನೆಂಬ ಗಣೇಶ್ವರನು.
ಸಿರಿಯಾಳನ ಮಗನ ಭಿಕ್ಷವ ಬೇಡಿದಾತ
ಬಹುಭಿಕ್ಷುಕನೆಂಬ ಗಣೇಶ್ವರನು.
ಪರ್ವತಂಗಳ ಧರಿಸಿದಾತ ಪರ್ವತಾಭರಣನೆಂಬ ಗಣೇಶ್ವರನು.
ಇಂತಿವರೆಲ್ಲರೂ ಕೂಡಚೆನ್ನಸಂಗಯ್ಯನ ಲೀಲೆಯ ತದರ್ಥಕರು. || ೭೧೧ ||

೧೫೭೫

ರೂಪಚಕ್ರ ನಯನದಿಂದೆ ನಡೆವುದು;
ಶಬ್ದಚಕ್ರ ಶ್ರೋತ್ರದಿಂದೆ ನಡೆವುದು.
ಸೌರಭಚಕ್ರ ಘ್ರಾಣದಿಂದೆ ನಡೆವುದು,
ರುಚಿಚಕ್ರ ಜಿಹ್ವೆಯಿಂದ ನಡೆವುದು,–
ಈ ಐದರಿಂದೆ ನಡೆವುದು ಲೋಕಾದಿಲೋಕಂಗಳೆಲ್ಲ.
ರೂಹಿಗೆ ಕೆಟ್ಟು ಹೋದರು.
ಈ ಐದರ ಕಥನದಲ್ಲಿ, ಈ ಸಂಸಾರವೆಂಬ ವಿಧಿಯ ಕೈಯಲ್ಲಿ
ಹರಿಬ್ರಹ್ಮಾಸುರರು ಮೊದಲಾದವರೆಲ್ಲರು ಕೆಟ್ಟುಹೋದರು ನೋಡಾ
ಕೂಡಲಚೆನ್ನಸಂಗಮದೇವಾ. || ೭೧೨ ||

೧೫೬೬

ರೂಪನರ್ಪಿಸಿ ನಿರೂಪಪ್ರಸಾದಿ,
ತನ್ನನರ್ಪಿಸಿ ತಾನಿಲ್ಲದ ಪ್ರಸಾದಿ,
ಇವೆಲ್ಲವನರ್ಪಿಸಿ ಬಯಲಪ್ರಸಾದಿ.
ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣರು ಮಹಾಪ್ರಸಾದಿಗಳು. ‖ ೭೧೩ ‖

೧೫೬೭

ರೂಪನರ್ಪಿಸಿ ಫಲವೇನು, ರುಚಿಯನರ್ಪಿಸದನ್ನಕ್ಕ?
ರುಚಿಯನರ್ಪಿಸಿ ಫಲವೇನು ಪರಿಣಾಮವನರ್ಪಿಸದನ್ನಕ್ಕ?
ಪರಿಣಾಮವನರ್ಪಿಸಿ ಫಲವೇನು ತನ್ನನರ್ಪಿಸದನ್ನಕ್ಕ?
ತನ್ನನರ್ಪಿಸಿ ಫಲವೇನು,
ಕೂಡಲಚೆನ್ನಸಂಗಯ್ಯನೆಂಬ ಭಾವ ಬರಿದಾಗದನ್ನಕ್ಕ? ‖ ೭೧೪ ‖

೧೫೬೮

ರೂಪವೆಂತೆಂಬೆನಯ್ಯಾ ರೂಪಿಸಲಿಲ್ಲವಾಗಿ?
ಭಾವವೆಂತೆಂಬೆನಯ್ಯಾ ಭಾವಿಸಲಿಲ್ಲವಾಗಿ?
ಜ್ಞಾನವೆಂತೆಂಬೆನಯ್ಯಾ ಉಪಮಿಸಲಿಲ್ಲವಾಗಿ?
ಸಹಜಲಿಂಗದ ಬೆಳಗಿನಂಗವಿಸುವ ಕೂಡಲಚೆನ್ನಸಂಗಯ್ಯನಲ್ಲಿ
ಪ್ರಭುವಿನ ನಿಲವು ವಿಪರೀತ. ‖ ೭೧೫ ‖

೧೫೬೯

ರೂಪಾಗಿ ಬಂದುದ ಕಾಯದ ಕೈಯಲ್ಲಿ ಕೊಡುವುದು,
ರುಚಿಯಾಗಿ ಬಂದುದ ಮನದ ಕೈಯಲ್ಲಿ ಕೊಡುವುದು,
ತೃಪ್ತಿಯಾಗಿ ಬಂದುದ ಭಾವದ ಕೈಯಲ್ಲಿ ಕೊಡುವುದು,
ಅರ್ಪಿಸುವ ತೆರನಿದು ಪ್ರಸಾದಿಗಯ್ಯಾ.
"ಇಷ್ಟಲಿಂಗಾರ್ಪಿತಂ ರೂಪಂ ರುಚಿಃ ಪ್ರಾಣಸಮರ್ಪಿತಾ।
ತೃಪ್ತಿರ್ಭಾವಸಮಾಯುಕ್ತಾ ಅರ್ಪಿತಂ ತ್ರಿವಿಧಾತ್ಮಕಂ॥" -ಎಂದುದಾಗಿ,
ರೂಪು ರುಚಿ ತೃಪ್ತಿಯ ಕೊಡಬಲ್ಲಡೆ
ಕೂಡಲಚೆನ್ನಸಂಗಯ್ಯನಲ್ಲಿ ಮಹಾಪ್ರಸಾದಿಯಯ್ಯಾ. ‖ ೭೧೬ ‖

೧೫೭೦

ರೂಪಿಲ್ಲದ ರೂಪು, ನಿರ್ಣಯವಿಲ್ಲದ ನಿಷ್ಪತ್ತಿ
ಸೀಮೆಯ ಮೀರಿದ ನಿಸ್ಸೀಮ, ಗಮನವಿಲ್ಲದ ಗಮ್ಯ,
ನುಡಿಯುಡಿಗಿದ ನಿಃಶಬ್ದ, ಪರವನರಿಯದ ಪರಿಣಾಮಿ
ಕೂಡಲಚೆನ್ನಸಂಗನ ಶರಣ ಪ್ರಭುದೇವರಿಗೆ
ನಮೋ ನಮೋ ಎನುತಿರ್ದೆನು. ॥ ೭೧೭ ॥

೧೫೭೧

ರೂಪು ಎಂದಡೆ ರುಚಿಯಾಯಿತ್ತು,
ರುಚಿ ಎಂದಡೆ ಸವಿಯಾಯಿತ್ತು,
ಸವಿ ಎಂದಡೆ ಸಂದಾಯಿತ್ತು.
ರುಚಿ ಎಂದಡೆ, ರೂಪೆಂದಡೆ, ಭವಹಿಂಗದು ನೋಡಾ.
ರೂಪೆನ್ನದೆ ರುಚಿಯೆನ್ನದೆ ಸವಿಯೆನ್ನದೆ ಸಂದೆನ್ನದೆ ಇದ್ದ ಪ್ರಸಾದಿಗೆ
ನಮೋ ನಮೋ ಎಂಬೆ ಕೂಡಲಚೆನ್ನಸಂಗಮದೇವಾ. ॥ ೭೧೮ ॥

೧೫೭೨

ರೂಪುರಹಿತ ಲಿಂಗದಲ್ಲಿ
ಅರ್ಪಿತ, ಪ್ರಸಾದ ಉಭಯ ನಾಸ್ತಿ.
ಇಂತೀ ತ್ರಿವಿಧಸಂಚವ
ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣ ಬಲ್ಲ. ॥ ೭೧೯ ॥

೧೫೭೩

ರೂಪುವಿರಹಿತ ಲಿಂಗ ಕಂಡಾ!
ಗುರುವುಳ್ಳನ್ನಕ್ಕ ಶಿಷ್ಯನಲ್ಲಾ, ಲಿಂಗವುಳ್ಳನ್ನಕ್ಕ ಜಂಗಮವಲ್ಲಾ,
ಪ್ರಸಾದವುಳ್ಳನ್ನಕ್ಕ ಭಕ್ತನಲ್ಲಾ.
ಲಿಂಗೈಕ್ಯನಾದಡೆ; ಸ್ಥಾವರಪರಹಿತ ಶರಣಭರಿತನಾಗಿರಬೇಕು.
ಕಾಯಕ್ಕೆ ಸಾಹಿತ್ಯವೆಲ್ಲಿಯಾದಡೆಯು ಉಂಟು
ಆತ್ಮಸಾಹಿತ್ಯವ ಪೂರ್ವ ನೋಡಾ!
ಆಚಾರ[ಸಾಹಿತ್ಯ]ವೆ ಲೋಕ, ಅನಾಚರ[ಸಾಹಿತ್ಯ]ವೆ ಶರಣ
ಇದು ಕಾರಣ ಕೂಡಲಚೆನ್ನಸಂಗಯ್ಯಾ
ಅನಾಚಾರಿಗಲ್ಲದೆ ಪ್ರಸಾದವಿಲ್ಲ. ॥ ೭೨೦ ॥

೧೫೭೪

ಲಯ ಗಮನ ಶೂನ್ಯವಾಗಿರ್ಪುದು ಶಿವಲಿಂಗ ತಾನೆ ನೋಡಾ!
ಕೇವಲ ನಿಷ್ಕಲ ರೂಪವಾಗಿರ್ಪುದು ಪರತರ ಪರಬ್ರಹ್ಮ ತಾನೆ ನೋಡಾ!
ಭಕ್ತನ ಕರಕಂಜದಲ್ಲಿ ಖಂಡಿತಾಕಾರದಿಂದ ರೂಪುಗೊಂಡಿರ್ದು
ಅನಿಷ್ಟವ ಕಳೆದು ಇಷ್ಟಾರ್ಥವನೀವುದು ಪರವಸ್ತು ನೋಡಾ
ಕೂಡಲಚೆನ್ನಸಂಗಮದೇವಾ, ನಿಮ್ಮ ಒಲವು. ॥ ೭೨೧ ॥

೧೫೭೫

ಲಾಂಛನಧಾರಿಗಳ ಜಂಗಮವೆಂತೆಂಬೆನಯ್ಯಾ?
ವೇಷಧಾರಿಗಳ ಜಂಗಮವೆಂತೆಂಬೆನಯ್ಯಾ?
ಮುದ್ರಾಧಾರಿಗಳ ಜಂಗಮವೆಂತೆಂಬೆನಯ್ಯಾ?
ಮತ್ತಿನ್ನಾವುದು ಜಂಗಮವಯ್ಯಾ? ಎಂದಡೆ,
ಹೇಳಿಹೆನು ಕೇಳಿ ಬೆಸಗೊಳ್ಳಿರಯ್ಯಾ:
ನಿಸ್ಸೀಮನೆ ಜಂಗಮ, ನಿರಾಶ್ರಯನೆ ಜಂಗಮ, ನಿರ್ದೇಹಿಯೆ ಜಂಗಮ,
ನಿರ್ದೋಷಿಯೆ ಜಂಗಮ, ನಿರುಪಾಧಿಕನೆ ಜಂಗಮ
ನಿರಾಸಕ್ತನೆ ಜಂಗಮ, ನಿರಾಭಾರಿಯೆ ಜಂಗಮ, ನಿಃಪ್ರರುಷನೆ ಜಂಗಮ.
ಇಂತಪ್ಪ ಜಂಗಮದಿಂದ ಬದುಕಿದೆನಯ್ಯಾ ಕೂಡಲಚೆನ್ನಸಂಗಮದೇವಾ. ॥ ೭೨೨ ॥

೧೫೭೬

ಲಿಂಗಕ್ಕೀಯದೆ ಅಂಗಸುಖಕ್ಕಾಗಿ ಅನ್ನೋದಕವ ಕೊಂಡ
ಅಜ್ಞಾನಿಯನೇನೆಂದು ನುಡಿವೆನಯ್ಯಾ?
ಆತನು ಪತಿತನಾಗಿ ನರಕದಲ್ಲಿ ಹೊರಳುತ್ತಿರ್ಪನು.
"ಅಸಮರ್ಪ್ಯ ಪ್ರಾಣಲಿಂಗೇ ಜಲಂ ವಾ ಫಲಮೇವ ವಾ।
ಸ್ವೀಕುರ್ಯಾದ್ಯದಿ ಮೋಹೇನ ಪತಿತೋ ನರಕಂ ವ್ರಜೇತ್॥" ಎಂದುದಾಗಿ
ಆವ ಪದಾರ್ಥವನಾದಡೆಯೂ ಲಿಂಗಕ್ಕೆ ಕೊಡದೆ ಕೊಳಲಾಗದೆಂದುದು
ನಮ್ಮ ಕೂಡಲಚೆನ್ನಸಂಗಯ್ಯನ ವಚನ. ॥ ೭೨೩ ॥

೧೫೭೭

ಲಿಂಗಕ್ಕೆ ಕೊಟ್ಟಲ್ಲದೆ ಕೊಳ್ಳೆನೆಂಬ ಶರಣನು
ಬಿಸಿಲಲ್ಲಿ ನಿಂದಡೆ ಬಿಸಿಲ ಲಿಂಗಾರ್ಪಿತವ ಮಾಡಬೇಕು;
ನೆಳಲಲ್ಲಿ ನಿಂದಡೆ ನೆಳಲ ಲಿಂಗಾರ್ಪಿತವ ಮಾಡಬೇಕು,
ಧೂಪ ದೀಪ ಪರಿಮಳ ವಾಯು ರುಚಿಯನು

ಕಾಯದ ಕೈಯಲು ಮುಟ್ಟಿ ಅರ್ಪಿಸುವುದು ಅರಿದಲ್ಲ. ನಿಲ್ಲು, ಮಾಣು.
ಭಾವದ ಕೈಯಲು ಮುಟ್ಟಿ ಲಿಂಗಕ್ಕೆಂಬರು, ನಾವಿದನರಿಯೆವಯ್ಯಾ!
ನಯನೇಂದ್ರಿಯ ಶಯನಾಸನ ಸ್ಪರ್ಶನ ನಿರವಯದಲ್ಲಿ.
ಈ ತೆರನನರಿಯಬಲ್ಲಡೆ
ಕೂಡಲಚೆನ್ನಸಂಗಯ್ಯನಲ್ಲಿ ಮಹಾಪ್ರಸಾದಿ. || ೭೨೪ ||

೧೫೭೮

ಲಿಂಗಕ್ಕೆ ಜಂಗಮ ಹೊಣೆ, ಜಂಗಮಕ್ಕೆ ಲಿಂಗ ಹೊಣೆ.
ಲಿಂಗದಂತೆ ಜಂಗಮ, ಜಂಗಮದಂತೆ ಲಿಂಗ.
ಈ ಉಭಯವ ತಿಳಿದಡೆ,
ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು! || ೭೨೫ ||

೧೫೭೯

ಲಿಂಗಕ್ಕೆಂದೆ ನೆನೆವೆ, ಲಿಂಗಕ್ಕೆಂದೆ ಕೊಡುವೆ
ಲಿಂಗಕ್ಕೆಂದೆ ಕೊಡುವೆ ನೋಡಯ್ಯಾ.
ಸಕಲ ಪದಾರ್ಥಂಗಳ ಲಿಂಗಕ್ಕೆಂದೆ ಭಾವಿಸುವೆ.
ಅಂಗಗುಣಂಗಳನರಿಯೆನಾಗಿ.
ಲಿಂಗಕ್ಕೆಂದೆ ಕಾಮಿಸುವೆ ನಿಷ್ಕಾಮಿಯಾಗಿ.
ಎನ್ನ ದೇಹೇಂದ್ರಿಯ ಮನಃಪ್ರಾಣಾದಿಗಳು ಲಿಂಗದ ಸತಿಗಳಾಗಿ,
ಲಿಂಗಕ್ಕೆಂದೆ ಬಯಸಿ ಲಿಂಗಪ್ರಾಣಿಗಳಾದ ಕಾರಣ
ಲಿಂಗಕ್ಕೆಂದೆ ಕೊಟ್ಟು ಕೊಂಬೆನು.
ಕೂಡಲಚೆನ್ನಸಂಗಮದೇವಾ ಅನರ್ಪಿತವನರಿಯೆ. || ೭೨೬ ||

೧೫೮೦

ಲಿಂಗಕ್ಕೆ ಬೇರೆ ಭಾಜನ ತಮಗೆ ಬೇರೆ ಭಾಜನವೆಂದೆಂಬರು
ನಾನಿದನರಿಯೆನಯ್ಯಾ.
ಅಂಗದ ಮೇಲೆ ಪ್ರಾಣಪ್ರತಿಷ್ಠೆಯಾದ ಬಳಿಕ
ಲಿಂಗಕ್ಕೆಯೂ ತಮಗೆಯೂ ಏಕಭಾಜನವಲ್ಲದೆ ಭಿನ್ನಭಾಜನವುಂಟೆ?
ಲಿಂಗಕ್ಕೆಯೂ ತಮಗೆಯೂ ಏಕಭಾಜನವಿಲ್ಲದನ್ನಕ್ಕ
ಅಂಗದ ಕಳೆಯಲ್ಲಿ ಲಿಂಗವ ಧರಿಸಿಕೊಳಬಹುದೆ?
ಇದನರಿದು ಏಕಭಾಜನವಾಗದಿದ್ದಡಂತದು ದೋಷ

ಅರಿಯದೆ ಏಕಭಾಜನವಾದಡಿಂತು ದೋಷ.
ಈ ಕುಳಸ್ಥಳದ ಭೇದವ ಭೇದಿಸಬಲ್ಲ ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೭೨೭ ॥

೧೫೮೧

ಲಿಂಗಕ್ಕೆ ಮನ ಭಾಜನ, ಜಂಗಮಕ್ಕೆ ಧನ ಭಾಜನ,
ಪ್ರಸಾದಕ್ಕೆ ತನು ಭಾಜನ–
ಈ ತ್ರಿವಿಧಭಾಜನದಲ್ಲಿ ಸಹಭೋಜನವ ಮಾಡುವನು
ಕೂಡಲಚೆನ್ನಸಂಗಾ, ನಿಮ್ಮ ಶರಣ ಬಸವಣ್ಣನು. ॥ ೭೨೮ ॥

೧೫೮೨

ಲಿಂಗಜಂಗಮ ಜಂಗಮಲಿಂಗದ ಮುಖವ ನೀವಲ್ಲದೆ
ಇನ್ನು ಬಲ್ಲವರಾರಯ್ಯಾ?
ಅಂಗದ ಮೇಲೆ ಲಿಂಗವುಳ್ಳುದೆಲ್ಲವೂ ಸಂಗಮನಾಥನೆಂದಲ್ಲಿ
ಪರವಾದಿ ಬಿಜ್ಜಳನು ಒರೆದು ನೋಡಲೆಂದಟ್ಟಿದಡೆ ಹಗರಣಿಗರ
ಜಂಗಮಮುಖದಲ್ಲಿ ಲಿಂಗವ ಮಾಡಿದವರಾರು ಹೇಳಾ ನೀವಲ್ಲದೆ?
ಮರದ ಮಾನಿಸನ ಕರೆದು 'ಓ' ಎನಿಸಿ ನುಡಸಿ ಉಡಿಸಿ ಉಣಿಸಿ
ಜಂಗಮಲಿಂಗಪ್ರಾಣಿ ಬಸವಣ್ಣನೆಂಬ ಧ್ವಜವನೆತ್ತಿ ಮೆರೆದವರಾರು ಹೇಳಾ
ಈ ಕಲ್ಯಾಣದಲ್ಲಿ ನೀವಲ್ಲದೆ?
ಜಂಗಮಮುಖಲಿಂಗವನರಿಯೆನೆಂದು
ಎನ್ನ ಮನಕ್ಕೆ ಸಂದೇಹವನೊಡ್ಡಿ ಜಾರಿದಡೆ ನಾನು ಸೈರಿಸಬಲ್ಲೆನೆ?
ನೀನು ಜಂಗಮಮುಖಲಿಂಗಸಂಬಂಧಿ ಎಂಬುದ ಕೇಳಿ
ಆದಿಗಣನಾಥನು ಅಲ್ಲಮಪ್ರಭುವೆಂಬ ನಾಮವ ಧರಿಸಿ
ನಿನ್ನನರಿಸಿಕೊಂಡು ಬರುತ್ತಲೈದಾನೆ.
ಕೂಡಲಚೆನ್ನಸಂಗಮದೇವರು ಸಾಕ್ಷಿಯಾಗಿ,
ಸಂಗನಬಸವಣ್ಣಾ, ನೀನೇ ಜಂಗಮಪ್ರಾಣಿಯೆಂದು
ನಾನು ನಂಬಿದೆನು. ॥ ೭೨೯ ॥

೧೫೮೩

ಲಿಂಗ ಜಂಗಮ, ಜಂಗಮ ಲಿಂಗವೆಂಬುವ ತೋರಿ,
ನಿಜೈಕ್ಯನಾದೆಯಲ್ಲಾ ನಿಜಗುರು ಬಸವಣ್ಣಾ!
ಪ್ರಸಾದ ಕಾಯ, ಕಾಯ ಪ್ರಸಾದವೆಂಬುದ ಎನ್ನ ಸರ್ವಾಂಗದಲ್ಲಿ ಪ್ರತಿಷ್ಠಿಸಿ,
ಎನ್ನನಾಗು ಮಾಡಿ ಮುಂದುವರಿದೆಯೆಲ್ಲಾ ಬಸವಣ್ಣಾ!

ಲಿಂಗ ಪ್ರಾಣ, ಪ್ರಾಣ ಲಿಂಗವೆಂಬುದ ಎನ್ನಂತರಂಗದಲ್ಲಿ ಸ್ಥಾಪ್ಯವ ಮಾಡಿ
ಎನ್ನ ನಿನ್ನಂತೆ ಮಾಡಿ ನಿಜಲಿಂಗದೊಳಗೆ ನಿರವಯವಾದೆಯಲ್ಲಾ ಬಸವಣ್ಣಾ!
ಎನ್ನ ಮನವ ಮಹಾಸ್ಥಲದಲ್ಲಿ ಲಯವ ಮಾಡಿ,
ನಿರ್ವಯಲಾಗಿ ಹೋದೆಯಲ್ಲಾ ನಿಜಲಿಂಗೈಕ್ಯ ಬಸವಣ್ಣಾ!
ನಿನ್ನ ಒಕ್ಕುಮಿಕ್ಕ ಶೇಷವನಿಕ್ಕ ಆಗು ಮಾಡಿ
ನಿನ್ನಂತರಂಗದಲ್ಲಿ ಅವ್ವೆ ನಾಗಾಯಿಯ ಇಂಬುಗೊಂಡಡೆ,
ಎನ್ನ ಮನ ನಿಮ್ಮ ಪಾದದಲ್ಲಿ ಕರಗಿ ಕೊರಗಿತ್ತಯ್ಯಾ, ಸಂಗನಬಸವಣ್ಣಾ!
ಕೂಡಲಚೆನ್ನಸಂಗಯ್ಯಂಗೆ ಸುಜ್ಞಾನವಾಹನವಾಗಬೇಕೆಂದು
ನಿರವಯವಾದೆಯಲ್ಲಾ ಸಂಗನಬಸವಣ್ಣಾ! ॥ ೭೩೦ ॥

೧೫೮೪

ಲಿಂಗ ಜಂಗಮ ಪ್ರಸಾದವೆಂಬರು,
ಲಿಂಗವೆಂದಡೆ ಅಂಗವೊಳಗಾಯಿತ್ತು, ಜಂಗಮವೆಂದಡೆ ಆಸೆಗೊಳಗಾಯಿತ್ತು,
ಪ್ರಸಾದವೆಂದಡೆ ವಿಷಯಕೊಳಗಾಯಿತ್ತು–ಇಂತೀ ತ್ರಿವಿಧವು ನಷ್ಟ
ಇವರ ಮೇಲಣ ಅಂಕುರಿತವ ಬಲ್ಲ ಜಂಗಮವ ತೋರಾ
ಕೂಡಲಚೆನ್ನಸಂಗಮದೇವಾ. ॥ ೭೩೧ ॥

೧೫೮೫

ಲಿಂಗಜಂಗಮ ಭಕ್ತಿಯ ಮಾಡಿಸಿಕೊಂಬಲ್ಲಿ ವಿವರವುಂಟು:
ಲೌಕಿಕ ಅಲೌಕಿಕ ಸಹಜವೆಂಬ ಮಾಟತ್ರಯವನರಿದು–
ಲೌಕಿಕಭಕ್ತರಲ್ಲಿ ಅವರಿಚ್ಛೆಯಲ್ಲಿದ್ದು ಭಕ್ತಿಯ ಮಾಡಿಸಿಕೊಂಬುದು.
ಅಲೌಕಿಕ ಭಕ್ತರಲ್ಲಿ ತಾ ಕರ್ತನಾಗಿ ಅವರು ಭೃತ್ಯರಾಗಿ
ಭಕ್ತಿಯ ಮಾಡಿಸಿಕೊಂಬುದು.
ಸಹಜಭಕ್ತರಲ್ಲಿ ಕರ್ತೃತ್ವ ಭೃತ್ಯತ್ವವಿಲ್ಲದೆ ಭಕ್ತಿಯ ಮಾಡಿಸಿಕೊಂಬುದು.
ಇಂತಿದು ಲಿಂಗಜಂಗಮದ ಜಾಣ್ಮೆ ಕಾಣಿರೆ!
ಹೀಗಿಲ್ಲದೆ ಅವರ ಕಾಡಿ ಕರಕರಿಸಿ ಅವರ ಭಂಡು ಮಾಡಿ
ತಾ ಭಂಡನಹ ಭಂಡನ ಮುಖವ ತೋರದಿರು
ಕೂಡಲಚೆನ್ನಸಂಗಮದೇವಾ. ॥ ೭೩೨ ॥

೧೫೮೬

ಲಿಂಗದ ಕಳೆ ಅಂತರಂಗಕ್ಕೆ ವೇದಿಸುವ ಹಲವು ಸಾಧನಂಗಳಲ್ಲಿ
ಒಂದು ಸಾಧನವನಿಲ್ಲಿ ಹೇಳಿಹೆನು ಕೇಳಿರಯ್ಯಾ.
ಕರದಿಷ್ಟಲಿಂಗದಿ ತೆರೆದಿಟ್ಟ ದೃಷ್ಟಿ ಎವೆ ಹಳಚದಂತಿರ್ದಡೆ

ಆ ಲಿಂಗವು ಕಂಗಳಲ್ಲಿ ವ್ಯಾಪಿಸುತಿಪ್ಪುದು.
ಆ ಮಂಗಲಮಯವಾದ ಕಂಗಳಲ್ಲಿ ಮನವನಿರಿಸಿ,
ಲಿಂಗನಿರೀಕ್ಷಣೆಯಿಂದ ನೆನೆಯಲು,
ಆ ಲಿಂಗಮೂರ್ತಿ ಮನವನಿಂಬುಗೊಂಡು
ಪ್ರಾಣಲಿಂಗವಾಗಿ ಪರಿಣಮಿಸುತಿಪ್ಪುದು.
ಬಳಿಕ ಮನೋಮಯಲಿಂಗವನು ಭೇದವಿಲ್ಲದ ಸುವಿಚಾರದಿಂದ ಪರಿಭಾವಿಸಲು,
ಆ ಲಿಂಗಮೂರ್ತಿ ಭಾವದಲ್ಲಿ ಸಮರಸಂಗೊಂಡು
ಭಾವಲಿಂಗವಾಗಿ ಕಂಗೊಳಿಸುತಿಪ್ಪುದು.
ಆ ಭಾವಲಿಂಗವನು ಎಡೆವಿಡದೆ ಭಾವಿಸುತ್ತ,
ನೆನಹು ನಿರೀಕ್ಷಣೆಯಿಂದ ತಪ್ಪದಾಚರಿಸಲು,
ಶರಣನು ನಿತ್ಯತೃಪ್ತನಾಗಿ ವಿರಾಜಿಸುತಿಪ್ಪನು.
ಇದೇ ನಮ್ಮ ಕೂಡಲಚೆನ್ನಸಂಗಯ್ಯನೊಡನೆ
ಕೂಡುವ ಪರಮೋಪಾಯವು. ॥ ೭೩೩ ॥

೧೫೮೭

ಲಿಂಗದ ಗುಣದಿಂದ ಲಿಂಗೈಕ್ಯವೆಂಬರು;
ಲಿಂಗದ ಗುಣದಿಂದ ಲಿಂಗೈಕ್ಯವಿಲ್ಲ ನೋಡಾ.
'ಭಾವಾದ್ವೈತಂ ಪರಂ (ಹಿ?)ತಂ'
ಕೂಡಲಚೆನ್ನಸಂಗಾ ಲಿಂಗೈಕ್ಯವು. ॥ ೭೩೪ ॥

೧೫೮೮

ಲಿಂಗದಲ್ಲಿ ಅರ್ಪಿತ, ಜಂಗಮದಲ್ಲಿ ಅನರ್ಪಿತ,
ಪ್ರಸಾದದಲ್ಲಿ ಉಭಯ ನಾಸ್ತಿ.
ಈ ತ್ರಿವಿಧಸಮ್ಮತವ ಕೂಡಲಚೆನ್ನಸಂಗಯ್ಯನಲ್ಲಿ
ಬಸವಣ್ಣನೆ ಬಲ್ಲ ಕಾಣಿರೆ. ॥ ೭೩೫ ॥

೧೫೮೯

ಲಿಂಗದಲ್ಲಿ ಆಯತ, ಲಿಂಗದಲ್ಲಿ ಸಾಹಿತ್ಯವಾಗಿದ್ದ ನಾನು,
ಪರಮಸುಖಪರಿಣಾಮದೊಳಗಿದ್ದ ನಾನು,
ಸ್ಥಾವರ ಜಂಗಮ ಉಭಯ ಒಂದಾಗಿ, ಭಿನ್ನಭಾವವ ವಿಚಾರಿಸಲಿಲ್ಲ,
ಕೂಡಲಚೆನ್ನಸಂಗಮದೇವರಲ್ಲಿ ಸ್ವಯವಾಗಿರ್ದೆ ಸಹಜ! ॥ ೭೩೬ ॥

೧೫೯೦

ಲಿಂಗದಲ್ಲಿ ಸತ್ಕ್ರಿಯಾಚಾರವ ಮನಸೋಂಕಿ ಆಚರಿಸುವಲ್ಲಿ
ಮಾರ್ಗಕ್ರಿಯಾಭ್ಯಾಸಿ.
ಆ ಅಭ್ಯಾಸಕ್ರೀ ಬಲಿದು ಲಿಂಗದಲ್ಲಿ ನೆನಹು ನಿಂದು
ಲಿಂಗವ ಮನ ನೆಮ್ಮಿ ಆಚರಿಸುವಲ್ಲಿ ಮಾರ್ಗಕ್ರೀ.
ಮಾರ್ಗಕ್ರೀ ಬಲಿದು ಮನ ಲಿಂಗನಿಜವಾಗಿ ಆಚರಿಸುವಲ್ಲಿ ಮೀರಿದ ಕ್ರೀ.
ಆ ಮೀರಿದಕ್ರೀ ಒಲಿದು ಸರ್ವಾಚಾರಸಹಿತವಾಗಿ
ಮಹಾಘನವನನಾಚರಿಸುವಲ್ಲಿ ಮೀರಿದ ಕ್ರಿಯಾನಿಷ್ಪತ್ತಿ.
ಈ ಚತುರ್ವಿಧ ಸ್ಥಲವನೊಳಕೊಂಡ ಘನ ಕೂಡಲಚೆನ್ನಸಂಗಯ್ಯನಲ್ಲಿ
ಈ ಕಾಯವೇ ಪ್ರಸಾದಕಾಯವಾಗಿತ್ತು. ॥ ೭೩೭ ॥

೧೫೯೧

ಲಿಂಗದಿಂದ ಉದಯಿಸಿ ಅಂಗವಿಡಿದವರ ಇಂಗಿತವನೇನೆಂಬೆನಯ್ಯಾ?
ಅವರ ನಡೆಯೆ ಆಗಮ, ಅವರ ನುಡಿಯೆ ಪರಮಾಮೃತ
ಅವರ ಲೋಕದ ಮಾನವರೆನಬಹುದೆ ಅಯ್ಯಾ?
ವೃಕ್ಷಾದ್ಭವತಿ ಬೀಜಂ ಹಿ ತದ್ ವೃಕ್ಷೇ ಲೀಯತೇ ಪುನಃ।
ರುದ್ರಲೋಕಂ ಪರಿತ್ಯಜ್ಯ ಶಿವಲೋಕಂ ಪ್ರವಿಶ್ಯತಿ॥
ಅಂಕೋಲೆಯ ಬೀಜ ತರುವನಪ್ಪುವಂತೆ ಅಪ್ಪುವರಯ್ಯಾ
ಕೂಡಲಚೆನ್ನಸಂಗಾ ನಿಮ್ಮ ಶರಣರು. ॥ ೭೩೮ ॥

೧೫೯೨

ಲಿಂಗದಿಂದಲಿ ಗುರು, ಲಿಂಗದಿಂದಲಿ ಜಂಗಮ,
ಲಿಂಗದಿಂದಲಿ ಪಾದೋದಕ ಪ್ರಸಾದ,
ಲಿಂಗದಿಂದಲಿ ಸರ್ವವೆಲ್ಲಾ ಆಯಿತ್ತು.
(ಅವು) ನಮ್ಮ ಕರಸ್ಥಲದೊಳಗೆ ಇಲ್ಲವೆ? ಎಂಬ
ಸುರಾಭುಂಜಕರ ಮಾತ ಕೇಳಲಾಗದು.
ಅದೆಂತೆಂದರೆ:
ಲಿಂಗ ಘನವೆಂಬಿರಿ ಅದೆಂತು ಘನವಹುದು?
ನಮ್ಮ ಜಂಗಮದೇವರ ಅಷ್ಟಕೋಟಿರೋಮ ಕೂಪನೊಳಗೆ,
ಒಂದು ರೋಮ ತಾ ಇಷ್ಟಲಿಂಗ.
ಇಷ್ಟಲಿಂಗವನೆ ಘನವ ಮಾಡಿ ದೃಷ್ಟಜಂಗಮವನತಿಗಳೆವ

ಭ್ರಷ್ಟ ಹೊಲೆಯರ ಮಾತ ಕೇಳಲಾಗದು.
ಅದೆಂತೆಂದರೆ:
ಎನ್ನ ಜಂಗಮದೇವರ ಹಾಗೆ ಪಾದಾರ್ಚನೆಯ ಮಾಡಿಸಿಕೊಂಡು
ಪಾದತೀರ್ಥ ಪ್ರಸಾದವ ಕೊಟ್ಟು ಪಾಲಿಸಬಲ್ಲುದೆ ಲಿಂಗವು?
ಮತ್ತೆನ್ನ ಜಂಗಮದೇವರ ಹಾಗೆ
ಒಕ್ಕ ಮಿಕ್ಕುದನಿಕ್ಕಿ ಸಲಹಬಲ್ಲದೆ ಲಿಂಗವು?
ಮತ್ತೆನ್ನ ಜಂಗಮದೇವರ ಹಾಗೆ, ಅರ್ಥಪ್ರಾಣ ಅಭಿಮಾನವನಿತ್ತಡೆ
ಸ್ವೀಕಾರವ ಮಾಡಬಲ್ಲುದೆ ಲಿಂಗವು?
ಲಿಂಗ ಆವುದನು ಕೊಡಲರಿಯದು
ರಾಸಿಗೆ ಅರ್ಚಿಸಿದ ಲಚ್ಚಣ ರಾಸಿಯನೊಳಕೊಂಬುದೆ, ರಾಸಿಯ ಒಡೆಯುನಲ್ಲವೆ?
ಭಕ್ತನೆಂಬ ರಾಸಿಗೆ ಲಿಂಗವೆಂಬ ಲಚ್ಚಣ
ಇದಕ್ಕೆನ್ನ ಜಂಗಮದೇವರೆ ಮುದ್ರಾಧಿಪತಿ ಕಾಣಾ
ಕೂಡಲಚೆನ್ನಸಂಗಮದೇವಾ. ॥ ೭೩೯ ॥

೧೫೩

ಲಿಂಗದೇಹಿಯಾದ ಬಳಿಕ
ಲಿಂಗೈಕ್ಯನಾಗದನ್ನಕ್ಕ
ಲಿಂಗದೇಹಿ ಎಂತಹನೋ ಅಯ್ಯಾ?
ಲಿಂಗದೇಹಿಯಾದ ಬಳಿಕ
ಲಿಂಗಾಂಗರ ಕೂಡ ಗೋಷ್ಠಿ
ಲಿಂಗಾಂಗರ ಕೂಡ ಸಂಗತಿ
ಲಿಂಗಾಂಗರ ಕೂಡ ಸನ್ನಿಧಿ
ಲಿಂಗಾಂಗರ ಕೂಡ ನಡೆ ನುಡಿ.
ಲಿಂಗಾಂಗಿಗಳಲ್ಲದ ಲಿಂಗಹೀನರ ಕೂಡ
ಸಂಗವ ಬೆರಸಿ ನಡೆದರೆ
ಆತಂಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ
ಪಾದತೀರ್ಥ ಪ್ರಸಾದವಿಲ್ಲ ಕಾಣಾ,
ಮಹಾದಾನಿ ಕೂಡಲಚೆನ್ನಸಂಗಮದೇವಾ. ॥ ೭೪೦ ॥

೧೫೪

ಲಿಂಗದೊಡನೆ ಸಹಭೋಜನವ ಮಾಡುವ ಅದ್ವೈತಿಗಳ ಮಾತುಕೇಳಿ, ಸಂಸಾರದೊಳಗಿರ್ದಭಕ್ತನು, ಆ ಲಿಂಗದೊಡನೆ ಸಹಭೋಜನವ ಮಾಡಿದಡೆ ಅಘೋರನರಕ ತಪ್ಪದು. ಅದೆಂತೆಂದಡೆ:

“ರಾಗದ್ವೇಷ ಮದೋನ್ಮತ್ತಸ್ತತ್ತ್ವಜ್ಞಾನ ಪರಾಙ್ಮುಖಃ।
ಸಂಸಾರಸ್ಯ ಮಹಾಪಂಕೇ ಜೀರ್ಣಾಂಗೋ ಹಿ ನಿಮಜ್ಜತಿ॥”
ಇದನರಿದು ಲಿಂಗದೊಡನೆ ಸಹಭೋಜನವ ಮಾಡಲಾಗದು.
ಮಾಡುವ ಅಜ್ಞಾನಿಗಳು ನೀವು ಕೇಳಿರೊ:
ಗುರುಲಿಂಗಜಂಗಮತ್ರಿವಿಧವನು ಏಕಾರ್ಥವ ಮಾಡದನ್ನಕ್ಕರ
ಸಹಭೋಜನವುಂಟೆ ಹೇಳಿರಣ್ಣಾ! ಇಲ್ಲವಾಗಿ.
ಅದೆಂತೆಂದಡೆ:
“ಗುರುರೇಕೋ ಲಿಂಗಮೇಕಂ ಏಕಾರ್ಥೋ ಜಂಗಮಸ್ತಥಾ।
ತ್ರಿವಿಧೇ ಭಿನ್ನಭಾವೇನ ಶ್ವಾನಯೋನಿಷು ಜಾಯತೇ॥”–
ಇಂತೆಂಬ ಶಿವನವಾಕ್ಯವನರಿಯದೆ, ನೀವೇ ಲಿಂಗವೆಂಬಿರಿ ಲಿಂಗವೆ ನೀವೆಂಬಿರಿ
ಜನನ-ಮರಣ, ತಾಗು–ನಿರೋಧ ಉಳ್ಳನ್ನಕ್ಕರ
ನೀವೆಂತು ಲಿಂಗವಪ್ಪಿರಿ ಹೇಳಿರಣ್ಣಾ?
ಆ ಶಿವಜ್ಞಾನದ ಮಹಾವರ್ಮವನರಿಯದೆ
ಲಿಂಗದೊಡನೆ ಸಹಭೋಜನವ ಮಾಡಿದೊಡೆ
ಅಘೋರನರಕದಲ್ಲಿಕ್ಕದೆ ಬಿಡುವನೆ
ನಮ್ಮ ಕೂಡಲಚೆನ್ನಸಂಗಮದೇವನು? ॥ ೭೪೧ ॥

೧೫೫೫

ಲಿಂಗಪ್ರಸಾದವ ಜಂಗಮಕ್ಕೆ ಕೊಡುವ ಕರ್ಮಿ ನೀ ಕೇಳಾ!
ಜಂಗಮಪ್ರಸಾದವ ಲಿಂಗಕ್ಕೆ ಕೊಡುವ ಸುಧರ್ಮಿ ನೀ ಕೇಳಾ!
ಲಿಂಗಪ್ರಸಾದವ ಜಂಗಮಕ್ಕೆ ಕೊಡುವದು ಅನಾಚಾರ;
ಜಂಗಮದ ಪ್ರಸಾದವ ಲಿಂಗಕ್ಕೆ ಕೊಡುವದು ಸದಾಚಾರ.
ಅದೆಂತೆಂದಡೆ:
ಲಿಂಗಾರ್ಪಿತಂ ಪ್ರಸಾದಂ ಚ ನ ದದ್ಯಾತ್ ಚರಮೂರ್ತಯೆ।
ಚರಾರ್ಪಿತಂ ಪ್ರಸಾದಂ ಚ ತದ್ದದ್ಯಾತ್ ಲಿಂಗಮೂರ್ತಯೇ॥ ಎಂದುದಾಗಿ,
ಇದು ಕಾರಣ, ಕೂಡಲಚೆನ್ನಸಂಗಯ್ಯಾ,
ಜಂಗಮ ಮುಖದಲ್ಲಿ ಲಿಂಗ ನಿರಂತರ ಸುಖಿ. ॥ ೭೪೨ ॥

೧೫೫೬

ಲಿಂಗ ಬಿದ್ದಿತು, ಲಿಂಗ ಬಿದ್ದಿತೆಂಬರಯ್ಯಾ.
ಲಿಂಗ ಬೀಳಲು ಬಲ್ಲದೆ? ಭೂಮಿ ತಾಳಲು ಬಲ್ಲದೆ?
ಕಮ್ಮಾರ ಕಡೆದು ಮಾರಿದ, ಬೋಗಾರ ತಂದು ಮಾರಿದ,
ಗುರು ಕೊಂಡು ಮಾರಿದ ಈ ಲಿಂಗ ಬಿಪ್ಪಡೆ ಸಮಾಧಿಯುಂಟೆ?

ಲಿಂಗವ ಕಟ್ಟಿದ ಗುರು ಸತ್ತಡೆ ಸಮಾಧಿಯನೇಕೆ ಕೊಳ್ಳರೊ
ಕೂಡಲಚೆನ್ನಸಂಗಮದೇವಾ? ॥ ೭೪೩ ॥

೧೫೯೭

ಲಿಂಗಭಕ್ತನ ವಿವಾಹದಲ್ಲಿ ಶಿವಗಣಂಗಳಿಗೆ
ವಿಭೂತಿವೀಳೆಯವ ಕೊಟ್ಟು ಆರೋಗಣೆಯ ಮಾಡಿಸಿ
ಶಿವಗಣಂಗಳು ಸಾಕ್ಷಿಯಾಗಿ ಪ್ರಸಾದವನಿಕ್ಕುವುದೆ ಸದಾಚಾರವಲ್ಲದೆ,
ವಾರ ತಿಥಿ ಸುಮುಹೂರ್ತವೆಂಬ ಲೌಕಿಕದ ಕರ್ಮವ ಮಾಡಿದಡೆ
ನಿಮ್ಮ ಸದ್ಭಕ್ತರಿಗೆ ದೂರವಯ್ಯಾ ಕೂಡಲಚೆನ್ನಸಂಗಮದೇವಾ. ॥ ೭೪೪ ॥

೧೫೯೮

ಲಿಂಗಭಾಜನದಲ್ಲಿ ಸಹಭೋಜನವ ಮಾಡುವ ಅಜ್ಞಾನಿಗಳು
ತಾವೆ ಲಿಂಗವೆಂದೆಂಬರು.
ತಾವೆ ಲಿಂಗವಾದಡೆ ಜನನ ಸ್ಥಿತಿ ಮರಣ ರುಜೆ ಸಂಸಾರಬಂಧನವಿಲ್ಲದಿರಬೇಕು.
ಮಹಾಜ್ಞಾನವ ಬಲ್ಲೆವೆಂದು,
ಲಿಂಗಭಾಜನದಲ್ಲಿ ಸಹಭೋಜನವ ಮಾಡುವ ಪಾತಕರ
ಎನಗೊಮ್ಮೆ ತೋರದಿರಾ, ಕೂಡಲಚೆನ್ನಸಂಗಮದೇವಾ. ॥ ೭೪೫ ॥

೧೫೯೯

ಲಿಂಗಮುಖದಿಂದ ಬಂದುದು ಶುದ್ಧ ಪ್ರಸಾದ
ಜಂಗಮಮುಖದಿಂದ ಬಂದುದು ಸಿದ್ಧಪ್ರಸಾದ
ಗುರುಮುಖದಿಂದ ಬಂದುದು ಪ್ರಸಿದ್ಧಪ್ರಸಾದ.
ಅದೆಂತೆಂದಡೆ:

ಲಿಂಗಂಚ ಇಷ್ಟರೂಪಂತು ಜಂಗಮ ಪ್ರಾಣಲಿಂಗಕಂ।
ಭಾವಲಿಂಗಂ ಗುರೋರ್ಲಿಂಗಂ ತ್ರಿವಿಧಂಚೇಕ ಮುಚ್ಯತೇ।
ಶುದ್ಧಂ ಲಿಂಗಮುಖಂ ತ್ಯಕ್ತ್ವಾ ಸಿದ್ಧಂ ಚರ ವಿಸರ್ಜಿತಃ।
ಪ್ರಸಿದ್ಧಂ ಚ ಗುರೋರ್ಭುಕ್ತಂ ಇತ್ಯೇತಿ ತ್ರಿವಿಧಂ ಸ್ಮೃತಾ॥

ಎಂದುದಾಗಿ, ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದತ್ರಯದಲ್ಲಿ ಅವಧಾನಿ
ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೭೪೬ ॥

೧೬೦೦

ಲಿಂಗ ಮುಖವು ಜಂಗಮವೆಂದುದಾಗಿ,
ತಾನು ಸತ್ಕಾಯಕದಿಂದ ಸಂಪಾದಿಸಿದ ಸತ್ಪದಾರ್ಥವ ಜಂಗಮಕ್ಕಿತ್ತು
ತತ್ಪ್ರಸಾದವ ಭಕ್ತಿಯಿಂದ ಪಡೆದು ಸೇವಿಸಬಲ್ಲಡೆ
ಅದು ಅಶನವೆಂಬೆ, ಈ ಕ್ರಮಕ್ಕೆ ಹೊರಗಾದುದೆ ಅನಶನವೆಂಬೆ,
'ಸಾಶನಾಶನೇ ಅಭಿ' ಎಂದುದಾಗಿ.
ಇಂತೀ ಅಶನ ಅನಶನಗಳ ಭೇದವನರಿಯದೆ
ತನುವ ದಂಡಿಸದೆ ಮನವ ಖಂಡಿಸದೆ
ತನಗಾಗಿ ಜನವ ಮೋಸಂಗೈದು ತಂದು
ಮನೆಯಲ್ಲಿ ಮಡಗಿದ ದ್ರವ್ಯವು ಗುರುವಿಂಗೆ ಸಲ್ಲದು,
ಲಿಂಗಕ್ಕೆ ಸಲ್ಲದು, ಜಂಗಮಕ್ಕೆ ಸಲ್ಲದಾಗಿ.
ಇಂತೀ ಬಿನುಗು ಮಾನವನ ನಮ್ಮ ಕೂಡಲಚೆನ್ನಸಂಗಮದೇವನು
ಹೀನಯೋನಿಯಲ್ಲಿ ಬರಿಸದೆ ಮಾಣ್ಬನೆ? ॥ ೭೪೭ ॥

೧೬೦೧

ಲಿಂಗ ಮುಟ್ಟದೆ ಮುಟ್ಟೆನಯ್ಯಾ!
ಅದು ಅನರ್ಪಿತ, ಲಿಂಗಕ್ಕೆ ಮಾಡಲಿಲ್ಲಾಗಿ.
ತಟ್ಟದೆ ಮುಟ್ಟದೆ ಮನಸೋಂಕದೆ
ಅನುವಿನ ಅಂಗಕ್ಕೆ ಮಾಡಬೇಕು.
ಕೊಟ್ಟು ಕೊಂಬ ಭೇದವ ಕೂಡಲಚೆನ್ನಸಂಗಯ್ಯನಲ್ಲಿ
ಮಹಾಪ್ರಸಾದಿಯೆ ಬಲ್ಲ. ॥ ೭೪೮ ॥

೧೬೦೨

ಲಿಂಗಮೂರ್ತಿಯನು ನಿತ್ಯವೂ
ಮೂರು ಬಾರಿ ತಪ್ಪದರ್ಚಿಸುವುದುತ್ತಮ,
ಎರಡು ವೇಳೆ ಅರ್ಚಿಸುವುದು ಮಧ್ಯಮ,
ಒಂದು ಸಲ ಪೂಜಿಸುವುದು ಕನಿಷ್ಠ.
ಈ ತ್ರಿವಿಧವನರಿಯದ ಭಕ್ತರಾದವೆಂದು ಯುಕ್ತಿಗೆಟ್ಟು ನುಡಿದಡೆ
ಮುಕ್ತಿಯನೀವನೆ ನಮ್ಮ ಕೂಡಲಚೆನ್ನಸಂಗಮದೇವ? ॥ ೭೪೯ ॥

೧೬೦೩

ಲಿಂಗಲಕ್ಷಣವಂತ ಬಸವಣ್ಣ, ಲಿಂಗಸಿರಿವಂತ ಬಸವಣ್ಣ,
ಲಿಂಗ ಸೌಭಾಗ್ಯವಂತ ಬಸವಣ್ಣ.
ಜಂಗಮಲಕ್ಷಣವಂತ ಬಸವಣ್ಣ, ಜಂಗಮಸಿರಿವಂತ ಬಸವಣ್ಣ,
ಜಂಗಮಸೌಭಾಗ್ಯವಂತ ಬಸವಣ್ಣ.
ಪ್ರಸಾದಲಕ್ಷಣವಂತ ಬಸವಣ್ಣ, ಪ್ರಸಾದಸಿರಿವಂತ ಬಸವಣ್ಣ
ಪ್ರಸಾದಸೌಭಾಗ್ಯವಂತ ಬಸವಣ್ಣ.
ಕೂಡಲಚೆನ್ನ ಸಂಗಯ್ಯನಲ್ಲಿ
ಸಂಗನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿದ್ದೆನು. || ೭೫೦ ||

೧೬೦೪

ಲಿಂಗವಂತನ ಲಿಂಗವೆಂಬುದೆ ಶೀಲ.
ಲಿಂಗವಂತನ ರಾಣಿವಾಸವ ಲಿಂಗದ ರಾಣಿವಾಸವೆಂಬುವೆ ಶೀಲ.
ಲಿಂಗವಂತನ ಅರ್ಥ–ಪ್ರಾಣ–ಅಭಿಮಾನಕ್ಕೆ ತಪ್ಪದಿಪ್ಪುದೆ ಶೀಲ.
ಲಿಂಗವಂತನ ಪಾದೋದಕ–ಪ್ರಸಾದಸೇವನೆಯ ಮಾಡುವುದೆ ಶೀಲ.
ಇಂತಪ್ಪ ಶೀಲವೇ ಶೀಲ.
ಉಳಿದ ಶೀಲಕ್ಕೆ ಮೆಚ್ಚುವನೆ ಕೂಡಲಚೆನ್ನಸಂಗಮದೇವ? || ೭೫೧ ||

೧೬೦೫

ಲಿಂಗವಂತ ಲಿಂಗಪ್ರಾಣಿ ಸರ್ವಾಂಗಲಿಂಗಿ ಎಂಬಿರಿ.
ಭಂಗವಾಯಿತ್ತಲ್ಲಾ ಈ ಮಾತನಾಡಿದಡೆ!
ಕೊಂಬುದು ಪಾದೋದಕ ಪ್ರಸಾದ, ಕಳಚುವುದು ಮಲಮೂತ್ರ.
ಅಂಗ ಸೋಂಕಿದ ಪಾದೋದಕಕ್ಕೇ ವಿಧಿ
ಕೂಡಲಚೆನ್ನಸಂಗಯ್ಯನಲ್ಲಿ ಸಂಗಸುಖದ ಪರಿ ಬೇರೆ. || ೭೫೨ ||

೧೬೦೬

ಲಿಂಗವನಲ್ಲದೆ ಅನ್ಯವನರಿಯದಿಪ್ಪುವೆ ಲಿಂಗಾಚಾರ.
ಸಜ್ಜನಕಾಯಕದಿಂದ ಗುರುಲಿಂಗಜಂಗಮಕ್ಕೆ ಮಾಡಿ
ಸತ್ಯನಾಗಿಹುದೆ ಸಮಯಾಚಾರ.
ಶಿವಭಕ್ತರಲ್ಲಿ ಜಾತಿವರ್ಣಾಶ್ರಮವನರಸವೆ
ಅವರೊಕ್ಕುದ ಕೊಂಬುದೆ ಶಿವಾಚಾರ.
ಶಿವಾಚಾರದ ನಿಂದೆಯ ಕೇಳದಿಪ್ಪುವೆ ಗಣಾಚಾರ.

ಶಿವಶರಣರೆ ಹಿರಿಯರಾಗಿ ತಾನೆ ಕಿರಿಯನಾಗಿ,
ಭಯಭಕ್ತಿಯಿಂದಾಚರಿಸುವುದೆ ಭೃತ್ಯಾಚಾರ.
ಇಂತೀ ಪಂಚಾಚಾರವುಳ್ಳ ಸದ್ಭಕ್ತರನು ಒಕ್ಕುದನಿಕ್ಕಿ ಸಲಹಯ್ಯಾ
ಪ್ರಭುವೆ ಕೂಡಲಚೆನ್ನಸಂಗಮದೇವಾ. || ೭೫೩

೧೬೦೭

ಲಿಂಗವಿಲ್ಲದ ಜಂಗಮವೆಲ್ಲಿಯದೊ?
ಜಂಗಮವಿಲ್ಲದ ಲಿಂಗವೆಲ್ಲಿಯದೊ?
ಉರಿಯಿಲ್ಲದ ಅಗ್ನಿ ದಹಿಸಬಹುದೆ?
ವಿಷವಿಲ್ಲದ ಸರ್ಪ ಕಡಿಯಬಹುದೆ?
ನಿಮ್ಮ ಶರಣರ ಅನುಭಾವವಿಲ್ಲದೆ ಪ್ರಭುದೇವರ ಬೆರಸಬಹುದೆ?
ಕೂಡಲಚೆನ್ನಸಂಗಮದೇವಾ. || ೭೫೪ ||

೧೬೦೮

ಲಿಂಗವೆ ಅಂತರಂಗದ ನಿರವಯವದು;
ಅಂಗವೆ ಬಹಿರಂಗದ ಸಾವಯವದು,
ಜಂಗಮವೆ ಅಂತರಂಗದ ನಿರವಯವದು,
ಬಹಿರಂಗದ ಸಾವಯವದು ಮಾಂಸದೃಷ್ಟಿ ಎಂಬ ಹೆಸರು ನೋಡಾ
ಅಂತರಂಗ ಬಹಿರಂಗ ಈ ಉಭಯ ಒಂದಾದಡೆ
ಅದು ಅಭೇದ್ಯ, ಕೂಡಲಚೆನ್ನಸಂಗಾ, ನಿಮ್ಮಲ್ಲಿ. || ೭೫೫ ||

೧೬೦೯

ಲಿಂಗವೆ ಜಂಗಮ, ಜಂಗಮವೆ ಲಿಂಗವೆಂದು ನಂಬಿದಲ್ಲಿ
ಹೊರೆ ಹುಟ್ಟಿದ ಬಳಿಕ,
ಪಾಲ ಹರವಿಯೊಳಗೆ ಹುಳಿ ಹೊಕ್ಕಂತೆ ನೋಡಯ್ಯಾ!
ಅಂಗದ ಮೇಲೆ ಲಿಂಗವುಳ್ಳುದೆಲ್ಲ ಸಂಗಮನಾಥದೇವರೆಂದು ನಂಬಿದ ನಂಬುಗೆಯು
ಬಂದ ಶರಣರ ನಿಲವನರಿಯದಿದ್ದಲ್ಲಿ ತಪ್ಪಿತ್ತು ನೋಡಾ ಗುರುವೆ.
ಸಂಗಮನಾಥ ಅಂಗವಿಡಿದು ಮನೆಗೆ ನಡೆದು ಬಂದಡೆ
ದಿಮ್ಮನೆ ಇದಿರೆದ್ದು ವಂದಿಸಬೇಕು ನೋಡಯ್ಯಾ.
ಕೂಡಲಚೆನ್ನಸಂಗನ ಶರಣ ಪ್ರಭುದೇವರು, ಸಿದ್ಧರಾಮಯ್ಯದೇವರು
ಬಂದು ಬಾಗಿಲೊಳಗಿರಲು
ಕಣ್ಣರಿಯದಿದ್ದರೂ ಕರುಳರಿಯಬೇಡವೆ ಸಂಗನಬಸವಣ್ಣಾ? || ೭೫೬ ||

೧೬೧೦

ಲಿಂಗಾಂಗಿಗಳಲ್ಲಿ ಹೊಲೆಸೂತಕವ ಕಲ್ಪಿಸುವನ್ನಕ್ಕ
ಪ್ರಾಣಲಿಂಗಸಂಬಂಧಿಯಲ್ಲ.
ಜಂಗಮದಲ್ಲಿ ಕುಲಸೂತಕವ ಹಿಡಿವನ್ನಕ್ಕ
ಶಿವಾಚಾರಯುಕ್ತನಾದ ಭಕ್ತಾನುಭಾವಿಯಲ್ಲ.
ಪ್ರಸಾದದಲ್ಲಿ ಎಂಜಲಸೂತಕವ ಭಾವಿಸುವನ್ನಕ್ಕ,
ಪ್ರಸಾದಿಯಲ್ಲ, ಭಕ್ತನಲ್ಲ, ಶರಣನಲ್ಲ, ಲಿಂಗೈಕ್ಯನಲ್ಲ,
ಅವಂಗೆ ಲಿಂಗವಿಲ್ಲ ಕಾಣಾ ಕೂಡಲಚೆನ್ನಸಂಗಯ್ಯಾ. || ೭೫೭ ||

೧೬೧೧

ಲಿಂಗಾಚಾರ ಸದಾಚಾರ ಶಿವಾಚಾರ ಗಣಾಚಾರ ಭೃತ್ಯಾಚಾರವೆಂಬ
ಪಂಚಾಚಾರದ ಆಚರಣೆಯೆಂತೆಂದಡೆ:
ಲಿಂಗವಲ್ಲದೆ ಅನ್ಯವನರಿಯದಿಹುವೆ ಲಿಂಗಾಚಾರ.
ಸಜ್ಜನ ಕಾಯಕದಲ್ಲಿ ತಂದು ಗುರು–ಲಿಂಗ–ಜಂಗಮಕ್ಕೆ ನೀಡಿ
ಸತ್ಯಶುದ್ಧನಾಗಿಹುದೆ ಸದಾಚಾರ.
ಶಿವಭಕ್ತರಲ್ಲಿ ಕುಲ ಗೋತ್ರ ಜಾತಿ ವರ್ಣಾಶ್ರಯವನರಸದೆ
ಅವರೊಕ್ಕುದ ಕೊಂಬುದೆ ಶಿವಾಚಾರ.
ಶಿವಾಚಾರದ ನಿಂದೆಯ ಕೇಳದಿಹುವೆ ಗಣಾಚಾರ.
ಶಿವಶರಣರೆ ಹಿರಿಯರಾಗಿ ತಾನೆ ಕಿರಿಯನಾಗಿ
ಭಯಭಕ್ತಿಯಿಂದ ಆಚರಿಸುವುದೆ ಭೃತ್ಯಾಚಾರ–
ಇಂತೀ ಪಂಚಾಚಾರವುಳ್ಳ ಪರಮಸದ್ಭಕ್ತರ ಒಕ್ಕುದನಿಕ್ಕಿ ಸಲಹಯ್ಯಾ
ಪ್ರಭುವೆ, ಕೂಡಲಚೆನ್ನಸಂಗಮದೇವಾ. || ೭೫೮ ||

೧೬೧೨

ಲಿಂಗಾರ್ಚನೆಯಂ ಮಾಡಿ,
ಅಂಗಭಾಜನ, ಲಿಂಗಭಾಜನ, ಪತ್ರಭಾಜನದಲ್ಲಿ
ಸಹಭೋಜನವ ಮಾಡುವ ಸಮಯದಲ್ಲಿ
ಗುರು ಲಿಂಗ ಜಂಗಮ[ಪ್ರಸಾದ]ವೆಂದೆ ಪ್ರಸಾದವ ಪಡೆವುದು.
ಪ್ರಸಾದವೆಂದು ಪಡೆದ ಬಳಿಕ ಪದಾರ್ಥವೆಂದು ಭೋಗಿಸಿದಡೆ,
ಪ್ರಸಾದ ದ್ರೋಹ.
ಪ್ರಸಾದವೆಂದು ಅರ್ಪಿತವ ಭೋಗಿಸಿ,
ಉಳಿಯದ ಹಾಂಗೆ ತೆಗೆದುಕೊಂಬುದಯ್ಯಾ.

ಮೀರಿದಂದು ಅನಿಲಬ್ರಹ್ಮವಂಗಸಂಬಂಧವಾದ ಉಳಿಃಮೆಯಲಿ
ಉಳಿದ ತಾರಕಬ್ರಹ್ಮವಯ್ಯಾ. [ಅದೇನು ಕಾರಣವೆಂದಡೆ:]
ಶೈವಕ್ಕೂ ವೀರಶೈವಕ್ಕೂ ಭೇದವಿಲ್ಲ! ಆದಿಗೂ ಅನಾದಿಗೂ ನೀನೆ!
ಪದಾರ್ಥಕ್ಕೂ ಪ್ರಸಾದಕ್ಕೂ ನೀನೆ, ಭೂ ಗಗನಕ್ಕೂ ನೀನೇ!
ಕ್ರೀ ನಿಃ[ಕ್ರೀ ಗೂ ನೀನೇ]. ಪ್ರಸಾದದ ಆದಿಕುಳವ ನಾನೆತ್ತ ಬಲ್ಲೆನಯ್ಯಾ!
ದೇವ, ಕ್ರೀ ಮೀರಿದುದಾಗಿ ಸಗುಣ ನಿರ್ಗುಣವಾದ, ಸಾಕಾರ ನಿರಾಕಾರವಾದ.
ಏಕ ಬ್ರ[ಹ್ಮ ಸಂ]ಗನ ಬಸವಣ್ಣ
ಬಿಬ್ಬಿ ಬಾಚಯ್ಯ ಮರುಳಶಂಕರದೇವರೆಂಬ ಪರಂಜ್ಯೋತಿ ಮಹಾಲಿಂಗದಲ್ಲಿ
ಏಕತೆಯಾದೆನು ಕಾಣಾ, ಕೂಡಲಚೆನ್ನಸಂಗಮದೇವಾ. || ೭೫೯ ||

೧೬೧೩

ಲಿಂಗೋದಕ ಪಾದೋದಕ ಪ್ರಸಾದೋದಕವೆಂದು ತ್ರಿವಿಧ:
ಲಿಂಗೋದಕವೆಂಬುದು ಶಿವಸುಸ್ಕಾರದಿಂದಾದುದು,
ಪಾದೋದಕವೆಂಬುದು ಲಿಂಗಕ್ಕೆ ಮಜ್ಜನಕ್ಕೆರೆದುದು,
ಪ್ರಸಾದೋದಕವೆಂಬುದು ಲಿಂಗವಾರೋಗಿಸಿದ ಬಳಿಕ ಸಿತಾಳಂಗೊಟ್ಟುದು.
ಲಿಂಗೋದಕದಲ್ಲಿ ಲಿಂಗಕ್ಕೆ ಪಾಕಪ್ರಯತ್ನ, ಮಜ್ಜನಕ್ಕೆರೆವುದು.
ಪಾದೋದಕದಲ್ಲಿ ಮುಖಪಕ್ಷಾಲನವ ಮಾಡುವುದು,
ಶಿರಸ್ಸಿನ ಮೇಲೆ ತಳಿದುಕೊಂಬುದು.
ಪ್ರಸಾದೋದಕವನಾರೋಗಿಸುವುದು– ಇಂತೀ ತ್ರಿವಿಧೋದಕ.
ದಾಸೋಹ ಷಟ್‌ಪ್ರಕಾರ ವರ್ತಿಸುವುದು;
ಭಕ್ತನಿಂದೆಯ ಮಾಡಲಾಗದು, ಆಚಾರನಿಂದೆಯ ಮಾಡಲಾಗದು.
ಹುಸಿಯಿಲ್ಲದಿದ್ದಡೆ ಭಕ್ತನು–
ಇಂತಿದು ಭಕ್ತಸ್ಥಲ ಕೂಡಲಚೆನ್ನಸಂಗಮದೇವಾ. || ೭೬೦ ||

೧೬೧೪

'ಲಿ' ಕಾರವೆ ಶೂನ್ಯ, ಬಿಂದುವೆ ಲೀಲೆ, 'ಗ' ಕಾರವೆ ಚಿತ್ತು.
ಈ ತ್ರಿವಿಧದೊಳಗಿದೆ ಲಿಂಗವೆಂಬ ಸಕೀಲ.
ಇದರ ಸಂಚವನಾವಾತ ಬಲ್ಲ ಆತನೆ ಲಿಂಗಸಂಗಿ.
ಇದು ಕಾರಣ– ಲಿಂಗಾನುಭವಿಗಳ ಶ್ರೀಚರಣಕ್ಕೆ
ನಮೋ ನಮೋ ಎಂಬೆ ಕೂಡಲಚೆನ್ನಸಂಗಮದೇವಾ. || ೭೬೧ ||

೧೬೧೫

ಲೋಕದ ಡೊಂಕ ನೀವು ತಿದ್ದುವಿರಯ್ಯ
ನಿಮ್ಮ (ತನುಮನದ) ಡೊಂಕ ತಿದ್ದಿ ತಿಳುಹಿಕೊಳಲರಿಯವೆ.
ಪುರಾತರು, ನುಡಿದಂತೆ ನಡೆಯದವರೆಲ್ಲ,
ಕಡು ಓದಿದ ಗಿಳಿ ತನ್ನ ಮಲವ ತಾ ತಿಂದಂತೆ.
ನೆರೆಮನೆಯವರ ದುಃಖವ ಕೇಳಿ,
ಗಡ್ಡ ಮೀಸೆ ಮಂಡೆಯ ಬೋಳಿಸಿಕೊಂಡು
(ಕಡೆಯಲ್ಲಿ) ಹೋಗಿ ಅಳುತಿಪ್ಪವರ ಕಂಡರೆ
ಕೂಡಲಚೆನ್ನಸಂಗನ ಶರಣರು ನಗುತಿಪ್ಪರಯ್ಯಾ. ॥ ೭೬೨ ॥

೧೬೧೬

ಲೋಕವಿರಹಿತ ಶರಣ, ಶರಣವಿರಹಿತ ಲೋಕ.
ಊರ ಹೊಂದ, ಕಾಡ ಹೊಂದ, ಆಪ್ಯಾಯನ ಭುಕ್ತಿವಿರಹಿತ
ಕೂಡಲಚೆನ್ನಸಂಗಮದೇವರಲ್ಲಿ ಲಿಂಗನಿಜೈಕ್ಯನು. ॥ ೭೬೩ ॥

೧೬೧೭

ಲೋಕವಿರೋಧಿ ಭಕ್ತ, ಭಕ್ತವಿರೋಧಿ ಶರಣ,
ಶರಣವಿರೋಧಿ ಲಿಂಗೈಕ್ಯ–
ಈ ತ್ರಿವಿಧವಿರೋಧಿ ಕೂಡಲಚೆನ್ನಸಂಗಯ್ಯನಲ್ಲಿ
ಮಹಾಲಿಂಗೈಕ್ಯವು. ॥ ೭೬೪ ॥

೧೬೧೮

ಲೋಹ ಪರುಷವ ಮುಟ್ಟುವುದಲ್ಲದೆ,
ಪರುಷ ಪರುಷವ ಮುಟ್ಟುವುದೆ ಅಯ್ಯಾ?
ಅಂಗವಿಡಿದಂಗೆ ಪ್ರಸಾದವಲ್ಲದೆ ಲಿಂಗವಿಡಿದಂಗೆ ಪ್ರಸಾದವುಂಟೆ?
'ಅಣೋರಣೀಯಾನ್ ಮಹತೋ ಮಹೀಯಾನ್' ಎಂದುದಾಗಿ
ಕಿರಿದಿಂಗೆ ಕಿರಿದು ಹಿರಿದಕ್ಕೆ ಹಿರಿದು, ವಾಙ್ಮನಕ್ಕಗೋಚರ.
ಕೂಡಲಚೆನ್ನಸಂಗಮದೇವ [ಕೇಳಯ್ಯಾ]
ಸ್ವರೂಪು ಪ್ರಸಾದಿ, ನಿರೂಪು ಲಿಂಗೈಕ್ಯ! ॥ ೭೬೫ ॥

೧೬೧೯

ವಜ್ರವ ಒರಲೆ ಮುಟ್ಟಬಲ್ಲುದೆ ಅಯ್ಯಾ?
ಮದ್ದಿನ ಚೀಲವ ಹಾವು ಮುಟ್ಟಬಲ್ಲುದೆ ಅಯ್ಯಾ?
ಕಿಚ್ಚಿದ್ದ ಒಲೆಯಲ್ಲಿ ಶ್ವಾನ ಮಲಗಬಲ್ಲುದೆ ಅಯ್ಯಾ?
ಸಮುದ್ರಕ್ಕೆ ಹೋಗಿ ಸಪ್ಪೆಯ ಸಲಿಸುವರೆ ಅಯ್ಯಾ?
ಗುರುಲಿಂಗಜಂಗಮವ ಪೂಜಿಸಿ ಬರಿ ಸಾವ ಸಾವರೆ;
ಊರ ಮುಂದಣ ಹೆಮ್ಮಾರಿಯೆ ಲೇಸೆಂದ
ಕೂಡಲಚೆನ್ನಸಂಗಮದೇವ. || ೭೬೬ ||

೧೬೨೦

ವಲಿತ ಪಲಿತಪ್ರಸಾದವವ್ವಾ,
ಆದಿವ್ಯಾಧಿ ಪ್ರಸಾದವವ್ವಾ,
ಗಮನಾಗಮನ ಪ್ರಸಾದವವ್ವಾ; ಸ್ವಯವವ್ವಾ,
ಕೂಡಲಚೆನ್ನಸಂಗನ ಪ್ರಸಾದವವ್ವಾ! || ೭೬೭ ||

೧೬೨೧

ವಾಗಾದಿ ಕರ್ಮೇಂದ್ರಿಯಂಗಳು ಇವಕ್ಕೆ ವಿವರ:
ವಾಕು: ನುಡಿವುದು, ಪಾಣಿ: ಮಾಡುವುದು
ಪಾದ: ನಡೆವುದು, ಪಾಯು: ಸರ್ವಾಂಗದಲ್ಲಿ ಕೂಡುವುದು.
ಗುಹ್ಯ: ಸೇರಿಸುವುದು.
ಇಂತೀ ಪಂಚಕರ್ಮೇಂದ್ರಿಯಂಗಳಲ್ಲಿ ಚರಿಸದೆ ಸುಚಾರಿತ್ರದಲ್ಲಿ
ನಡೆಯಬಲ್ಲಡೆ ಕೂಡಲಚೆನ್ನಸಂಗಯ್ಯನಲ್ಲಿ ಶರಣನೆನಿಸುವನು. || ೭೬೮ ||

೧೬೨೨

ವಾಙ್ಮನಕ್ಕೆ ಗೋಚರ ಲಿಂಗ, ಅಗೋಚರ ಶರಣ.
ಸಕಾಯ ಲಿಂಗ, ಅಕಾಯ ಶರಣ.
ಆದಿ ಲಿಂಗ, ಅನಾದಿ ಶರಣ; ಪೂರ್ವಿಕ ಲಿಂಗ, ಅಪೂರ್ವಿಕ ಶರಣ.
ಇದು ಕಾರಣ– ಕೂಡಲಚೆನ್ನಸಂಗಯ್ಯನಲ್ಲಿ
ಅಚ್ಚಲಿಂಗೈಕ್ಯ ಕಾಣಾ ಪ್ರಭುದೇವರು. || ೭೬೯ ||

೧೬೨೩

ವಾರವೇಳು ಕುಲ ಹದಿನೆಂಟು ಎಂಬರಯ್ಯಾ
ಅದ ನಾವು ಅಲ್ಲವೆಂಬೆವು.
ಇರುಳೊಂದು ವಾರ ಹಗಲೊಂದು ವಾರ,
ಭವಿಯೊಂದು ಕುಲ, ಭಕ್ತನೊಂದು ಕುಲ,
ನಾವು ಬಲ್ಲುದು ಕಾಣಾ ಕೂಡಲಚೆನ್ನಸಂಗಮದೇವಾ. || ೭೭೦ ||

೧೬೨೪

ವಾಸಿಸುವ ನಾಸಿಕ ನೀನೆಂದರಿದೆ, ರುಚಿಸುವ ಜಿಹ್ವೆ ನೀನೆಂದರಿದೆ,
ನೋಡುವ ನಯನ ನೀನೆಂದರಿದೆ, ಮುಟ್ಟುವ ತ್ವಕ್ಕು ನೀನೆಂದರಿದೆ,
ಕೇಳುವ ಶ್ರೋತ್ರ ನೀನೆಂದರಿದೆ– ಇದು ಕಾರಣ
ಕೂಡಲಚೆನ್ನಸಂಗಯ್ಯಾ,
ನಾ ನಿಮ್ಮ ಬೇಡಲಿಲ್ಲಾಗಿ ಕೂರ್ತು ಕೊಡಲಿಲ್ಲ. || ೭೭೧ ||

೧೬೨೫

ವಿಭೂತಿ ವಿಭೂತಿಯೆಂಬ ಮಾತಿಂಗಂಜಲೇಕೊ,
ಅದು ವಿಭೂತಿ ಅಹುದೊ ಅಲ್ಲೊ ಎಂಬ ಕ್ರಮವನರಿಯಬೇಕಲ್ಲದೆ?
ಕೊಂತವೆಂದರೆ ಕರುಳು ಹರಿವುದೆ ಇರಿಯದನ್ನಕ್ಕ?
ನಿಃಕ್ರಿಯ ನಿಃಕಾಮ್ಯ ನಿರುಪಾಧಿಕದಿಂದ
ಶ್ರೇಷ್ಠಾಚಾರವಿಡಿದು ಚರಿಸುವುದು ವಿಭೂತಿ.
ಅದಕ್ಕಂಜುವುದು, ಬೆಚ್ಚುವುದು, ಅದಕ್ಕೆ ತಪ್ಪಿದಡೆ ತಪ್ಪಿದುದು,
ಅಲ್ಲಿ ಶಿಕ್ಷಿಸಲುಂಟು ಬುದ್ಧಿಗಲಿಸಲುಂಟು.
ಅಂತಲ್ಲದೆ ಕುಮಂತ್ರವನೊಡಲೊಳಗಿಂಬಿಟ್ಟುಕೊಂಡು
ಧನದುಪಾಧಿಕೆಗೆ ಅಹುದನಲ್ಲವ ಮಾಡಿ, ಕುಚೇಷ್ಟೆ ವಿಡಿದು ಚರಿಸುವುದು
ವಿಭೂತಿಯೆ? ಅಲ್ಲ. ಅದಕಂಜಲಿಲ್ಲ ಬೆಚ್ಚಲಿಲ್ಲ.
ಅದೇನು ಕಾರಣವೆಂದಡೆ– ವಿಭೂತಿಯಲ್ಲಾಗಿ.
ಇಂತೀ ಉಭಯದ ಸಕೀಲವ ಸಜ್ಜನ ಶುದ್ಧಸಾತ್ವಿಕರು ಬಲ್ಲರಲ್ಲದೆ
ಎಲ್ಲರೂ ಬಲ್ಲರೆ ಕೂಡಲಚೆನ್ನಸಂಗನಲ್ಲಿ? || ೭೭೨ ||

೧೬೨೬

ವಿಶ್ವವೆಲ್ಲವೂ ಮಾಯೆಯ ವಶವಾಗಿ,
ವಿಶ್ವದೊಳಗಾದ ದ್ರವ್ಯವ ಮಾಯೋಚ್ಛಿಷ್ಟವೆಂದು ಶಿವನೊಲ್ಲ.

ಅಂತಪ್ಪ ಮಾಯೆಯ ಗೆಲಿದು,
ಮಾಯಾತೀತರಾದ ಭಕ್ತರಿಂದೊದಗಿದ ಪ್ರಸಾದ,
ಮಾಯಾತೀತನಾದ ಶಿವಂಗೆ ಮಹಾನೈವೇದ್ಯ,
ಪರಮತೃಪ್ತಿ ಎಂಬುದ ನಾ ಬಲ್ಲೆನಯ್ಯಾ.
ಅದೆಂತೆಂದಡೆ:
ಮಾಯೋಚ್ಛಿಷ್ಟಂ ಜಗತ್ಸರ್ವಂ ಶುದ್ಧಂ ಪಂಚಾಕ್ಷರೇಣ ಚ।
ಅಭಿಮಂತ್ರ್ಯ ತದುಚ್ಛಿಷ್ಟಂ ಪದಾರ್ಥಂ ಭಕ್ತಿಮಾನ್ನರಃ॥
ಚರಲಿಂಗೇ ವಿಚಾರೇಣ ಸಮರ್ಪ್ಯ ತದನಂತಂ।
ಸ್ವಲಿಂಗೇಚ ಪ್ರಸಾದಾನ್ನಂ ದತ್ವಾಭೋಜನಮಾಚರೇತ್॥ ಎಂದುದಾಗಿ
ಚೆನ್ನಯ್ಯನುಂಡು ಮಿಕ್ಕುದ ಚಪ್ಪರಿದು ಸವಿದ,
ಚೋಳಿಯಕ್ಕನೊಕ್ಕುದ ಕೊಂಡ.
ಇದು ಕಾರಣ- ನಿಮ್ಮ ಪರಮಕಲಾರೂಪವಾದ
ಜಂಗಮದ ಪ್ರಸಾದವ ನಿಮಗೆ ದಣಿಯಿತ್ತು
ನಿಮ್ಮ ಪ್ರಸಾದವೆಂಬ ಜ್ಯೋತಿ
ಎನ್ನಂಗ-ಪ್ರಾಣ-ಭಾವ-ಜ್ಞಾನ ಹಿಂಗದೆ ಬೆಳಗುತ್ತಿದೆ,
ನೋಡಾ ಕೂಡಲಚೆನ್ನಸಂಗಮದೇವಾ. ॥ ೭೭೩ ॥

೧೬೨೭

ವಿಷದಷ್ಟವಾದ ನರನ, ಗಾರುಡಮಂತ್ರೌಷಧದಿಂದ
ಆರೋಗ್ಯಕಾಯನ ಮಾಡುವಂತೆ,
ಶೈವಗುರುವಿನ ಕೈಯಲ್ಲಿ ಮಂತ್ರೋಪದಿಷ್ಟನಾದ ಶಿಷ್ಯಂಗೆ,
ವೀರಶೈವದ ಮಂತ್ರೋಪವೇಶದಿಂದ
ಆತನ ಕಾಯಶುದ್ಧನ ಮಾಡಿ
ಆತನ ಲಿಂಗಕ್ಕೆ ಪ್ರಾಣಪ್ರತಿಷ್ಠೆಯ ತುಂಬಿ
ಆತನ ಅಂಗದ ಮೇಲೆ ಲಿಂಗವ ಬಿಜಯಂಗೈಸಿ
ಕೃತಕೃತ್ಯನಂ ಮಾಡಿದ ನಮ್ಮ ವೀರಶೈವ ಗುರು,
ಕೂಡಲಚೆನ್ನಸಂಗಮದೇವ. ॥ ೭೭೪ ॥

೧೬೨೮

ವಿಷಯಾಭಿಲಾಷೆಯಲ್ಲಿ ವಿರಾಗವು ನೆಲೆಯಾಗಿ,
ಅಷ್ಟಾವರಣದ ಆಚಾರವೆ ಅಂಗವಾದಡೆ:
ಮರುಳುಗೊಳಿಪ ಮಾರನ ಮಾಟವು ದೂರವಾಗುವುದಯ್ಯಾ.
ಅನಾಹತಶಬ್ದದ ಅನುಸಂಧಾನದಿಂದ, ಅವಸ್ಥಾತ್ರಯದಲ್ಲಿ ತೋರುವ

ತನು ಮೂರರ ವಾಸನೆಯು ನಾಶವಾಗುವುದಯ್ಯಾ.
ಇಷ್ಟಲಿಂಗದಲ್ಲಿಟ್ಟ ದೃಷ್ಟಿ, ಬಿಂದುವಿನ ಪರಿಪರಿಯ ಬಣ್ಣವ
ನೋಡಿ ನೋಡಿ ದಣಿದು, ಶಿವಕಲಾರೂಪದಲ್ಲಿ ವ್ಯಾಪಿಸಿ,
ಕಂಗಳ ಎವೆ ಮಾಟವಿಲ್ಲದೆ ಲಿಂಗಲಕ್ಷ್ಯವು ಕದಲದಂತಿದ್ದಡೆ
ಕಾಲನ ಕಾಟವು ತೊಲಗಿ ಹೋಗುವುದಯ್ಯಾ..
ಇಂತೀ ಸಾಧನತ್ರಯವು ಸಾಧ್ಯವಾದ ಶರಣಂಗೆ
ಕಾಲ-ಕಾಮ-ಪುರವೈರಿಯಾದ ನಮ್ಮ ಕೂಡಲಚೆನ್ನಸಂಗಯ್ಯನು
ಮನ್ನಣೆಯ ಮುಕ್ತಿಯನೀವನು. || ೭೭೫ ||

೧೬೨೯

ವೀರಭದ್ರ ಬಸವಣ್ಣ ಮಲ್ಲಿಕಾರ್ಜುನರೆಂಬ ದೈವಂಗಳಿಗೆ,
ನಮ್ಮ ಕುಲದೈವಂಗಳೆಂದು ಹೇಳುವವರಿಗೆ
ಗುರುವಿಲ್ಲ ಲಿಂಗವಿಲ್ಲ ಪಾದೋದಕ-ಪ್ರಸಾದವಿಲ್ಲ
ಕೂಡಲಚೆನ್ನಸಂಗಮದೇವಾ. || ೭೭೬ ||

೧೬೩೦

ವೀರಶೈವನಾದಡೆ ಪರಧನವ ಪರಸತಿಯುರ ಮುಟ್ಟದಿರಬೇಕು.
ಎಂತೂ ಪರಹಿಂಸೆಯನೆಸಗದಿರಬೇಕು.
ಒಡಲಳಿದಡೆಯೂ ಹಿಡಿದಾಚಾರವ ಬಿಡದಿರಬೇಕು.
ಇಂತೀ ವೀರಾಚಾರವು ನೆಲೆಗೊಳ್ಳದೆ
ವೀರವಂಶದಲ್ಲಿ ಹುಟ್ಟಿದ ಮಾತ್ರಕ್ಕೆ ವೀರಶೈವನೆಂತಪ್ಪನಯ್ಯಾ
ಕೂಡಲಚೆನ್ನಸಂಗಮದೇವಾ? || ೭೭೭ ||

೧೬೩೧

ವೀರಶೈವಸಂಪನ್ನರಾದ ಸದ್ಭಕ್ತ ಶರಣಗಣಂಗಳಾದಡೆಯೂ
ವೀರಮಾಹೇಶ್ವರರಾದಡೆಯೂ ಕ್ರಿಯಾಪಾದೋದಕ ಮಾಡಬೇಕಾದಡೆ,
ತನ್ನ ಎರಡು ಅಂಗುಲಗಳಿಂದ, ಆ ಮಾಹೇಶ್ವರರ ಅಂಗುಷ್ಠ ಎಂಟು ಅಂಗುಲಗಳಲ್ಲಿ
ತರ್ಜನಿ ಬೆರಳಿನಿಂದ ಬಲದ ಪಾದಾಂಗುಷ್ಠದ ಮೇಲೆ
ಮೂರು ವೇಳೆ ಸ್ಪರ್ಶನವ ಮಾಡಿ,
ನಾಲ್ಕನೆಯ ವೇಳೆಗೆ ಅದೇ ಬಲಪಾದವ ನಾಲ್ಕು ಬೆರಳುಗಳನ್ನು
ಒಂದು ವೇಳೆ ಸ್ಪರ್ಶನ ಮಾಡಿದಡೆ ಗುರುಪಾದೋದಕವೆನಿಸುವುದು.
ಇದೇ ರೀತಿಯಲ್ಲಿ ಎಡದ ಪಾದವ ಮಾಡಿದಡೆ ಲಿಂಗೋದಕವೆನಿಸುವುದು.
ಈ ಎರಡರ ಕೂಟವೆ ಜಂಗಮಪಾದೋದಕವೆನಿಸುವುದು.

ತನ್ನ ಹಸ್ತದಿಂದ ಪಾದವ ಮುಟ್ಟಿ ಮಾಡಿದಂತಹದೆ ಸ್ಪರ್ಶನೋದಕವೆನಿಸುವುದು.
ಆ ಪಾದದ ಮೇಲಣ ದ್ರವವ ತೆಗೆದಂತಹದೆ ಅವಧಾನೋದಕವೆನಿಸುವುದು.
ಅದರ ಮೇಲಣ ಅಪೇಕ್ಷೆ ಮುಂದುಗೊಂಡು ತಾನು ಮಾಡಿಕೊಂಡಂತಹದೆ
ಆಪ್ಯಾಯನೋದಕವೆನಿಸುವುದು.
ಹಸ್ತದಿಂದ ಮುಟ್ಟಿ ಮಾಡಿದಂತಹದೆ ಹಸ್ತೋದಕವೆನಿಸುವುದು.
ಆ ಭಾಜನವ ತನ್ನ ಕೈಯಲ್ಲಿ ತೆಗೆದುಕೊಂಡು
ಆ ಜಂಗಮಕ್ಕೆ ನಮಸ್ಕರಿಸುವಂತಹದೆ ನಿರ್ನಾಮೋದಕವೆನಿಸುವುದು.
ಆ ಜಂಗಮಕ್ಕೆ ನಮಸ್ಕರಿಸಿ ಆ ಭಾಜನವನ್ನು
ತನ್ನ ಕ್ರಿಯೆಗೆ ಇಟ್ಟುಕೊಂಡಂತಹುದೆ ಸತ್ಯೋದಕವೆನಿಸುವುದು–
ಈ ಪ್ರಕಾರದಲ್ಲಿ ಹತ್ತು ಪಾದೋದಕವು, ಶಿಕ್ಷಾಪಾದೋದಕದಲ್ಲಿ ಆಗುವುದೆಂದು
ಅರಿದು ಆಚರಿಸುವುದು.
ಆಚರಿಸಲಾಗನೆಂಬ ಹುಚ್ಚಮಾನವರನೇನೆಂಬೆನಯ್ಯಾ
ಕೂಡಲಚೆನ್ನಸಂಗಮದೇವಾ. ॥ ೭೭೮ ॥

೧೬೩೨

ವೇದ ಘನವೆಂಬೆನೆ? ಪ್ರಾಣವಧೆಯ ಹೇಳುತ್ತದೆ.
ಶಾಸ್ತ್ರ ಘನವೆಂಬೆನೆ? ಕರ್ಮವ ಭಜಿಸ ಹೇಳುತ್ತದೆ.
ಆಗಮ ಘನವೆಂಬೆನೆ? ಮುಂದಿಟ್ಟು ಅರಸಿ ಕಾಣೆನೆನುತ್ತದೆ.
ಅಲ್ಲೆಲ್ಲಿಯೂ ನೀನಿಲ್ಲದ ಕಾರಣ,
ತ್ರಿವಿಧದಾಸೋಹದಿಂದಲರಿದು ಕಂಡೆನು ಕಾಣಾ
ಕೂಡಲಚೆನ್ನಸಂಗಮದೇವಾ. ॥ ೭೭೯ ॥

೧೬೩೩

ವೇದ ಘನವೆಂಬೆನೆ? ವೇದ ವೇಧಿಸಲರಿಯದೆ ಕೆಟ್ಟವು.
ಶಾಸ್ತ್ರ ಘನವೆಂಬೆನೆ? ಶಾಸ್ತ್ರ ಸಾಧಿಸಲರಿಯದೆ ಕೆಟ್ಟವು.
ಪುರಾಣ ಘನವೆಂಬೆನೆ? ಪುರಾಣ ಪೂರೈಸಲರಿಯದ ಕೆಟ್ಟವು.
ಆಗಮ ಘನವೆಂಬೆನೆ? ಆಗಮ ಅರಸಲರಿಯದೆ ಕೆಟ್ಟವು.
ಅದೇನು ಕಾರಣವೆಂದಡೆ:
ವೇದ ಶಾಸ್ತ್ರ ಪುರಾಣಾಗಮಂಗಳೆಲ್ಲ, ತಮ್ಮ ತನುವಿಡಿದು ಅರಸಲರಿಯವು.
ಇದಿರಿಟ್ಟುಕೊಂಡು ಕಡೆಹೋದ,
ನರಲೋಕದ ನರರುಗಳರಿಯರು, ಸುರಲೋಕದ ಸುರರುಗಳರಿಯರು,
ಕೂಡಲಚೆನ್ನಸಂಗಮದೇವಾ ನಿಮ್ಮ ಶರಣನೇ ಬಲ್ಲ. ॥ ೭೮೦ ॥

೧೬೩೪

ವೇದಪ್ರಿಯನೆಂಬೆನೆ ನಮ್ಮ ದೇವ?
ವೇದಪ್ರಿಯನಲ್ಲ.
ನಾದಪ್ರಿಯನೆಂಬೆನೆ ನಮ್ಮ ದೇವ?
ನಾದಪ್ರಿಯನಲ್ಲ.
ಭೋಗಪ್ರಿಯನೆಂಬೆನೆ ನಮ್ಮ ದೇವ?
ಭೋಗಪ್ರಿಯನಲ್ಲ.
ತುತ್ತುಪ್ರಿಯನೆಂಬೆನೆ ನಮ್ಮ ದೇವ?
ತುತ್ತುಪ್ರಿಯನಲ್ಲ.
ಮನದ ಭಕ್ತಿಪ್ರಿಯ ಕಾಣಾ, ಕೂಡಲಚೆನ್ನಸಂಗಮದೇವಾ. ॥ ೭೮೧ ॥

೧೬೩೫

ವೇದವನೋದಿ ಹೊನಲಲ್ಲಿ ಹೋದ ದ್ವಿಜರು, ಕೆಟ್ಟ ಕೇಡಿಂಗೆ ಕಡೆಯಿಲ್ಲ.
ಅದು ಹೇಗೆಂದಡೆ: ಹೇಮದಾಸೆಗೆ ಒಕ್ಕಲಿಗಂಗೆ
ದತ್ತಪುತ್ರನಾಗೆಂದು ಹೇಳಿತ್ತೆ ವೇದವು?
ಕೊರಡಿನ ಮೇಲೆ ಕುಳಿತು ತುತ್ತು ಗದ್ಯಾಣವ ನುಂಗಿ
ಸೀಮೆಯ ಹೊರವಡಿಸಿಕೊಳ್ಳೆಂದು ಹೇಳಿತ್ತೆ ವೇದ?
ಬಡಗಿ ಮಾಚಲದೇವಿಯ ಕುಲಜೆಯ ಮಾಡಿಹೆವೆಂದು
ಹೊನ್ನ ಕಪಿಲೆಯ ಕೊಂದು ನರಕಕ್ಕಿಳಿಯ ಹೇಳಿತ್ತೆ ವೇದ?
'ಅಹಿಂಸಾ ಪರಮೋಧರ್ಮ'ವೆಂದೋದಿ, ಅಸುರಭೋಜನಕ್ಕೆ ಅಂಗವಿಸಿ
ಕರ್ಮವಂ ಮಾಡಿ ಹೋತ ಕೊಂದು ತಿಂಬುದು ಪಾತಕವಲ್ಲವೆ?
'ಪರಮೋಧರ್ಮ ಹಿರಣ್ಯಗರ್ಭಃ' ಎಂದು ಹೊನ್ನ ಕಪಿಲೆಯಂ ಮಾಡಿ ಕಡಿದು
ಹಂಚಿಕೊಂಬುದು ಚಾಂಡಾಲವಲ್ಲವೆ?
ಹೊಲೆಯನಂತೆ ಹುಲುಪೆಣನ ಸುಟ್ಟು
ಪೊರಸಿನ ಮೇಲೆ ಪತವಾದ ಕಳಗ ಹತ್ತಿದ ಹಸುವಿನ ಉತ್ಕ್ರಾಂತಿಯ
ಕಾನನದಲ್ಲಿ ಕೂಳು ಭೋಜನವನುಂಡು, ಲೋಕೋಪಚಾರಕ್ಕೆ ಒಳಗಾಗಿ
ಪಾಪಕರ್ಮವ ಮಾಡಿ ಸಲ್ಲದೆ ಹೋದರು ಶಿವನಲ್ಲಿಗೆ.
ಕೂಡಲಚೆನ್ನಸಂಗಮದೇವ ಶಿವಭಕ್ತಂಗೊಲಿದ ಕಾರಣ
ಕಂಚಿಯ ಏಳು ಕೇರಿಯ ಕೈಲಾಸಕ್ಕೊಯ್ದ. ॥ ೭೮೨ ॥

೧೬೩೬

ವೇದವನೋದುವ ಅಣ್ಣಗಳು ನೀವು ಕೇಳಿರೊ!
ವೇದ ವೇದಿಸಲಿಲ್ಲ ಶಾಸ್ತ್ರ ಸಾಧಿಸಲಿಲ್ಲ;
ಪುರಾಣ ಪೂರೈಸಲಿಲ್ಲ, ಆಗಮಕ್ಕೆ ಆದಿಯಿಲ್ಲ.
ಇದು ಕಾರಣ–
ಆದ್ಯರಲ್ಲ, ವೇದ್ಯರಲ್ಲ, ಸಾಧ್ಯರಲ್ಲ
ಬರಿಯ ಹಿರಿಯರು ನೋಡಾ, ಕೂಡಲಚೆನ್ನಸಂಗಮದೇವಾ. || ೭೮೩ ||

೧೬೩೭

ವೇದ ವೇದಾಂತವನೋದಿ ಜ್ಞಾನಸೂರಿಯ ಮಾಡುವ ಜಂಗಮ
ಕ್ರಿಯಾಹೀನನಾದಡೆ ಆಗಮಸಮರಸ ಆತನಲ್ಲ.
ಅದೇನು ಕಾರಣವೆಂದಡೆ: ನುಡಿದಂತೆ ನಡೆಯನು.
ಅಲ್ಲಿ ಕೂಡಲಚೆನ್ನಸಂಗಮದೇವ ನಿಲ್ಲಲಾರನು ಸಿದ್ಧರಾಮಯ್ಯಾ. || ೭೮೪ ||

೧೬೩೮

ವೇದವೇದಾರ್ಥಸಾರಾಯದಿಂದ ಆರುಶಾಸ್ತ್ರ
ಹದಿನೆಂಟು ಪುರಾಣಂಗಳಾದವು.
ಆ ಪುರಾಣಂಗಳನರಿವುದರಿಂದೆ ಜ್ಯೋತಿಜ್ಞಾನವಾಯಿತ್ತು.
ಆ ಜ್ಯೋತಿಜ್ಞಾನದಿಂದೆ;–ಮತಿಜ್ಞಾನ,
ಶ್ರುತಜ್ಞಾನ, ಮನಪರಿಪೂರ್ಣಜ್ಞಾನ,
ಅವಧಿಜ್ಞಾನ ಕೇವಲಜ್ಞಾನ. –ಇಂತೀ ಪಂಚಜ್ಞಾನವೆ ಪಂಚಸ್ಥಲವಾಯಿತ್ತು.
ಮತಿಜ್ಞಾನವುಳ್ಳಾತನೆ ಭಕ್ತ, ಶ್ರುತಜ್ಞಾನವುಳ್ಳಾತನೆ ಮಹೇಶ್ವರ,
ಮನಪರಿಪೂರ್ಣ ಜ್ಞಾನವುಳ್ಳಾತನೆ ಪ್ರಸಾದಿ, ಅವಧಿಜ್ಞಾನವುಳ್ಳಾತನೆ ಪ್ರಾಣಲಿಂಗಿ,
ಕೇವಲಜ್ಞಾನವುಳ್ಳಾತನೆ ಶರಣ, ಶರಣಸ್ಥಲವೆಂಬುದು ಭವಂ ನಾಸ್ತಿ.
ಪಂಚಜ್ಞಾನಕ್ಕೆ ಮೂಲವಾದ ಜ್ಯೋತಿಜ್ಞಾನವೆ
ಪಂಚಸ್ಥಲದಲ್ಲಿ ಏಕಾಕಾರವಾದ ಐಕ್ಯನು–
ಇಂತೆಂದುದಾಗಿ ಕೂಡಲಚೆನ್ನಸಂಗಯ್ಯನಲ್ಲಿ ಪಂಚಸ್ಥಲದ ನೆಲೆಯ ಬಲ್ಲ
ಐಕ್ಯಬಸವಣ್ಣಂಗೆ ನಮೋ ನಮೋ ಎಂಬೆನು. || ೭೮೫ ||

೧೬೩೯

ವೇದ ಶಾಸ್ತ್ರ ಪುರಾಣವನೋದಿದವರು ಹಿರಿಯರೆ?
ಕವಿ ಗೀತ (ಗಮಕಿ?) ವಾದಿ ವಾಗ್ಮಿಗಳು ಹಿರಿಯರೆ?
ನಟ್ಟವಿಗ-ಬಾಣ-ವಿಲಾಗು-ವಿದ್ಯೆಯ ಕಲಿತ ಡೊಂಬರೇನು ಕಿರಿಯರೆ?
ಹಿರಿಯತನವಾವುದಯ್ಯಾ ಎಂದಡೆ,
ಗುಣ ಜ್ಞಾನ ಆಚಾರ ಶೀಲ ಧರ್ಮ!
ಕೂಡಲಚೆನ್ನಸಂಗನ ಶರಣರು ಸಾಧಿಸಿದ ಸಾಧನೆಯೆ ಹಿರಿಯತನ! || ೭೮೬ ||

೧೬೪೦

ವೇದ ಶಾಸ್ತ್ರ ಪುರಾಣಾಗಮಂಗಳಲ್ಲಿ ತಾನೆ ಪ್ರಸಿದ್ಧವಾಗಿ,
ಕೊಂಡಾಡಿಸಿಕೊಳ್ಳಲ್ಪಟ್ಟ
ಶ್ರೀ ಮಹಾಭಸಿತವ ಧರಿಸಿದಾತನೆ ಸದ್ಬ್ರಾಹ್ಮಣ.
ಇಂತಪ್ಪ ಮಹಾಭಸಿತವ ಬಿಟ್ಟು ಅಜ್ಞಾನಮತದಿಂದ
ವೇದ ಶಾಸ್ತ್ರಾಗಮಪುರಾಣಂಗಳಲ್ಲಿ ವಿರುದ್ಧವಾದ
ಮಟ್ಟಿಮಸಿಗಳ ಹಣೆಯಲ್ಲಿಟ್ಟುಕೊಂಡನಾದಡೆ, ಅವನು ಬ್ರಾಹ್ಮಣನಲ್ಲ,
ಅವನು ಪಂಚಮಹಾಪಾತಕ, ಆತ ಶ್ವಪಚನೆಂದು ಪುರಾಣಪ್ರಸಿದ್ಧ.
ಅದೆಂತೆಂದಡೆ, ಗರುಡಪುರಾಣದಲ್ಲಿ:
"ಶ್ರುತಯಃ ಸ್ಮೃತಯಸ್ಸರ್ವೇ ಪುರಾಣಾನ್ಯಖಿಲಾನಿ ಚ।
ವದಂತಿ ಭೂತಿ ಮಹಾತ್ಮ್ಯಂ ತತಸ್ತಂ ಧಾರಯೇ ದ್ದ್ವಿಜಃ॥
ತದಭಾವೇ ತಥಾ ವಿಪ್ರೋ ಲೌಕಿಕಾಗ್ನಿಂ ಸಮಾಹರೇತ್।
ಭಸ್ಮನೈವ ಪ್ರಕುರ್ವೀತ ನ ಕುರ್ಯಾನ್ಮೃತ್ತಿಕಾದಿಭಿಃ॥
ಗೋಪೀಚಂದನಧಾರೀ ತು ಶಿವಂ ಸ್ಪೃಶತಿ ಯೋ ದ್ವಿಜಃ।
ಶತೈಕ ವಿಂಶತಿಕುಲಂ ಸೋಽಕ್ಷಯಂ ನರಕಂ ವ್ರಜೇತ್॥
ಮತ್ತಂ ಕೂರ್ಮಪುರಾಣದಲ್ಲಿ:
ತ್ರಿಪುಂಡ್ರಂ ಬ್ರಾಹ್ಮಣೋ ವಿದ್ವಾನ್ ಮನಸಾಽಪಿ ನ ಲಂಘಯೇತ್।
ಶ್ರುತ್ಯಾ ವಿಧೀಯತೇ ತಸ್ಮಾತ್ತ್ಯಾಗೀ ತು ಪತಿತೋ ಭವೇತ್॥ ಎಂದುದಾಗಿ
ನಮ್ಮ ಕೂಡಲಚೆನ್ನಸಂಗಮದೇವರಲ್ಲಿ,
ಶ್ರುತಿಸ್ಮೃತಿ ಪ್ರಸಿದ್ಧವಾದ ಶ್ರೀಮಹಾವಿಭೂತಿಯನಿಟ್ಟಾತನೆ ಸದ್ಬ್ರಾಹ್ಮಣ.
ಈ ಮಹಾವಿಭೂತಿಯ ಬಿಟ್ಟು ಮಣ್ಣು ಮಸಿ ಮರದ ರಸಂಗಳ
ಹಣೆಯಲ್ಲಿ ಬರೆದುಕೊಂಡನಾದಡೆ
ಅವ ವಿಪ್ರನಲ್ಲ: ಅವ ಪಾಪಿ, ಶುದ್ಧಶ್ವಪಚ ಕಾಣಿಭೋ. || ೭೮೭ ||

೧೬೪೧

ವೇದಾಂತಿಗಳಂತೆ ಜ್ಞಾನಬದ್ಧರಲ್ಲ, ಮುನಿಗಳಂತೆ ಕ್ರಿಯಾಬದ್ಧರಲ್ಲ,
ಸಾಧಕರಂತೆ ಕಾರ್ಯಬದ್ಧರಲ್ಲ.
ಜ್ಞಾನಕ್ರಿಯಾಕಾರ್ಯಗಳಲ್ಲಿ ಕೂಡಲಚೆನ್ನಸಂಗನ ಶರಣರು
ನಿರತರು ಕಾಣಾ ಸಿದ್ಧರಾಮಯ್ಯಾ. ॥ ೭೮೮ ॥

೧೬೪೨

ವ್ಯಾಧಿಯಿಲ್ಲದಿರ್ದಡೆ ಲಿಂಗಪ್ರಸಾದಿಯೆಂಬೆ,
ಆಧಿಯಿಲ್ಲದಿರ್ದಡೆ ಜಂಗಮಪ್ರಸಾದಿಯೆಂಬೆ,
ಲೌಕಿಕವ ಬೆರಸದಿರ್ದಡೆ ಸಮಯಪ್ರಸಾದಿಯೆಂಬೆ.
ಇಂತೀ ತ್ರಿವಿಧಸಂಬಂಧಿಯಾದಡೆ
ಆತನೆ ಅಚ್ಚಪ್ರಸಾದಿಯೆಂಬೆ ಕಾಣಾ
ಕೂಡಲಚೆನ್ನಸಂಗಮದೇವಾ. ॥ ೭೮೯ ॥

೧೬೪೩

'ಶಂಕರ ಶಂಕರ' ಎಂದು ಸಹಜವರಿಯದೆ ನುಡಿವ
ಶ್ವಾನನ ಮಾತ ಕೇಳಲಾಗದು, ಶಂಕರವಾವುದೆಂದರಿಯರಾಗಿ.
ಲಿಂಗ ಶಂಕರವೊ? ಜಂಗಮ ಶಂಕರವೊ? ಪ್ರಸಾದ ಶಂಕರವೊ?
ತ್ರಿವಿಧದಲ್ಲಿ ಹೊರಗಿಲ್ಲ.
ಆವ ಶಂಕರದಲ್ಲಿ ಆವುದು ಚೇಗೆ? ಬಲ್ಲಡೆ ಹೇಳಿರಿ.
ಒರುಮಾತಿನ ಬಳಕೆಯ ಬಳಸಿ ಹಿರಿಯರಾದೆವೆಂಬ
ಮೂಕೊರೆಯರನೇನೆಂಬೆ ಕೂಡಲಚೆನ್ನಸಂಗಮದೇವಾ. ॥ ೭೯೦ ॥

೧೬೪೪

ಶಕ್ತಿಯು ಸೂಕ್ಷ್ಮವೆಂದು ಸ್ಥೂಲವೆಂದು ಇತ್ತೆರನಾಗಿರ್ಪುದು.
ಸೂಕ್ಷ್ಮಶಕ್ತಿಯ ಪರಿಣಾಮ ದೃಗ್ಗೋಚರವಾಗದು,
ಸ್ಥೂಲಶಕ್ತಿಯ ಪರಿಣಾಮ ಪ್ರತ್ಯಕ್ಷವಾಗಿ ಪರಿಣಮಿಸುತಿರ್ಪುದು.
ಇವುಗಳಲ್ಲಿ ಸೂಕ್ಷ್ಮಶಕ್ತಿಯ ವಿವರವೆಂತೆಂದಡೆ:
ಪ್ರಾಣಿಗಳ ಪುರಸ್ಕಾರದಿಂದ ಪುಣ್ಯವು, ತಿರಸ್ಕಾರದಿಂದ ಪಾಪವು,
ಅದೃಷ್ಟವಾಗಿರುವ ಪರಿಯಂತೆ;
ಕಾಲವು ಅಮೂರ್ತವಾಗಿ ಪತ್ರಪುಷ್ಪಾದಿ ಮೂರ್ತವಸ್ತುಗಳಿಗೆ
ಕಾರಣವಾಗಿರ್ಪಂತೆ,

ಮಂತ್ರಪ್ರಯೋಗದಿಂದ ಉರಗನ ಗರಳವು ಹರಣವಾದಂತೆ,
ನಿಮಗರ್ಪಿಸಿದ ಪ್ರಸಾದ ಪರಿಣಾಮದ ಸೂಕ್ಷ್ಮಶಕ್ತಿಯಿಂದ
ಅನಿಷ್ಟನಿವೃತ್ತಿ ಇಷ್ಟಾರ್ಥಪ್ರಾಪ್ತಿಗಳಾಗುತ್ತಿರ್ಪವಯ್ಯಾ,
ಕೂಡಲಚೆನ್ನಸಂಗಮದೇವಾ. || ೭೯೧ ||

೧೬೪೫

ಶಬ್ದಾದಿ ವಿಷಯಂಗಳ ವಿವರವು:
ಶಬ್ದ ಆಕಾಶದ ಗುಣ, ಸ್ಪರ್ಶ ವಾಯುವಿನ ಗುಣ.
ಶಬ್ದಸ್ಪರ್ಶ ರೂಪು ಅಗ್ನಿಯ ಗುಣ, ಶಬ್ದ ಸ್ಪರ್ಶ ರೂಪು ರಸ
ಅಪ್ಪುವಿನ ಗುಣ, ಶಬ್ದ ಸ್ಪರ್ಶ ರೂಪು ರಸ ಗುಧ ಸಹಿತ
ಇವೈದು ಪೃಥ್ವಿಯ ಗುಣ.
ಇಂತೀ ಪಂಚಗುಣವನು ಒಂದೇ ಗುಣವ ಮಾಡಬಲ್ಲಡೆ
ಕೂಡಲಚೆನ್ನಸಂಗಯ್ಯನಲ್ಲಿ ಶರಣನೆನಿಸುವನು. || ೭೯೨ ||

೧೬೪೬

ಶಮೆ ದಮೆ ತಿತಿಕ್ಷೆ ಉಪರತಿ ಶ್ರದ್ಧೆ ಸಮಾಧಿ ಸಾಧನಸಂಪನ್ನನಾಗಿ
ಸದ್ಗುರುವನರಸುತ್ತ ಬಪ್ಪ ಶಿಷ್ಯನ ಸ್ಥೂಲತನುವಿನ ಕಂಗಳ ಕೊನೆಯಲ್ಲಿ
ಇಷ್ಟಲಿಂಗವ ಧರಿಸಿ;
ಸೂಕ್ಷ್ಮತನುವಿನ ಮನದ ಕೊನೆಯಲ್ಲಿ ಪ್ರಾಣಲಿಂಗವ ಧರಿಸಿ;
ಕಾರಣ ತನುವಿನ ಭಾವದ ಕೊನೆಯಲ್ಲಿ ತೃಪ್ತಿಲಿಂಗವ ಧರಿಸಿ,
‘ಸರ್ವೇಂದ್ರಿಯಾಣಾಂ ನಯನಂ ಪ್ರಧಾನಂ’ ಎಂಬ ಕಂಗಳ
ಇಷ್ಟಲಿಂಗಕ್ಕೆ ಸಮರ್ಪಿಸಿ,
‘ಇಂದ್ರಿಯಾಣಾಂ ಮನೋನಾಥಾ’ ಎಂಬ ಮನವನು
ಪ್ರಾಣಲಿಂಗಕ್ಕೆ ಸಮರ್ಪಿಸಿ;
ಪ್ರಾಣ ಭಾವವ ತೃಪ್ತಿಲಿಂಗಕ್ಕೆ ಸಮರ್ಪಿಸಿ
‘ಮನೋದೃಷ್ಟಿ ಮರು ನ್ನಾಶೇದ್ರಾಜಯೋಗಫಲಂ ಭವೇತ್’ ಎಂಬ
ರಾಜಯೋಗ ಸಮರಸವಾದಲ್ಲಿ– ಅಂಗ ಲಿಂಗ, ಲಿಂಗವಂಗವಾಗಿ
ಶಿಖಿ ಕರ್ಪೂರಯೋಗದಂತೆ ಪೂರ್ಣಾಪೂರ್ಣ ದ್ವೈತಾದ್ವೈತ
ಉಭಯ ವಿನಿರ್ಮುಕ್ತವಾಗಿ
‘ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾ ಸಹ’ ಎಂಬ
ನಿಜದಲ್ಲಿ ನಿವಾಸಿಯಾದರು, ಕೂಡಲಚೆನ್ನಸಂಗಾ ನಿಮ್ಮ ಶರಣರು. || ೭೯೩ ||

೧೬೪೭

ಶರಣಂಗೆ ಆಕಾಶವೆ ಅಂಗ, ಆ ಅಂಗಕ್ಕೆ ಸುಜ್ಞಾನವೆ ಹಸ್ತ,
ಆ ಹಸ್ತಕ್ಕೆ ಶಿವಸಾದಾಖ್ಯ, ಆ ಸಾದಾಖ್ಯಕ್ಕೆ ಪರಶಕ್ತಿ,
ಆ ಶಕ್ತಿಗೆ ಪ್ರಸಾದವೆ ಲಿಂಗ, ಆ ಲಿಂಗಕ್ಕೆ ಶಾಂತ್ಯತೀತವೆ ಕಳೆ,
ಆ ಕಳೆಗೆ ಶ್ರೋತ್ರೇಂದ್ರಿಯವೆ ಮುಖ, ಆ ಮುಖಕ್ಕೆ ಸುಶಬ್ದದ್ರವ್ಯಂಗಳನು,
ರೂಪು ರುಚಿ ತೃಪ್ತಿಯನರಿದು ಆನಂದಭಕ್ತಿಯಿಂದರ್ಪಿಸಿ,
ಆ ಸುಶಬ್ದಪ್ರಸಾದವ ಭೋಗಿಸಿ ಸುಖಿಸುತ್ತಿಹನು
ಕೂಡಲಚೆನ್ನಸಂಗಾ, ನಿಮ್ಮ ಶರಣ. || ೭೯೪ ||

೧೬೪೮

ಶರಣ ದೃಷ್ಟಾದೃಷ್ಟ ಕಾಣಯ್ಯಾ; ಮುಟ್ಟದೆ ಮುಟ್ಟುವ ಕಾಣಯ್ಯಾ,
ಆಗಿನ ಆಗು ಕಾಣಯ್ಯಾ; ಭೇದದ ಭೇದ ಕಾಣಯ್ಯಾ;
ಅರಿವಿನ ಅರಿವು ಕಾಣಯ್ಯಾ.
ಲಿಂಗದಲ್ಲಿ ಹಿಂಗದ ಬಿಂದು ಕೂಡಲಚೆನ್ನಸಂಗಾ
ನಿಮ್ಮಲ್ಲಿ ಸಂಗನಬಸವಣ್ಣ ಕಾಣಾ. || ೭೯೫ ||

೧೬೪೯

ಶರಣನಿರ್ಣಯವೆಂತೆಂದಡೆ:
ಕರವೆ ಕಪ್ಪರ ಒಡಲೆ ಜೋಳಿಗೆ, ಆಕಾಶವೆ ಹೊದಿಕೆ
ಭೂಮಿಯೆ ಖಟ್ವಾಂಗ.
ಸರ್ವಸಂಗನಿವೃತ್ತಿಯ ಮಾಡಿ ಬಸವಣ್ಣ ಹೋದುದನು ಕಂಡೆ,
ಕೂಡಲಚೆನ್ನಸಂಗಮದೇವಾ. || ೭೯೬ ||

೧೬೫೦

ಶರಣನೆನಿಸಿಕೊಂಬುದು ಕಠಿಣ ಅರಿದು ನೋಡಯ್ಯಾ!
ಸತ್ಯಸದ್ಭಕ್ತರೊಳಡಗಿ ತನ್ನ ಕುರುಹ ಲೋಕಕ್ಕೆ ತೋರದಿರಬೇಕು.
ಸಕಲಜೀವರಾಶಿಗಳಿಗೆ ರೋಷ ಹರುಷವ ತಾಳದಿರಬೇಕು.
ಇಂತಪ್ಪ ಶರಣನಲ್ಲಿ ಸನ್ನಿಹಿತ ನಮ್ಮ ಕೂಡಲಚೆನ್ನಸಂಗಮದೇವ. || ೭೯೭ ||

೧೬೫೧

ಶರಣ ಮೂರ್ತನಲ್ಲ, ಅಮೂರ್ತನಲ್ಲ,
ಲಿಂಗದಲ್ಲಿ ಪ್ರಾಣಸಂಚಿತ, ಪ್ರಾಣದಲ್ಲಿ ಪ್ರಸಾದಸಂವರಣೆ,

ಪ್ರಸಾದದಲ್ಲಿ ಕಾಯಾಶ್ರಿತನು–ಲೋಕಲೌಕಿಕಪ್ರಕಾರದುದಯಿಸಲ್ಲ.
ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೭೯೮ ॥

೧೬೫೨

ಶರಣ ಶರಣನ ಕಂಡು,
'ಶರಣು' ಎಂದು ಕರವ ಮುಗಿವುದೆ ಭಕ್ತಿಲಕ್ಷಣ.
ಶರಣ ಶರಣನ ಕಂಡು,
ಪಾದವಿಡಿದು ವಂದಿಸುವುದೆ ಭಕ್ತಿಲಕ್ಷಣ.
ಶರಣ ಚರಣವ ಪಿಡಿಯದೆ
ಕಂಡೂ ಕಾಣದೆ ಪೋದನಾದಡೆ
ಕೂಡಲಚೆನ್ನಸಂಗನ ಶರಣರು ಮನ್ನಿಸರಯ್ಯಾ. ॥ ೭೯೯ ॥

೧೬೫೩

ಶರಣಸಮತೆಯ ನಿಧಿ ಬಸವನಯ್ಯಾ,
ಭಕ್ತಿಯ ಬೆಳೆಸಿರಿ ಬಸವನಯ್ಯಾ,
ಮುಕ್ತಿಯ ತವನಿಧಿ ಬಸವನಯ್ಯಾ,
ಸತ್ಯದ ನಿಧಿ ಬಸವನಯ್ಯಾ,
ಕೂಡಲಚೆನ್ನಸಂಗಯ್ಯನಲ್ಲಿ ಅನಿಮಿಷ ಬಸವನಯ್ಯಾ! ॥ ೮೦೦ ॥

೧೬೫೪

ಶರಣ ಸಾಹಿತ್ಯ ಲಿಂಗ ನೋಡಾ,
ಲಿಂಗಸಾಹಿತ್ಯ ಶರಣ ನೋಡಾ,
ಸಂಗವೆ ಸನುಮತವಾಗಿ,
ಮತ್ತೊಂದನರಸಲೆಲ್ಲಿಯದೊ?
ಅಯ್ಯಾ ಶರಣನೆ ಓಗರ, ಲಿಂಗವೆ ಪ್ರಸಾದ
ಕೂಡಲಚೆನ್ನಸಂಗಾ–ನಿಮ್ಮ ಶರಣರಿಗೆ. ॥ ೮೦೧ ॥

೧೬೫೫

ಶರಣಸ್ವಾಯತ ಲಿಂಗ, ಪ್ರಸಾದಿಸ್ವಾಯತ ಪ್ರಸಾದ
ಅನರ್ಪಿತವಿಡಿದುದೆ ಪದವು, ಅರ್ಪಿತವಿಡಿದುದೇ ಭಂಗವು
ಸಂಬಂಧ ಅಸಂಬಂಧವಾಯಿತ್ತು, ಕೂಡಲಚೆನ್ನಸಂಗಯ್ಯಾ ನಿಮ್ಮಲ್ಲಿ! ॥ ೮೦೨ ॥

೧೬೫೩

ಶರಣು ಶರಣಾರ್ಥಿ ಮಹಾದೇವಾ,
ಶರಣು ಶರಣಾರ್ಥಿ ಪರಬ್ರಹ್ಮಸ್ವರೂಪಾ,
ಶರಣು ಶರಣಾರ್ಥಿ ನಿರಾಕಾರತತ್ವವೆ,
ನೀವೆ ಗತಿ ನಿಮ್ಮ ಚರಣಕ್ಕೆ ಶರಣಯ್ಯಾ ಪ್ರಭುವೆ.
ಸತಿಪತಿಯ ಒಲುಮೆಯ ಮುನಿಸು, ಅತಿಬೇಟವೆಂಬುದು ತಪ್ಪದು ನೋಡಾ.
ನಿಮ್ಮ ಶರಣ ಬಸವಣ್ಣನೊಡತಣ ಮುನಿಸು
ಎನ್ನ ಮನಕ್ಕೆ ಸಂಶಯ ತೋರದು ನೋಡಾ.
ಸಂತೆಯ ನೆರವಿಯಲ್ಲಿ ಅಭಿಮಾನದ ಮಾತ ಮಾರಬಹುದೆ?
ಬೀದಿಯಲ್ಲಿ ನಿಂದು ನುಡಿವ ಅನುಭಾವದ ರಚ್ಚೆ ನಗೆಗೆಡೆ ನೋಡಯ್ಯಾ.
ಸಂಗನಬಸವಣ್ಣನೊಳಗೆ ನಿಮ್ಮೊಳಗೆ ಭೇದವಿಲ್ಲೆಂಬುದ
ನೀವೆ ಅರಿದರಿದು; ಮತ್ತೆ ಬಾರೆವೆಂಬುದುಚಿತವೆ?
ಕೂಡಲಚೆನ್ನಸಂಗನಶರಣ ಬಸವಣ್ಣನೆ ನಿಮ್ಮ ಪ್ರಾಣವಾಗಿರಲು
ಇನ್ನಾರೊಡನೆ ಮುನಿವಿರಿ? ಕೃಪೆ ಮಾಡಾ ಪ್ರಭುವೆ. ॥ ೮೦೩ ॥

೧೬೫೭

ಶಿಲೆ ಸ್ಥಾವರ ಮುಂತಾದುವಕ್ಕೆ ಅಪ್ಪುವೆ ಬೀಜ.
ಸಕಲ ಚೇತನಾದಿ ರೂಪುಗೊಂಡುವಕ್ಕೆ ವಸ್ತುವೆ ಬೀಜ.
ಆ ವಸ್ತು ಜಗದ ಹಿತಾರ್ಥ ಪೀಠಸಂಬಂಧಿಯಾಗಿ
'ಏಕಮೂರ್ತಿಸ್ತ್ರಯೋ ಭಾಗಾಃ' ಆಗಲಾಗಿ
ವರ್ತುಳ ಗುರುವಾಗಿ, ಗೋಮುಖ ಜಂಗಮವಾಗಿ
ಗೋಳಕಾಕಾರಮೂರ್ತಿ ಲಿಂಗವಾದ ಕಾರಣ, ಲಿಂಗವಾಯಿತ್ತು.
ಇಂತೀ ತ್ರಿವಿಧದೊಳಗೆ ಒಂದ ಮೀರಿ ಒಂದ ಕಂಡೆಹೆನೆಂದಡೆ
ಬೀಜವಿಲ್ಲದ ಅಂಕುರ, ಅಂಕುರವಿಲ್ಲದ ಬೀಜ.
ಅಂಕುರ ಬೀಜವಿರೆ, ಅಪ್ಪು ಪೃಥ್ವಿ ಸಾಕಾರವಿಲ್ಲದಿರೆ
ಅಂಕುರಕ್ಕೆ ದೃಷ್ಟವಿಲ್ಲ.
ಕೂಡಲಚೆನ್ನಸಂಗಮದೇವರಿರುತಿರಲಿಕ್ಕೆ
ಗುರು-ಲಿಂಗ-ಜಂಗಮವೆಂಬ ಭಾವ ಒಡಲಾಯಿತ್ತು. ॥ ೮೦೪ ॥

೧೬೫೮

ಶಿವತಂತ್ರದಿಂದ ಸುಖದುಃಖಗಳು ಬರುತಿಹವೆಂದರಿಯದೆ
ನರಗುರಿಗಳಿಗೆ, ರೋಗ ದಾರಿದ್ರ್ಯ ಅಪಜಯಂಗಳು ಬರುತ್ತಿರಲು

ವಿಪ್ರಗೆ ಕೈಮುಗಿದು ಕಾಣಿಕೆಯನಿಕ್ಕಿ ತನ್ನ ಹೆಸರ ಹೇಳಿ
ಸೂರ್ಯಬಲ ಚಂದ್ರಬಲ ಬೃಹಸ್ಪತಿಬಲ ನವಗ್ರಹಬಲವ
ಕೇಳುವವರಿಗೆ ಎಲ್ಲಿಯದೊ ಶಿವಭಕ್ತಿ?
ಸೂರ್ಯನು ಜ್ಞಾನವುಳ್ಳವನಾದಡೆ
ಗೌತಮಮುನೀಶ್ವರನ ಹೆಂಡತಿ ಅಹಲ್ಯಾದೇವಿಗೆ ಮೋಹಿಸಿ
ಮುನಿಯ ಶಾಪದಿಂದ ಕುಷ್ಟದೊಳಗಿಹನೆ?
ಅಲ್ಲದೆ ದಕ್ಷನ ಯಾಗದಲ್ಲಿ ಹಲ್ಲ ಹೋಗಲಾಡಿಸಿಕೊಂಬನೆ?
ಚಂದ್ರನು ಜ್ಞಾನವುಳ್ಳವನಾದಡೆ ಗುರುವಿನ ಹೆಂಡತಿಗೆ ಅಳುಪಿ ಕೊಂಡೊಯ್ದು
ಜಾತಜ್ವರದಲ್ಲಿ ಆಳಲುತಿಹನೆ?
ಬೃಹಸ್ಪತಿ ಜ್ಞಾನವುಳ್ಳವನಾದಡೆ ಸಕಲ ಜ್ಯೋತಿಷ್ಯಗಳ ನೋಡಿ
ವಿವಾಹವಾದ ಹೆಂಡತಿ ರೋಹಿಣೀದೇವಿಯು
ಚಂದ್ರನೆತ್ತಿಕೊಂಡು ಹೋಹಾಗ ಸುಮ್ಮನಿದ್ದುದು ಏನು ಜ್ಞಾನ?
ಶನಿ ಜ್ಞಾನವುಳ್ಳವನಾದಡೆ ಕುಂಟನಾಗಿ ಸಂಕೋಲೆ ಬೀಳ್ವನೆ?
ಅದು ಕಾರಣ–ತಮಗೆ ಮುಂಬಹ ಸುಖದುಃಖಂಗಳನರಿಯದವರು
ಮತ್ತೊಬ್ಬರ ಸುಖದುಃಖಂಗಳ ಮೊದಲೆ ಅರಿಯರು.
ಬೃಹಸ್ಪತಿಯ ಮತದಿಂದೆ ದಕ್ಷ, ಯಾಗವನಿಕ್ಕೆ ಕುರಿದಲೆಯಾಯಿತ್ತು.
ಬೃಹಸ್ಪತಿಯ ಮತದಿಂದೆ ದ್ವಾರಾವತ ನೀರಲ್ಲಿ ನೆರೆದು
ಕೃಷ್ಣನ ಹದಿನಾರುಸಾವಿರ ಸ್ತ್ರೀಯರ ಹೊಲೆಬೇಡರು ಸೆರೆಯಃನೊಯ್ದರು,
ಶ್ರೀರಾಮನ ಹೆಂಡತಿ ಸೀತಾಂಗನೆ ಸೆರೆಯಾದಳು.
ಇಂತೀ ತಮತಮಗೆ ಮುಂದೆ ಬಹ ಅಪಜಯಂಗಳನರಿಯದ ಕಾರಣ,
ಆ ಬೃಹಸ್ಪತಿ ಜ್ಞಾನಿಯ ಮತದಿಂದೆ, ಅಭಾಷ ಜೋಯಿಸರ ಮಾತ ಕೇಳಿ
ಹುಣ್ಣಿಮೆ ಅಮವಾಸೆಯುಲ್ಲಿ ಉಪವಾಸವಿದ್ದು,
ಗ್ರಹಬಲವುಳ್ಳ ಶುಭಮುಹೂರ್ತದಲ್ಲಿ, ಅರಳಿಯ ಮರಕ್ಕೆ ನೀರ ಹೊಯ್ದು
ಸೂಲ ಸುತ್ತಿ ವಿಪ್ರಜೋಯಿಸರ್ಗೆ ಹೊನ್ನು ಹಣವ ಕೊಟ್ಟಡೆ,
ಹೋದೀತೆಂಬ ಅನಾಚಾರಿಯ ಮಾತ ಕೇಳಲಾಗದು.
'ವಸಿಷ್ಠೇನ ಕೃತೇ ಲಗ್ನೇ ವನೇ ರಾಮೇಣ ವಾಸಿತೇ।
ಕರ್ಮಮೂಲೇ ಪ್ರಧಾನೇತು ಕಿಂ ಕರೋತಿ ಶುಭಗ್ರಹಃ॥' ಇಂತೆಂದುದಾಗಿ
ಬಹ ಕಂಟಕವ ಹೊನ್ನು ಹೆಣ್ಣು ಶುಭ ಲಗ್ನದಿಂದ
ಪರಿಹರಿಸೇನೆಂದಡೆ ಹೋಗಲರಿಯದು.
ಹಸಿವಿಲ್ಲದ ಮದ್ದು ಕೊಟ್ಟೇನು, ಅಶನವ ನೀಡೆಂಬಂತೆ,
ಖೇಚರದ ಮದ್ದು ಕೊಟ್ಟೇನು ತೊರೆಯ ದಾಂಟಿಸೆಂಬಂತೆ,
ಕುರುಡನ ಕೈಯ ಕುರುಡ ಹಿಡಿದು ಹಾದಿಯ ತೋರುವಂತೆ,
ಲಜ್ಜೆ ನಾಚಿಕೆ ಇಲ್ಲದೆ ವಿಪ್ರರ ಕೈಯೆ ಲಗ್ನವ ಕೇಳಲಾಗದು.

ಸದ್ಭಕ್ತರಾದವರಿಗೆ ನಿಮ್ಮ ಬಲವೇ ಬಲವಯ್ಯಾ
ಕೂಡಲಚೆನ್ನಸಂಗಮದೇವಾ. ॥ ೮೦೫ ॥

೧೬೫೯

ಶಿವನ ಪಾದೋದಕವನಲ್ಲದೆ ಕೊಳ್ಳಲಾಗದೆಂದುದು ವೇದ.
ಶಿವನ ಪ್ರಸಾದವನಲ್ಲದೆ ಉಣಲಾಗದೆಂದುದು ವೇದ.
ಜಾಬಾಲಶಿಖಾಯಾಂ:
"ರುದ್ರೇಣಾತ್ತಮಶ್ನಂತಿ ರುದ್ರೇಣ ಪೀತಂ ಪಿಬಂತಿ।
ರುದ್ರೇಣ ಘ್ರಾತಂ ಜಿಘ್ರಂತಿ॥
ತಸ್ಮಾತ್ ಬ್ರಾಹ್ಮಣೋ ವಿದ್ವಾನ್ ನಿರ್ಮಾಲ್ಯಮೇವ ಭಕ್ಷಯೇತ್।
ನಿರ್ಮಾಲ್ಯಮೇವ ನಿಷೇವಯೇತ್॥"
ಇದನರಿದು, ಶಿವನ ಪಾದೋದಕ ಪ್ರಸಾದವ ಕೊಂಬಾತನೆ ಸದ್ಬ್ರಾಹ್ಮಣ,
ಆತನೆ ವಿದ್ವಾಂಸನು, ಆತನೆ ಎಲ್ಲವನು ಬಲ್ಲ ಸರ್ವಜ್ಞನಯ್ಯಾ,
ಆತನೆ ಸದ್ಭಕ್ತನು ಕೂಡಲಚೆನ್ನಸಂಗಮದೇವಾ. ॥ ೮೦೬ ॥

೧೬೬೦

ಶಿವನಲ್ಲದೆ ಮತ್ತೆ ದೈವವಿಲ್ಲೆಂದುದು ವೇದ.
ಉಳ್ಳಡೆ, ದಕ್ಷನ ಜನ್ನ ತಾನೆ ಹೇಳದೆ?
ಉಳ್ಳಡೆ ಕ್ರತುವನು ಕಾಯಲಾಗದೆ?
ಉಳ್ಳಡೆ ತಮ್ಮ ತಮ್ಮ ಶಿರಗಳ ಹೋಗಲಾಡಿಕೊಳಲೇಕೆ?
ಈ ಕ್ರತುಗಳಿಗೆ 'ಶಿವನೇಕೋ ದೇವ' ಎಂದುದು ಋಗ್ವೇದ.
'ಆವೋ ರಾಜಾನಮಧ್ವರಸ್ಯ ರುದ್ರಂ
ಹೋತಾರಂ ಸತ್ಯ ಯಜುಂ ರೋದಸ್ಯೋಃ।
ಅಗ್ನಿಂ ಪುರಾತನಯಿತ್ನೋರಚಿತ್ತಾತ್
ಹಿರಣ್ಯರೂಪಮುವಸೇ ಶೃಣುಧ್ವಂ॥ – ಎಂದುದಾಗಿ
ಇಂತೆಂಬ ಶ್ರುತಿಯಿದೆ.
ಇದು ಕಾರಣ– ಕೂಡಲಚೆನ್ನಸಂಗನಿಲ್ಲದಿಲ್ಲ; ನಿಲ್ಲು, ಮಾಣು. ॥ ೮೦೭ ॥

೧೬೬೧

ಶಿವನಿಗೈದು ಮುಖ, ಭಕ್ತನಿಗೈದು ಮುಖ.
ಆವುದಾವುದೆಂದರೆ:

ಗುರುವೊಂದು ಮುಖ, ಲಿಂಗವೊಂದು ಮುಖ, ಜಂಗಮವೊಂದು ಮುಖ,
ಪಾದೋದಕವೊಂದು ಮುಖ, ಪ್ರಸಾದವೊಂದು ಮುಖ.
ಇಂತೀ ಪಂಚ ಮುಖವನರಿಯದ
ವೇಶಿ, ದಾಸಿ, ಸುಂಕಿಗ, ಮಣಿಹಗಾರ, ವಿದ್ಯಾವಂತ
ಇಂತೀ ಐವರಿಗೆ ಲಿಂಗವ ಕಟ್ಟಿದಡೆ
ಗುಡಿಯ ಮುಂದಣ ಶೃಂಗಾರದ ಗಂಟೆ, ಎಮ್ಮೆಯ ಕೊರಳಗಂಟೆ
ಕೊಟ್ಟಿಯ ಮೆಳೆಯೊಳಗೆ ಇಟ್ಟು ಸಿಕ್ಕಿದ ಕಲ್ಲು!
ಲಿಂಗ ವಿಭೂತಿ ರುದ್ರಾಕ್ಷಿ ಇವ ಮಾರಾಟಕ್ಕೆ ಹೇರಿಕೊಂಡು ತಿರುಗುವ
ಎತ್ತು ಕತ್ತೆಗೆ ಮುಕ್ತಿಯುಂಟೆ? ಕೂಡಲಚೆನ್ನಸಂಗಮದೇವಾ. || ೮೧೮ ||

೧೬೬೨

ಶಿವಭಕ್ತನಾದ ಬಳಿಕ ಭವಿ ಮಿಶ್ರವ ನಡೆಯಲಾಗದು
ಅನ್ಯದೈವದ ಭಜನೆಯು ಮಾಡಲಾಗದು.
'ಮಾತರಃ ಪಿತರಶ್ಚೈವ ಭರ್ತಾರೋ ಬಾಂಧವಸ್ತಥಾ!
ಶಿವಸಂಸ್ಕಾರವಿಹೀನಾಶ್ಚೇತ್ ಪಾಕೋ ಗೋಮಾಂಸಭಕ್ಷಣಂ'|| ಎಂದುದಾಗಿ
ಕೂಡಲಚೆನ್ನಸಂಗಯ್ಯಾ ನಿಮ್ಮ ಲಿಂಗಸಂಗಿಗಳಂಗವಿಸರು. || ೮೧೯ ||

೧೬೬೩

ಶಿವಭಕ್ತಿಯುಳ್ಳವಂಗೆ:
ಕಾಮ ಬೇಡ, ಕ್ರೋಧ ಬೇಡ, ಲೋಭ ಬೇಡ;
ಮೋಹ ಬೇಡ, ಮದ ಬೇಡ, ಮತ್ಸರ ಬೇಡ.
ಶಿವಭಕ್ತಿಯುಳ್ಳವಂಗೆ:
ಕಾಮ ಬೇಕು, ಕ್ರೋಧ ಬೇಕು, ಲೋಭ ಬೇಕು,
ಮೋಹ ಬೇಕು, ಮದ ಬೇಕು, ಮತ್ಸರ ಬೇಕು.
ಬೇಕೆಂಬುದಕ್ಕಾವ ಗುಣ?
ಕಾಮ ಬೇಕು ಲಿಂಗದಲ್ಲಿ, ಕ್ರೋಧ ಬೇಕು ಕರಣಂಗಳಲ್ಲಿ,
ಲೋಭ ಬೇಕು ಪಾದೋದಕ ಪ್ರಸಾದದಲ್ಲಿ,
ಮೋಹ ಬೇಕು ಗುರುಲಿಂಗ ಜಂಗಮದಲ್ಲಿ,
ಮದ ಬೇಕು ಶಿವಾಚಾರದಿಂದ ಘನವಿಲ್ಲವೆಂದು,
ಮತ್ಸರ ಬೇಕು ಹೊನ್ನು ಹೆಣ್ಣು–ಮಣ್ಣಿನಲ್ಲಿ– ಇಂತೀ ಷಡ್ಗುಣವಿರಬೇಕು.
ಬೇಡವೆಂಬುದಕ್ಕಾವುದು ಗುಣ?
ಕಾಮ ಬೇಡ ಪರಸ್ತ್ರೀಯರಲ್ಲಿ, ಕ್ರೋಧ ಬೇಡ ಗುರುವಿನಲ್ಲಿ,
ಲೋಭ ಬೇಡ ತನು ಮನ ಧನದಲ್ಲಿ, ಮೋಹ ಬೇಡ ಸಂಸಾರದಲ್ಲಿ,

ಮದ ಬೇಡ ಶಿವಭಕ್ತರಲ್ಲಿ, ಮತ್ಸರ ಬೇಡ ಸಕಲಪ್ರಾಣಿಗಳಲ್ಲಿ.–
ಇಂತೀ ಷಡ್ಗುಣವನರಿದು ಮೆರೆಯಬಲ್ಲಡೆ
ಆತನೇ ಸಹಜ ಸದ್ಭಕ್ತ ಕಾಣಾ ಕೂಡಲಚೆನ್ನಸಂಗಮದೇವಾ. ॥ ೮೧೦ ॥

೧೬೬೪

ಶಿವಭಕ್ತಿಯೆ ಶಿವಾನುಗ್ರಹಕ್ಕೆ ಕಾರಣವಾಗಿರ್ಪುದು ನೋಡಾ.
ಶಿವಾನುಗ್ರಹವೆ ಇಹಪರ ಸುಖಕ್ಕೂ ಪರಮಾನಂದ ಪ್ರಾಪ್ತಿಗೂ
ಕಾರಣವಾಗಿರ್ಪುದು ನೋಡಾ.
'ಯೋಗೇನ ತು ಪರಾಭಕ್ತಿಃ ಪ್ರಸಾದಸ್ತದನಂತರಂ।
ಪ್ರಸಾದಾನ್ಮುಚ್ಯತೇ ಜಂತುರ್ಮುಕ್ತಶ್ಶಿವಸಮೋ ಭವೇತ್॥
ಎಂದಿಪುದನಾರಯ್ಯದೆ, ಎನ್ನ ನಂಬುಗೆ ಎನ್ನ ಕಟ್ಟುಕ್ರಿಯಾದಿಗಳಿಂದ
ಸರ್ವಸುಖ ಪಡೆವನೆಂಬ ಜೀವಭಾವದ ಹಮ್ಮಿನ ಬಿಮ್ಮುಹತ್ತಿ
ಮುಂದುಗಾಣದ ಮಂದಮತಿಗೆ ಮೆಚ್ಚುವರೆ
ಕೂಡಲಚೆನ್ನಸಂಗಯ್ಯನ ಶರಣರು? ॥ ೮೧೧ ॥

೧೬೬೫

ಶಿವಲಿಂಗಮೋಹಿತನಾದಡೆ ಅನ್ಯಮೋಹವ ಮರೆಯಬೇಕು.
ಶಿವಲಿಂಗ ಭಕ್ತನಾದಡೆ ಅನ್ಯದೈವದ ಭಜನೆ ಮಾಡಲಾಗದು.
ಶಿವಲಿಂಗಪೂಜಕನಾದಡೆ ಅನ್ಯದೈವದ ಪೂಜೆಯ ಮಾಡಾಗದು.
ಶಿವಲಿಂಗವೀರನಾದಡೆ ಪುಣ್ಯಕ್ಷೇತ್ರಂಗಳ ಕುರಿತು ಹೋಗಲಾಗದು.
ಶಿವಲಿಂಗಪ್ರಸಾದಿಯಾದಡೆ ಅಂಗಭೋಗವ ಮರೆಯಬೇಕು.
ಶಿವಲಿಂಗಪ್ರಾಣಿಯಾದಡೆ ಸತಿಸಂಗವ ಮಾಡಲಾಗದು.
ಇದು ಕಾರಣ– ಕೂಡಲಚೆನ್ನಸಂಗಯ್ಯನಲ್ಲಿ
ಈ ಆರು ಸಹಿತ ಶಿವಲಿಂಗಭಕ್ತ. ॥ ೮೧೨ ॥

೧೬೬೬

ಶಿವಲಿಂಗವ ನೋಡುವ ಕಣ್ಣಲ್ಲಿ
ಪರಸ್ತ್ರೀಯ ನೋಡಿದಡೆ ಅಲ್ಲಿ ಲಿಂಗವಿಲ್ಲ.
ಪರಬ್ರಹ್ಮವ ನುಡಿವ ಜಿಹ್ವೆಯಲ್ಲಿ,
ಪರಸ್ತ್ರೀಯರ ಅಧರಪಾನವ ಕೊಂಡಡೆ ಪ್ರಸಾದಕ್ಕೆ ದೂರ.
ಘನಲಿಂಗವ ಪೂಜಿಸುವ ಕೈಯಲ್ಲಿ,
ಪರಸ್ತ್ರೀಯರ ಕುಚವ ಮುಟ್ಟಿದಡೆ, ತಾ ಮಾಡಿದ ಪೂಜೆ ನಿಷ್ಫಲ.

ಇದನರಿಯದಿರ್ದಡೆ ಬಳ್ಳದಲ್ಲಿ ಸುರೆಯ ತುಂಬಿ
ಮೇಲೆ ಬೂದಿಯ ಹೂಸಿದಂತಾಯಿತ್ತು ಕಾಣಾ
ಕೂಡಲಚೆನ್ನಸಂಗಮದೇವಾ. ॥ ೮೧೩ ॥

೧೬೬೭

ಶಿವಲಿಂಗಾರ್ಚನೆಯ ಮಾಡಿ ಶಿವಾರ್ಪಿತಕ್ಕೆ ಕೈದೆಗೆದಡೆ
ಅದು ಲಿಂಗಾರ್ಪಿತಕ್ಕೆ ನೈವೇದ್ಯ ತನಗೆ ಪ್ರಸಾದವಹುದು.
ಇದು ಕಾರಣ– ಕೂಡಲಚೆನ್ನಸಂಗಮದೇವ
ಇಂತಪ್ಪ ಸಮಯೋಚಿತ ಉಳ್ಳವರ ಎನಗೆ ತೋರಯ್ಯಾ. ॥ ೮೧೪ ॥

೧೬೬೮

ಶಿವ ಲೋಕವನಿಚ್ಛೈಸಿ ಶಿವಪೂಜೆಯಂ ಗೈದೊಡೆ
ಮುಂದೆ ಶಿವಲೋಕವನೈದಿ ಅನಂತಕಾಲ ಶಿವಸುಖವನಭವಿಸುತಿರ್ದು
ಆ ಪುಣ್ಯವು ತೀರಲೊಡನೆ ಮರಳಿ ಧರೆಗಿಳಿದು
ಪೂರ್ವಪುಣ್ಯಸಂಸ್ಕಾರದಿಂದ ಸತ್ಕುಲದಲ್ಲಿ ಹುಟ್ಟುತಿರ್ಪನು ನೋಡಾ!
"ಅನೇಕ ಯುಗಸಾಹಸ್ರಂ ಭುಕ್ತ್ವಾ ಭೋಗಾನನೇಕಧಾ।
ಪುಣ್ಯೇ ಕ್ಷಯೇ ಕ್ಷೀಣಪಾಪಃ ಕುಲೇ ಮಹತಿ ಜಾಯತೇ॥" ಎಂದುದಾಗಿ,
ಶಿವಕುಲದಲ್ಲಿ ಹುಟ್ಟಿ ಶಿವಸಂಸ್ಕಾರ ಹೊಂದಿ
ಸದ್ಗುರುವಿನಿಂದ ಲಿಂಗಸಾಮರಸ್ಯ ಪಡೆದು
ಅಷ್ಟಾವರಣವೆ ಅಂಗ, ಪಂಚಾಚಾರವೆ ಪ್ರಾಣವಾಗಿ ನಡೆದು
ಕಡೆಗೆ ಚಿರಸುಖಿಯಾಗುತಿರ್ಪನು ನೋಡಾ
ಕೂಡಲಚೆನ್ನಸಂಗಮದೇವಾ. ॥ ೮೧೫ ॥

೧೬೬೯

ಶಿವಶರಣ ತಾನಾದ ಬಳಿಕ,
ಪುರಗಣಂಗಳಂಘ್ರಿಯಲ್ಲಿ ಸಮ್ಮಲಲಾಟನಾಗಿರಬೇಕು.
ಪತಿವ್ರತೆ ತಾನಾದ ಬಳಿಕ,
ವಲ್ಲಭನ ಸರ್ವೋಪಚಾರದಲ್ಲಿ ಲೀನೆಯಾಗಿರಬೇಕು.
ಇದು ಕಾರಣ– ಶಿವಶರಣರು ಪುರಗಣಂಗಳ ಕಂಡು ಮಣಿಯದಿದ್ದಡೆ
ಕೂಡಲಚೆನ್ನಸಂಗಮದೇವರು ಕೊಡುವ ಮುಕ್ತಿಯಲ್ಲಿ ಮೌನರು ಕಾಣಾ
ಸಿದ್ಧರಾಮಯ್ಯ. ॥ ೮೧೬ ॥

೧೬೭೦

ಶಿವ ಶಿವಾ ಆವನಾನೊಬ್ಬನು ಶ್ರೀಮಹಾದೇವನ
ದಿವ್ಯಕಾಂತಿಯಿಂದೊಗೆದ ಶ್ರೀಮಹಾಭಸಿತವ ಬಿಟ್ಟು
ಹಣೆಯಲ್ಲಿ ಗೋಪಿ ಮಲಿನ ಸಾದು ಕಸ್ತೂರಿ ಚಂದನಗಳೆಂಬ
ಮಣ್ಣುಮಸಿಗಳಿಂದ ನೀಳ ಬೊಟ್ಟು, ಕಾಗೆವರೆಬೊಟ್ಟು, ಹೂಬೊಟ್ಟು
ಅರ್ಧಚಂದ್ರರೇಖೆ, ಅಂಕುಶದ ರೇಖೆ ಮೊದಲಾದ ಕಾಕುವರೆಗಳ
ವಿಶ್ವಾಸದಿಂದ ಇಡುತಿಪ್ಪ ಪಾತಕರ ಮುಖವ ನೋಡಲಾಗದು.
ಸುಡು! ಅದು ಅಶುದ್ಧ, ಅದು ಪಾಪದ ರಾಶಿ, ಅದ ನೋಡಿದಡೆ ಮಹಾದೋಷ
ಅದೆಂತೆಂದಡೆ, ಪಾರಾಶರಪುರಾಣದಲ್ಲಿ:
ಊರ್ಧ್ವಪುಂಡ್ರಂ ಚ ಶೂಲಂ ಚ ವರ್ತುಲಂ ಚಾರ್ಧಚಂದ್ರಕಂ।
ಲಲಾಟೇ ಧಾರಯಿಷ್ಯಂತಿ ಮನುಷ್ಯಾಃ ಪಾಪಕರ್ಮಿಣಃ॥
ಮತ್ತಂ ಶಾಂಭವಪುರಾಣದಲ್ಲಿ:
ಅಶುದ್ಧಂಚ ತಥಾ ಪ್ರೋಕ್ತಂ ವರ್ತುಲಂ ಚೋರ್ಧ್ವಪುಂಡ್ರ ಕಂ।
ಅಶುದ್ಧಂ ಚಾರ್ಧಚಂದ್ರಂ ಚ ಕೀರ್ತಿತಂ ತು ಕುಶಾದಿಭಿಃ॥
ಮತ್ತಂ ಸೂತಸಂಹಿತೆಯಲ್ಲಿ:
ಅಶ್ರೌತಂ ಚೋರ್ಧ್ವಪುಂಡ್ರಂ ತು ಲಲಾಟೇ ಶ್ರದ್ಧಯಾ ಸಹ।
ಧಾರಯಿಷ್ಯಂತಿ ಮೋಹೇನ ಪಾಷಂಡೋಪಹತಾ ಜನಾಃ।
ಮತ್ತಂ ಮಾನವಪುರಾಣದಲ್ಲಿ:
ಊರ್ಧ್ವಪುಂಡ್ರಂ ಚ ಶೂಲಂ ಚ ವರ್ತುಲಂ ಚಾರ್ಧಚಂದ್ರಕಂ।
ತತ್ವನಿಷ್ಠೈರ್ನಧಾರ್ಯಂ ಚ ನ ಧಾರ್ಯಂ ವೈದಿಕೈರ್ಜನೈಃ॥
ಊರ್ಧ್ವಪುಂಡ್ರಂ ಮುಖಂ ದೃಷ್ಟ್ವಾ ವ್ರತಂ ಚಾಂದ್ರಾಯಣಂ ಚ ರೇತ್॥
ಮತ್ತಂ ಸ್ಕಂದಪುರಾಣದಲ್ಲಿ:
ಊರ್ಧ್ವಪುಂಡ್ರಂ ದ್ವಿಜಃ ಕುರ್ಯಾತ್ ಲೀಲಯಾಽಪಿ ಕದಾಚನ।
ತದಾಕಾರೇಣ ಶಸ್ತ್ರೇಣ ಬಾಧ್ಯತೇ ಯಮ ಕಿಂಕರೈಃ॥ ಎಂದುದಾಗಿ,
ಶ್ರೀಮಹಾವಿಭೂತಿಯ ಬಿಟ್ಟು
ವೇದವಿರುದ್ಧವಾದ ಮಟ್ಟಿಮಸಿಗಳ ಹಣೆಯಲ್ಲಿ ಇಡುತಿಪ್ಪ
ಪಂಚಮಹಾಪಾತಕರ ಮುಸುಡ ನೋಡಲಾಗದು ಕಾಣಾ
ಕೂಡಲಚೆನ್ನಸಂಗಮದೇವಾ. ॥ ೮೧೭ ॥

೧೬೭೧

ಶಿವ ಶಿವಾ! ಕನಸಿನಲ್ಲಿ ಜಂಗಮವ ಕಂಡು,
ಮನಸ್ಸಿನಲ್ಲಿ ಗುಡಿಯ ಕಟ್ಟುವರಯ್ಯಾ!
ನೆಟ್ಟನೆ ಮನೆಗೆ ಜಂಗಮ ಬಂದಡೆ ಕೆಟ್ಟೆವಿನ್ನೇನ ಬೇಡಿಯಾರೆಂಬ

ಕಷ್ಟ ಜೀವಿಯ ಭಕ್ತಿಯಂತಾಯಿತ್ತು ವ್ರತಸ್ಥನ ಭಕ್ತಿ.
ಕಾಗೆ ತಮ್ಮ ದೇವರೆಂದು ಕರೆದು ತಮ್ಮ ಮನೆಯ ಮೇಲೆ ಕೂಳ ಹಾಕಿ
ಕೈಮುಗಿದು ಬೇಡಿಕೊಂಬರಯ್ಯಾ, ಆ ಕಾಗೆ ಬಂದು ಮನೆಯ ಹೊಕ್ಕಡೆ
ಒಕ್ಕಲೆತ್ತಿ ಹೋಹ ಮರ್ಕಟನ ಭಕ್ತಿಯುಂತಾಯಿತ್ತಯ್ಯಾ ನೇಮಸ್ಥನ ಭಕ್ತಿ.
ಹಾವು ತಮ್ಮ ದೇವರೆಂದು ಹಾಲನೆರೆದು ಕೈಮುಗಿದು ಬೇಡಿಕೊಂಬರಯ್ಯಾ
ಆ ಹಾವ ಕಂಡಡೆ ಹೆದರಿ ಓಡುವ
ಭಾವಭ್ರಮಿತರ ಭಕ್ತಿಯುಂತಾಯಿತ್ತಯ್ಯಾ ಶೀಲವಂತನ ಭಕ್ತಿ.
ಹೊಸ್ತಿಲ ದೇವರೆಂದು ಪೂಜಿಸಿ ಮರಳಿ ಇಕ್ಕಾಲಿಕ್ಕಿ ದಾಂಟಿ ಹೋಹ
ಒಕ್ಕಲಗಿತ್ತಿಯ ಭಕ್ತಿಯಂತಾಯಿತ್ತಯ್ಯಾ, ಭಾಷೆವಂತನ ಭಕ್ತಿ.
ಕೆರಹ ಕಳೆದು ಕೈಯ ತೊಳೆದು ಸಗ್ಗಳೆಯ ನೀರ ಕುಡಿದ
ಬ್ರಾಹ್ಮಣನ ಭಕ್ತಿಯಂತಾಯಿತ್ತಯ್ಯಾ ಸಮಯಾಚಾರಿಯ ಭಕ್ತಿ.
ನಾಯ ನಡು ಸಣ್ಣದೆಂದು ಅಂದಣವನೇರಿಸಿದಡೆ
ಆ ನಾಯಿ ಎಲುವ ಕಂಡಿಳಿದಂತಾಯಿತ್ತಯ್ಯಾ ನಿತ್ಯಕೃತ್ಯನಭಕ್ತಿ–
ಇಂತೀ ಆರು ಪ್ರಕಾರದ ದೃಷ್ಟಾಂತಗಳ ತೋರಿ ಹೇಳಿದೆ.
ಅಂತು ಭಕ್ತನು ಜಂಗಮವೆ ಶಿವನೆಂದರಿದು
ಪಾದೋದಕ ಪ್ರಸಾದವ ಕೊಂಡು ನಮಸ್ಕರಿಸಿದ ಬಳಿಕ
ಮತ್ತಾ ಜಂಗಮ ಮನೆಗೆ ಬಂದು,
ಹೊನ್ನು [ವಸ್ತ್ರಾದಿ] ಮುಟ್ಟಿಯಾರೆಂಬ ಅಳುಕುಂಟೆ ಸದ್ಭಕ್ತಂಗೆ?
ಇಲ್ಲವಾಗಿ, ಅಂದಂತೆಂದಡೆ, ಲೈಂಗ್ಯೇ:

ಅರ್ಥ ಪ್ರಾಣಾಭಿಮಾನೇಷು ವಂಚನಂ ನೈವ ಕುತ್ರಚಿತ್।
ಯಥಾ ಭಾವಸ್ತಥಾ ದೇವಶ್ಚರೋಚ್ಛಿಷ್ಟಂ ವಿಶೇಷತಃ॥
ಸ್ವೇಷ್ಟಲಿಂಗಾಯ ದತ್ವಾ ತು ಪುನಃ ಸೇವೇತ ಭಕ್ತಿಮಾನ್।
ಸ ಏವ ಷಟ್‌ಸ್ಥಲ ಬ್ರಹ್ಮೀ ಪ್ರಸಾದೀ ಸ್ಯಾನ್ಮಹೇಶ್ವರಃ॥

–ಇಂತೆಂಬ ಪುರಾಣ ವಾಕ್ಯವನರಿಯದೆ
ಅಳುಕುಳ್ಳಡೆ ಸುಡುಸುಡು, ಅವನು ಗುರುದ್ರೋಹಿ ಆಚಾರಭ್ರಷ್ಟ ವ್ರತಗೇಡಿ
ನರಮಾಂಸಭುಂಜಕ ಜಂಗಮನಿಂದಕ ಪಾಪಂಡಿ ದೂಷಕ.
ಆತನ ಹಿಡಿದು ಹೆಡಗುಡಿಯ ಕಟ್ಟಿ ಮೂಗನುತ್ತರಿಸಿ ಇಟ್ಟಿಗೆಯುಲೊರಸಿ
ಅನಂತಕಾಲ ಕೆಡಹುವ ನಮ್ಮ ಕೂಡಲಚೆನ್ನಸಂಗಮದೇವ. ॥ ೮೧೮ ॥

೧೬೭೨

ಶಿವ ಶಿವಾ ಮೂರ್ತಿಗೆ ಸತ್ಯಶುದ್ಧವುಂಟೆಂಬಿರಿ:
ಸತ್ಯಶುದ್ಧವುಳ್ಳವಂಗೆ ಗುರುವಿಲ್ಲ; ಸತ್ಯಶುದ್ಧವುಳ್ಳವಂಗೆ ಲಿಂಗವಿಲ್ಲ;
ಸತ್ಯಶುದ್ಧವುಳ್ಳವಂಗೆ ಜಂಗಮವಿಲ್ಲ, ಸತ್ಯಶುದ್ಧವುಳ್ಳವಂಗೆ ಪ್ರಸಾದವಿಲ್ಲ,

ಸತ್ಯಶುದ್ಧವುಳ್ಳವಂಗೆ ಗೌಣತ್ವವಿಲ್ಲ ಕೇಳಿರೆ.
ಸತ್ಯಶುದ್ಧಲಿಂಗಕ್ಕೆ ಉಪಚಾರವುಂಟು,
ಸತ್ಯಶುದ್ಧಗುರುವಿಂಗೆ ಧ್ಯಾನಮೌನಾನುಷ್ಠಾನವುಂಟು.
ಸತ್ಯಶುದ್ಧ ಉಪದೇಶಕ್ಕೆ ಜಪ ತಪ ಪೂಜೆ ಸಮಾಧಿ ಹೋಮ ನಿಯಮ
ನಿತ್ಯ ಅಷ್ಟವಿಧಾರ್ಚನ ಷೋಡಶೋಪಚಾರವುಂಟು.
ಇಂತಪ್ಪ ಸತ್ಯಶುದ್ಧ ಗುರುವಿಂಗೆ ಶರಣೆನ್ನೆ,
ಇಂತಪ್ಪ ಸತ್ಯಶುದ್ಧ ಲಿಂಗಕ್ಕೆ ಶರಣೆನ್ನೆ;
ಇಂತಪ್ಪ ಸತ್ಯಶುದ್ಧ ಜಂಗಮಕ್ಕೆ ಶರಣೆನ್ನೆ,
ಇಂತಪ್ಪ ಸತ್ಯಶುದ್ಧ ಪ್ರಸಾದಕ್ಕೆ ಕೈಯಾನೆ.
ಇವರೆಲ್ಲರು ಬ್ರಹ್ಮನ ಮಕ್ಕಳು! ಎನಗೆ ಸತ್ಯವೂ ಇಲ್ಲ, ಅಸತ್ಯವೂ ಇಲ್ಲ.
ಆವ ಸಹಜವೂ ಇಲ್ಲದ ಲಿಂಗೈಕ್ಯನು ಕಾಣಾ
ಕೂಡಲಚೆನ್ನಸಂಗಮದೇವಾ. ॥ ೮೧೯ ॥

೧೬೭೩

ಶಿವಸಂಸ್ಕಾರಿಯಾಗಿ ಅಂಗದ ಮೇಲೆ ಲಿಂಗವ ಧರಿಸಿ,
ಆ ಲಿಂಗವೆ ತನ್ನಂಗ ಮನ ಪ್ರಾಣದಲ್ಲಿ ಹಿಂಗದಿರ್ದುದ ಕಂಡು,
ನಂಬಿ ಪೂಜಿಸಿ ಪ್ರಸಾದವ ಪಡೆದು ಲಿಂಗೈಕ್ಯರಾಗಲರಿಯದೆ,
ತನ್ನಂಗಲಿಂಗಸಂಬಂಧಕ್ಕನ್ಯವಾದ, ಭವಿ ಶೈವದೈವಕ್ಕೆ
ಎರಗುವ ಕುನ್ನಿಗಳಿಗೆ ಅಘೋರನರಕ, ಅದೆಂತೆಂದಡೆ:
“ಇಷ್ಟಲಿಂಗ ಪರಿತ್ಯಜ್ಯಂ ಅನ್ಯಲಿಂಗಮುಪಾಸತೇ।
ಪ್ರಸಾದಂ ನಿಷ್ಫಲಂ ಚೈವ ರೌರವಂ ನರಕಂ ವ್ರಜೇತ್॥ ಎಂದುದಾಗಿ
ಅಲ್ಲಲ್ಲಿ ಧರೆಯ ಮೇಲಿಪ್ಪ ಭವಿದೈವ ಸ್ಥಾವರಕ್ಕೆ ಹರಿಯಲಾಗದು.
ಪ್ರಾಣಲಿಂಗಸಂಬಂಧಿಗೆ ಅದು ಪಥವಲ್ಲ.
ತನ್ನ ಭವಿತನವ ಬಿಟ್ಟು ಭಕ್ತನಾದ ಬಳಿಕ ಆ ಭವವಿರಹಿತಲಿಂಗಕ್ಕೆ
ಭವಿಪಾಕವ ನಿವೇದಿಸಿದರೆ ಅದು ಕಿಲ್ಬಿಷ, ಅದೆಂತೆಂದೊಡೆ:
“ಭವಿಹಸ್ತಂ ಕೃತಂ ಪಾಕಂ ಲಿಂಗನೈವೇದ್ಯ ಕಿಲ್ಬಿಷಂ।
ಶಿವಭಕ್ತ ಕೃತಂ ಪಾಕಂ ಲಿಂಗನೈವೇದ್ಯಮುತ್ತಮಂ॥ ಎಂದುದಾಗಿ
ತಾ ಶಿವಭಕ್ತನಾಗಿ ಭವಿಪಾಕ ಭವಿಪಂಥ ಭವಿಶೈವದೈವ, ಭವಿತಿಥಿವಾರಕೂಟ
ಭವಿವರ್ತನಾಕ್ರೀಯನೊಡಗೂಡಿಕೊಂಡು ನಡೆದನಾದಡೆ,
ಕೂಡಲಚೆನ್ನಸಂಗಯ್ಯ ಅಘೋರನರಕದಲ್ಲಿಕ್ಕುವ. ॥ ೮೨೦ ॥

೧೬೭೪

ಶಿವಸ್ವರೂಪವನರಿದು ಶಿವನೊಡನಾಡಿ ಶಿವನೊಡನುಂಡು
ಶಿವಾಕಾರವಾದ ಶಿವಭಕ್ತನು
ದೇವ ದಾನವ ಮಾನವಾದಿಗಳಲ್ಲಿರ್ದಡೇನು? ಆತನು ಹುಟ್ಟುಗೆಟ್ಟನಾಗಿ.
ಆವ ಕುಲ ಜಾತಿಗಳಲ್ಲಿ ಹುಟ್ಟಿದಡೇನು?
ಶಿವಜ್ಞಾನಸಿದ್ಧನಾದ ಶಿವಭಕ್ತನು
ಸಾಧಾರಂತೆ ವರ್ಣಾಶ್ರಮದ ಅಭಿಮಾನಕ್ಕೊಳಗಪ್ಪನೆ? ಇಲ್ಲಿಲ್ಲ.
ಶಿವಭಕ್ತಾ ಮಹಾತ್ಮಾನಸ್ಸಂತಿ ದೇವೇಷು ಕೇಚನ।
ದೈತ್ಯೇಷುಯಾತು ಧಾನೇಷು ಯಕ್ಷಗಂಧರ್ವ ಭೋಗಿಷು॥
ಮುನೀಶ್ವರೇಷು ಮೂರ್ತೇಷು ಬ್ರಾಹ್ಮಣೇಷು ನೃಪೇಷು ಚ।
ಊರುಜೇಷು ಚ ಶೂದ್ರೇಷು ಸಂಕರೇಷ್ವಪಿ ಸರ್ವಶಃ।
ವರ್ಣಾಶ್ರಮ ವ್ಯವಸ್ಥಾಶ್ಚ ನೈಷಾಂ ಸಂತಿ ಮುನೀಶ್ವರಾಃ।
ಕೇವಲಂ ಶಿವರೂಪಾಸ್ತೇ ಸರ್ವೇ ಮಾಹೇಶ್ವರಾಃ ಸ್ಮೃತಾಃ॥
ಎಂದುದಾಗಿ, ಹೇಯವಾದ ಮಾಯೆಯು ನಾಯಿಯುತೆ ಅಳಿದುಳಿದು
ಭಕ್ತನು ಮಾಹೇಶ್ವರನೆನಿಸಿಕೊಂಬನಾಗಿ,
ಜಡ ಮಾಯಾಧರ್ಮವ ಹೊದ್ದಲಮ್ಮನು ಕಾಣಾ.
ಕೂಡಲಚೆನ್ನಸಂಗಮದೇವಾ, ॥ ೮೨೧ ॥

೧೬೭೫

ಶಿವಾಚಾರವೆ ಅಂಗ, ಶಿವಭಕ್ತಿಯೆ ಅಂಗ, ಶಿವಶರಣರ ನಿಷ್ಠೆಯೆ ಅಂಗ.
ಅಂಗಲಿಂಗಸಂಗವೆಂದೂ ಹಿಂಗದುದು ಸಹಜಸಂಗ. ಆವ ಪದಾರ್ಥವಾದಡೇನು?
ತನ್ನ ನೇಮಿಸಿ ಬಂದುದ ಸಕಲೇಂದ್ರಿಯಂಗಳ ಹೊದ್ದಲೀಯದೆ
ಭಾವಮುಖದಲ್ಲಿಯೆ ಸಂಧಿಸಿ
ಕೂಡಲಚೆನ್ನಸಂಗಯ್ಯಂಗರ್ಪಿಸಿ ಕೊಳಬಲ್ಲಡೆ
ಅದೆ ಅಂಗಲಿಂಗಸಂಯೋಗ. ॥ ೮೨೨ ॥

೧೬೭೬

ಶಿಷ್ಯನ ಪೂರ್ವಾಶ್ರಯವ ಕಳೆವುದು ಗುರುವಿಗೆ ಸಹಜ.
ಶಿಷ್ಯನು ತನ್ನ ಪೂರ್ವಾಶ್ರಯವ ಕಳೆದು
ಶ್ರೀಗುರುಲಿಂಗವ ಮುಟ್ಟುವ ಪರಿ ಎಂತೊ?
ಅರ್ಪಿತ ಹೋಗಿ, ಪ್ರಸಾದವನರಸುವುದೊ?
ಕೂಡಲಚೆನ್ನಸಂಗಯ್ಯನಲ್ಲಿ, ಮಹಾಪ್ರಸಾದಿಯೆ ಬಲ್ಲ. ॥ ೮೨೩ ॥

೧೬೭೭

ಶಿಷ್ಯನ ಪೂರ್ವಾಶ್ರಯವು ಗುರುವಿನಿಂದಡಗಿತ್ತು.
ಇಂದ್ರಿಯಂಗಳ ಪೂರ್ವಾಶ್ರಯವು, ಗುರುವಿಂದ ಹೋಗದು,
ಲಿಂಗದಿಂದ ಹೋಗದು.
ತನ್ನಿಂದ ಅಹುದು, ತನ್ನಿಂದ ಹೋಹುದು.
ಕಾಲಚಕ್ರ ಕರ್ಮಚಕ್ರ ನಾದಚಕ್ರ ಬಿಂದುಚಕ್ರವುಳ್ಳನ್ನಕ್ಕರ
ಶರಣನೆನಿಸಿಕೊಳಬಾರದು ಕಾಣಾ
ಕೂಡಲಚೆನ್ನಸಂಗಮದೇವಾ. ॥ ೮೨೪ ॥

೧೬೭೮

ಶಿಷ್ಯನ ಬರವ ಕಂಡು, ಬಂದು ಪಾದದ ಮೇಲೆ ಬೀಳುವಾತ ಗುರುಲಿಂಗ;
ಮಂಡೆಯ ಹಿಡಿದೆತ್ತುವಾತ ಶಿಷ್ಯ.
ಶಿಷ್ಯನ ಸಿಂಹಾಸನದಲ್ಲಿ ಕುಳ್ಳಿರಿಸಿ ಪಾದಾರ್ಚನೆಯ ಮಾಡುವಾತ ಗುರುಲಿಂಗ,
ಮಾಡಿಸಿಕೊಂಬಾತ ಶಿಷ್ಯ.
ಶಿಷ್ಯ ಆರೋಗಣೆಯ ಮಾಡುತ್ತಿದ್ದಾನೆಂದು ಬಂದು
ಪ್ರಸಾದವ ಕೊಂಬಾತ ಗುರುಲಿಂಗ;
ಇಕ್ಕುವಾತ ಶಿಷ್ಯ.
ಇದು ಕಾರಣ–ದ್ವಿವಿಧ ಸಂಚ ಸನುಮತವಾಯಿತ್ತು ಕೂಡಲಚೆನ್ನಸಂಗಾ
ನಿಮ್ಮ ಶರಣಂಗೆ. ॥ ೮೨೫ ॥

೧೬೭೯

ಶಿಷ್ಯನ ಸ್ತುತಿಯಲ್ಲಿ ಗುರು ಸಂತುಷ್ಟನಾಗಬೇಕೆಂದಡೆ
ಅಲ್ಲಿ ಗುರುವಿನ ಅಪ್ಪಣೆಯೊಂದುಂಟು.
ಅದೇನೆಂದಡೆ:
ಕೇಳುವೆನೆಂಬ ಭಾವ ತೋರದಡೆ
ಸರ್ವರು ಕೂಡಲಚೆನ್ನಸಂಗನ ಶರಣರು ಕಾಣಾ ಸಿದ್ಧರಾಮಯ್ಯಾ. ॥ ೮೨೬ ॥

೧೬೮೦

ಶೀಲವಂತರೆಲ್ಲ ಅಂತಿರಲಿ,
ತಮ್ಮ ತಮ್ಮ ಮನದಿ ಮದವ ಕಳೆದು
ತಮ್ಮೊಳಗಿರ್ದ ಭವಿಗಳ ಭಕ್ತರ ಮಾಡಿ

ತಮ್ಮಲ್ಲಿರುವ ಅಷ್ಟಮದಂಗಳು, ಸಪ್ತವ್ಯಸನಂಗಳು,
ಅರಿಷಡ್ವರ್ಗಂಗಳು, ಪಂಚಭೂತಂಗಳು,
ಚತುಷ್ಕರಣಂಗಳು, ತ್ರಿಕರಣಂಗಳು, ತ್ರಿಗುಣಂಗಳು
ಶಿವಸಂಸ್ಕಾರದಿಂದ ಲಿಂಗಕರಣಂಗಳೆಂದೆನಿಸಿ
ನಿತ್ಯ ಲಿಂಗಾರ್ಚನೆಯು ಮಾಡಬಲ್ಲಾತನೆ ಶೀಲವಂತನಯ್ಯಾ.
ಅವನ ಶ್ರೀಪಾದವನು ಹಸ್ತವನೆತ್ತಿ ಹೊಗಳುತಿರ್ದವು ವೇದಂಗಳು:
"ಓಂ ಅಯಂ ಮೇ ಹಸ್ತೋ ಭಗವಾನ್ ಅಯಂ ಮೇ ಭಗವತ್ತರಃ।
ಅಯಂ ಮೇ ವಿಶ್ವಭೇಷಜಃ ಅಯಂ ಶಿವಾಭಿಮರ್ಶಿನಃ॥
ಅಯಂ ಮಾತಾ ಅಯಂ ಪಿತಾ॥"
ಇಂತಪ್ಪ ಲಿಂಗದ ಅರ್ಚನೆಯು ಮಾಡಬಲ್ಲಾತನೆ
ಸಂಬಂಧಿಯೆನಿಸಿಕೊಳ್ಳಬಲ್ಲನಯ್ಯಾ ಕೂಡಲಚೆನ್ನಸಂಗಮದೇವಾ. ॥ ೮೨೭ ॥

೧೬೮೧

ಶೀಲಶೀಲವೆಂದೇನೊ, ಪಿಂಡ ಬ್ರಹ್ಮಾಂಡ ಸಂಯೋಗವಾಗದನ್ನಕ್ಕರ?
ಅಷ್ಟತನುವಿನ ಗುಣಧರ್ಮವನರಿದು ಬಿಡದನ್ನಕ್ಕರ?
ಅಕ್ರೋಧ ಸತ್ಯವಚನ ಸಾವಧಾನ ವ್ರತಾನುಗ್ರಹವಾಗದನ್ನಕ್ಕರ?
"ಅಕ್ರೋಧಃ ಸತ್ಯವಚನಂ ಸಾವಧಾನೋ ದಮಃ ಕ್ಷಮಾ।
ಅನುಗ್ರಹಶ್ಚ ದಾನಂ ಚ ಶೀಲಮೇವ ಪ್ರಶಸ್ಯತೇ॥" ಎಂದುದಾಗಿ,
ಕೂಡಲಚೆನ್ನಸಂಗಮದೇವಯ್ಯಾ, ಶೀಲವೆಂಬುದು ಅಪೂರ್ವ. ॥ ೮೨೮ ॥

೧೬೮೨

ಶೀಲಶೀಲವೆಂಬ ಅಣ್ಣಗಳು ನೀವು ಕೇಳಿರೊ:
ಕಾಮ ಒಂದನೆಯ ಭವಿ, ಕ್ರೋಧ ಎರಡನೆಯ ಭವಿ,
ಲೋಭ ಮೂರನೆಯ ಭವಿ, ಮೋಹ ನಾಲ್ಕನೆಯ ಭವಿ,
ಮದ ಐದನೆಯ ಭವಿ, ಮತ್ಸರ ಆರನೆಯ ಭವಿ.
ಇಂತೀ ಷಡ್ವಿಧಭವಿಯ ತಮ್ಮ ಎದೆಯೊಳಗೆ ಇಂಬಿಟ್ಟುಕೊಂಡು
ಅಂಗದ ಮೇಲೆ ಅವರಿಗೆ ಲಿಂಗವುಂಟೊ? ಇಲ್ಲವೊ?
ಎಂಬ ಜಗಭಂಡರು ನೀವು ಕೇಳಿರೊ:
ಅಚ್ಚಪ್ರಸಾದಿ ನಿಚ್ಚಪ್ರಸಾದಿ!
ಜಲವನೆ ಹೊಕ್ಕು ಕನ್ನವನಿಕ್ಕಿ ಅಗ್ಗಣಿಯ ತಂದು ಮಜ್ಜನಕ್ಕೆ ನೀಡುವ
ಹಗಲುಗಳ್ಳರ ಮೆಚ್ಚುವನೆ ಕೂಡಲಚೆನ್ನಸಂಗಮದೇವ? ॥ ೮೨೯ ॥

೧೬೮೩

ಶುದ್ಧ ಸಿದ್ಧ ಪ್ರಸಿದ್ಧದ ಭೇದಾಭೇದ ಸೂಕ್ಷ್ಮವಂ ಪೇಳ್ವೆ:
ಭಕ್ತ ಲಿಂಗಾರ್ಚನೆಯಂ ಮಾಡುತ್ತಿರಲು ಮಠದಲ್ಲಿ ಪದಾರ್ಥ ಹೆಚ್ಚಿರಲು
ಆ ಸಮಯದಲ್ಲಿ ಒಡೆಯರು ಬಿಜಯಂಗೈಯಲು
ತಾನು ಕೊಂಡುದೆ ಪ್ರಸಾದ ನಿಂದುದೆ ಪದಾರ್ಥವಾಗಿ ನೀಡಬಹುದಯ್ಯಾ.
ಬಹುದು ಬಾರದೆಂಬ ಸಂದೇಹವಮಂ ತಾಳ್ದಡೆ
ಲಿಂಗಕ್ಕೆ ದೂರ ಜಂಗಮಕ್ಕೆ ಸಲ್ಲನಯ್ಯಾ.
ಅದು ಶುದ್ಧ ಮುಖದಿಂದ ಬಂದುದು ಪ್ರಸಿದ್ಧ ಮುಖಕ್ಕೆ ನೀಡಬಹುದಾಗಿ
ಸಂದೇಹಮಂ ತಾಳಲಾಗದು ಕೂಡಲಚೆನ್ನಸಂಗಮದೇವ. ॥ ೮೩೦ ॥

೧೬೮೪

ಶುದ್ಧ, ಸಿದ್ಧ, ಪ್ರಸಿದ್ಧದ ವಿವರವ ಕೇಳಿದಡೆ ಹೇಳುವೆನು:
ವಿಶ್ವ ಮುಟ್ಟಿತ್ತು ಶುದ್ಧ, ತೈಜಸ ಮುಟ್ಟಿತು ಸಿದ್ಧ,
ಪ್ರಾಜ್ಞ ಮುಟ್ಟಿತ್ತು ಪ್ರಸಿದ್ಧ.
ಪ್ರತ್ಯಗಾತ್ಮನಲ್ಲಿ ಪರಿಣಾಮಿ,
ಕೂಡಲಚೆನ್ನಸಂಗಾ, ನಿಮ್ಮ ಶರಣ. ॥ ೮೩೧ ॥

೧೬೮೫

ಶೂನ್ಯವ ನುಡಿದು ದುರ್ಗತಿಗಿಳಿದವರ,
ಅದ್ವೈತವ ನುಡಿದು ಅಹಂಕಾರಿಗಳಾದವರ,
ಬ್ರಹ್ಮವ ನುಡಿದು ಭ್ರಮಿತರಾದವರ,
ತ್ರಿಕಾಲ ಲಿಂಗಪೂಜೆಯ ಮಾಡದವರ
ಬ್ರಹ್ಮದ ಅನವರತ ಮಾತ ಕೇಳಿ
ಹಿಡಿದ ವ್ರತನೇಮಗಳ ಬಿಡುವವರ–
ಈ ದುರಾಚಾರಿಗಳ ಮೆಚ್ಚ, ಕೂಡಲಚೆನ್ನಸಂಗಾ ನಿಮ್ಮ ಶರಣ. ॥ ೮೩೨ ॥

೧೬೮೬

ಶೃಂಗಾರಾದಿ ನವರಸ ರಸಿಕನಾದಹನೆಂಬವ
ನವಖಂಡಮಂಡಲಾಧಾರದಲ್ಲಿ ಕರ ಚಂಡನಾಗದೆ
ನವವಿಧ ಬಂಧನಕ್ಕೊಳಗಾಗದೆ
ನವನಾಳದಲ್ಲಿ ಕಳಾಹೀನನಾಗದೆ

ಇಂತೀ ನವಸಂಪಾದನೆ ಮೂವತ್ತಾರು ಪ್ರಕಾರಂಗಳು
ಪ್ರಾಣಲಿಂಗಕ್ಕೆ ಸಲುವರನರಿತು ಸಲಿಸುವದು, ಸಲ್ಲದಿದ್ದಡೆ
ತನಗಾಗಿ ಚಿಂತಿಸಲಾಗದು ಕೂಡಲಚೆನ್ನಸಂಗಮದೇವಾ. ॥ ೮೩೩ ॥

೧೬೮೭

ಶೈವಸಿದ್ಧಾಂತಿಗಳಪ್ಪ ಕರ್ಮಕಾಂಡಿಗಳು ಸ್ಥಾವರಲಿಂಗನೆಡೆಯಲ್ಲಿ,
ಹವನ ಹೋಮಾದಿ ಪವಿತ್ರಕಾರ್ಯವ ಕೈಕೊಂಡೆಡೆಯಲ್ಲಿ,
ಉಚ್ಛಿಷ್ಟಾದಿ ಪಂಚಸೂತಕಗಳಂಟಿದಡೆ
ಅವರು ಆ ಸೂತಕವ ಮಾನಿಸವೆ ಪರಿಶುದ್ಧಭಾವನಿಂದಿರ್ಪರು.
ದೇವದೇವನಪ್ಪ ಮಹಾದೇವನನು ಲಿಂಗರೂಪದಿಂದ ಅಂಗದಲ್ಲಿ ಧರಿಸಿ
ಪರಿಶುದ್ಧರಾದೆವೆಂದು ತಿಳಿಯದೆ ಸೂತಕವನಾಚರಿಸುವ
ವ್ರತಗೇಡಿಗಳ ಎನಗೆ ತೋರದಿರಯ್ಯಾ-ಕೂಡಲಚೆನ್ನಸಂಗಮದೇವಾ. ॥ ೮೩೪ ॥

೧೬೮೮

ಶೈವ ಸ್ವೈರೆಗಾದ, ಪಾಶುಪತಿ ಪಥವನರಿಯ
ಕಾಳಾಮುಖಿ ಕಂಗೆಟ್ಟ, ಮಹಾವ್ರತಿ ಮದವೇರಿದ
ಸನ್ಯಾಸಿ ಪಾಷಂಡಿಯಾದ, ಕಾಪಾಲಿ ಮರುಳಾಗಿ ತಿರುಗಿದ.
ಈ ಆರು ಭಕ್ತಿಸ್ಥಲಕ್ಕೆ ಸಲ್ಲವು ಕೇಳಿರಣ್ಣಾ-
ಏಳೇಳು ಭವದಲ್ಲಿ ಭವಿಯಾಗಿ ಬಂದು, ಶ್ರೀಗುರುಕಟಾಕ್ಷ ನಿರೀಕ್ಷಣೆಯಿಂದ
ಪ್ರಾಣದಮೇಲೆ ಲಿಂಗಪ್ರತಿಷ್ಠೆಯಂ ಮಾಡಿಕೊಂಡು
ಆರರಿಂದ ಮೀರಿದ ಸ್ಥಲವಿಟ್ಟು ವೀರಮಾಹೇಶ್ವರತ್ವಮಂ ಪಡೆದು
ಮರಳಿ ತನ್ನ ಕುಲವನರಸಿದರೆ
ಒಡೆದ ಮಡಕೆಯ ಓಡಿನಂತಹನು ಕೇಳಿರಣ್ಣಾ.
ತನ್ನ ಕುಲವೆಂದು ಪ್ರಾಣಸ್ನೇಹ ಮಾಯಾಮೋಹ ಕಿಂಚಿತ್ ಮಾತ್ರ ಬೆರಸಿದರೆ,
ಅವ ಪಂಚಮಹಾಪಾತಕಿ, ರೌರವ ನಾರಕಿ.
ಅವನ ಭಕ್ತನೆಂದು ನೋಡಿವಡೆ, ನುಡಿಸಿದಡೆ, ಸಪಂಕ್ತಿಯಲ್ಲಿ ಕುಳಿತಡೆ,
ಸಂಭಾಷಣೆಯ ಮಾಡಿದಡೆ, ಕೈವೊಡ್ಡಿ ಬೇಡಿದಡೆ
ಅವಂಗೆ ಕುಂಭೀಪಾತಕ ನಾಯಕನರಕ ಕೇಳಿರಣ್ಣಾ.
ಶುದ್ಧ ಸಿದ್ಧ ಪ್ರಸಿದ್ಧದ ಭೇದಾಭೇದ ಸೂಕ್ಷ್ಮವ ಪೇಳ್ವೆ:
ಭಕ್ತಲಿಂಗಾರ್ಚನೆಯ ಮಾಡುತ್ತಿರಲು, ಮಠದಲ್ಲಿ ಪದಾರ್ಥ ಹೆಚ್ಚಿರಲಾಗಿ
ಆ ಸಮಯದಲ್ಲಿ ಒಡೆಯರು ಬಿಜಯಂಗೈಯಲು
ತಾ ಕೊಂಡುವ ಪ್ರಸಾದ, ನಿಂದುವ ಪದಾರ್ಥವಾಗಿ ನೀಡಬಹುದಯ್ಯಾ.
ಬಹುದು ಬಾರದೆಂಬ ಸುವೇಹಮು ತಾಳ್ದಡೆ

ಲಿಂಗಕ್ಕೆ ದೂರ ಜಂಗಮಕ್ಕೆ ಸಲ್ಲನಯ್ಯಾ.
ಅದು ಶುದ್ಧಮುಖದಿಂದ ಬಂದುದಾಗಿ ಪ್ರಸಿದ್ಧ ಮುಖಕ್ಕೆ ನೀಡಬಹುದು,
ಸಂವೇಹಮಂ ತಾಳಲಾಗದು, ಭಕ್ತಂಗೆ ಭವಿನೇಮಸ್ತರು ಸಲಲಾಗದು.
ಭವಿ ಶ್ವಪಚ, ನೇಮಸ್ತ ಸಮ್ಮಗಾರ–
ಇವರಿಬ್ಬರನು ಸತಿಸುತ ಮಿತ್ರರೆಂದು ಮತವಮಂ ಹೊಗಿಸಿದಡೆ ಅನ್ನಮನಿಕ್ಕಿದಡೆ;
ಸುರೆಯ ಮಡಕೆಯಂ ತೊಳೆದು ಘೃತಮಂ ತುಂಬಿ ಶ್ವಾನನಂ ಕರೆದು ತಿನಿಸಿ,
ಮಿಕ್ಕುದನು ತಾನು ಭುಂಜಿಸಿದಂತೆ ಕೇಳಿರಣ್ಣಾ.
ಭಕ್ತ ಲಿಂಗಾರ್ಚನೆಯ ಮಾಡಿದ ಪವಿತ್ರ ಭಾಜನಮು
ಶ್ವಾನ ಸೂಕರ ಕುಕ್ಕುಟ ಮಾರ್ಜಾಲಂಗಳು ಮುಟ್ಟಿದಡೆ
ಅವರ ಕೂಡೆ ಸಹಭೋಜನವ ಮಾಡಿದಂತೆ.
ಗುರುಲಿಂಗಜಂಗಮಕ್ಕೆ ಅರ್ಪಿತವ ಮಾಡಿ, ಒಕ್ಕುಮಿಕ್ಕ ಪ್ರಸಾದವ ಭೋಗಿಸುವಲ್ಲಿ
ಪದಾರ್ಥವೆಂದು ಭಾವಿಸಿದಡೆ ಪ್ರಸಾದದ್ರೋಹ.
ಜಂಗಮದಲ್ಲಿ ಅನೃತ ಅಸ್ಥಿರವಾಕ್ಯ ಪಂಕ್ತಿಭೇದ ಉದಾಸೀನ, ನಿರ್ದಯೆ,
ಇಷ್ಟು (ಇರ್ದಡೆ) ಜಂಗಮದ್ರೋಹ.
ಲಿಂಗದಲ್ಲಿ ತ್ರಿಕಾಲಪೂಜೆ ಪ್ರೀತಿ ಪ್ರೇಮ ಸ್ನೇಹ ಮೋಹ
–ಇಂತೀ ಐದು ಇಲ್ಲದಿರುವದೆ ಲಿಂಗದ್ರೋಹ.
ಗುರುವಿನಲ್ಲಿ ಅಹಂಕಾರ, ಭಯವಿಲ್ಲದಿಹುದು, ಸಮಪಂಕ್ತಿಯಲ್ಲಿ ಕುಳ್ಳಿರುವುದು
ಸಂಭಾಷಣೆಯ ಮಾಡುವುದು, ಕೈವೊಡ್ಡಿ ಬೇಡುವುದು– ಇಷ್ಟು ಗುರುದ್ರೋಹ.
ಇದು ಕಾರಣ ಗುರುಲಿಂಗಜಂಗಮಕ್ಕೆ, ತನುಮನಧನವ ಸಮರ್ಪಿಸಿ
ಏಕಲಿಂಗನಿಷ್ಠಾಪರನಾಗಿ, ಭಕ್ತಕಾಯ ಮಮಕಾಯವೆಂಬ ಶಬ್ದಕ್ಕೆ ಸಂದು,
ಪ್ರಸಾದವೆಂದು ಕೊಂಡು ಎಂಜಲೆಂದು ಕೈತೊಳೆದಡೆ
ಅಘೋರನರಕ ತಪ್ಪದು ಕೂಡಲಚೆನ್ನಸಂಗಮದೇವಯ್ಯಾ. || ೮೩೫ ||

೧೬೮೯

ಶ್ರೀಗುರು ಉಪದೇಶವ ಮಾಡುವಲ್ಲಿ ಭಕ್ತಗಣಸಾಕ್ಷಿಯಾಗಿ
ಹಸ್ತಮಸ್ತಕಸಂಯೋಗವ ಮಾಡಿ, ಆ ಮಸ್ತಕಾಗ್ರದೊಳಿಪ್ಪ
ನಿತ್ಯನಿರಂಜನ ಶಿವಕಳೆಯ ಭಾವದೊಳು ಭರಿತವನಿಸಿ
ಮನದೊಳು ಮಂತ್ರಯುಕ್ತದಿಂ ಮೂರ್ತಿಗೊಳಿಸಿ
ಚರಪಾದತೀರ್ಥಪ್ರಸಾದದೊಳು ಬೆರಸಿ– ಇಂತೀ ಗುರುಚರ ಪರರಾಜ್ಞೆಯಲಿ
ಪ್ರಾಣಲಿಂಗವ ಕರಸ್ಥಲಕ್ಕೆ ಬಿಜಯಂಗೈಸಿ ಕೊಟ್ಟ ಬಳಿಕ,
ಗುರುಕೊಟ್ಟ ಇಷ್ಟಲಿಂಗವಲ್ಲಿ ನಿಷ್ಠೆಗಟ್ಟಿಗೊಂಡು ಮನಮುಟ್ಟಿ ಪೂಜಿಸಿ
ಪ್ರಸಾದವಂ ಪಡೆದು ನಿಜಮುಕ್ತಿಯನೈದರಿಲಯಂದೆ
ಈ ಗುರು ಕೊಟ್ಟ ಇಷ್ಟಲಿಂಗವ ಬಿಟ್ಟು ಗುರುಕಾರುಣ್ಯ ಚರಪ್ರಸಾದ ಹೊರಗಾದ,

ಧರೆಯ ಮೇಲಣ ಪ್ರತಿಷ್ಠೆಯನುಳ್ಳ ಭವಿಶೈವದೈವಕ್ಕೆರಗುವ
ದುರಾಚಾರಿಗಳಿಗೆ ಅಘೋರನರಕ ತಪ್ಪದು ಕಾಣಾ
ಕೂಡಲಚೆನ್ನಸಂಗಯ್ಯ. ॥ ೮೩೬ ॥

೧೬೯೦

ಶ್ರೀಗುರುಕರುಣವೆ ಲಿಂಗ, ಶ್ರೀಲಿಂಗದ ನಿಜವೆ ಜಂಗಮ,
ಇಂತಿದು ಬಹಿರಂಗದ ವರ್ತನೆ.
ಇನ್ನು– ಅಂತರಂಗದ ಸುಜ್ಞಾನವೆ ಜಂಗಮ,
ಆ ಜಂಗಮದ ನಡೆವ ಸತ್ಕ್ರೀಯೆ ಲಿಂಗ,
ಆ ಉಭಯದ ಏಕತ್ವದ ಸಿದ್ಧಿಯೆ ಗುರು.
ಇದು ಕಾರಣ– ಅಂಗತ್ರಯದಲ್ಲಿ ಲಿಂಗತ್ರಯ ಸಂಗಮವಾದಲ್ಲಿ,
ಜಂಗಮದಾಸೋಹವಿಲ್ಲದಡೆ ತೃಪ್ತಿಯಿಲ್ಲ.
ಅಂಗದ ಮೇಲೆ ಲಿಂಗವಿಲ್ಲದಿರ್ದಡೆ ಜಂಗಮ ಸೇವೆಯ ಕೈಕೊಳ್ಳ.
ಅದು ಕಾರಣ– ಒಂದ ಬಿಟ್ಟು ಒಂದರಲ್ಲಿ ನಿಂದಡೆ,
ಅಂಗವಿಲ್ಲದ ಆತ್ಮನಂತೆ, ಶಕ್ತಿಯಿಲ್ಲದ ಶಿವನಂತೆ, ದೀಪವಿಲ್ಲದ ಪ್ರಕಾಶದಂತೆ!
ಒಂದಂಗ ಶೂನ್ಯವಾಗಿ ಭಕ್ತಿಯುಂಟೆ?
ಅವಯವಹೀನನು ರಾಜಪಟ್ಟಕ್ಕೆ ಸಲುವನೆ?
ಲಿಂಗಹೀನನು ಭೃತ್ಯಾಚಾರಕ್ಕೆ ಸಲುವನೆ? ಅದು ದೇವತ್ವಕ್ಕೆ ಸಲ್ಲದು.
ನಮ್ಮ ಕೂಡಲಚೆನ್ನಸಂಗಯ್ಯನಲ್ಲಿ
ತ್ರಿವಿಧಸನ್ಮತವೆ ಚರಸೇವೆಯಯ್ಯಾ. ॥ ೮೩೭ ॥

೧೬೯೧

ಶ್ರೀಗುರು ತನ್ನ ಸಾಕಾರವ ಬಿಟ್ಟು ನಿರಾಕಾರವಾದಡೆ ಸಂದೇಹಿಸಲಿಲ್ಲ.
ಸಾಕಾರವಿಡಿದು ಉಪದೇಶವ ಕೊಟ್ಟು, ಎನ್ನ ಕಾಯುವ ಸಮರ್ಪಿಸಿಕೊಂಡು
ಶುದ್ಧನ ಮಾಡಿದನಯ್ಯಾ ಶ್ರೀಗುರು.
ಪ್ರಾಣದಲಡಗಿ ಸಿದ್ಧನ ಮಾಡಿದನಯ್ಯಾ ಶ್ರೀಗುರು.
ಇಂತು ಅವಿರಳ ಗುರುತತ್ವ–ಸಂಗನಬಸವಣ್ಣನು
ಕೂಡಲಚೆನ್ನಸಂಗಾ ನಿನ್ನೊಳಗೆ ಪರಿಪೂರ್ಣ ಕಾಣಾ. ॥ ೮೩೮ ॥

೧೬೯೨

ಶ್ರೀಗುರುಲಿಂಗಜಂಗಮಕರುಣಕಟಾಕ್ಷೆಯಿಂದ
ತ್ರಿವಿಧದೀಕ್ಷೆ ತ್ರಿವಿಧಾಚಾರ ತ್ರಿವಿಧಲಿಂಗಾರ್ಚನೆ ತ್ರಿವಿಧಲಿಂಗಾರ್ಪಣ

ತ್ರಿವಿಧಲಿಂಗಾನುಭಾವ, ತ್ರಿವಿಧಭಕ್ತಿ ಜ್ಞಾನವೈರಾಗ್ಯ ಸತ್ಯಸನ್ಮಾರ್ಗಾಚಾರಾನ್ವಿತ
ಸದ್ಭಕ್ತ-ಮಾಹೇಶ್ವರ-ಶರಣಗಣಂಗಳು, ಪೊಟ್ಟವೊದಲಲ್ಲಿ,
ಮಡು ಹೊಂಡ ನದಿ ಹಳ್ಳ ಕೆರೆ ಬಾವಿ ಕೊಳ ಗುಂಡ ಚಿಲುಮೆ
ಮೊದಲಾದ ಸ್ಥಾನಂಗಳಲ್ಲಿ ಸ್ವಚ್ಛನಿರ್ಮಲತರವಾದ ಪರಿಣಾಮೋದಕವನ್ನು
ಭಾಜನಮುಖಂಗಳಿಗೆ ಕ್ರಿಯಾ-ಜ್ಞಾನಯುಕ್ತವಾದ
ಉಭಯಮಡಿಕೆಯ ಪಾವಡವ ಹಾಕಿ ಶೋಧಿಸಿ ಮೇಲುಪಾವಡವ ಬಾಸಣಿಸಿ,
ಭವಿಜನಾತ್ಮರ ಸೋಂಕದೆ ತೆಗೆದುಕೊಂಡು ಬಂದು
ಶ್ರೀಗುರುಲಿಂಗಜಂಗಮದ ಪಾದ ಪ್ರಕ್ಷಾಲನವಂ ಮಾಡಿ
ಆ ಮೇಲೆ ಉಭಯ ಪಾದದ ಅಡಿಯಲ್ಲಿ ಮೂರುವೇಳೆ,
ದಶಾಂಗುಲಿ ಒಂದು ವೇಳೆ,
ಸ್ಪರ್ಶನವಾದಂಥ ಗುರುಪಾದೋದಕವ ಸಮಸ್ತ ಭಾಂಡ ಭಾಜನಂಗಳಲ್ಲಿ ತುಂಬಿ
ಕ್ರಿಯಾಶಕ್ತಿಯರು ಕ್ರಿಯಾಭೃತ್ಯರಾದರು ಸರಿಯೆ
ಲಿಂಗಾಭಿಷೇಕ ಲಿಂಗಾರ್ಚನಕ್ರಿಯಗಳ ತೀರ್ಚಿಸಿಕೊಂಡು
ಮಂತ್ರಧ್ಯಾನಾರೂಢರಾಗಿ ಲಿಂಗಬಾಹ್ಯರ ಸ್ಪರ್ಶನಸುಭಾಷಣೆಗಳನುಳಿದು
ಸಕಲಪದಾರ್ಥಂಗಳ ಕ್ರಿಮಿಕೀಡೆಕೀಟಕಂಗಳ
ಕಾಷ್ಠಮೃಣ್ ಪಾಷಾಣಂಗಳ ಶೋಧಿಸಿ,
ಅತಿ ಸುಯಿದಾನದಿಂದ ಪಾದೋದಕದಲ್ಲಿ ಪಾಕವ ಮಾಡಿ,
ಆ ಪಾಕದ ಭಾಜನಂಗಳಿಗೆ, ಹಸ್ತಸ್ಪರ್ಶನ ಮಂತ್ರನ್ಯಾಸ ಲಿಂಗದೃಷ್ಟಿ ವಾಕ್ಕೀಲ
ಮಂತ್ರಸ್ಮರಣೆ ಚಿದ್ಭಸ್ಮದಿಂದ, ಆ ಪದಾರ್ಥದ ಪೂರ್ವಾಶ್ರಯವ ಕಳೆದು
ಶ್ರೀಗುರುಲಿಂಗಜಂಗಮದ ಶುದ್ಧಪ್ರಸಾದವೆಂದು ಭಾವಿಸಿ
ಸಾವಧಾನಭಕ್ತಿಯಿಂದ ಮಹಾನೈಷ್ಠೆ ಕರಿಗೊಂಡು
ಮಂತ್ರಸ್ಮರಣೆಯಿಂದ ಸತ್ಯಸದಾಚಾರ ಸತ್ಕ್ರಿಯಾಸಮ್ಯಜ್ಞಾನವುಳ್ಳ
ಗುರುಲಿಂಗಜಂಗಮಕ್ಕೆ ಸಮರ್ಪಣೆಯಂ ಮಾಡಿ
ಅವರ ಕರುಣಪ್ರಸಾದವ ಸಮಸ್ತಶಕ್ತಿ ಭಕ್ತಶರಣಗಣಂಗಳೆಲ್ಲ ಪರಿಣಾಮಿಸಿ,
ಭಾಂಡಭಾಜನಂಗಳಲ್ಲಿ ಉಳಿದ ಶೇಷಪಾದೋದಕವ
ಇಷ್ಟಲಿಂಗಬಾಹ್ಯವಾದ ಭವಿಜನಾತ್ಮರುಗಳಿಗೆ ಹಾಕಲಾಗದು.
ಅದಕ್ಕೆ ಪರವಾಕ್ಯವುಂಟು. ಪರಗುರುವಾಕ್ಯವ ಮೀರಿ
ವೇದಶ್ರುತಿವಾಕ್ಯವ ಹಿಡಿದು ಗುರುಮಾರ್ಗಾಚಾರಬಾಹ್ಯರಿಗೆ
ಲಿಂಗಪದಾರ್ಥವ ಕೊಟ್ಟಾತಂಗೆ ಯಮದಂಡಣೆ ಉಂಟು.
ಅಂತ್ಯದಲ್ಲಿ ಕಾಲಕಾಮರಿಗೊಳಗು ನೋಡ
ಕೂಡಲಚೆನ್ನಸಂಗಮದೇವಾ. || ೮೩೯ ||

೧೬೩

ಶ್ರೀಗುರು ಲಿಂಗ ಜಂಗಮದ ಪಾದೋದಕ ಪ್ರಸಾದವ ಕೊಂಡೆವೆಂಬರು.
ಅವರು ಕೊಟ್ಟ ಪರಿಯಾವುದು? ನೀವು ಕೊಂಡ ಪರಿಯಾವುದು?
ಆ ಗುರುವಿಂಗೆ ಜಂಗಮಪ್ರಸಾದವೆ ಬೇಕು,
ಆ ಲಿಂಗಕ್ಕೆ ಜಂಗಮಪ್ರಸಾದವೆ ಬೇಕು.
ಅದೆಂತೆಂದಡೆ:
ಚರಪ್ರಸಾದಸ್ಸಂಗ್ರಾಹ್ಯೋ ಗುರುಲಿಂಗಜಂಗಮಾನಾಂ।
ತದುಚ್ಛಿಷ್ಟಂ ತು ಸಂಪ್ರಾಪ್ಯ ಭವೋನ್ಮುಕ್ತಿಸ್ತದಾ ಭವೇತ್॥ ಎಂದುದಾಗಿ
ಕೂಡಲಚನ್ನಸಂಗಯ್ಯಾ, ನಿಮ್ಮ ಜಂಗಮಪ್ರಸಾದವಿಲ್ಲದಿರ್ದಡೆ
ಗುರುವಾಗಬಾರದು, ಲಿಂಗವಾಗಬಾರದು, ಜಂಗಮವಾಗಬಾರದು. ॥ ೮೪೦ ॥

೧೬೪

ಶ್ರೀಗುರುವನುಳಿದು ಲಿಂಗವುಂಟೆ? ಲಿಂಗವನುಳಿದು ಜಂಗಮವುಂಟೆ?
ಜಂಗಮವನುಳಿದು ಪ್ರಸಾದವುಂಟೆ?
ಪ್ರಸಾದವನುಳಿದು ಭಕ್ತಿಯುಂಟೆ? ಭಕ್ತಿಯನುಳಿದು ಮುಕ್ತಿಯುಂಟೆ?
ಇಲ್ಲವಯ್ಯಾ ಕೂಡಲಚೆನ್ನಸಂಗಯ್ಯ. ॥ ೮೪೧ ॥

೧೬೫

ಶ್ರೀಗುರುವಾದಾತನು ಸಕಲಾಗಮಂಗಳ ಹೃದಯವನರಿತು
ತನ್ನ ತಾನರಿದು ಸರ್ವಾಚಾರ ತನ್ನಲ್ಲಿ ನೆಲೆಗೊಂಡು
ಉಪದೇಶವ ಮಾಡುವ ಕ್ರಮವೆಂತೆಂದಡೆ:
ಬ್ರಾಹ್ಮಣನ ಮೂರು ವರುಷ ನೋಡಬೇಕು,
ಕ್ಷತ್ರಿಯನ ಆರು ವರುಷ ನೋಡಬೇಕು,
ವೈಶ್ಯನ ಒಂಬತ್ತು ವರುಷ ನೋಡಬೇಕು,
ಶೂದ್ರನ ಹನ್ನೆರಡು ವರುಷ ನೋಡಬೇಕು,
ನೋಡಿದಲ್ಲದೆ ದೀಕ್ಷೆ ಕೊಡಬಾರದು.
"ಬ್ರಾಹ್ಮಣಂ ತ್ರೀಣಿ ವರ್ಷಾಣಿ ಷಡಬ್ದಂ ಕ್ಷತ್ರಿಯಂ ತಥಾ।
ವೈಶ್ಯಂ ನವಾಬ್ದಮಾಖ್ಯಾತಂ ಶೂದ್ರಂ ದ್ವಾದಶವರ್ಷಕಂ॥
ಈ ಕ್ರಮವನರಿಯದೆ,
ಉಪಾಧಿವಿಡಿದು ಉಪದೇಶವ ಮಾಡುವಾತ ಗುರುವಲ್ಲ,
ಉಪಾಧಿವಿಡಿದು ಉಪದೇಶವ ಮಾಡಿಸಿಕೊಂಬಾತ ಶಿಷ್ಯನಲ್ಲ.
ಇವರಿಬ್ಬರ ನಿಲವು ಒಂದೆ: ಠಕ್ಕನ ಮನೆಗೆ ಠಕ್ಕ ಬಿದ್ದಿನವ ಬಂದಂತೆ

ಈ ಗುರುಶಿಷ್ಯರಿಬ್ಬರನು ರೌರವನರಕದಲ್ಲಿಕ್ಕುವ
ಕೂಡಲಚೆನ್ನಸಂಗಯ್ಯ. ॥ ೮೪೨ ॥

೧೬೯೬

ಶ್ರೀಗುರುವಿನ ಹಸ್ತದಲ್ಲಿ ಉಪದೇಶವ ಪಡೆದು ಭಕ್ತರಾದುದು ಮೊದಲಾಗಿ
ನಿಮ್ಮ ಲಿಂಗವಾರೋಗಣೆಯ ಮಾಡಿದ ದಿನವುಂಟೆ?
ಉಂಟಾದಡೆ ತೋರಿ, ಇಲ್ಲದಿದ್ದರೆ ನೀವು ಕೇಳಿ:
ನಾನು ನಮ್ಮ ಗುರುವಿನ ಹಸ್ತದಲ್ಲಿ ಉಪದೇಶವಡೆದು ಭಕ್ತನಾದುದು ಮೊದಲಾಗಿ
ನಮ್ಮ ಲಿಂಗವು ನಿರಂತರ ಆರೋಗಣೆಯ ಮಾಡಿ ಪ್ರಸಾದವ ಕರುಣಿಸುವುದು,
ಅದು ಕಾರಣ ನಮಗೆ ಲಿಂಗವುಂಟು.
ನಿಮ್ಮ ಲಿಂಗಕ್ಕೆ ಕರಚರಣ ಅವಯವಂಗಳಿಲ್ಲವಾಗಿ
ನಿಮ್ಮ ಲಿಂಗವು ಸಕಲ ಭೋಗಂಗಳ ಭೋಗಿಸಲರಿಯದಾಗಿ ನಿಮಗೆ ಲಿಂಗವಿಲ್ಲ.
ಪ್ರಸಾದವಿಲ್ಲವಾಗಿ ನಿಮಗೆ ಲಿಂಗವಿಲ್ಲವೆಂದೆನು.
ಅದಕ್ಕೆ ನೀವು ಸಂಕೀರ್ಣಗೊಳ್ಳದಿರಿ.
ಆ ವಿವರವನು ನಾನು ನಿಮಗೆ ಚೆನ್ನಾಗಿ ಕಾಣಿಸಿ ತೋರಿ ಹೇಳುವೆನು:
ನಿಮ್ಮ ಶ್ರೀ ಗುರು ನಿಮಗೆ ಪ್ರಾಣಲಿಂಗ ಸಂಬಂಧವ ಮಾಡುವಲ್ಲಿ,
ಆ ಲಿಂಗವೆ ಜಂಗಮುದಂಗವು,
ಆ ಜಂಗಮುವ ಲಿಂಗದ ಪ್ರಾಣಚೈತನ್ಯದ ಕಳೆಯ ಮಾಡಿ
ನಿಮ್ಮ ಶ್ರೀ ಗುರು ಕರಸ್ಥಲದಲ್ಲಿ ಆ ಲಿಂಗವ ಕೊಟ್ಟ ಕಾರಣ,
ಇಂತಹ ಜಂಗಮ ಮುಖದಲ್ಲಿ ತೃಪ್ತನಹೆನಲ್ಲದೆ
ಲಿಂಗದ ಮುಖದಲ್ಲಿ ನಾನು ತೃಪ್ತನಹೆನೆಂದು ಹೇಳಿಕೊಟ್ಟನೆ?
ಶ್ರೀ ಗುರು ಲಿಂಗವನು ಹಾಗೆ ಕೊಟ್ಟುದಿಲ್ಲವಾಗಿ.
ಅದೆಂತೆಂದಡೆ, ಶಿವರಹಸ್ಯದಲ್ಲಿ ಶಿವನವಾಕ್ಯ:
ಸ್ಥಾವರಾರ್ಪಿತನೈವೇದ್ಯಾನ್ನ ಚ ತೃಪ್ತಿರ್ಮಹೇಶ್ವರಿ।
ಜಂಗಮಾರ್ಪಿತ ನೈವೇದ್ಯಾದಹಂ ತುಷ್ಟೋ ವರಾನನೇ॥ ಎಂದುದಾಗಿ,
ಇದಕ್ಕೆ ಉಪದೃಷ್ಟವಾಕ್ಯ:
ವೃಕ್ಷದ ಕೊನೆಗಳಿಗೆ ಉದಕವ ನೀಡಿದಡೆ ವೃಕ್ಷಪಲ್ಲವಿಸುವುದೆ
ಬೇರಿಂಗೆ ನೀಡಬೇಕಲ್ಲದೆ? ಅದೆಂತೆಂದಡೆ:
ವೃಕ್ಷಸ್ಯವದನಂ ಭೂಮಿಃ ಸ್ಥಾವರಸ್ಯತು ಜಂಗಮಃ
ಅಂತು ವೃಕ್ಷದ ಕೊನೆಯ ಸ್ಥಾನವೆ ಲಿಂಗವು'
ಬೇರಿನ ಸ್ಥಾನವೆ ಜಂಗಮವು.
ಮತ್ತೆಯೂ ದೃಷ್ಟ:

ಗರ್ಭಿಣೀಸ್ತ್ರೀಗೆ ಉಣಲಿಕ್ಕಿದಡೆ ಆ ಗರ್ಭದೊಳಗಣ ಶಿಶು ತೃಪ್ತವಹುದಲ್ಲದೆ,
ಆ ಸ್ತ್ರೀಯ ಗರ್ಭದ ಮೇಲೆ ಸಕಲಪದಾರ್ಥಂಗಳನಿಕ್ಕಿದಡೆ
ಆ ಗರ್ಭದೊಳಗಣ ಶಿಶು ತೃಪ್ತವಾಗಬಲ್ಲುದೆ?
ಅದು ಕಾರಣ–ಆ ಗರ್ಭದೊಳಗಣ ಶಿಶುವಿನ ಸ್ಥಾನವೆ ಲಿಂಗವು,
ಆ ಗರ್ಭದ ಸ್ತ್ರೀಯು ಸ್ಥಾನವೆ ಜಂಗಮವು.
ಅದಕ್ಕೆ ಮತ್ತೆಯೂ ದೃಷ್ಟ:
ಪೃಥ್ವಿಗೆ ಚೈತನ್ಯವಾದಡೆ ಸಸಿಗಳು ಬೆಳೆವವಲ್ಲದೆ
ಆ ಸಸಿಗಳ ಕೊನೆಯ ಮೇಲೆ ಮಳೆ ಸುರಿದಡೆ
ಆ ಸಸಿಗಳು ಬೆಳೆಯಬಲ್ಲವೆ? ಬೆಳೆಯಲರಿಯವಾಗಿ.
ಅಂತು ಆ ಸಸಿಯ ಕೊನೆಯ ಸ್ಥಾನವೆ ಲಿಂಗವು
ಆ ಪೃಥ್ವೀ ಸ್ಥಾನವೆ ಜಂಗಮವು.
ಅದಕ್ಕೆ ಮತ್ತೆಯೂ ದೃಷ್ಟ:
ದೇಹದ ಮೇಲೆ ಸಕಲ ಪದಾರ್ಥವ ತಂದಿರಿಸಿದಡೆ
ಆತ್ಮನು ತೃಪ್ತನಾಗಬಲ್ಲನೆ, ಜಿಹ್ವೆಯ ಮುಖದಲ್ಲಿ ತೃಪ್ತನಹನಲ್ಲದೆ?
ಅಂತು ದೇಹಸ್ಥಾನವೆ ಲಿಂಗವು, ಜಿಹ್ವೆಯ ಸ್ಥಾನವೆ ಜಂಗಮವು.
ಇಂತೀ ನಾನಾ ದೃಷ್ಟಂಗಳಲ್ಲಿ ತೋರಿ ಹೇಳಿದ ತೆರನಲ್ಲಿ
ನಿಮ್ಮ ಲಿಂಗವು ನಮ್ಮ ಜಂಗಮದ ಸರ್ವಾಂಗದಲ್ಲಿ ಹೊಂದಿಪ ಕಾಣಾ
ಕೂಡಲಚೆನ್ನಸಂಗಮದೇವಾ. || ೮೪೩ ||

೧೬೯೭.

ಶ್ರೀಗುರು ಶಿಷ್ಯಂಗೆ ಅನುಗ್ರಹವ ಮಾಡಿದ ಕ್ರಮವೆಂತೆಂದಡೆ:
'ಲಿಂಗ, ಜಂಗಮ, ಪಾದೋದಕ, ಪ್ರಸಾದ–
ಇಂತು ಚತುರ್ವಿಧ ಲಂಪಟನಾಗೈ ಮಗನೆ' ಎಂದು
ಅಂಗದ ಮೇಲೆ ಲಿಂಗಸಾಹಿತ್ಯವ ಮಾಡಿ,
'ಹುಸಿ ಕಳವು ವೇಶ್ಯಾಗಮನ ಪಾರದ್ವಾರ ಪರದ್ರವ್ಯ ಪರನಿಂದೆ ಪರದೋಷ:
ಇಂತೀ ಸಪ್ತಗುಣ ವಿರಹಿತನಾಗಿ, ಅನ್ಯಭವಿನಾಸ್ತಿಯಾಗಿ
ಮಜ್ಜನಕ್ಕೆರೆವುದು ಶಿವಪಥ ಕಂಡಾ ಮಗನೆ'
ಎಂದು ಹೇಳಿಕೊಟ್ಟ ಉಪದೇಶವನೆ ಕೇಳಿ ನಡೆಯ ಬಲ್ಲಡೆ
ಆತನೆ ಶಿಷ್ಯ ಆತನ ನಿತ್ಯಮುಕ್ತನು.
ಆ ಗುರುಶಿಷ್ಯರಿಬ್ಬರು ಸಿಮ್ಮಾಳಗೆರಕವು–ಅದಂತಿರಲಿ,
ಅದು ಉಪಟುಸವಾರದ ಘನವು, ಅದಕ್ಕೆ ಶರಣಾರ್ಥಿ.
ಇನಿತಲ್ಲದ ಕೊಡುವ ಕೊಂಬ ಗುರುಶಿಷ್ಯರಿಬ್ಬರಿಗೂ ಯಮದಂಡನೆ ಕಾಣಾ,
ಕೂಡಲಚೆನ್ನಸಂಗಮದೇವಾ. || ೮೪೪ ||

೧೬೯೮

ಶ್ರೀಗುರು ಶಿಷ್ಯಂಗೆ ಮಂತ್ರಮೂರ್ತಿಯ ಕೊಡಬೇಕಾಗಿ,
ಸೃಷ್ಟಿಯ ಮೇಗಣ ಕಣಿಯ ತಂದು ಇಷ್ಟಲಿಂಗವ ಮಾಡಿ,
ಶಿಷ್ಯನ ತನುವಿನ ಮೇಲೆ ಅದ ಧರಿಸಿ,
ಲಿಂಗ ಅವತಳವಾಯಿತ್ತೆಂದು, ಭೂಮಿ ಸಿಂಹಾಸನಗೊಂಡಿತ್ತೆಂದು
ಸಮಾಧಿಯ ಹೊಗುವಿರಯ್ಯಾ.
ಆ ಲಿಂಗ ಅವತಳವಾದಡೆ ಭೂಮಿ ತಾಳಬಲ್ಲುದೆ?
ಗರುಡಿಯಲ್ಲಿ ಮುಟ್ಟಿ ಸಾಧನೆಯ ಮಾಡುವಲ್ಲಿ, ಆಳು ಬಿದ್ದಡೆ ಭಂಗವಲ್ಲದೆ
ಅಲಗು ಬಿದ್ದಡೆ ಭಂಗವೆ?–ಅಲಗು ತಕ್ಕೊಂಡು ಗರುಡಿಯಲಿ
ಸಾಧನೆಯ ಮಾಡುವುದು ಕರ್ತವ್ಯ ನೋಡಾ.
ಆ ಲಿಂಗ ಹುಸಿಯಾದಡೇನು? ಗುರುಲಿಂಗ ಹುಸಿಯಾದಡೇನು?
ಜಂಗಮಲಿಂಗ ಹುಸಿಯಾದಡೇನು? ಪಾದತೀರ್ಥ ಹುಸಿಯೆ?
ಪಾದತೀರ್ಥ ಪ್ರಸಾದ ಹುಸಿಯಾದಡೇನು, ವಿಭೂತಿವೀಳ್ಯಕ್ಕೆ ಬಂದ
ಗಣಂಗಳು ಹುಸಿಯೆ?–
ಇಂತೀ ಷಡುಸ್ಥಲವ ತುಚ್ಛಮಾಡಿ, ಗುರೂಪದೇಶವ ಹೀನಮಾಡಿ
ಸಮಾಧಿಯ ಹೊಕ್ಕೆನೆಂಬ ಪಾತಕರ ಮುಖವ ನೋಡಲಾಗದು ಕಾಣಾ
ಕೂಡಲಚೆನ್ನಸಂಗಮದೇವಾ. || ೮೪೫ ||

೧೬೯೯

ಶ್ರೀಗುರು ಶಿಷ್ಯನ ಭವಿಪೂರ್ವಾಶ್ರಯವ ಕಳೆದು ಭಕ್ತನ ಮಾಡಿದ ಬಳಿಕ
ಆ ಭಕ್ತ ಹೋಗಿ ಜಂಗಮವಾಗಿ, ಗುರುವಿನ ಮಠಕ್ಕೆ ಬಂದಡೆ
ಆ ಜಂಗಮವನ್ನ ಶಿಷ್ಯನೆಂದು ಗುರುವಿನ ಮನದಲ್ಲಿ ಹೊಳೆವಡೆ
ಪಂಚಮಹಾಪಾತಕ.
ಆ ಜಂಗಮಕ್ಕೆ ಎನ್ನ ಗುರುವೆಂದು ಮನದಲ್ಲಿ ಭಯಭೀತಿ ಪೊಳೆವಡೆ
ರೌರವನರಕ.
ಇಂತೀ ಭೇದವ ಕೂಡಲಚೆನ್ನಸಂಗಯ್ಯನಲ್ಲಿ ಶರಣರೆ ಬಲ್ಲರು. || ೮೪೬ ||

೧೭೦೦

ಶ್ರೀಗುರು ಸಪ್ತವಿಧದೀಕ್ಷೆಯನಿತ್ತು
ಶಿಷ್ಯನ ಶಿರವರಮನೆಯ ಚಿತ್ಕಲೆಯನೆ ಇಷ್ಟಲಿಂಗವಾಗಿ ನೋಡಿ,
ಅಂಗದಲ್ಲಿ ಸಂಗಗೊಳಿಸಿದ ಬಳಿಕ
ಅದೆ ಪ್ರಾಣಲಿಂಗವೆಂದರಿದು ಸಾವಧಾನದಿಂದರ್ಚಿಸಬೇಕು.

ಅದನಾವಾಗಳೂ ತನುವಿಂದಗಲದಿರಬೇಕು.
ಇದು ಶರಣರ ಮಚ್ಚು ಪುರಾತನರ ನಚ್ಚು!
ಇದನರಿಯದೆ ದುರ್ಲಕ್ಷ್ಯದಿಂದ ಲಿಂಗವನಗಲಿದ ಭಂಗಿತರ
ಕೂಡಲಚೆನ್ನಸಂಗಯ್ಯನ ಶರಣರೆಂತು ಮೆಚ್ಚುವರು? || ೮೪೭ ||

೧೭೦೧

ಶ್ರೀಗುರು ಸಾಹಿತ್ಯಸಂಬಂಧವ ಮಾಡುವಲ್ಲಿ;
ಲಿಂಗವೆ ಜಂಗಮ, ಜಂಗಮವೆ ಲಿಂಗನೆಂದು,
ಹೇಳಿಕೊಟ್ಟ ವಿವರವನರಿಯುವೆ,
ಲಿಂಗವೊಳಗೆ ಜಂಗಮವುಂಟೆಂದು ಗಳಹುತಿಪ್ಪಿರಿ.
ರಾಸಿಗಿಕ್ಕದ ಲಚ್ಚಣ ರಾಸಿಯು ಕೊಳಬಲ್ಲುವೆ, ರಾಸಿಯ ಒಡೆಯನಲ್ಲದೆ?—
ಆ ಪರಿಯಲ್ಲಿ ಲಿಂಗವು ಜಂಗಮದ ಮುದ್ರೆ,
ಅದಕ್ಕೆ ಜಂಗಮವೆ ಮುದ್ರಾಧಿಪತಿಯಾದ ಕಾರಣ,
ಜಂಗಮವೊಳಗೆ ಲಿಂಗವುಂಟೆಂಬುದು ಸತ್ಯವಲ್ಲದೆ
ಲಿಂಗವೊಳಗೆ ಜಂಗಮವುಂಟೆಂಬುದು ಅಸತ್ಯವು.
ವೃಕ್ಷದ ಕೊನೆಗಳಿಗೆ ಉದಕವ ನೀಡಿವಡೆ ಫಲವಹುದೆ? ಬೇರಿಂಗೆ ನೀಡಬೇಕಲ್ಲದೆ.
ವೃಕ್ಷದ ಆಧಾರವೆ ಪೃಥ್ವಿ, ಪೃಥ್ವಿಯೆ ಜಂಗಮ, ಶಾಖೆಯೆ ಲಿಂಗವು.
ದೇಹದ ಮೇಲೆ ಸಕಲಪದಾರ್ಥಂಗಳ ತುದಿರಿಸಿದಡೆ ತೃಪ್ತಿಯಹುದೆ?
ಮುಖವ ನೋಡಿ ಒಳಯಿಂಕೆ ನೀಡಬೇಕಲ್ಲವೆ.
ಅದು ಕಾರಣವಾಗಿ–ಅವಯವಂಗಳು ಕಾಣಲ್ಪಟ್ಟ ಮುಖವುಳ್ಳುದೆ ಜಂಗಮ
ದೇಹವೆ ಲಿಂಗ. ಲಿಂಗವೆಂಬುದು ಜಂಗಮವೊಂದಂಗ ಕಾಣಾ
ಕೂಡಲಚೆನ್ನಸಂಗಮದೇವಯ್ಯಾ. || ೮೪೮ ||

೧೭೦೨

ಶ್ರೀಶೈಲ ಸಿಂಹಾಸನದ ಮೇಲೆ ಕುಳ್ಳಿರ್ದು,
ಪುರದ ಬಾಗಿಲೊಳು ಕದಳಿಯ ನಿರ್ಮಿಸಿದರು,
ನರರು ಸುರರು ಮುನಿಗಳಿಗೆ ಮರಪೆಂಬ ಕದವನಿಕ್ಕಿ
ತರಗೊಳಿಸಿದರು ತ್ರಿವಿಧ ದುರ್ಗಂಗಳ.
ಆ ಗಿರಿಯ ಸುತ್ತಲು ಗಾಳಿ ದೆಸೆವೆಸೆಗೆ ಬೀಸುತ್ತಿರೆ,
ಕೆರಳಿ ಗಜ ಎಂಟೆಡೆಗೆ ಗಮಿಸುತ್ತಿರಲು
ಪರಿವಾರ ತಮ್ಮೊಳಗೆ ಆತಮಥನದಿಂ ಕೆರಳಿ
ಪುರದ ನಾಲ್ಕು ಕೇರಿಯನೆ ಬಲಿದರು.
ಆ ನರನೆಂಬ ಹೆಸರಳಿದು, ಗುರುಮಾರ್ಗದಿಂದ ಮರಪೆಂಬ ಕದವ ಮುರಿದು

ಒಳಹೊಕ್ಕು ಪುರದ ಮರ್ಮವನರಿದು, ಭರದಿಂದ ತ್ರಿಸ್ಥಾನವನುರುಹಿ
ಪರಿವಾರವನು ವಶಕ್ಕೆ ತಂದು, ಗಿರಿಶಿಖರವನೇರಿ
ಪುರವ ಸೂರೆಯಂಗೊಂಡು, ಪುರಕ್ಕೊಡೆಯನಾಗಿ
ಪರಿಣಾಮದಿಂದ ಕೂಡಲಚೆನ್ನಸಂಗಯ್ಯನಲ್ಲಿ
ಶರಣಾದವಂಗೆ ನಮೋ ನಮೋ ಎಂಬೆ. || ೮೪೯ ||

೧೭೦೩

ಶ್ರುತಿ ಪುರಾಣಾಗಮ ಇತಿಹಾಸಾದಿಗಳಿಂದ ಶಿವನೆ ಅಧಿಕನೆಂದರಿದು,
ಸಕಲ ಋುಷಿಜನಂಗಳು ದೇವರ್ಕಳು
ರತ್ನ ಸುವರ್ಣ ರಜತ ತಾಮ್ರ ಚಂದ್ರಕಾಂತ ಸ್ಫಟಿಕ
ಪವಳದ ಲಿಂಗಂಗಳನಾರಾಧಿಸಿ;
ಅಗಸ್ತ್ಯ ದಧೀಚಿ ಕಣಾದ ಬಾಣಾಸುರ ಪುರಂದರ ಬ್ರಹ್ಮ ವಿಷ್ಣು
ದುರ್ವಾಸ ನಂದಿಕೇಶ್ವರ ಸ್ಕಂದ ಭೃಂಗಿರಿಟಿ
ವೀರಭದ್ರ ಪ್ರಮಥಾದಿ ಗಣಂಗಳೆಲ್ಲರು
ಶಿವನ ಪೂಜಿಸಿ ಮಹದೈಶ್ವರ್ಯಪದಂಗಳ ಪಡೆದರು.
ಅದೆಂತೆಂದಡೆ, ಆದಿತ್ಯೇ:
"ರುದ್ರೇಣ ದೀಕ್ಷಿತೋ ಭೂತ್ವಾಸ್ಕಂದಃ ಶಿವಸಮೋಽಭವೇತ್।
ಶಿವರಹಸ್ಯೇ:
"ಪಾತ್ರತಾಂ ಪ್ರಥಮಂ ಗತಃ"–
ಇದನರಿದು ಪರಶುರಾಮ, ಪರಾಶರ, ವಸಿಷ್ಠ, ವಾಲ್ಮೀಕಿ ಕಮಲಾಕರ
ವಿಶ್ವಾಮಿತ್ರಾದಿ ಮಹಾಮುನಿಗಳೆಲ್ಲರು,
ಶಿವಲಿಂಗವ ಧರಿಸಿಕೊಂಡು ಶಿವಲಿಂಗಾರ್ಚನೆಯು ಮಾಡಿಕೊಂಡು
ಪಾದತೀರ್ಥಪ್ರಸಾದವ ಕೊಂಡು ಮುಕ್ತರಾದರು.
ಅದು ಹೇಗೆಂದಡೆ ಶಿವಧರ್ಮೇ:
"ಪಾಣಿನಿಶ್ಚ ಕಣಾದಶ್ಚ ಕಪಿಲೋ ಗೌತಮಾದಯಃ।
ಪ್ರಸಾದಸೇವನಾದ್ಧ್ಯಾನಾದ್ಧಾರಣಾದರ್ಚನಾದಪಿ"॥
ಇದು ಕಾರಣ, ಕೂಡಲಚೆನ್ನಸಂಗಮದೇವರ ಪೂಜಿಸಿ
ಪಾದೋದಕ ಪ್ರಸಾದವ ಕೊಂಡು ಅತ್ಯಂತ ಶುದ್ಧರಾದರು
ಎಲ್ಲಾ ದೇವತೆಗಳು, ಎಲ್ಲಾ ಋುಷಿಜನಂಗಳು. || ೮೫೦ ||

೧೭೦೪

ಶ್ರೋತ್ರಾದಿ ಜ್ಞಾನೇಂದ್ರಿಯಂಗಳು, ಇವಕ್ಕೆ ವಿವರ:
ಶ್ರೋತ್ರವು ಸ್ವರ ಶಬ್ದ ನಾದಂಗಳಂ ಬಲ್ಲುದು,

ನೇತ್ರಂಗಳು ಸಪ್ತವರ್ಣಂಗಳಂ ಕಂಡು ಸುಖಿಸುವುದು,
ಘ್ರಾಣವು ಗಂಧ ದುರ್ಗಂಧಂಗಳಂ ಬಲ್ಲದು,
ಜಿಹ್ವೆ ಮಧುರ ಆಮ್ಲ ತಿಕ್ತ ಕಟು ಕಷಾಯವಂ ಬಲ್ಲದು,
ತ್ವಕ್ಕು ಸ್ಪರ್ಶವ ಮೃದು ಕಠಿಣ ಶೀತೋಷ್ಣವಂ ಬಲ್ಲದು,
ಇಂತೀ ಜ್ಞಾನೇಂದ್ರಿಯಂಗಳ ಸಂಚಲನವರಿದು ನಿಜ ಉಳಿಯ ಬಲ್ಲಡೆ
ಕೂಡಲಚೆನ್ನಸಂಗಯ್ಯನಲ್ಲಿ ಶರಣನೆನಿಸವನು ॥ ೮೫೧ ॥

೧೭೦೫

ಷೋಡಶಕಳೆಯುಳ್ಳ ಜಂಗಮುವ
ರಾಜರುಗಳು ಪೂಜೆಯ ಮಾಡುವರು.
ವಿಷಯವುಳ್ಳ ಜಂಗಮುವ ವೇಸಿ ಪೂಜೆಯ ಮಾಡುವಳು.
ರಸವಿದ್ಯೆಯುಳ್ಳ ಜಂಗಮುವ
ಅಕ್ಕಸಾಲೆ ಪೂಜೆಯ ಮಾಡುವನು.
ವೇಷವುಳ್ಳ ಜಂಗಮುವ ಭಕ್ತರು ಪೂಜೆಯ ಮಾಡುವರು.
ಜ್ಞಾನವುಳ್ಳ ಜಂಗಮುವ ಆರಿಗೂ ಕಾಣಬಾರದು
ಕೂಡಲಚೆನ್ನಸಂಗಮದೇವಾ. ॥ ೮೫೨ ॥

೧೭೦೬

ಸಂಕಲ್ಪ ವಿಕಲ್ಪವೆಂಬ ಉದಯಾಸ್ತಮಾನಗಳಿಗೆ ದೂರವಾದ
ಶಿವಶರಣರ ಅಕುಲಜರೆಂದು ಗಳಹುತಿಪ್ಪರು ನೋಡಾ ಈ ಮರುಳ ವಿಪ್ರರು
ತಾವುಮಾತಂಗಿಯ ಗರ್ಭಸಂಭವ ಜೇಷ್ಠಪುತ್ರರೆಂಬುದನರಿಯದೆ.
ನಮ್ಮ ಶಿವಭಕ್ತರು ಅಂತಹ ಕುಲ ಇಂತಹ ಕುಲದವರೆಂದು ನಿಂದಿಸಿ
ನುಡಿವ ವಿಪ್ರಹೊಲೆಯರು ನೀವು ಕೇಳಿ ಭೋ ಅದೆಂತೆಂದಡೆ–
ಸ್ತ್ರೀವಾದ ಪುರುಷಃ ಷಂಡಶ್ಚಂಡಾಲೋ ದ್ವಿಜವಂಶಜಃ।
ನಜಾತಿ ಭೇದೋ ಲಿಂಗಾರ್ಚೇ ಸರ್ವೇ ರುದ್ರಗಣಾಃ ಸ್ಮೃತಾಃ॥
ಇಂತೆಂಬ ಪುರಾಣವಾಕ್ಯವನರಿದು
ನಮ್ಮ ಶಿವಭಕ್ತನು ಹೊಲೆಯ ಮಾದಿಗ ಕಬ್ಬಿಲ ಕಮ್ಮಾರ
ಕಂಚುಗಾರ ಅಕ್ಕಸಾಲೆ ಕುಂಬಾರ ಅಗಸ ನಾವಿಂದ
ಜೇಡ ಬೇಡನೆಂದು ನುಡಿಯುತಿಪ್ಪರು.
ನಿಮ್ಮ ಉತ್ತಮ ಸತ್ಕುಲಂಗಳ ನಾವು ಎತ್ತಿ ನುಡಿಯಬಹುದೇ
ಮಾರ್ಕಂಡೇಯ ಮಾದಿಗನೆಂದು ಸಾಂಖ್ಯ ಶ್ವಪಚನೆಂದು
ಕಾಶ್ಯಪ ಕಮ್ಮಾರನೆಂದೂ ರೋಮಜ ಕಂಚುಗಾರನೆಂದೂ

ಅಗಸ್ತ್ಯ ಕಬ್ಬಿಲನೆಂದೂ ನಾರದ ಅಗಸನೆಂದೂ
ವ್ಯಾಸ ಬೇಡನೆಂದೂ ವಶಿಷ್ಠ ಡೊಂಬನೆಂದೂ
ದುರ್ವಾಸ ಮಚ್ಚಿಗನೆಂದೂ ಕೌಂಡಿಲ್ಯ ನಾವಿಂದನೆಂದೂ
ಅದೆಂತೆಂದಡೆ ವಾಸಿಷ್ಠದಲ್ಲಿ—
ವಾಲ್ಮಿಕೀ ಚ ವಶಿಷ್ಠಶ್ಚ ಗಾರ್ಗ್ಯಮಾಂಡವ್ಯಗೌತಮಾಃ
ಪೂರ್ವಾಶ್ರಯೇ ಕನಿಷ್ಠಾಸ್ಯು ದೀರ್ಕ್ಷಯಾ ಸ್ವರ್ಗಗಾಮಿನಃ॥
ಎಂದುದಾಗಿ ಇದನರಿದು ಮರೆದಿರಿ ನಿಮ್ಮ ಕುಲವನು
ಇನ್ನು ನಿಮ್ಮ ಕುಲದಲ್ಲಿ ಹಿರಿಯರುಳ್ಳರೆ ನೀವು ಹೇಳಿಭೋ
ನಿಮ್ಮ ಗೋತ್ರವ ನೋಡಿ ನಿಮ್ಮ ಹಮ್ಮು ಬಿಡಿಭೋ
ಎಮ್ಮ ಸದ್ಭಕ್ತರೇ ಕುಲಜರು.
ಇದು ನಂಬದಿರ್ದಡೆ ಓದಿ ನೋಡಿರಣ್ಣಾ ನಿಮ್ಮ ವೇದವರ್ಗಂಗಳೊಳಗೆ
ಅದೆಂತೆಂದಡೆ ಅಥರ್ವವೇದದಲ್ಲಿ—
ಮಾತಂಗೀ ರೇಣುಕಾ ಗರ್ಭಸಂಭವಾತ್ ಇತಿ ಕಾರುಣ್ಯಂ
ಮೇಧಾವೀ ರುದ್ರಾಕ್ಷಿಣಾ ಲಿಂಗಧಾರಣಸ್ಯ ಪ್ರಸಾದಂ ಸ್ವೀಕುರ್ವನ್
ಋಷೀಣಾಂ ವರ್ಣಶ್ರೇಷ್ಠೋ ಘೋರ ಋಷಿಃ ಸಂಕರ್ಷಣಾತ್॥
ಇತ್ಯಾದಿ ವೇದ ವಚನ ಶ್ರುತಮಾರ್ಗೇಷು ಎಂದುದಾಗಿ
ಮತ್ತಂ ವಾಯುವೀಯ ಸಂಹಿತಾಯಾಮ್—
ಬ್ರಾಹ್ಮಣೋ ವಾಪಿ ಚಾಂಡಾಲೋ ದುರ್ಗುಣಃ ಸುಗುಣೋಽಪಿ ವಾ
ಭಸ್ಮ ರುದ್ರಾಕ್ಷಕಂಠೋ ವಾ ದೇಹಾಂತೇ ಸ ಶಿವಂ ವ್ರಜೇತ್॥
ಎಂದುದಾಗಿ ಮತ್ತಂ ಶಿವರಹಸ್ಯದಲ್ಲಿ—
ಗ್ರಾಮೇಣ ಮಲಿನಂ ತೋಯಂ ಯಥಾ ಸಾಗರಸಂಗತಮ್।
ಶಿವಸಂಸ್ಕಾರ ಸಂಪನ್ನಂ ಜಾತಿಭೇದಂ ನಕಾರಯೇತ್॥
ಎಂದುದಾಗಿ ಇವರೆಲ್ಲರ ವರ್ಣಂಗಳು ಲಿಂಗಧಾರಣೆಯಿಂದ
ಮರೆಸಿಹೋದವು ಕೇಳಿರಣ್ಣಾ.
ಇಂತಪ್ಪ ಋಷಿ ಜನಂಗಳೆಲ್ಲ ಶ್ರೀ ಗುರುವಿನ ಕಾರುಣ್ಯವಂ ಪಡೆದು
ವಿಭೂತಿ ರುದ್ರಾಕ್ಷಿಯುಂ ಧರಿಸಿ ಶಿವಲಿಂಗಾರ್ಚನೆಯುಂ ಮಾಡಿ
ಪಾದತೀರ್ಥ ಪ್ರಸಾದವಂ ಕೊಂಡು
ಉತ್ತಮ ವರ್ಣಶ್ರೇಷ್ಠರಾದರು ಕಾಣಿರೇ
ಇದು ಕಾರಣ ನಮ್ಮ ಕೂಡಲಚೆನ್ನಸಂಗಯ್ಯನ
ಅರಿದು ಪೂಜಿಸುವಾತನೇ ಉತ್ತಮ ಸದ್ಭಕ್ತ ಬ್ರಾಹ್ಮಣನು.
ಅರಿಯದವನೀಗಲೇ ಕೆಟ್ಟ ಹೊಲೆಯ ಕಾಣಿರಣ್ಣಾ. ॥ ೮೫೩ ॥

೧೭೦೭

ಸಂಗಸಹಿತ ಬಸವ ಲೇಸು, ಬಸವಸಹಿತ ಸಂಗಲೇಸು,
'ಸಂಗಾ ಬಸವಾ' ಎನ್ನುತ್ತಿದ್ದಿತ್ತು ಎನ್ನ ಮನವು.
ದೃಷ್ಟಿ ಮುಟ್ಟಿ ಶರಣನಾಗಿ, ಲಿಂಗಜಂಗಮಕ್ಕೆ ಯೋಗ್ಯನಾಗಿ
ಕೂಡಲಚೆನ್ನಸಂಗಯ್ಯನಲ್ಲಿ ಪ್ರಸಾದಸಂತೋಷಿ ಬಸವಣ್ಣನು, ॥ ೮೫೪ ॥

೧೭೦೮

ಸಕಲ–ನಿಷ್ಕಲ, ರೂಪು–ನಿರೂಪು ಮಾಯಾ–ನಿರ್ಮಾಯ, ಕಾರಣ–ಅಕಾರಣ,
ದೇಹ–ನಿರ್ದೇಹದಲ್ಲಿ ಅವಧಾನಿಯಾಗಿ, ಸವಾಯ–ನಿರ್ವಾಯ.
ಸಂಕಲ್ಪ–ವಿಕಲ್ಪ, ಸಂಯೋಗ–ವಿಯೋಗ, ಪುಣ್ಯ–ಪಾಪ,
ಧರ್ಮ–ಅಧರ್ಮಂಗಳೆಂಬ ಕಾಲ–ವೇಳೆಯಿಂದ ನಿರತನಾಗಿ,
ಇಂತೀ ದ್ವಯ ಸಂಪಾದನೆಗಳ ಸಂಪಾದಿಸದೆ
ಕೂಡಲಚೆನ್ನಸಂಗಯ್ಯನ ಶರಣರ ಕಾರುಣ್ಯಮು ಪಡೆವುದು ॥ ೮೫೫ ॥

೧೭೦೯

ಸಕಲ ಪ್ರಾಣಿಗಳಿಗೆ ಲೇಸಾಗಲೆಂದು ಮಜ್ಜನಕ್ಕೆರೆವ
ಲಾಂಛನಧಾರಿಯ ವೇಷಕ್ಕೆ ಶರಣೆಂಬೆ,
ಲಾಂಛನದ ಹೆಚ್ಚು–ಕುಂದನರಸೆ.
ಸಕಲ ಪದಾರ್ಥವ ತಂದು ಜಂಗಮಕ್ಕೆ ನೀಡುವೆ ಭಕ್ತಿಯಿಂದ.
ಮನೆಗೆ ಬಂದಡೆ ಪರಿಣಾಮವ ಕೊಡುವೆ, ಆತನಿದ್ದೆಡೆಗೆ ಹೋಗೆ.
ಕೂಡಲಚೆನ್ನಸಂಗಯ್ಯನಲ್ಲಿ ಅನುವಿಲ್ಲಾಗಿ ಮುನಿದುದಿಲ್ಲ, ॥ ೮೫೬ ॥

೧೭೧೦

ಸಗುಣಾನಂದಜೀವಚರ್ಯವಿಡಿದೆತ್ತಿ ಜೀವಾತ್ಮನ ಹೇಯವೆಂದು
ಆತ್ಮನ ನಿಜವನರಿದು, ನಿರ್ಗುಣಾನಂದಲೀಲೆಯ ವಿರತಿಯೊಡನೆ
ಪರಮಾತ್ಮ ತಾನೆಂದರಿದ ಶರಣಂಗೆ, ಎಂತಿರ್ದುದಂತೆ ಪೂಜೆ ನೋಡಾ.
ಆ ಶರಣ ಭೋಗಿಸಿತೆಲ್ಲವು ಲಿಂಗಾರ್ಪಿತ, ರುಚಿಸಿತೆಲ್ಲವು ಪ್ರಸಾದ.
ಆ ಶರಣನರಿದುದೆಲ್ಲವು ಪರಬ್ರಹ್ಮ, ನುಡಿದುದೆಲ್ಲವು ಶಿವತತ್ವ,
ಆ ಶರಣ ತಾನೆ ಕೂಡಲಚೆನ್ನಸಂಗಯ್ಯನು, ॥ ೮೫೭ ॥

೧೭೧೧

ಸತ್ಯಕಾಯಕ ಸತ್ಯಕಾಯಕವೆಂದು ನುಡಿವಿರಿ, ಸತ್ಯಕಾಯಕವಾವುದೆಂದರಿಯಿರಿ:
ಭಕ್ತಗೃಹಂಗಳಿಗೆ ಭೃತ್ಯಕಾಯಕವನೊಡಗೊಂಡು ಹೋಗಿ ಆ ಭಕ್ತರಿಗೆ
ತಾಸು ಭೃತ್ಯನಾಗಿ ಶರಣೆಂದು, ತನ್ನ ಕಾಯಕವನೊಪ್ಪಿಸಿ
ಪದಾರ್ಥಂಗಳನು ಪಡೆವಲ್ಲಿ ಭಕ್ತಿ ಬಂಧನವಿಲ್ಲದೆ, ಆ ಭಕ್ತನ ಮನವ ನೋಯಿಸದೆ,
ಭಕ್ತಿಮಹೋತ್ಸಾಹದಿಂದ ಬಂದ ಪದಾರ್ಥಂಗಳನು ತಂದು ಲಿಂಗಜಂಗಮಕ್ಕೆ ನೀಡಿ,
ಅವರೊಕ್ಕುದ ಕೊಂಡಿಪ್ಪುದೆ ಸತ್ಯಕಾಯಕ, ಆತನೆ ಸದ್ಭಕ್ತ.
ಇನಿತಲ್ಲದೆ ಲಿಂಗಜಂಗಮಕ್ಕೆ ಸಲುವುದೆಂದು ಭಕ್ತನ ಬಂಧನಕಿಕ್ಕಿ
ಭಕ್ತಿಯ ಮನೋತ್ಸಾಹಗುಂದಿಸಿ, ಅಸುರಕರ್ಮದಿಂದ ತಂದ ದ್ರವ್ಯಂಗಳೆಲ್ಲವು
ಅಸ್ಥಿ ಮಾಂಸ ಚರ್ಮಂಗಳೆನಿಸುವುದಲ್ಲವೆ ಅವು ಪದಾರ್ಥಂಗಳಲ್ಲ.
ಅದು ಲಿಂಗಜಂಗಮಕ್ಕೆ ಸಲ್ಲದು, ಅವಂಗೆ ಪ್ರಸಾದವಿಲ್ಲ.
ಅದು ಸತ್ಯಕಾಯಕಕ್ಕೆ ಸಲ್ಲದು.
ಅವ ರಾಕ್ಷಸನಪ್ಪನಲ್ಲದೆ ಭಕ್ತನಲ್ಲ. ಅವನ ಮನೆಯ ಹೊಕ್ಕು
ಲಿಂಗಾರ್ಚನೆಯ ಮಾಡುವಾತ ಜಂಗಮಸ್ಥಲಕ್ಕೆ ಸಲ್ಲ.
ಅವರಿರ್ವರನು ಕೂಡಲಚೆನ್ನಸಂಗಯ್ಯ
ಇಪ್ಪತ್ತೆಂಟುಕೋಟಿ ನಾಯಕನರಕದಲ್ಲಿಕ್ಕುವ. ॥ ೮೫೮ ॥

೧೭೧೨

ಸತ್ಯವುಳ್ಳವರಿಗೆ ನಿತ್ಯನೇಮದ ಹಂಗೇಕಯ್ಯಾ?
ಅರಿವುಳ್ಳವರಿಗೆ ಅಗ್ಗವಣಿಯ ಹಂಗೇಕಯ್ಯಾ?
ಮನಶುದ್ಧವುಳ್ಳವರಿಗೆ ಮಂತ್ರದ ಹಂಗೇಕಯ್ಯಾ?
ಭಾವಶುದ್ಧವುಳ್ಳವರಿಗೆ ಪತ್ರೆಯ ಹಂಗೇಕಯ್ಯಾ?
ನಿಮ್ಮನರಿದ ಶರಣರಿಗೆ ನಿಮ್ಮ ಹಂಗೇಕಯ್ಯಾ
ಕೂಡಲಚೆನ್ನಸಂಗಮದೇವಾ? ॥ ೮೫೯ ॥

೧೭೧೩

ಸತ್ಯವೆನ್ನದೆ ಸಹಜವೆನ್ನದೆ ಅಚಲವೆನ್ನದೆ ಅಖಂಡಿತವೆನ್ನದೆ,
ಪರಿಪೂರ್ಣವೆನ್ನದೆ ಶೂನ್ಯವೆನ್ನದೆ ನಿಃಶೂನ್ಯವೆನ್ನದೆ ನಿಜವೆನ್ನದೆ—
ಏನೂ ಎನ್ನದೆ, ಕೂಡಲಚೆನ್ನಸಂಗಯ್ಯನೆಂಬ ನುಡಿಗೆಡೆಯಿಲ್ಲದುದ
ನಾನೇನೆಂಬೆ? ॥ ೮೬೦ ॥

೧೭೧೪

ಸತ್ಯಸದಾಚಾರವುಳ್ಳ ಶಿವಶರಣರವರಹುದೆಂದುದೆ
ಶುಭಮುಹೂರ್ತ[ಶುಭಘಳಿಗೆ] ಸಕಲ ಬಲ, ಸಕಲ ಜಯ,
ಅವರಲ್ಲವೆಂದುದೇ ವಿಘ್ನ ವಿಪಗಳಿಗೆ ನಿರ್ಬಲ ಅಪಜಯ.
ಅದೆಂತೆಂದಡೆ:
ಅವರು ಮಾಡುವ ಕಾರ್ಯವೆಲ್ಲಾ ಕೂಡಲಚೆನ್ನಸಂಗಮಾಧೀನವಾಗಿ.
ನೀನೆ ಮೃತ್ಯುಂಜಯನು, ವಿಶ್ವಾಧಿಪತಿಯಾದ ಕಾರಣ
ಜಯವಪ್ಪುದಯ್ಯಾ. || ೮೬೧ ||

೧೭೧೫

ಸತ್ವ ರಜ ತಮವೆಂಬವು ಪ್ರಪಂಚುವೆಂದೆಂಬಿರಿ;
ಸತ್ವವೆ ಪರತತ್ವ ಕಾರಣ, ಒಂದೆರಡೆಣಿಕೆಯ ಉದಯಾಸ್ತಮಾನವುಂಟೆ
ಆತ್ಮವಿತ್ತುವಿಂಗೆ?
ಉದಕವನುಂಡ ಲೋಹದ ಪರಿಯಂತೆ ಇರಬೇಕು,
ಮೂಗ ಕಂಡ ಕನಸ ನೀವು ಬಲ್ಲಡೆ ಹೇಳಿರೆ!
ಉಪಾಧಿಯಿಲ್ಲದುಪಮೆ, ಭಾವವಿಲ್ಲದ ಭರಿತ, ಇಂದ್ರಿಯವರತ ಪ್ರಕಾಶ ನೋಡಿರೆ!
ಕಾರಣವಿಲ್ಲದ ಕಾರ್ಯ, ಕೇಳಲಿಲ್ಲದ ಉಲುಹು, ಬೇಡಲಿಲ್ಲದ ಪದವಿದು.
ತೋರಿ, ಆದಿ ಅಂತ್ಯವಿಲ್ಲದ, ತೃಪ್ತಿಯಡಗಿದ ನಿಜಕ್ಕೆ
ನಾನು ನೀನೆಂಬೊಂದು ಪ್ರತಿಯುಂಟೆ?
ನಿಜಭಾವವಳಿದಾತ್ಮ ನಿತ್ಯವೆಂಬುದನು ಎಲ್ಲ ಶ್ರುತಿಗಳಲ್ಲಿ ಕೇಳಿಕೊಳ್ಳಿ.
ಸುಖದ ಸೋಕಿನ ಪರಿಣಾಮದ ಪದವನು
ಕೂಡಲಚೆನ್ನಸಂಗಯ್ಯನಲ್ಲಿ ಪ್ರಭುವೆ ಬಲ್ಲ. || ೮೬೨ ||

೧೭೧೬

ಸತ್ಯಾಚಾರಯುಕ್ತರಾದ ಭಕ್ತಜಂಗಮವನರಸಿಕೊಂಡು ಹೋಗಿ
ಭಕ್ತದೇಹಿಕದೇವನೆಂಬ ಶ್ರುತಿಯನರಿದು ಪ್ರಸಾದಕ್ಕೆ ಸೂತಕವ ಮಾಡುವ
ಪಾತಕರ ವಿಧಿಯಿನ್ನೆಂತೊ?
'ಶರೀರಮರ್ಥ ಪ್ರಾಣಂಚ ಸದ್ಗುರುಭ್ಯೋ ನಿವೇದಯೇತ್' ಎಂಬುದಾಗಿ
ಆತನ ತನುಮನಧನಂಗಳೆಲ್ಲಾ ಗುರುವಿನ ಸೊಮ್ಮು
ಆತನ ಸರ್ವಾಂಗವೆಲ್ಲವೂ ಪ್ರಸಾದಕ್ಷೇತ್ರ
ಆ ಪ್ರಸಾದಕ್ಷೇತ್ರದೊಳಗಿದ್ದವರೆಲ್ಲರೂ ಪ್ರಸಾದಮಯ
ಆ ಪ್ರಸಾದಮಯದೊಳಗಿದ್ದವರೆಲ್ಲರೂ ಪ್ರಸಾದದ ಬೆಳೆ, ಪ್ರಸಾದದಾಗು.

ಆತ ಮುಟ್ಟಿದ ಪದಾರ್ಥವೆಲ್ಲವೆಲ್ಲವೂ ಪ್ರಸಾದವಪ್ಪುದು
ಆತ ಮಾಡಿದುವೆಲ್ಲವು ಪ್ರಸಾದದ ಕಾಯಕ, ಪ್ರಸಾದದ ನಡೆ, ಪ್ರಸಾದದ ನುಡಿ.
ಇಂತಪ್ಪ ಪ್ರಸಾದವಿದ್ದಲ್ಲಿಗೆ ಹೋಗಿ 'ಅದುಬೇಕು ಇದುಬೇಕು' ಎಂದು
ಓಗರಪದಾರ್ಥದ ಸವಿಯನರಸುವ ಪಾತಕದ್ರೋಹಿಗಳ ಮೆಚ್ಚ
ನಮ್ಮ ಕೂಡಲಸಂಗಮದೇವ. ॥ ೮೬೩ ॥

೧೭೧೭

ಸತಿಯರ ನಡಮಾಂಸವೆಂಬ ಮಾಂಸದ ಪುತ್ಥಳಿಯ
ನಿಚ್ಚನಿಚ್ಚ ಕಡಿದುಕೊಂಡು ತಿಂಬ ನಾಯಿಗಳಿಗೆ
ಎಲ್ಲಿಯದೊ ವ್ರತಶೀಲಸಂಬಂಧ?
ಅವರ ಅಧರ ಸೇವನೆಯೆ ಮಧುಮಾಂಸ,
ಅವರ ಉದರ ಸೇವನೆಯೆ ಸುರೆಮಾಂಸ
ಕಾಮವೆ ಕಬ್ಬಲಿಗ, ಕ್ರೋಧವೆ ಹೊಲೆಯ, ಲೋಭವೆ ಕಳ್ಳ,
ಮೋಹವೆ ಬಲೆಗಾರ, ಮದವೆ ಮಾದಿಗ, ಮತ್ಸರವೆ ಸುರಾಪಾನಿ—
ಇಂತೀ ಷಡ್ವಿಧ ಭವಿಯ, ತಮ್ಮೆದೆಯೊಳಗೆ ಇಂಬಿಟ್ಟುಕೊಂಡು
'ಭವಿಪಾಕ ಪರಪಾಕ' ಎಂಬ ಪಂಚಮಹಾಪಾತಕರ,
ಮೆಚ್ಚುವನೆ ಕೂಡಲಚೆನ್ನಸಂಗಮದೇವ? ॥ ೮೬೪ ॥

೧೭೧೮

ಸತಿಯ ಸಂಗವ ತಿಸುಖವೆಂದರಿದಡೇನು,
ಗಣಸಾಕ್ಷಿಯಾಗಿ ವಿವಾಹವಾಗದನ್ನಕ್ಕರ?
ಕಣ್ಣು ಕಾಂಬುವೆಂದಡೆ, ಕತ್ತಲೆಯಲ್ಲಿ ಕಾಂಬುವೆ ದೀಪವಿಲ್ಲದನ್ನಕ್ಕರ?
ಸೂರ್ಯನ ಪ್ರಕಾಶದಿಂದ ಕಂಡು
ತಾನೆ, ಕಂಡೆನೆಂಬ ಜಗದ ನಾಣ್ನುಡಿಯಂತಾಯಿತ್ತು.
ಅಂಗವ ಬಿಟ್ಟು ಆತ್ಮನುಂಟೆ? ಶಕ್ತಿಯ ಬಿಟ್ಟು ಶಿವನುಂಟೆ?
ಇದು ಕಾರಣ—ಸ್ಥೂಲ ಸೂಕ್ಷ್ಮ ಕಾರಣ ತನುತ್ರಯವಿರಲು,
ಇಷ್ಟ ಪ್ರಾಣ ಭಾವವೆಂಬ ತ್ರಿವಿಧಲಿಂಗಸಂಬಂಧ ಬೇಡವೆಂದಡೆ
ಅಸಂಖ್ಯಾತ ಪ್ರಮಥಗಣಂಗಳೊಪ್ಪುವರೆ?
ಕೂಡಲಚೆನ್ನಸಂಗಯ್ಯನಲ್ಲಿ ಇಷ್ಟಲಿಂಗಸಂಬಂಧವಿಲ್ಲದವರ ಮುಖವ
ನೋಡಲಾಗದು ಪ್ರಭುವೆ. ॥ ೮೬೫ ॥

೧೭೧೯

ಸತ್ಕ್ರಿಯಾಸಮ್ಯಗ್ಜ್ಞಾನಸಂಪನ್ನರಪ್ಪ
ಶಿವಯೋಗಿಗಳೆಡೆಯಾಡಿದ ನೆಲವೆ ಸುಕ್ಷೇತ್ರವಯ್ಯಾ
ಅವರಡಿಯಿಟ್ಟ ಜಲವೆ ಶುಭತೀರ್ಥವಯ್ಯಾ.
ಸಕಲತೀರ್ಥಕ್ಷೇತ್ರವೆಲ್ಲ ಶಿವಯೋಗಿಯ ಶ್ರೀಪಾದದಲ್ಲಿ ಅಡಗಿಪ್ಪವಯ್ಯಾ.
ಜ್ಞಾನಯೋಗಪರಾಣಾಂ ತು ಪಾದಪ್ರಕ್ಷಾಲಿತಂ ಜಲಂ।
ಭಾವಶುದ್ಧ್ಯರ್ಥಮಜ್ಞಾನಾಂ ತತ್ತೀರ್ಥಂ ಮುನಿಪುಂಗವ॥ ಎಂದುದಾಗಿ
ಶಿವಯೋಗಿಯ ಪಾದೋದಕವ ಸೇವಿಸಿ
ನಮ್ಮ ಶರಣರೆಲ್ಲ ಪರಮುಕ್ತರಾದರಯ್ಯಾ
ಕೂಡಲಚೆನ್ನಸಂಗಮದೇವಾ. ॥ ೮೬೬ ॥

೧೭೨೦

ಸದ್ಗುರುಪ್ರಸನ್ನಿಕೆಯಿಂದ ಲಿಂಗಪ್ರಸನ್ನಿಕೆ,
ಸದ್ಗುರುಪ್ರಸನ್ನಿಕೆಯಿಂದ ಜಂಗಮಪ್ರಸನ್ನಿಕೆ,
ಸದ್ಗುರುಪ್ರಸನ್ನಿಕೆಯಿಂದ ಪ್ರಸಾದಪ್ರಸನ್ನಿಕೆ,
ಇದು ಕಾರಣ—ಕೂಡಲಚೆನ್ನಸಂಗಮದೇವಾ
ಸದ್ಗುರುಪ್ರಸನ್ನಿಕೆಯಿಂದ ಸರ್ವಸಿದ್ಧಿಯಯ್ಯಾ. ॥ ೮೬೭ ॥

೧೭೨೧

ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನವೆಂದು
ಶಿವಲಿಂಗದ ಮೇಲೆ ಪಂಚವಕ್ತ್ರವ ಸ್ಥಾಪಿಸುವ
ಅನಾಚಾರಿಯ ಮಾತ ಕೇಳಲಾಗದು.
ಇಂತಪ್ಪ ಲಿಂಗದ್ರೋಹಿಯ ತೋರದಿರಯ್ಯಾ,
ಸಕಲ ನಿಃಕಲದಂತಹನೆ ಲಿಂಗವು?
ಕೂಡಲಚೆನ್ನಸಂಗಯ್ಯನಲ್ಲಿ ಸರ್ವಾಂಗಲಿಂಗಿ ಬಸವಣ್ಣ ಬಲ್ಲ. ॥ ೮೬೮ ॥

೧೭೨೨

ಸಮತೆಯೆಂಬ ಕಂಥೆಯ ತೊಟ್ಟು,
ಸುಬುದ್ಧಿಯೆಂಬ ಟೊಪ್ಪರವಿಕ್ಕಿ,
ವಿಷಯವೆಂಬ ಹಾವುಗೆಯ ಮೆಟ್ಟಿ, ತಮಂಧವೆಂಬ ಕುಣಿಯಂ ಬೀಳದೆ,
ಮದವೆಂಬ ಚೇಳ ಮೆಟ್ಟದೆ, ವೈರಾಗ್ಯವೆಂಬ ಕೊರಡನೆಡಹದೆ,

'ಭಕ್ತಿ ಭಿಕ್ಷಾಂ ದೇಹಿ' ಎಂದು ಬಸವಣ್ಣ ಕಪ್ಪಡಿಗೆ ಬಂದ
ಕೂಡಲಚೆನ್ನಸಂಗಮದೇವಾ. || ೮೬೯ ||

೧೭೨೩

ಸಮಯದಲ್ಲಿ ಸಮ್ಮತನು ಆಚಾರದ ನೆಲೆಯನರಿದು,
ಹೃದಯದ ಕತ್ತಲೆಯ ಉದಯದಲ್ಲಿಯೇ ಕಳೆದ.
ಮುಟ್ಟುವುದ ಮುಟ್ಟವೆ ಕಳೆದ; ಮುಟ್ಟದುದ ಮುನ್ನವೆ ಕಳೆದ.
ಅಯ್ಯಾ ಅಯ್ಯಾ ಎಂದಲ್ಲಿಯೆ ಕಲಿಯಾದ.
ಕೇಸರಿಸಮ ಜೋಗ; ಐದರ ಮದಸೇನೆ ಮುರಿಯಿತ್ತು,
ಎನ್ನೊಡೆಯ ಕೂಡಲಚೆನ್ನಸಂಗಯ್ಯ ಹಿಡಿವಡೆದ. || ೮೭೦ ||

೧೭೨೪

ಸಮಯವಿರೋಧವಾದೀತೆಂದು ಪಾದಾರ್ಚನೆಯ ಮಾಡುವರಯ್ಯಾ.
ಲಿಂಗಜಂಗಮಕ್ಕೆ ಪಾದವಾವುದು? ಅರ್ಚನೆಯಾವುದು? ಎಂಬ
ತುದಿ ಮೊದಲನರಿಯರು.
ಉದಾಸೀನದಿಂದ ಪಾದಾರ್ಚನೆಯ ಮಾಡಿ, ಪಾದೋದಕ ಧರಿಸಿದಡೆ
ಅದೇ ಪ್ರಳಯಕಾಲಜಲ.
ವರ್ಮವನರಿದು ಕೊಂಡಡೆ ತನ್ನ ಭವಕ್ಕೆ ಪ್ರಳಯಕಾಲಜಲ!
ಈ ಉಭಯವ ಭೇದಿಸಿ ಸಂಸಾರಮಲಿನವ ತೊಳೆವಡೆ
ಕೂಡಲಚೆನ್ನಸಂಗಾ ಈ ಅನುವ ನಿಮ್ಮ ಶರಣ ಬಲ್ಲ. || ೮೭೧ ||

೧೭೨೫

ಸರವರದೊಳಗೊಂದು ಕಿರಿದು ಕಮಳವು ಹುಟ್ಟಿ,
ಪರಿಮಳವಡಗಿತ್ತನಾರೂ ಅರಿಯರಲ್ಲಾ!
ಅರಳಲೀಯದೆ ಕೊಯ್ದು ಕರಡಿಗೆಯೊಳಗಿರಿಸಿ
ಸುರಕ್ಷಿತವ ಮಾಡಲಾರೂ ಅರಿಯರಲ್ಲಾ!
ಎಡದ ಕೈಯಲಿ ಲಿಂಗ, ಬಲದ ಕೈಯಲಿ ಪುಷ್ಪ ಎರಡನರಿದು
ಪೂಜೆಯ ಮಾಡಲರಿಯರಲ್ಲಾ!
(ಇವರಲೋಗರವ) ಮಾಡಿ ಸರುವ ತೃಪ್ತಿಯ ಕೊಟ್ಟು
ಭರಿತರಾಗಿಪ್ಪರಿನ್ನಾರು ಹೇಳಾ!
ಪರದೇಶಮಂಡಲವನಿರವನೊಂದನೆ ಮಾಡಿ
ಪರಿಮಾಯ ಪರಿಯಾಯವನೊರೆದು ನೋಡುತ್ತ

ಕರುವಿಟ್ಟ ರೂಹಿನಂತೆ ಕಣ್ಣೆರಡು ಹಳಚದಂತೆ,
ಧರೆಯು ಏರಿಯು ಮೇಲೆ ಮೆಟ್ಟಿ ನಿಂದು ನೋಡುತ್ತ
ಹರಿವ ವೃಷಭನ ಹಿಡಿದು ನೆರೆವ ಸ್ವಾಮಿಯ ಕಂಡು
ಜನನ ಮರಣವಿಲ್ಲದಂತಾದೆನಲ್ಲಾ!
ಕರುಣಿ ಕೂಡಲಚೆನ್ನಸಂಗಯ್ಯಾ ಬಸವಣ್ಣನ ಕರುಣ,
ಪ್ರಭುವಿಗಲ್ಲದೆ ಇನ್ನಾರಿಗೂ ಅಳವಡದು. ॥ ೮೭೨ ॥

೧೭೨೬

ಸರ್ವತ್ರಯ ಸರ್ವಗುಣತ್ರಯ ಪ್ರಸಾದವವ್ವಾ,
ಸರ್ವಭಾವ ಪ್ರಸಾದವವ್ವಾ, ಸರ್ವಪರಿಪೂರ್ಣ ಪ್ರಸಾದವವ್ವಾ,
ಸ್ವಯುವವ್ವಾ, ಶರಣನವ್ವಾ,
ಸ್ವಯುವವ್ವಾ ಕೂಡಲಚೆನ್ನಸಂಗ ಸರ್ವಪ್ರಸಾದವವ್ವಾ! ॥ ೮೭೩ ॥

೧೭೨೭

ಸರ್ವಸಂಗನಿವೃತ್ತಿಯ ಮಾಡಿದ ಬಳಿಕ,
ಆದಿ ಮಧ್ಯ ಅವಸಾನವನರಿಯಬೇಕು.
ಅರಿಯದೆ ಭಕ್ತಿ-ಜ್ಞಾನ-ವೈರಾಗ್ಯವೆಂಬ ಬರಿ ವೇಷಕಿಂದ
ಬಡಸಂಸಾರವೆ ಲೇಸು-ಕೂಡಲಚೆನ್ನಸಂಗಮದೇವಾ. ॥ ೮೭೪ ॥

೧೭೨೮

ಸರ್ವಸಂಗಪರಿತ್ಯಾಗ ಮಾಡಿದ ಶಿವಶರಣನ
ಲೋಕದ ಸಂಸಾರಿಗಳೆಂತು ಮೆಚ್ಚುವರಯ್ಯಾ?
ಊರೊಳಗಿರ್ದಡೆ [ಸಂಸಾರಿ] ಎಂಬರು,
ಅಡವಿಯೊಳಗಿರ್ದಡೆ ಮೃಗನೆಂಬರು
ಹೊನ್ನ ಬಿಟ್ಟಡೆ ದರಿದ್ರನೆಂಬರು, ಹೆಣ್ಣ ಬಿಟ್ಟಡೆ ನಪುಂಸಕನೆಂಬರು,
ಮಣ್ಣ ಬಿಟ್ಟಡೆ ಪೂರ್ವಕರ್ಮಿ ಎಂಬರು, ಮಾತನಾಡದಿರ್ದಡೆ ಮೂಗನೆಂಬರು
ಮಾತನಾಡಿದಡೆ ಜ್ಞಾನಿಗೇಕಯ್ಯಾ ಮಾತೆಂಬರು
ನಿಜವನಾಡಿದಡೆ ನಿಷ್ಠುರಿಯೆಂಬರು, ಸಮತೆಯನಾಡಿದಡೆ ಅಂಜುವನೆಂಬರು.
ಇದು ಕಾರಣ ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣ ಲೋಕದಿಚ್ಛೆಯ ನುಡಿಯ
ಲೋಕದಿಚ್ಛೆಯ ನಡೆಯ! ॥ ೮೭೫ ॥

೧೭೨೯

ಸರ್ವಾಂಗಪ್ರಸಾದವವ್ವಾ; ಸರ್ವಾರ್ಥಪ್ರಸಾದವವ್ವಾ;
ಸರ್ವಾಂಗ ಸ್ವಯವವ್ವಾ, ಕೂಡಲಚೆನ್ನಸಂಗನ ಪ್ರಸಾದವವ್ವಾ! ॥ ೮೭೬ ॥

೧೭೩೦

ಸರ್ವೇಂದ್ರಿಯ ಸಮ್ಮತವಾಗಿ ಸರ್ವಕರಣಂಗಳ ಸಮಾಧಾನವ ಮಾಡಿ,
ಸಮಸ್ತ ಸುಖಭೋಗಾದಿಗಳ ಬಯಸದೆ, ತನ್ನ ಮರೆದು ಶಿವತತ್ವವನರಿದು,
ಅಹಂಕಾರ ಮಮಕಾರವಿಲ್ಲದೆ, ಜ್ಞಾತೃ ಜ್ಞಾನ ಜ್ಞೇಯವೆಂಬ ತ್ರಿಪುಟಿಯ ಮೀರಿ,
ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗ[illegible]ು,
ಸ್ತುತ್ತಿ-ನಿಂದಾದಿ, ಕಾಂಚನ ಲೋಷ್ಟಂಗಳ ಸಮಾನಂಗಂಡು,
ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯಾದಿ ಪದಂಗಳ ಬಯಸದೆ,
ವೇದ ವೇದಾಂತ ತರ್ಕ ವ್ಯಾಕರಣ ದರ್ಶನ ಸಂಪಾದನೆಗಳ ತೊಲಗಿಸಿ,
ಖ್ಯಾತಿ ಲಾಭದ ಪೂಜೆಗಳ ಬಯಸದೆ
ತತ್ವನಿರ್ಣಯವನರಿಯದವರೊಳು ತಾನೆಂಬುದನೆಲ್ಲಿಯೂ ತೋರದೆ;
ಹೊನ್ನು ತನ್ನ ಲೇಸ ತಾನರಿಯದಂತೆ, ಬೆಲ್ಲ ತನ್ನ ಸಿಹಿಯ ತಾನರಿಯದಂತೆ,
ವಾರಿಶಿಲೆ ಉದಕದೊಳಡಗಿದಂತೆ, ಪುಷ್ಪದೊಳಗೆ ಪರಿಮಳವಡಗಿದಂತೆ
ಅಗ್ನಿಯೊಳಗೆ ಕರ್ಪೂರವಡಗಿದಂತೆ,
ಮಹಾಲಿಂಗದಲ್ಲಿ ಲೀಯವಾದುವೆ ಲಿಂಗೈಕ್ಯ ಕಾಣಾ
ಕೂಡಲಚೆನ್ನಸಂಗಮದೇವಾ. ॥ ೮೭೭ ॥

೧೭೩೧

ಸಹಜದಿಂದ ನಿರಾಲಂಬವಾಯಿತ್ತು, ನಿರಾಲಂಬದಿಂದ ನಿರವಯವಾಯಿತ್ತು,
ನಿರವಯದಿಂದ ನಿರಾಕಾರವಾಯಿತ್ತು. ನಿರಾಕಾರದಿಂದ ಆದಿಯಾಯಿತ್ತು.
ಆದಿಯಿಂದ ಮೂರ್ತಿಯಾದನೊಬ್ಬ ಶರಣ,
ಆ ಶರಣನ ಮೂರ್ತಿಯಿಂದ ಸದಾಶಿವನಾದ.
ಆ ಸದಾಶಿವಮೂರ್ತ್ತಿಗೆ ಜ್ಞಾನಶಕ್ತಿಯಾದಳು.
ಆ ಸದಾಶಿವಂಗೆಯೂ ಜ್ಞಾನಶಕ್ತಿಯಿಬ್ಬರಿಗೆಯೂ ಶಿವನಾದ.
ಆ ಶಿವಂಗೆ ಇಚ್ಛಾಶಕ್ತಿಯಾದಳು.
ಆ ಶಿವಂಗೆಯೂ ಇಚ್ಛಾಶಕ್ತಿಯಿಬ್ಬರಿಗೆಯೂ ರುದ್ರನಾದ.
ಆ ರುದ್ರಂಗೆ ಕ್ರಿಯಾಶಕ್ತಿಯಾದಳು.
ಆ ರುದ್ರಂಗೆಯೂ ಕ್ರಿಯಾಶಕ್ತಿಯಿಬ್ಬರಿಗೆಯೂ ವಿಷ್ಣುವಾದ.
ಆ ವಿಷ್ಣುವಿಂಗೆ ಮಹಾಲಕ್ಷ್ಮಿಯಾದಳು.

ಆ ವಿಷ್ಣುವಿಂಗೆಯೂ ಮಹಾಲಕ್ಷ್ಮಿಯಿಬ್ಬರಿಗೆಯೂ ಬ್ರಹ್ಮನಾದ.
ಆ ಬ್ರಹ್ಮಂಗೆ ಸರಸ್ವತಿಯಾದಳು.
ಆ ಬ್ರಹ್ಮಂಗೆಯೂ ಸರಸ್ವತಿಯಿಬ್ಬರಿಗೆಯೂ
ನರರು ಸುರರು ದೇವರ್ಕಳು ಹೆಣ್ಣು ಗಂಡು
ಸಚರಾಚರ ಸಹಿತವಾಗಿ ಎಂಬತ್ತುನಾಲ್ಕುಲಕ್ಷ ಜೀವಜಂತುಗಳು,
ತೋರುವ ತೋರಿಕೆಯೆಲ್ಲ ಹುಟ್ಟಿತ್ತು ಕಾಣಾ,
ಕೂಡಲಚೆನ್ನಸಂಗಮದೇವಾ. ॥ ೮೭೮ ॥

೧೭೩೨

ಸಹಜ ಸಂಬಂಧಾಚಾರದ ನಿರ್ಣಯವನಿಲ್ಲಿ ಹೇಳಿಹೆ ಕೇಳಿರಯ್ಯಾ:
ಪ್ರತ್ಯಕ್ಷವಾಗಿ ಜಂಗಮವೆ ಭಕ್ತನ ಮಠಕ್ಕೆ ಬಿಜಯಂಗೈಯೆ
ನೂರು ಮಂದಿಯಲ್ಲಿ ಮೂರು ಮಂದಿ ಇರ್ಪರೆಂಬಂತೆ,
ಆ ಜಂಗಮದಲ್ಲಿ ಗುರುಲಿಂಗಗಳುಂಟೆಂದು ತಿಳಿದು
ತ್ರಿವಿಧ ಪಾದೋದಕವನಲ್ಲಿ ಪಡೆವುದು– ಇದೇ ಸದಾಚಾರ.
ಆ ಜಂಗಮವಿಲ್ಲದೆ ಗುರು ಒರ್ವನೆ ಬಿಜಯಂಗೈಯೆ,
ಆ ಗುರುವಿನಲ್ಲಿ ವಿಧಿಗನುಗುಣವಾಗಿ ಜಂಗಮವನನುಸಂಧಾನಿಸಿ
ಗುರುವಿನಲ್ಲಿ ಲಿಂಗವು ಸಹಜವಾಗಿರ್ಪುದರಿಂದ
ಅಲ್ಲಿ ತ್ರಿವಿಧೋದಕವ ಪಡೆವುದು– ಇದೊಂದು ಸಹಜಸಂಬಂಧವು.
ಗುರುಜಂಗಮರಿರ್ವರೂ ಸಮಯಕ್ಕೊದಗದಿರ್ಪಲ್ಲಿ
ಆ ಗುರುಜಂಗಮವ ತನ್ನ ಇಷ್ಟಲಿಂಗದಲ್ಲಿ ಕ್ರಮವರಿತು ಅನುಸಂಧಾನಿಸಿ
ಅಲ್ಲಿ ತ್ರಿವಿಧೋದಕವ ಪಡೆವುದು– ಇದೊಂದು ಕೇವಲ ಸಂಬಂಧವು.
ಇಂತೀ ಸಹಜಸಂಬಂಧದ ಭೇದವನರಿದು, ಅರಿದಂತಾಚರಿಸಿ
ನಮ್ಮ ಶರಣರು ಕೂಡಲಚೆನ್ನಸಂಗಯ್ಯನಲ್ಲಿ ಅಚ್ಚಸುಖಿಗಳಾದರು. ॥ ೮೭೯ ॥

೧೭೩೩

ಸಾಧಕದೆಸೆಯಲ್ಲಿ ಕುಲವನರಸಬಹುದಲ್ಲದೆ,
ಸಿದ್ಧದೆಸೆಯಲ್ಲಿ ಅರಸಲಹುದೆ?
ಹಲವು ಜಾತಿಯ ಕಟ್ಟಿಗೆಯ ಸುಟ್ಟಲ್ಲಿ ಅಗ್ನಿಯೊಂದಲ್ಲದೆ
ಅಲ್ಲಿ ಕಟ್ಟಿಗೆಗಳ ಕುರುಹು ಕಾಂಬುದೆ?
'ಶಿವಭಕ್ತ ಸಮಾವೇಶೇ ನ ಜಾತಿ ಪರಿಕಲ್ಪನಾ।
ಇಂಧನೇಷ್ವಗ್ನಿದಗ್ಧೇಷು ಕೋವಾ ಭೇದಃ ಪ್ರಕೀರ್ತ್ಯತೇ॥' ಎಂದುದಾಗಿ,
ಶಿವಜ್ಞಾನಸಿದ್ಧರಾದ ಶಿವಭಕ್ತರಲ್ಲಿ ಪೂರ್ವಜಾತಿಯನರಸುವ
ಅರೆಮರುಳರನೇನೆಂಬೆ ಕೂಡಲಚೆನ್ನಸಂಗಮದೇವಾ. ॥ ೮೮೦ ॥

೧೭೩೪

ಸಾಧಕರೆಲ್ಲ ಕಳವಳಿಸಿ ಹೋದರು,
ವಿದ್ಯಾಸಾಧಕರೆಲ್ಲ ಬುದ್ಧಿಗೆಟ್ಟರು.
ತತ್ವಸಾಧಕರೆಲ್ಲ ಭಕ್ತಿಹೀನರಾದರು.
ಲಿಂಗಸಾಧಕರೆಲ್ಲ ಭೂಭಾರಕರಾದರು.
ಕೂಡಲಚೆನ್ನಸಂಗಮದೇವ, ನಿಮ್ಮ ಶರಣ ಬಸವಣ್ಣ
ಜಂಗಮಸಾಧಕನಾಗಿ ಸ್ವಯಲಿಂಗವಾದ. ॥ ೮೮೧ ॥

೧೭೩೫

ಸಾಯುವರ ಸತ್ತವರು ಹೊತ್ತರು, ತಲೆಯಿಲ್ಲದವರತ್ತರು,
ಕೈಯಿಲ್ಲದವರು ಹಿಡಿದರು, ಕಾಲಿಲ್ಲದವರು ಕೊಂಡೊಯ್ದರು,
ಕಣ್ಣಿಲ್ಲದವರು ಕಂಡರು, ಕಿವಿಯಿಲ್ಲದವರು ಕೇಳಿದರು.
ಇದು ಕಾರಣ ಕೂಡಲಚೆನ್ನಸಂಗಾ
ನಿಮ್ಮ ಶರಣರು ಸರ್ವಾಂಗಲಿಂಗಿಗಳು! ॥ ೮೮೨ ॥

೧೭೩೬

ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯದವರೆಲ್ಲರು ಬಸವಣ್ಣನಂತಹರೆ?
ಇನ್ನು ಭೂಲೋಕದವರೆಲ್ಲರು ಬಸವಣ್ಣನಂತಹರೆ?
ದುರಿತನಿವಾರಣ ಕೂಡಲಚೆನ್ನಸಂಗಾ
ನಿಮ್ಮ ಶರಣ ಬಸವಣ್ಣನಿಂತಹ ಮಹಾಮಹಿಮ ನೋಡಯ್ಯಾ! ॥ ೮೮೩ ॥

೧೭೩೭

ಸೀಮೆ ನೇಮಂಗಳ ಪೊದ್ದದ ನಿಜವೀರಶೈವದೀಕ್ಷೆಯನು
ಗುರು ತನ್ನ ಶಿಷ್ಯಂಗಿತ್ತು, ಮತ್ತೆ ಆ ಶಿಷ್ಯನ ನೇಮಸ್ಥನ ಮಾಡಿದಲ್ಲಿ,
ಆ ನಿಜದೀಕ್ಷೆಗೆಟ್ಟು ಆ ಗುರುಶಿಷ್ಯರಿರ್ವರೂ ಪತಿತರಾಗಿ
ಶ್ವಾನಯೋನಿಯಲ್ಲಿ ಶತಸಹಸ್ರವೇಳೆ ಬಂದು,
ನರಕವಿಪ್ಪತ್ತೆಂಟುಕೋಟಿಯನೈದುವವರು. ಅದೆಂತೆಂದಡೆ:
ನೇಮಸ್ಥಂಚನದೀಕ್ಷೇನ ಶ್ವಾನಜನ್ಮೇಷು ಜಾಯತೇ।
ಅಷ್ಟವಿಂಶತಿ ಕೋಟ್ಯಸ್ತು ನರಕಂ ಯಾಂತ್ರಿ ಧ್ರುವಂ॥ ಎಂದುದಾಗಿ,
ನಿಜಗೆಟ್ಟು ಪತಿತರಾಗಿ ನರಕಕ್ಕಿಳಿವ ಪಾತಕರನೆನಗೆ ತೋರದಿರಾ
ಕೂಡಲಚೆನ್ನಸಂಗಯ್ಯಾ. ॥ ೮೮೪ ॥

೧೭೩೮

ಸುಖವನರಿಯದ ಕಾರಣ ಹೆಂಗಸು ಸೂಳೆಯಾದಳು.
ಲಿಂಗವನರಿಯದ ಕಾರಣ ಭಕ್ತ ಶೀಲವಂತನಾದ.
ಈ ಉಭಯ ಕುಲಸ್ಥಲದರಿವು ನಿಷ್ಪತ್ತಿಯಾಗದನ್ನಕ್ಕರ
ಕೂಡಲಚೆನ್ನಸಂಗಮದೇವನೆಂತೊಲಿವನಯ್ಯಾ? ॥ ೮೮೫ ॥

೧೭೩೯

ಸುಟ್ಟು ಶುದ್ಧವಾದ ಬಳಿಕ ಮತ್ತೆ ಸುಡಲಿಕೆಲ್ಲಿಯದೊ?
ಅಟ್ಟು ಪಾಕವಾದ ಬಳಿಕ ಮತ್ತೆ ಅಡಲೆಲ್ಲಿಯದೊ?
ಇನ್ನು ಶುದ್ಧವ ಮಾಡಿಹೆನೆಂಬ ವಿಧಿಯ ನೋಡಾ
ಶ್ರುತಿ:
ದಗ್ಧಸ್ಯದಹನಂ ನಾಸ್ತಿ ಪಾಕಸ್ಯಪಚನಂ ಯಥಾ।
ಜ್ಞಾನಾಗ್ನಿ ದಗ್ಧದೇಹಸ್ಯ ನಚ ಶ್ರಾದ್ಧಂ ನಚ ಕ್ರಿಯಾ॥
ಇದು ಕಾರಣ, ಕೂಡಲಚೆನ್ನಸಂಗಯ್ಯಾ
ನಂಬಿಯೂ ನಂಬದಿದ್ದಡೆ ನ ಭವಿಷ್ಯತಿ. ॥ ೮೮೬ ॥

೧೭೪೦

ಸುರೆಯ ತುಂಬಿದ ಭಾಂಡವನು ಎನಿಸು ವೇಳೆ ಜಲವ ತೊಳೆದಡೇನು
ಒಳಗೆ ಶುದ್ಧವಾಗಬಲ್ಲುದೆ?
ಬಾಹ್ಯದ ಜಲತೀರ್ಥದಲ್ಲಿ ಮುಳಿ ಮುಳಿಗಿ ಎದ್ದಡೇನು
ಅಂತರಂಗದ ಮಲಿನತ್ವವು ಮಾಂಬುದೆ ಹೇಳಾ
ಚಿತ್ತೇ ತ್ವಂತರ್ಗತಂ ದೌಷ್ಟ್ಯಂ ತೀರ್ಥಸ್ನಾನೈರ್ನ ಶುದ್ಧ್ಯತಿ।
ಶತಶೋಽಪಿ ಜಲೈರ್ಧೌತಂ ಸುರಾಭಾಂಡಮಿವಾಶುಚಿಃ॥ ಎಂದುದಾಗಿ
ಚಿದಾಕಾಶವನೊಳಕೊಂಡ ಶಿವಜ್ಞಾನಿಗಳ ಪಾದೋದಕವ ಪಡೆದು,
ಭಕ್ತರು ಭವರಹಿತರಾದರು ಕಾಣಾ ಕೂಡಲಚೆನ್ನಸಂಗಮದೇವಾ. ॥ ೮೮೭ ॥

೧೭೪೧

ಸುರೆಯ ತೊರೆ, ಮಾಂಸದ ಒಟ್ಟಿಲು, ಭಂಗಿಯ ಬಣಬೆ,
ಜಾಯಿಕಾಯಿ ಜಾಯಿಪತ್ರೆಯ ತಿಂಬ ಹಿರಿಯರ, ಪರಿಕಾರರ
ಜಂಗಮವೆಂದಡೆ ನಾಯಕನರಕ ತಪ್ಪದು
ಕೂಡಲಚೆನ್ನಸಂಗಮದೇವಾ. ॥ ೮೮೮ ॥

೧೭೪೨

ಸುಷುಮ್ನನಾಳದ ಭೇದವನರಿಯರು, ವಿಷಯದಲ್ಲಿ ಗಸಣಿಗೊಂಬರು.
ಅಂತರಂಗದ ಸುದ್ದಿಯನವರೆತ್ತ ಬಲ್ಲರು
ಕೂಡಲಚೆನ್ನಸಂಗಮದೇವಾ. ॥ ೮೯ ॥

೧೭೪೩

ಸೂಳೆಯ ಮಗ ಮಾಳವ ಪಾಳ್ಯದೊಳಗೆಲ್ಲಾ,
ತಮ್ಮಪ್ಪನ ಕಾಣದೆ ಅರಸುತ್ತೈದಾನೆ.
ಆಳೆಂದರಿಯ, ಅರಸೆಂದರಿಯ.
'ಬಹುಲಿಂಗ ಪೂಜಕಶ್ಚೈವ ಬಹು ಭಾವಗುರುಸ್ತಥಾ।
ಬಹುಪ್ರಸಾದಂ ಭುಂಜಂತೇ ವೇಶ್ಯಾಪುತ್ರಸ್ತಥೈವ ಚ॥ ಎಂದುದಾಗಿ
ಮತಿಹೀನ ಕಾಳಮೂಳರಿಗೆ ಶಿವಭಕ್ತಿ ದೊರೆಯದು,
ಆಣೆ ನಿಮ್ಮಾಣೆ ಕೂಡಲಚೆನ್ನಸಂಗಮದೇವಾ. ॥ ೯೦ ॥

೧೭೪೪

ಸೃಷ್ಟಿಯ ಮೇಲಣ ಕಣಿಯ ತೆಂದು, ಅಷ್ಟತನುವಿನ ಕೈಯಲ್ಲಿ ಕೊಟ್ಟು
ಪೂಜಿಸು ಪೂಜಿಸು ಎಂಬರಯ್ಯಾ.
ನಾಲ್ವರಿಗೆ ಹುಟ್ಟಿದ ಲಿಂಗವ ನಾನೆತ್ತ ಪೂಜಿಸುವೆನಯ್ಯಾ.
ಪೃಥ್ವಿಗೆ ಹುಟ್ಟಿ ಶಿಲೆಯಾಯಿತ್ತು, ಕಲ್ಲುಕುಟಿಗನ ಕೈಯಲ್ಲಿ ರೂಪಾಯಿತ್ತು,
ಗುರುವಿನ ಹಸ್ತದಲ್ಲಿ ಮೂರ್ತಿಯಾಯಿತ್ತು,
ಉಪಚಾರಕ್ಕೆ ದೇವರಾಯಿತ್ತು.
ಈ ನಾಲ್ವರಿಗೆ ಹುಟ್ಟಿದ ಲಿಂಗವ ನಾನೆತ್ತ ಪೂಜಿಸುವೆನಯ್ಯಾ.
ಈ ಲಿಂಗ ನೆಲಕ್ಕೆ ಬಿದ್ದರೆ ಸಮಾಧಿಯ ಹೊಕ್ಕೇನೆಂಬರು.
'ಸಮಾಧಿ ಶಸ್ತ್ರಂ ಚ ಶಿಲಾದಾನಾದಿಂ ಚ।
ಈ ಅರು ತೆರದಲ್ಲಿ ಸತ್ತನಾದರೆ
ಕುಂಭೀಪಾತಕ ನಾಯಕನರಕ ತಪ್ಪದು
ಕೂಡಲಚೆನ್ನಸಂಗಮದೇವಾ. ॥ ೯೧ ॥

೧೭೪೫

ಸೃಷ್ಟಿಯ ಮೇಲಣ ಕಣಿಯ ತಂದು ಇಷ್ಟಲಿಂಗವೆಂದು ಮಾಡಿ
ಅಷ್ಟತನುವಿನ ಕೈಯಲ್ಲಿ ಕೊಟ್ಟು
ಆ ಅಷ್ಟತನುವಿನ ಕೈಯ ತಪ್ಪಿ ಸೃಷ್ಟಿಯ ಮೇಲೆ ಬಿದ್ದಡೆ

ಮೆಟ್ಟಿ ಮೆಟ್ಟಿ ಹೊಳಿಸಿಕೊಂಬ ಗುರುದ್ರೋಹಿಗಳ ಮುಖವ ನೋಡಲಾಗದು,
ಅವರ ನುಡಿಯ ಕೇಳಲಾಗದು.
ಇದಕ್ಕೆ ದೃಷ್ಟಾಂತ, ಗಾರುಡ ಪುರಾಣೇ:
ಲಿಂಗಮಧ್ಯೇ ಜಗತ್‌ಸರ್ವಂ ತ್ರೈಲೋಕ್ಯಂ ಸಚರಾಚರಂ
ಲಿಂಗಬಾಹ್ಯಾತ್ ಪರಂ ನಾಸ್ತಿ ತಸ್ಮಾಲ್ಲಿಂಗಂ ಪ್ರಪೂಜಯೇತ್॥
ಇಂತೆಂದುದಾಗಿ,
ಇಷ್ಟಲಿಂಗ ಬಿದ್ದಡೆ ಆಚಾರಲಿಂಗ ಬಿದ್ದಿತೆ?
ಆಚಾರಲಿಂಗ ಬಿದ್ದಡೆ ಗುರುಲಿಂಗ ಬಿದ್ದಿತೆ?
ಗುರುಲಿಂಗ ಬಿದ್ದಡೆ ಶಿವಲಿಂಗ ಬಿದ್ದಿತೆ?
ಶಿವಲಿಂಗ ಬಿದ್ದಡೆ ಜಂಗಮಲಿಂಗ ಬಿದ್ದಿತೆ?
ಜಂಗಮಲಿಂಗ ಬಿದ್ದಡೆ ಪ್ರಸಾದಲಿಂಗ ಬಿದ್ದಿತೆ?
ಪ್ರಸಾದಲಿಂಗ ಬಿದ್ದಡೆ ಮಹಾಲಿಂಗ ಬಿದ್ದಿತೆ?
ಅಕಟಕಟ ಷಡ್ವಿಧಲಿಂಗದ ಭೇದವನರಿಯದೆ ಕೆಟ್ಟ ಕೇಡ ನೋಡಾ!
ಅಭ್ಯಾಸವ ಮಾಡುವಲ್ಲಿ ಕೋಲು ಬಿದ್ದಡೆ
ತನ್ನ ತಾನೆ ಇರಿದುಕೊಂಡು ಸಾಯಬಹುದೆ?
ಆ ಕೋಲಿನಲ್ಲಿ ಅಭ್ಯಾಸವನೆ ಮಾಡಿ
ಸುರಗಿಯ ಮೊನೆಯನೆ ಗೆಲಿಯಬೇಕಲ್ಲದೆ?
ಇದು ಕಾರಣ: ಜಲ ಅಗ್ನಿ ನೇಣು ವಿಷ ಅಸಿಪತ್ರ ಸಮಾಧಿ ಇಂತವರಿಂದ
ಪ್ರಾಣಹಿಂಸೆಯ ಮಾಡುವರನು ಅಘೋರನರಕದಲ್ಲಿ ಅದ್ದಿ ಅದ್ದಿಕ್ಕುವ
ನಮ್ಮ ಕೂಡಲಚೆನ್ನಸಂಗಮದೇವ. ॥ ೮೯೨ ॥

೧೭೪೬

ಸೋಮವಾರ ಮಂಗಳವಾರ ಹುಣ್ಣಿಮೆ ಅಮಾವಾಸ್ಯೆ ಸಂಕ್ರಾಂತಿ ಶಿವರಾತ್ರಿ-
ಮೊದಲಾದ ತಿಥಿವಾರಂಗಳಲ್ಲಿ ಏಕಭುಕ್ತೋಪವಾಸಿಯಾಗಿ
ಆ ಕ್ಷುದ್ರ ತಿಥಿಗಳಲ್ಲಿ, ಮಾಡಿದ ನೀಚೋಚ್ಛಿಷ್ಟವಂ ತಂದು
ತನ್ನ ಕರಸ್ಥಲದ ಇಷ್ಟಲಿಂಗಕ್ಕೆ ಕೊಟ್ಟು ಕೊಂಡು ಭಕ್ತನೆನಿಸಿಕೊಂಡೆನೆಂಬ
ಅನಾಚಾರಿಯ ಮುಖವ ನೋಡಲಾಗದು ನೋಡಲಾಗದು.
ಅದೇನು ಕಾರಣವೆಂದಡೆ;
ದಿನ ಶ್ರೇಷ್ಠವೊ? ಲಿಂಗ ಶ್ರೇಷ್ಠವೊ? ದಿನ ಶ್ರೇಷ್ಠವೆಂದು ಮಾಡುವ
ದುರಾಚಾರಿಯ ನೋಡಲಾಗದು, ನೋಡಲಾಗದು, ಅದೆಂತೆಂದಡೆ:
ಅವ ದಿನ ಶ್ರೇಷ್ಠವೆಂದು ದಿನವೆ ದೈವವೆಂದು ಮಾಡುವನಾಗಿ,
ಅವನು ದಿನದ ಭಕ್ತನು.
ಅವನಂತಲ್ಲ ಕೇಳಿರಣ್ಣ ಸದ್ಭಕ್ತನು-ಲಿಂಗವೆ ಘನವೆಂದು ಜಂಗಮವೆ ಶ್ರೇಷ್ಠವೆಂದು

ಆ ಲಿಂಗಜಂಗಮವೆ ಶ್ರೇಷ್ಠವೆಂದು ಆ ಲಿಂಗಜಂಗಮವೆ ದೈವವೆಂದು ಮಾಡುವನಾಗಿ
ಆತ ಲಿಂಗಭಕ್ತನು. ಈ ಲಿಂಗಭಕ್ತಂಗೆ ದಿನದ ಭಕ್ತನ ತಂದು
ಸರಿಯೆಂದು ಹೋಲಿಸಿ
ನುಡಿವಂಗೆ, ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ ಪಾದೋದಕವಿಲ್ಲ ಪ್ರಸಾದವಿಲ್ಲ,
ಅವ ಭಕ್ತನಲ್ಲ, ಅವಂಗೆ ಅಘೋರನರಕ.
ಭವಿದಿನ-ತಿಥಿ-ವಾರಂಗಳಲ್ಲಿ ಕೂರ್ತುಮಾಡುವಾತ
ಭಕ್ತನಲ್ಲ. ಅಲ್ಲಿ ಹೊಕ್ಕು ಲಿಂಗಾರ್ಚನೆಯ ಮಾಡುವಾತ ಜಂಗಮವಲ್ಲ.
ಈ ಉಭಯರನು ಕೂಡಲಚೆನ್ನಸಂಗಯ್ಯ ಕುಂಭೀಪಾತಕ
ನಾಯಕನರಕದಲ್ಲಿಕ್ಕುವನು. ॥ ೮೯೩ ॥

೧೭೪೭

ಸ್ಥೂಲತನು ಸೂಕ್ಷ್ಮತನು ಕಾರಣ ತನು:
ಸ್ಥೂಲತನುವಿನಲ್ಲಿ ಇಷ್ಟಲಿಂಗಪ್ರತಿಷ್ಠೆ,
ಸೂಕ್ಷ್ಮತನುವಿನಲ್ಲಿ ಪ್ರಾಣಲಿಂಗಪ್ರತಿಷ್ಠೆ,
ಕಾರಣತನುವಿನಲ್ಲಿ ತೃಪ್ತಿಲಿಂಗಪ್ರತಿಷ್ಠೆ.
ಇಂತೀ ಸ್ಥೂಲ ಸೂಕ್ಷ್ಮ ಕಾರಣವು ಮಹವು!
ಮಹದುದಯ ಹೃದಯದಲ್ಲಿ ಕೊನೆದೋರುತ್ತಿಪ್ಪ ಪರಂಜ್ಯೋತಿ,
ನಿಮ್ಮ ಶರಣನ ಸರ್ವಾಂಗದಲುಂಟು
ಕೂಡಲಚೆನ್ನಸಂಗಮದೇವಾ. ॥ ೮೯೪ ॥

೧೭೪೮

ಸ್ಥೂಲ ಪಂಚಭೂತಕಾಯದ ಪಂಚತತ್ವಂಗಳ
ವಿವರಿಸಿ ಬೋಧಿಸಿ ಕಳೆದು,
ಸೂಕ್ಷ್ಮ ಪಂಚಭೂತಕಾಯದ ತನ್ಮಾತ್ರಗುಣಂಗಳ
ವಿವರದ ಭೇದವ ಭೇದಿಸಿ ತೋರಿ ಕಳೆದು,
ಕಾರಣಪಂಚಭೂತ ಕಾಯದ ಕರಣವೃತ್ತಿಗಳ
ಮಹಾವಿಚಾರದಿಂದ ತಿಳುಹಿ ವಿವರಿಸಿ ಕಳೆದು,
ಸ್ಥೂಲಪಂಚಭೂತಕಾಯದಲ್ಲಿ ಇಷ್ಟಲಿಂಗವ ಪ್ರತಿಷ್ಠೆಯ ಮಾಡಿ
ಸದಾಚಾರಸ್ಥಳಕುಳವ ನೆಲೆಗೊಳಿಸಿ,
ಸೂಕ್ಷ್ಮಪಂಚಭೂತಕಾಯದಲ್ಲಿ ಪ್ರಾಣಲಿಂಗ ಪ್ರತಿಷ್ಠೆಯ ಮಾಡಿ,
ಮಹಾಪಚಾರವ ಅನುಭಾವವ ನೆಲೆಗೊಳಿಸಿ,
ಕಾರಣಪಂಚಭೂತಕಾಯದಲ್ಲಿ ತೃಪ್ತಿಲಿಂಗವ ಪ್ರತಿಷ್ಠೆಯ ಮಾಡಿ

ಪರಮಾನಂದಸುಜ್ಞಾನವ ನೆಲೆಗೊಳಿಸಿ:-
ಇಂತೀ ಸ್ಥೂಲಸೂಕ್ಷ್ಮ ಕಾರಣವೆಂಬ ತನುತ್ರಯಂಗಳನೇಕೀಭವಿಸಿ ತೋರಿ,
ಪೂರ್ವಜನ್ಮದ ನಿವೃತ್ತಿಯ ಮಾಡಿ, ಲಿಂಗಜನ್ಮದ ಪ್ರತಿಷ್ಠೆಯ ಮಾಡಿ
ಎನ್ನ ಕೃತಾರ್ಥನ ಮಾಡಿದ ಬಸವಣ್ಣನ ಶ್ರೀಪಾದಕ್ಕೆ
ನಮೋ ನಮೋ ಎಂದು ಬದುಕಿದೆನಯ್ಯಾ
ಕೂಡಲಚೆನ್ನಸಂಗಮದೇವಾ. || ೮೯೫ ||

೧೭೪೯

ಸ್ಪರ್ಶನವಿರಹಿತ ಅರ್ಪಿತ, ರುಚಿವಿರಹಿತ ಪ್ರಸಾದಯೆಂದೆನೆಂದೆ.
ಮತ್ತಾರಿಗೆಯೂ ಸಾಧ್ಯವಾಗಲಿ, ಕೂಡಲಚೆನ್ನಸಂಗನ ಪ್ರಸಾದಿಯ
ಪ್ರಸಾದದಿಂದ ಎಂದೆನೆಂದೆ.
ಮತ್ತಾರಿಗೆಯಾದಡೆಯೂ ಸಾಧ್ಯವಾಗಲಿ. || ೮೯೬ ||

೧೭೫೦

ಸ್ವಯಂ ಪ್ರಸಾದವವ್ವಾ, ಸ್ವಯಂ ಲಿಂಗವವ್ವಾ;
ಸ್ವಯಂ ದಾಸೋಹವವ್ವಾ, ಸ್ವಯಂ ಶರಣನವ್ವಾ
ಸ್ವಯಂ ಕೂಡಲಚೆನ್ನಸಂಗನ ಪ್ರಸಾದವವ್ವಾ! || ೮೯೭ ||

೧೭೫೧

ಸ್ವಸ್ತಿ ಸಮಸ್ತಪ್ರಶಸ್ತಿ ಸಹಿತಂ ಶ್ರೀಮತ್ ಕಲ್ಯಾಣಪುರದ ಮಹಾತ್ಮ್ಯೆ
ಎಂತೆಂದಡೆ:
ವಿಸ್ತರಿಸಿ ಪೇಳುವೆನು, ಎಲ್ಲಾ ಶಿವಗಣಂಗಳು ಕೇಳಿ ಕೃತಾರ್ಥರಾಗಿರಯ್ಯಾ.
ಹದಿನಾಲ್ಕು ಭುವನಕ್ಕೆ ಕಳಸವೆಂದೆನಿಸುವ ರುದ್ರಲೋಕವ ಮರ್ತ್ಯಕ್ಕಿಳಿತಂದು,
ಕಲ್ಯಾಣವೆಂಬ ಪುರವಾಗಿ ಪುಟ್ಟಿತ್ತು ನೋಡಿರಯ್ಯಾ!
ಅಲ್ಲಿ ಸತ್ಯರು ಸಾತ್ತ್ವಿಕರು ನಿತ್ಯರು ನಿಜೈಕ್ಯರು ಮಹಾಜ್ಞಾನಿಗಳು
ಪರಮಶಿವಯೋಗಿಗಳು ಶಿವಾನುಭಾವಸಂಪನ್ನರು ಶಿವಲಿಂಗಪ್ರಾಣಿಗಳು
ಶಿವಪ್ರಸಾದಪಾದೋದಕಸಂಬಂಧಿಗಳು ಶಿವಾಚಾರವೇದ್ಯರು ಶಿವಾಗಮಸಾಧ್ಯರು
ಶಿವಸಮಯಪಕ್ಷರುಗಳಲ್ಲದೆ, ಮತ್ತಾರು ಅಲ್ಲಿಲ್ಲ ನೋಡಿರಯ್ಯಾ.
ಪಾಪಿಗಳು ಕೋಪಿಗಳು ಅಸತ್ಯರು ಅನಾಚಾರಿಗಳು ಹೊಗಬಾರದು ಕಲ್ಯಾಣವ.
ಮೀರಿ ಹೊಕ್ಕೆಹೆವೆಂಬವರಿಗೆ ಬಾಳ ಬಾಯಧಾರೆ ನೋಡಿರಯ್ಯಾ.
ಆ ಕಲ್ಯಾಣ ಅಗಮ್ಯ ಅಗೋಚರ ನೋಡಿರಯ್ಯಾ.
ಆ ಮಹಾಕಲ್ಯಾಣದ ವಿಸ್ತೀರ್ಣ ತಾನೆಂತೆಂದಡೆ:

ಹನ್ನೆರಡು ಯೋಜನ ಪರಿಪ್ರಮಾಣದ ವಿಸ್ತೀರ್ಣಪಟ್ಟಣಕ್ಕೆ
ಮುನ್ನೂರರವತ್ತು ಬಾಗಿಲವಾಡ.
ಆ ಬಾಗಿಲಿಂಗೆ ನೂರ ಐವತ್ತೈದು ವಜ್ರದ ಹಾರೆಯ ಕದಂಗಳು.
ಇನ್ನೂರ ಇಪ್ಪತ್ತೈದು ಕಲುಗೆಲಸದ ದ್ವಾರವಟ್ಟಕ್ಕೆ
ನಾನೂರ ಐವತ್ತು ಸುವರ್ಣದ ಕೆಲಸದ ಕದಂಗಳು,
ಅಲ್ಲಿ ನೂರ ಹದಿನೈದು ಚೋರಗಂಡಿ;
ಅವಕ್ಕೆ ನೂರ ಹದಿನೈದು ಮೊಳೆಯ ಕದಂಗಳು.
ಇಪ್ಪತ್ತು ಬಾಗಿಲು ಅಳ್ವರಿಯೊಳಗಿಪ್ಪವಾಗಿ ಅವಕ್ಕೆ ಕದಂಗಳಿಲ್ಲ.
ಆ ಪಟ್ಟಣಕ್ಕೆ ಬಳಸಿಬಂದ ಕೋಂಟೆ ನಾಲ್ವತ್ತೆಂಟು ಯೋಜನ ಪರಿಪ್ರಮಾಣು.
ಬಾಹತ್ತರ [ನಿಯೋಗಿಗಳ] ಮನೆಲಕ್ಷ; ಮಂಡಳಿಕರ ಮನೆ ಲಕ್ಷ;
ಸಾಮಂತರ ಮನೆಲಕ್ಷ; ರಾಯ ರಾವುತರ ಮನೆಯೊಳಡಗಿದ ಮನೆಗಳಿಗೆ ಲೆಕ್ಕವಿಲ್ಲ.
ದ್ವಾದಶ ಯೋಜನ ವಿಸ್ತೀರ್ಣದ ಸೂರ್ಯವೀಥಿ ನೂರಿಪ್ಪತ್ತು;
ದ್ವಾದಶ ಯೋಜನದ ಸೋಮವೀಥಿ ನೂರಿಪ್ಪತ್ತೈದು.
ಅದರಿಂ ಮಿಗಿಲಾದ ಒಳಕೇರಿ ಹೊರಕೇರಿಗೆ ಗಣನೆಯಿಲ್ಲ.
ಆ ಪಟ್ಟಣನೊಳಗೆ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಶಿವಾಲಯ.
ಆ ಶಿವಾಲಯಂಗಳಿಗೆ ಮುಖ್ಯವಾದ ತ್ರಿಪುರಾಂತಕದೇವರ ಶಿವಾಲಯ.
ಮುನ್ನೂರರವತ್ತು ಪದ್ಮಪತ್ರ ತೀವಿದ ಸರೋವರಗಳು.
ಎರಡು ಲಕ್ಷವು ಎಂಬತ್ತೈದು ಸಾವಿರದ ಏಳು ನೂರೆಪ್ಪತ್ತು
ದಾಸೋಹದ ಮಠಂಗಳು.
ಆ ದಾಸೋಹದ ಮಠಂಗಳಿಗೆ ಮುಖ್ಯವಾದ
ಬಸವರಾಜದೇವರ ಮಠದ ವಿಸ್ತೀರ್ಣವೆಂತೆಂದಡೆ:
ಯೋಜನವರಿಯ ಬಿನ್ನಾಣದ ಕಲುಗೆಲಸದ ಪೌಳಿ;
ಅತಿ ಸೂಕ್ಷ್ಮದ ಕುಸುರಿಗೆಲಸದ ದ್ವಾರವಟ್ಟವೈದು.
ಅವಕ್ಕೆ ಪಂಚಾಕ್ಷರಿಯ ಶಾಸನ.
ಮಿಸುನಿಯ ಕಂಭವ ತೋರಣಗಳಲಿ ರುದ್ರಾಕ್ಷಿಯ ಸೊಸಕ
ಆ ಬಾಗಿಲುವಾಡದಲ್ಲಿ ಒಪ್ಪುತಿರ್ಪವಯ್ಯಾ,
ನಂದಿಯ ಕಂಭದ ಧ್ವಜ ಉಪ್ಪರಗುಡಿ ಪತಾಕೆ ವ್ಯಾಸಧ್ವಜ ಒಪ್ಪುತಿರ್ಪವಯ್ಯಾ,
ಆ ಮಧ್ಯದಲ್ಲಿ ಬಸವರಾಜದೇವರ ಸಿಂಹಾಸನದ ವಿಸ್ತೀರ್ಣದ ಪ್ರಮಾಣು.
ಸಹಸ್ರಕಂಭದ ಸುವರ್ಣದುಪ್ಪರಿಗೆ: ಆ ಮನೆಗೆತ್ತಿದ ಹೊನ್ನಕಳಸ ಸಾವಿರ.
ಗುರುಲಿಂಗ ಜಂಗಮಕ್ಕೆ ಪಾದಾರ್ಚನೆಯ ಮಾಡುವ ಹೊಕ್ಕರಣೆ
ನಾಲ್ಕು ಪುರುಷಪ್ರಮಾಣದ ಘಾತ.
ಅಲ್ಲಿ ತುಂಬಿದ ಪಾದೋದಕದ ತುಂಬಸುಚ್ಚಲು
ಬೆಳೆವ ರಾಜಶಾಲಿಯ ಗದ್ದೆ ಹನ್ನೆರಡು ಕಂಡುಗ,

ಆ ಯೋಜನವರಿಯ ಬಿನ್ನಾಣದ ಅರಮನೆಯ ವಿಸ್ತೀರ್ಣದೊಳಗೆ
ಲಿಂಗಾರ್ಚನೆಯ ಮಾಡುವ ಮಠದ
ಕಟ್ಟಳೆ ಲಕ್ಷದ ಮೇಲೆ ತೊಂಬತ್ತಾರು ಸಾವಿರ.
ಇನ್ನು ಬಸವರಾಜದೇವರು ಮುಖ್ಯವಾದ ಅಸಂಖ್ಯಾತರ ಮಠಂಗಳು
ಆ ಕಲ್ಯಾಣದೊಳಗೆ ಎಷ್ಟು ಎಂದಡೆ:
ಪನ್ನೆರಡು ಸಾವಿರ ಕಟ್ಟಳೆಯ ನೇಮದ ಭಕ್ತರ ಮಠಂಗಳು,
ಇಪ್ಪತ್ತೆಂಟು ಸಾವಿರ ಮಹಾಮನೆಗಳು;
ಹತ್ತು ಸಾವಿರ ನಿತ್ಯನೇಮಿಗಳ ಮಠಂಗಳು;
ಪದಿನೈದು ಸಾವಿರ ಚಿಲುಮೆಯಗ್ಗವಣಿಯ ವ್ರತಸ್ಥರ ಮಠಂಗಳು:
ಐದು ಸಾವಿರ ವೀರವ್ರತನೇಮಿಗಳ ಕಟ್ಟಳೆಯ ಮಠಂಗಳು;
ಪನ್ನೆರಡು ಸಾವಿರ ಅಚ್ಚಪ್ರಸಾದಿಗಳ ಮಠಂಗಳು,
ಒಂದು ಸಾವಿರ ಅರವತ್ತು ನಾಲ್ಕು ಶೀಲಸಂಪನ್ನರ ಮಠಂಗಳು;
ನಿತ್ಯ ಸಾವಿರ ಜಂಗಮಕ್ಕೆ ಆರೋಗಣೆಯ ಮಾಡಿಸುವ ದಾಸೋಹಿಗಳ
ಮಠಂಗಳು ಮೂವತ್ತೆರಡು ಸಾವಿರ;
ನಿತ್ಯ ಐನೂರು ಜಂಗಮಕ್ಕೆ ಒಲಿದು ದಾಸೋಹವ ಮಾಡುವ
ಸತ್ಯಸದಾಚಾರಿಗಳ ಮಠಂಗಳು ಐವತ್ತೆಂಟು ಸಾವಿರ;
ನಿತ್ಯ ಸಾವಿರದೈನೂರು ಜಂಗಮಕ್ಕೆ ಒಲಿದು ದಾಸೋಹವ ಮಾಡುವ
ದಾಸೋಹಿಗಳ ಮಠಂಗಳು ಹನ್ನೊಂದು ಸಾವಿರ;
ನಿತ್ಯ ಅವಾರಿಯಿಂದ ಮಾಡುವ
ಮಾಟಕೂಟದ ಸದ್ಭಕ್ತರ ಮಠಂಗಳು ಒಂದು ಲಕ್ಷ;
ಜಂಗಮಸಹಿತ ಸಮಯಾಚಾರದಿಂದ ಲಿಂಗಾರ್ಚನೆಯ ಮಾಡುವ
ಜಂಗಮಭಕ್ತರ ಮಠಂಗಳು ಎರಡು ಸಾವಿರನೇಳ್ನೂರೆಪ್ಪತ್ತು;
ಅಂತು ಎರಡು ಲಕ್ಷವು ಎಂಬತ್ತೈದು ಸಾವಿರದ ಏಳುನೂರೆಪ್ಪತ್ತು.
ಇಂತಪ್ಪ ಅಸಂಖ್ಯಾತರಿಗೆ ಮುಖ್ಯವಾಗಿ ರುದ್ರಲೋಕದಿಂದಿಳಿತಂದ
ಪ್ರಮಥಗಣಂಗಳ ಮಠಂಗಳು ಏಳು ನೂರೆಪ್ಪತ್ತು.
ಇಂತೀ ಮಹಾಪ್ರಮಥರಿಗೆ ಪುರಾತರಿಗೆ ಅಸಂಖ್ಯಾತ
ಮಹಾಗಣಂಗಳಿಗೆ ಪ್ರಮಥ ನಾಯಕನಾಗಿ,
ಏಕಮುಖ, ದಶಮುಖ, ಶತಮುಖ, ಸಹಸ್ರಮುಖ,
ಲಕ್ಷಮುಖ, ಕೋಟಿಮುಖ, ಅನಂತಕೋಟಿಮುಖನಾಗಿ
ಭಕ್ತರಿಗೆ ಒಡನಾಡಿಯಾಗಿಪ್ಪನು ಸಂಗನಬಸವಣ್ಣ.
ಜಗದಾರಾಧ್ಯ ಬಸವಣ್ಣ, ಪ್ರಮಥಗುರು ಬಸವಣ್ಣ,
ಶರಣಸನ್ನಹಿತ ಬಸವಣ್ಣ, ಸತ್ಯಸಾತ್ವಿಕ ಬಸವಣ್ಣ,
ನಿತ್ಯನಿಜೈಕ್ಯ ಬಸವಣ್ಣ, ಷಡುಸ್ಥಲಸಂಪನ್ನ ಬಸವಣ್ಣ,

ಸರ್ವಾಚಾರಸಂಪನ್ನ ಬಸವಣ್ಣ, ಸರ್ವಾಂಗಲಿಂಗಿ ಬಸವಣ್ಣ,
ಸುಜ್ಞಾನಭರಿತ ಬಸವಣ್ಣ, ನಿತ್ಯಪ್ರಸಾದ ಬಸವಣ್ಣ,
ಸಚ್ಚಿದಾನಂದಮೂರ್ತಿ ಬಸವಣ್ಣ, ಸದ್ಯೋನ್ಮುಕ್ತಿರೂಪ ಬಸವಣ್ಣ,
ಅಖಂಡಪರಿಪೂರ್ಣ ಬಸವಣ್ಣ, ಅಕಾಯಚರಿತ್ರ ಬಸವಣ್ಣ,
ಅಸಾಧ್ಯಸಾಧಕ ಬಸವಣ್ಣ, ಅಭೇದ್ಯಭೇದಕ ಬಸವಣ್ಣ,
ಅನಾಮಯಮೂರ್ತಿ ಬಸವಣ್ಣ,
ಮಹಾಮನೆಯ ಮಾಡಿದಾತ ಬಸವಣ್ಣ,
ರುದ್ರಲೋಕವ ಮರ್ತ್ಯಲೋಕಕ್ಕೆ ತಂದಾತ ಬಸವಣ್ಣ,
ಶಿವಾಚಾರದ ಘನವ ಮೆರೆದಾತ ಬಸವಣ್ಣ.
ಇಂತಹ ಬಸವಣ್ಣನ ಭಕ್ತಿಯನು ಒರೆದೊರೆದು ನೋಡುವ,
ಪ್ರಜ್ವಲಿತವ ಮಾಡುವ ಅಶ್ವಪತಿ, ಗಜಪತಿ, ನರಪತಿರಾಯ,
ರಾಜಾಧಿರಾಜ ಬಿಜ್ಜಳರಾಯನೂ ಆ ಬಸವಣ್ಣನೂ ಆ ಕಲ್ಯಾಣಪಟ್ಟಣದೊಳಗೆ
ಸುಖಸಂಕಥಾವಿನೋದದಿಂದ ರಾಜ್ಯಂಗೆಯುತ್ತಿರಲು,
ಆ ಕಲ್ಯಾಣದ ನಾಮವಿಡಿದು ವಿವಾಹಕ್ಕೆ ಕಲ್ಯಾಣವೆಂಬ ನಾಮವಾಯಿತ್ತು.
ಲೋಕದೊಳಗೆ ಕಲ್ಯಾಣವೆ ಕೈಲಾಸವೆನಿಸಿತ್ತು.
ಇಂತಪ್ಪ ಕಲ್ಯಾಣದ ದರುಶನವ ಮಾಡಿದಡೆ ಭವಂ ನಾಸ್ತಿ,
ಇಂತಪ್ಪ ಕಲ್ಯಾಣವ ನೆನೆದಡೆ ಪಾಪಕ್ಷಯ,
ಇಂತಪ್ಪ ಕಲ್ಯಾಣದ ಮಹಾತ್ಮೆಯಂ ಕೇಳಿದಡೆ
ಕರ್ಮಕ್ಷಯವಹುದು, ಮೋಕ್ಷ ಸಾಧ್ಯವಹುದು,
ಇದು ಕಾರಣ, ಕೂಡಲಚೆನ್ನಸಂಗಮದೇವಾ,
ನಿಮ್ಮ ಭಕ್ತ ಬಸವಣ್ಣನಿದ್ದ ಠಾವೆ ಮಹಾಕಲ್ಯಾಣವೆಂದರಿದು
ದಿವ್ಯಶಾಸನವ ಬರೆದು ಪರಿಸಿದ ಕಾರಣ,
ಎನ್ನ ಭವಂ ನಾಸ್ತಿಯಾಯಿತ್ತಯ್ಯಾ. ॥ ೪೯೮ ॥

೧೭೫೨

ಹಂದಿಯದಾಡಿಯಲ್ಲಿ ಹೊಯ್ಸಿಕೊಂಡ ಹಿರಣ್ಯಕ,
ಅರೆಮಾನಿಸನುಗುರ ಕೊನೆಯಲ್ಲಿ ಸೀಳಿಸಿಕೊಂಡ ಹಿರಣ್ಯಾಕ್ಷ;
ತಳಿಗೆಗೆ ತಲೆಗೊಟ್ಟ ಶಿಶುಪಾಲ,
ಕುಮಾರಿಯ ಕೈಯಲ್ಲಿ ಹೊಡಿಸಿಕೊಂಡ ಮಹಿಷಾಸುರ;
ಕಪಿಯ ಬಾಲದಲ್ಲಿ ಕಟ್ಟಿಸಿಕೊಂಡ ರಾವಣ.
ಹೊಲೆಯಂಗೆ ಆಳಾದ ಹರಿಶ್ಚಂದ್ರಮಹಾರಾಯ,
ಜೂಜಿಂದ ಭಂಗಿತರಾದರು ಪಾಂಡವರು,

ದುರ್ವಾಸನಿಂದ ಸಮಚಿತ್ತನಾದ ಪುರಂದರ, ತಾಯ ತಲೆಕಿವಿದ ಪರಶುರಾಮ,
ಸತಿ ಹೇಳಿತ ಕೇಳಿದ ಶ್ರೀರಾಮ, ಹಕ್ಕಿಯಿಂದೊಪ್ಪಗೆಟ್ಟ ದೇವೇಂದ್ರ,
ಅಪರಾಹ್ನದರಿದ್ರನೆನಿಸಿಕೊಂಡ ಕರ್ಣ, ಮಡುಹೊಕ್ಕು ಅಡಗಿದ ದುರ್ಯೋಧನ;
ಕೇಡಿಂಗೆ ಹಿಂದು ಮುಂದಾದರು ಭೀಷ್ಮರು,
ವೇಶ್ಯೆಯ ಮನೆಗೆ ಕಂಬಿಯ ಹೊತ್ತ ವಿಕ್ರಮಾದಿತ್ಯ,
ಕಲ್ಯಾಣದಲ್ಲಿ ಬೆಳ್ಳಿಯ ಗುಂಡಾದ ವ್ಯಾಲ,
ಬೆಳ್ಳಿಯ ಕಂದಾಲದ ಕೆರೆಯ ಹೊಕ್ಕ ಕೋರಾಂಟ;
ಚಕ್ರಕ್ಕೆ ತಲೆಗೊಟ್ಟ ನಾಗಾರ್ಜುನ.
ಹಗೆಯ ಕಂಪಲ ಹೊಕ್ಕ ರತ್ನ ಘೋಪ
ರಾಹುವಿಗೊಳಗಾದ ಚಂದ್ರ, ಕಟ್ಟಿಂಗೊಳಗಾದುದು ಸಮುದ್ರ,
ಶಿರವ ಹೋಗಾಡಿಸಿಕೊಂಡ ಬ್ರಹ್ಮ, ಕಾಲಿಂದ ಮರಣವಾಯಿತ್ತು ಕೃಷ್ಣಂಗೆ,
ನೀರಿನಿಂದ ಕೆಟ್ಟ ಚಂಡಲಯ್ಯ, ಪುತ್ರರಿಂದ ಕೆಟ್ಟ ದಶರಥ,
ಅಭಿಮಾನದಿಂದ ಕೆಟ್ಟ ಅಭಿಮನ್ಯು, ವಿಧಿಯಿಂದ ಕೆಟ್ಟ ಶೂದ್ರಕ,
ನಿದ್ರೆಯಿಂದ ಕೆಟ್ಟ ಕುಂಭಕರ್ಣ, ಬಲಿಗೆ ಬಂಧನವಾಯಿತ್ತು.
ಇದು ಕಾರಣ, ಕೂಡಲಚೆನ್ನಸಂಗಮದೇವಾ
ನೀ ಮಾಡಿದ ಮಾಯೆಯ ಮಾಟವದಾರಾರನಾಳಿಗೊಳಿಸಿತ್ತು! || ೬೯೯ ||

೧೬೫೩

ಹಗಲು ನಾಲ್ಕು ಜಾವ ಅಶನಕ್ಕೆ ಕುದಿವರು
ಇರುಳು ನಾಲ್ಕು ಜಾವ ವ್ಯಸನಕ್ಕೆ ಕುದಿವರು.
ಅಷ್ಟವಿಧಾರ್ಚನೆ ಷೋಡಶೋಪಚಾರ ಎಂಬರಲ್ಲದೆ
ತಮ್ಮನಿಕ್ಕಿ ನಿಧಾನವ ಸಾಧಿಸುವರ ಆರನೂ ಕಾಣೆ
ಕೂಡಲಚೆನ್ನಸಂಗಮದೇವಾ. || ೭೦೦ ||

೧೬೫೪

ಪರನಟ್ಟಿದಾಗ್ರಹ ನಿಗ್ರಹದ ಬೆಸನ, ಗುರುನಿರೂಪವೆಂದು ಕೈಕೊಂಡು,
ಕರುಣಿ ಬಸವಣ್ಣ ಕೈಲಾಸದಿಂದ
ಗುರುಲಿಂಗಜಂಗಮಕ್ಕೆ ಭಕ್ತಿಯ ಮಾಡಬೇಕೆಂದು
ಏಳುನೂರೆಪ್ಪತ್ತು ಅಮರಗಣಂಗಳು ಸಹಿತ ಮರ್ತ್ಯಲೋಕಕ್ಕೈತಂದನಯ್ಯಾ.
ಶಿವಸಮಯಕ್ಕಾಧಾರವಾದನಯ್ಯಾ, ಬಸವಣ್ಣನು.
ಜಡರುಗಳ ಮನದ ಕತ್ತಲೆಯ ಕಳೆಯಲೆಂದು
ಕಟ್ಟಿತ್ತು ಕಲ್ಯಾಣದಲ್ಲಿ ಮಹಾಮತವು.
ಪರಮನಟ್ಟಿದ ಓಲೆ ಬಂದಿಳಿಯಿತ್ತು, ಬಿಜ್ಜಳನ ಸಿಂಹಾಸನದ ಮುಂದೆ.

ಅದತಂದು ಓದಿದಡೆ ಸೃಷ್ಟಿಯ ಸೇನಬೋವರಿಗೆ ತಿಳಿಯದು
ಛಪ್ಪನ್ನ ದೇಶದ ಭಾಷೆಯ ಲಿಪಿ ಮುನ್ನವಲ್ಲ.
ಇದನೋದಿದವರಿಗೆ ಆನೆ ಸೇನೆ ಕುದುರೆ ಭಂಡಾರ
ಅರವತ್ತಾರು ಕರಣಿಕರಿಗೆ ಮುಖ್ಯನ ಮಾಡುವೆನೆಂದು
ಬಿಜ್ಜಳ ಭಾಷೆಯ ಕೊಡುತ್ತಿರಲು,
ಪರನಿರೂಪವ ಶಿರದ ಮೇಲಿಟ್ಟು ಶಿವಶರಣೆಂದು
ಬಸವಣ್ಣನೋದಿ ಮೆಚ್ಚಿ ತೆಗೆಸಿದನಯ್ಯಾ
ಅರವತ್ತಾರು ಕೋಟಿ ವಸ್ತುವ ಅರಮನೆಗೆ.
ರಾಜ್ಯಕ್ಕೆ ಅರಮನೆಗೆ [ಶಿರಃ ಪ್ರಧಾನ]ನಾಗಿ
ಹರಗಣಂಗಳಿಗೆ ಗತಿಮತಿ ಚೈತನ್ಯನಾಗಿ
ಕೂಡಲಚೆನ್ನಸಂಗಯ್ಯನಲ್ಲಿ
ಅಂಡಜದೊಳಗಿದ್ದು ಶಿವನ ಭಂಡಾರಿಯಾದನಯ್ಯಾ
ಎನ್ನ ತಂದೆ ಪೂರ್ವಾಚಾರಿ ಸಂಗನಬಸವಣ್ಣನು. || ೯೦೧ ||

೧೭೫೫

ಹರಿದ ಶಿರವ ಹಚ್ಚಿ ಮೆರೆದರು ನಮ್ಮ ಶರಣರು,
ಭಕ್ತಿಯ ಪ್ರಭಾವದಿಂದ.
ಬರಡಾಕಳವ ಕರೆದು ಚರತತಿಗಿತ್ತರು ನಮ್ಮ ಶರಣರು,
ಭಕ್ತಿಯ ಪ್ರಭಾವದಿಂದ.
ಪೂರ್ವಕುಲಗೋತ್ರವನಳಿದು ಪುನೀತರಾದರು ನಮ್ಮ ಶರಣರು
ಭಕ್ತಿಯ ಪ್ರಭಾವದಿಂದ.
"ಭಕ್ತೇರಸಾಧ್ಯಂ ನಹಿ ಕಿಂಚಿದಸ್ತಿ।
ಭಕ್ತ್ಯಾ ಸರ್ವಸಿದ್ಧಯಃ ಸಿಧ್ಯಂತಿ॥"
ಎಂಬ ವಚನವುಂಟಾಗಿ-ಭಕ್ತಂಗೆ ಅಸಾಧ್ಯವಾವುದು?
ಅದು ಕಾರಣ, ನಿಮ್ಮಡಿಯ ಭಕ್ತಿಯನೊಂದನೆ ಕರುಣಿಸಿ
ಕಾಪಾಡಯ್ಯಾ ಕೂಡಲಚೆನ್ನಸಂಗಮದೇವಾ. || ೯೦೨ ||

೧೭೫೬

ಹರಿ ಬ್ರಹ್ಮ ಇಂದ್ರ ಚಂದ್ರ ರವಿ ಕಾಲ ಕಾಮ ದಕ್ಷ
ಇವರೊಳಗಾದ ಸಮಸ್ತ ದೇವ ದಾನವ ಮಾನವರೆಲ್ಲರು
ಶಿವಲಿಂಗದೇವರನಾರಾಧಿಸಿಹೆವೆಂದು,
ಜಪ ಧ್ಯಾನ ಮೌನಾದಿ ತಪ ನಾನಾವ್ರತ ನೇಮಂಗಳಂ ಕೈಕೊಂಡು,
ಅರ್ಚನೆ ಪೂಜನೆಯುಂ ಮಾಡಿ, ಪಲವು ಪ್ರಕಾರದಿಂದೊಲಿಸಿ

ಅನೇಕ ಫಲಪದಮುಕ್ತಿಯಂ ಪಡೆದು ಭೋಗಿಸಿ
ಸುಖಿಯಾಗಿರುತಿಹುದಕ್ಕೆ ಸಂಶಯವೇಕೆ?
ಶ್ರುತ ದೃಷ್ಟ ಅನುಮಾನದಿಂ ತಿಳಿದುನೋಡಿ
ಅದಕೇನೂ ಸಂದೇಹಂ ಬಡಲಿಲ್ಲಯ್ಯಾ.
ಎರಡಿಲ್ಲದೆ ಏಕವಾದ, ಭಿನ್ನದೋರದ ಶಿವಸಂಗವಾದ
ಶಿವಭಕ್ತನು ಇವರಂತೆ ಅಲ್ಲ.
ಜಪ ತಪ ಧ್ಯಾನ ಮೌನ ನಾನಾವ್ರತನಿಯಮಂಗಳಂ ಕೈಕೊಂಡು
ಅರ್ಚನೆ ಪೂಜನೆಯುಂ ಮಾಡಿ, ಹಲವು ಪ್ರಕಾರದಿಂದೊಲಿಸಿ
ಅನೇಕ ಫಲಪದಮುಕ್ತಿಯ ಪಡೆವಹೆವೆಂದು ಅಲ್ಪಾಶೆವಿಡಿದು
ಭ್ರಮೆಗೊಳಗಾದ ಮರ್ಕಟಮನದ ಪರಿಯ ನೋಡಾ!
ಶಿವಶಿವ ಮಹಾದೇವಾ ಮಹಾವಸ್ತುವಿನಲ್ಲಿ ಭೇದವಿಲ್ಲದಿಪ್ಪ
ಅಭೇದ್ಯ ಶರಣಂಗೆ ಜಪದ ನೇಮವೆಲ್ಲಿಯದು?
ಜಪದ ಫಲ ಕೈಸಾರಿದಂಗೆ ಧ್ಯಾನಮೌನವೆಲ್ಲಿಯದು?
ಧ್ಯಾನದೇಹ ಅಳವಟ್ಟು ಆನಂದಿಪಂಗೆ ತಪದ ತಗುಹೆಲ್ಲಿಯದು?
ಇಹ-ಪರವೆಂಬ ಇದ್ದೆಸೆಗೆಟ್ಟಂಗೆ ವ್ರತನೇಮದ ನೋಂಪಿಯ ಸೂತಕವೆಲ್ಲಿಯದು?
ಉದ್ಯಾಪನೆಯಂ ಮಾಡಿ ಮಹಾಪುರುಷನಂ ಪಡೆದು
ತೆರಹಿಲ್ಲದೆ ಪತಿಭಕ್ತಿಯ ಮಾಡುವ ಸಜ್ಜನ ಸತಿಗೆ
ಅರ್ಚನೆ ಪೂಜನೆಯಂ ಮಾಡುವ ದಂದುಗವೆಲ್ಲಿಯದೊ?
ತನು ಮನ ಧನ ಮುಂತಾದುವೆಲ್ಲವು ಶಿವನೊಡವೆಯೆಂದು ಮಾಡುವ ಸದ್ಭಕ್ತಂಗೆ
ಆವಾಗಲೂ ಶಿವನ ಸೇವೆಯ ಮಾಡುವ ಕೈಗಳಿಗೆ
ಮಣಿಯ ಹಿಡಿದು ತಿರುಹಬೇಕೆಂಬ ಕೋಟಲೆಯೇಕೆ?
ಅನುಶ್ರುತವು ನೆನೆವ ಮನದ ನೆನಹ ಬಿಡಿಸಿ
ಎಣಿಕೆಗಿಕ್ಕಿ ಸಂದೇಹಿಸುವ ಸಂಚಲವೇಕೆ?
ಅನಿಮಿಷನಾಗಿ ನೋಡುವ ದೃಷ್ಟಿಗೆ,
ಎವೆಯ ಮರೆ ಮಾಡಿಕೊಂಡು ಕಣ್ಣುಮುಚ್ಚಲೇತಕ್ಕೆ?
ಕಣ್ಣು ಮನ ಕೈ(ಈ) ತ್ರಿಸ್ಥಾನದಲ್ಲಿರಿಸಲರಿಯದೆ
ಭೇದವ ಮಾಡಿ ಅಗಲಿಸುವ ಜಪ ತಾನೇಕೆ?
ಪರಿಪೂರ್ಣವಾಗಿಪ ಸರ್ವಪದವನೀವ ಸ್ವತಂತ್ರ ಪರಾತ್ಪರವಸ್ತುವನಗಲಿ
ದೂರಕಕ್ಕೆ, ಎಡೆವೆರಹ ಮಾಡಿ ಖಂಡಿಸಿ (ಕಂಡಹೆ)ನೆಂಬ ಧ್ಯಾನಮೌನವೇಕೆ?
ಸಮರ್ಥತೆಯನುಳ್ಳ ಮಹಾಪದವನೊಳಗಿದ್ದು, ಅಲ್ಪಪದವ ಸಾಧಿಸೇನೆಂದು
ಕಾಯವ ದಂಡಿಸಿ ಆತ್ಮನಿಗ್ರಹವ ಮಾಡಿ,
ಬಟ್ಟೆಗುತ್ತಗೆತನವ ಪಣ್ಣಿ, ತಗಹಿನಲ್ಲಿ ಕುಳ್ಳಿರ್ದು ಬೇಡಿಕೊಂಬ ತಪ ತಾನೇಕೆ?
ಮುಟ್ಟಿತ್ತೆಲ್ಲ ಪವಿತ್ರ, ನೋಡಿತ್ತೆಲ್ಲ ಪಾವನ,

ನಿರ್ವಾಯನೆಂಬ ನಿರ್ಮಳಾಂಗ ನಿತ್ಯಶುದ್ಧದಾಸೋಹದೊಳಿರುತ
ಸೂತಕ ಬಿಡದೆಂದು, ಜಡಕ್ರೀಯಿಂದ ಭಾಪೆಗೊಡಲ ಗುರಿಮಾಡಿ
ಮೀಸಲಾಗಿಹ ಪ್ರಾಣವನಿರಿದುಕೊಂಡು ಸಾವ ಸಂಕಲ್ಪ ವ್ರತನೇಮವೇಕೆ?
ಪೂಜೆಯು ಪೂಜ್ಯನು ಪೂಜಿಸುವವ–
ಈ ತ್ರಿವಿಧದೋಜೆಯು ಸೂತ್ರಾತ್ಮಕ ತಾನೆ ಎಂಬ ಹವಣನರಿದು,
ಅರಿವಿಂಗಾಶ್ರಯವಾಗಿರಲರಿಯದೆ; ನಾನಾ ಪರಿಯಿಂದ ಒಲಿಸಿ ಮೆಚ್ಚಿಸಿ
ಸ್ವರ್ಗಾದಿ ಭೋಗ ಧರ್ಮಕರ್ಮವನುಂಬ ಕೈಕೂಲಿಕಾರಕರ್ಮಿಗಳಂತೆ
ಮಾಡುವ ಅರ್ಚನೆ ಪೂಜನೆಯ ಆಯಸವೇಕೆ?
ಜಪದ ಜಾಡ್ಯದ ಜಂಜಡದವನಲ್ಲ,
ಧ್ಯಾನಮೌನದಿಂದ ಬಿಗಿದು ಬೆರೆತಿಹ ಬಂಧನದವನಲ್ಲ.
ತಪದ ದಂಡನೆಯ ತಗಹಿನವನಲ್ಲ, ವ್ರತನೇಮದ ಸೂತಕಿಯಲ್ಲ,
ಅರ್ಚನೆ ಪೂಜನೆಯ ಫಲ[ಗ್ರಾಹ]ಕನಲ್ಲ, ಹರಕೆಗೆ ಹವಣಿಸಿ ಬೆರತಹನಲ್ಲ,
ನೆವದಿಂದ ತದ್ದಿನವ ಮಾಡಬೇಕೆಂಬ ಉದ್ದೇಶಿಯಲ್ಲ,
ವರುಷಕ್ಕೊಂದು ತಿಥಿಯೆಂದು ಕೂಡಿ ಮಾಡುವ ಕೀರ್ತಿವಾರ್ತೆಗೆ
ಮುಯ್ಯಾನುವವನಲ್ಲ, ಮಿಕ್ಕಾದ ಕಿರುಕುಳ ಬಾಧೆ ಆಧಿವಿಡಿಯದ
ಸಹಜಸಂತೋಷಿ, ಸರ್ವಾಂಗನೊಳ್ ತನ್ಮಯನಾಗಿರುತ್ತ, ಭಿನ್ನವೇಕೆ?
ಹಾಲ ಸಾಗರದೊಳಗೋಲಾಡುತಿರ್ದು ಓರೆಯಾವಿನ ಬೆನ್ನ ಹರಿವನಲ್ಲ,
ಪರುಷದ ಗಿರಿ ಕೈಸಾರಿರಲು; ನಾಡ ಮಣ್ಣ ಕೂಡಲಿಕ್ಕಿ ತೊಳೆದು
ಹಾಗವ ಸಾಧಿಸಬೇಕೆಂಬ ಧಾವತಿಯವನಲ್ಲ,
ಅತ್ಯಂತ ಸ್ನೇಹದಿಂದ ನೆನಹಿನಲ್ಲಿ ಮನಕ್ಕೆ ಬಂದು ನೆಲೆಗೊಂಡಿರುತ್ತಿರಲು
'ಆಹಾ ಪುಣ್ಯವೆ' ಎಂದು ಕ್ರೀಡಿಸುವ ರತಿಸುಖವಂ ಬಿಟ್ಟು
ನೆನಹಿನ ಆಸೆಯಿಂದ ತೊಳಲಿ ಬಳಲುವ ಮರಹಿನವನಲ್ಲ.
ಕೆಲವು ಮತದವರಂತೆ ಕಂಡಹೆನೆಂದರಸಿ ಆಡುವನಲ್ಲ
ಕೆಲವು ಮತದವರಂತೆ ತೆರಪಿಟ್ಟು ಅರಸಲುಂಟೆ?
ತಾನಲ್ಲದನ್ಯವಿಲ್ಲವೆಂದು ಅಹಂಕರಿಸಿ ಬೆರೆವವನಲ್ಲ.
ಮತ್ತೆ ಉಳಿದಾದ ಕಾಕುಮತವ ಸೊಗಸಿಗೆಳಸನಾಗಿ, ಹೊಲಬುಗೆಡುವನಲ್ಲ.
ಹೊತ್ತುದ ಹುಸಿ ಮಾಡಿ ಮತ್ತೆ ಉಂಟೆಂದು ಭೇದವ ಮಾಡುವ
ದುಷ್ಟದುಷ್ಕರ್ಮಿಗಳ ಪರಿಯವನಲ್ಲ.
ಮಾಡಿಹೆನೆಂಬ ಸಂಸಾರದ ಬಂಧನದವನಲ್ಲ.
ಮಾಡಲೊಲ್ಲೆನೆಂಬ ವಿಕಳವಾವರಿಸಿಹ ವೈರಾಗ್ಯದ ಉದಾಸೀನದವನಲ್ಲ.
ಋತುವುಳ್ಳ ಸತಿಯ ರತಿಕೂಟವಂತೆ
ಮುಂದೆ ಅಗಲಿಸುವ ಕಷ್ಟದ ಸುಖವನೊಲುವನಲ್ಲ.
ಋತುವರತ ಸತಿಯ ರತಿಕೂಟವಂತೆ

ಅಗಲಿಕೆಯಿಲ್ಲದ ಸುಖದ ಸಂಯೋಗದ ನೆಲೆಯನರಿದಾತಂಗೆ;
ಮಾಡುವಾತ ತಾನು ಮಾಡಿಸಿಕೊಂಬಾತ ತಾನು
ಸೋಹ ದಾಸೋಹ ತಾನೆಂದು ಬೇರೆನ್ನದೆ
ದಾತೃ ಭೋಕ್ತೃ ಶಿವನೊಬ್ಬನಲ್ಲದೆ,
ಬೇರೆ ಬೇರೆ ತಮತಮಗೆ ಒಡೆಯರುಂಟೆ? ಇಲ್ಲ.
ಆದಿ ಪರಶಿವ ತಾನೆ ಎಂದು ಮಾಡುವ ಮಾಟ,
ಸಟೆಯಿಲ್ಲದೆ ದಿಟ ಘಟಿಸಿ ಸಯವಾಗಿ ನಿಂದು
ನಿರಾಶೆಯ ಕುಳ(ನಿರಾಕುಳ?)ದ ಅನುವನರಿತು
ನಿಜವಡೆಗೊಂಡ ನಿಲವ ಪ್ರಮಾಣಿಸಿ ಕಾಬಂತೆ, ಮಾಡಬೇಕೆಂದು
ದ್ರವ್ಯವ ಸಂಕಲ್ಪಿಸಿ ಕೊಟ್ಟವರಾರು?
ಮಾಡಬೇಕೆಂಬ ಅರಿವಿನ ಕಣ್ದೆರೆದವರಾರು?
ಮಾಡುವೆನೆಂದು ನೆನೆವ ಚೇತನದ ಪ್ರಾಣವ ತಂದಿರಿಸಿದವರಾರು?
ಮಾಡಿಹೆನೆಂಬ, ಮಾತಬೇಕೆಂಬ, ಮಾಡುವ-
ಇವನೆಲ್ಲವ ಅಳವಡಿಸಿಕೊಂಡಿಹ ಕಾಯವ ರೂಪಿಸಿದರಾರು?
ಆದಿಯಿಂದವೆ ನುಡಿದು ನಡೆದು ರೂಪಾಗಿ ಪ್ರಭಾವಿಸಿ
ವ್ಯಾಪಾರಕ್ಕೆ ಸಂದೆವೆಂಬ ಹವಣಗಾರರು
ಬರಿಯ ವಳಾವಳಿಯಿಂದ, ನಾ ಮಾಡಿದಹೆನೆಂದು ಪ್ರತಿಜ್ಞೆಯಂ ಕೈಕೊಂಡು,
ಇಲ್ಲದುದನುಂಟುಮಾಡಿ ಪಡೆದು ಸಾದಿಸೆಹೆನೆಂಬ ಬಯಕೆಯ ಸಂಭ್ರಮದಾಯಸ
ತಲೆಗೇರಿ, ಉಬ್ಬಿ ಹರಿದಾಡುವ,
ಅವಿಚಾರದ ಮನದ, ಮರವೆ ಬಲಿದ ಇರವಿನ ಪರಿಯ ನೋಡಾ!
ಶಿವ ಮಹಾದೇವಾ.
ಶಿವ ತನ್ನ ಲೀಲಾ ವಿನೋದಕ್ಕೆ ಸಕಲವನು ರೂಪಿಸಿ ಆಗುಮಾಡಿಕೊಂಡಿರುತ್ತಿರಲು,
ಹುಚ್ಚುಗೊಂಡಂತೆ ಎಲ್ಲವೂ ನನ್ನಿಂದಾಯಿತ್ತು, ನಾ ಮಾಡಿದನೆಂದು
ಉಲಿವ ದೇಹಿಯ ಇನ್ನೇನೆನಬಹುದಯ್ಯ?
ಅವರಿಂದಾದ ಒಡವೆಯ ಅವರಿಗೆ ಈವುತ್ತ, ಉಪಚರಿಯುವ?
ನದಿಯುದಕವ ನದಿಗರ್ಪಿಸುವಂತೆ
ಒಡೆಯಂಗೊಡವೆಯನರ್ಪಿಸಿ ತಾ ಶುದ್ಧನಾಗಿ
ನಡೆನುಡಿಯಲ್ಲಿ ಕವಲುದೋರದೆ ತನ್ನಲ್ಲ ತಾನೆ ತಿಳಿವ,
ಘನವಡೆಗೊಂಡ ಮಹಾನುಭಾವಿಗಳು;
ಎಲ್ಲವನಳವಡಿಸಿಕೊಂಡಿಹ ಕಾಯುವ ಗುರುವೆಂದೆ ಸಾಧಿಸಿದ
ನೆನೆವ ಚೇತನದ ಪ್ರಾಣವ ಲಿಂಗವೆಂದೆ ಭಾವಿಸಿದ
ಅರಿವಿನ ಜ್ಞಾನವ ಜಂಗಮವೆಂದೆ ಅರಿದ
ನಮ್ಮ ಕೂಡಲಚೆನ್ನಸಂಗಮದೇವರು. || ೯೦೩ ||

೧೭೫೭

ಹಲಬರ ನುಂಗಿದ ಹಾವಿಂಗೆ ತಲೆಬಾಲವಿಲ್ಲ,
ಕೊಲುವುದು ತ್ರೈಜಗವ, ತನಗೆ ಪ್ರಳಯವಿಲ್ಲ.
ಸೂಕ್ಷ್ಮ ಶಿವಪಥದಲ್ಲಿ ನಡೆವುದು, ತನಗೆ ಬೇರೆ ಒಡಲಿಲ್ಲ
'ಅಹಂ' ಎಂಬ ಗಾರುಡುವ ನುಂಗಿತು
ಕೂಡಲಚೆನ್ನಸಂಗಮದೇವಾ. ॥ ೯೦೪ ॥

೧೭೫೮

ಹಲವು ದೈವಂಗಳ ಪೂಜೆಯ ಮಾಡುವ ಗೊರವನೆ
ಗುರುದೇವನೆಂದು ನುಡಿದು ಕರೆವ
ವಿವೇಕವಿಹೀನ ದುರಾಚಾರಿಯ ಮುಖವ ನೋಡಲಾಗದು.
ಸರ್ವದೇವರಿಗೆ ಒಡೆಯನಾದಂತಹ ಸದಾಶಿವನೆ ಗುರುದೇವನು.
ಶಿವಲಿಂಗಕ್ಕೆ ತಮ್ಮ ಪಾದತೀರ್ಥ ಪ್ರಸಾದವನೀವ
ವೀರಮಾಹೇಶ್ವರ ಜಂಗಮದೇವರು, ತನಗೆ ಗುರುದೇವ ಮಹಾದೇವನು.
ಅದೆಂತೆಂದಡೆ:
ಗುರುದೇವೋ ಮಹಾದೇವೋ ಗುರುದೇವಸ್ಸದಾಶಿವಃ।
ಗುರುದೇವಾತ್ ಪರಂ ನಾಸ್ತಿ ತಸ್ಮೈ ಶ್ರೀಗುರುವೇ ನಮಃ॥ ಇಂತೆಂದುದಾಗಿ,
ಗುರುದೇವನೆಂಬ ಶಬ್ದವು ಉಳಿದವರಿಗೆ ಸಲ್ಲದು.
"ಏಕೋ ದೇವೋ ನ ದ್ವಿತೀಯಃ" ಎಂದು ಶುದ್ಧಶೈವನಿಷ್ಠಾಪರನಾಗಿ
ಶಿವಮಹೇಶ್ವರನ ಎರಡನೆಯ ಶಿವನೆಂದು ಭಾವಿಸಿ
ಅವನೊಕ್ಕು ಮಿಕ್ಕುದ ಶೇಷಪ್ರಸಾದವೆಂದು ಕೊಂಡು
ಅನ್ಯಾಯವರಿಯದ ಶುದ್ಧಪತಿವ್ರತೆಯಂತೆ, ಶಿವಲಿಂಗೈಕ್ಯಭಾವದಿ ಅರಿವಾಗಿ
ನಚ್ಚಿ ಮಚ್ಚಿ ಮನವು ಲಿಂಗದಲ್ಲಿ ನೆಲೆಗೊಂಡು ನಿಂದ
ಸುಜ್ಞಾನಪ್ರಭುತನ ಅಯ್ಯನೆಂಬುದು. ಮಿಕ್ಕಿನ ಶೈವನೆಂಬುದು,
ಮಿಕ್ಕಿನ ಕೀಳುದೈವದ ಪೂಜೆಯ ಮಾಡುವ[ನ] ಗೊರವನೆಂಬುದು.
ಅದೆಂತೆಂದಡೆ:
ತೊತ್ತು ತೊಂಡರ ಕಾಲ ತೊಳೆದು ಸೇವೆಯ ಮಾಡಿ ಬದುಕುವನ,
ಪಡಿದೊತ್ತಿನ ಮಕ್ಕಳೆಂದು ಎಂಬರಲ್ಲದೆ, ರಾಜಕುಮಾರನೆಂಬರೆ ಸಲ್ಲರು.
ಆ ಪ್ರಕಾರದಲ್ಲಿ ವಿಪ್ರ, ಭ್ರಷ್ಟ, ನಟ ಶ್ವಪಚ ಮಾನವರ ವೇಷ ತಾಳಿ
ಹಲಬರ ಹೊಗಳಿ ಕೀಳು ದೈವದ ಕಾಲು ತೊಳೆದು ಎಂಜಲ ತಿಂಬ
ಭ್ರಷ್ಟಜಾತಿಯು ಗುರುದೇವನೆಂದು ಹೇಸಿಕೆಯಿಲ್ಲದೆ ನುಡಿದು ಕರೆವ
ದುರಾಚಾರಿಗಳಿಗೆ ಶಿವಭಕ್ತಿ ಸಲ್ಲದು, ನರಕ ತಪ್ಪದು,

ಅಂಜದೆ ಕರೆಸಿಕೊಂಬ ಅಜ್ಞಾನಿ ಗೊರವಂಗೆ ಮೊದಲೆ ನರಕ ತಪ್ಪದು ಕಾಣಾ
ಕೂಡಲಚೆನ್ನಸಂಗಮದೇವಾ. ॥ ೯೦೫ ॥

೧೭೫೯

ಹಲವು [ಪರಿಯ] ಪುಷ್ಪದಲ್ಲಿ ಪರಿಮಳವನರಸುವರೆ?
ಪಿರಿದು ರಸದಾಳಿಯ ಕಟ್ಟಿನಲ್ಲಿ ಹಣ್ಣನರಸುವರೆ?
ಸುರಭಿಗೆ ತನು ಕತ್ತಲೆಯೆಂದು ಬೆಳಗನರಸುವರೆ?
ಪರಶಿವಮೂರ್ತಿ ಸಂಗನ ಶರಣರಲ್ಲಿ ಕ್ರಿಯೆ ನಿಃಕ್ರಿಯೆಯನರಸುವರೆ?
ಅವರಿದ್ದಿರವೆ ಮುಕ್ತಿ, ಕೂಡಲಚೆನ್ನಸಂಗಮದೇವಾ. ॥ ೯೦೬ ॥

೧೭೬೦

ಹವಣಿಲ್ಲದ ಶಾಖೆಯ ಕಪಿ ಕೈವಿಡಿಯಲೊಲ್ಲದು,
ಗಮನವಿಲ್ಲದೆ ಪಿಕಶಿಶು ನುಡಿಯಲೊಲ್ಲದು,
ಪ್ರಭಾವಿಸಿದಲ್ಲದೆ ಉಲಿಯದು ಕುಕ್ಕುಟ.
ಈ ತ್ರಿವಿಧದ ಭೇದವ ನೋಡಿರೆ ಭಕ್ತರಪ್ಪರೆಲ್ಲ.
ಹೂ ಮಿಡಿಯ ಹರಿದಡೆ ಹಣ್ಣಪ್ಪುದ?
ಪಸಿವು ತೃಷೆ ನಿದ್ರೆ ಆಲಸ್ಯವುಳ್ಳನ್ನಕ್ಕರ ಅದ್ವೈತವುಂಟೆ ಜಗದೊಳಗೆ?
ತನ್ನ ಮರೆದು ಲಿಂಗವ ಮರವುದು,
ತನ್ನ ಮರೆಯದೆ ಲಿಂಗವ ಮರೆವ ಯೋಗ ವೆಂಥದೊ?
ಸುಡು ಸುಡು ಅವರು ಗುರುದ್ರೋಹಿಗಳು, ಆಚಾರಭ್ರಷ್ಟರು.
ಉಭಯ ತನುಗುಣನಾಸ್ತಿಯಾಗದನ್ನಕ್ಕರ
ಕೂಡಲಚೆನ್ನಸಂಗಯ್ಯನೆಂತೊಲಿವನು? ॥ ೯೦೭ ॥

೧೭೬೧

ಹಸ್ತ ಮಸ್ತಕ ಸಂಯೋಗವಂ ಮಾಡಿ ಕರ್ಣಮಂತ್ರವ ತುಂಬಿ,
ಕರಸ್ಥಲಕ್ಕೆ ಶಿವಲಿಂಗವ ಬಿಜಯಂಗೈಸಿ ಕೊಟ್ಟು,
ಭವಿಯ ಕಳೆದು ಭಕ್ತನ ಮಾಡಿದ ಗುರು,
ಒಬ್ಬನಲ್ಲದೆ ಇಬ್ಬರುಂಟೆ? ಗುರು ಎರಡಾದಲ್ಲಿ ಲಿಂಗ ಎರಡು,
ಲಿಂಗ ಎರಡಾದಲ್ಲ ದೀಕ್ಷೆ ಎರಡು, ದೀಕ್ಷೆ ಎರಡಾದಲ್ಲಿ ಪ್ರಸಾದವೆರಡು;
ಪ್ರಸಾದವೆರಡಾದಲ್ಲಿ
ಭಕ್ತಿ ಎರಡು, ಭಕ್ತಿ ಎರಡಾದಲ್ಲಿ ಮುಕ್ತಿ ದೂರ ನೋಡಾ.
ಇಂತೀ ಮುಕ್ತಿದೂರರಿಗೆ ಮುಂದೆ ನರಕ ತಪ್ಪದು.
ತನ್ನ ಸತಿ ಸುತ ಪಿತ ಮಾತೆ ಸಹೋದರ ಬಂಧುಜನಕ್ಕೆ

ಉಪದೇಶ ಮಾಡುವ ಗುರು
ಒಬ್ಬನಲ್ಲದೆ ಇಬ್ಬರು ಸಲ್ಲ. ಇಬ್ಬರು ಗುರುವಾದರೆ ನರಕ ತಪ್ಪದು ನೋಡಾ.
ಇದು ಕಾರಣ ಉಪದೇಶವ ಮಾಡುವ ಗುರು ಒಬ್ಬನೆಯಾಗಬೇಕು ನೋಡಾ.
ಗುರು ಒಬ್ಬನೆ ಆದಲ್ಲಿ ಲಿಂಗ ಒಂದೇ, ಲಿಂಗ ಒಂದಾದಲ್ಲಿ ದೀಕ್ಷೆ ಒಂದೇ,
ದೀಕ್ಷೆ ಒಂದಾದಲ್ಲಿ
ಪ್ರಸಾದ ಒಂದೇ, ಪ್ರಸಾದ ಒಂದಾದಲ್ಲಿ ಭಕ್ತಿ ಒಂದೇ,
ಭಕ್ತಿ ಒಂದಾದಲ್ಲಿ ಮುಕ್ತಿ ಒಂದೇ.
ಗುರುವಚನವ ಮೀರಿ ಅಜ್ಞಾನದಿಂದ ತನ್ನನ್ವಯಕ್ಕೆ
ಗುರು ಲಿಂಗವ ಎರಡು ಮಾಡಿಕೊಂಡು
ನಡೆವ ಪಾತಕರಿಗೆ ನಾಯಕನರಕ ತಪ್ಪದು ಕಾಣಾ
ಕೂಡಲಚೆನ್ನಸಂಗಯ್ಯ. ॥ ೯೦೮ ॥

೧೭೬೨

ಹಸಿರು ಹಚ್ಚೆಗಳೆಂಬ ಪತಿತಲೇಖಸವನು ಹರಭಕ್ತಾಂಗನೆಯರು
ತಮ್ಮ ಕರ ಭಾಳ ಶರೀರಂಗಳ ಮಧ್ಯದಲ್ಲಿ
ಮುಳ್ಳುಮೊನೆಗಳಿಂದ ಬರೆದಿರಿದುಕೊಂಡು
ಪರದೈವದ ಪಾದಮುದ್ರೆಗಳನೊತ್ತಿದ ತಾಳಿಯ ಕೆರಹಿನಟ್ಟೆಯಂತೆ ಸರಗೊಳಿಸಿ
ತನ್ನ ಕೊರಳಲ್ಲಿ ಕಟ್ಟಿಕೊಂಡು,
ಗುರುಕೊಟ್ಟ ಲಿಂಗವನಾರಾಧಿಸುವ ಈ ಪರವಾದಿ ಹೊಲೆಯನ
ಸೂಳೆಯ ಕೈಯಲ್ಲಿ ಕೊಂಬ ಅನ್ನ ಉದಕಂಗಳೆಲ್ಲವು ಸುರೆ,
ಕ್ರಿಮಿಮಲ, ನಾಯಡಗು, ನರಮಾಂಸ.
ಇಂತಿದನರಿದು ಅವ ಪರಿಹರಿಸದೆ ಅವರೊಡಗೂಡಿಕೊಂಡು ನಡೆವವರಿಗೆ
ಗುರು ಲಿಂಗ ಜಂಗಮ ಪಾದೋದಕ ಪ್ರಸಾದವಿಲ್ಲ, ಅವರು ಭಕ್ತಾಚಾರಕ್ಕೆ ಸಲ್ಲರು.
ಈ ಉಭಯರನು ಕೂಡಲಚೆನ್ನಸಂಗಯ್ಯ
ಕುಂಭೀಪಾತಕ ನಾಯಕನರಕದಲ್ಲಿಕ್ಕುವ. ॥ ೯೦೯ ॥

೧೭೬೩

ಹಸಿವು ತೃಷೆ ನಿದ್ರೆ ರೋಗಾದಿ ಬಾಧೆಗಳು
ತನಗಾಗುತ್ತಿಹವೆಂಬ ಜೀವಭಾವವ ಮರೆದು,
ಅವು ಲಿಂಗದ ಸದಿಚ್ಛೆಯಿಂದ ಅಂಗಕ್ಕುಂಟಾಗಿಹವೆಂಬ
ಶಿವಭಾವವು ಸದಾಸನ್ನಿಹಿತವಾಗಿದ್ದಡೆ
ಶರಣನ ಹಸಿವು ತೃಷೆ ಮುಂತಾದ ಸರ್ವಭಂಗವು

ಲಿಂಗದಲ್ಲಿ ಲೀನವಾಗಿ, ಹುಟ್ಟುಗೆಟ್ಟು, ಸಾವಿನಸಂತಾಪವಿಲ್ಲದೆ
ನಾನು ನನ್ನದೆಂಬಹಂಕಾರ ಮಮಕಾರಗಳು ಮರೆಮಾಜಿ
ಸಂಚಿತ ಆಗಾಮಿ ಪ್ರಾರಬ್ಧವೆಂಬ ಕರ್ಮತ್ರಯ ಮುಂತಾದ
ಪಾಶಗಳು ನಾಶವಾಗಿ, ನಿತ್ಯಮುಕ್ತಿಯಾಗುತ್ತಿಹುದಯ್ಯಾ.
ಕೂಡಲಚೆನ್ನಸಂಗಮದೇವಾ,
ಇದು ನಿಮ್ಮ ಭಕ್ತಿದೇವತೆಯ ಚಮತ್ಕೃತಿಯೆಂದರಿದೆನು. ‖ ೯೧೦ ‖

೧೭೬೪

ಹಸಿವು ತೃಷೆ ವಿಷಯವೆಂಬ ಮರಂಗಳನೆ ಕಂಡು,
ಪರಿಣಾಮವೆಂಬ ಕೊಡಲಿಯಲ್ಲಿ ತತ್ತರಿದರಿದು,
ಕಾಮ ಕ್ರೋಧ ಲೋಭ ಮೋಹ ಮದಮತ್ಸರಂಗಳ ತರಿದೊಟ್ಟಿದನೊಂದೆಡೆಯಲ್ಲಿ.
ಪಂಚೇಂದ್ರಿಯ, ಷಡುವರ್ಗ, ಸಪ್ತಧಾತು, ಅಷ್ಟಮದವೆಂಬ ಬಳ್ಳಿಯ ಸೀಳಿ,
ಏಳು ಕಟ್ಟಿನ ಮೋಳಿಗೆಯನೆ ಹೊತ್ತು ನಡೆದನಯ್ಯಾ.
ಆಶೆ ಆಮಿಷ ತಾಮಸವೆಂಬ ತುರಗವನೇರಿ
ಆತುರದ ತುರವನೆ ಕಳೆದನಯ್ಯಾ–ಈ ಮಹಾಮಹಿಮಂಗೆ,
ಜಗದ ಜತ್ತಿಗೆಯ, ಹಾದರಗಿತ್ತಿಯ,
ಹದಿನೆಂಟು ಜಾತಿಯ ಮನೆಯಲ್ಲಿ ತೊತ್ತಾಗಿಪ
ಶಿವದ್ರೋಹಿಯ ಲಿಂಗವಂತರ ಮನೆಯಲ್ಲಿ ಹೂಗಿಸುವರೆ?
ಎಲೆ ಲಿಂಗತಂದೆ, ಜಡವಿಡಿದು ಕೆಟ್ಟೆಸಯ್ಯಾ, ಭಕ್ತಿಯ ಕುಲವಸರಿಯದೆ.
ಎಲೆ ಲಿಂಗದಾಜ್ಞಾಧಾರಕಾ, ಎಲೆ ಲಿಂಗಸನುಮತಾ, ಎಲೆ ಲಿಂಗೈಕಪ್ರತಿಗ್ರಾಹಕಾ.
ಕೂಡಲಚೆನ್ನಸಂಗಯ್ಯನಲ್ಲಿ, ಮೋಳಿಗೆಯ ಮಾರಿತಂದೆಗಳ ಶ್ರೀಪಾದಕ್ಕೆ
ನಮೋ ನಮೋ ಜಯಜಯತು. ‖ ೯೧೧ ‖

೧೭೬೫

ಹಸಿವು ಹರಿದು, ತೃಷೆ ಬತ್ತಿ, ಪರಿಣಾಮವೆ ಪಥ್ಯವಾಗಿ ನಿಂದಂಗ
ನೀನಾದ ಕಾರಣ,
ನಿನ್ನ ಕಾರುಣ್ಯಚಕ್ಷು ಎನ್ನ ನಿರೀಕ್ಷಿಸಿದಲ್ಲಿ,
ಎನ್ನ ಬಂಧ ಮೋಕ್ಷವೆಂಬುವು ಅಂದೆ ನಿಂದವು.
ಕೂಡಲಚೆನ್ನಸಂಗಮದೇವರಲ್ಲಿ
ಪ್ರಭುದೇವರ ಸುಳುಹು ಗೋಪ್ಯವಾಯಿತ್ತು. ‖ ೯೧೨ ‖

೬೧೬೬

ಹಸು ರತ್ನವ ನುಂಗಿ ಬ್ರಹ್ಮೇತಿಗೆ ಬಲವಾಯಿತ್ತೆ ಅಯ್ಯಾ?
ಹಸುವ ಕೊಲಬಾರದು ರತ್ನವ ಬಿಡಬಾರದು
ಕೂಡಲಚೆನ್ನಸಂಗಯ್ಯನೆಂಬ ರತ್ನ,
ನೀ ಜಂಗಮದೊಳಗೆ ಸಿಲುಕಿದೆಯಾಗಿ. ॥ ೯೧೩ ॥

೧೭೬೭

ಹಸು ಹಯನಾಯಿತ್ತು, ಹಸು ಮನೆಗೆ ಬಂದಿತ್ತು,
ಹಸುವ ಕಟ್ಟುವರೆಲ್ಲರ ಕಟ್ಟಿ, ಕಟ್ಟ ಬಂದವರ ಒಕ್ಕಲಿಕ್ಕಿ[ತು]ಳಿಯಿತ್ತು.
ನಮ್ಮ ಕೂಡಲಚೆನ್ನಸಂಗಮದೇವರಲ್ಲಿ
ಹಸುವ ಕಟ್ಟಿದಾತ ನಮ್ಮ ಸಿದ್ಧರಾಮಯ್ಯದೇವರೊಬ್ಬರೆ. ॥ ೯೧೪ ॥

೧೭೬೮

ಹಾಡಿ ಮಾಡುವರೆಲ್ಲ ಹಾದರಗಿತ್ತಿಯ ಮಕ್ಕಳಯ್ಯಾ,
ಕೂಡಿ ಮಾಡುವರೆಲ್ಲ ಕುಂಟಣಿಗಿತ್ತಿಯ ಮಕ್ಕಳಯ್ಯಾ,
ಬೇಡಿ ಮಾಡುವರೆಲ್ಲ ಬೇಡಿತಿಯ ಮಕ್ಕಳಯ್ಯಾ,
ಡಂಬಕತನದಲ್ಲಿ ಮಾಡುವರೆಲ್ಲ ಡೊಂಬಗಿತ್ತಿಯ ಮಕ್ಕಳಯ್ಯಾ,
ಅಚ್ಚ ಪ್ರಸಾದಿಗಳೆಂಬವರೆಲ್ಲ ಮುಚ್ಚುಗಿತ್ತಿಯ ಮಕ್ಕಳಯ್ಯಾ,
ಸಮಯಾಚಾರದಲ್ಲಿಪ್ಪವರೆಲ್ಲ ಸಮ್ಮಗಾರಿಯ ಮಕ್ಕಳಯ್ಯಾ,
ಜಂಗಮ ಬಂದ ಒಲವ, ನಿಂದ ನಿಲುಕಡೆಯ ನೋಡಿ,
ಮಾಡಿ ನೀಡಿ ಸ್ವಯಾನುಭಾವದ ಸಮ್ಯಗ್‍ಜ್ಞಾನವನರಿವವರು
ಕೂಡಲಚೆನ್ನಸಂಗನ ಶರಣರಯ್ಯಾ. ॥ ೯೧೫ ॥

೧೭೬೯

ಹಾಡುವಾತ ಜಂಗಮನಲ್ಲ, ಕೇಳುವಾತ ಭಕ್ತನಲ್ಲ.
ಹಾಡಿ ಬೇಡುವನೆ ಜಂಗಮ? ಹಾಡಿದಡೆ ಕೇಳಿ ಕೊಡುವನೆ ಭಕ್ತ?
ಹಾಡುವಂಗೆಯೂ ಕೇಳುವಂಗೆಯೂ ಸ್ವಾಮಿ ಭೃತ್ಯಸಂಬಂಧದ ಸಕೀಲ ತೋರದು.
ಇದು ಕಾರಣ–ಕೂಡಲಚೆನ್ನಸಂಗಯ್ಯಾ ನಿಮ್ಮಲ್ಲಿ ಇವರಿಬ್ಬರು
ಉಭಯಭ್ರಷ್ಟರು. ॥ ೯೧೬ ॥

೧೭೭೦

ಹಾಲ ಹಿಡಿದು ಬೆಣ್ಣೆಯನರಸಲುಂಟೆ?
ಲಿಂಗವ ಹಿಡಿದು ಪುಣ್ಯತೀರ್ಥಕ್ಕೆ ಹೋಗಲುಂಟೆ?
ಲಿಂಗಸಂಗವ ಮಾಡಿಹೆನೆಂಬಾತಂಗೆ ಅನ್ಯದೈವಭಜನೆ ಏತಕಯ್ಯಾ?
"ಇಷ್ಟಲಿಂಗಮವಿಶ್ವಸ್ಯ, ಯೋಽನ್ಯದೈವಮುಪಾಸತೇ।
ಶ್ವಾನಯೋನಿ ಶತಂ ಗತ್ವಾ ಚಾಂಡಾಲ ಗೃಹಮಾಚರೇತ್॥ ಇಂತೆಂದುದಾಗಿ,
ಇಂತಪ್ಪ ಪಾತಕಂಗೆ ಅಘೋರನರಕ ತಪ್ಪದು ಕಾಣಾ
ಕೂಡಲಚೆನ್ನಸಂಗಮದೇವಾ. ॥ ೯೧೭ ॥

೧೭೭೧

ಹಾಲುಂಡ ಸವಿಯ ಮೇಲುಪಜ್ಞೆಯ ಹೇಳಬಹುದಲ್ಲದೆ
ಸುಖಸೋಂಕಿನ ಸ್ವಾನುಭಾವವ ಹೇಳಬಾರದು, ಕೇಳಬಾರದು,
ಇಂಬಿನ ಸೋಂಕಿಗೆ ಸೋಂಕು ಸಂಬಂಧವಳಿದ ಬಳಿಕ ಉಪಚಾರವುಂಟೆ?
ಕೂಡಲಚೆನ್ನಸಂಗಯ್ಯನರುಹಿದಡೆ ಅರಿದೆನಲ್ಲದೆ
ಎನಗೆ ಬೇರೆ ಸ್ವತಂತ್ರ ಜ್ಞಾನವಿಲ್ಲ ಕೇಳಯ್ಯಾ. ॥ ೯೧೮ ॥

೧೭೭೨

ಹುಟ್ಟುವಲ್ಲಿ ಭವಿ,
ಮರಳಿ ಭಕ್ತನ ಮಾಡಿ ಪೂರ್ವಾಶ್ರಯವ ಕಳೆದು,
ಹೊಂದುವಲ್ಲಿ ಭವಿಯಾಗಿ ಹೋಹವರ ಮುಟ್ಟಲಾಗದು.
ಅವನ ಮುಟ್ಟಿದವರು ಮುನ್ನವೆ ವ್ರತಗೇಡಿ,
ಅವನ ಶ್ರದ್ಧಾಕಾಲವೆ ಶ್ವಾನಮಾಂಸ, ಕ್ರಿಯಾಕಾಲವೆ ಕ್ರಿಮಿಕುಳಗಳು,
ತದ್ದಿನವೆ ಮದ್ಯಮಾಂಸ. ಇದು ಕಾರಣ–
ಕೂಡಲಚೆನ್ನಸಂಗಮದೇವಾ, ಅವನ ಮನೆಯ ವಿಚಾರಿಸದೆ ಹೊಕ್ಕವಂಗೆ
ನಾಯಕನರಕ. ॥ ೯೧೯ ॥

೧೭೭೩

ಹುಲಿ ಹಾವು ಕಿಚ್ಚು ಕಳ್ಳರ ಭಯವೆಂದು
ಹೇಳಿದವರ ಮೇಲೆ ನೋವುಂಟೆ ಅಯ್ಯಾ?
ನೊಂದರೆ ನೋಯಲಿ, ಇದರಿಂದೇನಾದಡಾಗಲಿ ಕಂಡು ಸುಮ್ಮನಿರ್ದಡೆ ದ್ರೋಹ.
ಆನೆಯ ಚೋಹವ ತೊಟ್ಟು ನಾಯಾಗಿ ಬಗುಳಿದಂತೆ, ಭಕ್ತನಾಗಿ
ಭವಿಯೊಡ ಕೂಟಂಗಳ ಮಾಡಿ, ಭವಿಶೈವದೈವಕ್ಕೆರಗಿ, ಭವಿಸಂಗ ಭವಿಸೇವೆ,

ಭವಿಪಾಕ ಭವಿಪಂತಿ ಭವಿಶೈವಕ್ರಿಯೆ ಮಾಡಿ, ಕೆಟ್ಟು ನಡೆದು
ಕೊಟ್ಟು ವರ್ತಿಸಿ, ನರಕಭಾಜನರಾಗಿ ಹೋಹಲ್ಲಿ,
ಅರಿದರಿದು ಗುರುರೂಪರಾದ ಶರಣರು ಸುಮ್ಮನಿರ್ದಡೆ ದ್ರೋಹ.
ಇದೇನು ಕಾರಣವೆಂದಡೆ, ಆ ಭಕ್ತಮಾರ್ಗವು ಸತ್ಯಶರಣರದಾಗಿ.
ಅವರ ಹಾನಿವೃದ್ಧಿ ತನ್ನದಾಗಿ, ಅವರ ಸುಖದುಃಖಂಗಳು ತನ್ನವಾಗಿ.
ಅದು ಕಾರಣ ಅವರ ಹೊಡೆದು ಬಡಿದು ಜಡಿದು ನುಡಿದು
ತಡಿಗೆ ಸಾರಿಸಿದಲ್ಲಿ ಒಡಗೂಡಿಕೊಂಡಿಪ್ಪ ಲಿಂಗವು.
ಅಲ್ಲದಿರ್ದಡೆ ನಡುನೀರೊಳಗದ್ದುವನು ಕೂಡಲಚೆನ್ನಸಂಗಯ್ಯ. ॥ ೯೨೦ ॥

೧೬೬೪

ಹುಸಿ ಕಳವು ಪರದಾರ ಹಿಂಸೆ ಅಧಿಕಾಶೆಗಳ ಕೂಡಿಸಿಕೊಂಡು ಇದ್ದು
ಅನ್ಯ ಅನಾಚಾರದಲ್ಲಿ ವರ್ತಿಸುವವರು,
ತಮ್ಮ ಅಂಗದ ಮೇಲೆ ಕಟ್ಟಿಕೊಂಡಿದ್ದ ಲಿಂಗವು
ಅದು ಲಿಂಗವಲ್ಲ.
ಅವರು ಮಾಡುವ ದೇವಪೂಜೆ ನಿಚ್ಚದಂಡಕ್ಕೆ ಪ್ರಾಯಶ್ಚಿತ್ತವೆಂದು
ಶಿವನ ವಾಕ್ಯ ಮೊದಲಾದ ಸಕಲಪುರಾತರ ವಚನಂಗಳು
ಮುಂದೆ ಸಾರಿ ಹೇಳಿಹವು.
ಅದು ಕಾರಣ—ಇನ್ನು ಪ್ರಾಣಲಿಂಗದ ಸಂಬಂಧವಾದ ಸದ್ಭಕ್ತನು
ಅನ್ಯಾಯ ಅನಾಚಾರದಲ್ಲಿ ವರ್ತಿಸುವವರ ಬಿಟ್ಟಿಹನು. ॥ ೯೨೧ ॥

೧೬೬೫

ಹುಸಿಯಂಕರಿಸಿತ್ತು ಹೊಲೆಯನಲ್ಲಿ, ಹುಸಿ ಎರಡೆಲೆಯಾಯಿತ್ತು ಮಾದಿಗನಲ್ಲಿ,
ಹುಸಿ ನಾಲ್ಕೆಲೆಯಾಯಿತ್ತು ಸಮ್ಮಗಾರನಲ್ಲಿ, ಹುಸಿ ಆರೆಲೆಯಾಯಿತ್ತು ಅಗಸನಲ್ಲಿ,
ಹುಸಿ ಎಂಟೆಲೆಯಾಯಿತ್ತು ವ್ಯವಹಾರಿಯಲ್ಲಿ, ಹುಸಿ ಸಸಿಯಾಗಿತ್ತು ಹಾದರಿಗನಲ್ಲಿ,
ಹುಸಿ ಗಿಡವಾಯಿತ್ತು ಮದ್ಯಪಾನಿಯಲ್ಲಿ, ಹುಸಿ ಮರನಾಯಿತ್ತು ಜೂಜುಗಾರನಲ್ಲಿ,
ಹುಸಿ ಹೂವಾಯಿತ್ತು ಡೊಂಬನಲ್ಲಿ, ಹುಸಿ ಕಾಯಾಯಿತ್ತು ಅಕ್ಕಸಾಲಿಗನಲ್ಲಿ,
ಹುಸಿ ಹಣ್ಣಾಯಿತ್ತು ಸೂಳೆಯಲ್ಲಿ,
ಹುಸಿ ಹಣ್ಣಾಗಿ ತೊಟ್ಟು ಬಿಚ್ಚಿತ್ತು ಅರಸನಲ್ಲಿ.
ಇಂತೀ ಹುಸಿಯ ನುಡಿವವರಿಗೆ
ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ,
ಪಾದೋದಕವಿಲ್ಲಾಗಿ ಮೋಕ್ಷವಿಲ್ಲ.
ಕಾರಣ— ನಮ್ಮ ಕೂಡಲಚೆನ್ನಸಂಗಯ್ಯನ ಶರಣರು
ಹುಸಿಯ ಬಿಟ್ಟುಕಳೆದು ನಿಜಲಿಂಗೈಕ್ಯರಾದರು. ॥ ೯೨೩ ॥

೧೭೭೬

ಹುಸಿಯಿಂದ ಜನಿಸಿದೆನಯ್ಯಾ ಮರ್ತ್ಯಲೋಕದೊಳಯಿಂಕೆ.
ಹುಸಿಯಿಂದ ಲಿಂಗವ ಹೆಸರಿನಿಂದ ಕರೆವೆನಯ್ಯಾ.
ಇದು ಎನಗೆ ಭಾವವೂ ಅಲ್ಲ, ನಿರ್ಭಾವವೂ ಅಲ್ಲದೆ ನಿಂದುದಯ್ಯಾ.
ಅದರ ಅವಯುವಂಗಳೆಲ್ಲ ಜಂಗಮವಯ್ಯಾ
ಅದಕ್ಕೆ ಎನ್ನಲುಳ್ಳ ಸಯಿದಾನವ ನೀಡಿದೆನಯ್ಯಾ
ಪ್ರಸಾದಕ್ಕೆ ಶರಣೆಂಬೆನಯ್ಯಾ, ಅದು ಸಾರವೂ ಅಲ್ಲ ನಿಸ್ಸಾರವೂ ಅಲ್ಲ,
ಆ ಪ್ರಸಾದದಲ್ಲಿ ನಾನೇ ತದ್ಗತನಾದೆನಯ್ಯಾ
ಕೂಡಲಚೆನ್ನಸಂಗಮದೇವಾ. || ೬೨೩ ||

೧೭೭೭

ಹುಸಿಯುಳ್ಳವ ಭಕ್ತನಲ್ಲ, ವಿಷಯವುಳ್ಳವ ಮಾಹೇಶ್ವರನಲ್ಲ,
ಆಸೆಯುಳ್ಳವ ಪ್ರಸಾದಿಯಲ್ಲ, ಜೀವಗುಣವುಳ್ಳವ ಪ್ರಾಣಲಿಂಗಿಯಲ್ಲ,
ತನುಗುಣವುಳ್ಳವ ಶರಣನಲ್ಲ, ಜನನಮರಣವುಳ್ಳವ ಐಕ್ಯನಲ್ಲ.
ಈ ಆರರ ಅರಿವಿನ ಅರ್ಕದ ಸಂಪತ್ತಿನ ಭೋಗ ಹಿಂಗಿದಡೆ
ಸ್ವಯಂ ಜಾತನೆಂಬೆ.- ಆ ದೇಹ ನಿಜದೇಹವೆಂಬೆ
ಆ ದೇಹ ಗುರುಗುಹೇಶ್ವರನೆಂಬೆ,
ಆ ದೇಹ ಇರಿದರರಿಯದು, ತರಿದರರಿಯದು, ಹೊಯ್ದರರಿಯದು,
ಬಯ್ದರರಿಯದು, ಸ್ತುತಿಸಿದರರಿಯದು, ನಿಂದಿಸಿದರರಿಯದು,
ಪುಣ್ಯವನರಿಯದು, ಪಾಪವನರಿಯದು, ಸುಖವನರಿಯದು
ದುಃಖವನರಿಯದು, ಕಾಲವನರಿಯದು, ಕರ್ಮವನರಿಯದು
ಜನನವನರಿಯದು, ಮರಣವನರಿಯದು-
ಇಂತೀ ಷಡುಸ್ಥಲದೊಳಗೆ ತಾ ಒಂದು ನಿಜವಿಲ್ಲವಾಗಿ
ನಾವು ಹಿರಿಯರು ನಾವು ಗುರುಗಳು
ನಾವು ಸಕಲಶಾಸ್ತ್ರಸಂಪನ್ನ ಷಡುಸ್ಥಲದ ಜ್ಞಾನಿಗಳು
ಎಂಬ ಮೂಕೊರೆಯರ ಪುಚ್ಚುವನೆ ಕೂಡಲಚೆನ್ನಸಂಗಮದೇವ?
ಕುತ್ತಿಗೆಯುದ್ದ ಹೂಳಿಸಿಕೊಂಡು ಮುಗಿಲುದ್ದಕ್ಕೆ ಹಾರಲುಂಟೆ? || ೬೨೪ ||

೧೭೭೮

ಹೊ-ಮಿಡಿಯ ಹರಿದು ಹಣ್ಣ ಮಾಡಿಹೆನೆಂಬಡೆ
ಫಲಕಾರ್ಯಂಗಪ್ಪುವೆ ದೇವಾ?
ಶಶಿಧರನಟ್ಟಿದ ಬೆಸನದೊಳಗೆ ಎಷ್ಟೆ ಮಾತ್ರ ಪ್ರಮಾಣವೆ ಪೂರೈಸಲು?

ಲಿಂಗಪ್ರಾಣ ಪ್ರಾಣಲಿಂಗದ ಭೇದವ ನೆಟ್ಟನೆ ತಿಳಿದಲ್ಲದೆ,
ಸಂಗಮನಾಥ 'ನೀ ಬಾರಾ' ಎಂದು ಎತ್ತಿಕೊಳ್ಳನು.
ಕೂಡಲಚೆನ್ನಸಂಗಯ್ಯಂಗೆ ಸವೆಯದೆ ಮುನ್ನ ಸಯವಾಗಲುಂಟೆ?
ಹೇಳಾ ಸಂಗನಬಸವಣ್ಣಾ. || ೯೨೫ ||

೧೭೭೯

ಹೃದಯವೊಳಿಪ್ಪ ಮಹಾಲಿಂಗಜ್ಯೋತಿಯ ಬೆಳಗು,
ಪಂಚೇಂದ್ರಿಯಂಗಳಲ್ಲಿ ಪ್ರಭಾವಿಸಿ ತೋರುವ ಬೆಳಗು,
ಒಂದೆ ಕಾಣಿ ಭೋ.
ಒಂದು ಮೂರಾಗಿ, ಮೂರು ತಾನಾರಾಗಿ ಆರು ಮೂವತ್ತಾರಾಗಿ
ಮೂವತ್ತಾರು ಇನ್ನೂರಹದಿನಾರಾಗಿ, ಬೇರುವರಿದು ವಿಸ್ತಾರವ ಪಡೆದವಲ್ಲಾ!
ವಿಶ್ವಾಸದಿ ಬೆಳಗುವ ಬ್ರಹ್ಮಕ್ಕೂ ಗಣಿತವುಂಟೆ?
ಅಗಣಿತವೆಂದು ಅಗೋಚರವೆಂದು ಹೇಳುವರಲ್ಲದೆ, ದೃಶ್ಯವಾಗಿ ಕಾಬುವರುಂಟೆ?
ದೃಗುದೃಶ್ಯವಲ್ಲ ಮಹಾದಾನಿ ಕೂಡಲಚೆನ್ನಸಂಗಮದೇವ. || ೯೨೬ ||

೧೭೮೦

ಹೆಂಡಿರು–ಮಕ್ಕಳಿಗೆ ಕುಲದೈವ ಮನೆದೈವವಲ್ಲದೆ
ಎನಗೆ ಕುಲದೈವ ಮನೆದೈವವಿಲ್ಲೆಂಬ
ಭಂಡನ ಭಕ್ತಿಯ ಪರಿಯ ನೋಡಾ.
[ಆ] ಯುಕ್ತಿಶೂನ್ಯಂಗೆ ಮುಂದೆ ದೃಷ್ಟವ ಹೇಳಿಹೆನು:
ತನ್ನ ಹೆಂಡತಿ ಮತ್ತೊಬ್ಬನ ಹಿಡಿಕೊಂಡು ಹೋಗುತ್ತಿರೆ,
ಹೋದರೆ ಹೋಗಲಿ ಎಂದು ಸೈರಿಸಬಲ್ಲಡೆ ತಾನವರೊಳಗಲ್ಲ.
ಅಕಟಕಟಾ ಲೌಕಿಕಕ್ಕೆ ಅಂಜಿಕೆಯುಂಟು ಪಾರಮಾರ್ಥಕ್ಕೆ ಅಂಜಿಕೆಯಿಲ್ಲವೆ?
ಇದು ಕಾರಣ– ಕೂಡಲಚೆನ್ನಸಂಗಯ್ಯಾ
ಭಕ್ತನಾಗಿ ಭವಿಯ ಬೆರಸುವ ಅನಾಚಾರಿಯ ತೋರದಿರಯ್ಯಾ. || ೯೨೭ ||

೧೭೮೧

ಆ ಹೆಣ್ಣ ಬಿಟ್ಟಡೇನು ಹೊನ್ನಿನಾಸೆ ಉಳ್ಳನ್ನಬರ?
ಅಲ್ಲಿಗೆ ಹಿರಿಯತನ ಸಾಲದು.
ಹೊನ್ನ ಬಿಟ್ಟಡೇನು ಮಣ್ಣಿನಾಸೆ ಉಳ್ಳನ್ನಬರ?
ಅಲ್ಲಿಗೆ ಹಿರಿಯತನ ಸಾಲದು.
ಅವುಗಳೊಳಗೊಂದ ಬಿಡಿವಡೆಯೂ ಆ ತ್ರಿವಿಧವ ಬಿಡದವೆ,
ಆ ಮಾಯೆ ಬಂದ ಬಿಟ್ಟೊಂದಿರದಾಗಿ.

ಅವನತಿಗಳೆದಲ್ಲದೆ ಭವಂ ನಾಸ್ತಿಯಾಗದು.
ಇದು ಕಾರಣ-ಕೂಡಲಚೆನ್ನಸಂಗಮದೇವಾ
ಈ ತ್ರಿವಿಧಮಲವ ಕಳೆದು ಸುಳಿವ ನಿಜಸುಳುಹಿಂಗೆ
ನಮೋ ನಮೋ ಎಂಬೆನಯ್ಯಾ. ॥ ೯೨೮ ॥

೧೭೮೨

ಹೊದ್ದದಂತೆ ಮಾಡಿದ, ತನ್ನ ಸಾರದಂತೆ ಮಾಡಿದ.
ಕಾಮವ ತಂದು ಕಣ್ಣಿಗೆ ತೋರಿದ,
ವಿಧಿಯತಂದು ಮುಂದೊಡ್ಡಿದ ನೋಡಯ್ಯಾ.
ಪ್ರಸಾದ ಸಾಧಕರಿಗೆ ಇದೆ ವಿಘ್ನವಯ್ಯಾ,
ಕೂಡಲಚೆನ್ನಸಂಗಯ್ಯ ತನ್ನ ಹೊದ್ದದಂತೆ ಮಾಡಿದನಯ್ಯಾ. ॥ ೯೨೯ ॥

೧೭೮೩

ಹೊನ್ನ ಬಿಟ್ಟು, ಹೆಣ್ಣ ಬಿಟ್ಟು, ಮಣ್ಣ ಬಿಟ್ಟು,
ಮಂಡೆಯ ಬೋಳಿಸಿಕೊಂಡು ಬೋಳಾದ ಬಳಿಕ
ನಿರಾಸಕ್ತನಾಗಿ, ಭಿಕ್ಷಾಹಾರಿಯಾಗಿ
ಶಿವಧ್ಯಾನಪರಾಯಣನಾಗಿಪ್ಪುದೀಗ ಪ್ರಥಮ ಬೋಳು.
ಲಿಂಗಾಣತಿಯಿಂದ ಬಂದುದ ಕೈಕೊಂಡು
ಲಿಂಗ ಸಾವಧಾನವಾಗಿಪ್ಪುದೀಗ ದ್ವಿತೀಯಬೋಳು.
ಶರಣಸತಿ ಲಿಂಗಪತಿಯೆಂಬುಭಯುವಳಿದು
ಪರಮಾನಂದದಲ್ಲಿಪ್ಪುದೀಗ ತೃತೀಯಬೋಳು.
ಈ ಬೋಳಿನ ಅನುವ ಕೂಡಲಚೆನ್ನಸಂಗಯ್ಯನಲ್ಲಿ ಅಲ್ಲಯ್ಯ ಬಲ್ಲ. ॥ ೯೩೦ ॥

೧೭೮೪

ಹೊನ್ನಿಂಗೆ ಕೂರ್ತು ಜಂಗಮವನವಿಶ್ವಾಸವ ಮಾಡುವೆ,
ಹೆಣ್ಣಿಂಗೆ ಕೂರ್ತು ಜಂಗಮವನ ವಿಶ್ವಾಸವ ಮಾಡುವೆ,
ಮಣ್ಣಿಂಗೆ ಕೂರ್ತು ಜಂಗಮವನವಿಶ್ವಾಸವ ಮಾಡುವೆ,
ಎಲೆ ಕುಚಿತ್ತಮನವೆ, ಕುಚಿತ್ತಾಶ್ರಯದಲ್ಲಿ ಎನ್ನನಿರಿಸದಿರಾ,
ಸುಚಿತ್ತವಾಗಿ ಬಸವನೆಂವೆನಿಸಾ ಕೂಡಲಚೆನ್ನಸಂಗಯ್ಯಾ,
ಎನ್ನ ಚಿತ್ತವು ಕಾಡಿಪುದಯ್ಯಾ. ॥ ೯೩೧ ॥

೧೭೮೫

ಹೊನ್ನಿಂಗೆ ಬಂದಾತನಲ್ಲ, ಹೆಣ್ಣಿಂಗೆ ಬಂದಾತನಲ್ಲ,
ಅಶನಕ್ಕೆ ಬಂದಾತನಲ್ಲ, ವಸನಕ್ಕೆ ಬಂದಾತನಲ್ಲ,
ಕೂಡಲಚೆನ್ನಸಂಗಯ್ಯಾ,
ಭಕ್ತಿಯ ಪಥವ ತೋರ ಬಂದನಯ್ಯಾ ಬಸವಣ್ಣನು. ॥ ೯೩೨ ॥

೧೭೮೬

ಹೊರಗನೆ ಕೊಯ್ದು ಹೊರಗನೆ ಪೂಜಿಸಿದಡೆ,
ಪರಿಣಾಮವಿಲ್ಲ, ಪ್ರಯೋಜನವಿಲ್ಲ ಸುಖ ದೊರೆಕೊಳ್ಳದು ನೋಡಾ!
ಅದೆಂತೆಂದಡೆ:
ಸರ್ವಜೀವಂಗಳಲ್ಲಿ ಜೀವಹಿಂಸೆಯ ಮಾಡದಿರಬಲ್ಲಡೆ ಪ್ರಥಮಪುಷ್ಪ.
ಸರ್ವೇಂದ್ರಿಯಂಗಳ ನಿಗ್ರಹಿಸಿಕೊಂಡಿರಬಲ್ಲಡೆ ದ್ವಿತೀಯಪುಷ್ಪ.
ಸರ್ವಾಹಂಕಾರವರತು ಶಾಂತನಾಗಿರಬಲ್ಲಡೆ ತೃತೀಯಪುಷ್ಪ.
ಸರ್ವವ್ಯಾಪಾರವಳಿದು ನಿರ್ವ್ಯಾಪಾರಿಯಾಗಿರಬಲ್ಲಡೆ ಚತುರ್ಥಪುಷ್ಪ.
ದುರ್ಭಾವ ಪ್ರಕೃತಿಯಳಿದು ಸದ್ಭಾವವಡೆಗೊಂಡಿರಬಲ್ಲಡೆ ಪಂಚಮಪುಷ್ಪ.
ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿಯಾಗಿರಬಲ್ಲಡೆ ಷಷ್ಠಪುಷ್ಪ.
ಅನೃತವ ಮರೆದು ಸತ್ಯವ ನುಡಿಯಬಲ್ಲಡೆ ಸಪ್ತಮಪುಷ್ಪ.
ಸಕಲಪ್ರಪಂಚವಳಿದು ಶಿವಜ್ಞಾನಸಂಪನ್ನರಾಗಿರಬಲ್ಲಡೆ ಅಷ್ಟಮಪುಷ್ಪ.
ಇಂತೀ ಅಷ್ಟದಳಕಮಲದಲ್ಲಿ ಸಹಜಪೂಜೆಯ ಮಾಡಬಲ್ಲ ಶರಣರು
ನಿಮ್ಮ ಪ್ರತಿಬಿಂಬದಂತಿಪ್ಪರು ಕಾಣಾ– ಕೂಡಲಚೆನ್ನಸಂಗಮದೇವಾ. ॥ ೯೩೩ ॥

೧೭೮೭

ಹೊರಗನೆ ಹಾರೈಸಿ ಹೊರಗಣ ಸದಾಚಾರ ಕ್ರಿಯೆಗಳ,
ಮನಮುಟ್ಟಿ ಮಾಡುತ್ತಿರಲು;
ಇವೆಲ್ಲಿಯ ಹೊರಗಣಸುಖವೆಂದು, ಸುವಿಚಾರ ಕಣ್ದೆರೆದು ನೋಡಲು
ಕನ್ನಡಿಯೊಳಗಣ ರೂಪ ತಾನೆಂದರಿಮತೆ
ಮೆಲ್ಲಮೆಲ್ಲನೆ ಒಳಗೆ ಅಡಗಿತ್ತಯ್ಯಾ.
ಲಿಂಗಸುಖದ ಸುಗ್ಗಿಯಲ್ಲಿ ಎನ್ನ ಪ್ರಾಣ ಮನ ಕರಣಂಗಳು
ಮೀರಿವಪ್ಪಿದ ಸುಖಸಮುದ್ರದೊಳಗೋಲಾಡಿದಂತಾದೆನಯ್ಯಾ!
ಮುಳುಗಿದೆನಯ್ಯಾ, ಸ್ವಾನುಭಾವವೆಂಬ ಗುರುವಿನ ಕರುಣದಲ್ಲಿ.
ಇಂತಾದ ಬಳಿಕ ಕೂಡಲಚೆನ್ನಸಂಗಯ್ಯನೆ ಪ್ರಾಣವಾಗಿದ್ದನಯ್ಯಾ. ॥ ೯೩೪ ॥

೧೭೮೮

ಹೊರವೇಷದ ವಿಭೂತಿರುದ್ರಾಕ್ಷಿಯನಳವಡಿಸಿಕೊಂಡು
ವೇದಶಾಸ್ತ್ರ ಪುರಾಣ, ಪುರಾತರ ವಚನದ ಬಹುಪಾತಕರು,
ಅನ್ನದಾನ, (ಹೊನ್ನದಾನ), ವಸ್ತ್ರದಾನವನೀವನ ಬಾಗಿಲ ಮುಂದೆ
ಮಣ್ಣುಪುತ್ಥಳಿಯಂತಹರು ನಿತ್ಯನೇಮದ ಹಿರಿಯರು.
"ವಯೋವೃದ್ಧಸ್ತಪೋವೃದ್ಧೋ ವೇದವೃದ್ಧೋ ಬಹುಶ್ರುತಃ।
ಇತ್ಯೇತೆ ಧನವೃದ್ಧಸ್ಯ ದ್ವಾರೆ ತಿಷ್ಠಂತಿ ಕಿಂಕರಾಃ॥–
ಎಂಬ ಶ್ರುತಿ ದಿಟವಾಯಿತ್ತು.
ಆ ಎಲ್ಲಾ ಅರಿವುಳ್ಳವರು ಲಕ್ಷ್ಮಿಯ ದ್ವಾರಪಾಲಕರಾದರು.
ಅರಿವಿಂಗೆ ಇದು ವಿಧಿಯೆ?
ಕೂಡಲ ಚೆನ್ನಸಂಗಯ್ಯಾ ನೀ ಮಾಡಿದ ಮರಹು! ॥ ೯೩೫ ॥

೧೭೮೯

ಹೊಲೆ ಹೊಲೆ ಎಂದನಯ್ಯಾ ಬಸವಣ್ಣ.
ಪೊಲೆ ಹುಟ್ಟಿದ ಮೂರು ದಿನಕ್ಕೆ ಪಿಂಡಕ್ಕೆ ನೆಲೆಯಾಯಿತ್ತು.
ನರರಿಗೆ ಹೊಲೆ, ಸುರರಿಗೆ ಹೊಲೆ, ಪರಿಬ್ರಹ್ಮಾದಿಗಳಿಗೆ ಹೊಲೆ.
ಇಂತೀ ಹೊಲೆಯಲ್ಲಿ ಹುಟ್ಟಿ, ಹೊಲೆಯನತಿಗಳೆದನೆಂಬ
ಉಭಯಭ್ರಷ್ಟರ ಮುಖವ ನೋಡಲಾಗದು–
ಕೂಡಲಚೆನ್ನಸಂಗಮದೇವಾ. ॥ ೯೩೬ ॥

೧೭೯೦

ಹೊಲೆಹೊಲೆಯನೆಂದು ಹೊರಗಿರು ಎಂದೆಂಬರು
ಹೊಲೆಯನೆಂತವನಯ್ಯಾ?
ತನ್ನ ಹೊಲೆಯ ತಾನರಿಯದೆ
ಮುನ್ನಿನವರ ಹೊಲೆಯನರಸುವ
ಭ್ರಷ್ಟರಿಗೆ ಏನೆಂಬೆನಯ್ಯಾ,
ಮಹಾದಾನಿ ಕೂಡಲ ಚೆನ್ನಸಂಗಮದೇವಾ ॥ ೯೩೭ ॥

೧೭೯೧

ಹೋ ಹೋ ಗುರುವೆ, ನಿಮ್ಮ ಕರಕಮಲದಲ್ಲಿ ಉದಯಿಸಿ,
ಅಂಗದ ಮೇಲೆ ಲಿಂಗವ ಧರಿಸಿ, ಲಿಂಗದಲ್ಲಿ ಆಗಾಗಿ
ಪ್ರಾಣಲಿಂಗ ಲಿಂಗಪ್ರಾಣ ಎಂಬುದ ನಾನು ಕಂಡೆನು.

ನಿಮಗಾನು ತೋರಲು ಸಮರ್ಥನೆ?
ಆಚಾರ ಅಂಗದ ಮೇಲೆ ನೆಲೆಗೊಂಡು, ಇಷ್ಟಲಿಂಗದಲ್ಲಿ ದೃಷ್ಟಿನಟ್ಟು
ಭಾವಸಂಪನ್ನವಾಗಿಪ್ಪ ನಿಮ್ಮ ಘನವ ನಾನೆತ್ತ ಬಲ್ಲೆನಯ್ಯಾ?
ಅನುಭಾವ ಅಂತರಂಗದಲ್ಲಿ ಎಡೆಗೊಂಡು, ಪ್ರಾಣ ಲಿಂಗದಲ್ಲಿ ನಿಕ್ಷೇಪವಾಗಿ,
ನಿಜಲಿಂಗೈಕ್ಯನಾಗಿಪ್ಪ ನಿಮ್ಮ ಘನವ ನಾನೆತ್ತ ಬಲ್ಲೆನಯ್ಯಾ?
ಜ್ಞಾನಸಮಾಧಿಯೊಳಗೆ ಬಯಕೆಯಡಗಿ
ಪರಿಣಾಮಲಿಂಗದಲ್ಲಿ ಮನಸ್ಸು ಲಯವಾಗಿ
ನಿಜಲಿಂಗತೃಪ್ತರಾಗಿಪ್ಪಿರಿ ನೀವು; ನಿಮ್ಮ ಘನವ ನಾನೆತ್ತ ಬಲ್ಲೆನು!
ಅಂಗದ ಮೇಲೆ ಲಿಂಗವುಳ್ಳುದೆಲ್ಲವು ಸಂಗಮನಾಥನೆಂಬಲ್ಲಿ
ಜಂಗಮಲಿಂಗ ಪ್ರಾಣಿಯಾಗಿಪ್ಪಿರಿ ನೀವು, ನಿಮ್ಮ ಘನವ ನಾನೆತ್ತ ಬಲ್ಲೆನು
ಲಿಂಗಕ್ಕೆ ಬಂದ ಪದಾರ್ಥವನಲ್ಲದೆ ಕೊಳ್ಳೆವೆಂದು
ಮನ ಮೀಸಲು, ತನುಮೀಸಲು ಮಾಡಿ,
ಸರ್ವಾಂಗಸುಖವೆಲ್ಲವನು ಪ್ರಾಣಲಿಂಗದಲ್ಲಿ ಅರ್ಪಿಸಿ ತೊಲಗಿ.
ನಿರಾಭಾರಿಯಾಗಿ, ಪ್ರಸಾದಲಿಂಗಪ್ರಾಣಿಯಾಗಿಪ್ಪಿರಿ ನೀವು
ನಿಮ್ಮ ಘನವ ನಾನೆತ್ತ ಬಲ್ಲೆನು!
ಅನಾದಿ ಶಿವಂಗೆ ಆಧಾರವಿಲ್ಲೆಂದು,
ಅಖಂಡಿತನ ನಿಮ್ಮ ರೋಮದ ಕೊನೆಯಲ್ಲಿ ಧರಿಸಿ
ಮಹಾಲಿಂಗಪ್ರಾಣಿಯಾಗಿಪ್ಪಿರಿ ನೀವು, ನಿಮ್ಮ ಘನವ ನಾನೆತ್ತ ಬಲ್ಲೆನು!
ಕೂಡಲಚೆನ್ನಸಂಗಮದೇವ ಸಾಕ್ಷಿಯಾಗಿ,
ನಿಮ್ಮ ಪ್ರಾಣಲಿಂಗಸಂಬಂಧದ ಸೆರಗು ಸೋಂಕಿನ
ಒಕ್ಕುಮಿಕ್ಕ ಪ್ರಸಾದಿ ನಾನು ಕಾಣಾ ಸಂಗನಬಸವಣ್ಣ. ॥ ೯೩೮ ॥

೯೩೯

ಹೋ ಹೋ ಗುರುವೆ ನಿಮ್ಮ ಚಮ್ಮಾವುಗೆಯ ಬಂಟ ನಾನಾಗಿರಲು
ಅಂಜುವರೆ? ಅಳುಕುವರೆ?
ಸಂಗಮನಾಥ ಬಂದು, ನಿಮ್ಮ ಮನವ ನೋಡಲೆಂದು
ತಮ್ಮ ಮನವನಡ್ಡಿಕ್ಕಿದನೊಂದು ಲೀಲೆಯಿಂದ.
ಅದು ನಿಮಗೆ ಸಹಜವಾಗಬಲ್ಲುದೆ?
ಮಂಜಿನ ಮೋಹರ, ರವಿಯ ಕಿರಣವ ಕೆಡಿಸಲಾಪುದೆ?
ನಿಮ್ಮ ನೆನೆವಂಗೆ ಸಂಸಾರವಿಲ್ಲೆಂದು ಶ್ರುತಿಗಳು ಪೊಗಳುತ್ತಿರಲು

ನಿಮ್ಮ ಅರುಹಿಂಗೆ ಕೇಡುಂಟೆ?
ಕೂಡಲಚೆನ್ನಸಂಗನ ಶರಣರ ಕರೆವಡೆ
ಎನ್ನ ಮನವೆಂಬ ಚಮ್ಮಾವುಗೆಯ ಮೆಟ್ಟಿ ನಡೆಯಾ
ಸಂಗನಬಸವಣ್ಣ. || ೯೩೯ ||

# ಕಠಿಣಪದಕೋಶ

ಅ

ಅಂಕ–ಯುದ್ಧ
ಅಂಗವಿಸು–ಇಚ್ಛಿಸು, ಅಳವಡಿಸು
ಅಂಗಳ–ಅಂಗುಳ, ಗಂಟಲು
ಅಂಗೈಸು–ಸ್ವೀಕರಿಸು
ಅಂಚಟೆ–ಹಳೆಯ ಬಟ್ಟೆ, ಹಚ್ಚಡ
ಅಂಡಜ–ಪರಶಿವನಿಂದ ಹುಟ್ಟಿದ ಸೃಷ್ಟಿ
ಅಂಡಲೆ–ಗಾಸಿಗೊಳಿಸು
ಅಂತಕಬೊಂತಕ–ಹಿಂಸಕ
ಅಂತರಿಸು–ಬೇರೆಯಾಗು, ತಡಮಾಡು
ಅಂತರಿಕ್ಷ–ಆಕಾಶ
ಅಂತು–ರಹಸ್ಯ, ನೆಲೆ, ನಿರ್ಣಯ
ಅಂತುಟು–ಹಾಗೆ, ರೀತಿ
ಅಂದಳ–ಪಲ್ಲಕ್ಕಿ
ಅಂಬರ–ಆಕಾಶ, ಬಟ್ಟೆ
ಅಕ್ಷಮಣಿ–ಜಪಮಣಿ
ಅಖಂಡಿತವಾಗು–ಹೆಚ್ಚಾಗು, ಬೆಳೆ
ಅಗುಳಿಸು–ತಗ್ಗು ತೋಡಿಸು
ಅಗ್ಗವಣಿ–ಪವಿತ್ರನೀರು
ಅಗ್ಗಿಣಿ–ಅಗ್ಗವಣಿ
ಅಗ್ರೋದಕ–ಮೀಸಲುನೀರು, ಮಂತ್ರೋದಕ
ಅಘೋರ–ಅತ್ಯಂತ ಭಯಂಕರ
ಅಚ್ಚುಗ-ಚಿಂತೆ, ಗಡಿಬಿಡಿ, ಭ್ರಮೆ, ಪ್ರೀತಿ
ಅಜಾತ-ಹುಟ್ಟದಿರುವ
ಅಜಾರಿ–ಬ್ರಹ್ಮನ ವೈರಿ
ಅಟಮಟ ಮೋಸ
ಅಟ್ಟೆ–ಮುಂಡ, ತಲೆಯಿಲ್ಲದದೇಹ

ಅಡಗು–ಮಾಂಸ
ಅಡಿಪಾದ–ಪಾದದ ಕೆಳಭಾಗ
ಅಡು–ಅಡಿಗೆಮಾಡು
ಅತಿಗಳೆ–ತಿರಸ್ಕರಿಸು
ಅತಿರಥ–ಮಹಾವೀರ
ಅತೀತ–ಗತಿಸಿದ
ಅದ್ವಯ–ಎರಡಿಲ್ಲದ
ಅಧರ–ತುಟಿ
ಅನಲ–ಬೆಂಕಿ
ಅನ್ನಬರ–ಅಲ್ಲಿಯವರೆಗೆ
ಅನ್ವಯ–ವಂಶ, ಕುಲ, ಸಂಬಂಧ
ಅನಾಗತ–ಬಾರದಿರುವ, ಬರಲಿರುವ
ಅನಾದಿ–ಆದಿಯಿಲ್ಲದ (ಮಾಯೆ)
ಅನಾಮಿಕ–ಅಪ್ರಸಿದ್ಧ, ಕೀಳ
ಅನಾಯತ–ದೋಷ
ಅನಿಮಿಷ–ರೆಪ್ಪೆಬಡಿಯದ, ದೇವತೆ
ಅನಿಲ–ಗಾಳಿ
ಅನಿಶಂ–ಯಾವಾಗಲೂ
ಅನು–ರಹಸ್ಯ, ಘನತೆ, ರಚನೆ
ಅನುದಿನ–ಪ್ರತಿದಿನ
ಅನುವು–ಅಭಿಪ್ರಾಯ, ಸಂಬಂಧ, ರಹಸ್ಯ, ಇಚ್ಛೆ, ಸಿದ್ಧತೆ
ಅನುಶ್ವತ-ಯಾವಾಗಲೂ
ಅನುಶ್ರುತ–ಸಂಪ್ರದಾಯದಿಂದ ಬಂದ ಆಚರಣೆ
ಅಪರ ಅನಂತರ ಹುಟ್ಟಿದ ಸೃಷ್ಟಿ
ಅಪಶಬ್ದ-ಕೆಟ್ಟಶಬ್ದ
ಅಪ್ಪವಿಸು–ಅಪ್ಪಿಕೊಳ್ಳು

ಅಪ್ಪು–ಆಲಂಗಿಸು, ನೀರು
ಅಪ್ರಮೇಯ–ಅಳೆಯಲಾಗದ,
ತಿಳಿಯಲಾಗದ
ಅಬದ್ಧ–ತಪ್ಪಾದ, ಸುಳ್ಳಾದ
ಅಭಿಗಾರ–ತುಪ್ಪ
ಅಮಳೋಕ್ಯ–ಗಂಟಲು
ಅಮ್ಮು–ಅಣ್ಮು, ಸಮರ್ಥವಾಗು
ಅಮೂರ್ತ–ನಿರಾಕಾರ
ಅಮೇಧ್ಯ–ಹೇಸಿಗೆ, ಹೊಲಸು
ಅರ್ಕ–ಸಾರ, ತಿರುಳು
ಅರಗು–ಅಂಚು
ಅರತು–ಬಾಡಿ, ಬತ್ತಿ
ಅರಸು–ಹುಡುಕು
ಅರಿ–ಕತ್ತರಿಸು
ಅರಿದು–ಆಶ್ಚರ್ಯ
ಅರುಹ–ತಕ್ಕವ, ಯೋಗ್ಯ
ಅರುಹಿರಿಯರು–ಜ್ಞಾನಿಗಳು
ಅರೆಮಾನಿಸ–ಅರ್ಧಮನುಷ್ಯ, ನಾರಸಿಂಹ
ಅಲಗು–ಕತ್ತಿ
ಅವಗ್ರಹಿಸು–ಹಿಡಿ, ಮುತ್ತು
ಅವತಳವಾಗು–ಬೀಳು, ಸ್ಥಾನಭ್ರಷ್ಟವಾಗು
ಅವಧಾನ–ಎಚ್ಚರ
ಅವಲೋಹ–ಹೀನಧಾತು, ಕಬ್ಬಿಣ
ಅವಸರ–ಸಮಯ
ಅವಸಾನ–ಕೊನೆ, ಅಂತ್ಯ
ಅವಾರಿ–ಅವಿಚ್ಛಿನ್ನ. ಅನಿರ್ಬಂಧ
ಅಶನ–ಅನ್ನ, ಆಹಾರ, ಊಟ
ಅಷ್ಟಾಶೀತಿ–ಎಂಬತ್ತೆಂಟು
ಅಸಿಪತ್ರ–ಖಡ್ಗದ ಅಲಗು
ಅಳವಡು–ಸಾಧ್ಯವಾಗು
ಅಳವು–ಸಾಮರ್ಥ್ಯ
ಅಳುಪು–ಆಶಿಸು

ಆ

ಆಂದೋಳನ–ಪಲ್ಲಕ್ಕಿ
ಆಂದೋಳಿಸು–ತೂಗಾಡು, ಅಲ್ಲಾಡು
ಆಗಮುವನೇರು–ಜ್ಞಾನ ಸಂಪಾದಿಸು
ಆಗಾಗು–ರೂಪಗೊಳ್ಳು, ಕೂಡಿಕೊಳ್ಳು
ಆಗಾಮಿ–ಮುಂದೆ ಬರತಕ್ಕ
ಆಗು–ಲಾಭ, ಸಂಭವಿಸು
ಆಜ್ಯ–ತುಪ್ಪ
ಆದಿ–ಮನೋರೋಗ
ಆದೇಯ–ಕೊಡಲ್ಪಡುವ, ಸ್ವೀಕರಿಸುವ
ಆನೆ, ಆನು–ಚಾಚು, ಸಹಿಸು, ತಾಳು
ಆಪ್ಯಾಯನ–ತೃಪ್ತಿ, ಹಸಿವೆ
ಆಮಿಷ–ಆಶೆ, ವಿಷಯಾಸಕ್ತಿ
ಆಯತವಾಗು–ಬರು
ಆರಡಿಗೊಳ್–ಎರಗು, ಅಪ್ಪು
ಆರತ–ಶಾಂತಿಹೊಂದಿದ,
ಕಾಮ, ತೃಷ್ಣೆ, ಆಶೆ
ಆರಂಭ–ಒಕ್ಕಲುತನ, ಪರಿಶ್ರಮ
ಆರಯ್–ವಿಚಾರಿಸು, ಸಂರಕ್ಷಿಸು
ಆರೂಢ–ಜ್ಞಾನವನ್ನೇರಿದವ, ಜ್ಞಾನಿ
ಆರೂಢಿ–ಶ್ರೇಷ್ಠ
ಆರೋಗಣೆ–ಊಟ, ಪ್ರಸಾದಾರ್ಪಿತ
ಆರ್ಥ–ಕಳವಳ, ಆಶೆ
ಆಲಂಬ–ಆಶ್ರಯ
ಆಲವಟ್ಟ–ಬೀಸಣಿಕೆ
ಆಲಿ–ಕಣ್ಣುಗುಡ್ಡೆ
ಆಲೋಕನ–ನೋಟ, ದರ್ಶನ, ಬೆಳಕು
ಆಸರು–ದಣಿವು, ಆಯಾಸ
ಆಳ್–ಮುಳುಗು, ಸೇವಕ. ಸೈನಿಕ

ಆಳಿಗೊಳ್–ಹಿಡಿತಕ್ಕೆ ತೆಗೆದುಕೊಳ್ಳು, ಧಿಕ್ಕರಿಸು
ಆಳ್ದ–ಒಡೆಯ, ಯಜಮಾನ
ಇ
ಇಂಗಡಲಣುಗ–ಚಂದ್ರ
ಇಂದ್ರಚಾಪ–ಕಾಮನಬಿಲ್ಲು
ಇಂದ್ರಿಯ ಸಾಹಿತ್ಯ–ಇಂದ್ರಿಯ ಸ್ವಾಧೀನ ಮಾಡಿಕೊಳ್ಳುವದು
ಇಂಬುಗೊಳ್–ಆಶ್ರಯಕೊಡು, ಸ್ಥಳಕೊಡು
ಇಕ್ಕಾಲಿಕ್ಕು–ಎರಡು ಕಾಲುಗಳಿಂದ ತುಳಿ
ಇಕ್ಕು–ನೀಡು
ಇಕ್ಕೆ–ವಾಸಸ್ಥಾನ
ಇಕ್ಷು–ಕಬ್ಬು
ಇತ್ತಲೆ–ದ್ವಂದ್ವಭಾವ
ಇತ್ತೆರ–ಎರಡು ವಿಧ
ಇನಿಗಬ್ಬು–ಸಿಹಿಯಾದ ಕಬ್ಬು
ಇನ್ನೇವೆ–ಇನ್ನೇನು ಮಾಡಲಿ
ಇಮ್ಮೆ–ಎರಡುಸಲ
ಇರಿ–ತಿವಿ, ಚುಚ್ಚು, ಕೊಲ್ಲು
ಇರ್ದೆಸೆ–ಎರಡು ದಿಕ್ಕು, ಎರಡುಭಾಗ
ಇಹಂಥ–ಇರುವಂತಹ
**ಈ**
ಈಡು–ಹೆಚ್ಚಳ, ಸಹಾಯ
ಈರೀಲು ಹುಟ್ಟಿದದಿನ ಮಾಡುವ ಒಂದು ಕರ್ಮ, ಕೂಸಿಗೆ ತಗಲುವ ಬಾಧೆ
ಈಸಿಕೊಳ್ಳು ತೆಗೆದುಕೊಳ್ಳು, ಕೊಡಿಸು
ಈಷಣ–ಬಯಕೆ, ಇಚ್ಛೆ
**ಉ, ಊ**
ಉಕ್ಕಾಡು–ಮುಳುಗಿ ಏಳು
ಉಗಿ–ಸೆಳೆ
ಉಚ್ಛಿಷ್ಟ–ಎಂಜಲು
ಉತ್ತಮಾಂಗ–ತಲೆ
ಉತ್ತರಿಸು–ದಾಟು, ಕೊಯ್ಯು
ಉತ್ಪಾತ–ಅಶುಭ ಲಕ್ಷಣ
ಉದಕ–ನೀರು
ಉದ್ಭ್ರಮೆ–ತಿರುಗಾಟ, ಗಡಿಬಿಡಿ, ಆತುರ
ಉದಾನ–ಕಾರ್ಯದ ಕೂಳು
ಉದ್ಯಾಪನ–ವ್ರತಸಮಾಪ್ತಿ
ಉನ್ಮನಿ–ಊರ್ಧ್ವಮುಖವುಳ್ಳ ಮನಸ್ಸು
ಉಪಜೀವಿತ–ಬದುಕುವ ಆಧಾರ
ಉಪದೃಷ್ಟ–ದೃಷ್ಟಾಂತ
ಉಪಧಾನಿಸು–ಸಮೀಪಿಸು
ಉಪರತಿ–ನಿಲ್ಲಿಸುವುದು, ಸಾವು, ವೈರಾಗ್ಯ, ಅವಿಧೇಯತೆ, ಸುರತಸಮಾಪ್ತಿ
ಉಪಾಧಿಕ–ಸಂಸಾರ ಭಾರವುಳ್ಳವ
ಉಪಾಧಿವಿಡಿ–ಹಂಗಿಗೆ ಒಳಗಾಗು
ಉಪಾಸ್ತೆ, ಉಪಾವಸ್ಥೆ–ಸೇವೆ, ಆಶ್ರಯ
ಉಪ್ಪರಗುಡಿ–ಎತ್ತರವಾದ ಧ್ವಜ
ಉರಸೆಜ್ಜೆ–ಎದೆಯಸ್ಥಾನ
ಉರುಗು–ಬಾಗು
ಉಲಿಗ–ವಾಚಾಳಿ
ಊಡಿಸು–ಉಣ್ಣಿಸು, ಉಣ್ಣು
ಊರು–ಚುಚ್ಚು, ಭಾರಹಾಕು, ತೊಡೆ
**ಎ, ಏ, ಐ**
ಎಡೆ–ಸ್ಥಾನ
ಎಡೆಹಂಚ–ಬೋಕಿಯ ಸಮಾನ
ಎರಕ–ಪ್ರೀತಿ
ಎಲ್ಲಿಕ್ಕೆ–ಯಾವದೋ ಒಂದು ಸ್ಥಳ
ಎಳತಟ–ಎಳೆದಾಟ, ಹೊಯ್ದಾಟ
ಎಸೆ–ಹೊಡೆ

ಏಕಗ್ರಾಹಿ, ಏಕೋಗ್ರಾಹಿ–ಪರವಸ್ತು
ವೊಂದನ್ನೇ ತಿಳಿದವ
ಏಕಾರ್ಥ–ಅಭೇದ
ಏಡಿಸು–ಹಂಗಿಸು
ಐದು, ಎಯ್ದು–ಹೊಂದು
ಐಸು–ಅಷ್ಟು
**ಒ, ಓ, ಔ**
ಒಕ್ಕಲಿಕ್ಕು–ತುಳಿದಾಡು, ನಾಶಮಾಡು
ಒಕ್ಕಲು–ಮನೆ, ವಾಸಸ್ಥಾನ
ಒಕ್ಕುದು–ಭೋಗಿಸಿದುದು
ಒಟ್ಟಿಲು–ರಾಶಿ
ಒಡಗಲಿಸು–ಕೂಡಿಕೊಳ್ಳು, ಬೆರೆ
ಒದಗು–ಉಂಟಾಗು
ಒರೆ–ಪರೀಕ್ಷಿಸು, ತಿಕ್ಕು
ಒರೆಯಾವು–ಕಡೆಗಂದಿ ಆಕಳು
ಒಸರು–ಬಸಿ
ಒಸೆ–ಪ್ರೀತಿಸು
ಒಳವು–ಉಂಟು
ಒಳ್ಳಿಹ–ಒಳ್ಳೆಯ
ಓಕರಿಸು–ಜಿಗುಪ್ಸೆತಾಳು
ಓಗರ–ಅನ್ನ
ಓಜೆ–ಕ್ರಮ, ಹಿರಿಮೆ
ಓಟೆ–ಬಿರುಕು, ಗೊರಟ
ಓಡು–ಮಣ್ಣಿನಪಾತ್ರೆ, ಹಂಚು
ಓಲಗ–ಸೇವೆ
ಓಲೆ–ಮುತ್ತೈದೆಯ ಕಿವಿಯ ಆಭರಣ
ಓವರಿ–ಕೋಣೆ, ಒಳಭಾಗು
ಓಸರಿಸು–ಉದಾಸೀನಮಾಡು, ತಪ್ಪಿಸು,
ಅಗಲು
**ಕ**
ಕಂಕಾಳ–ಬೆನ್ನೆಲುಬು
ಕಂಥಾ–ಕಪನಿ
ಕಂದ–ಭ್ರೂಮಧ್ಯ
ಕಂದಾಲ–ಪಾತ್ರೆ, ಕಂದಲ
ಕಂದೆರವೆ–ಕಣ್ಣು ತೆರೆಯಿಸು
ಕಂಪಲ–ಕಂಪಣ, ದೇಶ
ಕಂಬಿ–ಜೋಡು ಕೊಡಹೊರುವ ಸಾಧನ,
ಕೋಲು
ಕಂಬು–ಕಂಠ, ಕುತ್ತಿಗೆ
ಕಾಂಕ್ಷೆ–ಬಯಕೆ
ಕಾಂಚನ–ಬಂಗಾರ
ಕಾಂಡ–ಗ್ರಂಥಭಾಗ, ಬೊಡ್ಡೆ
ಕಿಂಕಲ–ಸೇವಾಭಾವದಿಂದ ಕೂಡಿದವ
ಕಿಂಕುರ್ವಾಣ–ವಿನಯ
ಕುಂಡಲಿಗ–ಕುರುಡಿ ಕುತಾರಹುಳ
ಕುಂಭೀಪಾಕ–ಭಯಂಕರವಾದ ಒಂದು
ನರಕ
ಕೆಂಚು–ಕೆಂಪುಬಣ್ಣ
ಕೊಂಡೆಯ–ಚಾಡಿ
ಕೊಂತ–ಒಂದು ಆಯುಧ
ಕೊಂಬುದು–ತೆಗೆದುಕೊಳ್ಳುವುದು
ಕಕ್ಕುಲತೆ–ಪ್ರೀತಿ
ಕಕ್ಷೆ–ಬಗಲು
ಕಜ್ಜ–ಕಾರ್ಯ
ಕಟಕ–ಜೇಡಹುಳ, ಕಡಗ
ಕಟಕಿ–ಚುಚ್ಚುಮಾತು
ಕಟ್ಟಳೆ–ನೇಮ
ಕಡ–ಋಣ, ಕೊರತೆ, ಕರ್ತವ್ಯ
ಕಡವರ–ಬಂಗಾರ
ಕಣ–ಯುದ್ಧರಂಗ, ಹನಿ
ಕಣೆ–ಕಲ್ಲು
ಕಣ್ಣಬಣ್ಣ–ಇಷ್ಟಲಿಂಗ

ಕದಂಬ–ರಾಶಿ, ಸಮೂಹ
ಕದುಬು–ತೊಂದರೆಪಡಿಸು, ಆವರಿಸು
ಕನ್ನ(ಣ್ಣ)ಡ–ತೆರೆ, ಪರದೆ
ಕಪ್ಪರ–ಭಿಕ್ಷಾಪಾತ್ರೆ, ಪಾತ್ರೆ
ಕಪ್ರೋತ–ಬೂದಿಬಣ್ಣ
ಕಬ್ಬಿಲ, ಕಬ್ಬಿಲಗ–ಮೀನುಗಾರ
ಕಮ್ಮೆಣ್ಣೆ–ಸುಗಂಧದ ಎಣ್ಣೆ
ಕರಕಮಲವಟು–ಕರಸ್ಥಲದ ಲಿಂಗ
ಕರಡ–ಒಣಗಿದ ಹುಲ್ಲು
ಕರಿಗೊಳ್ಳು–ಕಪ್ಪಾಗು, ಕರಿಕಾಗು
ಕರುವಿಡು–ಎರಕಹೊಯ್
ಕರೋಟಿ–ತಲೆಬುರುಡೆ
ಕರ್ಚು–ತೊಳೆ
ಕಲ್ಕುಟಿಗ–ಕಲ್ಲು ಒಡೆಯುವವ, ಒಡ್ಡ
ಕಲ್ಪಿತ–ಊಹಿಸಲ್ಪಟ್ಟದ್ದು, ಸೃಷ್ಟಿ
ಕವಲು–ಭಿನ್ನ ಭೇದ
ಕಸಕಿಲ–ಕಸಪೊರಕೆ
ಕಸಗೊಟ್ಟ–ತಿಪ್ಪೆ
ಕಳಗ–ಮೂರ್ಛೆ
ಕಳಾಧರ–ಚಂದ್ರ
ಕಳಾಸ, ಕಾಳಸ–ಕೂಡುವ ಸ್ಥಳ
ಕಳೆ–ದೋಷ, ಕಲಂಕ
ಕಳೆದೋರು–ಆಕಾರಧರಿಸು, ಕಾಂತಿಯುತವಾಗು
ಕಾಕುಮತ–ಕ್ಷುದ್ರಮತ
ಕಾಗು–ಕಪ್ಪುಬಣ್ಣ, ಕರಿಬಟ್ಟೆ
ಕಾರಣಿಕ–ಮಹಾಪುರುಷ
ಕಾಲ–ಯಮ
ಕಾಷಾಯಾಂಬರ–ಕಾವಿಯ ಬಟ್ಟೆ
ಕಾಸೆ–ಕೌಪೀನ
ಕಾಹು–ರಕ್ಷಣೆ
ಕಾಳಿಕೆ–ದೋಷ, ಕಪ್ಪು
ಕಾಳು–ಕಾಡು, ಕತ್ತಲೆ
ಕಿಲ್ಬಿಷ–ಪಾಪ, ಹೊಲಸು
ಕಿಸು–ತಾಮ್ರವರ್ಣ, ಕೆಂಪುಬಣ್ಣ
ಕಿಸುಕುಳ–ಹೊಲಸು
ಕೀರ್ತಿಮುಖ–ಕೊಂಬೆಗೆ ಸಿಕ್ಕಿಸುವ ವಸ್ತ್ರ, ಯಶಸ್ಸಿನ ಅಣಸು
ಕೀಲ–ಸಂಬಂಧ
ಕುಕ್ಷಿ–ಹೊಟ್ಟೆ
ಕುಚಿತ್ತ–ಅಜ್ಞಾನ
ಕುತ್ತು–ಇರಿ, ಚುಚ್ಚು
ಕುದಿಹ–ಕುದಿಯುವಿಕೆ
ಕುರುಳು–ಕೂದಲು
ಕುಹರ–ಗವಿ
ಕುಳಸ್ಥಳ–ಅವಾಂತರ ಸ್ಥಲಗಳನ್ನೊಳಗೊಂಡ ಸ್ಥಲ
ಕುಳಿ–ತಗ್ಗು
ಕುಳ್ಳಿದ್ದು–ಕುಳಿತುಕೊಂಡು
ಕೂಟ–ಸಮೂಹ
ಕೂರು–ಪ್ರೀತಿಸು
ಕೂರ್ಮ–ಆವೆ
ಕೆತ್ತು–ಹಾರು, ನಡುಗು
ಕೆಲ–ಪಕ್ಕ
ಕೆಸರುಗಲ್ಲು–ಅಡಿಗಲ್ಲು
ಕೆಳೆ–ಗೆಳೆತನ
ಕೈಗಯ್–ಕೈವಾಡನಾಡು, ಪ್ರಭಾವಬೀರು
ಕೈದು–ಆಯುಧ
ಕೈಯಾನು ಕೈವೊಡ್ಡು, ಬೇಡಿಕೊ
ಕೊಟ್ಟಣಕುಟ್ಟು–ಅಕ್ಕಿಕುಟ್ಟು
ಕೊಟ್ಟಧನ–ತುಡುಗು ಧನ
ಕೊಜೆ–ಜೇಡಿಮಣ್ಣು, ಆವೆಮಣ್ಣು

ಕೊರಯಕೂಳು–ಕೊರತೆಯಾದ ಅನ್ನ
ಕೊಲ್ಲಟಿಗ–ಡೊಂಬ
ಕೊಳಗ–ಅಳೆಯುವ ಸಾಧನ
ಕೋಟಲೆ–ದುಃಖ, ತೊಂದರೆ
ಕೋಡುಗಲ್ಲು–ಚೂಪಾದಕಲ್ಲು
ಕೋಲು–ಬಾಣ, ಆಯುಧ
ಕೋಳ–ಬಂಧನ, ಬೇಡಿ
ಕೋಳಹೋಗು–ಬಲಿಯಾಗು
ಕ್ಷುತ್ತು–ಹಸಿವೆ
ಕ್ರತು–ಯಜ್ಞ

**ಖ**

ಖಂಡಿತ ಭಾಷೆ–ಅಪೂರ್ಣಮಾತು
ಖಟ್ವಾಂಗ–ಶಿವನ ಒಂದು ಆಯುಧ
ಖತಿ–ದುಃಖ

**ಗ**

ಗಂದಿಗೆ, ಗಂದಿಕೆ–ಔಷಧ ಅಂಗಡಿ
ಗಡಣ–ಸಮೂಹ
ಗಡಣಿಸು–ಒಟ್ಟುಗೂಡಿಸು
ಗರವಟ್ಟಿಗೆ–ಘುರವಟ್ಟಿಗೆ ಗರಗರಶಬ್ಧ
ಗರ್ತ–ತಗ್ಗು
ಗಸಣಿ–ಕಷ್ಟ, ತೊಂದರೆ
ಗಹನ–ರಹಸ್ಯ
ಗಳ–ಕುತ್ತಿಗೆ
ಗಳಹು–ಜಂಭಕೊಚ್ಚು, ಹರಟೆಹೊಡೆ
ಗಾವಿಲ–ಅಸಂಸ್ಕೃತ, ಹಳ್ಳಿಯವ
ಗಾಳ, ಗಾಣ–ಮೀನ ಹಿಡಿಯುವ ಸಾಧನ
ಗಿಣ್ಣಿಲು–ಗಿಂಡಿ
ಗುಡಿಗಟ್ಟು–ಧ್ವಜವೇರಿಸು, ಉತ್ಸಾಹಿಸು
ಗುಡುಗೂರು–ತೇಕು
ಗುತ್ತು–ಚುಚ್ಚು
ಗುರುಕಲ್ಪಕ–ಗುರುಪತ್ನಿ ವ್ಯಾಮೋಹಿ
ಗುಳ್ಳಿ–ಗುಳದಕಾಯಿ
ಗೊತ್ತು–ನೆಲೆ, ಮೂಲ, ನಿಶ್ಚಯ
ಗೊರವ–ಶೈವಸನ್ಯಾಸಿ
ಗೊರಲೆ–ಗೆದ್ದಲೆ
ಗೋಪ್ಯ–ರಹಸ್ಯ
ಗೋಮಯ–ಆಕಳ ಸಗಣಿ
ಗೋರಿಕಲ್ಲು–ಬಿಳಿಯಕಲ್ಲು
ಗೋರಿಗೊಳಿಸು–ಬಲೆಯಲ್ಲಿ ಬೀಳಿಸು
ಗೌಪ್ಯ–ಗುಪ್ತಸ್ಥಿತಿ
ಗ್ರಾಸ–ತುತ್ತು
ಗ್ಲಾನಿ–ಆಯಾಸ

**ಘ**

ಘಟ–ದೇಹ, ಕೊಡ
ಘನ–ಶ್ರೇಷ್ಠ, ಗಟ್ಟಿ
ಘನಸಾರ–ಕರ್ಪೂರ
ಘಾತ–ತಗ್ಗು, ಕಂದಕ
ಘುಟಿಕೆ–ಗುಳಿಗೆ, ಮಾತ್ರೆ

**ಚ, ಛ**

ಚಂಡಾಲ–ಕ್ರೂರಕರ್ಮಮಾಡುವವ
ಚಕ್ಕೆ–ಚೂರು, ತುಂಡು
ಚಕ್ಷು–ಕಣ್ಣು
ಚಪ್ಪರಿ–ಬಾಯಿಚಪ್ಪರಿಸು
ಚಮ್ಮಾವುಗೆ–ಚರ್ಮದ ಪಾದುಕೆ
ಚರ–ಜಂಗಮ
ಚಿತ್–ಜ್ಞಾನ
ಚಿತ್ತ–ಸಂಕಲ್ಪಶಕ್ತಿ, ಭಾವ
ಚಿನಿಖಂಡ–ಕೆಂಪುಕಲ್ಲುಸಕ್ಕರೆ
ಚಿಲುಪಾಲು–ಕೆನೆಗಟ್ಟಿದ ಹಾಲು, ನೊರೆ ಹಾಲು
ಚಿಲುಮೆ–ನೀರಿನ ಬುಗ್ಗೆ, ಒರತೆ
ಚೇಗು, ಚೇಗೆ–ಚಿಂತೆ, ಹಾನಿ, ಸಾರ

ಚೋದ್ಯ–ಆಶ್ಚರ್ಯ
ಚೋದ–ವೇಶ, ಸೋಗು
ಚೌದಂತ–ಐರಾವತ
ಚೌರಾಶಿ–ಎಂಬತ್ತುನಾಲ್ಕು
ಛಲ–ಹಟ

ಜ

ಜಂಗುಳಿ–ಸಮೂಹ
ಜಂಘೆ–ಮೊಳಕಾಲು, ಕಿರುದೊಡೆ
ಜಂಪಳಿಸು–ತೂಕಡಿಸು
ಜಂಪಿನಕಡ್ಡಿ–ಗಿಳಿಕೂಡಲು ಪಂಜರದಲ್ಲಿ ಇರಿಸಿದ ಕಟ್ಟಿಗೆ
ಜಡದಿ–ಸಮುದ್ರ
ಜರಾಯುಜ–ಮನುಷ್ಯ, ಪ್ರಾಣಿಗಳು
ಜಲಗರ–ಉದರರೋಗ
ಜಲಗು, ಜರಗು–ಮಣ್ಣುಮಿಶ್ರಿತ ಬಂಗಾರ
ಜವಳಿ–ಜೋಡಿ, ಜೊತೆ
ಜಾಣಿಕೆ–ಜ್ಞಾನ, ತಿಳಿವಳಿಕೆ
ಜಾಳಂದ್ರ–ಬೆಳಕಿಂಡಿ, ಕಿಟಕಿ
ಜಿಂಜಿರು–ಪಂಜರ
ಜಿಹ್ವೆ–ನಾಲಗೆ
ಜೋಗ–ಯೋಗ
ಜೋಗೈಸು–ಜೋಕೆಮಾಡು, ಸಿದ್ಧಗೊಳಿಸು
ಜ್ಞಾತೃ–ತಿಳಿಯುವವ
ಜ್ಞೇಯ–ತಿಳಿಯಲ್ಪಡುವ

**ಟ, ಠ, ಡ, ಢ**

ಟೊಪ್ಪರ–ತಲೆಯ ಟೊಪ್ಪಿಗೆ
ಡಿಂಬ–ದೇಹ
ಢಾಳಕ ಡಾಂಭಿಕ

**ತ, ಥ**

ತಂಡಾಲ(ಲೆ)ಯ–ವ್ಯವಸ್ಥಾಪಕ
ತಗಹು–ಅಡ್ಡಿ, ತೊಂದರೆ
ತಕ್ಕೈಸು–ಅಪ್ಪಿಕೊಳ್ಳು
ತಟಾಕ–ಕೆರೆ
ತಟ್ಟುಮಟ್ಟೆ–ತಟ್ಟುವ ಮಣ್ಣು, ಹೊಲಸು ಮಣ್ಣು
ತತ್ತರಿದರಿ–ಚೂರುಚೂರುಮಾಡು
ತದ್ದಿನ ಶ್ರಾದ್ಧದದಿನ
ತನೂದ್ವಹ–ಆತ್ಮ, ದೇಹ
ತನೆಯಾಗು–ಬಸುರಾಗು
ತಮಂಧ–ಕತ್ತಲೆ, ಅಜ್ಞಾನ
ತರಗು–ಒಣಗು
ತರಿ–ಕತ್ತರಿಸು, ಕಡಿ
ತರಬು–ತಡೆ, ಅಡ್ಡಗಟ್ಟು
ತಲ್ಲೀಯ–ಅದರಲ್ಲಿಯೇ ಲೀನವಾಗು
ತವತವಗೆ–ತಮುತಮಗೆ
ತವಸಿ–ತಪಸ್ವಿ
ತಳಿಗೆ–ತಾಟು
ತಾಗು–ತಗಲು, ಸ್ಪರ್ಶವಾಗು
ತಾರ–ಎರಡುಕಾಸು ಬೆಲೆಯ ತಾಮ್ರದ ನಾಣ್ಯ
ತಾಳಸಂಪುಟ–ಮಾತು
ತಿಂತಿಣಿ–ಗುಂಪು
ತಿತಿಕ್ಷೆ–ತಾಳ್ಮೆ, ಸಹನೆ
ತಿರುವು–ಬಿಲ್ಲಿನ ಹೆದೆ
ತುಂಬು–ತೂಬು, ಕೋಡಿ
ತುಡುಕು–ರಭಸದಿಂದ ಹಿಡಿ
ತುಡುಗುಣಿ–ಕದ್ದುತಿನ್ನುವವ
ತುರಿಯ–ಕೊನೆಯ, ಅಗ್ರಭಾಗ
ತುರುಬು–ಧರಿಸು, ಮುಡಿ
ತೃಷ್ಣೆ–ಬಾಯಾರಿಕೆ, ಬಯಕೆ
ತೆರ–ರೀತಿ, ನಿಜಸ್ಥಿತಿ
ತೆರಹು, ತೆರಪು–ಅವಕಾಶ, ಬಿಡುವು

ತೆರಹು ಮರವು–ಉದಾಸೀನತೆ
ತೇಜ–ಅಗ್ನಿ
ತೇಜಿ–ಕುದುರೆ
ತೊಂಡ–ತುಡುಗ
ತೊಡಚು–ಬಾಣಹೂಡು, ತೊಡರಿಸು
ತೊತ್ತಳದುಳಿ–ಅಸ್ತವ್ಯಸ್ತವಾಗಿ ತುಳಿ
ತೊತ್ತು–ಸೇವಕ
ತೊತ್ತುವೊಗು–ಸೇವೆಮಾಡು
ತೊರೆ–ನದಿ
ತೋಟಿ–ಜಗಳ
ತೋರಿಕೆ–ಕಣ್ಣಿಗೆ ಕಾಣುವ ಸೃಷ್ಟಿ
ತೋಪು–ಕಂಟೆ, ತೋಪು
ತ್ರಿಜ್ಯ–ತಿರ್ಯಕ್, ಪ್ರಾಣಿ, ಜಂತು

**ದ, ಧ**

ದಂಗಟ–ಬೇಡ
ದಂದುಗ–ಉಪದ್ರವ, ತೊಂದರೆ
ದಂಡಿಗೆ–ಪಲ್ಲಕ್ಕಿ
ದಂಷ್ಟ್ರ, ದಂಷ್ಟ್ರಿ–ಕಾಡುಮಿಕ
ದಮ, ದಮೆ–ಬಹಿರಿಂದ್ರಿಯ ನಿಗ್ರಹ
ದರ್ಪಣ–ಕನ್ನಡಿ
ದರ್ವಿ–ಸವಟು, ಚಮಚೆ
ದಷ್ಟ–ಕಡಿದ, ಚುಚ್ಚಿದ
ದಳದುಳ–ಅಬ್ಬರ, ಆತುರ
ದಳದುಳಿ, ದಾಳಾದುಳಿ–ಸೂರೆ
ದಾರವಟ್ಟ–ಮಹಾದ್ವಾರ
ದಿಟ–ಸತ್ಯ
ದಿನಕರ–ಸೂರ್ಯ
ದುಪ್ಪಿ–ಸಾರಂಗ, ಎರಳೆ
ದುರಿತ–ಪಾಪ
ದಕ್ಕಾಲಿ, ದೃಕ್ಕಾಲಿ–ಕಣ್ಣಗುಡ್ಡೆ
ದೇಶಿಕ–ಗುರು, ಉಪದೇಶ ಮಾಡುವವ
ದೇಸಿಗ–ದಿಕ್ಕಿಲ್ಲದವ
ದೇಹಾರ–ಪೂಜೆ, ಸ್ತೋತ್ರ
ಧರಿಣಿ–ಭೂಮಿ
ಧವಳಾರ–ಸುಣ್ಣಹಚ್ಚಿದ ಮನೆ, ಅರಮನೆ

**ನ**

ನಟ್ಟುವಿಗ-ನೃತ್ಯಕಲಿಸುವವ
ನಡುಗೀರು–ಸುಷುಮ್ನನಾಡಿ
ನಾಗವಟ್ಟಗೆ, ನಾಗವತ್ತಿಗೆ–ಹೆಣೆದ ಲಿಂಗದಕಾಯಿ
ನಾಣು–ನಾಚಿಕೆ
ನಾಣ್ಯ–ಬೆಲೆಯುಳ್ಳ ಬಟ್ಟೆ
ನಾದ–ಪರಶಿವ
ನಾಭಿ–ಹೊಕ್ಕಳು
ನಿಃಕಲ–ನಿರಾಕಾರ
ನಿಕ್ಷೇಪವಾಗು–ಅಡಗು
ನಿಗ್ರಹ–ಹಿಡಿತದಲ್ಲಿರುವಿಕೆ, ದಂಡನೆ
ನಿಚ್ಚಟ–ಪ್ರಾಮಾಣಿಕ, ದೃಢ
ನಿಟಿಲ-ಹಣೆ
ನಿಟ್ಟೆಲವು–ಬೆನ್ನೆಲವು
ನಿಧಾನ–ಹುಗಿದಿಟ್ಟ ಧನ
ನಿಬ್ಬರ–ಗಾಢ
ನಿಬ್ಬೆರಗು–ಆಶ್ಚರ್ಯದಿಂದ ಮೈಮರೆಯುವದು
ನಿರಂಧ–ಬೆಳಕು
ನಿರವಯ–ಬಯಲು, ಅವಯವರಹಿತವಾದುದು
ನಿರಾಕುಳ–ದುಃಖರಹಿತ
ನಿರಾಭಾರಿ ಸಂಸಾರದ ಅಭಿಮಾನವಿಲ್ಲದವ
ನಿರಾಮಯ–ಭವರೋಗರಹಿತ
ನಿರಾಲಂಬಿ–ಆಶ್ರಯವಿಲ್ಲದ್ದು
ನಿರಾಳ–ಪರಮಶಾಂತಿ, ನಿರಾಕಾರ

ನಿರುತ–ಯಾವಾಗಲೂ, ಸತ್ಯ
ನಿರುಪಾಧಿಕ–ಸಂತುಷ್ಟ, ನಿಶ್ಚಿಂತ
ನಿರೋಧ–ತಡೆ, ಬಾಧೆ
ನಿರ್ಗುಣ–ಗುಣವಿಲ್ಲದ, ಪರಮಾತ್ಮ
ನಿರ್ಬುದ್ಧಿ–ಬುದ್ಧಿಯಿಲ್ಲದವ
ನಿಭ್ರಾಂತ–ಭ್ರಾಂತಿರಹಿತ
ನಿವರ್ತಕ–ಮುಗಿಸುವವ, ಮರಳುವವ
ನಿರ್ವಹವಾಗು–ಇಲ್ಲದಾಗು, ತೊಲಗು
ನಿರ್ವಾಣ-ಮೋಕ್ಷ, ಪರಿಶುದ್ಧ
ನಿಲುಕಡೆ–ನಿರ್ಣಯ, ವಿಶ್ರಾಂತಿ
ನಿಷ್ಕ–ಬಂಗಾರದ ಒಂದು ನಾಣ್ಯ
ನಿಷ್ಪತ್ತಿ, ನಿಃಪತಿ–ಪರಿಪೂರ್ಣತೆ, ವಿಶ್ರಾಂತಿ, ಮುಕ್ತಿ
ನಿಸ್ಸೀಮ–ಸೀಮೆಯಿಲ್ಲದ
ನಿಹಿತ–ಇರಿಸಿದ, ಇಡಲ್ಪಟ್ಟ
ನೀಕರಿಸು–ತಿರಸ್ಕರಿಸು
ನುಗ್ಗುನುಸಿಯಾಗು–ಗಾಸಿಯಾಗು
ನುಸುಳು–ಪಾರಾಗು, ಜಾರು
ನೂನು–ಕೊರತೆ
ನೆಮ್ಮು–ಆಶ್ರಯಿಸು, ಅವಲಂಬಿಸು
ನೆಯ್–ಸ್ನಿಗ್ಧಪದಾರ್ಥ
ನೆರವಿ–ಸಮೂಹ
ನೆರೆ–ಪಕ್ಕ, ಕೂಡು
ನೆಲೆ–ಆಶ್ರಯ, ಮೂಲ
ನೇಣು–ಹಗ್ಗ
ನೇಹ–ಸ್ನೇಹ, ಪ್ರೀತಿ
ನೋಂಪಿ–ವ್ರತ

**ಪ, ಫ**

ಪಕ್ಕಾಗು–ಗುರಿಯಾಗು
ಪಟಲ–ಆವರಣ, ತೆರೆ
ಪಟಹ–ವಾದ್ಯವಿಶೇಷ
ಪತಂಗ–ಸೂರ್ಯ
ಪತಿಕರಿಸು–ಸ್ವೀಕರಿಸು
ಪಥ–ಹಾದಿ
ಪದ–ಆಶ್ರಯ, ಸ್ಥಾನ
ಪರ–ಶ್ರೇಷ್ಠ, ಬ್ರಹ್ಮ
ಪರದಾರ-ಪಾರದ್ವಾರ, ಪರಸ್ತ್ರೀ
ಪರಿಕರ–ಮನದ ಆವರಣ, ರೀತಿ, ವಿಚಾರ
ಪರಿಚಾರ–ಸೇವೆ
ಪರಿಚ್ಛೇದ–ಸಾರಾಸಾರ ವಿಚಾರ, ನಿರ್ಣಯ, ದೃಢ
ಪರಿಣಾಮ–ತೃಪ್ತಿ, ಸುಖ
ಪರಿಪೂರಿತ–ತುಂಬಿದ
ಪರಿಯಾಣ–ತಳಿಗೆ, ಪಾತ್ರೆ
ಪರಿಯಾಯ, ಪರ್ಯಾಯ–ಬೇರೆಬಗೆಯ, ರೀತಿ, ವಿವಿಧ
ಪರಿವರ್ತನ–ಬದಲಾವಣೆ
ಪರುಷನ–ಸ್ಪರ್ಶನ
ಪರುಷ–ಸ್ಪರ್ಶಮಣಿ
ಪಲಿತ–ಮಾಗಿದ
ಪವಣಿಸು–ಪೋಣಿಸು, ಹಣಿ
ಪವಣ–ಗಾಳಿ
ಪಶ್ಚಿಮದ್ವಾರ–ಸುಷುಮ್ನನಾಡಿ
ಪಸರ–ಅಂಗಡಿ, ಸಮೂಹ
ಪಸಾಯ್ತು–ವೇಷಭೂಷಣ ಮಾಡಿಸುವವ
ಪಾಠ–ಹಾಡುಕುಣಿತಬಲ್ಲವ
ಪಾಣಿ–ಕೈ
ಪಾಯಾಳು–ಪಾದಸೇವಕ
ಪಾವಕ–ಅಗ್ನಿ
ಪಾಷಾಣ-ಕಲ್ಲು
ಪಾಳ್ಯ–ಶಿಬಿರ
ಪಿಕಳಿಶು-ಗಿಳಿಯಮರಿ

ಪುಣಜೆ–ಬೇಡರ ಸ್ತ್ರೀ
ಪುಡಿಸು–ಹೊಂದಿಸು, ಸೇರಿಸು
ಪುನರಪಿ–ಪುನಃ
ಪೂಯದ–ಬಿಲ್ಲಾಳು, ಬೇಡ
ಪೂರಾಯ–ಪೂರ್ಣ
ಪೂರೈಸು–ಪೂರ್ಣಮಾಡು, ತುಂಬಿಕೊಳ್ಳು
ಪೂರ್ವದ್ವಾರ–ಮೂಗು, ನಾಶಿಕ
ಪೂರ್ವಾಶ್ರಯ–ಭವಿತನ, ಪ್ರಕೃತಿಗುಣ
ಪೃಥಗ್ಭಾವ–ಭಿನ್ನಭಾವ
ಪ್ರಕ್ಷಾಳಿಸು–ತೊಳೆ
ಪೆರತೊಂದು–ಮತ್ತೊಂದು
ಪ್ರಗಾಳಿಸು–ತೊಳೆ
ಪ್ರಚ್ಛನ್ನ–ಮುಸುಕಿನಲ್ಲಿರುವ
ಪ್ರತಿ–ಎದುರು, ಬೇರೆ
ಪ್ರತಿಗ್ರಹ–ಸ್ವೀಕಾರ
ಪ್ರತಿಭಾವ–ಭಿನ್ನಭಾವ
ಪ್ರತ್ಯಗಾತ್ಮ–ಜೀವಾತ್ಮ
ಪ್ರಬೋಧ–ಶ್ರೇಷ್ಠಜ್ಞಾನ
ಪ್ರವರ್ತಕ–ಪ್ರವೃತ್ತಿ, ಆರಂಭಿಸುವವ
ಪ್ರಸನ್ನಿಕೆ–ಪ್ರಸನ್ನತೆ
ಪ್ರಾರಬ್ಧ–ದೈವ, ಹಣೆಬರಹ
ಫೇನ–ಬುರುಗು

ಬ

ಬಂದಿಕಾನೆ–ಸೆರೆಮನೆ
ಬಂದಿಕಾರ–ಕೈದಿ, ಕಳ್ಳ
ಬಂದಿಗಟ್ಟೆ–ಹಸೆಯ ಕಟ್ಟೆ
ಬಟ್ಟಗುತ್ತಿತನ–ಗುಪ್ತಪಾಪಾಚರಣೆ
ಬಣಗು–ಹೇಡಿ ಕ್ಷುದ್ರ
ಬರು–ವ್ಯರ್ಥ
ಬರುದೊರೆವೋಗು–ಬತ್ತಿದ ನದಿಯಂತೆ ವ್ಯರ್ಥವಾಗು
ಬಲಿ–ಬಂಧಿಸು, ಸ್ಥಿರಗೊಳಿಸು
ಬಲುಹು–ಸಾಮರ್ಥ್ಯ
ಬಲ್ಲಹ–ಒಡೆಯ, ವಲ್ಲಭ
ಬಹ–ಬರುವ
ಬಳ್ಳ–ಅಳೆಯುವ ಮಾಪನ
ಬಾಗಿನ–ಮುತ್ತೈದೆಗೆ ಉಡಿತುಂಬುವ ಪದಾರ್ಥ
ಬಾಣಸ–ಅಡಿಗೆಯ ಮನೆ
ಬಾವನ್ನ–ಶ್ರೀಗಂಧ
ಬಾಸಣಿಸು–ಮುಚ್ಚು
ಬಿಂದು–ರೇತಸ್ಸು, ಹನಿ
ಬಿತ್ತು–ಬೀಜ
ಬಿದ್ದಿನ–ಔತಣಕೂಟ
ಬಿನುಗು–ಕೀಳು
ಬಿನ್ನಾಣ–ವಿಜ್ಞಾನ, ಕಲೆ
ಬೀಸರ–ನಾಶ, ಅಳಿವು
ಬೆಂಬಳಿ–ಬೆನ್ನಹಿಂದೆ
ಬೆದಕು–ಹುಡುಕು
ಬೆನವ–ಗಣಪತಿ
ಬೆರಗು–ಆಶ್ಚರ್ಯ, ಕೂಟ
ಬೆರೆ–ಗರ್ವಿಸು
ಬೆಸಗೊಳ್–ಕೇಳು, ವಿಚಾರಿಸು
ಬೆಸನ–ಅಪ್ಪಣೆ
ಬೆಸಲಾಗು–ಹಡೆ
ಬೆಸ್ತ–ಮೀನುಹಿಡಿಯುವವ
ಬೆಳವಿಗೆ–ಹಬ್ಬುಗೆ
ಬೆಳಸು–ಫಲ
ಬೇರುಮಾಡು–ಭಿನ್ನಮಾಡು
ಬೇಹ–ಬೇಕಾದ
ಬೊಂಬೆ–ಗೊಂಬೆ
ಬೊಬ್ಬುಳಿಕೆ–ಗುಳ್ಳೆ

ಬೋನ–ಅನ್ನ
ಬೋಸರಗಿತ್ತಿ–ಹಾದರಗಿತ್ತಿ
ಬ್ರಹ್ಮೆಗೆತಿ–ಬ್ರಹ್ಮಹತ್ಯಾಪಾಪ
ಭ
ಭಂಗ–ಕೇಡು
ಭರ–ಅತಿಶಯ
ಭರೀಕೈ–ಆನೆಯಸೊಂಡೆ
ಭರಿತಬೋನ–ಪುರುಷಾಹಾರ ಪ್ರಮಾಣದ ಅನ್ನ
ಭರ್ಗ–ಶಿವ
ಭರ್ತ–ಸಂರಕ್ಷಕ
ಭಲ್ಲುಕ–ಕರಡಿ
ಭವಭಾರಿ–ಸಂಸಾರ ಭಾರವುಳ್ಳವ
ಭವಿ–ಪರವಸ್ತು, ಜಂಗಮ
ಭಾಂಡ–ಪಾತ್ರೆ
ಭಾಜನ–ಆಶ್ರಯಸ್ಥಾನ, ಗುರಿ, ಪಾತ್ರ
ಭೀಷ್ಮಿಸು–ಅಂಜಿಸು, ಹೆದರಿಸು
ಭುಂಜಕತನ–ಬಯಕೆ, ಆಶೆ
ಭೇದ–ರಹಸ್ಯ
ಭೇಷಜ–ವೈದ್ಯ
ಮ
ಮಂಡೆ–ತಲೆ
ಮಕುಟ–ಕಿರಿಟ
ಮಚ್ಚು–ಪ್ರೀತಿ, ಮೆಚ್ಚುಗೆ
ಮಟ್ಟಿ–ಮಣ್ಣು
ಮಣಿಹಗಾರ–ರಾಜಸೇವಕ
ಮತ್ಸ್ಯ–ಮೀನ
ಮಥನ–ಸ್ತ್ರೀವ್ಯಾಮೋಹದಿಂದ ಉಂಟಾಗುವ ಮನೋವಿಕಾರ
ಮದ್ದುಮರ–ಗಿಡಮೂಲಿಕೆ
ಮಧು–ಹೆಂಡ, ಜೇನುತುಪ್ಪ
ಮನ್ನಿಯ–ಮನ್ನಣೆಪಡೆದವ
ಮರ್ಮ–ರಹಸ್ಯ
ಮರೀಚಿ–ಕಿರಣ
ಮಸಳಿಸು–ಮಬ್ಬಾಗು
ಮಹ–ದೊಡ್ಡದು, ಪರಶಿವ
ಮಹಳ–ಮಾಳ, ಶ್ರಾದ್ಧ
ಮಳಲು–ಮಣಲು, ಉಸುಕು
ಮಾಂಜಿಷ್ಟ–ಕಿರಮಂಜಿ ಬಣ್ಣ
ಮಾಟ–ಮೋಸ, ಕಾರ್ಯ
ಮಾಡ–ಗೂಡು, ಮಂಟಪ
ಮಾಣ್–ಬಿಡು
ಮಾಣಿಸು–ಬಿಡಿಸು
ಮಾತಂಗಿ–ಹೊಲತಿ
ಮಾನ–ಅಳೆಯುವ ಸಾಧನ
ಮಾಬನೆ–ಬಿಡುವನೆ
ಮಾರ್ಜಾಲ–ಬೆಕ್ಕು
ಮಿಗೆವರಿ–ಹೆಚ್ಚಾಗಿ ಹರಿ
ಮಿಟ್ಟೆಯ ಭಂಡ–ನಾಚಿಕೆ ಇಲ್ಲದವ
ಮಿಡಿ–ತೊಗಲಿನ ಚಬಕ
ಮಿಸುನಿ ಬಂಗಾರ
ಮುಖಪ್ರಭಂಜನ–ವಾಯು ವಿಶೇಷ
ಮುಚ್ಚುಗಿತ್ತಿ–ಕದ್ದುಹಾದರ ಮಾಡುವವಳು
ಮುಟ್ಟುಪಡ–ಮೈಲಿಗೆ
ಮುಮುಕ್ಷು–ಮೋಕ್ಷಾಪೇಕ್ಷಿ
ಮುಯ್ಯಾನು–ಕೈಯೊಡ್ಡು, ಹೆಗಲುಗೊಡು
ಮೂಕೊರೆಯ–ಮೂಗು ಕೊರೆಯಾದವ
ಮೂಲಿಗ–ಮೊದಲಿಗ, ಆಚಾರ್ಯ
ಮೃತಕರೋಟಿ–ಭೂತ, ಆಗಿಹೋದ
ಮೃತ್ತಿಕೆ–ಮಣ್ಣು
ಮೆದೆ–ಹುಲ್ಲಿನ ಗುಂಪೆ
ಮೇಖಳೆ–ನಡುಪಟ್ಟಿ

ಮೇಢ್ರ–ಟಗರು
ಮೇಷ–ಟಗರು
ಮೇಹು–ಮೇವು
ಮೇಳಾಪ–ಸೇರಿಕೆ, ಗುಂಪು
ಮೊಣೆ–ಬೊಗಸೆಯಿಂದ ಕುಡಿ
ಮೊದಲು–ಮೂಲಧನ
ಮೊನೆ–ತುದಿ
ಮೋಹರ–ಸಮೂಹ, ಗುಂಪು
ಮೋಳಿಗೆ–ಕಟ್ಟಿಗೆಯ ಹೊರೆ

**ಯ**

ಯವನ–ಪರಕೀಯ, ಭವಿ

**ರ**

ರಂಜಕ–ಮನರಂಜನೆಗೊಳಿಸುವ
ರಚನೆರಂಜಕ–ಬಣ್ಣದ ಮಾತು
ರಸದಾಳಿ–ಶ್ರೇಷ್ಠಬಿಳಿಯ ಕಬ್ಬು
ರೂಹು–ರೂಪ, ಬಿಂಬ
ರೋಮಶಾಟಿ–ಉಣ್ಣೆಯ ಬಟ್ಟೆ
ರಚ್ಚೆ–ಹರಟೆ, ವ್ಯರ್ಥಾಲಾಪ
ರಾಟಾಳು–ನೀರೆತ್ತುವಯಂತ್ರ,ಸಂಸಾರಚಕ್ರ

**ಲ**

ಲಂಪಟ–ಆಸಕ್ತಿ
ಲಚ್ಚಣ–ಭೂದ
ಲಾಂಛನ–ಗುರುತು, ಚಿಹ್ನೆ
ಲಾಳಮೇಳಿ–ಲಿಂಗಧಾರಿಗಳ ಗುಂಪು
ಲೀಲೆಯಪಶು–ಕವಲೆತ್ತು
ಲೆಂಕ–ಸೇವಕ
ಲೋಷ್ಠ–ಹೆಂಟೆ

**ವ**

ವರ್ಜಿತ–ಬಿಟ್ಟಂಥ
ವರ್ಮ–ಮರ್ಮ, ರಹಸ್ಯ
ವಲಯ–ಮಂಡಲ
ವಲಿತ–ನಿರಿಗೆಗಟ್ಟಿದ
ವಳಾವಳಿ–ಚಿಂತೆ, ಕಳವಳ
ವಾಜಿ–ಕುದುರೆ
ವಾಯು–ವ್ಯರ್ಥ
ವಾರಿಧಿ–ಸಮುದ್ರ
ವಾರಿಶಿಲೆ–ಆನೆಕಲ್ಲು
ವಾರುವ–ಕುದುರೆ
ವಿಚಿತ್ರಕಾಲ–ಮಧ್ಯಾಹ್ನ
ವಿಂಧ್ಯ–ಕಾಡು
ವಿಸಟಂಬರಿ–ಮನಬಂದಂತೆ ತಿರುಗಾಡು
ವೆಗ್ಗಳ–ಶ್ರೇಷ್ಠ
ವೇದಿ–ಜ್ಞಾನ
ವೇದಿಸು–ತಿಳಿ, ತಿಳಿಸು, ಒಂದಾಗು
ವೈರಂಭಣ–ವಾಯು ವಿಶೇಷ
ವೈಲ–ವಾಯು ವಿಶೇಷ
ವ್ಯಾಕುಳ–ವ್ಯಸನ, ಚಿಂತೆ
ವ್ಯಾಧ–ಬೇಡ
ವ್ಯಾವೃತ್ತಿ–ತಿರುಗಿಸುವಿಕೆ
ವ್ಯಾಳಿ–ವಂಚಕ
ವ್ಯೋಮ–ಆಕಾಶ

**ಶ**

ಶಮ–ಅಂತರಿಂದ್ರಿಯ ನಿಗ್ರಹ, ಶಾಂತಿ
ಶಿಕಿ–ಅಗ್ನಿ
ಶೀಕರ(ಸೀಕರ)–ತುಂತುರು ಹನಿ
ಶುನಕ–ನಾಯಿ
ಶುನಿ–ಹೆಣ್ಣುನಾಯಿ
ಶೂಕರ–ಹಂದಿ
ಶೂನ್ಯ–ಪೂರ್ಣ, ನಿರಾಕಾರ
ಶೋಣಿತ–ರಕ್ತ
ಶೌಚ–ಶುದ್ಧ
ಶ್ರವ–ಸಾಧನ
ಶ್ರೋತ್ರ–ಕಿವಿ

ಶ್ವಪಚ–ನಾಯಿಯ ಮಾಂಸ ತಿನ್ನುವವ

**ಸ**

ಸಂಕರ–ಬೆರಕೆ, ಕೂಡಿಕೆ
ಸಂಕಲೆ–ಬೇಡಿ
ಸಂಕಲ್ಪ–ನೆನಹು
ಸಂಕೀರ್ಣ–ಬೆರಕೆಯಾದ, ಗಾಬರಿ
ಸಂಕೋಲೆ–ಬೇಡಿ
ಸಂಚ–ಸಂಬಂಧ, ರಹಸ್ಯ
ಸಂಚಿತ–ಕೂಡಿಸಲ್ಪಟ್ಟ
ಸಂದಣಿ–ಗುಂಪು, ಕೂಟ
ಸಂವಿತ್ತಿ–ಸಂವೇದನೆ, ಜ್ಞಾನ
ಸಂದು–ಬಿರುಕು, ಭೇದ
ಸಂಧಾನ–ಕೂಡುವಿಕೆ, ಸಮರಸ
ಸಂಪುಟ–ಸಂಯೋಗ, ಕೂಟ
ಸಂಭ್ರಮಿಸು–ಹೆಚ್ಚು ಭ್ರಮೆಗೊಳ್ಳು
ಸಂವರಣೆ–ಸಂಗ್ರಹಮಾಡುವುದು
ಸಕಲ–ಸಾಕಾರ
ಸಕೀಲ–ರಹಸ್ಯ
ಸಕೃತ್(ತು)–ಒಮ್ಮೆ
ಸಗುಣಪೂಜೆ–ಮೂರ್ತಿಪೂಜೆ
ಸಗ್ಗಳೆ–ನೀರು ತುಂಬಿದ ಚರ್ಮದ ಪಾತ್ರೆ
ಸಟೆ–ಸುಳ್ಳು
ಸದಮದ–ಸಾತ್ವಿಕಮದ
ಸದರ–ಹಗುರು, ಸುಲಭ
ಸದರ್ಥ–ಒಳ್ಳೆಯ ತಾತ್ಪರ್ಯ
ಸನುಮತ–ಒಪ್ಪಿಗೆ
ಸನುಮತನು–ಒಳ್ಳೆಯ ಅಭಿಪ್ರಾಯದವನು
ಸನ್ನಹಿತ–ಒಂದಾದವ, ಕೂಡಿಕೊಂಡವ
ಸನ್ನಹಿತ–ಸಮೀಪದಲ್ಲಿದ್ದವ
ಸಮದ–ಸಮಾನವಾದ
ಸಮನಿಸು–ಉಂಟಾಗು, ಸಮಾಧಾನವಾಗು
ಸಮಯ–ಆಚಾರ, ಸಂಪ್ರದಾಯ, ಮತ ಸಿದ್ಧಾಂತ
ಸಮವೇದಿಸು–ಚೆನ್ನಾಗಿ ತಿಳಿ
ಸಮರ್ಕ್ಷವಾಗು–ಅರ್ಪಿತವಾಗು
ಸಮ್ಮಾರ್ಜನೆ–ಸಾರಣೆ
ಸಮ್ಯಕ್–ಚೆನ್ನಾಗಿ
ಸಯ–ಶಾಂತ
ಸಯದಾನ–ಎಡೆ, ಪದಾರ್ಥ, ನೈವೇದ್ಯ
ಸಯಿದಾ(ಧಾ)ನ-ಪದಾರ್ಥ ಸಾಮಗ್ರಿ
ಸರ–ಸ್ವರ, ಧ್ವನಿ
ಸಲ್–ಯೋಗ್ಯವಾಗು
ಸವಿಕರ–ತನುವಿನ ಆವರಣ
ಸಾರಾಯ–ಶ್ರೇಷ್ಠ, ಪರಮಸಾರ
ಸಾರೆ–ಸಮೀಪ
ಸಾವಿತ್ರ-ಸೂರ್ಯನಿಗೆ ಸಂಬಂಧಿಸಿದ
ಸಾಹಿತ್ಯ–ಸಂಬಂಧ, ಕೂಡಿಕೊಂಡ, ಸಾಧನ, ಇಷ್ಟಲಿಂಗ
ಸಿಂಗಿ–ಭಯಂಕರ ವಿಷ
ಸಿಂಧಪತಾಕೆ–ಧ್ವಜಪತಾಕೆ
ಸಿತಕಪ್ಪಡ–ಬಿಳಿಯ ಬಟ್ಟೆ
ಸಿತಾಳ–ಪವಿತ್ರ ನೀರು, ತಣ್ಣೀರು
ಸಿನೆ–ನೀಚ, ಪೂರ್ಣ, ಶೂನ್ಯ
ಸುಕೃತ–ಪುಣ್ಯ, ಚೆನ್ನಾಗಿ ಮಾಡಲ್ಪಟ್ಟ
ಸುಪ್ಪತ್ತಿಗೆ–ಮೃದುವಾದ ಹಾಸಿಗೆ
ಸುಮ್ಮಾನಿ–ಸುಖಿ
ಸುಯಿಧಾನ–ಎಚ್ಚರ, ತೃಪ್ತಿ
ಸುಯಿಧಾನ-ಸಾಧ್ಯ, ಆರಾಧನ, ಶಾಂತ
ಸುರಗಿ–ಖಡ್ಗ
ಸುರಭಿ–ಕಾಮಧೇನು
ಸುರಾಭಾಂಡ–ಮದ್ಯದ ಪಾತ್ರೆ
ಸುವ್ವಾರ–ಅಡಿಗೆಯವ

ಸೂಚಿ–ಮೊನೆ, ಕುಡಿ
ಸೂಡು–ಧರಿಸು, ಮುದ್ರೆಹಾಕು
ಸೂನೆಗಾರ–ಕಟುಕ
ಸೂಸು–ಹೊರಚೆಲ್ಲು
ಸೆಜ್ಜೆ–ಲಿಂಗದ ಕರಡಿಗೆ
ಸೈವೆರಗು–ಅತ್ಯಾಶ್ಚರ್ಯ
ಸೊಣಗ–ನಾಯಿ
ಸೊನ್ನಗಾರ–ಅಕ್ಕಸಾಲಿಗ
ಸೊಪ್ಪುಸೊಗಡು–ಕಸಕಡ್ಡಿ, ಹೊಲಸು
ಸೊಮ್ಮು–ಸ್ವತ್ತು
ಸೊಲ್ಲು–ಮಾತು, ಶಬ್ದ
ಸ್ಥಾಪ್ಯಾಯನ–ಸ್ಥಾಪಿಸಲು ಯೋಗ್ಯವಾದ ಸ್ಥಾನ
ಸ್ವಯಂಜಾತ–ತನ್ನಿಂದತಾನೆ ಹುಟ್ಟಿದ್ದು, ಪರಶಿವ
ಸ್ವಾಯತವಾಗು–ಅಧೀನವಾಗು

**ಹ**

ಹಂಜರ–ಪಂಜರ
ಹಂತ–ಅಹಂಕಾರ
ಹಂದೆ–ಹೇಡಿ
ಹಗರಣ–ನಟನೆ, ಆಡಂಬರ
ಹಗರಣಿಗ–ವೇಷದಾರಿ, ಢಂಬಕ
ಹಡಿಕೆ–ಹೊಲಸು, ಹೇಸಿಗೆ
ಹಣ್ಣು–ಸಿದ್ಧಮಾಡು
ಹದಿರು–ವಿಡಂಬನೆ, ಚುಚ್ಚುನಗೆ
ಹದುಳ–ಕ್ಷೇಮ
ಹಮ್ಮು–ಅಹಂಭಾವ
ಹರದ–ವ್ಯಾಪಾರಿ
ಹರವಸ–ಪರವಶ, ಮೂರ್ಛೆ
ಹರಿಕಾರ–ಓಲೆಕಾರ, ಗೂಢಚಾರ
ಹರಿತ–ಹಸಿರು ಬಣ್ಣ
ಹರಿವು–ಹಾದಿ, ಮಾರ್ಗ
ಹರ್ತ–ನಾಶಮಾಡುವವ
ಹವಣ–ಪ್ರಮಾಣ, ಹಾಳತ
ಹಸರಪಸರ–ಬಯಲಂಗಡಿ
ಹಳಚು–ಕಣ್ಣು ಪಿಳುಕಿಸು
ಹಾಗ ಒಂದು ಹಳೆಯ ನಾಣ್ಯ
ಹಾಹೆ–ಗೊಂಬೆ
ಹಿಮಕರ–ಚಂದ್ರ
ಹಿರಣ್ಯ–ಬಂಗಾರ
ಹಿಳಿ–ಹಿಂಡು, ರಸತೆಗೆ
ಹುಗು–ಪ್ರವೇಶಿಸು
ಹುತವಹ–ಅಗ್ನಿ
ಹುದುಗು–ಅಡಗಿಕೊಳ್ಳು
ಹುರುಡು–ಹೊಟ್ಟೆಕಿಚ್ಚು, ಸ್ಪರ್ಧೆ
ಹೂಣೆಹೊಗು–ಅಡಗಿಹೋಗು, ಲೀನವಾಗು
ಹೂಸು–ಹಚ್ಚು
ಹೆರೆಹಿಂಗು–ಬಿಟ್ಟುಬಿಡು, ಇಲ್ಲವಾಗು
ಹೇಮ–ಬಂಗಾರ
ಹೊಂದು–ಸಾಯು
ಹೊಡವಡು–ನಮಸ್ಕರಿಸು
ಹೊತ್ತಾರೆ–ಮುಂಜಾವು
ಹೊದ್ದು–ಆಶ್ರಯಿಸು, ಹೊಂದು
ಹೊರೆ–ತಪ್ಪು, ರಕ್ಷಿಸು, ಮೋಸ
ಹೊರವಡು–ಹೊರಬೀಳು
ಹೊಲಬು–ರೀತಿ, ರಹಸ್ಯ
ಹೊಲ್ಲ–ಕೆಟ್ಟ
ಹೋಕು–ಹೋಗುವುದು
ಹೋರು–ಕಾದಾಡು
ಹೋಹರು–ಹೋಗುವರು
ಹೋಹಾಗ–ಹೋಗುವಾಗ

■ ■

# ಷಟ್‌ಸ್ಥಲ ವಚನಗಳ ಅಕಾರಾದಿ

(ಅಂಕಿ ವಚನಸಂಖ್ಯೆಯನ್ನು ಸೂಚಿಸುತ್ತವೆ)

# ಆಕರಗ್ರಂಥಗಳು


**ಪ್ರಕಟಿತ**

ಅದ್ವೈತಾನಂದದ ವಚನಗಳು
ಸಂ: ಡಾ. ಬಿ. ಆರ್. ಹಿರೇಮಠ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೩ (ಪ್ರ. ಆ.)

ಅನುಭಾವಜ್ಞಾನ ಸಾರಾಮೃತ ಸಂಪಾದನಾಸ್ತೋತ್ರ
–ಸಂಪಾದನೆಯ ಪರ್ವತಾಚಾರ್ಯ
ಸಂ: ಶ್ರೀ ಬಿ. ಆರ್. ಹೂಗಾರ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೯ (ಪ್ರ. ಆ.)

ಅಪ್ಪಾವರಣದ ವಚನಗಳು
–ಎಳಮಲೆಯ ಗುರುಶಾಂತದೇವರು
ಸಂ: ಡಾ. ವೀರಣ್ಣ ರಾಜೂರ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೩ (ಪ್ರ. ಆ.)

ಆಚರಣೆಯ ಸಂಬಂಧದ ವಚನಗಳು
–ಸಂಪಾದನೆಯ ಪರತಾಳ ಚೆನ್ನನಂಜಯದೇವರು
ಸಂ: ಪಿ. ಎಂ. ಗಿರಿರಾಜು
ಪ್ರ: ಶರಣಸಂತಾನ ಸಂಪಾದನ, ಶರಣಸಂತಾನ (ತ್ರೈಮಾಸಿಕ)
೪೪೭–ಸಂತೇಪೇಟೆ, ಮೈಸೂರು.
೧೯೮೨ (ಪ್ರ. ಆ.)

ಆಚರಣೆಯ ಸಂಬಂಧದ ವಚನಗಳು
–ಸಂಪಾದನೆಯ ಸಿದ್ಧವೀರೇಶ್ವರದೇವರು
ಸಂ: ಪಿ. ಎಂ. ಗಿರಿರಾಜು
ಪ್ರ: ಶರಣಸಂತಾನ ಸಂಪಾದನ, ಶರಣಸಂತಾನ (ತ್ರೈಮಾಸಿಕ)
೪೪೭–ಸಂತೇಪೇಟೆ, ಮೈಸೂರು
೧೯೮೦ (ಪ್ರ. ಆ.)

ಎಲ್ಲ ಪುರಾತರ ವಚನ
–ಕುಂತೂರು ಮಹತ್ತದೇವರು
(ಇದು ವಚನ ಸಂಕಲನ ಸಂಪುಟ–೨ ಈ ಕೃತಿಯ ಒಂದು ಭಾಗ)
ಸಂ: ಪ್ರೊ. ಜಿ. ಎ. ಶಿವಲಿಂಗಯ್ಯ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೯೦ (ಪ್ರ. ಆ.)

ಎಲ್ಲ ಪುರಾತರ ಸ್ತೋತ್ರದ ವಚನಗಳು
ಸಂ: ಡಾ. ವೀರಣ್ಣ ರಾಜೂರ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೮ (ಪ್ರ. ಆ.)

ಏಕೋತ್ತರ ಶತಸ್ಥಲ
–ಮಹಾಲಿಂಗದೇವರು
ಸಂ: ಎಸ್. ಎಸ್. ಭೂಸನೂರಮಠ
ಪ್ರ: ಶ್ರೀ ನಿ. ಪ್ರ. ಸ್ವ. ಶಿವಬಸವ ಮಹಾಸ್ವಾಮಿಗಳು ರುದ್ರಾಕ್ಷಿಮಠ
ನಾಗನೂರ. ಹನುಮನ ಬೀದಿ, ಬೆಳಗಾವಿ.
೧೯೭೪ (ಪ್ರ. ಆ.)

ಏಕೋತ್ತರ ಶತಸ್ಥಲ
–ಸಿದ್ಧಲಿಂಗ
ಸಂ: ಫ ಗು. ಹಳಕಟ್ಟಿ
ಪ್ರ: ಶಿವಾನುಭವ ಗ್ರಂಥಮಾಲೆ ವಿಜಾಪೂರ.
? (ಪ್ರ. ಆ.)

ಕಂಡಿತದ ವಚನಗಳು
ಸಂ: ಡಾ. ಬಿ. ಆರ್. ಹಿರೇಮಠ
(ಇದು ವಚನ ಸಂಕಲನ ಸಂಪುಟ–೧ ಈ ಕೃತಿಯ ಒಂದು ಭಾಗ)
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೯೦ (ಪ್ರ. ಆ.)

ಗಣಭಾಷಿತ ರತ್ನಮಾಲೆ
–ಗುಬ್ಬಿಯ ಮಲ್ಲಣ್ಣ
ಸಂ: ಶ್ರೀ ಪ್ರಭುಸ್ವಾಮಿಗಳು
ಪ್ರ: ಶ್ರೀ ಬಾಲಲೀಲಾ ಮಹಾಂತಶಿವಯೋಗೀಶ್ವರ ಗ್ರಂಥಮಾಲೆ
ಮುರುಘಾಮಠ, ಧಾರವಾಡ.
೧೯೪೮ (ಪ್ರ. ಆ.)

ಗುರುಬೋಧಾಮೃತ (ಕಾವ್ಯ)
–ವಿರತ ಮಹಾಲಿಂಗದೇವರು
ಸಂ: ಡಿ. ಸಿದ್ಧಲಿಂಗಯ್ಯ
ಬಿ. ಮರಿಬಸವಾರಾಧ್ಯ
ಪ್ರ: ಕನ್ನಡ ಅಧ್ಯಯನಸಂಸ್ಥೆ, ಮೈಸೂರು.
೧೯೭೪ (ಪ್ರ. ಆ.)

ಚಿಕಿತ್ಸಾಕ್ರಿಯಾ ಸಂಗ್ರಹ
–ಜಿಗುನಿ ಮರುಳದೇವರು
(ಇದು 'ಜಿಗುನಿ ಮರುಳದೇವರ ಕೃತಿಗಳು' ಈ ಕೃತಿಯ ಒಂದು ಭಾಗ)
ಸಂ: ಡಾ. ಎಸ್. ವಿದ್ಯಾಶಂಕರ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೩ (ಪ್ರ. ಆ.)

ಚಿದ್ಭಸ್ಮಮಣಿಮಂತ್ರಮಹಾತ್ಮೆಯ ಸ್ಥಲದ ವಚನ
–ಜಟಾಶಂಕರದೇವರು
(ಇದು ವಚನ ಸಂಕಲನ ಸಂಪುಟ–೧ ಈ ಕೃತಿಯ ಒಂದು ಭಾಗ)
ಸಂ: ಡಾ. ಬಿ. ಆರ್. ಹಿರೇಮಠ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೯೦ (ಪ್ರ. ಆ.)

ಚಿನ್ನೈಶ್ವರ್ಯ ಚಿದಾಭರಣ
–ಗುರುಸಿದ್ಧದೇವರು
ಸಂ: ಪಿ. ಎಂ. ಗಿರಿರಾಜು
ಪ್ರ: ಶರಣಸಂತಾನ ಸಂಪಾದನ, ಶರಣಸಂತಾನ (ತ್ರೈಮಾಸಿಕ)
೪೪೭–ಸಂತೇಪೇಟೆ, ಮೈಸೂರು.
೧೯೮೫ (ಪ್ರ. ಆ.)

ಚೆನ್ನಬಸವಣ್ಣನವರ ಷಟ್‌ಸ್ಥಲದ ನಿರ್ಣಯ
(ಇದು "ಚೆನ್ನಬಸವಣ್ಣನವರ ಷಟ್‌ಸ್ಥಲ ವಚನ ಮಹಾಸಂಪುಟ"ದ ಒಂದು ಭಾಗ)
ಸಂ: ಡಾ. ಎಂ. ಎಂ. ಕಲಬುರ್ಗಿ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ,
೧೯೯೦ (ಪ್ರ. ಆ.)

ಚೆನ್ನಬಸವರಾಜದೇವರ ಷಡುಸ್ಥಲ ವಚನ
(ಇದು "ಚೆನ್ನಬಸವಣ್ಣನವರ ಷಟ್ಸ್ಥಲ ವಚನ ಮಹಾಸಂಪುಟ"ದ ಒಂದು ಭಾಗ)
ಸಂ: ಡಾ. ಎಂ. ಎಂ. ಕಲಬುರ್ಗಿ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ,
೧೯೯೦ (ಪ್ರ. ಆ.)

ಚೆನ್ನಬಸವೇಶ್ವರದೇವರ ರಾಜಯೋಗದ ವಚನ
(ಇದು ವಚನ ಸಂಕಲನ ಸಂಪುಟ-೨ ಈ ಕೃತಿಯ ಒಂದು ಭಾಗ)
ಸಂ: ಪ್ರೊ. ಜಿ. ಎ. ಶಿವಲಿಂಗಯ್ಯ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೯೦ (ಪ್ರ. ಆ.)

ಚೆನ್ನಬಸವೇಶ್ವರದೇವರು ನಿರೂಪಿಸಿದ ಅನುಭಾವ ಷಟ್ಸ್ಥಲದ ವಚನಗಳು
(ಇದು 'ಚೆನ್ನಬಸವಣ್ಣನವರ ಷಟ್‌ಸ್ಥಲ ವಚನ ಮಹಾಸಂಪುಟ'ದ ಒಂದು ಭಾಗ)
ಸಂ: ಡಾ. ಎಂ. ಎಂ. ಕಲಬುರ್ಗಿ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೯೦ (ಪ್ರ. ಆ.)

ಚೆನ್ನಬಸವೇಶ್ವರದೇವರ ಸ್ತೋತ್ರದ ವಚನಗಳು
ಸಂ: ಜಿ. ಎ. ಶಿವಲಿಂಗಯ್ಯ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೯೧ (ಪ್ರ. ಆ.)

ಜಂಗಮಸ್ಥಲದ ಆಚರಣೆಯ ನಿರ್ಣಯದ ವಚನಗಳು
(ಇದು ವಚನ ಸಂಕಲನ ಸಂಪುಟ-೧ ಈ ಕೃತಿಯ ಒಂದು ಭಾಗ)
ಸಂ: ಡಾ. ಬಿ. ಆರ್. ಹಿರೇಮಠ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೯೦ (ಪ್ರ. ಆ.)

ನಿರಸನದ ವಚನಗಳು
(ಇದು ವಚನ ಸಂಕಲನ ಸಂಪುಟ-೧ ಈ ಕೃತಿಯ ಒಂದು ಭಾಗ)
ಸಂ; ಡಾ. ಬಿ. ಆರ್. ಹಿರೇಮಠ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೯೦ (ಪ್ರ. ಆ.)

ಪರಮಮೂಲಜ್ಞಾನ ಷಟ್‌ಸ್ಥಲ
–ಚಿಕ್ಕವೀರಣ್ಣೊಡೆಯ
ಸಂ: ಡಾ. ಎಂ. ಎಸ್. ಸುಂಕಾಪೂರ
ಪ್ರ: ಕನ್ನಡ ಅಧ್ಯಯನಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೧೯೭೭ (ಪ್ರ. ಆ.)

ಪ್ರಭುದೇವರ ಸ್ತೋತ್ರದ ವಚನಗಳು
–ಸಂಪಾದನೆಯ ಸಿದ್ಧವೀರಣ್ಣದೇವರು
(ಇದು ವಚನ ಸಂಕಲನ ಸಂಪುಟ–೩ ಈ ಕೃತಿಯ ಒಂದು ಭಾಗ)
ಸಂ: ಎಸ್. ಶಿವಣ್ಣ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೯೧ (ಪ್ರ. ಆ.)

ಪ್ರಭುಲಿಂಗ ಲೀಲೆ (ಕಾವ್ಯ)
–ಚಾಮರಸ
ಸಂ: ಶಿ. ಶಿ. ಬಸವನಾಳ
ಪ್ರ: ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ.
೧೯೩೮ (ಪ್ರ. ಆ.)

ಪ್ರಸಾದಿಸ್ಥಲದ ವಚನಗಳು
ಸಂ: ಡಾ. ಎಂ. ಎಸ್. ಸುಂಕಾಪೂರ
ಪ್ರ: ಕನ್ನಡ ಅಧ್ಯಯನಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೧೯೭೭ (ಪ್ರ. ಆ.)

ಬಸವಸ್ತೋತ್ರದ ವಚನಗಳು: ೧
–ಬೋಳಬಸವರಾಜದೇವರು
ಸಂ: ಡಾ. ಎಂ. ಎಂ. ಕಲಬುರ್ಗಿ
ಪ್ರ: ಕನ್ನಡ ಅಧ್ಯಯನಪೀಠ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.
೧೯೭೬ (ಪ್ರ. ಆ.)

ಬಸವಸ್ತೋತ್ರದ ವಚನಗಳು
–ಚೆನ್ನಂಜೇದೇವರು
ಸಂ: ಡಾ. ಎಂ. ಎಂ. ಕಲಬುರ್ಗಿ
ಪ್ರ: ಕನ್ನಡ ಅಧ್ಯಯನಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೧೯೭೬ (ಪ್ರ. ಆ.)

ಬಸವಸ್ತೋತ್ರದ ವಚನಗಳು: ೨
–ಸಂಪಾದನೆಯ ಬೋಳಬಸವೇಶ್ವರದೇವರು
(ಇದು ವಚನಸಂಕಲನ ಸಂಪುಟ–೧ ಈ ಕೃತಿಯ ಒಂದು ಭಾಗ)
ಸಂ: ಡಾ. ಬಿ. ಆರ್. ಹಿರೇಮಠ
ಪ್ರ: ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೯೦ (ಪ್ರ. ಆ.)

ಬ್ರಹ್ಮಾದ್ವೈತ ಸಿದ್ಧಾಂತ ಷಟ್‌ಸ್ಥಲಾಭರಣ
–ಕರಸ್ಥಲದ ಮಲ್ಲಿನಾಥ ಒಡೆಯ
ಸಂ: ಡಾ. ಆರ್. ಸಿ. ಹಿರೇಮಠ
ಪ್ರ: ಕನ್ನಡ ಅಧ್ಯಯನಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೧೯೭೩ (ಪ್ರ. ಆ.)

ಭಕ್ತ್ಯಾನಂದಸುಧಾರ್ಣವ
ಸಂ: ಡಾ. ವೀರಣ್ಣ ರಾಜೂರ
ಪ್ರ: ವೀರಶೈವ ಅಧ್ಯಯನಸುಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೫ (ಪ್ರ. ಆ.)

ಮಿಶ್ರಸ್ತೋತ್ರದ ವಚನ
–ಸಂಪಾದನೆಯ ಶ್ರೀ ಚೆನ್ನಂಜೇದೇವರು
ಸಂ: ಪ್ರಭುಸ್ವಾಮಿಗಳು ಹೊಸಹಳ್ಳಿ.
ಪ್ರ: ಬೂದಿಸ್ವಾಮಿ ಸಂಸ್ಥಾನಮಠ, ಹೊಸಹಳ್ಳಿ.

ಮಿಶ್ರಸ್ತೋತ್ರದ ವಚನಗಳು
–ಎಳಮಲೆಯ ಗುರುಶಾಂತದೇವರು
ಸಂ: ಡಾ. ವೀರಣ್ಣ ರಾಜೂರ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೩ (ಪ್ರ. ಆ.)

ಲಿಂಗಚಿದಮೃತಬೋಧೆ
- ಶಾಂತಬಸವೇಶ್ವರ
ಸಂ: ಡಾ. ಎಂ. ಎಸ್. ಸುಂಕಾಪೂರ
ಪ್ರ: ಕನ್ನಡ ಅಧ್ಯಯನಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೧೯೭೫ (ಪ್ರ. ಆ.)

ಲಿಂಗಲೀಲಾವಿಲಾಸ ಚಾರಿತ್ರ
-ಕಲ್ಲುಮಠದ ಪ್ರಭುದೇವರು
ಸಂ: ಸಂ. ಶಿ. ಭೂಸನೂರಮಠ
ಪ್ರ: ಶ್ರೀ ನಿ. ಪ್ರ. ಸ್ವ. ಮಹಾಂತಸ್ವಾಮಿಗಳು ಗುರು ಮೃತ್ಯುಂಜಯ ಮಹಾಸ್ವಾಮಿಗಳು ಮುರುಘಾಮಠ, ಧಾರವಾಡ.
೧೯೫೭ (ಪ್ರ. ಆ.)

ಲಿಂಗವಿಕಳಾವಸ್ಥೆಯ ವಚನಗಳು
-ಎಳಮಲೆಯ ಗುರುಶಾಂತದೇವರು
ಸಂ: ಡಾ. ವೀರಣ್ಣ ರಾಜೂರ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೩ (ಪ್ರ. ಆ.)

ಲಿಂಗಸಾವಧಾನದ ವಚನಗಳು
-ಸಣ್ಣಬರಹದ ಗುರುಬಸವರಾಜದೇವರು
(ಇದು ವಚನ ಸಂಕಲನ ಸಂಪುಟ-೧ ಈ ಕೃತಿಯ ಒಂದು ಭಾಗ)
ಸಂ: ಡಾ. ಬಿ. ಆರ್. ಹಿರೇಮಠ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೯೦ (ಪ್ರ. ಆ.)

ಲಿಂಗಸ್ತೋತ್ರದ ವಚನಗಳು
-ಸಂಪಾದನೆಯ ಸಿದ್ಧವೀರಣ್ಣದೇವರು
ಸಂ: ಶ್ರೀ ವೀರಭದ್ರಪ್ಪ ಕೊಪ್ಪಳ
ಪ್ರ: ಶ್ರೀ ಗುರುಬಸವ ಮಂಟಪ ಟ್ರಸ್ಟ ಕಮೀಟಿ, ಹುಬ್ಬಳ್ಳಿ.
೧೯೭೪ (ಪ್ರ. ಆ.)

ವಚನಸಾರ
ಸಂ: ಡಾ. ವೀರಣ್ಣ ರಾಜೂರ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೯ (ಪ್ರ. ಆ.)

ವಚನಾಮೃತಸಾರ
ಸಂ: ಪ್ರೊ. ಕಾಶಿಪುಟ್ಟಸೋಮಾರಾಧ್ಯ
ಡಾ. ವೀರಣ್ಣ ರಾಜೂರ
ಪ್ರ: ಮಂಗಳ ಪ್ರಕಾಶನ ಕಲ್ಯಾಣನಗರ, ಧಾರವಾಡ.
೧೯೭೫ (ಪ್ರ. ಆ.)

ವಚನೈಕೋತ್ತರ ಶತಸ್ಥಲ
–ಚೆನ್ನಬಸವಣ್ಣ
ಸಂ: ಜಿ. ಎ. ಶಿವಲಿಂಗಯ್ಯ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೩ (ಪ್ರ. ಆ.)

ವಿರತಾಚರಣೆಯ ಶರಣಸಂಬಂಧದ ವಚನಗಳು
–ಶಂಕರದೇವರು
ಸಂ: ಪಿ. ಎಂ. ಗಿರಿರಾಜು
ಪ್ರ: ಶರಣಸಂತಾನ ಸಂಪಾದನ, ಶರಣಸಂತಾನ (ತ್ರೈಮಾಸಿಕ)
೪೪೭–ಸಂತೇಪೇಟೆ, ಮೈಸೂರು.
೧೯೭೭ (ಪ್ರ. ಆ.)

ವಿಶೇಷಾನುಭವಷಟ್‌ಸ್ಥಲ
–ಚೆನ್ನವೀರಾಚಾರ್ಯ
ಸಂ: ಡಾ. ಆರ್. ಸಿ. ಹಿರೇಮಠ
ಪ್ರ: ಕನ್ನಡ ಅಧ್ಯಯನಸಂಸ್ಥೆ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.
೧೯೭೧ (ಪ್ರ. ಆ.)

ವೀರಶೈವ ಚಿಂತಾಮಣಿ
–ಮಹದ್ದೇವಯೋಗಿ
ಸಂ: ಡಾ. ಆರ್. ಸಿ. ಹಿರೇಮಠ
ಪ್ರ: ಕನ್ನಡ ಅಧ್ಯಯನಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೧೯೭೧ (ಪ್ರ. ಆ.)

ಶರಣ ಚಾರಿತ್ರದ ವಚನಗಳು
–ಸಂಪಾದನೆಯ ಸಣ್ಣ ಬರಹದ ಗುರುಬಸವರಾಜದೇವರು
ಸಂ: ಡಾ. ಬಿ. ವ್ಹಿ. ಶಿರೂರ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೪ (ಪ್ರ. ಆ.)

ಶರಣಮುಖಮಂಡನ
ಸಂ: ಡಾ. ಬಿ. ವ್ಹಿ. ಶಿರೂರ
ಶ್ರೀ ಬಿ. ಆರ್. ಹೂಗಾರ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೮ (ಪ್ರ. ಆ.)

ಶರಣಸ್ತೋತ್ರದ ವಚನಗಳು
–ಎಳಮಳೆಯ ಗುರುಶಾಂತದೇವರು
ಸಂ: ಡಾ. ವೀರಣ್ಣ ರಾಜೂರ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೩ (ಪ್ರ. ಆ.)

ಶಿವನ ಬಿರುದಾವಳಿ ಸ್ತೋತ್ರದ ವಚನಗಳು
–ಸಂಪಾದನೆಯ ಸಿದ್ಧವೀರಣ್ಣದೇವರು
(ಇದು ವಚನ ಸಂಕಲನ ಸಂಪುಟ–೩ ಈ ಕೃತಿಯ ಒಂದು ಭಾಗ)
ಸಂ: ಎಸ್. ಶಿವಣ್ಣ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೯೧ (ಪ್ರ. ಆ.)

ಶಿವಮಹಿಮಾಸ್ತೋತ್ರದ ವಚನ
–ವೀರಸಂಗಯ್ಯ
ಸಂ: ವೀರಣ್ಣ ರಾಜೂರ
ಕರ್ನಾಟಕ ಭಾರತಿ ೧೯–೨, ೧೯೮೭
ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಶಿವಯೋಗ ಚಿಂತಾಮಣಿ
–ಜಾಳಿಗೆಕಂತೆ ಸಿದ್ಧಲಿಂಗಶಿವಯೋಗಿ
ಸಂ: ಡಾ. ಉಮಾದೇವಿ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೭ (ಪ್ರ. ಆ.)

ಶೀಲಸಂಪಾದನೆ
ಸಂ: ಡಾ. ವೀರಣ್ಣ ರಾಜೂರ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೬೪ (ಪ್ರ. ಆ.)

ಶೂನ್ಯಸಂಪಾದನೆ
–ಶಿವಗಣಪ್ರಸಾದಿ ಮಹಾದೇವಯ್ಯ
ಸಂ: ಆರ್. ಸಿ. ಹಿರೇಮಠ
ಪ್ರ: ಕನ್ನಡ ಅಧ್ಯಯನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೧೯೭೧ (ಪ್ರ. ಆ.)

ಶೂನ್ಯಸಂಪಾದನೆ
–ಗುಮ್ಮಳಾಪುರದ ಸಿದ್ಧಲಿಂಗದೇವರು
ಸಂ: ಡಾ. ಆರ್. ಸಿ. ಹಿರೇಮಠ
ಪ್ರ: ಕನ್ನಡ ಅಧ್ಯಯನಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೧೯೭೨ (ಪ್ರ. ಆ.)

ಶೂನ್ಯಸಂಪಾದನೆ
–ಗೂಳೂರು ಸಿದ್ಧವೀರಣ್ಣೊಡೆಯರು
ಸಂ: ಪ್ರೊ. ಸಂ. ಶಿ. ಭೂಸನೂರಮಠ
ಪ್ರ: ರಾವೂರ ಶ್ರೀ ಸಿದ್ಧಲಿಂಗೇಶ್ವರಮಠ ಮತ್ತು ಆದವಾನಿಯ ಕಲ್ಲುಮಠದ ಅಧಿಪತಿಗಳು
೧೯೫೮ (ಪ್ರ. ಆ.)

ಷಟ್‌ಸ್ಥಲ ಬ್ರಹ್ಮಾನಂದ ವಿರಕ್ತಚಾರಿತ್ರ ಸಂಪಾದನೆಯ ವಚನಗಳು
–ಬೋಳಬಸವೇಶ್ವರದೇವರು
ಸಂ: ಪ್ರೊ. ಎಸ್. ಉಮಾಪತಿ
ಪ್ರ: ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೪ (ಪ್ರ. ಆ.)

ಷಟ್‌ಸ್ಥಲ ಸ್ತೋತ್ರದ ವಚನಗಳು
–ಎಳಮಲೆಯ ಗುರುಶಾಂತದೇವರು
ಸಂ: ಡಾ. ವೀರಣ್ಣ ರಾಜೂರ
ಪ್ರ: ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೩ (ಪ್ರ. ಆ.)

ಷಟ್ಪ್ರಕಾರ ಸಂಗ್ರಹ
–ಶಾಂತದೇವರು
ಸಂ: ಜಿ. ಎ. ಶಿವಲಿಂಗಯ್ಯ
ಪ್ರ: ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೭ (ಪ್ರ. ಆ.)

ಸಂಪಾದನೆಯ ಸಾರಾಮೃತ
–ಕಟ್ಟಿಗೆಹಳ್ಳಿ ಸಿದ್ಧಲಿಂಗಸ್ವಾಮಿ
ಸಂ: ಡಾ. ಬಿ. ಆರ್. ಹಿರೇಮಠ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೮ (ಪ್ರ. ಆ.)

ಸಂಬಂಧಾಚರಣೆಯ ವಚನಗಳು
ಸಂ: ಪಿ. ಎಂ. ಗಿರಿರಾಜು
ಪ್ರ: ಶರಣಸಂತಾನ ಸಂಪಾದನ, ಶರಣ ಸಂತಾನ (ತ್ರೈಮಾಸಿಕ)
೪೪೭-ಸಂತೇಪೇಟೆ, ಮೈಸೂರು.
೧೯೮೬ (ಪ್ರ. ಆ.)

ಸಕಲಪುರಾತನರ ವಚನಗಳು–೧
ಸಂ: ಡಾ. ಆರ್. ಸಿ. ಹಿರೇಮಠ
ಪ್ರ: ಕನ್ನಡ ಅಧ್ಯಯನಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೧೯೭೨ (ಪ್ರ. ಆ.)

ಸಕಲಪುರಾತನರ ವಚನಗಳು–೨
ಸಂ: ಡಾ. ಎಂ. ಎಸ್. ಸುಂಕಾಪೂರ
ಪ್ರ: ಕನ್ನಡ ಅಧ್ಯಯನಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೧೯೭೬ (ಪ್ರ. ಆ.)

ಸಿಂಗಿರಾಜಪುರಾಣ (ಕಾವ್ಯ)
–ಸಿಂಗಿರಾಜ
ಸಂ: ಎಚ್. ದೇವೀರಪ್ಪ
ಪ್ರ: ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟ್, ಮೈಸೂರು.
೧೯೫೦ (ಪ್ರ. ಆ.)

ಸುಖಸಂಪಾದನೆಯ ವಚನಗಳು
ಸಂ: ಡಾ. ಬಿ. ಆರ್. ಹಿರೇಮಠ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ.
೧೯೮೭ (ಪ್ರ. ಆ.)

ಸೂಕ್ಷ್ಮಮಿಶ್ರಷಟ್ಸ್ಥಲ
–ಮಹಾಲಿಂಗದೇವರು
ಸಂ: ಡಾ. ವೀರಣ್ಣ ರಾಜೂರ
ಪ್ರ: ವೀರಶೈವ ಅಧ್ಯಯನಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ. ೧೯೮೭ (ಪ್ರ. ಆ.)

**ಅಪ್ರಕಟಿತ**

ಏಕೋತ್ತರ ಶತಸ್ಥಲ ಬೊಲ್ಲಿ
(ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಪೀಠದ ಹಸ್ತಪ್ರತಿ)

ಏಕೋತ್ತರ ಶತಸ್ಥಲ ಸಾರಾಮೃತ
–ಕಟ್ಟಿಗೆಹಳ್ಳಿ ಸಿದ್ಧಲಿಂಗಸ್ವಾಮಿ
(ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಪೀಠದ ಹಸ್ತಪ್ರತಿ)

ಜ್ಞಾನ ಷಟ್‌ಸ್ಥಲಸಾರ
–ಗುರುಶಂಕರಸ್ವಾಮಿಗಳು
(ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯ ಹಸ್ತಪ್ರತಿ)

ನಿಷ್ಕಳಲಿಂಗ ಚಿದಾನಂದಲೀಲೆ (ಕಾವ್ಯ)
(ಮೈಸೂರು ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯ ಹಸ್ತಪ್ರತಿ)

ಮಿಶ್ರಷಟ್‌ಸ್ಥಲದ ವಚನ
(ಜಿ. ಎ. ಶಿವಲಿಂಗಯ್ಯ ಮೈಸೂರು ಅವರ ಹಸ್ತಪ್ರತಿ)

ಮೋಕ್ಷದರ್ಶನ ಸಂಗ್ರಹ (ಶಾಸ್ತ್ರಕಾವ್ಯ)
(ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ)

ವೀರಶೈವ ಶಿಖಾರತ್ನ (ಶಾಸ್ತ್ರಕಾವ್ಯ)
(ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಪೀಠದ ಹಸ್ತಪ್ರತಿ)

ವೀರಶೈವಾಭರಣ (ಶಾಸ್ತ್ರಕಾವ್ಯ)
–ಗೌರವಾಂಕ
(ಜಿ. ಎ. ಶಿವಲಿಂಗಯ್ಯ ಮೈಸೂರು ಅವರ ಹಸ್ತಪ್ರತಿ)

ಶಿವಾಧಿಕ್ಯ ಪುರಾಣ (ಕಾವ್ಯ)
–ಬಸವಲಿಂಗ
(ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ)

ಶೂನ್ಯಸಂಪಾದನೆ
–ಹಲಗೆದೇವರು
(ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ)

**ಪತ್ರಿಕೆ:**

ಕರ್ನಾಟಕ ಭಾರತಿ: ೭–೪,

■ ■



# ಒಪ್ಪೋಲೆ

| ವಚನ ಸಂಖ್ಯೆ | ಸಾಲು | ತಪ್ಪು | ಒಪ್ಪು |
|---|---|---|---|
| ೧೬ | ೨ | ಆಗಮವನೇರಿಯದು | ಆಗಮವನರಿಯದು |
| ೭೫ | ೨ | ತೆರಪ್ರವು | ತೆರಪು |
| ೧೫೯ | ೧೧ | ನರಕ್ಕೆ | ನರಕಕ್ಕೆ |
| ೪೩೧ | ೬ | ಮತ್ತೊದೆಂಬಂರು | ಮತ್ತೊಂದೆಂಬರು |
| ೪೮೫ | ೧ | ಲಿಂಗವಾದ | ಲಿಂಗವಾದ ಬಳಿಕ |
| ೪೯೫ | ೨ | ಅಂದೋಳಿಸು | ಆಂದೋಳಿಸು |
| ೫೧೫ | ೩ | ಭದ್ಯತೇ | ಬಧ್ಯತೇ |
| ೫೨೫ | ೨ | ಬಾಣನ | ಬಾಣವ |
| ೫೩೫ | ೫ | ಜೀವಿ | ಜೀವ |
| ೫೩೫ | ೯ | ಒಲಿದು | ಬಲಿದು |
| ೫೪೯ | ೩ | ಪಾಯಃ | ವಾಯುಃ |
| ೫೭೮ | ೧ | ಮಂದಾವಿಯ | ಮಂದರಾವಿಯ |
| ೬೭೧ | ೬ | ನಿಸಿದ್ಧ | ನಿಷಿದ್ಧ |
| ೭೦೧ | ೧ | ಕಾಯಕದಲ್ಲಿ | ಕಾಯದಲ್ಲಿ |
| ೭೨೮ | ೨ | ಯಳದು | ಯಳಿದು |
| ೭೩೦ | ೯ | ಬೆಚ್ಚ | ಬೆಚ್ಚು |
| ೮೦೩ | ೩ | ನಾಮದೆ | ನಾಮದ |
| ೮೨೭ | ೮ | ಲೋಚನೆ | ಲೋಚನ |
| ೮೮೦ | ೧೮ | ಜ್ಯಾತಿ | ಜಾತಿ |
| ೯೦೭ | ೧೧ | ಕೆನ | ಕೇನ |
| ೯೧೨ | ೧ | ಅತಮಥನ | ಅತಿಮಥನ |
| ೯೨೨ | (ಪುಟ ೨೯೦) ೬ | ಭಾ | ಭಾವಿಸಿ |
| ೯೫೫ | ೨ | ಅರಗಿನ | ಅರಸಿನ |
| ೯೮೬ | ೨೧ | ಮುಖ್ಯ | ಮುಖಿ |
| ೯೯೩ | ೮ | ಮಾಡಿದರಾಗಿವ | ಮಾಡಿದರಾಗಿ |
| ೧೦೦೦ | ೪೦ | ಏಕಾರ್ಥನಂ | ಏಕಾಥವಂ |
| ೧೦೪೨ | ೩೦ | ಮರವಿಪ್ಪಂತೆ | ಮರೆದಿಪ್ಪಂತೆ |
| ೧೦೫೪ | ೨೩ | ಉಪಾಧಿಜಗಮಂ | ಉಪಾಧಿಜಂಗಮಂ |

| | | | |
|---|---|---|---|
| ೧೦೫೪ | ೨೬ | ಮಾದೋಚ್ಛಿಷ್ಠ | ಮಾಯೋಚ್ಛಿಷ್ಟ |
| ೧೦೮೪ | ೧೪ | ಪದ್ವಿಧ | ಷಡ್ವಿಧ |
| ೧೦೮೩ | ೨೯ | ಪಾದ | ಪಾಪ |
| ೧೦೯೦ | ೧೧ | ವಿಪ್ಪಾಟ್ವಣ್ವದಿಗಳು | ವಿಷ್ಣಾಣ್ವದಿಗಳು |
| ೧೧೬೨ | ೫ | ಬರದಲ್ಲಿ | ಉರದಲ್ಲಿ |
| ೧೧೬೪ | ೧೩ | ಅನಂತದೇವರೆ | ಸ್ಥಾವರ ದೇವರೆ |
| ೧೧೬೩ | ೧೬ | ಯುಗಂಗಳೊಳಗೆ | ಅನಂತಯುಗಂಗಳೊಳಗೆ |
| ೧೧೬೩ | ೧೭ | (ಸ್ಥಾವರ ಶಬ್ದವನ್ನು | ಬಿಡಬೇಕು) |
| ೧೧೯೦ | ೨೭ | ನೊಚ್ಛಿಷ್ಟಂ | ನೋಚ್ಛಿಷ್ಟಂ |
| ೧೨೫೨ | ೬ | ಸಂಸಯು | ಸಂಶಯು |
| ೧೨೭೨ | ೪ | ಆದಿಭೌತಿಕ | ಆಧಿಭೌತಿಕ |
| ೧೨೭೨ | ೪ | ಆದಿದ್ವೈವಿಕ | ಆಧಿದೈವಿಕ |
| ೧೨೭೨ | ೧೯ | ಪ್ರಾಪ್ಣ | ಪ್ರಾಪ್ನ |
| ೧೩೦೦ | ೧ | ಮಳ | ಮನ |
| ೧೩೦೮ | ೩ | ಆ ಕೃತಿಗಳು | ಆಕೃತಿಗಳು |
| ೧೩೦೮ | ೪ | ಆ ಕೃತಿಗಳ | ಆಕೃತಿಗಳ |
| ೧೩೦೮ | (ಪುಟ ೪೬೩) ೧೧ | ಶಾಂತ್ಯಾತೀತೆ | ಶಾಂತ್ಯತೀತ |
| ೧೩೦೮ | ( " " ) ೨೪ | ಗೂಡ | ಗೂಢ |
| ೧೩೦೮ | (ಪುಟ ೪೬೪) ೮ | ವರ್ಣಾಧ್ವ | ವರ್ಣಾಧ್ವ |
| ೧೩೧೯ | ೫ | ಸುರಸತಿ | ಅಸುರಸತಿ |
| ೧೩೬೧ | ೨ | ಕರ್ಮ | ವರ್ಮ |
| ೧೩೬೪ | ೬ | ಪರಧವನ | ಪರಧನವ |
| ೧೪೧೧ | ೧೦ | ಅಪ್ಪಾತೀತ | ಅಪ್ಪಾಶೀತಿ |
| ೧೪೫೩ | ೭ | ನಿಮ್ಮ | ನಮ್ಮ |
| ೧೫೨೪ | ೫ | ಗರಳಲ್ಲ | ಕೊರಳಲ್ಲಿ |
| ೧೫೬೩ | ೧೧ | ಶೀಪ್ರೋರ್ಣ | ಶೀಪ್ರೋಣ |
| ೧೫೬೮ | ೪ | ಬೆಳಗಿ | ಬೆಳಗ |
| ೧೫೭೬ | ೫ | ಪ್ರಜೇತ್ | ವ್ರಜೇತ್ |
| ೧೬೩೭ | ೪ | ಸೆಂಗಮ | ಸಂಗಮ |
| ೧೬೩೯ | ೩ | ಬಾಣ | ಪಾಣ |
| ೧೭೩೦ | ೫ | ಸ್ತುತ್ರಿ | ಸ್ತುತಿ |
| ೧೭೫೧ | (ಪುಟ ೬೫೨) ೨೯ | ದೂರಕಕ್ಕಿ | ದೂರಕಿಕ್ಕಿ |

| | | | |
|---|---|---|---|
| ೧೭೬೪ | ( ” ” ) ೩೨ | ಒಟ್ಟೈ | ಒಟ್ಟೈ |
| ೧೭೬೧ | ( ” ” ) ೩೨ | ಗುತ್ತ್ರಗೆತನ | ಗುತ್ತ್ರತನ |
| ೧೭೭೮ | ೨ | ಕಾರ್ಯಂಗಪ್ಪುವೆ | ಕಾರ್ಯಂಗಳಪ್ಪುವೆ |
| ೧೭೮೧ | ೧ | ಆ ಹೆಣ್ಣ | ಹೆಣ್ಣ |
| ೧೭೮೭ | ೮ | ಮುಳುಗಿದ | ಮುಳುಗಿದೆ |

■ ■



ಬಸವಣ್ಣನವರ ವಚನಸಂಪುಟ
ಸಂ : ಡಾ: ಎಂ.ಎಂ. ಕಲಬುರ್ಗಿ
ಅಲ್ಲಮಪ್ರಭುದೇವರ ವಚನಸಂಪುಟ
ಸಂ : ಡಾ: ಬಿ.ವ್ಹಿ. ಮಲ್ಲಾಪುರ
ಚೆನ್ನಬಸವಣ್ಣನವರ ವಚನಸಂಪುಟ
ಸಂ : ಡಾ: ಬಿ.ವ್ಹಿ. ಮಲ್ಲಾಪುರ
ಸಿದ್ಧರಾಮೇಶ್ವರ ವಚನಸಂಪುಟ
ಸಂ : ಡಾ: ಎಸ್. ವಿದ್ಯಾಶಂಕರ
ಶಿವಶರಣೆಯರ ವಚನಸಂಪುಟ
ಸಂ : ಡಾ: ವೀರಣ್ಣ ರಾಜೂರ
ಸಂಕೀರ್ಣ ವಚನಸಂಪುಟ : ಒಂದು
ಸಂ : ಡಾ: ಎಂ.ಎಂ. ಕಲಬುರ್ಗಿ
ಸಂಕೀರ್ಣ ವಚನಸಂಪುಟ : ಎರಡು
ಸಂ : ಡಾ: ಎಸ್. ವಿದ್ಯಾಶಂಕರ
ಸಂಕೀರ್ಣ ವಚನಸಂಪುಟ : ಮೂರು
ಸಂ : ಡಾ: ಬಿ.ಆರ್. ಹಿರೇಮಠ
ಸಂಕೀರ್ಣ ವಚನಸಂಪುಟ : ನಾಲ್ಕು
ಸಂ : ಡಾ: ಬಿ.ಆರ್. ಹಿರೇಮಠ
ಸಂಕೀರ್ಣ ವಚನಸಂಪುಟ : ಐದು
ಸಂ : ಡಾ: ವೀರಣ್ಣ ರಾಜೂರ
ಸಂಕೀರ್ಣ ವಚನಸಂಪುಟ : ಆರು
ಸಂ : ಎಸ್. ಶಿವಣ್ಣ
ಸಂಕೀರ್ಣ ವಚನಸಂಪುಟ : ಏಳು
ಸಂ : ಡಾ: ವೀರಣ್ಣ ರಾಜೂರ
ಸಂಕೀರ್ಣ ವಚನಸಂಪುಟ : ಎಂಟು
ಸಂ : ಡಾ: ವೀರಣ್ಣ ರಾಜೂರ
ಸಂಕೀರ್ಣ ವಚನಸಂಪುಟ : ಒಂಬತ್ತು
ಸಂ : ಡಾ: ವೀರಣ್ಣ ರಾಜೂರ
ವಚನ ಪರಿಭಾಷಾಕೋಶ
ಸಂ : ಡಾ: ಎಸ್. ವಿದ್ಯಾಶಂಕರ

# ಸಮಗ್ರ ವಚನಸಾಹಿತ್ಯ ಪ್ರಕಟನ ಯೋಜನೆ

'ಸಮಗ್ರ ವಚನಸಾಹಿತ್ಯದ ಪ್ರಕಟನ ಯೋಜನೆ' ಕರ್ನಾಟಕ ಸರ್ಕಾರದ ಈ ವರೆಗಿನ ಸಾಹಿತ್ಯಕ ಸಾಧನೆಗಳಲ್ಲಿ ಒಂದು ಮಹತ್ವದ ದಾಖಲೆಯಾಗಿದೆ. ಇದು ಒಂದು ಸಾಹಿತ್ಯಕೃತಿಯ ಪ್ರಕಟನೆಯಲ್ಲ; ಒಂದು ಸಾಹಿತ್ಯಪ್ರಕಾರದ ಪ್ರಕಟನೆ.

ತತ್ವಕ್ಕೆ ತತ್ವ, ಸಾಹಿತ್ಯಕ್ಕೆ ಸಾಹಿತ್ಯವಾಗಿರುವ 'ವಚನ ವಾಙ್ಮಯ' ಏಕಕಾಲಕ್ಕೆ ಆತ್ಮಕಲ್ಯಾಣವನ್ನೂ ಸಮಾಜಕಲ್ಯಾಣವನ್ನೂ ಪ್ರತಿಪಾದಿಸುವ ಮೂಲಕ ಜಾಗತಿಕ ಮಹತ್ವ ಗಳಿಸಿದೆ. ಈ ಮೌಲಿಕ ಸಾಹಿತ್ಯವನ್ನು ಸುಲಭ ಬೆಲೆಯಲ್ಲಿ ಜನತೆಗೆ ಒದಗಿಸುವುದು ಈ ಯೋಜನೆಯ ಉದ್ದೇಶವಾಗಿದೆ.

ಇವತ್ತಿನ ಮಿತಿಗೆ ಸಿಗುವ ಬಸವಯುಗ ಮತ್ತು ಬಸವೋತ್ತರ ಯುಗಗಳ ಎಲ್ಲ ಶರಣರ ಎಲ್ಲ ವಚನಗಳನ್ನು ಸಂಗ್ರಹಿಸಿ, ಸಂಸ್ಕರಿಸಿ, ಪ್ರಕಟಿಸಿದ ಪ್ರಯತ್ನವಿದು. ಈ ಮೂಲಕ ಬಸವಯುಗದ ಹಲವು ಹೊಸ ವಚನಗಳು ಬೆಳಕಿಗೆ ಬರುವುದರೊಂದಿಗೆ ಬಸವೋತ್ತರ ಯುಗದ ಸಮಗ್ರ ವಚನ ಸಂಪತ್ತು ಪ್ರಥಮಸಲ ಹೊರಬರುತ್ತಿರುವುದು ಈ ಯೋಜನೆಯ ವಿಶೇಷ ಸಾಧನೆಯಾಗಿದೆ.

೮೦೦ ವರ್ಷಗಳುದ್ದಕ್ಕೂ ಬೆಳೆದುಬಂದ ಈ ಸಾಹಿತ್ಯದ ವ್ಯಾಪ್ತಿಯನ್ನು ಪ್ರಥಮಬಾರಿ ಗುರುತಿಸಿಕೊಡುತ್ತಿರುವ ಈ ಸಾಹಸದ ಫಲವಾಗಿ, ೨೦ ಸಾವಿರ ವಚನಗಳು ಸುಮಾರು ೧೦ ಸಾವಿರ ಪುಟ ವ್ಯಾಪ್ತಿಯ ೧೫ ಸಂಪುಟಗಳಲ್ಲಿ (ವಚನ ಪರಿಭಾಷಾಕೋಶ ಸೇರಿ) ಬೆಳಕು ಕಾಣುತ್ತಿವೆ.